# ಶಿಕ್ಷಣ ತತ್ತ್ವದರ್ಶನ

ಲೇಖಕರು

**ಡಾಕ್ಟರ್ ಎಂ. ಸಿದ್ಧಲಿಂಗಯ್ಯ**

ಎಂ.ಎ., ಬಿ.ಟಿ., ಪಿ.ಎಚ್.ಡಿ. (ಕೊಲಂಬಿಯ)

'ಡೈರೆಕ್ಟರ್ ಆಫ್ ರೂರಲ್ ಎಜುಕೇಷನ್' ಡಿಪ್ಲೊಮ

ಪ್ರಿನ್ಸಿಪಾಲ್, ಟೀಚರ್ಸ್ ಕಾಲೇಜ್, ಮೈಸೂರು ವಿಶ್ವವಿದ್ಯಾನಿಲಯ

ಮತ್ತು

**ಎನ್. ಎಸ್. ವೀರಪ್ಪ,** ಬಿ.ಎಸ್‌ಸಿ. (ಆನರ್ಸ್), ಬಿ.ಟಿ.

ಮೈಸೂರು ಶಿಕ್ಷಣ ಶಾಖೆ

ಪ್ರಕಾಶಕರು

**ಎಸ್. ಎಸ್. ಎನ್. ಪುಸ್ತಕ ಪ್ರಕಟನಾಲಯ**

**ಹೊಸ ಮಾರ್ಕೆಟ್, ಬೆಂಗಳೂರು ನಗರ**

# ಮುನ್ನುಡಿ

ಒಂದು ದೇಶದ ಸಂಪತ್ತು ಧನ ಧಾನ್ಯವಲ್ಲ : ಆ ದೇಶದ ಮಕ್ಕಳು—ಅವರ ಮನಸ್ಸು, ದೇಹ ಮತ್ತು ಹೃದಯ. ಎಂದಮೇಲೆ ಮಕ್ಕಳ ಶಿಕ್ಷಣ ಕಾರ್ಯಕ್ಕೆ ತಕ್ಕಷ್ಟು ಗಮನ ಕೊಡುವುದು ರಾಷ್ಟ್ರದ ಪ್ರಧಾನ ಕರ್ತವ್ಯ, ಪವಿತ್ರ ಕರ್ತವ್ಯ. ಆ ಶಿಕ್ಷಣದಿಂದ ಅವರು ಕರ್ತವ್ಯಪರಾಯಣರೂ, ಗೌರವಯುತರೂ, ದೈಹಿಕ ಸಂಪತ್ತುಳ್ಳ ಪ್ರತಿಭಾವಂತರೂ, ಉದ್ಯೋಗ ಕುಶಲರೂ ಆದ ಸತ್ಪ್ರಜೆಗಳಾಗಬೇಕು ; ನಮ್ಮ ಸಾಮಾಜಿಕ ಮತ್ತು ರಾಷ್ಟ್ರೀಯ ವೈಶಿಷ್ಟ್ಯಗಳಿಗನುಗುಣವಾದ ಸಂಸ್ಕರಣವನ್ನು ಪಡೆದು, ನಮ್ಮ ಕಲೆ, ಸಾಹಿತ್ಯ, ಸಂಸ್ಕೃತಿಗಳನ್ನರಿತು ಅವುಗಳ ಕೀರ್ತಿಗೊಪ್ಪುವಂಥ ರಾಷ್ಟ್ರೀಯ ವ್ಯಕ್ತಿಗಳಾಗಿ ಬಾಳಬೇಕು. ಅಂಥ ವ್ಯಕ್ತಿಗಳು ನಿಜವಾದ ದೇಶ ಭಕ್ತರು; ಜಗತ್ತಿನ ಸತ್ಪ್ರಜೆಗಳು. ಆ ಕಾರ್ಯಕ್ಕೆ ನೆರವಾಗುವಂತೆ ಇಂದಿನ ನಮ್ಮ ಶಿಕ್ಷಣಪದ್ಧತಿ ಪುನರ್ವ್ಯವಸ್ಥೆಗೊಳ್ಳಬೇಕಾಗಿದೆ.

ಮಾನವನ ಇತಿಹಾಸದ ಅರುಣೋದಯದಲ್ಲೆ ತನ್ನದೇ ಆದ ಸಾಹಿತ್ಯ, ಸಂಸ್ಕೃತಿ, ಕಲೆ ಮತ್ತು ಇನ್ನಿತರ ವೈಶಿಷ್ಟ್ಯಗಳಿಂದ ರಾರಾಜಿಸಿದ ನಾಡುಗಳಲ್ಲಿ ನಮ್ಮ ಪವಿತ್ರ ಭಾರತವೂ ಒಂದು; ತನ್ನ ಮಿಕ್ಕೆಲ್ಲ ಕ್ಷೇತ್ರಗಳ ಮುನ್ನಡೆಯಂತೆ ಶಿಕ್ಷಣರಂಗದಲ್ಲೂ ತನ್ನದೇ ಆದ ಪದ್ಧತಿಯನ್ನು ಆರಂಭಿಸಿಕೊಂಡು, ವೈದಿಕ, ಬೌದ್ಧ ಮತ್ತು ಮಧ್ಯ ಯುಗಗಳಲ್ಲಿ ಕ್ರಮ ಕ್ರಮವಾಗಿ ಪ್ರಗತಿ ಸಾಧಿಸುತ್ತ ಬಂತು. ಆದರೆ ಮೊಗಲಾಯರ ಆಳ್ವಿಕೆ ಕೊನೆಗೊಳ್ಳುವ ಹೊತ್ತಿಗೆ ಈ ನಾಡು ಇಂಗ್ಲೀಷರಿಗೆ ಪದಾಕ್ರಾಂತವಾಯಿತು ; ಆಳರಸರು ತಮ್ಮ ನಾಡಿನಲ್ಲಿ ರೂಪುಗೊಂಡು ಆಚರಣೆಯಲ್ಲಿದ್ದ ಶಿಕ್ಷಣಪದ್ಧತಿಯನ್ನು ತಂದು ಇಲ್ಲಿ ನಾಟಿ ಹಾಕಿದರು ; ಇಲ್ಲಿನ ಜನಜೀವನದ ಸಾರ ಸಂಗ್ರಹವಾಗಿ ರೂಪುಗೊಂಡು ಬೆಳೆದುಬರುತ್ತಿದ್ದ ವಿಶಿಷ್ಟ ಶಿಕ್ಷಣ ಪದ್ಧತಿಯ ಸುಳಿ ಮೊಟಕಾಯಿತು. ಯಾವ ಕಾಲದಲ್ಲಿ ನಮ್ಮ ಆ ಶಿಕ್ಷಣಪದ್ಧತಿ ನೂತನ ಸಂಶೋಧನೆಗಳಿಂದ ಪರಿಷ್ಕರಣಗೊಂಡು, ಆಧುನಿಕ ಜೀವನದಿಂದ ಪುಷ್ಟಿಗೊಳ್ಳಬೇಕಾಗಿತ್ತೋ ಆಗ ಅದು ತನ್ನ ವೈಶಿಷ್ಟ್ಯವನ್ನೇ ಕಳೆದುಕೊಂಡು ಕೂಡಬೇಕಾಯಿತು. ಎಷ್ಟೇ ಉತ್ಕೃಷ್ಟವೆನಿಸಿದ್ದರೂ ಅನ್ಯ ಜನತೆಯ

ಅನುಭವದ ಸಾರವಾಗಿ ರೂಪುಗೊಂಡಿರುವ ಶಿಕ್ಷಣಪದ್ಧತಿ ನಮ್ಮವರ ಕಲ್ಯಾಣ ಸಾಧನೆಗೆ ನೆರವಾಗುವುದಾದರೂ ಹೇಗೆ? ಕೇವಲ ತಮ್ಮ ಆಡಳಿತ ಯಂತ್ರಕ್ಕೆ ಅನುಕೂಲಿಸುವಂಥ ಕರಣಿಕರ ಸೃಷ್ಟಿಯನ್ನೇ ಮೂಲೋದ್ದೇಶವಾಗುಳ್ಳ ಅಂಥ ಶಿಕ್ಷಣದಿಂದ ಅಭಿವೃದ್ಧಿ ಸಾಧನೆಯಾಗದಾದುದು ಹಾಗಿರಲಿ, ದುಷ್ಪರಿಣಾಮಗಳೂ ಹುಟ್ಟಿಕೊಂಡಿವೆ. ಅದನ್ನು ಮನಗಂಡ ದೇಶಭಕ್ತರೂ ಶಿಕ್ಷಣವೇತ್ತರೂ ಅನರ್ಥಕಾರಿಯಾದ ಅಂಥ ಶಿಕ್ಷಣಪದ್ಧತಿಯನ್ನು ಕೊನೆಗಾಣಿಸಲು ಈ ಶತಮಾನದ ಆದಿಯಿಂದಲೂ ಯತ್ನ ನಡಸಿದರು. ಅದಕ್ಕಾಗಿಯೇ ಕಾಶಿ, ಅಲಿಘರ್, ಉಸ್ಮೇನಿಯ ಮುಂತಾದೆಡೆಗಳಲ್ಲಿ ರಾಷ್ಟ್ರೀಯ ವಿಶ್ವವಿದ್ಯಾನಿಲಯಗಳೂ, ಶಾಂತಿನಿಕೇತನ, ಹರಿದ್ವಾರ, ಗುರುಕುಲಾಶ್ರಮಗಳಂಥ ಶಿಕ್ಷಣ ಕೇಂದ್ರಗಳೂ, ವಿದ್ಯಾಮಂದಿರ, ವಾರ್ಧಾ, ಮುಂತಾದ ವಿದ್ಯಾಯೋಜನೆಗಳೂ ರೂಪುಗೊಂಡುವು. ಆದರೆ ಪರಕೀಯ ಆಡಳಿತ ಇಲ್ಲಿದ್ದುದರಿಂದ ಅವು ಅಷ್ಟಾಗಿ ಬೆಳೆದು ಪ್ರಚಾರಕ್ಕೆ ಬರಲಿಲ್ಲ.

ಪರಕೀಯ ಶಿಕ್ಷಣಪದ್ಧತಿಯಿಂದಾದ ದುಷ್ಪರಿಣಾಮಗಳಲ್ಲಿ ನಮ್ಮ ಯುವಕರು ನಮ್ಮದನ್ನು ಹಳಿದು ಹೊರಗಿನದನ್ನು ಪುರಸ್ಕರಿಸುವಂತಾದುದೂ ಒಂದು. ಈ ಸಮಯದಲ್ಲಿ 'ನಮ್ಮ ಶಿಕ್ಷಣ ನಮ್ಮ ಯುವಕರನ್ನು ಭಾರತೀಯರನ್ನಾಗಿ ಮಾಡಬೇಕು; ಇಂಗ್ಲೀಷರನ್ನಾಗಿಯಲ್ಲ' ಎಂಬ ಅಂಶವನ್ನು ಮನನ ಮಾಡಿಕೊಳ್ಳಬೇಕಾಗಿದೆ. ಈ ಕಾರ್ಯ ಸಾಧನೆಯಾಗಬೇಕಾದರೆ ಮೆಕಾಲೆಯವರ ಕಾಲದಿಂದ ಆರಂಭವಾಗಿ ಇನ್ನೂ ನಡೆದುಕೊಂಡು ಬರುತ್ತಿರುವ ಶಿಕ್ಷಣರಂಗದ ಪುನರ್ರಚನೆಯಾಗಿ ರಾಷ್ಟ್ರೀಕರಣವಾಗಬೇಕು. ಅಂಥ ಶಿಕ್ಷಣದಿಂದ ಮಾತ್ರ ನಮ್ಮ ಯುವಕರು ಭಾರತೀಯ ಸಂಸ್ಕೃತಿಯ ಭಕ್ತರಾಗುವರು; ಆ ಮೂಲಕ, ಜಗತ್ತಿನ ಇನ್ನಿತರ ಸಾಂಸ್ಕೃತಿಕ ಸಂಪತ್ತಿನ ಉಪಾಸಕರೂ ಆಗುವರು.

ಶಿಕ್ಷಣರಂಗದ ರಾಷ್ಟ್ರೀಕರಣ ಕಾರ್ಯದಲ್ಲಿ ತೊಡಗುವಾಗ ಹಲವು ಪ್ರಧಾನ ಅಂಶಗಳ ಕಡೆ ಗಮನ ಕೊಡಬೇಕಾಗುತ್ತದೆ; ಜನತೆಯ ಸರ್ಕಾರ ಸಾರ್ವತ್ರಿಕ ಶಿಕ್ಷಣವನ್ನು ಆರಂಭಿಸಿ, ಸಾರ್ವಜನಿಕ ಹಣದಿಂದ ನಡಸಿಕೊಂಡು ಬರಬೇಕು; ಅದರ ಮೇಲ್ವಿಚಾರಣೆಯನ್ನು ವಹಿಸಿ ಸ್ಥೂಲವಾದ ಮಾರ್ಗದರ್ಶನ ನೀಡಲು ಅಖಂಡ ಭಾರತಕ್ಕೇ ಒಂದು ಆಡಳಿತ ವ್ಯವಸ್ಥೆ

ರೂಪುಗೊಳ್ಳಬೇಕು; ಪ್ರಾಥಮಿಕ ಶಿಕ್ಷಣದಂತೆ ಇನ್ನಿತರ ಉನ್ನತ ಶಿಕ್ಷಣದ ವ್ಯವಸ್ಥೆಗೂ ಉಚಿತ ರೀತಿಯ ಏರ್ಪಾಡುಗಳನ್ನು ಮಾಡಬೇಕು; ಜನತೆಯ ಸ್ವಾವಲಂಬನಶಕ್ತಿಗೂ ನಾಡಿನ ಔದ್ಯೋಗಿಕ ಪ್ರಗತಿಗೂ ನೆರವಾಗುವಂತೆ ವೃತ್ತಿಶಿಕ್ಷಣ ಸಂಸ್ಥೆಗಳ ವ್ಯವಸ್ಥೆಯೂ ಏರ್ಪಡಬೇಕು; ದೇಶದ ಆರ್ಥಿಕ, ಸಾಮಾಜಿಕ ಮತ್ತು ಔದ್ಯೋಗಿಕ ಯೋಜನೆಗಳನ್ನು ರೂಪಿಸಿ ಕಾರ್ಯ ರೂಪಕ್ಕಿಳಿಸಿ ಜನತೆಯ ಸಂಪದಭಿವೃದ್ಧಿಯನ್ನು ಸಾಧಿಸಲು ಅಗತ್ಯವೆನಿಸುವ ಮುಂದಾಳುಗಳಿಗೆ ಉಚ್ಚಶಿಕ್ಷಣ ಸೌಲಭ್ಯವನ್ನೂ ಒದಗಿಸಿ ಕೊಡಬೇಕು; ಎಲ್ಲಕ್ಕೂ ಮೇಲಾಗಿ ಶಿಕ್ಷಣ ಮಾಧ್ಯಮ ಜನತೆಯ ಮಾತೃಭಾಷೆಯಾಗ ಬೇಕು. ಹಾಗೆ ಏರ್ಪಟ್ಟ ವಿವಿಧ ಅಂತಸ್ತಿನ ವಿವಿಧ ರೀತಿಯ ಶಿಕ್ಷಣವನ್ನು ವ್ಯವಸ್ಥೆಗೊಳಿಸುವಾಗ ನಮ್ಮ ರಾಷ್ಟ್ರದ ತತ್ವದೃಷ್ಟಿಯೂ ಜನಜೀವನದ ಆವ ಶ್ಯಕತೆಯೂ ನಮ್ಮ ಕಾರ್ಯ ಯೋಜನೆಯನ್ನು ಉಜ್ವಲಗೊಳಿಸಬೇಕು. ಎಂದಮೇಲೆ ತಂದೆತಾಯಿಗಳು ಇಚ್ಛಿಸಲಿ, ಇಚ್ಛಿಸದಿರಲಿ, ಶಕ್ತರಿರಲಿ, ಇಲ್ಲದಿರಲಿ, ಮಕ್ಕಳನ್ನು ಶಿಕ್ಷಣದ ಮೂಲಕ ಸತ್ಪ್ರಜೆಗಳನ್ನಾಗಿ ಮಾಡುವುದು ರಾಷ್ಟ್ರದ ಕರ್ತವ್ಯ. ಮುಂದುವರಿದ ಎಲ್ಲ ದೇಶಗಳೂ ಈ ದೃಷ್ಟಿ ಧ್ಯೇಯ ಗಳಿಂದಲೇ ಸ್ಫೂರ್ತಿಗೊಂಡು ತಮ್ಮ ತಮ್ಮ ಶಿಕ್ಷಣರಂಗವನ್ನು ರಾಷ್ಟ್ರೀಕರಣ ಮಾಡಿಕೊಂಡಿವೆ, ಮಾಡಿಕೊಳ್ಳುತ್ತಿವೆ.

ನಮ್ಮ ನಾಡಿನ ಶಿಕ್ಷಣರಂಗದ ರಾಷ್ಟ್ರೀಕರಣಕ್ಕೆ ಅಡ್ಡಿಯಾಗಿದ್ದ ಪರಕೀಯ ಆಡಳಿತ ಈಗ ಕೊನೆಗೊಂಡಿದೆ. ಇನ್ನುಳಿದ ತೊಡಕುಗಳೆಂದರೆ ಭಿನ್ನಭಾಷೆಯ, ಭಿನ್ನ ಸಂಸ್ಕೃತಿಯ ಜನತೆ ಮತ್ತು ಇಂಗ್ಲೀಷಿಗೆ ಬಂದುಬಿಟ್ಟಿ ರುವ ಪ್ರಾಧಾನ್ಯತೆ; ಜೊತೆಗೆ ಆರ್ಥಿಕ ದೌರ್ಬಲ್ಯ. ಆದರೂ ಈ ಎಲ್ಲ ತೊಡರುಗಳನ್ನೂ ಎದುರಿಸಿ ಶಿಕ್ಷಣವನ್ನು ರಾಷ್ಟ್ರೀಕರಣ ಮಾಡಿಯೇ ತೀರ ಬೇಕು. ಅದಿಲ್ಲದ ನಮ್ಮ ರಾಜಕೀಯ ಸ್ವಾತಂತ್ರ್ಯ ಜನತೆಗೆ ನಿಜವಾದ ಸುಖಶಾಂತಿಗಳನ್ನು ನೀಡುವುದಾದರೂ ಹೇಗೆ?

ಹಾಗೆ ನಮ್ಮ ಶಿಕ್ಷಣರಂಗವನ್ನು ಪುನರ್ರಚಿಸುವಾಗ, ಜನಜೀವನದ ಮೇಲೆ ಪರಿಣಾಮಕಾರಿಯಾಗುವಂತೆ ಶಿಕ್ಷಣವನ್ನು ಯಶಸ್ವಿಗೊಳಿಸಲು ಯತ್ನಿಸುವಾಗ ಪಾಶ್ಚಾತ್ಯರು ಸಂಶೋಧಿಸಿ ಅರಿತುಕೊಂಡಿರುವ ಸತ್ಯಾಂಶ ಗಳನ್ನು ನಾವೂ ಉಪಯೋಗಿಸಿಕೊಳ್ಳುವುದು ಅಹಿತವಲ್ಲ, ಅಗತ್ಯ. ಅವರು

ಸಾಧಿಸಿರುವ ಅನುಭವಗಳು ನಮ್ಮ ಕಾರ್ಯರಂಗದಲ್ಲಿ ಲಾಭದಾಯಕವಾಗುವುದಾದರೆ ಸಂತೋಷದಿಂದ ಸ್ವಾಗತಿಸಬೇಕು.

ಭಾರತೀಯ ಶಿಕ್ಷಣರಂಗದಲ್ಲಿ ಯಾವ ಭಾಷೆಯಾದರೂ ಪ್ರಾಧಾನ್ಯತೆಗೆ ಸ್ಪರ್ಧೆ ಹೂಡಿರಲಿ, ಆಯಾ ಪ್ರಾಂತಗಳಲ್ಲಿ ಓನಾಮದಿಂದ ಕಾಲೇಜಿನವರೆಗೂ ಶಿಕ್ಷಣ ಕ್ರಮಕ್ರಮವಾಗಿ ತಾಯ್ನುಡಿಯಲ್ಲೇ ಆಗುವಂತಾಗಬೇಕು. ಆಗ ಮಾತ್ರ ಎಲ್ಲ ಪುಟ್ಟದ ಜನತೆಗೂ ಶಿಕ್ಷಣ ಪ್ರಸಾದನ ಒದಗುವಂತಾಗಿ, ಜೀವನ ಪರಿಷ್ಕರಣಗೊಂಡು ಪ್ರಗತಿಪಥದಲ್ಲಿ ಹೆಜ್ಜೆಯಿಡಲು ಸಹಾಯವಾಗಬಲ್ಲದು. ಆಗಲೇ ಕೆಲವು ಕಡೆ ಪ್ರೌಢಶಿಕ್ಷಣದವರೆಗೂ ಶಿಕ್ಷಣ ಮಾಧ್ಯಮ ಪ್ರಾಂತೀಯ ಭಾಷೆಯೇ ಆಗಿ ಯಶಸ್ವಿಯಾಗಿ ಪ್ರಚಾರಕ್ಕೆ ಬಂದಿದೆ; ಮತ್ತೆ ಕೆಲವೆಡೆ ಆಚರಣೆಗೆ ಬರಬೇಕಾಗಿದೆ; ವಿಶ್ವವಿದ್ಯಾನಿಲಯದಲ್ಲೂ ಶಿಕ್ಷಣ ಮಾಧ್ಯಮ ಮಾತೃಭಾಷೆಯೇ ಆಗಬೇಕೆಂಬ ಹೆಬ್ಬಯಕೆ ಜನತೆಯಲ್ಲಿದ್ದರೂ ಕಾರ್ಯರೂಪಕ್ಕೆ ಇನ್ನೂ ಬಂದಿಲ್ಲ. ಹಾಗೆ ಪರಭಾಷೆಯ ಶಿಕ್ಷಣ ಮಾಧ್ಯಮವನ್ನು ಕೊನೆಗಾಣಿಸಿ, ಮಾತೃಭಾಷೆಯನ್ನು ಅದರ ಸ್ಥಳದಲ್ಲಿ ಅನುಗೊಳಿಸುವುದು ಶಿಕ್ಷಣ ರಾಷ್ಟ್ರೀಕರಣ ಕಾರ್ಯದ ಪ್ರಧಾನವಾದ ಒಂದು ಅಂಗ. ಎಂದಮೇಲೆ, ಕರ್ಣಾಟಕದ ಎಲ್ಲ ಶಾಲೆಗಳಲ್ಲೂ ಕಾಲೇಜುಗಳಲ್ಲೂ ಶಿಕ್ಷಣ ಮಾಧ್ಯಮ ಕನ್ನಡ ಭಾಷೆಯಾಗಬೇಕು. ಅದಕ್ಕೆ ಪೂರ್ವಭಾವಿಯಾಗಿ ಎಲ್ಲ ಪಠ್ಯವಿಷಯಗಳ ಮೇಲೂ ಅವಶ್ಯಕವೆನಿಸುವ ಗ್ರಂಥಗಳು ಕನ್ನಡದಲ್ಲಿ ಆವಿರ್ಭವಿಸಬೇಕು.

ಆಧುನಿಕ ಜ್ಞಾನಪ್ರಪಂಚವನ್ನು ಕುರಿತ ಪ್ರೌಢ ಶಾಸ್ತ್ರೀಯ ಗ್ರಂಥಗಳು ಕನ್ನಡದಲ್ಲಿ ಕಡಮೆ; ಶಿಕ್ಷಣ ಶಾಸ್ತ್ರವನ್ನು ಕುರಿತವು ಇನ್ನೂ ಕಡಮೆ. ಈ ನ್ಯೂನತೆಯನ್ನು ತಕ್ಕಮಟ್ಟಿಗಾದರೂ ಪರಿಹರಿಸುವ, ಮತ್ತು ನಮ್ಮ ನಾಡಿಗೊಪ್ಪುವ ಶಿಕ್ಷಣರಂಗದ ಸ್ಥೂಲ ರೂಪು ರೇಖೆಗಳನ್ನು ಪ್ರತಿಪಾದಿಸುವ ಉದ್ದೇಶದಿಂದ ಈ 'ಶಿಕ್ಷಣತತ್ವ ದರ್ಶನ'ವನ್ನು ರೂಪಿಸಲಾಗಿದೆ. ಇದರಲ್ಲಿ ಪಾಶ್ಚಾತ್ಯ ಶಿಕ್ಷಣರಂಗ ಸಂಶೋಧಿಸಿ ಅರಿತುಕೊಂಡು ಬಳಕೆಗೆ ತಂದಿರುವ ಅನೇಕ ತತ್ವ ಸಿದ್ಧಾಂತಗಳನ್ನು ಪ್ರತಿಪಾದಿಸಿದ್ದರೂ ನಮ್ಮ ನಾಡಿನ ಸನ್ನಿವೇಶಗಳಿಗೆ ಹೇಗೆ ಅವನ್ನು ಉಪಯುಕ್ತವಾಗುವಂತೆ ಬಳಸಿಕೊಳ್ಳಬಹುದೆಂಬ ಅಂಶದ ಕಡೆ ಹೆಚ್ಚಿನ ಗಮನಕೊಟ್ಟು ಪರಿಶೀಲಿಸಿದೆ. ಜೊತೆಗೆ ಶಿಕ್ಷಣ

ರಂಗದ ನಮ್ಮ ಅನುಭವಗಳನ್ನು ಕ್ರೋಢೀಕರಿಸಿ ಎಲ್ಲ ವಿಷಯುಗಳನ್ನೂ ವಿವೇಚಿಸಿ ರೂಪುಗೊಳಿಸಿದೆ. ಇದು ಶಿಕ್ಷಣದ ವಿಶಾಲರಂಗದ ಒಂದು ಮುಖ ವನ್ನು ಕುರಿತ ಗ್ರಂಥವಾದುದರಿಂದ ಮನಶ್ಶಾಸ್ತ್ರ, ಶಾಲಾ ಸಂವಿಧಾನ, ತುಲನಾತ್ಮಕ ಶಿಕ್ಷಣಪದ್ಧತಿ, ಬೋಧನಕ್ರಮ, ಮುಂತಾದ ಇತರ ಮುಖ ಗಳನ್ನು ಗೌಣವಾಗಿ ಪರಿಗಣಿಸಲಾಗಿದೆ; ಆಧುನಿಕ ಯುಗದ ನಮ್ಮ ನಾಡಿನ ಜನತೆಗೆ ಅವಶ್ಯಕವೆನಿಸುವ ನೂತನ ಜೀವನತತ್ವ, ಅದರ ಆಧಾರದಮೇಲೆ ರೂಪುಗೊಳ್ಳಬೇಕಾದ ಶಿಕ್ಷಣ ಯೋಜನೆಯ ಸ್ವರೂಪ, ಶಿಕ್ಷಣವನ್ನು ಯಶಸ್ವಿ ಯಾಗಿಸಲು ನೆರವಾಗುವ ಶಾಸ್ತ್ರೀಯ ಜ್ಞಾನದರ್ಶನ—ಇವೆಲ್ಲವನ್ನೂ ಗ್ರಂಥದ ಬೇರೆ ಬೇರೆ ಭಾಗಗಳಲ್ಲಿ ಪರಿಶೀಲಿಸಲು ಯತ್ನಿಸಿದೆ. ಎಲ್ಲ ಅಂತಸ್ತಿನ ಶಿಕ್ಷಣ ಶಾಸ್ತ್ರದ ವಿದ್ಯಾರ್ಥಿಗಳಿಗೂ, ಉಪಾಧ್ಯಾಯರಿಗೂ, ಪೋಷಕರಿಗೂ ಉಪಯುಕ್ತವೆನಿಸುವಂತೆ ವಿಷಯುಗಳನ್ನು ಅಧ್ಯಾಯಗಳಾಗಿ ವಿಂಗಡಿಸಿಕೊಂಡು ಅಳವಡಿಸಿದೆ. ಈ ನಮ್ಮ ಯತ್ನದಿಂದ ಶಿಕ್ಷಣರಂಗದಲ್ಲಿ ಸೇವೆ ಸಲ್ಲಿಸುತ್ತಿರುವ, ಸಲ್ಲಿಸಲಿಚ್ಛಿಸುವ ಕನ್ನಡಿಗರಿಗೆ ಅಷ್ಟಿಷ್ಟು ಮಾರ್ಗ ದರ್ಶನವಾಗಿ, ಮುಂದೆ ನಾಡಿನ ಶಿಕ್ಷಣರಂಗಕ್ಕನುಕೂಲಿಸುವ ಇತರ ವಿಷಯ ಗಳನ್ನು ಕುರಿತ ಪ್ರೌಢ ಶಾಸ್ತ್ರೀಯ ಗ್ರಂಥಗಳು ಕನ್ನಡದಲ್ಲಿ ಬೇಗ ರೂಪು ಗೊಳ್ಳುವುದಾದರೆ ನಾವು ಕೃತಕೃತ್ಯರು.

ಈ ಗ್ರಂಥವನ್ನು ಆದರದಿಂದ ಪ್ರಕಟಿಸಿದ ಎಸ್. ಎಸ್. ಎನ್. ಪುಸ್ತಕ ಪ್ರಕಟನಾಲಯದ ಒಡೆಯರಾದ ಶ್ರೀ ಎಂ. ರಾಮರಾಯರಿಗೆ ನಾವು ಕೃತಜ್ಞರು; ಮುದ್ರಣ ಕಾರ್ಯವನ್ನು ಇಷ್ಟು ಅಚ್ಚುಕಟ್ಟಾಗಿ ಮಾಡಿಕೊಟ್ಟ ಶ್ರೀ ಆರ್. ಎನ್. ಹಬ್ಬು ಅವರಿಗೆ ನಮ್ಮ ಅಭಿನಂದನೆಗಳು. ಕರಡು ಪ್ರತಿಯನ್ನು ತಿದ್ದಿಕೊಟ್ಟು ನೆರವಾದ ಶ್ರೀ ಎಂ. ಕೃಷ್ಣರಾಯರಿಗೂ ನಮ್ಮ ವಂದನೆಗಳು.

ಭವಿಷ್ಯ ಭಾರತದ ಶಿಕ್ಷಣರಂಗ ಆದಷ್ಟು ಬೇಗ ರಾಷ್ಟ್ರೀಕರಣವಾಗಿ, ಎಲ್ಲ ಅಂತಸ್ತಿನ ಜನತೆಗೂ ಶಿಕ್ಷಣ ಪ್ರಸಾದನ ದೊರೆತು, ಬಾಳು ಹಸನಾಗಲಿ; ಜನಜೀವನದ ಮಟ್ಟ ಉತ್ತಮವಾಗಿ, ರಸಾವಿಷ್ಟಗೊಂಡು, ಸಮಾಜ ಪ್ರಗತಿಪಥದಲ್ಲಿ ಹೆಜ್ಜೆಯಿಡುವಂತಾಗಲಿ; ವ್ಯಕ್ತಿಗಳ ಶಕ್ತಿ ವಿಶೇಷಗಳು ಬೆಳೆದು ವಿಕಸಿಸುವಂತೆ, ನಾಡು ಸುಖ ಶಾಂತಿಗಳ ತವರಾಗುವಂತೆ, ಜಗತ್ತಿನ

ಶಾಂತಿ ಪಾಲನೆಗೆ ಭಾರತವೂ ಸಹಕರಿಸುವಂತೆ, ನಮ್ಮ ಶಿಕ್ಷಣರಂಗ ಕಾರ್ಯಮುಖವಾಗಲಿ; ' ಸರ್ವೇಜನಾಃ ಸುಖಿನೋ ಭವಂತು ' Greatest good of the greatest number ' ಎಂಬ ವಾಕ್ಯಗಳ ಅರ್ಥವನ್ನು ಜನಜೀವನದಲ್ಲಿ ಸಾರ್ಥಕಗೊಳಿಸಲು ಭಗವಂತನು ನಮಗೆ ಶಕ್ತಿ ಸಾಮರ್ಥ್ಯಗಳನ್ನು ನೀಡಲಿ.

ಮೈಸೂರು
ನವೆಂಬರ್ ೧೯೪೮

ಎಂ. ಸಿದ್ಧಲಿಂಗಯ್ಯ
ಎನ್. ಎಸ್. ವೀರಪ್ಪ

# ವಿಷಯ ಸೂಚಿಕೆ

## ಒಂದನೆಯ ಭಾಗ



## ಎರಡನೆಯ ಭಾಗ

# ೧. ಜನಜೀವನ ಮತ್ತು ಶಿಕ್ಷಣ

**ಜೀವನದ ಸ್ವರೂಪ:** ಜೀವಿಗಳಿಗೂ ನಿರ್ಜೀವಿಗಳಿಗೂ ಹಲವು ಪ್ರಧಾನ ವ್ಯತ್ಯಾಸಗಳಿವೆ. ಕ್ಷಣ ಕ್ಷಣಕ್ಕೂ ನೂತನವಾಗುತ್ತಿರುವುದು ಜೀವಿಗಳ ಒಂದು ಗುಣವಿಶೇಷ; ಆಹಾರ, ಗಾಳಿ, ನೀರು, ಮುಂತಾದವನ್ನು ಸೇವಿಸಿ, ಬೆಳೆದು, ಪ್ರೌಢಾವಸ್ಥೆಗೇರಿ, ಕೊನೆಗೆ ಅಳಿದರೂ, ತಮ್ಮ ಸ್ಥಾನದಲ್ಲಿ ಮರಳಿ ತಮ್ಮ ಸಂತತಿಯನ್ನು ನಿಲ್ಲಿಸುವ ಸೌಲಭ್ಯ ಅವುಗಳಿಗಿರುವ ಒಂದು ವಿಶಿಷ್ಟ ಭಾಗ್ಯ; ಹಾಗೆ ಮೂಡಿದ ಒಂದೊಂದು ನೂತನ ಸಂತತಿಯೂ ತನ್ನ ಹಿಂದಿನವರ ಅನುಭವವನ್ನು ಪಡೆದುಕೊಂಡು, ತನ್ನ ಜೀವನದಲ್ಲೂ ಹೊಸ ಅನುಭವಗಳನ್ನು ಕಟ್ಟಿ, ಬೆಳಸಿಕೊಂಡು ಮುಂದುವರಿಯುತ್ತಿದೆ. ಜೀವನ ಹಿಂದಿನದಕ್ಕಿಂತ ನವೀನವೂ ಉತ್ತಮವೂ ಆಗಿ ಪ್ರಗತಿಪಥದಲ್ಲಿ ಸಾಗುತ್ತಿದೆ. ಹೀಗೆ, ಚಿರಂತನವೂ ನೂತನವೇರುತ್ತಿರುವ ಜೀವನದ ಸ್ವರೂಪ ಎಂಥದು? ಅದಕ್ಕೆ ಪ್ರಗತಿಗೇರುವ ಶಕ್ತಿ ಹೇಗೆ ಬಂತು? ಎಂಬ ಪ್ರಶ್ನೆಗಳು ಏಳಬಹುದು. ತಮ್ಮ ಚೈತನ್ಯದಿಂದ ಭೌತ ವಾತಾವರಣವನ್ನು ಮಾರ್ಪಡಿಸುತ್ತಲೂ, ಆ ವಾತಾವರಣದ ಕೈವಾಡದಿಂದ ತಾವೂ ಮಾರ್ಪಡುತ್ತಲೂ ಸಾಗುತ್ತಿರುವುದೇ ಜೀವನ. ವಾತಾವರಣದೊಡನೆ ಹೊಂದಿಕೊಂಡು ಬಾಳುವಾಗ ಹೊಸ ಹೊಸ ಅನುಭವಗಳು ತಾವಾಗಿ ಹುಟ್ಟುತ್ತವೆ. ಅವುಗಳಲ್ಲಿ ಜೀವನವನ್ನು ಸುಗಮವಾಗಿ ಸಾಗಿಸಲು ನೆರವಾಗತಕ್ಕವು ಆ ಜೀವಿಯ ಹಿಂದಿನ ಅನುಭವಗಳ ಜೊತೆಗೆ ಸೇರಿಕೊಳ್ಳುತ್ತವೆ; ಸಂತತಿಸಂತತಿಗೂ ಜೀವನ ನೂತನವಾಗುತ್ತಾ, ಅನಂತ ಪ್ರವಾಹವಾಗಿ ಸಾಗಿಬರುತ್ತಿದೆ. ಮಾನವನಿಗೆ ಭೌತ ಸನ್ನಿವೇಶಗಳ ಸಂಪರ್ಕದ ಜೊತೆಗೆ ಸಮಾಜ ಸಂಪರ್ಕವೂ ಆಗುತ್ತಿದೆ; ಭೌತ ಸನ್ನಿವೇಶಗಳಂತೆ ಸಮಾಜವೂ ತನ್ನ ಕೈವಾಡವನ್ನು ಅವನ ಜೀವನದಮೇಲೆ ಬೀರುತ್ತಿದೆ. ಆದ್ದರಿಂದ, ಇತರ ಪ್ರಾಣಿವರ್ಗಕ್ಕಿಲ್ಲದ ಹಲವು ಆವಶ್ಯಕತೆಗಳು ಅವನಿಗೆ ಅನಿವಾರ್ಯವೆನಿಸಿವೆ. ಅವುಗಳಲ್ಲಿ ಶಿಕ್ಷಣವೂ ಒಂದು.

**ಜೀವನದಲ್ಲಿ ಅನುಭವಸಾಧನೆ ಮತ್ತು ಶಿಕ್ಷಣ:** ಪ್ರಾಣಿವರ್ಗಕ್ಕಿಲ್ಲದಿರುವ ಹಲವು ಸೌಲಭ್ಯಗಳು ಮಾನವನ ಭಾಗಕ್ಕಿವೆ: ತನ್ನ ಪೂರ್ವಿಕರ ಅನುಭವಸಾರದಂತಿರುವ ಸಂಘಸಂಸ್ಥೆಗಳೂ ಇನ್ನಿತರ ಕಲಾಕೃತಿಗಳೂ ಮಾನವನಿಗೆ ವಿವಿಧ ರೂಪದಲ್ಲಿ ಹಸ್ತಗತವಾಗುತ್ತಿವೆ. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಜೀವನದಲ್ಲಿ ಕಟ್ಟುವ ಹೊಸ ಅನುಭವಗಳ ಜೊತೆಗೆ ತನ್ನ ಹಿಂದಿನವರ ಅನುಭವದ ಪ್ರಸಾದವನ್ನೂ ಪಡೆದುಕೊಳ್ಳುತ್ತಾನೆ; ಅನಂತರ ಅದೆಲ್ಲ ಅವನ ಮುಂದಿನ ಸಂತತಿಗೂ ಹಸ್ತಗತವಾಗುತ್ತದೆ. ಅನಂತವಾಗಿ ಸಾಗುತ್ತಿರುವ ಜೀವನದ ಜೊತೆಗೆ ಅನುಭವಗಳ ಅಖಂಡ ಪ್ರವಾಹವೂ ಮುಂದುವರಿಯುತ್ತಿದೆ; ಸುಮ್ಮನೆ ಮುಂದುವರಿಯುತ್ತಿಲ್ಲ—ಚಿರಂತನವೂ ಪ್ರಗತಿಯೇರುತ್ತಾ ಸಾಗುತ್ತಿದೆ. ಇಲ್ಲಿ ಗಮನದಲ್ಲಿಡಬೇಕಾದ ವಿಷಯವೆಂದರೆ, ವ್ಯಕ್ತಿಯ ಸ್ವಂತ ಅನುಭವ ಮಾತ್ರ ಮುಂದುವರಿಯದೆ ಅವನ ಮೂಲಕ ತನ್ನ ಪೂರ್ವಜರ ಅನುಭವದ ಸಾರವೆಲ್ಲ ಒಟ್ಟುಗೂಡಿ ಬರುತ್ತಿದೆ; ಒಂದು ಜನಾಂಗದಿಂದ ಇನ್ನೊಂದು ಜನಾಂಗಕ್ಕೆ ನೂತನ ರೂಪನ್ನು ತಾಳುತ್ತಾ ಹಸ್ತಗತವಾಗುತ್ತಿದೆ. ಮಾನವನ ಈ ಅನುಭವ ಪ್ರವಾಹ ರೂಢಿಸಿದುದು ಅನೇಕ ವಿಧಗಳಲ್ಲಿ: ಮಗು ಜಗತ್ತಿಗೆ ಬಂದೊಡನೆ ಭೌತ ಪ್ರಪಂಚದ ಹಲವು ಸನ್ನಿವೇಶಗಳ ಕೈವಾಡದಿಂದ ಅನುಭವಗಳನ್ನು ಪಡೆಯುತ್ತದೆ; ತನ್ನ ಹತ್ತಿರವಿರುವ ತಾಯಿತಂದೆಗಳಿಂದಲೂ ಇತರರಿಂದಲೂ ಬಗೆಬಗೆಯ ಅನುಭವಗಳು ದೊರಕುತ್ತವೆ; ಕ್ರಮ ಕ್ರಮವಾಗಿ ಹಿಂದಿನವರ ಅನುಭವಗಳೂ ಪರಿಚಯವಾಗುತ್ತವೆ; ಅನಂತರ ಸಮಾಜ ಜೀವನದಿಂದಲೂ ಭಿನ್ನ ವ್ಯಕ್ತಿಗಳ ಸಂಪರ್ಕದಿಂದಲೂ ಹೊಸ ಅನುಭವಗಳು ದೊರೆಯುತ್ತವೆ. ಹೀಗೆ ಕ್ಷಣ ಕ್ಷಣವೂ ಜೀವನದಲ್ಲಿ ನೂತನ ಅನುಭವಗಳು ರೂಢಿಸುತ್ತಿರುತ್ತವೆ. ಭೌತ ಪ್ರಪಂಚದ ಮತ್ತು ಸಮಾಜದ ಕೈವಾಡ ವ್ಯಕ್ತಿಯಮೇಲೆ ಪರಿಣಾಮಗೊಳಿಸುವುದರ ಜೊತೆಗೆ ವ್ಯಕ್ತಿಯೂ ಆ ಸನ್ನಿವೇಶಗಳನ್ನು ತನಗನುಕೂಲಿಸುವಂತೆ ಮಾರ್ಪಡಿಸಲು ಯತ್ನಿಸುತ್ತಲೇ ಇರುತ್ತಾನೆ. ಆ ಮೂಲಕವೂ ಹೊಸ ಅನುಭವಗಳು ದೊರೆಯುತ್ತವೆ. ಅವುಗಳ ತಳಹದಿಯ ಮೇಲೆ ನೂತನ ಅನುಭವಗಳೂ ರೂಪುಗೊಳ್ಳುತ್ತವೆ. ಹೀಗೆ ವ್ಯಕ್ತಿ ಕಟ್ಟಿಕೊಂಡು ಬರುತ್ತಿರುವ ಅನುಭವವೇ

ಶಿಕ್ಷಣ. ಈ ಶಿಕ್ಷಣಕ್ಕೆ ಆಧಾರ ಜೀವನ. ವ್ಯಕ್ತಿಯ ಜೀವನ ಮುಂದುವರಿದಂತೆ ಅನುಭವವೂ ಹೆಚ್ಚುತ್ತದೆ. ಎಂದರೆ, ಜೀವನವೇ ಅನುಭವ; ಅನುಭವವೇ ಶಿಕ್ಷಣ. ಆದ್ದರಿಂದ ಜೀವನವೇ ಶಿಕ್ಷಣ; ಶಿಕ್ಷಣವೇ ಜೀವನ!

ಪ್ರವಾಸಗಳಿಂದಲೂ ವ್ಯಕ್ತಿ ಸಂಪರ್ಕದಿಂದಲೂ ಅನುಭವ ಒಬ್ಬರಿಂದೊಬ್ಬರಿಗೆ ದೊರಕುತ್ತದೆ. ಮಾನವ ಜೀವನ ಆರಂಭವಾದಂದಿನಿಂದಲೂ ಏಕಪ್ರಕಾರವಾಗಿ ಒಂದು ಸಂತತಿಯ ಕಲೆ, ಸಂಸ್ಕೃತಿ, ಸಾಹಿತ್ಯ, ಸಂಪ್ರದಾಯ, ದೃಷ್ಟಿಧ್ಯೇಯ—ಇವೆಲ್ಲ ಇನ್ನೊಂದು ಸಂತತಿಗೆ ದೊರಕುತ್ತಲೇ ಬಂದಿವೆ; ನಮ್ಮ ಹಿಂದಿನವರ ಕಲಾಕೃತಿಗಳನ್ನೂ, ಸಾಹಿತ್ಯಸಂಸ್ಕೃತಿಗಳನ್ನೂ, ಸಂಘಸಂಸ್ಥೆಗಳನ್ನೂ ನೋಡಿ ಆ ಅನುಭವಗಳನ್ನು ನಾವೂ ಪಡೆಯುತ್ತೇವೆ; ನಮಗಿಂತ ವಯಸ್ಸಿನಲ್ಲಿ ಹಿರಿಯರಾದ ನಮ್ಮ ಸಮಕಾಲೀನರಿಂದಲೂ ಅವುಗಳ ಪರಿಚಯವಾಗುತ್ತದೆ; ಈ ದೃಷ್ಟಿಯಲ್ಲಿ ನೋಡುವುದಾದರೆ, ಮಾನವನು ಅಮರನಲ್ಲದಿದ್ದರೂ ಅವನ ಅನುಭವಗಳು ಮಾತ್ರ ಜನಾಂಗದಿಂದ ಜನಾಂಗಕ್ಕೆ ಹಸ್ತಗತವಾಗುತ್ತ ಅಮರಗಂಗಾ ಪ್ರವಾಹವಾಗಿ ಹರಿದು ಬರುತ್ತಿವೆ. ಹಾಗೆ ಅನಂತ ಕಾಲದಿಂದಲೂ ಮೊಟಕಾಗದೆ ಏಕಪ್ರವಾಹವಾಗಿ ಹರಿದು ಬರಲು ನಮ್ಮ ಪೂರ್ವಿಕರು ನಿರ್ಮಿಸಿರುವ ಗುಡಿಗೋಪುರಗಳ ಶಿಲ್ಪ, ಚಿತ್ರಕಲೆ, ಸಾಹಿತ್ಯ, ಸಂಘಸಂಸ್ಥೆಗಳು, ಸಂಪ್ರದಾಯಗಳು ಇವೆಲ್ಲ ನೆರವಾಗುತ್ತಿವೆ. ಅಷ್ಟೇ ಅಲ್ಲ: ಒಂದು ಕಾಲದ ಒಂದು ಸಮಾಜವನ್ನು ಪರಿಶೀಲಿಸಿದಾಗ ಅದರಲ್ಲಿ ಎಳೆಯರಿಂದ ವೃದ್ಧರವರೆಗಿನ ಎಲ್ಲ ವಯಸ್ಸಿನವರೂ ಇರುತ್ತಾರೆ; ಅವರಲ್ಲಿ ಹಿರಿಯರು ತಮ್ಮ ಪೂರ್ವಿಕರ ಮಾತನಾಡುವ ರೀತಿ, ವರ್ತನೆ, ಜೀವನ ಪದ್ಧತಿ ದೃಷ್ಟಿಧ್ಯೇಯ—ಇವನ್ನೆಲ್ಲ ಕಲಿತು ತಾವೂ ಆ ರೀತಿ ನಡೆದುಕೊಳ್ಳುತ್ತಾರೆ; ಕಿರಿಯರು ಅವರನ್ನು ನೋಡಿ ಅವುಗಳನ್ನೆಲ್ಲ ಅನುಸರಿಸುತ್ತಾರೆ. ಹೀಗೆ ಒಬ್ಬರಿಂದೊಬ್ಬರಿಗೂ, ಒಂದು ಸಮಾಜದಿಂದ ಇನ್ನೊಂದು ಸಮಾಜಕ್ಕೂ, ಇಂದಿನ ಜನಾಂಗದಿಂದ ಮುಂದಿನ ಜನಾಂಗಕ್ಕೂ ಹರಿದು ಬರುತ್ತಿರುವ ಅನುಭವ ಶ್ರೇಣಿಯ ನಿರ್ಮಾಣದಲ್ಲಿ ಸಮಕಾಲೀನ ವ್ಯಕ್ತಿಗಳ ವಯಸ್ಸಿನ ಭಿನ್ನತೆ ಬಹುವಾಗಿ ನೆರವಾಗುತ್ತಿದೆ. ಪ್ರತಿಯೊಬ್ಬನ ಜೀವನದಲ್ಲೂ ಹಳೆಯ ಅನುಭವಗಳ ಪರಿಚಯವೂ, ಹೊಸ ಅನುಭವಗಳ ಸೃಷ್ಟಿಯೂ ಆಗುತ್ತಿರುತ್ತವೆ. ಅಮೆರಿಕದ

ಶಿಕ್ಷಣ ತತ್ವಜ್ಞಾನಿಗಳಾದ ಜಾನ್ ಡ್ಯೂಯಿಯವರು ಹೇಳುವಂತೆ ವ್ಯಕ್ತಿಯು ಸಮಾಜದಲ್ಲಿ ಜೀವಿಸುತ್ತಿರುವುದೇ ದೊಡ್ಡ ಶಿಕ್ಷಣವಾಗಿ ಪರಿಣಮಿಸುತ್ತಿದೆ. ಆ ಮೂಲಕ ಅವನ ಅನುಭವಸಂಪತ್ತು ವಿಕಸಿಸಿ ವಿಸ್ತರಿಸುತ್ತಿದೆ; ಪ್ರತಿಭೆಯ ಬೆಳವಣಿಗೆಗೆ ಉಚಿತವೆನಿಸುವ ಅವಕಾಶವೂ ದೊರಕುತ್ತಿದೆ. ಎಂದರೆ, ಯಾವುದರ ಸಹಾಯದಿಂದ ವ್ಯಕ್ತಿ ತನ್ನ ಅನುಭವವನ್ನು ಬೆಳಸಿ ಮುಂದುವರಿಸುತ್ತಿರುವನೋ ಆ ಸಮಾಜ ಜೀವನವೇ ಶಿಕ್ಷಣವೆಂದು ಸ್ಥೂಲವಾಗಿ ಹೇಳಬಹುದು. ಒಂದು ಪೀಳಿಗೆಯ ಅನುಭವ ಮುಂದಿನ ಪೀಳಿಗೆಗೆ ಹಸ್ತಗತವಾಗುತ್ತಾ ಬರುವಾಗ ಉತ್ತಮಗೊಳ್ಳುತ್ತಲೂ ವಿಕಸಿಸುತ್ತಲೂ ಬರುತ್ತದೆ. ಈ ದಿನದ ನಮ್ಮ ನಾಗರಿಕತೆ ನಿರ್ಮಾಣವಾಗಿರುವುದು ನಮ್ಮ ಹಿಂದಿನವರೆಲ್ಲರ ಅನುಭವದ ಸಾರ ಆ ರೀತಿ ಬೆಳೆದು ವಿಸ್ತರಿಸಿ ಬಂದುದರ ಫಲವಾಗಿಯೇ! ಇಂದಿನ ನಾಗರಿಕತೆಯಲ್ಲಿ ಹಿಂದಿನವರೆಲ್ಲರ ಜೀವನದ ಕಾಣಿಕೆ ಸೇರಿಯೇ ಇದೆ. ಎಂದಮೇಲೆ ಮಾನವನ ನಾಗರಿಕತೆಯ ನಿರ್ಮಾಣದಲ್ಲಿ ಪ್ರಧಾನ ಪಾತ್ರ ಅವನದೇ. ಅನಂತಕಾಲದಿಂದ ಬೆಳೆದುಕೊಂಡು ಬಂದಿರುವ ಈ ನಾಗರಿಕತೆ ಕುಂಟಿತವಾಗದಿರಬೇಕಾದರೆ ಇಂದಿನವರ ಅನುಭವ ಮುಂದಿನವರ ಹಸ್ತಗತವಾಗಲೇ ಬೇಕು. ಯಾವುದಾದರೂ ಕಾರಣದಿಂದ ಅದು ಆಕಸ್ಮಿಕವಾಗಿ ಮೊಟಕಾಯಿತೆಂದರೆ, ಅಂದಿನವರೆಗೂ ನಿರ್ಮಾಣವಾಗಿದ್ದ ನಾಗರಿಕತೆಯೇ ನಿರ್ನಾಮವಾದಂತೆ. ಅದರಿಂದಲೇ ಎಚ್. ಜಿ. ವೆಲ್ಸ್‌ರವರು 'ನಾಗರಿಕತೆಯೆಂದರೆ ಶಿಕ್ಷಣಕ್ಕೂ ಪ್ರಳಯಕ್ಕೂ ಆಗುತ್ತಿರುವ ಸ್ಪರ್ಧೆ' ಎಂದು ಹೇಳಿರುವುದು. ಎಂದರೆ, ನಾಗರಿಕತೆಯನ್ನು ಮೊಟಕುಮಾಡಲು ಹವಣಿಸುತ್ತಿರುವ ಪ್ರಳಯವನ್ನು ತಪ್ಪಿಸಲು ಶಿಕ್ಷಣವೇ ಪರಮೌಷಧ.

ಜೀವನದ ಅನುಭವಗಳನ್ನು ಎರಡು ಬಗೆಯಾಗಿ ವಿಂಗಡಿಸಬಹುದು: ಮೊದಲನೆಯದಾಗಿ, ವ್ಯಕ್ತಿಗೆ ಸಮಾಜಸಂಪರ್ಕದಿಂದ ಸ್ವಾಭಾವಿಕವಾಗಿ ದೊರೆಯುವ ಅನಿರೀಕ್ಷಿತ ಅನುಭವ; ಆ ಶಿಕ್ಷಣ ಉದ್ದೇಶಪೂರ್ವಕವಲ್ಲದ್ದು. ಎರಡನೆಯದಾಗಿ, ಪ್ರಯತ್ನಪೂರ್ವಕವಾಗಿ ದೊರೆಯುವ ಅನುಭವ; ಅದು ನಿರೀಕ್ಷಿತವೂ ಉದ್ದೇಶಪೂರ್ವಕವೂ ಆದುದು. ಬಹು ಹಿಂದಿನ ಕಾಲದಲ್ಲಿ ಶಿಕ್ಷಣ ಸ್ವಾಭಾವಿಕವೂ ಅನಿರೀಕ್ಷಿತವೂ ಉದ್ದೇಶಪೂರ್ವಕವಲ್ಲದ್ದೂ ಆಗಿತ್ತು: ಮಕ್ಕಳು ತಮ್ಮ ತಾಯಿತಂದೆಗಳು, ಅಕ್ಕ ಅಣ್ಣಂದಿರು ಆಡುವ

ಮಾತನ್ನೂ, ಮಾಡುವ ಕೆಲಸವನ್ನೂ ಅನುಕರಿಸುತ್ತಿದ್ದರು; ಆ ಶಿಕ್ಷಣದಿಂದ ಅವರಿಗೂ ಸಮಾಜ ಜೀವನಕ್ಕೆ ಆವಶ್ಯಕವಾದ ಅನುಭವ ದೊರೆಯುತ್ತಿತ್ತು; ಆದರೆ ಉದ್ದೇಶಪೂರ್ವಕವಾಗಿ ಸಾಗುತ್ತಿರಲಿಲ್ಲ. ಸಮಾಜ ಬೆಳೆದು ಅನುಭವ ಹೆಚ್ಚಿದಂತೆ, ನಾಗರಿಕತೆ ಮುಂದುವರಿದಂತೆ, ಆ ಅನುಕರಣ ರೀತಿಯ ಸ್ವಾಭಾವಿಕ ಶಿಕ್ಷಣ ಸಾಲದಾಯಿತು. ಅದಕ್ಕಾಗಿ ಸಂಕೀರ್ಣ ಸಮಾಜದ, ವಿಸ್ತರಿಸಿದ ಮತ್ತು ವಿಧ ವಿಧವಾದ ಅನುಭವಗಳನ್ನು ಮಕ್ಕಳಿಗೆ ದೊರಕಿಸಲು ಪ್ರತ್ಯೇಕ ಸಂಸ್ಥೆಗಳು ಅಸ್ತಿತ್ವಕ್ಕೆ ಬಂದುವು. ಕೆಲವರು ಶಿಕ್ಷಣವನ್ನೇ ತಮ್ಮ ವೃತ್ತಿಯನ್ನಾಗಿ ಅವಲಂಬಿಸಿದರು. ಹೀಗೆ ಶಾಲೆಗಳೂ ಉಪಾಧ್ಯಾಯ ವೃತ್ತಿಯೂ ಆರಂಭವಾದುವು. ಸಮಾಜದ ಸಂಸ್ಕೃತಿ ಸಂಪ್ರದಾಯಗಳನ್ನೂ, ಇನ್ನಿತರ ಅನುಭವಸಾರವನ್ನೂ ಮಕ್ಕಳಿಗೆ ಉದ್ದೇಶಪೂರ್ವಕವಾಗಿ ಬೋಧಿಸಲು ಏರ್ಪಾಡು ನಡೆಯಿತು. ಪ್ರಾಚೀನ ಕಾಲದ ಸ್ವಾಭಾವಿಕ ಅನುಕರಣ ಶಿಕ್ಷಣ ಸಮಾಜ ಸಂಕೀರ್ಣತೆಗೇರಿದಂತೆ, ಉದ್ದೇಶಪೂರ್ವಕ ಶಿಕ್ಷಣವಾಗಿ ರೂಪುಗೊಂಡಿತು; ಶಾಲೆಗಳಲ್ಲಿ ಕೊಡತಕ್ಕ ಶಿಕ್ಷಣದ ವಿಷಯಗಳನ್ನೂ ಸಮಾಜವೇ ನಿರ್ಧರಿಸಿತು. ಆ ಕಾರ್ಯದ ನಿರ್ದಿಷ್ಟ ಗುರಿಯೂ ಕ್ರಮವೂ ರೂಪುಗೊಳ್ಳುತ್ತಾ ಬಂದುವು. ಈ ರೀತಿಯಲ್ಲಿ ಏರ್ಪಟ್ಟಿರುವ ನಮ್ಮ ಇಂದಿನ ಶಾಲೆಗಳ ಶಿಕ್ಷಣಕ್ಕೂ, ಅನಾದಿ ಕಾಲದಲ್ಲಿ ಮಾನವನಿಗೆ ದೊರಕುತ್ತಿದ್ದ ಶಿಕ್ಷಣಕ್ಕೂ ಅಜಗಜಾಂತರ ವ್ಯತ್ಯಾಸ ಕಂಡುಬರುತ್ತದೆ: ಹಿಂದೆ ಮಕ್ಕಳು ತಾಯಿತಂದೆಗಳ ಅಕ್ಕಅಣ್ಣಂದಿರ ನಡೆನುಡಿಗಳನ್ನು ನೋಡಿ ಆಚರಿಸಿ ಕಲಿಯುತ್ತಿದ್ದ ಶಿಕ್ಷಣ ಜೀವನಕ್ಕೆ ಆವಶ್ಯಕವಾಗಿತ್ತು; ಜೀವನದ ನಿಜವಾದ ಅನುಭವವೂ ಆಗಿತ್ತು; ಆದರೆ, ಸಮಾಜ ಜೀವನ ಬೆಳೆದು ಪ್ರತ್ಯೇಕ ಶಾಲೆಗಳು ಹೆಚ್ಚಿದಂತೆ ಶಿಕ್ಷಣ ಜೀವನದಿಂದ ಪ್ರತ್ಯೇಕವಾಗುತ್ತಾ ಬಂದು, ಜೀವನದ ನಿಜವಾದ ಅನುಭವಗಳಿಗೂ ಶಾಲೆಗಳ ಕಾರ್ಯಕ್ರಮಗಳಿಗೂ ಭಿನ್ನತೆ ಹೆಚ್ಚುತ್ತಾ ಬಂದು, ಪುಸ್ತಕಗಳ ಮೂಲಕ ದೊರೆಯುವ ಶಿಕ್ಷಣ ಸಮಾಜದ ಅನುಭವಗಳನ್ನು ಸಾಧಿಸದಾಯಿತು; ವ್ಯಕ್ತಿಯ ಮುಂದಿನ ಜೀವನಕ್ಕೆ ಸಹಾಯವೆನಿಸಲಾರದ ಶಿಕ್ಷಣ ಮಾತ್ರ ಶಾಲೆಯಲ್ಲಿ ದೊರೆಯುವಂತಾಗಿ ಜೀವನದ ಆವಶ್ಯಕತೆಗೂ ಶಿಕ್ಷಣಕ್ಕೂ ಹೊಂದಿಕೆ ತಪ್ಪಿತು. ಈಗ ಈ ಎರಡು ರೀತಿಯ ನ್ಯೂನತೆಗಳನ್ನೂ ನಿವಾರಿಸಿ, ಜೀವನಕ್ಕೂ ಶಿಕ್ಷಣಕ್ಕೂ ಸಂಬಂಧ

ಕಲ್ಪಿಸುವ ಕಾರ್ಯ ಎಲ್ಲ ಶಿಕ್ಷಣವೇತ್ತರ ಮುಂದೆಯೂ ನಿಂತಿರುವ ಮಹಾ ಸಮಸ್ಯೆಯಾಗಿದೆ.

**ಜೀವನತತ್ತ್ವ ಮತ್ತು ಶಿಕ್ಷಣ:** ಶಾಲೆಯ ಶಿಕ್ಷಣ ಜೀವನಕ್ಕೆ ಹೊಂದಿಕೊಳ್ಳಬೇಕು; ಅದರ ಆವಶ್ಯಕತೆಯನ್ನೂ ಪೂರೈಸಬೇಕು. ಆದ್ದರಿಂದ ಜನಜೀವನವನ್ನೂ, ಅದು ಅನುಸರಿಸುತ್ತಿರುವ ಜೀವನತತ್ತ್ವವನ್ನೂ ಪರಿಗಣಿಸಿಯೇ ಶಿಕ್ಷಣರಂಗದ ರೂಪುರೇಖೆಗಳನ್ನು ನಿರ್ಮಿಸಿಕೊಳ್ಳಬೇಕು. ನಾವು ಏತಕ್ಕಾಗಿ ಜೀವಿಸುತ್ತಿದ್ದೇವೆ? ಹೇಗೆ ಜೀವಿಸಬೇಕು? ನಮ್ಮ ಜೀವನದ ಮಹೋದ್ದೇಶವಾವುದು? ಈ ಸಮಸ್ಯೆಗಳನ್ನೆಲ್ಲ ಜನಾಂಗದ ಜೀವನತತ್ತ್ವದ ಬೆಳಕಿನಲ್ಲೇ ಇತ್ಯರ್ಥಪಡಿಸಬೇಕಾಗುತ್ತದೆ. ಶಿಕ್ಷಣವನ್ನು ಜೀವನತತ್ತ್ವಗಳಿಗೆ ಹೊಂದಿಸಿಕೊಂಡು, ಈ ಸಮಸ್ಯೆಗಳನ್ನು ಬಿಡಿಸಿದ ಹೊರತು ಶಿಕ್ಷಣಕಾರ್ಯ ಫಲಪ್ರದವಾಗುವಂತಿಲ್ಲ: ನಿರ್ದಿಷ್ಟ ದೃಷ್ಟಿಧ್ಯೇಯಗಳೇ ಇಲ್ಲದ ಶಿಕ್ಷಣ ತಾನು ಸಾಧಿಸಬೇಕಾದ ಗುರಿಯನ್ನು ಹೇಗೆತಾನೆ ಕಂಡುಕೊಂಡೀತು? ತತ್ತ್ವದೃಷ್ಟಿಯಿಲ್ಲದ ಅಂಥ ಶಿಕ್ಷಣ ಫಲಪ್ರದವಾಗುವುದು ಹೇಗೆ ಸಾಧ್ಯ?

ಶಿಕ್ಷಣಕಾರ್ಯಕ್ಕೆ ಜೀವನತತ್ತ್ವದ ಪರಿಚಯ ಅಷ್ಟೊಂದು ಅಗತ್ಯವೆಂದಮೇಲೆ, ಆ ತತ್ತ್ವದ ಸ್ವರೂಪವಾವುದು, ಅದಕ್ಕೂ ಶಿಕ್ಷಣಕ್ಕೂ ಯಾವ ಸಂಬಂಧವನ್ನು ಕಲ್ಪಿಸಬೇಕು ಎಂಬ ಮೂಲ ಪ್ರಶ್ನೆಗಳು ಹುಟ್ಟುತ್ತವೆ. ಡ್ಯೂಯಿಯವರು ಹೇಳುವಂತೆ ಶಿಕ್ಷಣತತ್ತ್ವವೆಂದರೆ ಶಿಕ್ಷಣಕಾರ್ಯಕ್ಕೆ ಸಂಬಂಧಿಸಿದ ದೃಷ್ಟಿಧ್ಯೇಯಗಳ ಜ್ಞಾನ; ಹಾಗೆಯೇ ಹದಿನೇಳನೆಯ ಶತಮಾನದಲ್ಲಿದ್ದ ರೂಸೋ ಎಂಬ ಶಿಕ್ಷಣತತ್ತ್ವಚಿಂತಕನು ಶಿಕ್ಷಣದ ರೀತಿ ನೀತಿಗಳನ್ನು ಕುರಿತು 'ಮಾನವ ಜೀವನದ ಆಗು ಹೋಗುಗಳನ್ನು ಪರಿಚಯ ಮಾಡಿಕೊಳ್ಳುವುದೇ ನಿಜವಾದ ಶಿಕ್ಷಣ' ಎಂದು ಹೇಳಿರುವನು. ಅವನಂತೆ ಫಿಷೆ ಎಂಬ ಮತ್ತೊಬ್ಬ ತತ್ತ್ವಚಿಂತಕನೂ 'ದೈವಲೀಲೆಯಲ್ಲಿ ಮಾನವನ ಜೀವನ ಸಾಗಬೇಕಾಗಿರುವ ಮಾರ್ಗವನ್ನು ದರ್ಶಿಸುವುದೇ ಶಿಕ್ಷಣ' ಎಂದೂ ತಿಳಿಸಿರುವನು. ಎಂದಮೇಲೆ ಜೀವನದ ದೃಷ್ಟಿ ಧ್ಯೇಯಗಳು ಶಿಕ್ಷಣಕಾರ್ಯದ ತತ್ತ್ವದೃಷ್ಟಿಯನ್ನು ಪೋಷಿಸಬೇಕಾಗಿದೆ.

ತತ್ತ್ವದರ್ಶನ ಜೀವನದ ಗುರಿಯನ್ನು ತೋರಿಸುತ್ತದೆ. ಆ ಗುರಿಯನ್ನು ಮುಟ್ಟುವ ಮಾರ್ಗವನ್ನು ಶಿಕ್ಷಣ ತೋರಿಸಬಲ್ಲದು. ಮಾನವ ಜೀವನದ

ಹೆಗ್ಗುರಿಯೆಂದರೆ, ನಾಗರಿಕತೆಯ ನಿರ್ಮಾಣ. ಈ ಕಾರ್ಯಸಾಧನೆಗೆ ಶಿಕ್ಷಣವೇ ರಾಜಮಾರ್ಗ. ಆದರಿಂದ ಶಿಕ್ಷಣಕ್ಕೂ ಜೀವನತತ್ತ್ವಕ್ಕೂ ನಿಕಟ ಸಂಬಂಧ ಆದಿಯಿಂದಲೂ ಬೆಳೆದುಕೊಂಡೇ ಬಂದಿದೆ. ಜೀವನತತ್ತ್ವದ ಪರಿಚಯವಿಲ್ಲದೆ ಜೀವನದ ಗುರಿಯನ್ನು ನಿರ್ಧರಿಸುವಂತಿಲ್ಲ; ಹಾಗೆಯೇ ಶಿಕ್ಷಣಕಾರ್ಯದ ಧ್ಯೇಯಧ್ಯೇಯಗಳನ್ನೂ ಪರಿಚಯಮಾಡಿಕೊಳ್ಳುವಂತಿಲ್ಲ. ಆದ್ದರಿಂದ ಎಲ್ಲ ಶಿಕ್ಷಕರಿಗೂ ಆಯಾ ಜನಾಂಗದ ತತ್ತ್ವದೃಷ್ಟಿಯ ಪರಿಚಯ ಅತ್ಯಾವಶ್ಯಕ. ಆ ಮೂಲಕವೇ ಅವರು ತಮ್ಮ ಶಿಕ್ಷಣದ ತತ್ತ್ವದೃಷ್ಟಿಯನ್ನು ರೂಪಿಸಿಕೊಂಡು ಮಕ್ಕಳು ಜೀವನದ ಗುರಿಯನ್ನು ಮುಟ್ಟುವಂತೆ ಮಾಡಲು ಸಾಧ್ಯ. ಹೀಗೆ ಜೀವನಕ್ಕೂ, ಜೀವನತತ್ತ್ವಕ್ಕೂ, ಶಿಕ್ಷಣತತ್ತ್ವಕ್ಕೂ ಪರಸ್ಪರ ಸಂಬಂಧ ಏರ್ಪಟ್ಟಾಗ ಮಾತ್ರ ನಮ್ಮ ಶಿಕ್ಷಣಕಾರ್ಯ ಫಲಪ್ರದವಾದೀತು. ಬೋಧಿಸಬೇಕಾದ ಪಠ್ಯವಸ್ತುವೂ, ಅದರಲ್ಲಿ ಯಾವುದಕ್ಕೆ ಪ್ರಾಧಾನ್ಯತೆ ಕೊಡಬೇಕೆಂಬ ಅಂಶವೂ ಶಿಕ್ಷಣತತ್ತ್ವದ ದೃಷ್ಟಿಯಲ್ಲೇ ನಿರ್ಧರವಾಗಬೇಕು; ಆ ದೃಷ್ಟಿಯಲ್ಲೇ ನಮ್ಮ ಶಿಕ್ಷಣಕ್ರಮವನ್ನೂ ರೂಪಿಸಿಕೊಳ್ಳಬೇಕು; ಶಾಲೆಯ ವ್ಯವಸ್ಥೆ ಮತ್ತು ನಿರ್ವಹಣಕಾರ್ಯವನ್ನೂ ಆಚರಣೆಗೆ ತಂದು ಕೊಳ್ಳಬೇಕು. ಒಟ್ಟಿನಲ್ಲಿ, ನಮ್ಮ ಶಿಕ್ಷಣ ಯಶಸ್ವಿಯಾಗಬೇಕಾದರೆ ಅದಕ್ಕೆ ಸಂಬಂಧಿಸಿದ ಎಲ್ಲ ಸಮಸ್ಯೆಗಳನ್ನೂ ಶಿಕ್ಷಣತತ್ತ್ವದ ದೃಷ್ಟಿಯಲ್ಲೇ ಬಿಡಿಸಿ ಕೊಂಡು ಅದರ ಬೆಳಕಿನಲ್ಲೇ ಕಾರ್ಯ ಸಾಧಿಸಬೇಕು. ತತ್ತ್ವ ವಿರಹಿತ ಶಿಕ್ಷಣ ಕುರುಡು ಓದಿನಂತೆ! ಅದು ಫಲಪ್ರದವೂ ಅಲ್ಲ; ಕ್ಷೇಮದಾಯ ಕವೂ ಅಲ್ಲ; ಅದರಿಂದ ಜೀವನದ ಗುರಿಯನ್ನು ಮುಟ್ಟುವುದಂತೂ ಸಾಧ್ಯವೇ ಇಲ್ಲ.

ಶಾಲೆಯಲ್ಲಿ ಉಪಾಧ್ಯಾಯರು ಪ್ರಧಾನ ವ್ಯಕ್ತಿ; ಜನಜೀವನದ ಪರಿ ಚಯವನ್ನೂ, ಸಮಾಜದ ರೂಪುರೇಖೆಗಳನ್ನೂ ಅರಿತವರು; ಅಂಥವರ ಪ್ರಭಾವ ಎಳೆಯ ಮಕ್ಕಳ ಹೃದಯದಮೇಲೆ ಒಂದಲ್ಲ ಒಂದು ವಿಧದಲ್ಲಿ ಬಿದ್ದೇ ಬೀಳುವುದು. ಆಗ ಶಿಕ್ಷಕರ ಸ್ವಂತ ದೃಷ್ಟಿಧ್ಯೇಯಗಳೂ, ಅನುಭವ ಆದರ್ಶಗಳೂ ಬಾಲಕರಮೇಲೂ ಪರಿಣಾಮಕಾರಿಯಾಗುತ್ತವೆ. ಈ ಕಾರಣ ದಿಂದ, ಉಪಾಧ್ಯಾಯರು ಉತ್ತಮವೂ ಆದರ್ಶವೂ ಎನಿಸುವ ತತ್ತ್ವದರ್ಶನ ವನ್ನು ಪಡೆದಿರಬೇಕು. ಅಂಥ ಉತ್ತಮ ತತ್ತ್ವಚಿಂತಕರಾದ ಉಪಾಧ್ಯಾಯರು

ಮಾತ್ರ ಮಕ್ಕಳ ಮನಸ್ಸಿನಲ್ಲಿ ಒಳ್ಳೆಯ ದೃಷ್ಟಿಧ್ಯೇಯಗಳನ್ನು ಬಿತ್ತಿ, ಹೃದಯ ವೈಶಾಲ್ಯವನ್ನು ಬೆಳಸಿ, ಅವರನ್ನು ಮುಂದಿನ ಸತ್ಪ್ರಜಾ ಜೀವನಕ್ಕೆ ಸಿದ್ಧಪಡಿಸಲು ಭದ್ರವಾದ ತಳಹದಿ ಹಾಕಿಕೊಳ್ಳಬಲ್ಲರು. ಅವರು ಒಳ್ಳೆಯ ತತ್ವಚಿಂತಕರು ಮಾತ್ರ ಆಗಿದ್ದರೆ ಸಾಲದು: ಅದರಂತೆ ನಡೆಯುವವರೂ ಆಗಿರಬೇಕು. ಶಾಲೆಯ ಆವರಣದಲ್ಲಿ ಅವರ ನಡೆನುಡಿ, ಆಚಾರ ವ್ಯವಹಾರ, ದೃಷ್ಟಿಧ್ಯೇಯ, ಕುತೂಹಲ, ಉತ್ಸಾಹ, ವಿಷಯ ಪ್ರೇಮ—ಇವೆಲ್ಲ ವಿದ್ಯಾರ್ಥಿಗಳ ವ್ಯಕ್ತಿತ್ವವನ್ನು ರೂಪಿಸಲು ನೆರವಾಗುತ್ತವೆ. ಆದ್ದರಿಂದ ಉಪಾಧ್ಯಾಯರು ಸ್ವತಃ ಉತ್ತಮ ತತ್ವಚಿಂತಕರೂ ತತ್ವಪಾಲಕರೂ ಆಗಿರುವುದು ಉತ್ತಮ ಶಿಕ್ಷಣಕ್ಕೆ ಆವಶ್ಯಕ.

ಉಪಾಧ್ಯಾಯರು ಉತ್ತಮ ತತ್ವಚಿಂತಕರಾಗುವುದು ಹೇಗೆ? ಆ ತತ್ವ ಯಾವುದನ್ನು ಅನುಸರಿಸಿ ರೂಪುಗೊಂಡಿರಬೇಕು? ಜೀವನವೇ ಶಿಕ್ಷಣವೆಂದಮೇಲೆ, ಶಿಕ್ಷಣತತ್ವವೂ ಜೀವನತತ್ವವನ್ನೇ ಅವಲಂಬಿಸಿರಬೇಕು. ಜೀವನ ತತ್ವದ ಪರಿಚಯವಾಗಬೇಕಾದರೆ ಆ ಜೀವನದ ದೃಷ್ಟಿಧ್ಯೇಯಗಳ ಮತ್ತು ಸಂಸ್ಕೃತಿ ಸಂಪ್ರದಾಯಗಳ ದರ್ಶನವಿರಬೇಕು. ಹಾಗಾದರೆ, ಯಾವ ಕಾಲದ ಯಾವ ಜನಾಂಗದ ಜೀವನತತ್ವವನ್ನು ಅನುಸರಿಸಬೇಕೆಂಬ ಪ್ರಶ್ನೆಯೂ ಏಳಬಹುದು. ನಮ್ಮ ಮಕ್ಕಳನ್ನು ಯಾವ ಸಮಾಜ ಜೀವನಕ್ಕೆ ಅನುಗೊಳಿಸುತ್ತಿರುವೆವೋ, ಆ ಜೀವನದ ತತ್ವವೇ ನಮ್ಮ ಶಿಕ್ಷಣ ದೃಷ್ಟಿಯನ್ನೂ ರೂಪಿಸಬೇಕು. ಭಾರತೀಯರಾದ ನಾವು ಭಾರತದ ಜನಜೀವನದ ತತ್ವದೃಷ್ಟಿಯನ್ನು ಅರಿತುಕೊಳ್ಳಬೇಕು. ಹಾಗೂ ಆಧುನಿಕ ಭಾರತದ ಜೀವನದ ಪರಿಚಯ ಆ ಕಾರ್ಯಕ್ಕೆ ಆವಶ್ಯಕ. ಎಂದರೆ, ಇಂದಿನ ನಮ್ಮ ಸಮಾಜದ ರೂಪುರೇಖೆಗಳನ್ನೂ, ದೃಷ್ಟಿಧ್ಯೇಯಗಳನ್ನೂ, ಈ ಯುಗದ ಸಾಮಾನ್ಯ ಲಕ್ಷಣಗಳನ್ನೂ ಅರಿತುಕೊಳ್ಳಬೇಕಾಗಿದೆ.

**ಆಧುನಿಕ ಯುಗದ ಪ್ರಧಾನ ಗುಣಗಳು :** ನಾವು ಬಾಳುತ್ತಿರುವ ಈ ಯುಗದಲ್ಲಿ ಜನಜೀವನ ಹಿಂದೆಂದಿಗಿಂತಲೂ ವೇಗವಾಗಿ ಮುಂದುವರಿಯುತ್ತಿದೆ. ೩೦-೪೦ ವರ್ಷಗಳಿಂದೀಚೆಗೆ ಯಂತ್ರಯುಗ ಆರಂಭವಾಗಿ ಮಾನವನ ದಿನ ದಿನದ ಆವಶ್ಯಕತೆಯ ಸಾಮಗ್ರಿಗಳು ಯಂತ್ರಗಳ ಮೂಲಕ ನಿರ್ಮಾಣವಾಗಿ ಬಹು ಸಂಖ್ಯೆಯಲ್ಲಿ ಹೊರಬೀಳುತ್ತಿವೆ. ಮಾನವನ ಮಾಂಸ

ಖಂಡಗಳ ದುಡಿಮೆಗೆ ಬದಲಾಗಿ ಅವನ ಬುದ್ಧಿ ಚತುರತೆಯಿಂದ ನಿರ್ಮಾಣವಾದ ಯಂತ್ರಗಳು ದುಡಿಯುತ್ತಿವೆ. ಆ ಮೂಲಕ ಪದಾರ್ಥಗಳ ತಯಾರಿಕೆ ಅಧಿಕವಾಗಿ ಬೆಲೆ ಕಡಮೆಯಾಗುತ್ತಿದೆ. ಪ್ರಕೃತಿಯಲ್ಲಿ ಅಡಗಿರುವ ಶಕ್ತಿಯನ್ನು ಲಾಭದಾಯಕವಾಗಿ ಉಪಯೋಗಿಸಿಕೊಂಡು ಜೀವನದ ಮಟ್ಟವನ್ನೂ ಸೌಖ್ಯವನ್ನೂ ಹೆಚ್ಚಿಸಿಕೊಳ್ಳುವುದು ಯಂತ್ರಯುಗದ ಮಾನವನ ಮಹೋತ್ಸಾಹವಾಗಿದೆ.

**ಔದ್ಯೋಗಿಕ ಪ್ರಗತಿ:** ಔದ್ಯೋಗಿಕ ಯುಗದ ನಿರ್ಮಾಣದಲ್ಲಿ ವಿದ್ಯುಚ್ಛಕ್ತಿ ಬಹು ವಿಧವಾಗಿ ನೆರವಾಗುತ್ತಿದೆ. ಅದರ ಸಹಾಯದಿಂದ ಲಕ್ಷಾಂತರ ಯಂತ್ರಗಳು ಕೆಲಸಮಾಡುತ್ತಿವೆ. ಆ ಮೂಲಕ ಮಾನವನ ಅಶನ, ವಸನ, ಗೃಹವಸತಿ, ಸಂಚಾರ, ವಿಹಾರ, ಮುಂತಾದ ಜೀವನದ ವಿವಿಧ ಕ್ಷೇತ್ರಗಳಲ್ಲಿ ನವೀನತೆ ತಲೆದೋರಿದೆ. ದಿನ ದಿನಕ್ಕೂ ಅವುಗಳು ಬದಲಾಯಿಸುತ್ತಾ ಪ್ರಗತಿಪಥದಲ್ಲಿ ರೂಪುಗೊಳ್ಳುತ್ತಿವೆ. ಮಾನವ ಜೀವನದ ಮಟ್ಟವನ್ನೂ ಸೌಖ್ಯವನ್ನೂ ಹೆಚ್ಚಿಸುತ್ತಿವೆ. ವ್ಯವಸಾಯ ಕ್ಷೇತ್ರದಲ್ಲೂ ಯಂತ್ರಗಳು ಬಳಕೆಗೆ ಬರುತ್ತಿವೆ. ಲಕ್ಷಾಂತರ ಜನರು ಬೆವರು ಹರಿಸಿಕೊಂಡು ಮಾಡಬೇಕಾದ ಕಾರ್ಯಗಳನ್ನು ಯಂತ್ರಗಳು ಬೇಗ ಮಾಡಿ ಮುಗಿಸುತ್ತಿವೆ. ಹೊಸ ವಿಧಾನದ ವ್ಯವಸಾಯದಿಂದ ಉತ್ಪನ್ನವೂ ಹೆಚ್ಚುತ್ತಿದೆ. ಅಮೆರಿಕ, ರಷ್ಯ, ಮೊದಲಾದ ರಾಷ್ಟ್ರಗಳು ಯಂತ್ರಗಳ ಮೂಲಕ ಗೋಧಿ, ಹೊಗೆಸೊಪ್ಪು, ಸೆಣಬು, ಜೋಳ, ಮುಂತಾದವನ್ನು ಜಗತ್ತಿಗೇ ಆಶ್ಚರ್ಯ ಹುಟ್ಟಿಸುವಷ್ಟು ಅಧಿಕ ಪ್ರಮಾಣದಲ್ಲಿ ಬೆಳೆಯುತ್ತಿವೆ. ಕೈಮಗ್ಗಗಳಿಗೆ ಬದಲು ಬಟ್ಟೆಯ ಗಿರಣಿಗಳು ಎಲ್ಲೆಲ್ಲೂ ಬಳಕೆಗೆ ಬಂದು, ನಾಜೋಕಾದ ಬಗೆ ಬಗೆಯ ಬಟ್ಟೆಬರೆಗಳು ತಯಾರಾಗಿ ಕಡಮೆ ಬೆಲೆಗೆ ದೊರಕುತ್ತಿವೆ. ಗೃಹವಸತಿಗಳಲ್ಲೂ ಅಗಾಧವಾದ ಮಾರ್ಪಾಡು ಕಂಡುಬರುತ್ತದೆ: ಶತಶತಮಾನಗಳ ಹಿಂದಿನ ನಮ್ಮ ನಗರಗಳ ಮನೆಗಳನ್ನು ಈಚೆಗೆ ನಿರ್ಮಾಣವಾಗುತ್ತಿರುವವುಗಳೊಡನೆ ಹೋಲಿಸಿ ನೋಡಿ: ಛಾವಣಿಯ ಗುಡಿಸಲಿನಂಥ ಮನೆಗಳ ಸ್ಥಳದಲ್ಲಿ ಈಗ ಮುಗಿಲನ್ನು ಮುಟ್ಟುವ ಹತ್ತಾರು ಅಂತಸ್ತಿನ ಭವ್ಯ ಮಂದಿರಗಳು ನಿರ್ಮಿತವಾಗಿ ನಿಂತಿವೆ; ವಿಹಾರಕ್ಕೂ ವಾಸಕ್ಕೂ ಆರೋಗ್ಯರಕ್ಷಣೆಗೂ ಒಪ್ಪುವಂತೆ ನಿರ್ಮಾಣವಾಗುತ್ತಿವೆ. ಅಂಥ ಕಡೆ

ಗಳಲ್ಲಿ ಲಕ್ಷಾಂತರ ಜನರು ವಾಸಮಾಡುತ್ತಿದ್ದರೂ ಅವರ ಆರೋಗ್ಯ ರಕ್ಷಣೆಗೂ ಆವಶ್ಯಕತೆಗೂ ಅವು ಅನುಕೂಲವಾಗಿವೆ.

ಅಂದಂದು ಭವ್ಯವಾದ ಸಂಗೀತವನ್ನು ಪ್ರಸಾರಮಾಡುತ್ತ, ಸಹಸ್ರ ಮೈಲಿಗಳ ವಿಷಯಗಳನ್ನು ಅಂದಂದೇ ಹರಡುತ್ತಿರುವ ರೇಡಿಯೋ ಯಂತ್ರಗಳಿಂದ ಸಜ್ಜಿತವಾಗಿ, ವಿವಿಧಾಲಂಕಾರಗಳಿಂದ ಕಂಗೊಳಿಸುವ ಆಧುನಿಕ ರೀತಿಯ ಉದ್ಯಾನ ವನಗಳಲ್ಲಿ ವಿಹರಿಸುವಾಗ ನೂರಾರು ವರ್ಷಗಳ ಹಿಂದಿನ ನಮ್ಮ ಪೂರ್ವಜರು ಇಂಥ ಸೌಲಭ್ಯವನ್ನು ಕನಸಿನಲ್ಲೂ ಕಂಡಿರಲಾರರೆನ್ನಿಸುತ್ತದೆ. ಸಹಸ್ರಾರು ಮೈಲಿಗಳನ್ನು ಬಹು ಬೇಗ ನಡಸಬಲ್ಲ ರೈಲು, ಹಡಗು, ವಿಮಾನ, ಮುಂತಾದ ವಾಹನ ಸೌಕರ್ಯಗಳು ರೂಪುಗೊಂಡಿರುವ ಈ ಕಾಲದಲ್ಲಿ ಬಾಳುತ್ತಿರುವುದೇ ಒಂದು ಭಾಗ್ಯವೆನ್ನಿಸುತ್ತದೆ. ಕ್ಷಾಮಪೀಡಿತವಾದ ಪ್ರದೇಶಗಳಿಗೆ ಬೇಗ ಆಹಾರಾದಿ ಆವಶ್ಯಕತೆಯನ್ನು ಒದಗಿಸಿ, ಸಾವಿಗೀಡಾಗುತ್ತಿರುವ ಲಕ್ಷಾಂತರ ಜೀವಿಗಳನ್ನು ರಕ್ಷಿಸಲೂ ಸಹಾಯವಾಗಿದೆ. ಹಾಗೆಯೇ, ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿ ತಯಾರಾದ ಆಹಾರವನ್ನೂ ಇತರ ಪದಾರ್ಥಗಳನ್ನೂ ಬೇಗ ಆವಶ್ಯಕವಿರುವ ಇತರ ಕಡೆಗೂ ಸಾಗಿಸಲು ಅನುಕೂಲವಾಗಿದೆ. ಎಲ್ಲಕ್ಕೂ ಮೇಲಾಗಿ ಜಗತ್ತಿನ ಬೇರೆಬೇರೆ ಭಾಗಗಳನ್ನು ಸುತ್ತಿ ಸುಲಭವಾಗಿಯೂ ಶೀಘ್ರವಾಗಿಯೂ ನೋಡಿಕೊಂಡು ಬರುವಂತಾಗಿ ಜನಜನಾಂಗಗಳ ಸಂಪರ್ಕ ಹೆಚ್ಚಿ, ಜಗತ್ತು ಒಂದುಗೂಡಿದ ಒಂದು ಮಹಾ ನಗರದಂತೆ ಭಾಸವಾಗುತ್ತಿದೆ.

**ವಿಜ್ಞಾನ ದೃಷ್ಟಿ:** ಮಾನವನ ಜೀವನಕ್ಷೇತ್ರದಲ್ಲಿ ಇಂಥ ಅದ್ಭುತ ಬದಲಾವಣೆಗಳನ್ನು ತಂದೊಡ್ಡಿರುವ ಆಧುನಿಕ ಕಾಲದ ಮಹಾಶಕ್ತಿ ಯಾವುದು ಎಂಬ ಪ್ರಶ್ನೆ ಎಲ್ಲರ ಮನಸ್ಸಿನಲ್ಲೂ ಏಳುತ್ತದೆ. ನಮಗೂ ನಮ್ಮ ಹಿಂದಿನವರಿಗೂ ಹಲವು ದೃಷ್ಟಿಗಳಲ್ಲಿ ತುಂಬ ಭಿನ್ನತೆ ಕಂಡುಬರುತ್ತದೆ. ಇಂದಿನವರಾದ ನಮಗೆ ಯಾವ ವಿಷಯವನ್ನು ನಂಬಬೇಕಾದರೂ ಅದನ್ನು ಕಣ್ಮನಗಳೊಪ್ಪುವಂತೆ ಪ್ರಯೋಗಗಳಿಂದ ಪರಿಶೀಲಿಸಿಯೇ ನೋಡುವ ಮನೋಭಾವ ಬೆಳೆದು ಬರುತ್ತಿದೆ. ಈ ಪರೀಕ್ಷಣ ಬುದ್ಧಿಯನ್ನೇ ವಿಜ್ಞಾನ ದೃಷ್ಟಿಯೆಂದು ಕರೆಯುವರು. ನಾವು ಬಾಳುತ್ತಿರುವ ಈ ಯುಗವನ್ನು ಅದೇ ಕಾರಣದಿಂದ ವಿಜ್ಞಾನ ಯುಗವೆಂದೂ ಹೇಳುವುದುಂಟು.

ಹಾಗೆಂದರೆ, ನಮ್ಮ ಹಿಂದಿನವರು ವಿಜ್ಞಾನಿಗಳಾಗಿರಲಿಲ್ಲವೆ? ಅವರಿದ್ದುದು ವಿಜ್ಞಾನ ಯುಗವಲ್ಲವೆ? ಎಂಬ ಪ್ರಶ್ನೆ ಏಳಬಹುದು. ಅಹುದು; ಅವರು ನಮ್ಮಷ್ಟು ವಿಜ್ಞಾನಿಗಳಾಗಿರಲಿಲ್ಲ. ಅವರ ತತ್ವದೃಷ್ಟಿಯನ್ನು ರೂಪಿಸುವಾಗ ಪ್ರಯೋಗಗಳ ಆಧಾರದಿಂದ ಪಡೆದ ಪರೀಕ್ಷಣ ಬುದ್ಧಿಗೆ ಅಷ್ಟು ಪ್ರಾಧಾನ್ಯ ವಿರಲಿಲ್ಲ; ಸನಾತನವೂ ಪವಿತ್ರವೂ ಎಂದು ನಂಬಲಾಗಿದ್ದ ಹಲವು ಅಂಶಗಳು ಅವರ ಆದರ್ಶವಾಗಿದ್ದವು. ಅವರದು ಆದರ್ಶ ಜ್ಞಾನ; ಇದನ್ನು ವಿವರಿಸಲು ಒಂದು ಉಧಾಹರಣೆಯನ್ನು ಕೊಡಬಹುದು. ಅರಿಸ್ಟಾಟಲ್ ಎಂಬ ರೋಮಿನ ತತ್ವಜ್ಞಾನಿ ಇತ್ತೀಚಿನವರೆಗೂ ಪಾಶ್ಚಿಮಾತ್ಯ ಜ್ಞಾನರಾಜ್ಯದಲ್ಲಿ ಆಚಾರ್ಯ ಪುರುಷನಂತೆ ಗಣನೆಯಾಗಿದ್ದನು. ಅವನು ಉಸಿರಿದ ಹಲವು ವಾಕ್ಯಗಳು ಪ್ರಮಾಣಗಳಾಗಿ ಬಳಕೆಗೆ ಬಂದುವು. ಅವುಗಳಲ್ಲಿ ಭೂಮಿ ಸೂರ್ಯನ ಸುತ್ತ ಚಕ್ರಾಕಾರವಾಗಿ ಸುತ್ತುತ್ತದೆಂಬುದು ಒಂದು. ಅವನ ಈ ಅಭಿಪ್ರಾಯ ಸಹಸ್ರಾರು ವರ್ಷಗಳವರೆಗೆ ಜನತೆಯಲ್ಲಿ ಪ್ರಚಾರದಲ್ಲಿತ್ತು. ಆ ಆದರ್ಶ ವನ್ನೊಪ್ಪಿದ್ದವರು ಅದು ಸಾಧುವೇ ಎಂದು ಪರೀಕ್ಷಿಸಲು ಯತ್ನಿಸುತ್ತಿರಲಿಲ್ಲ. ಹಾಗೆ ಯತ್ನಿಸುವುದು ಪಾಪಕರವೆಂದು ಅವರು ನಂಬಿದ್ದರು. ಆದರೆ ಗೆಲಿಲಿಯೋ ಎಂಬಾತನು ಅರಿಸ್ಟಾಟಲಿನ ತತ್ವವನ್ನು ಪ್ರಯೋಗಗಳಿಂದ ಪರೀಕ್ಷಿಸಿ, ಅವನು ಆಚಾರ್ಯಪುರುಷನೆಂಬ ದಾಕ್ಷಿಣ್ಯವಿಲ್ಲದೆ, ಅದು ಸರಿ ಯಲ್ಲವೆಂದು ತೋರಿಸಿ, ಭೂಮಿ ಅಂಡಾಕಾರವಾಗಿ ಸುತ್ತುತ್ತದೆಂಬ ಸತ್ಯಾಂಶ ವನ್ನು ಪ್ರಕಟಿಸಿದನು. ಈತನ ತತ್ವದೃಷ್ಟಿಯನ್ನು ಪೋಷಿಸಿದ್ದು ಪರೀಕ್ಷಣ ಬುದ್ಧಿ. ಅವನು ಹಿಂದಿನ ಆದರ್ಶವನ್ನು ಒಪ್ಪದೆ ಅದನ್ನು ಪರೀಕ್ಷಿಸಿ ನೋಡಲು ಯತ್ನಿಸಿದನು. ಈ ಪರೀಕ್ಷಣ ಬುದ್ಧಿಯೇ ವಿಜ್ಞಾನ.

ಜನಜೀವನದಲ್ಲಿ ಗೆಲಿಲಿಯೋವಿನ ಕಾಲದಿಂದೀಚೆಗೆ ಪರೀಕ್ಷಣ ಬುದ್ಧಿ ಕ್ರಮವಾಗಿ ಬೆಳೆಯುತ್ತಾ ಬಂತು. ಯಾವ ನಂಬಿಕೆಗಳನ್ನಾಗಲೀ ಪ್ರಯೋಗ ಪರೀಕ್ಷೆಗಳಿಗೆ ಒಳಪಡಿಸುವ ಮನೋಭಾವ ಹೆಚ್ಚಿತು. ಹಿಂದಿನವರ ಆದರ್ಶ ನಂಬಿಕೆಗಳಲ್ಲಿದ್ದ ತಪ್ಪುಗಳು ಅರಿವಾಗುತ್ತಾ ಬಂದು, ಪ್ರಯೋಗ ಪರೀಕ್ಷೆ ಗಳಿಂದ ಸತ್ಯವನ್ನು ಹುಡುಕುವ ನೂತನ ಸಂಪ್ರದಾಯ ಜನತೆಯಲ್ಲಿ ಆರಂಭವಾಯಿತು. ಇಂಥ ವಿಚಾರಪೂರ್ವಕವಾದ ಪರೀಕ್ಷಣ ಬುದ್ಧಿಯನ್ನೇ ನಾವು ವಿಜ್ಞಾನ ದೃಷ್ಟಿಯೆನ್ನುವುದು.

ಆಧುನಿಕ ನಾಗರಿಕತೆಯ ಗುಣವಿಶೇಷವೆನ್ನಬಹುದಾದ ಯಂತ್ರ ಯುಗದ ನಿರ್ಮಾಣದಲ್ಲಿ ಈ ಪರೀಕ್ಷಣ ಬುದ್ಧಿ ಅಥವಾ ವಿಜ್ಞಾನ ದೃಷ್ಟಿ ಬಹುವಾಗಿ ನೆರವಾಗಿದೆ. ಹಾಗಾದರೆ ಆ ವಿಜ್ಞಾನವನ್ನು ಸಾಧಿಸುವ ಬಗೆ ಹೇಗೆ? ಯಾವುದಾದರೂ ಒಂದು ವಿಷಯಕ್ಕೆ ಸಂಬಂಧಿಸಿದ ಜ್ಞಾನವನ್ನು ಪಡೆಯುವಾಗ ಅದಕ್ಕೆ ಆವಶ್ಯಕವೆನಿಸುವ ಪ್ರಯೋಗಗಳನ್ನು ನಡಸಿ ಫಲಿತಾಂಶವನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕು; ಮರಳಿ ಅದೇ ಪ್ರಯೋಗವನ್ನು ನಡಸಿ ನಮ್ಮ ಮೊದಲ ಪರಿಶೀಲನೆ ಸರಿಯೆ ಎಂಬುದನ್ನು ನಿರ್ಧಾರ ಮಾಡಿಕೊಳ್ಳಬೇಕು; ಅನಂತವಾಗಿ ಆ ವಿಷಯದಮೇಲೆ ಯೋಚಿಸಬೇಕು; ಇತರರು ಅದೇ ವಿಷಯದಮೇಲೆ ನಡಸಿರಬಹುದಾದ ಪ್ರಯೋಗಗಳನ್ನು ಅರಿತು ಆ ಫಲಿತಾಂಶದೊಡನೆ ತನ್ನದನ್ನು ಹೋಲಿಸಿ ನೋಡಬೇಕು; ನ್ಯೂನತೆಗಳಿದ್ದರೆ ಪುನಃ ಪ್ರಯೋಗ ನಡಸಿ ತಿದ್ದಿ ಸರಿಪಡಿಸಿಕೊಳ್ಳಬೇಕು; ಕೊನೆಗೆ ಆ ವಿಷಯವನ್ನು ಕುರಿತ ಒಂದು ನಿರ್ಧಾರಕ್ಕೆ ಬರಬೇಕು. ಹೀಗೆ ಪ್ರಯೋಗ ಪರೀಕ್ಷೆಗಳಿಂದ ಸರಿನೋಡಿ ತಿಳಿದುಕೊಳ್ಳುವ ವಿಚಾರಸಮ್ಮತವಾದ ತಿಳಿವಳಿಕೆಯೇ ವಿಜ್ಞಾನ. ಈ ಪರೀಕ್ಷಿಸುವ ಮನೋಧರ್ಮ ನಮ್ಮ ದಿನಬಳಕೆಯ ಎಲ್ಲ ಸನ್ನಿವೇಶಗಳಲ್ಲೂ ಕ್ರಮವಾಗಿ ಪ್ರವಹಿಸುತ್ತಿದೆ. ಅದರಿಂದ ಸಾಂಪ್ರದಾಯಿಕವಾಗಿ ನಡೆದುಬಂದಿರುವ ಅನೇಕ ಮೂಢ ನಂಬಿಕೆಗಳು ಮಾಯವಾಗಿ ವಿಚಾರದೃಷ್ಟಿ ಹೆಚ್ಚುತ್ತಿದೆ. ಯಾರೋ ಪುರಾತನರು ಹಾಕಿದ ಆದರ್ಶವೊಂದನ್ನು ಆಧಾರವಾಗಿಟ್ಟುಕೊಂಡು ಅದರಮೇಲೆ ಹೊಸ ಜ್ಞಾನವನ್ನು ಕಟ್ಟಲು ಯತ್ನಿಸುವ ಮುನ್ನ, ಆ ಅಧಿಕಾರವಾಣಿ ವಿಚಾರ ಸಮ್ಮತವೇ ಎಂದು ಪರೀಕ್ಷಿಸುವ ಕಾಲ ಬಂದಿದೆ; ಸ್ವತಂತ್ರವಾಗಿ ಅದರ ಸತ್ಯ ದೃಷ್ಟಿಯನ್ನು ಹುಡುಕುವ ಮನೋಧರ್ಮ ಬೆಳೆಯುತ್ತಿದೆ. ಈ ಹೊಸ ಮನೋಭಾವ ಜನಜೀವನದಲ್ಲಿ ವಿಜ್ಞಾನ ದೃಷ್ಟಿಗೆ ಪ್ರಧಾನ ಸ್ಥಾನವೊಂದನ್ನು ನೊರಕಿಸಿಕೊಟ್ಟಿದೆ. ವಿಜ್ಞಾನದ ಬೆಳಕು ಜೀವನದ ಎಲ್ಲ ಕ್ಷೇತ್ರಗಳನ್ನೂ ಬೆಳಗಹತ್ತಿದೆ. ಔದ್ಯೋಗಿಕ ಕ್ಷೇತ್ರಗಳಲ್ಲಿ ಅದು ಮಹತ್ತರವಾದ ಬದಲಾವಣೆ ಹುಟ್ಟಿಸಿದೆ; ಹಿಂದೆ ಸಣ್ಣ ಪುಟ್ಟ ಕೈಗಾರಿಕೆಗಳಿದ್ದ ಸ್ಥಳದಲ್ಲಿ ದೊಡ್ಡ ದೊಡ್ಡ ಕಾರ್ಖಾನೆಗಳೆದ್ದಿವೆ; ಅಲ್ಲಿ ಅಸಂಖ್ಯಾತ ಜನರಿಗೆ ಉದ್ಯೋಗಗಳೂ ದೊರೆಯುತ್ತಿವೆ. ಅಕ್ಕಪಕ್ಕಗಳಲ್ಲಿ ಜನರು ನೆಲಸಿ ನಗರಗಳು ನಿರ್ಮಾಣ

ವಾಗುತ್ತಿವೆ. ಹಾಗೆ ನೆಲಸಿದ ಜನರಲ್ಲಿ ಸಂಪರ್ಕ ಹೆಚ್ಚಿ, ಸಮಾಜ ಜೀವನ ಅನ್ಯೋನ್ಯವಾಗಿ ಬೆಳೆಯುತ್ತಿದೆ. ಜೊತೆಗೆ ಕಾರ್ಖಾನೆಯಲ್ಲಿ ತಯಾರಾದ ಪದಾರ್ಥಗಳನ್ನು ಹೊರಗೆ ಕಳಿಸುವಾಗ, ಕಚ್ಚಾವಸ್ತುಗಳನ್ನು ದೇಶ ವಿದೇಶ ಗಳಿಂದ ತರಿಸಿಕೊಳ್ಳುವಾಗ ಒಂದು ಜನಾಂಗಕ್ಕೂ ಮತ್ತೊಂದು ಜನಾಂಗಕ್ಕೂ ಹೆಚ್ಚು ಸಂಬಂಧ ಬೆಳೆಯುವಂತಾಗಿದೆ. ಆಧುನಿಕ ಕಾಲದ ವಾಹನ ಸೌಕರ್ಯವೂ ಈ ಸಂಬಂಧ ಸಾಧನೆಗೆ ಬಹುವಾಗಿ ಸಹಾಯಮಾಡು ತ್ತಿದೆ. ಒಬ್ಬ ವ್ಯಕ್ತಿಗೂ ಇನ್ನೊಬ್ಬ ವ್ಯಕ್ತಿಗೂ, ಒಂದು ಸಮಾಜಕ್ಕೂ ಇನ್ನೊಂದು ಸಮಾಜಕ್ಕೂ, ಒಂದು ಜನಾಂಗಕ್ಕೂ ಇನ್ನೊಂದು ಜನಾಂ ಗಕ್ಕೂ ಸಂಪರ್ಕ ಹೆಚ್ಚುತ್ತಾ ಇಡೀ ಜಗತ್ತಿನ ಜನಜೀವನವೇ ಒಂದಾಗಿ ಬಾಂಧವ್ಯದ ಬಲೆ ಹೆಣೆದುಕೊಳ್ಳುತ್ತಿದೆ. ಹೀಗಾಗಿ ಮಾನವ ವರ್ಗವೇ ಒಂದು ಸಮಾಜವಾಗಿ ಪರಿವರ್ತನೆಯಾಗುತ್ತಿದೆ.

**ಪ್ರಜಾಸತ್ತಾತ್ಮಕ ಸಮಾಜ ದೃಷ್ಟಿ:** ಹೀಗೆ ವಿಸ್ತರಿಸಿ ಸಂಕೀರ್ಣತೆ ಗೇರಿದ ಮಾನವಸಮಾಜದ ಸುಖಶಾಂತಿಗಾಗಿ ಆಡಳಿತ ಅವಶ್ಯಕವಷ್ಟೆ; ಅಂಥ ಆಡಳಿತಕ್ರಮ ಪ್ರಜಾಸತ್ತಾತ್ಮಕ ಪದ್ಧತಿಯದಾಗಿರಬೇಕೆಂಬ ಮನೋ ಭಾವ ಜನತೆಯಲ್ಲಿ ಬಲಿಯುತ್ತಿದೆ. ಆಡಳಿತದಲ್ಲಿ ಸಮಾಜದ ಎಲ್ಲ ವ್ಯಕ್ತಿ ಗಳೂ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಭಾಗವಹಿಸಬೇಕೆಂಬ ಕಾತರವೂ ಹೆಚ್ಚುತ್ತಿದೆ. ವ್ಯಕ್ತಿಯ ಆಕಾಂಕ್ಷೆಗಳೂ ಅಭಿಪ್ರಾಯಗಳೂ ಸಮಾಜ ನಿರ್ವಹಣದಲ್ಲೂ ಆಡಳಿತದಲ್ಲೂ ಪ್ರತಿಬಿಂಬಿಸಬೇಕೆಂಬ ಸಮಾ ನತೆಯ ತತ್ತ್ವದೃಷ್ಟಿ ಬಳೆದುಬರುತ್ತಿದೆ. ಅದೇ ತತ್ತ್ವದೃಷ್ಟಿ ಜೀವನದ ಮಿಕ್ಕೆಲ್ಲ ಕ್ಷೇತ್ರಗಳಲ್ಲೂ ಆವರಿಸಹತ್ತಿದೆ. ವ್ಯಕ್ತಿಸ್ವಾತಂತ್ರ್ಯವನ್ನು ಪಡೆದು, ಸಮಾಜ ದಲ್ಲಿ ಸಮಾನ ಸ್ಥಾನವನ್ನು ಗಳಿಸುವ ಕಾತರ ಎಲ್ಲರಿಗೂ ಹುಟ್ಟುತ್ತಿದೆ. ಆ ಮೂಲಕ ಒಂದೊಂದು ವೈಶಿಷ್ಟ್ಯವನ್ನು ಪಡೆದಿರುವ ಒಬ್ಬೊಬ್ಬ ವ್ಯಕ್ತಿಯೂ ತನ್ನ ಅಭಿಪ್ರಾಯವನ್ನೂ ಕಾಣಿಕೆಯನ್ನೂ ಸಮಾಜದ ಮುಂದೆ ಇಡತಕ್ಕ ಸ್ವಾತಂತ್ರ್ಯವೂ ಧೈರ್ಯವೂ ಬರುತ್ತಿದೆ. ಆರ್ಷೇಯವಾಗಿ ಬಂದಿರುವ ನಂಬಿಕೆಗಳೂ ಸಂಪ್ರದಾಯಗಳೂ ಎಷ್ಟರ ಮಟ್ಟಿಗೆ ಸತ್ಯ ದೃಷ್ಟಿಯವು, ಸಮಾಜ ಹಿತಕಾರಿಯಾದವು ಎಂದು ಪ್ರಶ್ನಿಸುವುದೂ ಆರಂಭವಾಗಿದೆ. ನಮ್ಮ ಸಮಾಜದಲ್ಲಿ ಆಚರಣೆಯಲ್ಲಿರುವ ಸಂಪ್ರದಾಯಗಳೂ ಸಂಘಸಂಸ್ಥೆಗಳೂ

ಯಾರಿಂದ ನಿರ್ಮಿತವಾದವು? ಅವುಗಳನ್ನು ನಿರ್ಮಿಸಿದ ಮೊದಲ ಉದ್ದೇಶಗಳಾವುವು? ಅವು ಹಿಂದಿನ ಕಾಲಕ್ಕೆ ಒಪ್ಪುವಂತಿದ್ದರೆ, ಈ ಕಾಲಕ್ಕೂ ಒಪ್ಪುವಂತಿರುವುವೆ? ಇಂದಿನ ಸಮಾಜಸನ್ನಿವೇಶಗಳಿಗೆ ಅವು ತಕ್ಕವಾಗಿವೆಯೆ? ವಿಜ್ಞಾನಯುಗದ ನವಜನಾಂಗದ ಪುರೋಭಿವೃದ್ಧಿಗೆ ನೆರವಾಗಬಲ್ಲವೆ? ವ್ಯಕ್ತಿ ಸಮಾನದೃಷ್ಟಿಗೆ ಅವಕಾಶಕೊಡುವುವೆ?—ಈ ರೀತಿಯ ವಿಚಾರ ದೃಷ್ಟಿಯ ಒರೆಗಲ್ಲಿಗೆ ಹಚ್ಚಿ ಅವುಗಳ ಉಳಿವು ಅಳಿವುಗಳನ್ನು ನಿರ್ಧರಿಸುವ ಕಾರ್ಯ ಆರಂಭವಾಗಿದೆ. ಅವು ಉಚಿತವಲ್ಲವೆಂದು ನಿರ್ಧರವಾದರೆ ನಿರ್ದಾಕ್ಷಿಣ್ಯವಾಗಿ ತಳ್ಳಿಹಾಕಿ, ಅವುಗಳ ಸ್ಥಳದಲ್ಲಿ ಫಲದಾಯಕವೂ ಕಲ್ಯಾಣಕಾರಿಯೂ ಆದವನ್ನು ಸ್ಥಾಪಿಸುವ ಯತ್ನ ನಡೆಯುತ್ತಿದೆ. ಯಾವ ಸಂಸ್ಥೆಯಾಗಲಿ ಸಂಪ್ರದಾಯವಾಗಲಿ, ಸಮಾಜದ ಒಬ್ಬೊಬ್ಬ ವ್ಯಕ್ತಿಗೂ ತನ್ನ ವೈಶಿಷ್ಟ್ಯಗಳನ್ನು ಪರಿಪೂರ್ಣವಾಗಿ ಬೆಳಸಿಕೊಳ್ಳುವ, ಆ ಮೂಲಕ ಇಡೀ ಸಮಾಜವೇ ಪ್ರಗತಿಮಾರ್ಗದಲ್ಲಿ ಸಾಗಲು ನೆರವಾಗುವ ಅವಕಾಶ ಕೊಡುವಂತಿರಬೇಕೆಂಬ ಬಯಕೆ ಜನತೆಯಲ್ಲಿ ಬೇರೂರುತ್ತಿದೆ. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಶಕ್ತಿ ಸಾಮರ್ಥ್ಯಗಳನ್ನು ಪೂರ್ಣವಾಗಿ ಬೆಳಸಿಕೊಂಡು, ತನಗೊಪ್ಪುವ ಮತ್ತು ಸಾಧ್ಯವೆನಿಸುವ ಕಾಣಿಕೆ ಸಲ್ಲಿಸಿ, ಸಮಾಜದ ಪುರೋಭಿವೃದ್ಧಿಯನ್ನು ಸಾಧಿಸುವಂತಿರಬೇಕೆಂಬ ಧ್ಯೇಯವೂ ರೂಪುಗೊಳ್ಳುತ್ತಿದೆ. ಸಮಾಜದ ಎಲ್ಲ ವ್ಯಕ್ತಿಗಳ, ಆ ಮೂಲಕ ಇಡೀ ಮಾನವಕುಲದ ಕಲ್ಯಾಣ ಸಾಧನೆಯಾಗಿ ಪ್ರಗತಿಪಥದಲ್ಲಿ ಜೀವನ ಮುಂದಡಿಯಿಡುತ್ತಿರಬೇಕೆಂಬುದೇ ಇಂದಿನ ಸಮಾಜದ ಹೆಬ್ಬಯಕೆಯಾಗಿದೆ.

'ಸರ್ವೇ ಜನಾಃ ಸುಖಿನೋ ಭವಂತು' ಎಂಬುದೇ ಪ್ರಜಾಸತ್ತಾತ್ಮಕ ಸಮಾಜದ ಮೂಲಮಂತ್ರ. ಎಲ್ಲ ವ್ಯಕ್ತಿಗಳಿಗೂ ಸ್ವಾತಂತ್ರ್ಯ, ಸಂತೃಪ್ತಿ, ಸುಖಶಾಂತಿಗಳು ಮೂಲಭೂತವಾದ ಹಕ್ಕೆಂಬುದನ್ನು ಸಮಾಜ ಅಂಗೀಕರಿಸಿದೆ. ಅದರ ಆಧಾರದಮೇಲೇ ಇಂದಿನ ಸಮಾಜದ ರೂಪುರೇಖೆಗಳೂ ಸಂಘಸಂಸ್ಥೆಗಳೂ ನಿರ್ಮಾಣವಾಗುತ್ತಿರುವುದು. ಇಂಥ ಪ್ರಜಾಸತ್ತಾತ್ಮಕ ಸಮಾಜದ ಉದಯಕ್ಕೆ ಪ್ರಚೋದಕವಾದುದು ವಿಚಾರಕ್ರಾಂತಿಯನ್ನು ಆರಂಭಿಸಿದ ವಿಜ್ಞಾನದೃಷ್ಟಿ. ಹೀಗೆ ವಿಜ್ಞಾನದೃಷ್ಟಿಯೂ, ಆ ಮೂಲಕ ವ್ಯಕ್ತಿ ಸ್ವಾತಂತ್ರ್ಯ ಮತ್ತು ಪ್ರಜಾಸತ್ತಾತ್ಮಕ ಸಮಾಜವೂ ಆಧುನಿಕ ಜೀವನದ

ಪ್ರಧಾನ ಗುಣಗಳೆನಿಸಿವೆ. ಈ ಮೂರು ದೃಷ್ಟಿಗಳಲ್ಲಿ ಸಮಾಜದ ಸನಾತನ ಸಂಘ ಸಂಸ್ಥೆಗಳನ್ನೂ ಸಂಪ್ರದಾಯಗಳನ್ನೂ ಒರೆಹಚ್ಚಿ ನೋಡಿ, ಅದಕ್ಕೊಪ್ಪ ದಿದ್ದರೆ ಅವನ್ನು ಕಿತ್ತೊಗೆಯುವ, ಮಾರ್ಪಡಿಸುವ ಅಥವಾ ಬದಲಾಯಿಸುವ ಸಾಹಸವೂ ಕಂಡುಬರುತ್ತದೆ. ವಿಜ್ಞಾನ ಸಂಸ್ಕೃತಿಯ ಮತ್ತು ಔದ್ಯೋಗಿಕ ಪ್ರಗತಿಯ ಉತ್ತುಂಗ ಶಿಖರಕ್ಕೇರಿರುವ ಪಾಶ್ಚಿಮಾತ್ಯರಲ್ಲಿ ಸಮಾಜದಎಲ್ಲ ಸಂಘ ಸಂಸ್ಥೆಗಳೂ ಸಂಪ್ರದಾಯಗಳೂ ಮಾನವನಿಂದ ಮಾನವನಿಗಾಗಿ ನಿರ್ಮಿತವಾದವೆಂದು, ವಿಜ್ಞಾನ ದೃಷ್ಟಿಗೆ ಅವು ಒಪ್ಪದಿದ್ದರೆ ಅವನ್ನು ಕಿತ್ತೊಗೆ ಯುವ ನಿರ್ದಾಕ್ಷಿಣ್ಯ ಯತ್ನ ಕಂಡುಬರುತ್ತಿದೆ. ಆದರೆ, ಹಾಗೆ ಮಾಡುವಾಗ ಒಂದು ಮಿತಿಯನ್ನು ಅನುಸರಿಸುವುದು ಸಹಜವೆನಿಸುತ್ತದೆ; ವಿಜ್ಞಾನ ದೃಷ್ಟಿಗೆ ಒಪ್ಪದುದೆಲ್ಲವನ್ನೂ ಅಳಿಸಿಬಿಡುವುದರಿಂದ ಎಲ್ಲವೂ ಕ್ಷೇಮವಾಗುವುದೆಂದು ಸಾಮೂಹಿಕವಾಗಿ ಹೇಳುವಂತಿಲ್ಲ: ಯಾವ ಬದಲಾವಣೆಯಿಂದ ಮಾನವ ಸಮಾಜದ ಮಧುರ ಬಾಂಧವ್ಯ ಹೆಚ್ಚಿ, ಕಲ್ಯಾಣ ಸಾಧನೆಯಾಗಬಲ್ಲದೋ ಅಂಥ ಬದಲಾವಣೆಗಳು ಸಾಧುವಾದವು. ಈ ದೃಷ್ಟಿಯೇ ನಮ್ಮ ಸಮಾಜ ನಿರ್ಮಾಣದಲ್ಲಿ ಹೆಚ್ಚಿನ ಸ್ಥಾನ ವಹಿಸಬೇಕಾಗಿದೆಯೆಂಬ ಅಂಶವನ್ನು ವಿಜ್ಞಾನ ಸಂಸ್ಕೃತಿಯ ಉತ್ತುಂಗ ಶಿಖರವನ್ನೇರಿರುವ ಪಾಶ್ಚಿಮಾತ್ಯ ದೇಶಗಳು ಎಷ್ಟು ಬೇಗನೆ ಅರಿತರೆ ಅಷ್ಟು ಬೇಗ ಮಾನವಕುಲದ ಕಲ್ಯಾಣ ಸಾಧನೆಯ ಅಡಿ ಗಲ್ಲು ಭದ್ರವಾದೀತು. ನಮ್ಮ ಪೂರ್ವಿಕರು ಉದ್ದೇಶಪೂರ್ವಕವಾಗಿ ಮಾನ ವನ ಕಲ್ಯಾಣಕ್ಕೆಂದೇ ಸಮಾಜ ಸಂಸ್ಥೆಗಳನ್ನು ನಿರ್ಮಿಸಿದ್ದಾರೆ; ಸಂಪ್ರ ದಾಯಗಳನ್ನು ಕಟ್ಟಿದ್ದಾರೆ; ನೈತಿಕ ಮೂಲಮಂತ್ರಗಳನ್ನು ಆಚರಣೆಗೆ ತಂದಿದ್ದಾರೆ. ಆದರೆ ಅವೆಲ್ಲ ಆರ್ಷೇಯವೆಂದಾಗಲಿ, ವಿಜ್ಞಾನ ದೃಷ್ಟಿಗೆ ಒಪ್ಪು ವುದಿಲ್ಲವೆಂದಾಗಲಿ ತಳ್ಳುವುದು ಉಚಿತವಲ್ಲ. ಅವುಗಳಲ್ಲಿ ಕೆಲವು ಈ ದಿನದ ನಮ್ಮ ಸಮಾಜದ ಪುರೋಭಿವೃದ್ಧಿಗೆ ನೆರವಾಗದಂತಿರಬಹುದು. ಅಂಥವು ಮಾತ್ರ ಹೋಗಲಿ; ಹಾಗೆಯೇ, ಕೇವಲ ಸನಾತನವಾದವೆಂಬ ಆದರ್ಶ ದಿಂದಲೇ ಅವು ಬೆಳೆದುಕೊಂಡು ಬಾಳಬೇಕೆಂದೂ ವಾದಿಸಬಾರದು. ಅಮೆರಿ ಕದ ಶಿಕ್ಷಣವಿಶಾರದರೆನಿಸಿದ ಕಿಲ್‌ಪ್ಯಾಟ್ರಿಕ್‌ರವರು ಹೇಳುವಂತೆ ಯಾವುದೂ ಕೇವಲ ಸನಾತನವೆಂಬ ಮಾತ್ರದಿಂದ ಪವಿತ್ರವಲ್ಲ; ಅದು ಸಮಾಜ ಕಲ್ಯಾಣಕ್ಕೆ ಸಾಧಕವಾಗಿದೆಯೇ ಎಂಬ ವಿಮರ್ಶೆಗೆ ಗುರಿಮಾಡದೆ ಬಿಡು

ದಂತಿಲ್ಲ. ಎಂದಮೇಲೆ, ಕೇವಲ ಆದರ್ಶವೆಂದು ಹಿಂದಿನಿಂದ ನಂಬಿದ್ದರೂ ಮಾನವನಿಗೆ ಎಷ್ಟುಮಟ್ಟಿಗೆ ಈಗ ಅದು ಸಹಾಯವಾಗಿದೆ ಎಂಬುದರಮೇಲೆ ಅದರ ಅಳಿವು ಉಳಿವು ನಿರ್ಧರವಾಗಬೇಕಾಗಿದೆ. ಈ ವಿಚಾರದೃಷ್ಟಿ ಜೀವನದ ಎಲ್ಲ ಕ್ಷೇತ್ರಗಳಲ್ಲೂ ತನ್ನ ಕೈವಾಡವನ್ನು ಕ್ರಮ ಕ್ರಮವಾಗಿ ಬೀರುತ್ತಿದೆ.

ಯೂರೋಪಿನಲ್ಲಿ ಸನಾತನ ಸಂಪ್ರದಾಯಗಳನ್ನೂ ನಂಬಿಕೆಗಳನ್ನೂ ಟೀಕಿಸುವುದು ಮಧ್ಯ ಯುಗಗಳಲ್ಲಿ ದೋಷವೆನಿಸಿತ್ತು. ಹಾಗೂ ಒಬ್ಬಿಬ್ಬರು ಧೈರ್ಯಮಾಡಿ ಅಂಥ ಯತ್ನ ನಡಸಿದಾಗ ಅವರಿಗೆ ಮತ ಪೀಠದ ಬಹಿಷ್ಕಾರ ಬೀಳುತ್ತಿತ್ತು. ಅರಿಸ್ಟಾಟಲ್‌ನಂಥ ಆಚಾರ್ಯಪುರುಷನ ವಾಣಿ ತಪ್ಪೋ ಸರಿಯೋ, ಮರುಮಾತಿಲ್ಲದೆ ನಂಬಬೇಕಾಗಿತ್ತು. ಅವನು ಉಸುರಿದ ಮಹಾವಾಕ್ಯಗಳಲ್ಲಿ 'ಸೂರ್ಯ ಕಳಂಕ ರಹಿತ' ಎಂಬುದು ಇನ್ನೊಂದು. ಅದನ್ನು ಯಾರೂ ಪ್ರಶ್ನಿಸುವಂತಿರಲಿಲ್ಲ. ಆದರೆ ವಿಜ್ಞಾನ ದೃಷ್ಟಿ ಅಂಕುರವಾಗಿ, ವಿಚಾರಭಾವನೆ ಬೆಳೆದಂತೆ, ಅದನ್ನು ಪರಿಶೀಲಿಸುವ ಧೈರ್ಯ ಬಂತು. ಗೆಲಿಲಿಯೋ ತನ್ನ ದೂರದರ್ಶಕಯಂತ್ರದ ಸಹಾಯದಿಂದ ಸೂರ್ಯನನ್ನು ಪರೀಕ್ಷಿಸಿ ಅದರಲ್ಲಿದ್ದ ಹಲವು ಕಲೆಗಳನ್ನು ತೋರಿಸಿ ಆಚಾರ್ಯಪುರುಷನ ಆದರ್ಶಜ್ಞಾನವನ್ನು ಸುಳ್ಳೆಂದು ತೋರಿಸಿದನು. ಜನರಿಗೆ ಧೈರ್ಯ ಬಂದು ಜೀವನದ ಎಲ್ಲ ಕ್ಷೇತ್ರಗಳಲ್ಲೂ ವಿಚಾರದೃಷ್ಟಿ ಪ್ರವಹಿಸಹತ್ತಿತು. ಎಂದಮೇಲೆ ಈ ದಿನದ ಮಾನವನ ದೃಷ್ಟಿಪಥವನ್ನು ನಡಸಿಕೊಂಡು ಬರುತ್ತಿರುವುದು ವಿಚಾರ ಜ್ಞಾನ. ಅದರಿಂದ ನಮ್ಮ ಸಮಾಜದ ಜೀವನ ತತ್ತ್ವವನ್ನು ರೂಪಿಸುವಾಗಲೂ ಆ ದೃಷ್ಟಿಯಲ್ಲೇ ಯತ್ನಿಸುವುದು ಉಚಿತವೆನಿಸುತ್ತದೆ. ಮೊದಲು ಯಾವ ನೀತಿನಿಯಮಗಳು, ಸಂಘಸಂಸ್ಥೆಗಳು, ಸಂಪ್ರದಾಯಗಳು ನಮ್ಮ ಸಮಾಜದ ಪುರೋಭಿವೃದ್ಧಿಗೆ ನೆರವಾಗುವುವೆಂಬುದು ಅಂಕಿಅಂಶಗಳಿಂದ ಸ್ಥಿರಪಡಬೇಕು. ಅಂತೇ ಅದನ್ನು ಒಪ್ಪಿ ಜನಜೀವನದಲ್ಲಿ ಪ್ರಚಾರಕ್ಕೆ ತರಬೇಕು. ಯಾವ ತತ್ತ್ವದೃಷ್ಟಿಯನ್ನೇ ಆಗಲಿ ಇದೇ ರೀತಿಯ ಒರೆಗಲ್ಲಿಗೆ ಹಚ್ಚಿ, ಅದು ಸಾಧುವೆನಿಸಿದರೆ ಒಪ್ಪಿ ಬರಮಾಡಿಕೊಳ್ಳಬೇಕು. ಹಿಂದಿನದೆಂದು ಕುರುಡುನಂಬಿಕೆಯಿಂದ ಮುಂದುವರಿಸದೆ ವಿಚಾರದೃಷ್ಟಿಯ ಒರೆಗಲ್ಲಿಗೆ ಒರೆ ಹಚ್ಚಲೇಬೇಕು. ಸಾಮಾಜಿಕ ಮತ್ತು ನೈತಿಕ ಕ್ಷೇತ್ರಗಳಲ್ಲೂ ಈ ವಿಚಾರಜ್ಞಾನದಿಂದಲೇ

ತತ್ತ್ವದೃಷ್ಟಿಯನ್ನು ನಿರ್ಧರಿಸಬೇಕು. ಅಂದು ಮಾತ್ರ ನಮ್ಮ ಸಮಾಜ ಪ್ರಗತಿದಾಯಕವೆನಿಸುವ ಜೀವನತತ್ತ್ವವನ್ನು ಪಡೆದಿದೆಯೆಂದು ಹೇಳಬಹುದು.

ನಮ್ಮ ಸಾಮಾಜಿಕ ಮತ್ತು ನೈತಿಕ ಕ್ಷೇತ್ರಗಳ ಹಲವು ಕಟ್ಟುನಿಟ್ಟುಗಳು ಹಿಂದಿನಿಂದ ನಡೆದುಕೊಂಡು ಬರುತ್ತಿವೆ. ಅವು ಎಷ್ಟರ ಮಟ್ಟಿಗೆ ಸಾಧುವಾದವು ಎಂದು ಯೋಚಿಸಲೂ ನಮ್ಮಲ್ಲನೇಕರು ಹಿಂದೆಗೆಯುತ್ತಾರೆ. ಆ ಆಚಾರಗಳು ಹೇಗೇ ಇರಲಿ, ಸಾಧುವೆಂದು ವಾದಿಸಲು ತಮ್ಮ ಬುದ್ಧಿಶಕ್ತಿಯನ್ನೆಲ್ಲ ಒಟ್ಟುಗೂಡಿಸಿ ನಿಲ್ಲುತ್ತಾರೆ. ಹಿಂದಿನಿಂದಲೂ ನಡೆದುಬಂದ ಆ ನಂಬಿಕೆಗಳು ಪ್ರಿಯವಾದರೂ ಮೌಢ್ಯದಿಂದ ನಂಬದೆ, ತೆರೆದ ಮನಸ್ಸಿನಿಂದ ವಿಚಾರದೃಷ್ಟಿಯಲ್ಲಿ ವಿವೇಚಿಸಿ ನೋಡಬೇಕು. ಹಾಗೆ ನಮ್ಮ ಮನಸ್ಸು ಯಾವ ಮೌಢ್ಯಕ್ಕಾಗಲಿ, ಅಧಿಕಾರವಾಣಿಗಾಗಲಿ, ದಾಕ್ಷಿಣ್ಯಕ್ಕಾಗಲಿ ತುತ್ತಾಗದೆ ಸರಿಯಾದ ಮಾರ್ಗದಲ್ಲಿ ಯೋಚಿಸಬೇಕು. ನಿರ್ದಾಕ್ಷಿಣ್ಯವಾಗಿ ವಿಷಯವನ್ನು ವಿಚಾರದೃಷ್ಟಿಯ ಒರೆಗಲ್ಲಿಗೆ ಹಚ್ಚಿ, ಸತ್ಯದರ್ಶನ ಮಾಡಿಕೊಳ್ಳಲು ಆಗ ಸಹಾಯವಾಗುತ್ತದೆ.

ಚಿಕ್ಕಂದಿನಿಂದಲೂ ಇತರರ ಆದರ್ಶವನ್ನೂ ಅಧಿಕಾರವಾಣಿಯನ್ನೂ ನಂಬಿ, ತನ್ನ ದೃಷ್ಟಿಧ್ಯೇಯಗಳನ್ನು ಬೆಳಸಿಕೊಂಡಿರುವ ವಯೋವೃದ್ಧನೊಬ್ಬನಿಗೆ ವಿಚಾರ ದೃಷ್ಟಿಯಲ್ಲಿ ವಿವೇಚಿಸುವುದು ಸಾಧ್ಯವೇ ಇಲ್ಲ. ಆದರೆ ನಮ್ಮ ಮನಸ್ಸು ಎಳೆಯ ಮಕ್ಕಳಿಗಿರುವಂತೆ ಯಾವ ದಾಕ್ಷಿಣ್ಯಕ್ಕೂ ಒಳಗಾಗದೆ, ಯಾವ ದೃಷ್ಟಿಯನ್ನಾದರೂ ಯಾವ ವಿಷಯವನ್ನಾದರೂ ವಿಚಾರ ದೃಷ್ಟಿಯಲ್ಲಿ ನೋಡಿ ಸತ್ಯದರ್ಶನ ಮಾಡಲು ತೆರೆದಿರಬೇಕು. ಅಂದು ಮಾತ್ರ ನಮ್ಮ ತೀರ್ಮಾನಗಳೂ ಜೀವನತತ್ತ್ವಗಳೂ ದೋಷರಹಿತವಾಗಿರಬಲ್ಲವು. ಈಗ ನಮ್ಮ ಜನತೆ ಅಂಥ ತೆರೆದ ಮನಸ್ಸಿನಿಂದ ತನ್ನ ಮುಂದಿನ ಸಮಸ್ಯೆಗಳನ್ನು ಬಿಡಿಸಿಕೊಳ್ಳಬೇಕಾಗಿದೆ. ವಿಚಾರ ದೃಷ್ಟಿ ನಮ್ಮ ನೈತಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಸುಳಿದಂತೆ ನಮ್ಮ ದೃಷ್ಟಿಕೋನವೂ ಜೀವನತತ್ತ್ವವೂ ಹೊಸ ರೂಪನ್ನು ತಾಳುತ್ತದೆ. ಶತಮಾನಗಳಿಂದಲೂ ಬೆಳೆದುಕೊಂಡಿದ್ದ ಮೌಢ್ಯಕ್ಕೆ ತುತ್ತಾಗಿದ್ದ ಯೂರೋಪಿನ ಜನತೆಯೂ ೧೫-೧೬ನೆಯ ಶತಮಾನಗಳಲ್ಲಿ ನಡೆದ ನವೋದಯಾನಂತರ ಅಂಥ ತೆರೆದ

ಮನಸ್ಸಿನ ವಿಚಾರಪರರಾಗಿ ಹೊಸ ಜೀವನತತ್ತ್ವವನ್ನೂ ಆಚಾರವಿಚಾರ ಗಳನ್ನೂ ರೂಢಿಸಿಕೊಂಡಿತು. ನಮ್ಮ ಸಮಸ್ಯೆಗಳನ್ನು ನಾವೂ ಆ ವಿಚಾರ ದೃಷ್ಟಿಯಲ್ಲೇ ತೀರ್ಮಾನಿಸಿಕೊಳ್ಳಬೇಕಾಗಿದೆ.

ರೂಢಮೂಲವಾಗಿರುವ ಹಲವು ನಂಬಿಕೆಗಳನ್ನೂ ಆಚಾರ ವ್ಯವಹಾರ ಗಳನ್ನೂ 'ಏಕೆ?' ಎಂದು ಪ್ರಶ್ನಿಸುವಾಗ, ಅದನ್ನು ವಿಚಾರ ದೃಷ್ಟಿಯಲ್ಲಿ ಇತ್ಯರ್ಥಪಡಿಸಲು ಯತ್ನಿಸದೆ, 'ಅದು ಸಂಪ್ರದಾಯ' ಎಂದು ಉತ್ತರ ಕೊಡುವುದು ನಮ್ಮ ವಾಡಿಕೆ. ಅದು ನಮ್ಮ ವಿಚಾರವಿಮುಖತೆಯನ್ನು ಸೂಚಿಸುತ್ತದೆ. ನಮ್ಮ ಮಕ್ಕಳೂ ಇದೇ ದೃಷ್ಟಿಯನ್ನು ಬೆಳಸಿಕೊಳ್ಳುವುದರಲ್ಲಿ ಅನುಮಾನವಿಲ್ಲ. ಮುಂದೆ ಅವರಾದರೂ 'ಕೇವಲ ಸಂಪ್ರದಾಯ'ವೆಂದು ನಂಬುವುದರ ಬದಲು ತೆರೆದ ಮನಸ್ಸಿನಿಂದ ವಿಚಾರಪರರಾಗಿ ನಿರ್ದಾಕ್ಷಿಣ್ಯ ವಾಗಿ ಯೋಚಿಸುವಂತೆ ಮಾಡುವುದು ಇಂದಿನ ನಮ್ಮ ಶಿಕ್ಷಣರಂಗದ ಪ್ರಧಾನ ಕಾರ್ಯ. ಆ ಕಾರ್ಯಸಾಧನೆಗೆ ಶಿಕ್ಷಕರೂ ಅದೇ ರೀತಿಯ ತೆರೆದ ಮನಸ್ಸನ್ನೂ ವಿಚಾರದೃಷ್ಟಿಯ ಸತ್ಯಪ್ರೇಮವನ್ನೂ ತಳೆದಿರಬೇಕು. ನೈತಿಕ, ಧಾರ್ಮಿಕ ಮತ್ತು ಸಾಮಾಜಿಕ ಕ್ಷೇತ್ರಗಳ ಸಮಸ್ಯೆಗಳನ್ನೆಲ್ಲ ಶಿಕ್ಷಕರು ಆ ದೃಷ್ಟಿಯಲ್ಲೇ ವಿವೇಚಿಸುವಂತಾಗಬೇಕು. ತೆರೆದ ಮನಸ್ಸಿಲ್ಲದ, ಸಂಪ್ರದಾ ಯಕ್ಕೆ ಬಲಿಬಿದ್ದ ಶಿಕ್ಷಕರು ತಮ್ಮ ಶಿಷ್ಯಕೋಟಿಯ ಮಾನಸರಂಗದಲ್ಲಿ ಅಂಥ ನಿರ್ದಾಕ್ಷಿಣ್ಯ ದೃಷ್ಟಿಯನ್ನು ಹೇಗೆ ಬಿತ್ತಬಲ್ಲರು?

ಮೇಲೆ ವಿವರಿಸಿದಂತೆ ಆಧುನಿಕ ಪ್ರಪಂಚದಲ್ಲಿ ಉದ್ಯೋಗಗಳು ಬೆಳೆದು ಪ್ರಜಾಸತ್ತಾತ್ಮಕ ಸಮಾಜದ ನಿರ್ಮಾಣವಾಗುತ್ತಿದೆ. ಜೊತೆಗೆ ವಿಚಾರಕ್ರಾಂತಿಯು ಆರಂಭವಾಗಿ ಮಾನವನ ತತ್ತ್ವದೃಷ್ಟಿಯನ್ನೂ ಬಹು ವಿಧವಾಗಿ ಬದಲಾಯಿಸಿಬಿಟ್ಟಿದೆ. ಈ ನೂತನ ವಿಮರ್ಶನಜ್ಞಾನದಿಂದ ಜೀವ ನದ ಎಲ್ಲ ಕ್ಷೇತ್ರಗಳಲ್ಲೂ ವಿಚಾರಪರವೆನಿಸುವ ಹೊಸ ತತ್ತ್ವದೃಷ್ಟಿ ರೂಪು ಗೊಳ್ಳುತ್ತಿದೆ. ಸಮಾಜದ ಎಲ್ಲ ಕ್ಷೇತ್ರಗಳಲ್ಲೂ ಬದಲಾವಣೆಗಳು ರಭಸದಲ್ಲಿ ಸಾಗುತ್ತಿವೆ. ಮುಂದಿನ ಸಮಾಜದ ಬೆಳವಣಿಗೆ ಯಾವ ರೂಪನ್ನು ತಾಳು ವುದೋ, ಹೇಳುವುದು ಕಷ್ಟ. ಇಂಥ ಪರಿವರ್ತನ ಸಮಯದಲ್ಲಿ ಬಾಳಬೇಕಾ ಗಿರುವ ನಮ್ಮ ಮಕ್ಕಳನ್ನು ಹಿಂದಿನ ಸಾಂಪ್ರದಾಯಿಕ ಜೀವನಕ್ಕೆ ಸಿದ್ಧಪಡಿ ಸುವ ಕಾರ್ಯದಲ್ಲೇ ನಮ್ಮ ಶಿಕ್ಷಣ ಸಂಸ್ಥೆಗಳು ತೊಡಗುವುದಾದರೆ, ಅದರಿಂದ

ಪ್ರಯೋಜನ ಹಾಗಿರಲಿ, ಅನರ್ಥವಾಗಲಾರದೆ? ವಿಚಾರವಿಹೀನರಾಗಿ ಸಂಪ್ರದಾಯ ಶರಣರಾದರೆ ನಮ್ಮ ಮಕ್ಕಳು ಮಹಾರಭಸದಲ್ಲಿ ನಾಗರಿಕತೆಯ ಶಿಖರವನ್ನೇರುತ್ತಿರುವ ಆಧುನಿಕ ಜನಾಂಗದಲ್ಲಿ ಯಶಸ್ವಿ ವ್ಯಕ್ತಿಗಳಾಗಿ ಬಾಳುವುದು ಹೇಗೆ? ಅದರಿಂದ ಇಂದಿನ ಸಮಾಜ ಯಾವ ತತ್ವದೃಷ್ಟಿಯನ್ನು ನಂಬಿ ಮುಂದುವರಿಯುತ್ತಿದೆಯೋ ಆ ತತ್ವದೃಷ್ಟಿಯಲ್ಲೇ ನಮ್ಮ ಮಕ್ಕಳೂ ಶಿಕ್ಷಣ ಪಡೆಯಬೇಕು. ನಮ್ಮ ಸಮಾಜದ ನೈತಿಕ ಮತ್ತು ಧಾರ್ಮಿಕ ಸಮಸ್ಯೆಗಳು ಆ ದೃಷ್ಟಿಯಲ್ಲೇ ಸ್ಪಷ್ಟಪಡಬೇಕು. ಆ ಮೂಲಕ ಮಾನವನ ಜ್ಞಾನದ ಬೆಳವಣಿಗೆಗೂ, ಸಮಾಜದ ಕಲ್ಯಾಣ ಸಾಧನೆಗೂ ನಮ್ಮ ಮಕ್ಕಳು ನೆರವಾಗುವಂತೆ ಮಾಡಬೇಕು. ನಾಡು ಉದ್ಯೋಗಕ್ಷೇತ್ರದಲ್ಲಿ ಮುಂದುವರಿಯಲು ಅವರೂ ತಮ್ಮ ಕಾಣಿಕೆಯನ್ನು ಸಲ್ಲಿಸಲು ಶಕ್ತರಾಗಬೇಕು. ಪ್ರಜಾಸತ್ತಾತ್ಮಕ ಸಮಾಜದ ಸತ್ಪ್ರಜೆಗಳಾಗಿ ಬಾಳುವ ಅನುಕೂಲ್ಯವನ್ನೂ ಅವರಿಗೆ ಕಲ್ಪಿಸಿಕೊಡಬೇಕು. ನಮ್ಮ ಮಕ್ಕಳು ಮುಂದುವರಿಯುತ್ತಿರುವ ಸಮಾಜದೊಡನೆ ತಾವೂ ಸಾಗಿಬರುವಂತಾಗಬೇಕು.

# ೨. ಭಾರತೀಯ ಶಿಕ್ಷಣರಂಗಕ್ಕೊಂದು ನೂತನ ತತ್ತ್ವದೃಷ್ಟಿ

ವಿಚಾರದೃಷ್ಟಿ, ಔದ್ಯೋಗಿಕ ಪ್ರಗತಿ ಮತ್ತು ಪ್ರಜಾಸತ್ತಾತ್ಮಕ ಜೀವನ ಇವು ಮೂರು ಆಧುನಿಕ ಮಾನವ ಸಮಾಜದ ಪ್ರಧಾನ ಗುಣಗಳು. ಇಂಥ ಪ್ರಜಾಜೀವನಕ್ಕೆ ಮಕ್ಕಳನ್ನು ಸಜ್ಜುಗೊಳಿಸಬೇಕಾದರೆ ಈ ಮೂರು ದೃಷ್ಟಿಗಳೂ ನಮ್ಮ ಶಿಕ್ಷಣತತ್ತ್ವವನ್ನು ಪೋಷಿಸಬೇಕಾಗಿದೆ. ಆಗ ಮಾತ್ರ ನಮ್ಮ ಶಿಕ್ಷಣಕ್ಕೂ ಜನಜೀವನಕ್ಕೂ ಸಂಬಂಧ ಕಲ್ಪನೆಯಾಗುತ್ತದೆ; ವ್ಯಕ್ತಿ ಸಮಾಜದ ಹಿತವನ್ನು ಸಾಧಿಸುತ್ತಾ ಉದಾತ್ತ ಜೀವನವನ್ನು ನಡಸಲು ಸಾಧ್ಯವಾಗುತ್ತದೆ. ಅಂಥ ಜೀವನದಿಂದಲೇ ವ್ಯಕ್ತಿಯ ಮತ್ತು ಸಮಾಜದ ಸಂಪದಭಿವೃದ್ಧಿ ಸಾಧನೆಯಾಗಬಲ್ಲದು. ಎಂದರೆ, ಶಿಕ್ಷಣರಂಗದಲ್ಲಿ ಉಚಿತವೆನಿಸುವ ತತ್ತ್ವದೃಷ್ಟಿ ಜೀವನಾಡಿಯಂತೆ ಕೆಲಸ ಮಾಡಬಲ್ಲದು.

ಇಂದಿನ ಪ್ರಜಾಸತ್ತಾತ್ಮಕ ಮಾನವ ಸಮಾಜಕ್ಕೆ ಶಿಕ್ಷಣ ಪ್ರಪಂಚದಿಂದ ಆಗಬೇಕಾದ ಸಹಾಯವಾವುದು? ಆ ಕಾಣಿಕೆಯನ್ನು ಶಿಕ್ಷಣರಂಗ ಎಷ್ಟರಮಟ್ಟಿಗೆ ಸಲ್ಲಿಸುತ್ತಿದೆ? ಅದು ತನ್ನ ಕರ್ತವ್ಯದಲ್ಲಿ ವಿಮುಖವಾಗಿದ್ದರೆ ಅದಕ್ಕೆ ಕಾರಣವೇನು? ಜನಜೀವನದ ತತ್ತ್ವದೃಷ್ಟಿ ಶಿಕ್ಷಣರಂಗದಲ್ಲಿ ಮೂಡಲಾರದೆ ಅಂಥ ಭಿನ್ನತೆ ತಲೆದೋರಿದೆಯೆ? ಹಾಗೆ ತತ್ತ್ವದೃಷ್ಟಿಯಿಲ್ಲದ ಕೊರತೆಯಿಂದಲೇ ಶಿಕ್ಷಣ ಪ್ರಪಂಚ ಕಾರ್ಯವಿಮುಖವಾಗಿದ್ದರೆ ಅದನ್ನು ಸರಿಪಡಿಸಲು ತತ್ತ್ವಚಿಂತಕರೂ ಸಮಾಜವೂ ಯಾವ ಕ್ರಮ ಕೈಗೊಳ್ಳಬೇಕು? ಎಂಬ ಸಮಸ್ಯೆಗಳು ಎಲ್ಲ ದೇಶದ ಶಿಕ್ಷಣವೇತ್ತರ ಮುಂದೆಯೂ ಎದ್ದುಕೊಂಡಿವೆ. ಅವನ್ನು ಬಿಡಿಸಿ ಸುವ್ಯವಸ್ಥಿತವಾಗಿ ಶಿಕ್ಷಣ ಮಹಾರಥವನ್ನು ಅನುಗೊಳಿಸುವುದರಿಂದಲೇ ನಾಗರಿಕತೆಯ ಭದ್ರತೆಗೂ ಪ್ರಗತಿಗೂ ಅನುಕೂಲವಾಗುವುದೆಂದು ಸಮಾಜ ಅರಿತುಕೊಳ್ಳಬೇಕು.

ಸಮಾಜ ಸರಳವಾಗಿದ್ದಾಗ ಮನೆಯಲ್ಲಿ ಮಕ್ಕಳು ದೊಡ್ಡವರ ನಡೆನುಡಿಗಳನ್ನು ನೋಡಿ, ಅನುಸರಿಸಿ ಕಲಿಯುತ್ತಿದ್ದುದೇ ಸಾಕಾಗಿತ್ತು;

ಅದು ಸ್ವಲ್ಪ ಮುಂದುವರಿದು ವಿಸ್ತರಿಸಿದಮೇಲೂ ಶಿಕ್ಷಣದ ಪ್ರಗತಿ ಗಮನ ಬಹು ನಿಧಾನವಾಗಿತ್ತು; ಬದಲಾವಣೆಗಳೂ ಅಷ್ಟಾಗಿ ಆಗುತ್ತಿರಲಿಲ್ಲ. ಅಂಥ ಸ್ತಬ್ಧ ಸಮಾಜದಲ್ಲಿ ಬಾಳಬೇಕಾದ ಮಕ್ಕಳಿಗೆ ಎಂದಿನಿಂದಲೋ ರೂಢಿಯಲ್ಲಿದ್ದ ಹಲವು ಸಂಪ್ರದಾಯಗಳನ್ನೂ ಆಚಾರ ವ್ಯವಹಾರಗಳನ್ನೂ ಕಲಿಸುವುದರಲ್ಲೇ ಶಾಲೆಗಳು ಕೃತಕೃತ್ಯವಾಗುತ್ತಿದ್ದುವು. ಸಾಂಪ್ರದಾಯಿಕ ಶಿಕ್ಷಣ ಅಂದಿನ ಮಂದ ಗತಿಯ ಸಮಾಜ ಜೀವನಕ್ಕೆ ಒಪ್ಪಿದ್ದರೂ ಒಪ್ಪಿರಬಹುದು. ಆದರೆ, ಈ ದಿನ ಸಮಾಜ ಸನ್ನಿವೇಶಗಳು ಹಿಂದೆಂದೂ ಇಲ್ಲದಷ್ಟು ವೇಗದಲ್ಲಿ ಬದಲಾಗುತ್ತಿವೆ. ನಾಗರಿಕತೆ ನಾಗಾಲೋಟದಲ್ಲಿ ಸಾಗುತ್ತಿದೆ. ಮುಂದೆ ಯಾವ ಸ್ವರೂಪವನ್ನು ತಾಳುತ್ತದೋ ಬಲ್ಲವರು ಯಾರು! ಅಂಥ ಅನಿರ್ದಿಷ್ಟ ಭವಿಷ್ಯತೆ ನಮ್ಮ ಮುಂದಿರುವಾಗ, ರಭಸದಲ್ಲಿ ಸಮಾಜ ಜೀವನ ಪ್ರಗತಿಗೇರುತ್ತಿರುವಾಗ, ನಮ್ಮ ಮಕ್ಕಳಿಗೆ ಹಿಂದೆ ದೊರಕುತ್ತಿದ್ದ ಸಾಂಪ್ರದಾಯಿಕ ಶಿಕ್ಷಣದಿಂದ ಯಾವ ಪ್ರಯೋಜನವಾದೀತು? ಜೀವನದ ಪ್ರಗತಿಯೇ ಜನತೆಯ ನಿತ್ಯ ಮಂತ್ರವಾಗಿರುವ ಈ ಕಾಲದಲ್ಲಿ ಮಕ್ಕಳಿಗೆ ಮಂದಸ್ವಭಾವದ ಅಂಥ ಶಿಕ್ಷಣ ಕೊಡುವುದರಿಂದ ಅನರ್ಥವೇ ಒದಗಬಹುದು. ಒಂದು ಕಡೆ, ಪ್ರಗತಿಗಾಮಿಯಾಗಿ ಸಾಗುತ್ತಿರುವ ಸಮಾಜ ಜೀವನದಲ್ಲಿ ಅವರು ಹೊಂದಿಕೊಂಡು ಬಾಳಲು ದುಸ್ಸಹವಾಗುತ್ತದೆ; ಇನ್ನೊಂದು ಕಡೆ, ಅಂಥ ವ್ಯಕ್ತಿಗಳಿಂದ ಸಮಾಜದ ಪ್ರಗತಿಗೆ ಯಾವ ವಿಧವಾದ ಕಾಣಿಕೆಯಾಗಲಿ, ಪ್ರಚೋದನೆಯಾಗಲಿ ದೊರೆಯುವಂತಿಲ್ಲ. ಅಂಥ ಶಿಕ್ಷಣ ಒಟ್ಟಿನಲ್ಲಿ ಮಾನವವರ್ಗದ ಪುರೋಭಿವೃದ್ಧಿಗೆ ನೆರವಾಗುವುದು ದುರ್ಲಭ. ಎಂದಮೇಲೆ, ನಮ್ಮ ಇಂದಿನ ಶಿಕ್ಷಣಯಂತ್ರದ ಪುನರ್ವ್ಯವಸ್ಥೆ ಸಮಾಜದ ಪ್ರಗತಿ ತತ್ತ್ವದ ಬೆಳಕಿನಲ್ಲೇ ನಡೆಯಬೇಕು.

ಆಧುನಿಕ ಮಾನವ ಸಮಾಜದ ಏಳಿಗೆಗಾಗಿ ನಮ್ಮ ಶಿಕ್ಷಣ ಸಂಸ್ಥೆಗಳು ಮೂರು ಮುಖ್ಯವಾದ ದಿಕ್ಪಥಗಳಲ್ಲಿ ತಮ್ಮ ದೃಷ್ಟಿಕೋನವನ್ನು ಬದಲಾಯಿಸಿಕೊಳ್ಳಬೇಕು. ಮೊದಲನೆಯದಾಗಿ, ಮಕ್ಕಳಲ್ಲಿ ವಿಚಾರದೃಷ್ಟಿಯನ್ನು ಬೆಳಸುವಂತೆ ಶಿಕ್ಷಣ ಮಾರ್ಪಡಬೇಕು. ಸಾಂಪ್ರದಾಯಿಕ ಶಿಕ್ಷಣದಿಂದ ವಿಚಾರಜ್ಞಾನಕ್ಕೆ ಅವಕಾಶವೇ ಇಲ್ಲ; ಎಂದೊ, ಯಾರೊ ಹಾಕಿದ ಮೇಲ್ಪಂಕ್ತಿಯನ್ನು ಮೌಢ್ಯದಿಂದ ಅನುಸರಿಸಬೇಕು! ಅಂಥ ಸಾಂಪ್ರದಾಯಿಕ ಶಿಕ್ಷಣ

ವನ್ನು ಹೇಗೆ ಬದಲಾಯಿಸುವುದು? ಹಿಂದಿನ ಶಿಕ್ಷಣರಂಗದ ಧ್ಯೇಯಗಳು, ಪಠ್ಯವಸ್ತು, ಬೋಧನಕ್ರಮ—ಇವೆಲ್ಲ ಬದಲಾಗಬೇಕು. ಮಕ್ಕಳ ಮುಂದಿನ ಜೀವನ ಆರ್ಥಿಕ, ನೈತಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಯಶಸ್ವಿಯಾಗುವಂತೆ, ಮುಂದುವರಿಯುತ್ತಿರುವ ವಿಚಾರ ಕ್ರಾಂತಿಯ ಯುಗದಲ್ಲಿ ತಾವೂ ಹೆಜ್ಜೆಯಿಡಲು ಶಕ್ತರಾಗುವಂತೆ ಶಿಕ್ಷಣವನ್ನು ಕೊಡುವುದಾದರೂ ಹೇಗೆ? ಯಾವ ದೇಶದಲ್ಲಾಗಲಿ ಶಿಕ್ಷಣದ ದೃಷ್ಟಿ ಧ್ಯೇಯಗಳನ್ನು ರೂಪಿಸುವವರು ಆ ದೇಶದ ಹಿರಿಯರು. ಅವರು ಮೂಢನಂಬಿಕೆಗಳನ್ನೂ ಸಂಪ್ರದಾಯಗಳನ್ನೂ ಕುರುಡರಂತೆ ಅನುಸರಿಸದೆ ವಿಚಾರಪರರಾಗಿರಬೇಕು. ಅವರೇನಾದರೂ ಒಂದು ವೇಳೆ ಮೂಢ ನಂಬಿಗೆಗೂ ಅಸಂಪ್ರದಾಯಕ್ಕೂ ತುತ್ತಾಗಿದ್ದರೂ ಮುಂದಿನ ಶಿಕ್ಷಣರಂಗದ ದೃಷ್ಟಿ ಧ್ಯೇಯಗಳನ್ನು ರೂಪಿಸುವಾಗ ಅವರ ಪ್ರಗತಿ ವಿರಹಿತ ಭಾವನೆಗಳು ಸುಳಿಯಬಾರದು. ತಾವು ಅಂಥ ನಂಬಿಕೆಗೆ ತುತ್ತಾಗಿದ್ದರೂ ತಮ್ಮ ಮಕ್ಕಳಿಗೂ ಅದೇ ಮಾರ್ಗದ ಶಿಕ್ಷಣವೀಯಬೇಕೆನ್ನುವುದು ಧರ್ಮವಲ್ಲ: ಏಕೆಂದರೆ, ಅವರು ಬಾಳಬೇಕಾಗಿರುವುದು ಮಂದ ಪ್ರಕೃತಿಯ ಅಂಧಶ್ರದ್ಧೆಯ ಸಾಂಪ್ರದಾಯಿಕ ಸಮಾಜದಲ್ಲಲ್ಲ—ಪ್ರಗತಿ ಕಾಳೆಯನ್ನೂದಿಕೊಂಡು ನಿರಂತರವೂ ಮುನ್ನಡೆಯುತ್ತಿರುವ ಸಮಾಜದಲ್ಲಿ! ನಿರ್ಧಾರಕ್ಕೆ ನಿಲುಕದಷ್ಟು ವೇಗವಾಗಿ ಸಾಗುತ್ತಿರುವ ನಾಗರಿಕತೆಯೊಡನೆ ಸ್ಪರ್ಧಿಸಿ ಹೆಜ್ಜೆಯಿಟ್ಟು ಸಾಗಲು ಅವರನ್ನು ಅನುಗೊಳಿಸುವ ಶಿಕ್ಷಣದ ದೃಷ್ಟಿ ಧ್ಯೇಯಗಳು ಇನ್ನೆಷ್ಟು ಪ್ರಗತಿದಾಯಕವಾಗಿರಬೇಕು! ಕಿಲ್‌ಪ್ಯಾಟ್ರಿಕ್‌ರವರು ಸೂಚಿಸುವಂತೆ 'ನಮ್ಮ ಮಕ್ಕಳು ತಾವು ಮುಂದೆ ಬಾಳಬೇಕಾಗಿರುವ ಸಮಾಜದಲ್ಲಿ ಎದುರು ಬರುವ ಸಮಸ್ಯೆಗಳನ್ನು ಸ್ವತಂತ್ರವಾಗಿ ಆಲೋಚಿಸಿ ಬಿಡಿಸಿಕೊಂಡು, ಹಿಂದಿನವರ ಆಚಾರವ್ಯವಹಾರಗಳನ್ನೂ, ಸಂಘಸಂಸ್ಥೆಗಳನ್ನೂ, ಸಂಪ್ರದಾಯಗಳನ್ನೂ ತಮ್ಮ ವಿಚಾರ ದೃಷ್ಟಿಯಲ್ಲಿ ವಿಮರ್ಶಿಸಿ, ಅಗತ್ಯವೆನಿಸಿದರೆ ಅವುಗಳನ್ನು ಮಾರ್ಪಡಿಸುವ ಅಥವಾ ಕಿತ್ತೊಗೆಯುವ ಶಕ್ತಿ ಸಾಮರ್ಥ್ಯಗಳನ್ನು ಒದಗಿಸಿಕೊಡುವುದು ನಮ್ಮ ಕರ್ತವ್ಯ' ಎಂದು ಹೇಳಿ ಶಿಕ್ಷಣರಂಗದ ಒಂದು ಮುಖ್ಯವಾದ ಗುರಿಯನ್ನು ತೋರಿಸಿರುವರು. ಆ ಕಾರ್ಯಕ್ಕೆ ಆವಶ್ಯಕವಾದ ಪ್ರಶ್ನಿಸುವ ಮನೋಭಾವವನ್ನೂ ನಿಷ್ಪಕ್ಷಪಾತವಾಗಿ ಆಲೋಚಿಸುವ

ಸ್ವಭಾವವನ್ನೂ ಅವರಲ್ಲಿ ಬೆಳಸಬೇಕು. ಉಪಾಧ್ಯಾಯರು ತಾವೇ ಬಿಡಿಸಿ ಇತ್ಯರ್ಥಪಡಿಸಿದ ವಿಷಯಜ್ಞಾನವನ್ನು ತಿಳಿಸಿಬಿಡುವುದರಿಂದ ಆ ಕಾರ್ಯ ಸಾಧನೆಯಾಗಲಾರದು; ಸಮಾಜದಲ್ಲಿ ಕಾಣಬಹುದಾದ ಸಮಸ್ಯೆಗಳನ್ನು ಬಾಲಕರ ಮುಂದೆ ತರಬೇಕು; ಅವುಗಳನ್ನು ವಿದ್ವೇಷವಿಲ್ಲದೆ ವಿಮರ್ಶಿಸುವ ಆಲೋಚನಾಶಕ್ತಿಯನ್ನು ಅವರಲ್ಲಿ ಬಿತ್ತಿ ಬೆಳಸಬೇಕು. ಹಾಗೆ ವಿಮರ್ಶೆ ಗೊಳಗಾದ ವಿಷಯಗಳು ತಮಗೆ ಒಪ್ಪದಿದ್ದಲ್ಲಿ ಅವನ್ನು ತಿರಸ್ಕರಿಸುವ ಸ್ವಾತಂತ್ರ್ಯವನ್ನೂ ಸಾಹಸವನ್ನೂ ಅವರಲ್ಲಿ ಮೊಳೆಯಿಸಬೇಕು. ಆರ್ಷೇಯ ವಾಗಿ ಬಂದ ನಂಬಿಕೆಗಳ ಆಧಾರದಮೇಲೇ ತೀರ್ಪನ್ನು ಕೊಡುವುದನ್ನು ತಪ್ಪಿಸಿ, ಸ್ವತಂತ್ರವಾಗಿ ಯೋಚಿಸುವುದರಲ್ಲಿ ಅಭಿಮಾನವನ್ನುಂಟುಮಾಡ ಬೇಕು. ಸಾಮಾಜಿಕ ಮತ್ತು ನೈತಿಕ ಸಮಸ್ಯೆಗಳನ್ನೂ ಅಷ್ಟೇ ಧೈರ್ಯ ದಿಂದ ವಿಮರ್ಶಿಸಲು ಅವರಿಗೆ ಉತ್ತೇಜನ ತುಂಬಬೇಕು. ಆ ಮೂಲಕವೇ ನಾವು ನಮ್ಮ ಮಕ್ಕಳನ್ನು ವಿಚಾರ ಕ್ರಾಂತಿಯ ಯುಗದ ಜನಜೀವನದಲ್ಲಿ ತಲೆದೋರುವ ವಿವಿಧ ಸಮಸ್ಯೆಗಳನ್ನು ಬಿಡಿಸಿಕೊಂಡು ಬಾಳಲು ಅನು ಕೂಲಿಸುವಂತೆ ಶಿಕ್ಷಣವನ್ನು ಕೊಟ್ಟಂತಾಗುವುದು.

ಲೌಕಿಕ ಜೀವನಕ್ಕೆ ಸಂಬಂಧಿಸಿದ ಹಲವು ಸಮಸ್ಯೆಗಳನ್ನು ವಿಚಾರ ದೃಷ್ಟಿಯಲ್ಲಿ ವಿಮರ್ಶಿಸಿದರೂ, ಧಾರ್ಮಿಕರಂಗದ ಸಮಸ್ಯೆಗಳನ್ನು ಹಾಗೆ ಮಾಡುವಂತಿಲ್ಲವೆಂದು ಹಲವರಾದರೂ ಹೇಳಬಹುದು; ಧಾರ್ಮಿಕ ಕ್ಷೇತ್ರ ದಲ್ಲಿ ಆ ಯತ್ನವನ್ನುಮಾಡಲೂ ಬಾರದೆಂದೂ ವಾದಿಸಬಹುದು. ಹಾಗೆ ನಮ್ಮ ಲೌಕಿಕ ಸಮಸ್ಯೆಗಳನ್ನು ವಿಚಾರ ದೃಷ್ಟಿಯಿಂದಲೂ ಧಾರ್ಮಿಕ ಸಮಸ್ಯೆ ಗಳನ್ನು ಅಂಧಶ್ರದ್ಧೆಯಿಂದಲೂ ನೋಡುವಂತಾದರೆ ನಮ್ಮ ಮಕ್ಕಳು ಸ್ವತಂತ್ರವಾಗಿ ಯೋಚಿಸುವ ಕಾರ್ಯ ಕೆಲವು ಕ್ಷೇತ್ರಗಳಿಗೆ ಮಾತ್ರ ಅನ್ವಯಿಸುತ್ತದೆಂದು ನಂಬಿ, ಅದರ ಉಪಯೋಗವನ್ನು ಮಿತಿಗೊಳಿಸಿಬಿಡ ಬಹುದು; ಅಥವಾ, ಮತ್ತೆ ಅಂಧಶ್ರದ್ಧೆಯ ನಂಬಿಕೆಗಳನ್ನೇ ಆಶ್ರಯಿಸಲು ಯತ್ನಿಸಬಹುದು. ಧಾರ್ಮಿಕ ಜೀವನ ಲೌಕಿಕ ಜೀವನಕ್ಕೆ ಸಂಬಂಧಿಸಿದ್ದೆಂಬ ಕೃತಕತೆಯೂ ತಲೆದೋರಬಹುದು. ಆದರಿಂದ ಅವರು ಜೀವನದ ಎಲ್ಲ ಕ್ಷೇತ್ರಗಳಲ್ಲೂ ವಿಚಾರ ದೃಷ್ಟಿಯನ್ನು ಪ್ರಯೋಗಿಸಿ ಆ ಮೂಲಕವೇ ತೀರ್ಮಾನಕ್ಕೆ ಬರುವಂತೆ ಪ್ರೋತ್ಸಾಹಿಸುವುದು ಉತ್ತಮ.

ಎರಡನೆಯದಾಗಿ, ನಮ್ಮ ಮಕ್ಕಳು ಮುಂದೆ ನಾಡಿನ ಉದ್ಯೋಗ ಕ್ಷೇತ್ರದಲ್ಲಿ ಫಲಪ್ರದವಾಗಿ ನೆರವಾಗಬೇಕು. ನಾಡಿನ ಔದ್ಯೋಗಿಕ ಪ್ರಗತಿಯಾಗಬೇಕಾದರೆ ಅವರಿಗೆ ಉದ್ಯೋಗ ಶಿಕ್ಷಣ ಕೊಡುವುದು ಅನಿವಾರ್ಯ; ಅದಕ್ಕೆ ವಿಜ್ಞಾನಶಾಸ್ತ್ರದ ಪರಿಚಯು ಆವಶ್ಯಕ. ನಾಡಿನ ಎಲ್ಲ ಉದ್ಯೋಗಗಳಿಗೂ ಬೆನ್ನುಮೂಳೆಯಂತಿರುವುದು ವಿಜ್ಞಾನ. ಯೂರೋಪಿನಲ್ಲಿ ನವೋದಯದನಂತರ ಔದ್ಯೋಗಿಕ ಪ್ರಗತಿ ಆರಂಭವಾಯಿತು. ಆ ಕಾರ್ಯಕ್ಕೆ ನೆರವಾದ ವಿಜ್ಞಾನಶಾಸ್ತ್ರಕ್ಕೆ ಸಮಾಜದಲ್ಲಿ ಮಾನ್ಯ ಸ್ಥಾನ ದೊರಕಿತು. ಕಡೆಗೆ ಶಾಲೆಗಳಲ್ಲೂ ಆ ಶಾಸ್ತ್ರವನ್ನು ಬೋಧಿಸಲು ಏರ್ಪಾಡು ನಡೆಯಿತು. ಅನಂತರ ಶಾಲೆಯ ಪಠ್ಯವಿಷಯಗಳ ಪಟ್ಟಿಯಲ್ಲಿ ವಿಜ್ಞಾನಶಾಸ್ತ್ರದ ಶಾಖೆಗಳಾದ ಭೌತಶಾಸ್ತ್ರ, ರಸಾಯನಶಾಸ್ತ್ರ, ಜೀವಶಾಸ್ತ್ರ, ಮುಂತಾದವು ಸೇರಿಹೋದುವು. ಹೀಗೆ ಶಾಲೆಯಲ್ಲಿ ವಿಜ್ಞಾನವನ್ನು ಹೇಳಿಕೊಡುವುದರಿಂದಲೇ ನಾಡಿನ ಔದ್ಯೋಗಿಕ ಪ್ರಗತಿಗೆ ಅಷ್ಟೊಂದು ಸಹಾಯವಾಗಲಾರದು. ತರಗತಿಯಲ್ಲಿ ಅರಿತುಕೊಂಡ ಜ್ಞಾನವನ್ನು ತಮ್ಮ ದಿನಚರಿಯಲ್ಲಿ ಪ್ರಯೋಜನಕಾರಿಯಾಗುವಂತೆ ಉಪಯೋಗಿಸುವ ಮನೋಭಾವವನ್ನೂ ಅವರಲ್ಲಿ ಬೆಳಸಬೇಕು. ಜೊತೆಗೆ, ಯಾವುದೋ ಒಂದು ವಿಜ್ಞಾನಶಾಖೆಯಲ್ಲಿ ಜ್ಞಾನಾರ್ಜನೆ ಮಾಡಿದ್ದರೆ ಸಾಲದು. ಎಲ್ಲ ಶಾಖೆಗಳಲ್ಲೂ ತಕ್ಕಷ್ಟು ಶಿಕ್ಷಣ ದೊರೆತಿರಬೇಕು. ಈ ಎಲ್ಲ ದೃಷ್ಟಿಗಳೂ ಶಿಕ್ಷಣಕಾರ್ಯವನ್ನು ಪೋಷಿಸುವುದಾದರೆ ನಮ್ಮ ಮಕ್ಕಳು ನಾಡಿನ ಔದ್ಯೋಗಿಕ ಪ್ರಗತಿಗೆ ನೆರವಾಗಿ, ಜನತೆಯ ಕಲ್ಯಾಣವನ್ನು ಸಾಧಿಸಿಯಾರು.

ವಿಜ್ಞಾನ ಪಾಠಗಳನ್ನು ಮಕ್ಕಳು ಕಲಿತು ಪಾರಂಗತರಾದರೆ ಸಾಲದು. ಅದಕ್ಕಿಂತಲೂ ಮುಖ್ಯವಾದುದು ವಿಜ್ಞಾನದೃಷ್ಟಿ. ಅದು ಮಾನವನ ಲೌಕಿಕ ವಿಚಾರವನ್ನು ಉತ್ತಮಪಡಿಸುವುದಲ್ಲದೆ ನೈತಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲೂ ಉಪಯುಕ್ತವೆನಿಸುತ್ತದೆ; ಸಾಮಾಜಿಕ ಜೀವನವನ್ನೂ ಬೆಳಕು ಮಾಡಬಲ್ಲದು. ಶಾಲೆಯಲ್ಲಿ ಬೋಧಿಸುವ ಭೂಗೋಳ, ಚರಿತ್ರೆ, ಪ್ರಜಾಧರ್ಮ, ಮುಂತಾದ ವಿಷಯಗಳ ಮೇಲೂ ಆ ದೃಷ್ಟಿ ಬೀಳುವಂತೆ ಮಾಡಬೇಕು. ಅದು ಮಾತ್ರ ಮಕ್ಕಳು ಮುಂದೆ ಬರುವ ಸಮಸ್ಯೆ

ಗಳನ್ನು ವಿಜ್ಞಾನದೃಷ್ಟಿಯಲ್ಲೇ ಇತ್ಯರ್ಥ ಮಾಡಿಕೊಳ್ಳಲು ಯತ್ನಿಸಿಯಾರು.

ಮೂರನೆಯದಾಗಿ, ಮುಂದೆ ಅವರು ಪ್ರಜಾಸತ್ತಾತ್ಮಕ ಸಮಾಜದಲ್ಲಿ ಸತ್ಪ್ರಜೆಗಳಾಗಿ ಬಾಳಲು ಅನುಕೂಲಿಸುವ ಶಿಕ್ಷಣವನ್ನು ಕೊಡಬೇಕು. ಸರ್ವರ ಸುಖಶಾಂತಿಗಳ ಸಾಧನೆಯೇ ಅಂಥ ಸಮಾಜದ ಮೂಲಮಂತ್ರವಾದ್ದರಿಂದ ಮಕ್ಕಳಲ್ಲಿ ಆ ದೃಷ್ಟಿಯನ್ನು ಬೆಳಸಬೇಕು. ಜಗತ್ತಿನಲ್ಲಿ ಹಬ್ಬಿ ಹರಡುತ್ತಿರುವ ಪ್ರಜಾಸತ್ತಾತ್ಮಕ ಮನೋಧರ್ಮ ಶಾಶ್ವತವಾಗಿ ತಳವೂರುತ್ತಿದೆ. ಸಕಲ ಮಾನವರ ಕಲ್ಯಾಣಸಾಧನೆಯೇ ಆಧುನಿಕ ಸಮಾಜದ ಮೂಲಮಂತ್ರವಾದರೆ ನಮ್ಮ ಶಿಕ್ಷಣ ಸಂಸ್ಥೆಗಳು ಆ ತತ್ವದೃಷ್ಟಿಯನ್ನು ತಾವೂ ತಾಳಬೇಕು. ಮಕ್ಕಳು ಮುಂದೆ ಅಂಥ ಸಮಾಜದ ಪುರೋಭಿವೃದ್ಧಿಗೆ ನೆರವಾಗುವಂತೆ ಶಿಕ್ಷಣವನ್ನು ಕೊಡಬೇಕು.

ಪ್ರಜಾಸತ್ತಾತ್ಮಕ ದೃಷ್ಟಿ ಕೇವಲ ಸರಕಾರದ ರಚನೆಗೆ ಮಾತ್ರ ಅನ್ವಯಿಸತಕ್ಕದ್ದಲ್ಲ. ಮಾನವನ ಕಲ್ಯಾಣ ಸಾಧನೆಗೆ ದುಡಿಯುತ್ತಿರುವ ಎಲ್ಲ ವ್ಯಕ್ತಿಗಳ ಮತ್ತು ಸಂಘಸಂಸ್ಥೆಗಳ ನಡವಳಿಕೆಯಲ್ಲೂ ಆಚರಣೆಗೆ ಬರಬೇಕು. ನಿಜವಾದ ಪ್ರಜಾಸತ್ತಾತ್ಮಕ ಸಮಾಜ ಸಕಲ ಮಾನವರ ಕಲ್ಯಾಣವನ್ನೂ ಸಾಧಿಸಬೇಕು. ಇಡೀ ಮಾನವ ವರ್ಗವೇ ಒಂದು ಕುಟುಂಬವೆಂಬ ಭಾವನೆಯಿಂದ ಪ್ರೇರಿತರಾಗಿರಬೇಕು. ಜಾತಿ, ಕುಲ, ಗೋತ್ರ ಮತ್ತು ಜನಾಂಗಗಳೆಂಬ ಕಟ್ಟು ಸಡಿಲವಾಗಿ ವಿಶ್ವಬಾಂಧವ್ಯದ ಮನೋಭಾವ ಜನತೆಯಲ್ಲಿ ಬೆಳೆಯಬೇಕು. ಅಷ್ಟೇ ಅಲ್ಲ; ತಮ್ಮ ಆ ಮನೋಭಾವವನ್ನು ಕಾರ್ಯರೂಪಕ್ಕೆ ತರುವ ಸಾಹಸ ಸದ್ಭಾವನೆಗಳೂ ಅವಶ್ಯಕ. ಆಗ ಮಾತ್ರ ಜನಜೀವನದಲ್ಲಿ ಅಂದಂದು ಒದಗುತ್ತಿರುವ ಯುದ್ಧ, ಆರ್ಥಿಕ ಮುಗ್ಗಟ್ಟು, ಕ್ಷಾಮ, ಮುಂತಾದ ಕೃತಕ ಕಷ್ಟಗಳು ಮಾಯವಾಗಿ ಜಗತ್ತು ಕ್ಷೇಮಕರವೂ ಫಲದಾಯಕವೂ ಆದ ಮಾರ್ಗದಲ್ಲಿ ಮುಂದುವರಿದೀತು! ಇಂದಿನ ನಮ್ಮ ಸಂಸ್ಥೆಗಳು ತ್ರಿಕರಣಪೂರ್ವಕವಾಗಿ ಹಾಗೆ ನಡೆಯುತ್ತಿವೆಯೆ? ಇಲ್ಲದಿದ್ದರೆ, ಪ್ರಜಾಸತ್ತಾತ್ಮಕ ಸಂಸ್ಥೆಗಳೆಂದು ಹೆಸರನ್ನು ಹೇಳಿಕೊಂಡರೂ ಆ ದೃಷ್ಟಿಯಲ್ಲೇಕೆ ಅವು ನಡೆಯುತ್ತಿಲ್ಲ? ಆ ತತ್ವವನ್ನು ಆಚರಣೆಗೆ ತರಲಾರದೆ

ಇರುವುದಕ್ಕೆ ಶಿಕ್ಷಣ ಸಂಸ್ಥೆಗಳು ಕಾರಣವೆ? ಹಾಗಿದ್ದರೆ ಎಷ್ಟರ ಮಟ್ಟಿಗೆ ಅವು ಕಾರಣ? ಆ ನ್ಯೂನತೆಯನ್ನು ನಿವಾರಿಸುವುದಾದರೂ ಹೇಗೆ?

ಪ್ರಜಾಸತ್ತಾತ್ಮಕ ದೃಷ್ಟಿಯಲ್ಲಿ ಸಮಾಜ ನಡೆಯುವಹಾಗೆ ಮಾಡಲು ಶಿಕ್ಷಣ ನೆರವಾಗುವುದರಲ್ಲಿ ಅನುಮಾನವಿಲ್ಲ. ಆದರೆ ಆ ತತ್ತ್ವಜ್ಞಾನವನ್ನು ಮಾತ್ರ ಚರಿತ್ರೆಯ ಮೂಲಕವೋ ಪ್ರಜಾಧರ್ಮದ ಮೂಲಕವೋ ವಿದ್ಯಾರ್ಥಿಗಳಿಗೆ ತಿಳಿಸುವುದರಿಂದಲೇ ಅದು ಸಿದ್ಧಿಸುವಂತಿಲ್ಲ. ನಾವು ಯಾವುದನ್ನು ಆಚರಿಸುತ್ತೇವೆಯೋ ಅದನ್ನು ಕಲಿಯುತ್ತೇವೆ. ಶಾಲೆಗಳಲ್ಲಿ ಉಪಾಧ್ಯಾಯರು ವಿವರಿಸುವುದರಿಂದಲೇ ಪ್ರಜಾಸತ್ತಾತ್ಮಕ ಜೀವನ ನಡಸುವುದನ್ನು ಮಕ್ಕಳು ಕಲಿಯುವಂತಿಲ್ಲ. ಕೇವಲ ತತ್ತ್ವಜ್ಞಾನ ಬೋಧನೆಯಿಂದಲೇ ಮಕ್ಕಳು ಪ್ರಜಾಸತ್ತಾತ್ಮಕ ಜನಾಂಗವಾಗಿ ಬಾಳುವಂತೆ ಮಾಡುವುದು ಸುಲಭವೂ ಅಲ್ಲ. ಶಾಲೆಯ ವಿಶಿಷ್ಟ ಸನ್ನಿವೇಶಗಳೂ ಆ ತತ್ತ್ವದ ಬೆಳಕಿನಲ್ಲೇ ವ್ಯವಸ್ಥೆಯಾಗಿರಬೇಕು. ಪರಸ್ಪರ ಸಹಾಯಕ ಸಂಘ, ಸಾಹಿತ್ಯ ಸಂಘ, ಕ್ರೀಡಾ ವ್ಯವಸ್ಥೆ, ಮತ್ತು ಇತರ ಸಾಂಘಿಕ ಸಂಸ್ಥೆ, ಇವೆಲ್ಲವನ್ನೂ ರಚಿಸಿ ಅವುಗಳ ನಿರ್ವಹಣವನ್ನು ಬಾಲಕರೇ ವಹಿಸಿಕೊಂಡು ನಡಸುವುದನ್ನು ಕಲಿಸಬೇಕು. ಅಲ್ಲೊದಗುವ ನೈತಿಕ ಮತ್ತು ಸಾಮಾಜಿಕ ಸಮಸ್ಯೆಗಳನ್ನು ಯೋಚಿಸಿ, ಅವರೇ ಸರ್ವಹಿತವೆನಿಸುವ ಒಂದು ತೀರ್ಮಾನಕ್ಕೆ ಬರಲು ಉಪಾಧ್ಯಾಯರು ನೆರವಾಗಬೇಕು. ಒಬ್ಬೊಬ್ಬ ವಿದ್ಯಾರ್ಥಿಗೂ ಶಾಲೆಯ ಕಲ್ಯಾಣ ಸಾಧನೆಯೇ ಮೂಲ ಉದ್ದೇಶವೆಂಬ ಭಾವನೆಯನ್ನು ಬೆಳಸಬೇಕು. ಹಾಗೆ ನಮ್ಮ ಶಾಲೆಯ ಜೀವನ ಒಂದು ಚಿಕ್ಕ ಪ್ರಜಾಸತ್ತಾತ್ಮಕ ಸಮಾಜವಾದರೆ ಮಾತ್ರ ಮಕ್ಕಳು ಆ ಜೀವನವನ್ನು ಆಚರಿಸಿ ಕಲಿಯುವರು. ಮುಂದೆ ವಿಶಾಲ ಜಗತ್ತಿನಲ್ಲೂ ಆ ದೃಷ್ಟಿಯನ್ನು ಪೋಷಿಸಿಕೊಂಡು ನಡೆಯುಕೊಳ್ಳಬಲ್ಲರು.

ಪ್ರಜಾಸತ್ತಾತ್ಮಕ ಜೀವನ ಎಲ್ಲ ಕಡೆಯೂ ಬೆಳೆದು ಸಮಾಜದ ಕಲ್ಯಾಣ ಸಾಧನೆಯಾಗಬೇಕೆಂಬ ಕಾತರ ಜನತೆಯಲ್ಲಿದ್ದರೂ ಸ್ವಾರ್ಥಪರರೂ ಸಂಕುಚಿತ, ಮನೋಭಾವನೆಯವರೂ ಹೆಚ್ಚಿಕೊಂಡು ಜನತೆಯ ಕಲ್ಯಾಣಕ್ಕೆ ಕಂಟಕವಾಗುತ್ತಿರುವರು. ಇದಕ್ಕೆ ಅವರ ಬಾಲ್ಯದಲ್ಲಿ ಉಚಿತವೆನಿಸುವ ಶಿಕ್ಷಣ ದೊರೆಯದಿದ್ದುದೂ ಒಂದು ಕಾರಣ. ಅವರ ಎಳೆಯ ಮನಸ್ಸಿನಲ್ಲಿ

ವಿಶ್ವಭಾವನೆಯೂ ವಿಶಾಲದೃಷ್ಟಿಯೂ ಬೆಳೆಯುವಂತೆ ಮಾಡಿದ್ದರೆ ಇಂಥ ಅನರ್ಥಗಳಿಗೆ ಕಾರಣವಾಗುತ್ತಿರಲಿಲ್ಲವೆಂದು ಹಲವರಿಗಾದರೂ ಅನ್ನಿಸದಿರದು. ಇಡೀ ಮಾನವ ವರ್ಗವೇ ಒಂದು ಸಮಾಜವಂತಾಗುತ್ತಿರುವ ಈ ಕಾಲದಲ್ಲಿ ಜನರಲ್ಲಿ ವಿಶಾಲದೃಷ್ಟಿಯ ಅಗತ್ಯ ಅಷ್ಟಿಷ್ಟಲ್ಲ. ಎಚ್. ಜಿ. ವೆಲ್ಸ್‌ರವರು ಹೇಳುವಂತೆ ಇಡೀ ಮಾನವವರ್ಗವೇ ಒಂದು ಕುಟುಂಬವೆಂದು ಗಣಿಸಬೇಕಾಗಿರುವ ಈ ಕಾಲದಲ್ಲಿ ಯಾರು ಏನು ಮಾಡಿದರೂ ಅದರ ಪರಿಣಾಮ ಇಡೀ ಸಮಾಜದಮೇಲೆ ಆಗತಕ್ಕದ್ದೆಂದು ಗಮನದಲ್ಲಿಡಬೇಕು. ಅಂಥ ಮನೋವೈಶಾಲ್ಯತೆ ಇಂದು ಜನತೆಗೆ ಅನಿವಾರ್ಯವೆನಿಸಿದೆ; ಹಾಗೆಯೇ ಸಹಕಾರ ಸದ್ಭಾವನೆಗಳೂ ಸಹನೆ ಸಹಿಷ್ಣುತೆಗಳೂ ಜನಜೀವನದಲ್ಲಿ ಕಾರ್ಯರೂಪಕ್ಕೆ ಬರಬೇಕು. ವಾಹನ ಸೌಕರ್ಯಗಳು ಹೆಚ್ಚಿ, ಆರ್ಥಿಕ ವ್ಯವಹಾರ, ವ್ಯಾಪಾರ, ಉದ್ಯೋಗ ಮತ್ತು ವಿಜ್ಞಾನ—ಇವುಗಳ ಪ್ರಭಾವದಿಂದ ಜಗತ್ತಿನ ಜನಜೀವನ ಬಾಂಧವ್ಯದ ಬಲೆಯನ್ನು ಹೆಣೆದುಕೊಳ್ಳುತ್ತಿದೆ. ಈ ಯುಗದಲ್ಲಿ 'ಇಡೀ ಮಾನವವರ್ಗವೇ ಒಬ್ಬ ದೇವರ ಮಕ್ಕಳು; ಎಲ್ಲರ ಸುಖಶಾಂತಿಯೇ ಅವನ ಅನಂತ ಧ್ಯಾನ' ಎಂಬ ನೂತನ ಆಧ್ಯಾತ್ಮದೃಷ್ಟಿ ಉದಯವಾಗಬೇಕು. ಕೊನೆಯರಿಯದ ರಣರಂಗಗಳಿಂದ ತಪ್ತವಾಗಿರುವ ಜನಜೀವನದ ಸುಖಶಾಂತಿಯನ್ನು ಸಾಧಿಸಬೇಕೆಂಬ ತತ್ವದೃಷ್ಟಿ ನಮ್ಮ ಶಿಕ್ಷಣ ರಥವನ್ನು ನಡಸಬೇಕು. ಮಕ್ಕಳ ಮನಸ್ಸಿನಲ್ಲಿ ಅಂಥ ಬಾಂಧವ್ಯದ ಕಲ್ಪನೆಯನ್ನು ಮೂಡಿಸಿ ಜನಜನಾಂಗಗಳ ವಿದ್ವೇಷ, ಅದರಿಂದ ಹುಟ್ಟುವ ಯುದ್ಧಗಳ ದುರಂತ–ಇವೆಲ್ಲವನ್ನು ನಿಲ್ಲಿಸಲು ಯತ್ನಿಸಬೇಕಾಗಿದೆ. ಹಿಂದೆಲ್ಲ ಅಂಥ ವಿಶಾಲ ಭಾವನೆಯನ್ನು ಬೋಧಿಸಿದ ಗುರುವರ್ಯರು ಆಗಿಹೋಗಿಲ್ಲವೇ ಎಂಬ ಪ್ರಶ್ನೆಯೇಳಬಹುದು. ಅಹುದು; ಆದರೆ ಮಾನವನ ಸಂಕುಚಿತ ಮನೋಧರ್ಮ ಮಾತ್ರ ಹೋಗಿಲ್ಲ. ಅದರಿಂದಲೇ ನಮ್ಮ ನಾಗರಿಕತೆ ಉತ್ತುಂಗಶಿಖರಕ್ಕೇರುತ್ತಿದ್ದರೂ ನಮ್ಮ ಪಾಶವೀಗುಣಗಳೂ ಆರ್ಭಟಿಸುತ್ತಲೇ ಬರುತ್ತಿವೆ. ವಯಸ್ಕ ಸಮಾಜದ ಮನೋರಾಜ್ಯದಿಂದ ಈ ದುರ್ಗುಣಗಳನ್ನು ದೂರಮಾಡುವುದು ಕಷ್ಟ. ಮಕ್ಕಳ ಎಳೆಯ ಮನಸ್ಸಿನಲ್ಲೇ ಮಾನವೀಯತೆಯ ವಿಶಾಲ ಭಾವನೆಯನ್ನು ಬಿತ್ತುವುದರಿಂದ ಮಾತ್ರ ಮುಂದಣ ಜನಾಂಗವಾದರೂ ಆ ದುರ್ಗುಣಗಳಿಂದ ದೂರವಾದೀತು. ಶಾಲೆಯಲ್ಲಿ ಬೋಧಿಸುವ ವಿಷಯಗಳೇ ಪ್ರಧಾನವಲ್ಲ:

ಅವುಗಳ ಹಿನ್ನೆಯಲ್ಲಿ ಅಡಗಿರುವ ಮನೋಧರ್ಮ ಮುಖ್ಯವಾದುದು. ಯಾವ ಪಠ್ಯವಸ್ತುವಿನ ಬೋಧನೆಯೇ ಆಗಲಿ, ಅದರ ಅಂತರಾಳದಲ್ಲಿ ಜಗತ್ತೇ ಒಂದು ಕುಟುಂಬವೆಂಬ ಭಾವನೆ ಸ್ಫುರಿಸುವಂತಿರಬೇಕು; ಮಾನವರೆಲ್ಲರೂ ತಮ್ಮವರೆಂಬ ಭಾವನೆಯೂ ಪ್ರೇಮಮಯ ದೃಷ್ಟಿಯೂ ಮಕ್ಕಳಲ್ಲಿ ಬೆಳೆಯುವಂತಿರಬೇಕು. ಚರಿತ್ರೆ, ಭೂಗೋಳ, ಪ್ರಜಾಧರ್ಮ, ಮುಂತಾದವನ್ನು ಜನಾಂಗಗಳನ್ನು ಒಡೆದು, ಪ್ರತ್ಯೇಕವೆಂಬ ಭಾವನೆ ಹುಟ್ಟಿಸುವಂತೆ ಬೋಧಿಸುವುದು ತಪ್ಪಬೇಕು. ಸ್ವದೇಶ ಪ್ರೇಮ ಹುಟ್ಟಿಸುವಂತಿದ್ದರೂ ಇತರ ಮತಗಳ, ದೇಶಗಳ, ದ್ವೇಷಕ್ಕೆ ಅವಕಾಶ ಕೊಡಕೂಡದು. ಜಗತ್ತಿನಲ್ಲಿ ಇದುವರೆಗೂ ಜನಜನಾಂಗಗಳ, ಮತಧರ್ಮಗಳ ದ್ವೇಷದಿಂದ ಒದಗಿರುವ ದಾರುಣತರ ಕದನಗಳಿಗೆಲ್ಲ ಅಂದಿನ ಶಾಲೆಯ ಸ್ವದೇಶಾಭಿಮಾನವನ್ನೇ ಜೀವನದ ಹೆಗ್ಗುರಿಯೆಂದು ಭಾವಿಸಿದ್ದ ಪಠ್ಯಪುಸ್ತಕಗಳೂ ಬೋಧನ ಕ್ರಮವೂ ಕಾರಣವೆಂದು ಅನೇಕರು ಹೇಳುತ್ತಾರೆ. ಅಂಥ ಸಂಕುಚಿತ ದೃಷ್ಟಿಯ ಪಠ್ಯವಿಷಯವೂ ಬೋಧನಕ್ರಮಗಳೂ ಹೋಗಬೇಕು: ಉದಾತ್ತ ದೃಷ್ಟಿಯಲ್ಲಿ ಪಠ್ಯಪುಸ್ತಕಗಳೂ ಶಾಲಾ ಸಂವಿಧಾನವೂ ರೂಪುಗೊಳ್ಳಬೇಕು. ಅಂಥ ತತ್ತ್ವದೃಷ್ಟಿ ಶಿಕ್ಷಣರಂಗದಲ್ಲಿ ಕಾರ್ಯರೂಪಕ್ಕೆ ಬಂದರೆ ಮಾತ್ರ ಪ್ರಪಂಚದ ಅನೇಕ ದುರಂತ ಸಮಸ್ಯೆಗಳು ಮಾಯವಾದಾವು; ಜನಜೀವನಕ್ಕೆ ಶಾಂತಿ ಸಂತೃಪ್ತಿಗಳು ದೊರೆತಾವು.

ನಮ್ಮ ಪೂರ್ವಿಕರು ಶಾಂತಿ ಸಂಯಮಗಳಿಂದ ದುಡಿದು ಕಟ್ಟಿರುವ ನಾಗರಿಕತೆ, ಸಾಹಿತ್ಯ, ಸಂಸ್ಕೃತಿ ಮತ್ತು ಇತರ ಸಂಪತ್ತುಗಳು ಮಹಾಯುದ್ಧಗಳಿಂದ ನಾಶವಾಗುತ್ತಿವೆಯಷ್ಟೆ; ಅಂಥ ಯುದ್ಧಗಳನ್ನು ತಡೆಯಲು ಜನಾಂಗಗಳನ್ನು ಶಸ್ತ್ರ ರಹಿತವನ್ನಾಗಿ ಮಾಡಲು ಅನೇಕ ಸಂಘಗಳು ಪ್ರಯತ್ನಿಸುತ್ತಿವೆ. ಹಾಗೆ ಪ್ರಯತ್ನಿಸತಕ್ಕವರು ಪಾಲ್ ಮನ್ರೋ ಎಂಬ ತತ್ತ್ವಚಿಂತಕರ 'ಜನಾಂಗಗಳು ಶಸ್ತ್ರರಹಿತವಾದರೆ ಏನಾಯಿತು? ಅದಕ್ಕೆ ಮೂಲಕಾರಣವಾದ ಜನರ ಮನಸ್ಸಿನ ದ್ವೇಷವೆಂಬ ಶಸ್ತ್ರವನ್ನು ತೊಲಗಿಸಬೇಕು!' ಎಂಬ ವಾಕ್ಯವನ್ನು ಗಮನಿಸಬೇಕು. ಜನರ ಮನಸ್ಸಿನ ದ್ವೇಷಾಸೂಯೆಗಳು ಮಾಯವಾಗಬೇಕಾದರೆ ಅದು ಅವರ ಎಳೆಯ ವಯಸ್ಸಿನಲ್ಲೇ ನಡೆಯಬೇಕು. ಪಠ್ಯಪುಸ್ತಕಗಳ ರಚನಾ ದೃಷ್ಟಿ ಆ ಕಾರ್ಯವನ್ನು ಬಹುವಾಗಿ

ಸಾಧಿಸಬಲ್ಲದು. ಅದನ್ನು ಬರೆಯುವವರು ಉದಾತ್ತವೆನಿಸುವ ವಿಶಾಲ ಭಾವನೆಯ ಸದ್ಬುದ್ಧಿಯಿಂದ ಪ್ರೇರಿತರಾಗಿರಬೇಕು; ಅದೇ ದೃಷ್ಟಿಯಿಂದ ಅದನ್ನು ಬೋಧಿಸಬೇಕು. ಆ ಗುಣಗಳನ್ನು ಮಕ್ಕಳ ಶಾಲಾ ಜೀವನದಲ್ಲೂ ಆಚರಣೆಗೆ ತರುವಂತೆ ಮಾಡಬೇಕು. ಅಂಥ ಶಿಕ್ಷಣಪಡೆದ ಮಕ್ಕಳು ಮಾತ್ರ ಜಗತ್ತಿನ ಸತ್ಪ್ರಜೆಗಳೆನಿಸಿಯಾರು; ಅವರ ಮನೋಗುಣಗಳು ಮಾತ್ರ ಯುದ್ಧವನ್ನು ತಡೆಯಬಲ್ಲವು; ಸಂಸ್ಕೃತಿಯು, ನಾಗರಿಕತೆಯು, ಒಟ್ಟಿನಲ್ಲಿ, ಜನಜೀವನದ ಪ್ರಳಯವನ್ನು ತಪ್ಪಿಸಬಲ್ಲವು. ಎಂದರೆ, ದೇಶಾಭಿಮಾನವನ್ನೇ ಬೋಧಿಸಬಾರದೆಂದಲ್ಲ. ಅದನ್ನು ಬೋಧಿಸಲೇ ಬೇಕು: ಆದರೆ ಅವರ ಅಂತರಾಳದಲ್ಲಿ ಮಾನವ ಪ್ರೇಮದ ಹೃದಯ ವೈಶಾಲ್ಯತೆಯೂ ಸಹಕಾರ ಸಹಿಷ್ಣುತೆಗಳೂ ಮೂಡಬೇಕು. ಅಂಥ ಮಕ್ಕಳು ಬೆಳೆದು, ದೊಡ್ಡವರಾದಮೇಲೆ ಮಾನವ ಲೋಕದ ಸುಖಶಾಂತಿಗಳನ್ನು ಸಾಧಿಸಿಯಾರು. ನಮ್ಮ ಶಿಕ್ಷಣ ವ್ಯವಸ್ಥೆ ಹಿಂದೆ ಅಂಥ ಸಮಾಜವನ್ನು ನಿರ್ಮಾಣಮಾಡಲಿಲ್ಲ; ಇಂದೂ ಮಾಡಿಲ್ಲ; ಮುಂದೆಯಾದರೂ ಮಾಡಬೇಕಾಗಿದೆ. ಅದಕ್ಕೆ ಅನುಕೂಲಿಸುವಂತೆ ನಮ್ಮ ಮುಂದಿನ ಶಾಲೆಗಳು ಸಮಾಜದ ಅಂಗದಂತಿರಬೇಕು; ಸಮಾಜದ ಕೇಂದ್ರಗಳಾಗಬೇಕು; ಸಮಾಜದ ಸನ್ನಿವೇಶಗಳನ್ನೇ ಅಲ್ಲೂ ರೂಪಿಸಬೇಕು. ಸಮಾಜದಲ್ಲಿ ಅಡ್ಡಬರುವಂಥ ಸಮಸ್ಯೆಗಳನ್ನು ಮಕ್ಕಳು ಶಾಲೆಯಲ್ಲಿ ಎದುರಿಸಿ, ಬಗೆಹರಿಸಿಕೊಳ್ಳುವಂತೆ ಶಿಕ್ಷಣ ರೂಪುಗೊಳ್ಳಬೇಕು. ಆ ಮೂಲಕ ಮಕ್ಕಳ ವ್ಯಕ್ತಿತ್ವವನ್ನು ಮಾನವ ಲೋಕದ ಕಲ್ಯಾಣ ಸಾಧಿಸುವಂತೆ ಮಾಡಿ ಬೆಳೆಸಬಹುದು.

ಅನೇಕ ಪಾಶ್ಚಾತ್ಯ ದೇಶಗಳು ನಾಗರಿಕತೆಯ ಶೈಶವಾವಸ್ಥೆಯಲ್ಲಿದ್ದಾಗ ಸಾಹಿತ್ಯ, ಸಂಸ್ಕೃತಿ, ಇತಿಹಾಸಗಳನ್ನು ಕಟ್ಟಿ, ಪ್ರಾಚೀನ ಕಾಲದಿಂದಲೂ ಮುಂದುವರಿದ ಜನಾಂಗವೆನಿಸಿಕೊಂಡಿರುವ ನಮಗೆ ಹಳಗಿ, ಪಕ್ವವಾಗಿರುವ ಜೀವನತತ್ತ್ವವಿಲ್ಲವೆ? ಅದರ ಆಧಾರದಮೇಲೆ ನಮ್ಮ ಶಿಕ್ಷಣತತ್ತ್ವವನ್ನೂ ರೂಢಿಸಿಕೊಂಡರಾಯಿತಲ್ಲವೆ? ಎಂಬ ವಾದವನ್ನು ಹಲವರಾದರೂ ಎತ್ತಬಹುದು. ನಮ್ಮ ಜನಜೀವನದ ತತ್ತ್ವದೃಷ್ಟಿಯಲ್ಲಿ ಅನೇಕ ಉತ್ತಮೋತ್ತಮ ಗುಣಗಳಿವೆಯೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ನಮ್ಮಲ್ಲಿ ಕಂಡು ಬರುವ ಶ್ರಮ ಸಹಿಷ್ಣುತೆ, ಪರಧರ್ಮ ಮತ್ತು ಸಂಸ್ಕೃತಿಗಳಲ್ಲಿ ಸಹನೆ—

ಇವು ಇತಿಹಾಸ ಪ್ರಸಿದ್ಧವಾಗಿವೆ. ಆದರೂ ನಾವು ಇತರ ಜನಾಂಗಗಳಂತೆ ಆಧುನಿಕ ಯುಗದಲ್ಲಿ ಮುಂದುವರಿಯದಿರುವೆವೆಂಬುದನ್ನು ಒಪ್ಪಲೇ ಬೇಕು. ಎಂದ ಮೇಲೆ, ನಮ್ಮ ನಚ್ಚಿನ ಜೀವನತತ್ತ್ವದಲ್ಲಿ ಇಂದಿನ ಜನಜೀವನದ ಪುರೋಭಿವೃದ್ಧಿಗೆ ನೆರವಾಗದಂಥ ಯಾವುದೋ ನ್ಯೂನತೆ ಇರಬೇಕೆಂದು ತೋರುತ್ತದೆ. ಅಂಥ ಕೊರತೆಯನ್ನು ನೀಗಿ, ಭವ್ಯ ಭವಿಷ್ಯ ಜನಾಂಗದ ನಿರ್ಮಾಣಕ್ಕೆ ಸಹಾಯವಾಗುವಂಥ ತತ್ತ್ವವನ್ನು ರೂಪಿಸಿಕೊಳ್ಳುವುದು ಆವಶ್ಯಕವಲ್ಲವೆ? ಅಂಥ ನೂತನ ತತ್ತ್ವಸೃಷ್ಟಿಗೆ ತೊಡಗುವಾಗ ಆರ್ಷೇಯ ವಾಗಿ ಬಂದ ನಮ್ಮ ಜೀವನತತ್ತ್ವವನ್ನೇ ಪರಿಶೀಲಿಸಿ, ಪರಿಷ್ಕರಿಸಿ, ಜೀವನದ ಪ್ರಗತಿಗೂ ನಾಡಿನ ಸಂಪದಭಿವೃದ್ಧಿಗೂ ನೆರವಾಗುವಂತೆ ಮಾರ್ಪಡಿಸಿ ಕೊಳ್ಳುವುದು ನಮ್ಮ ಧ್ಯೇಯವಾಗಿರಬೇಕು.

ನಮ್ಮಲ್ಲಿ ವಿದ್ಯಾವಂತರೂ ಸುಸಂಸ್ಕೃತರೂ ಎನಿಸಿಕೊಂಡ ಹಲವ ರನ್ನು ಬಿಟ್ಟರೆ ಮಿಕ್ಕ ಕೋಟ್ಯಂತರ ಜನತೆಯಲ್ಲಿ ಒಂದು ವಿಧವಾದ ಸಂಕು ಚಿತ ಮನೋಭಾವವೂ ಜೀವನದಲ್ಲಿ ನಿರಾಸೆ ಜಿಗುಪ್ಸೆಗಳೂ ತುಂಬಿವೆ. ಶ್ರೀ ಎಮ್. ವಿಶ್ವೇಶ್ವರಯ್ಯನವರು ಹೇಳುವಂತೆ ಆತ್ಮನ ಅನಂತ ಯಾತ್ರೆ ಯಲ್ಲಿ ಕ್ಷಣಕಾಲ ತಂಗಿದಂತಿರುವ ಈ ಜೀವನ ನಶ್ವರವಾದುದೆಂದು ಅನೇಕರು ತಿಳಿದಿರುತ್ತಾರೆ. ಇದರಿಂದ ಅವರಿಗಿರಬಹುದಾದ ಉತ್ಸಾಹ ಕಳೆಗುಂದಿ, ಜೀವನದಲ್ಲಿರಬೇಕಾದ ಗೆಲುವು ಮಾಯವಾಗಿದೆ. ಅದು ಜನತೆಯ ಪೌರುಷ ವನ್ನೇ ಹಿಡಿದು ಹಿಂಡುತ್ತಿದೆ. ಜಗತ್ತಿನ ಮತ್ತಾವ ದೇಶದಲ್ಲೇ ಆಗಲಿ ಇಲ್ಲಿ ನಷ್ಟು ಸಾಮಾಜಿಕ ಭಿನ್ನತೆಗಳಿಲ್ಲ. ಇಲ್ಲಿ ಕಂಡುಬರುವ ಜಾತಿ, ಮತ, ಕುಲ, ಗೋತ್ರ—ಇವುಗಳ ಭಿನ್ನತೆ ನಮ್ಮ ನಮ್ಮ ಬಾಂಧವ್ಯವನ್ನು ಸಡಿಲಿಸುತ್ತಿದೆ: ಲಕ್ಷಾಂತರ ಜನತೆಯನ್ನು ಅಸ್ಪೃಶ್ಯರನ್ನಾಗಿ ಮಾಡಿ ನರಳುವಂತೆ ಮಾಡಿದೆ; ಜಾತಿ ಗೋತ್ರಗಳ ಭಿನ್ನತೆಯ ಅಂಧಶ್ರದ್ಧೆ ವಿರಾಡ್ರೂಪವನ್ನು ತಾಳಿ ಭಾರ ತೀಯರಂಥ ಮಹಾ ಜನಾಂಗವನ್ನು ಛಿದ್ರ ಛಿದ್ರವಾಗಿ ಒಡೆದು ಹರಿದು ಹಂಚಿಬಿಟ್ಟಿದೆ. ಎಂದಮೇಲೆ, ಸಮಾಜದ ಈ ನ್ಯೂನತೆಗಳನ್ನು ಕಳೆಯುವಂತೆ ನಮ್ಮ ಶಿಕ್ಷಣತತ್ತ್ವದೃಷ್ಟಿ ಮೂಡಬೇಕಾಗಿದೆ.

ನಮ್ಮ ಜನತೆಯ ಮತ್ತೊಂದು ಗುಣಧರ್ಮವೆಂದರೆ ಹಿಂದಿನದೆಲ್ಲ ಪವಿ ತ್ರವೂ ಪರಿಪಕ್ವವೂ, ಇಂದಿಗೂ ಎಂದೆಂದಿಗೂ ಅನ್ವಯಿಸತಕ್ಕದ್ದೂ ಎಂದು

ಹಿಗ್ಗುತ್ತಿರುವುದು. ಗತಿಸಿದ ಮಹಾನುಭಾವಿ ಲಾಲಾ ಲಜಪತರಾಯರು 'ನಮ್ಮ ಸಂಘಸಂಸ್ಥೆಗಳೂ ಜನಜೀವನವೂ ದೋಷರಹಿತವೆಂದು ಹೆಮ್ಮೆಯಿಂದ ವೈಮರೆಯುವುದು ಉಚಿತವಲ್ಲ. ನಮ್ಮ ಹುಳುಕುಗಳನ್ನು ಹುಡುಕದೆ, ನಮ್ಮ ಹಿಂದಿನವರ ಪವಿತ್ರ ದೃಷ್ಟಿ ಈಗ ಅಧೋಗತಿಗಿಳಿಯುತ್ತಿರುವುದನ್ನು ಅರಿಯದೆ, ನಮ್ಮ ಹಲವು ಆಚಾರವ್ಯವಹಾರಗಳು ಪ್ರಗತಿವಿರಹಿತವೆನಿಸಿ ಜನಾಂಗದ ವಿನಾಶಕ್ಕೆ ಕಾರಣವಾಗುತ್ತಿರುವುದನ್ನು ಪರಿಶೀಲಿಸದೆ ಕೂಡುವುದೆಂದರೆ ನಮ್ಮ ಪುರೋಭಿವೃದ್ಧಿಗೇ ಕಂಟಕರಾಗುತ್ತೇವೆ' ಎಂದು ಎಚ್ಚರಿಸಿರುವರು. ನಮ್ಮ ಪೂರ್ವಿಕರ ಹಲವು ನಂಬಿಗೆಗಳೂ, ಆಚಾರಗಳೂ, ಸಂಪ್ರದಾಯಗಳೂ ಇಂದಿಗೆ ಸಾಧುವಲ್ಲವೆಂಬುದು ಸ್ಥಿರಪಟ್ಟಿದೆ; ಅಂಥ ಅಂಶಗಳು ಪರಿಷ್ಕರಣಗೊಂಡು ಪುನರ್ವ್ಯವಸ್ಥೆಯಾಗಬೇಕಾಗಿದೆ; ಹಿಂದಿನ ಹಲವು ಸಂಘಸಂಸ್ಥೆಗಳೂ ಸಂಪ್ರದಾಯಗಳೂ ಅಂದಿಗೆ ಉಚಿತವೆನಿಸಿದ್ದರೂ ಇಂದು ಅನ್ವಯಯೋಗ್ಯವಲ್ಲವಾಗಿವೆ. ಅವುಗಳನ್ನು ತಳ್ಳಿಹಾಕಿ ಹೊಸ ಸಂಪ್ರದಾಯಗಳನ್ನೂ ಸಂಘಸಂಸ್ಥೆಗಳನ್ನೂ ಕಟ್ಟಬೇಕಾಗಿದೆ. ನಮ್ಮ ಪೂರ್ವಿಕರ ಮೇಲ್ಪಂಕ್ತಿಯನ್ನೇ ಅನುಸರಿಸುವುದರ ಬದಲು ಅವರು ಹಾಕಿಕೊಟ್ಟ ಜೀವನಮಾರ್ಗವನ್ನು ಉತ್ತಮಪಡಿಸುವುದು ನಮ್ಮ ಕರ್ತವ್ಯವಲ್ಲವೆ? ಅವರ ಆದರ್ಶಗಳೂ ದೃಷ್ಟಿಧ್ಯೇಯಗಳೂ ಕಾಲ ಕಾಲಕ್ಕೆ ಪುನರ್ವಿಮರ್ಶಿತವಾಗಬೇಕು. ಅವುಗಳನ್ನು ಜನತೆಯ ಕಲ್ಯಾಣ ಸಾಧನೆಗೆ ನೆರವಾಗುವಂತೆ ಕಾಲಕ್ಕೆ ತಕ್ಕಂತೆ ಮಾರ್ಪಡಿಸಿಕೊಳ್ಳಬೇಕು.

ಭಾರತೀಯ ತತ್ತ್ವದರ್ಶನವೆಂಬ ತಮ್ಮ ಗ್ರಂಥದಲ್ಲಿ ಶ್ರೀ ರಾಧಾಕೃಷ್ಣನ್‌ರವರು 'ನಮ್ಮ ಜನಜೀವನದ ಸಮಸ್ಯೆಗಳನ್ನು ಎಚ್ಚರಿಕೆಯಿಂದ ಪರಿಶೀಲಿಸಿ, ಅವುಗಳನ್ನು ಪರಿಹರಿಸಲು ನಮ್ಮ ಹಿಂದಿನ ಹಿರಿಮೆಯಿಂದ ಸ್ಫೂರ್ತಿ ಪಡೆದುಕೊಳ್ಳಬೇಕು. ಗತ ಶತಮಾನಗಳ ನಮ್ಮ ಪೂಜ್ಯ ಪೂರ್ವಜರು ಇಂದು ಭೂಮಿಗೆ ಬಂದು ನೋಡುವುದಾದರೆ ಅವರು ಹಾಕಿದ ಮೇಲ್ಪಂಕ್ತಿಯನ್ನು ಚಾಚೂ ತಪ್ಪದೆ ನಡೆಸುತ್ತಿರುವ ನಮ್ಮನ್ನು ಕಂಡು ಆಶ್ಚರ್ಯಪಟ್ಟಾರು! ಒಂದು ಕಾಲದ ತತ್ತ್ವದೃಷ್ಟಿ ಆ ಕಾಲಕ್ಕೆ ಮಾತ್ರ; ಎಲ್ಲ ಕಾಲಕ್ಕೂ ಅಲ್ಲ

ಎಂದು ಹೇಳಿ ಜನಜೀವನ ನೂತನವಾದಂತೆ ನಮ್ಮ ತತ್ತ್ವದೃಷ್ಟಿಯೂ ಅದಕ್ಕ ನ್ವಯಿಸಿಕೊಳ್ಳುವಂತೆ ನೂತನವಾಗುತ್ತಾ ಬರಬೇಕೆಂದು ಸೂಚಿಸಿದ್ದಾರೆ.

ಧಾರ್ಮಿಕ ಕ್ಷೇತ್ರದ ನಮ್ಮ ನ್ಯೂನತೆಗಳನ್ನು ಮೇಲೆ ಸೂಚಿಸಿದ ತತ್ತ್ವಜ್ಞಾನಿಗಳ ವಾಣಿಯಿಂದ ಕಂಡುಕೊಳ್ಳಬಹುದು. ಹಾಗೆಯೇ ಸಾಮಾಜಿಕ ಕ್ಷೇತ್ರದಲ್ಲೂ ಜಾತಿಗೋತ್ರಗಳ ಭಿನ್ನತೆ ಪ್ರಬಲಿಸಿ, ಐಕ್ಯತೆ ತಪ್ಪಿಹೋಗಿದೆ. ಈ ಸಮಸ್ಯೆ ನಮ್ಮ ಆರ್ಥಿಕ ಮತ್ತು ರಾಜಕೀಯ ಸಮಸ್ಯೆಗಳಿಗಿಂತಲೂ ಹೆಚ್ಚಿನದಾಗಿ ಬಾಧಿಸಹತ್ತಿದೆ. ಅಸ್ಪೃಶ್ಯತೆ ಮತ್ತು ಹಿಂದೂ ಮುಸಲ್ಮಾನ್ ಸಮಸ್ಯೆಗಳು ಈಗಾಗಲೇ ವಿರಾಡ್ರೂಪವನ್ನು ತಾಳಿ ನಾಡಿನ ಪ್ರಗತಿಗೆ ಕಂಟಕವಾಗಿ ಕುಳಿತಿವೆ. ಈಚೆಗೆ ಈ ಸಮಸ್ಯೆಗಳನ್ನು ಬಗೆಹರಿಸಲು ಅಷ್ಟಿಷ್ಟು ಪ್ರಯತ್ನ ನಡೆದಿದ್ದರೂ ಅವನ್ನು ಕಾರ್ಯತಃ ಕ್ಷೇಮದಾಯಕವಾಗಿಸುವಂಥ ಮನೋಧರ್ಮ ಜನತೆಯಲ್ಲಿ ಇನ್ನೂ ಮೂಡಬೇಕಾಗಿಯೇ ಇದೆ. ನಮ್ಮ ಹಿಂದಿನ ಪದ್ಧತಿಗಳನ್ನು ತಪ್ಪದೆ ನಡಸಿಕೊಂಡು ಬರಬೇಕೆಂಬ ಅಂಧ ಶ್ರದ್ಧೆಯೂ ಇದಕ್ಕೆ ಕಾರಣವೆನ್ನಬೇಕು. ಹಾಗೆ ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರದಲ್ಲಿ ಅರ್ಷೇಯವಾಗಿ ಬಂದ ಹಲವು ನಂಬಿಕೆಗಳು ನಮ್ಮ ಅನರ್ಥಕ್ಕೆಲ್ಲ ಕಾರಣವಾಗಿರುವ ಪಕ್ಷದಲ್ಲಿ ಅಂಥ ಅಂಧ ಶ್ರದ್ಧೆಗಳು ಅಗತ್ಯವಾಗಿ ಸಮಾಜದ ಕಟ್ಟಿನಿಂದ ದೂರವಾಗಬೇಕು.

ಇನ್ನು ನಮ್ಮ ಆರ್ಥಿಕ ಜೀವನವನ್ನು ಪರಿಶೀಲಿಸುವ: ನಮ್ಮದು ಮುಖ್ಯವಾಗಿ ವ್ಯವಸಾಯದ ನಾಡು; ಎಷ್ಟು ಚೆನ್ನಾಗಿ ವ್ಯವಸಾಯ ಮಾಡಿ ಹೆಚ್ಚಿಗೆ ಫಸಲು ಬೆಳೆಯುತ್ತೇವೋ, ಅಷ್ಟೂ ನಮ್ಮ ಆರ್ಥಿಕ ಸ್ಥಿತಿ ಉತ್ತಮಗೊಳ್ಳುತ್ತದೆ. ಆಧುನಿಕ ಪರಿಕರಣಗಳನ್ನುಪಯೋಗಿಸಿ ಬೆಳೆಯ ಉತ್ಪನ್ನವನ್ನು ಹೆಚ್ಚಿಸಿಕೊಳ್ಳುವ ಕಾರ್ಯಕ್ಕೆ ಆತಂಕಗಳು ಇಲ್ಲದೇ ಇಲ್ಲ; ಜನತೆಯ ಬಡತನ, ವಿದ್ಯಾ ವಿಹೀನತೆ, ಹಿಂದಿನದರಲ್ಲೇ ಹೆಚ್ಚಿನ ನಂಬಿಕೆ ಇಡುವ ಅಂಧ ಶ್ರದ್ಧೆ—ಇವು ಪ್ರಧಾನವಾದ ತೊಡಕುಗಳು. ಜೊತೆಗೆ, ಭೂಮಿಯೂ ಛಿದ್ರ ಛಿದ್ರವಾಗಿ ಹರಿದು ಅನೇಕರಿಗೆ ಸೇರಿಹೋಗಿದೆ: ದೊಡ್ಡ ಪ್ರಮಾಣದಲ್ಲಿ ಯಂತ್ರಗಳನ್ನಿಟ್ಟು ಕೆಲಸಮಾಡಲು ಅವಕಾಶವಿಲ್ಲ. ಮೇಲಿನ ಎಲ್ಲ ತೊಡಕುಗಳೂ ನಿವಾರಣೆಯಾದ ಹೊರತು ನಮ್ಮ ವ್ಯವಸಾಯ ಕ್ಷೇತ್ರದ ಉತ್ಪನ್ನ ಹೆಚ್ಚುವಂತಿಲ್ಲ. ಹಾಗೆಯೇ ಪ್ರಕೃತಿ ಸಂಪತ್ತನ್ನು ಲಾಭ

ದಾಯಕವಾಗಿ ಉಪಯೋಗಿಸಿಕೊಳ್ಳಲು ಸಾವಿರಗಟ್ಟಲೆಯಲ್ಲಿ ಉದ್ಯೋಗಗಳೂ ಬೆಳೆಯಬೇಕಾಗಿದೆ. ಆ ಮೂಲಕವೂ ನಾಡಿನ ಆರ್ಥಿಕ ಪ್ರಗತಿಯು ಸಾಧನೆಯಾಗಬಲ್ಲದು. ಈ ದೃಷ್ಟಿಯನ್ನು ನಮ್ಮ ಶಿಕ್ಷಣ ಸಂಸ್ಥೆಗಳು ತಮ್ಮ ಕಾರ್ಯಕ್ಷೇತ್ರಗಳಲ್ಲಿ ಪೋಷಿಸುವಂತಿರಬೇಕು.

ಜನಜೀವನದ ಈ ಎಲ್ಲ ಕುಂದುಕೊರತೆಗಳೂ ಮಾಯವಾದ ಹೊರತು ನಮ್ಮ ಪ್ರಗತಿಗೇ ಅವಕಾಶವಿಲ್ಲ. ಸಮಾಜದಲ್ಲಿ ಎಲ್ಲ ವ್ಯಕ್ತಿಗಳಿಗೂ ಸಮಾನತೆಯಿಂದ ಬಾಳುವಂಥ ಅವಕಾಶ ಕಲ್ಪನೆಯಾಗಬೇಕು. ಅಂದು, ಎಲ್ಲರೂ ಒಬ್ಬ ತಾಯಿಮಕ್ಕಳು ಎಂಬ ಸದ್ಭಾವನೆ ಬೆಳೆದು, ಮಧುರ ಬಾಂಧವ್ಯ ಮೂಡೀತು; ಒಗ್ಗಟ್ಟಿನಿಂದ ನಾಡೂ ಮುಂದುವರಿದೀತು. ಸಮಾಜದಲ್ಲಿ ಅಂದಂದು ಒದಗುತ್ತಿರುವ ದುರಂತಗಳೂ ನಿಂತಾವು; ಅಂಥ ಆಚರಣೆಗಳನ್ನು ಜಾರಿಗೆ ತರುವುದನ್ನು ವಿರೋಧಿಸತಕ್ಕ ವ್ಯಕ್ತಿಗಳೂ ಸಮಾಜದಲ್ಲಿದ್ದಾರೆ. ಅಂಥವರು ತಮ್ಮ ಮನೋಭಾವವನ್ನು ಬದಲಾಯಿಸಿಕೊಂಡು ನಮ್ಮ ಪುರೋಭಿವೃದ್ಧಿಗೆ ನೆರವಾಗತಕ್ಕ ಸಂಪ್ರದಾಯಗಳನ್ನು ನೂತನವಾಗಿ ಆಚರಣೆಗೆ ತರಲು ಅವಕಾಶವೀಯಬೇಕು. ಆ ಮಾರ್ಗವಾಗಿ ಶಿಕ್ಷಣ ಸಂಸ್ಥೆಗಳೂ, ಸಮಾಜವೂ, ಸರ್ಕಾರವೂ ದುಡಿಯಬೇಕು.

ಈಗಿರುವ ನಮ್ಮ ಶಿಕ್ಷಣ ಪದ್ಧತಿ ರೂಢಮೂಲವಾಗಿ ಬಂದ ಜನಜೀವನದ ಹಲವು ನ್ಯೂನತೆಗಳನ್ನು ಕಿತ್ತೊಗೆಯಲು ಗಣನೀಯವಾದ ಸೇವೆಯನ್ನು ಸಲ್ಲಿಸಿದೆಯೆಂದು ಹೇಳುವಂತಿಲ್ಲ. ಈ ಶಿಕ್ಷಣ ಪದ್ಧತಿ ಪರದೇಶದಿಂದ ಬಂದು, ರಾಜಕೀಯ ಕಾರಣಗಳಿಗಾಗಿ ಇಲ್ಲಿ ತಳವೂರಿ ನಿಂತಿದೆ; ಅದು ನಮ್ಮ ಜನತೆಗೊಪ್ಪುವ ಮಾರ್ಗದಲ್ಲಿ ಪ್ರಗತಿ ಸಾಧಿಸುವುದಾದರೂ ಹೇಗೆ? ಮೊದಲು, ಇಲ್ಲಿ ಅದು ಆರಂಭವಾದುದು ಇಂಗ್ಲೀಷರ ಆಡಳಿತಕ್ಕನುಕೂಲಿಸುವಂತೆ ಇಂಗ್ಲೀಷು ಬಲ್ಲ ಕರಣಿಕರನ್ನು ಸೃಷ್ಟಿಸುವುದಕ್ಕೆ ಮಾತ್ರ. ಅಂಥ ಉದ್ದೇಶದಿಂದ ತಳವೂರಿದ ಶಿಕ್ಷಣ ಪದ್ಧತಿಯಲ್ಲಿ ನಮ್ಮ ನಾಡಿನ ಪ್ರಗತಿ ಸಾಧಿಸತಕ್ಕ ಶಿಕ್ಷಣತತ್ತ್ವ ಹೇಗೆ ತಾನೆ ಪ್ರತಿಬಿಂಬಿಸೀತು? ಕರಣಿಕರ ಆವಶ್ಯಕತೆಗಿದ್ದ ಅಂದಿನ ಸನ್ನಿವೇಶ ಈ ದಿನ ಇಲ್ಲ. ನಮ್ಮ ಶಿಕ್ಷಣ ಇಂದು ಸಾಧಿಸಬೇಕಾಗಿರುವುದು ಕೇವಲ ಕರಣಿಕರ ತಯಾರಿಯಲ್ಲ: ನಾಡಿನ ಅಖಂಡ ಪ್ರಗತಿ. ಹಾಗಿದ್ದರೂ ಆದಿಯಲ್ಲಿ ಆರಂಭವಾದ ಶಿಕ್ಷಣ ಪದ್ಧತಿ

ಇನ್ನೂ ನಡೆದುಬರುತ್ತಿರುವುದು ಆಶ್ಚರ್ಯವೆನಿಸುತ್ತದೆ. ಆದ್ದರಿಂದಲೇ ನಮ್ಮ ಸಮಾಜದ ಕುಂದುಕೊರತೆಗಳನ್ನು ನೀಗಿ, ಪರಿಷ್ಕರಣಗೊಳಿಸಿ, ನಾಡನ್ನು ಮುಂದುವರಿಸಲು ಅದು ಅಶಕ್ತವಾಗಿದೆ. ಶಿಕ್ಷಣದ ಇಂದಿನ ಗುರಿಯಾದರೂ ವಿದ್ಯಾರ್ಥಿಗಳನ್ನು ಪರೀಕ್ಷೆಗಳಲ್ಲಿ ಕಡೆಹಾಯಿಸುವುದು ಮಾತ್ರ. ಅಲ್ಲಿ ಬೋಧಿಸುವ ವಿಷಯಕ್ಕೂ ನಮ್ಮ ಜೀವನದಲ್ಲಿ ಕಂಡುಬರುವ ಸಮಸ್ಯೆಗಳಿಗೂ ಸಂಬಂಧವೇ ಇಲ್ಲ. ಬೋಧನ ಕ್ರಮವಾದರೊ, ಕೇವಲ ಕಂಠಪಾಠ ಮಾಡಿಸಿ ಪರೀಕ್ಷೆಯಲ್ಲಿ ಹೇಳಿಸುವಂಥದು. ಇವೆಲ್ಲದರ ಫಲವಾಗಿ ನಮ್ಮ ಮಕ್ಕಳು ಶಿಕ್ಷಣವೆಂದರೆ 'ಉರು ಹೊಡೆಯುವ ಕಾರ್ಯ' ಎಂದು ಭಾವಿಸಿದ್ದರೆ ಆಶ್ಚರ್ಯವೆನಿಸಲಾರದು.

ನಮ್ಮ ಶಿಕ್ಷಣದ ಪಠ್ಯ ಭಾಗ, ಬೋಧಿಸುವ ಕ್ರಮ ಮತ್ತು ದೃಷ್ಟಿಧ್ಯೇಯಗಳು ಈ ರೀತಿಯಿರುವಾಗ ಮಕ್ಕಳು ಸಮಾಜ ಜೀವನಕ್ಕೆ ಸಿದ್ಧವಾಗುವುದು ಹೇಗೆ? ಇಂದಿನ ಜೀವನದ ಸ್ಥಿತಿಗತಿಗಳೂ ಸಮಾಜ ಸಮಸ್ಯೆಗಳೂ ಶಾಲೆಯಲ್ಲೂ ಬರುವಂತಾಗಿ ಅವುಗಳ ನಿವಾರಣೋಪಾಯವನ್ನು ಮಕ್ಕಳು ಆಚರಿಸಿ ಕಲಿಯುವಂತಾದರೆ ಮಾತ್ರ ನಮ್ಮ ಶಿಕ್ಷಣ ಫಲಕಾರಿಯಾದೀತು. ಜನತೆಯ ಕಲ್ಯಾಣ ಸಾಧಿಸಲು ಯತ್ನಿಸುತ್ತಿರುವ ಎಲ್ಲ ಭಾರತೀಯರೂ ಶಿಕ್ಷಣಕ್ಕೂ ಜೀವನಕ್ಕೂ ಅಂಥ ಸಂಬಂಧವನ್ನು ಕಲ್ಪಿಸಲು ಯತ್ನಿಸುವುದು ಇಂದು ಅನಿವಾರ್ಯವೆನಿಸಿದೆ. ಹಾಗೆ ಜನಜೀವನ ಶಿಕ್ಷಣ ರಂಗದಲ್ಲಿ ಪ್ರತಿಬಿಂಬಿಸುವಂತೆ ಮಾಡುವಾಗ ಮೂರು ಮುಖ್ಯಾಂಶಗಳನ್ನು ನಾವು ಗಮನದಲ್ಲಿಡಬೇಕು. ಮೊದಲನೆಯದಾಗಿ, ಶಿಕ್ಷಣ ಕಾರ್ಯದಲ್ಲಿ ಮಕ್ಕಳಿಗೆ ಪ್ರಧಾನ ಸ್ಥಾನವಿರಬೇಕು. ಅವರಲ್ಲಿರುವ ಮಹಾ ಶಕ್ತಿಗಳನ್ನು ಅರಿತು ಅವನ್ನು ಬೆಳಸಲು ಶಿಕ್ಷಕರು ಆವಶ್ಯಕವೆನಿಸುವ ಮನಶ್ಶಾಸ್ತ್ರ ಜ್ಞಾನವನ್ನು ಪರಿಚಯಮಾಡಿಕೊಳ್ಳಬೇಕು. ಎರಡನೆಯದಾಗಿ, ಶಾಲೆಗಳು ಪರೀಕ್ಷೆಗಳಲ್ಲಿ ಕಡೆಹಾಯಿಸುವ ಸ್ಥಳಗಳೆಂಬ ಸಂಕುಚಿತ ದೃಷ್ಟಿ ಮಾಯವಾಗಿ, ಅವು ಪುಟ್ಟ ಸಮಾಜಗಳೆಂಬ ಭಾವನೆ ಬೆಳೆಯಬೇಕು. ನಮ್ಮ ಜನಜೀವನದ ಸಮಸ್ಯೆಗಳು ಇತ್ಯರ್ಥಪಡುವ ಸನ್ನಿವೇಶ ಅಲ್ಲಿ ರಚನೆಯಾಗಬೇಕು. ಮಕ್ಕಳು ಶಾಲೆಯ ಕಾರ್ಯದಲ್ಲಿ ಆಸಕ್ತಿ ವಹಿಸುವಂತೆ ಅದು ರೂಪುಗೊಳ್ಳಬೇಕು. ಕೇವಲ ಜ್ಞಾನಾರ್ಜನೆಯೇ ಹೆಗ್ಗುರಿಯೆಂಬ ಭಾವನೆಯೂ ಕೊನೆಗಾಣ

ಬೇಕು. ಕಂಠಪಾಠದ ಮೂಲಕ ಯಾಂತ್ರಿಕವಾಗಿ ಯಾವುದೋ ವಿಷಯವನ್ನು ಹೃದ್ಗತಮಾಡಿಸುವ ಶಿಕ್ಷಣಕ್ರಮ ತಪ್ಪಿ, ಬಾಲಕ ಬಾಲಕಿಯರು ತಮ್ಮ ಚಟುವಟಿಕೆಯ ಮೂಲಕ ಸ್ವತಃ ಅರಿತುಕೊಳ್ಳಲು ನೆರವಾಗುವಂಥ ಸನ್ನಿವೇಶಗಳನ್ನು ರಚಿಸಬೇಕು. ಉತ್ಸಾಹದಿಂದ ಎದುರು ಬರುವ ಸಮಸ್ಯೆಗಳನ್ನು ಪ್ರಯತ್ನಪೂರ್ವಕವಾಗಿ ಬಿಡಿಸಿಕೊಂಡು ಮುಂದಿನ ಸಮಾಜ ಜೀವನಕ್ಕೆ ಸಿದ್ಧತೆಯನ್ನು ಪಡೆಯಬೇಕು. ಕೇವಲ ಜ್ಞಾನಾರ್ಜನೆಯೇ ಮಹೋದ್ದೇಶವೆನ್ನದೆ ಅವರ ಭಾವಜೀವನವನ್ನೂ ಉಚಿತವೆನಿಸುವ ಮಾರ್ಗದಲ್ಲಿ ಬೆಳಸಿ, ಪಳಗಿಸಬೇಕು. ನಮ್ಮ ಇಂದಿನ ಶಿಕ್ಷಣರಂಗ ಮಕ್ಕಳ ಮಾನಸ ಪ್ರವೃತ್ತಿಯನ್ನು ತಿದ್ದಿ, ವ್ಯಕ್ತಿಗೂ ಸಮಾಜಕ್ಕೂ ಹಿತವೆನಿಸುವಂತೆ ಭಾವಜೀವನವನ್ನು ಬೆಳಸುವ ಕಾರ್ಯದಲ್ಲಿ ವಿಮುಖವಾಗಿದೆ. ಅದರಿಂದಲೇ ನಮ್ಮ ಮಕ್ಕಳು ಹೇಳುವುದೇ ಒಂದು, ಮಾಡುವುದೇ ಒಂದು; ಯೋಚಿಸುವುದೇ ಒಂದು, ಆಚರಿಸುವುದು ಇನ್ನೊಂದು. ಅವರ ಭಾವನೆಗೂ ಕ್ರಿಯೆಗೂ ಭಿನ್ನತೆ ತಲೆದೋರುತ್ತಿದೆ. ಸದ್ಭಾವನೆಗಳಿದ್ದರೂ ಕ್ರಿಯೆಯಲ್ಲಿ ಯಥಾವತ್ತಾಗಿ ರೂಪುಗೊಳ್ಳಲಾರದೆ ವಿಮುಖವಾಗುತ್ತವೆ. ಎಂದರೆ, ಅವರು ಆಡುವ ಶೂರರಾಗುತ್ತಾರೆಯೇ ಹೊರತು ಮಾಡುವ ಶೂರರಾಗುತ್ತಿಲ್ಲ. ಸಮಾಜ ಹಿತವನ್ನು ಯೋಚಿಸುವುದರ ಜೊತೆಗೆ ಅದರಂತೆ ಮಾಡಲೂ ಅವರಿಗೆ ಶಕ್ತಿಸಾಮರ್ಥ್ಯಗಳನ್ನೂ ಆತ್ಮಸಂಯಮವನ್ನೂ ಕೊಡಬೇಕಾಗಿದೆ. ದೊಡ್ಡವರ ಭಾವನೆಗಳನ್ನೂ ದೃಷ್ಟಿಧ್ಯೇಯಗಳನ್ನೂ ಬದಲಾಯಿಸುವುದು ಕಷ್ಟ. ಮಕ್ಕಳಲ್ಲಾದರೆ ಅವಿನ್ನೂ ಎಳವೆಯಲ್ಲಿರುವುದರಿಂದ ಸುಲಭವಾಗಿ ಮಾರ್ಪಡಿಸಬಹುದು. ಆಗ ಸಮಾಜ ಹಿತವೆನಿಸುವ ಸದ್ಭಾವನೆಗಳು ಮೂಡಿ ಮೊಳೆಯುವಂತೆ ಮಾಡಬೇಕು. ಮಕ್ಕಳು ಶಾಲೆಯೇ ಒಂದು ಸಮಾಜವೆಂದು ಭಾವಿಸುವಂತಾದರೆ ಮಾತ್ರ ಎದುರು ಬರುವ ಸಮಸ್ಯೆಗಳು ನಿಜವಾದ ಜೀವನದ ಸಮಸ್ಯೆಗಳೆಂದು ತಿಳಿದು ಉತ್ಸಾಹದಿಂದ ಬಿಡಿಸಿಕೊಳ್ಳಲು ಯತ್ನಿಸುತ್ತಾರೆ. ಸಮಾಜದ ಸುಖಶಾಂತಿಗೆ ಅನಿವಾರ್ಯವೆನಿಸುವ ಸದ್ಭಾವನೆಗಳೂ ವಿಶಾಲ ಹೃದಯವೂ ತಾವಾಗಿ ಮೂಡುತ್ತವೆ. ಅಂಥ ಮಕ್ಕಳು ಮುಂದೆ ನಿಜವಾದ ದೇಶಸೇವಕರಾಗುತ್ತಾರೆ; ಅವರ ಮುಂದಿನ ಜೀವನವೂ ಸಾರ್ಥಕವೆನಿಸಿ ಸಮಾಜ ಹಿತವೂ ಸಾಧನೆಯಾಗುತ್ತದೆ.

**ಶಿಕ್ಷಣರಂಗದ ನಾಲ್ಕು ತತ್ತ್ವದೃಷ್ಟಿಗಳು:** ಮೇಲೆ ಹೇಳಿದಂತೆ ನಮ್ಮ ಜೀವನತತ್ತ್ವ ಪರಿಷ್ಕರಣಗೊಂಡು ನಮ್ಮ ಮುಂದಿನ ಶಿಕ್ಷಣರಂಗದ ದೃಷ್ಟಿಧ್ಯೇಯಗಳನ್ನು ರೂಪಿಸಬೇಕು. ಆ ಮೂಲಕ ಭವಿಷ್ಯ ಭಾರತದ ಜೀವನಪ್ರಗತಿಯು ಮತ್ತು ಪುರೋಭಿವೃದ್ಧಿಯ ಸಾಧನೆಯಾಗಬೇಕಾಗಿದೆ. ಈ ಸಂದರ್ಭದಲ್ಲಿ ಕೇವಲ ಶಿಕ್ಷಣರಂಗಕ್ಕೆಂವೇ ಮೀಸಲಾಗಿರುವ ಹಲವು ತತ್ತ್ವ ದೃಷ್ಟಿಗಳನ್ನೂ ನಾವು ಪರಿಚಯಮಾಡಿಕೊಳ್ಳುವುದು ಉಚಿತವೆನಿಸುತ್ತದೆ. ಅವುಗಳಲ್ಲಿ ಪ್ರಧಾನವೆನಿಸುವ ನಾಲ್ಕು ದೃಷ್ಟಿಗಳನ್ನು ಕೆಳಗೆ ವಿವರಿಸಲಾಗಿದೆ.

**೧. ಆದರ್ಶ ತತ್ತ್ವದೃಷ್ಟಿ:** ಪ್ಲೇಟೊ, ಕೊಮಿನಿಯಸ್, ಹರ್ಬಾರ್ಟ್ ಮುಂತಾದ ತತ್ತ್ವಜ್ಞಾನಿಗಳು ಶಿಕ್ಷಣದಲ್ಲಿ ಆಧ್ಯಾತ್ಮ ಭಾವನೆಗೂ ಆದರ್ಶ ಜ್ಞಾನಾರ್ಜನೆಗೂ ಪ್ರಾಧಾನ್ಯವನ್ನು ಕೊಟ್ಟು ಆ ಮೂಲಕವೇ ಪರಮಾರ್ಥ ಸಾಧನೆಯಾಗಬೇಕೆಂದು ಪ್ರತಿಪಾದಿಸಿರುವರು. ಆದರೆ ಆ ಭಾವನೆಗಳನ್ನೂ ಜ್ಞಾನವನ್ನೂ ಕಾರ್ಯರೂಪಕ್ಕೆ ತರಲು ಆವಶ್ಯಕವೆನಿಸುವ ವ್ಯಕ್ತಿಯ ಕಡೆ ಗಮನವನ್ನೇ ಕೊಟ್ಟಿಲ್ಲ. ಕೊಮಿನಿಯಸ್ಸನು 'ಮಾನವನಿಗೆ ದೈವಿಕ ಭಾವನೆಯೂ, ಆಧ್ಯಾತ್ಮ ಚಿಂತನೆಯೂ, ಸಮಾಜ ಪರಿಜ್ಞಾನವೂ ಶಿಕ್ಷಣದಿಂದ ದೊರೆಯುವಂತಿರಬೇಕು' ಎಂದು ಪ್ರತಿಪಾದಿಸಿರುವನು. ಆ ಮೂಲಕ ಮಾನವನು ಅಧ್ಯಾತ್ಮ ಸಾಧನೆಮಾಡಿ, ಪರವಸ್ತುವನ್ನು ದರ್ಶಿಸಿ, ಜೀವನ್ಮುಕ್ತ ನಾಗುವುದೇ ಜೀವನದ ಧ್ಯೇಯವೆಂದೂ ಹೇಳಿರುವನು. ಹರ್ಬಾರ್ಟನು ನೈತಿಕ ದೃಷ್ಟಿಯ ಬೆಳವಣಿಗೆಗಾಗಿಯೇ ಶಿಕ್ಷಣವೆಂದು ಭಾವಿಸುತ್ತಾನೆ. ಆ ಕಾರ್ಯ ಸಾಧಿಸಲು ಸಾಹಿತ್ಯ ಇತಿಹಾಸ ಮುಂತಾದವನ್ನು ಬೋಧಿಸುವುದು ಅನುಕೂಲವೆಂದೂ ಅಭಿಪ್ರಾಯಪಡುತ್ತಾನೆ. ಇವನಂತೆ ಫ್ರೊಬೆಲ್ಲನು ಜ್ಞಾನಕ್ಕೇ ಪ್ರಾಧಾನ್ಯತೆ ಕೊಟ್ಟು ಅದೇ ಶಿಕ್ಷಣದ ಗುರಿಯೆಂದು ವಾದಿಸಿರುವನು. ಎಲ್ಲ ಆದರ್ಶ ಜ್ಞಾನವಾದಿಗಳೂ ದೈವಿಕ ಭಾವನೆಯ ಆದರ್ಶದಿಂದ ಪ್ರೇರಿತರಾಗಿ ಜ್ಞಾನಾರ್ಜನೆಗೂ ಭಾವನೆಯ ಬೆಳವಣಿಗೆಗೂ ಪ್ರಾಧಾನ್ಯತೆಯನ್ನು ಕೊಟ್ಟಿದ್ದರು.

**೨. ನಿಸರ್ಗ ತತ್ತ್ವದೃಷ್ಟಿ:** ಭಾವ ಪ್ರಧಾನವಾದಿಗಳು ಆಧ್ಯಾತ್ಮಿಕ ಜ್ಞಾನಾರ್ಜನೆಗೆ ಹೆಚ್ಚಿನ ಸ್ಥಾನ ಕೊಟ್ಟಿದ್ದರೆ, ನಿಸರ್ಗತತ್ತ್ವವಾದಿಗಳು ಲೌಕಿಕಕ್ಕೆ ಹೆಚ್ಚಿನ ಸ್ಥಾನ ಕೊಟ್ಟರು. ಪಾರಮಾರ್ಥಿಕ ಜ್ಞಾನಸಾಧನೆಯ ಮೂಲಕ

ಸತ್ಯದರ್ಶನ ಮಾಡುವುದನ್ನೊಪ್ಪದೆ ಲೌಕಿಕದಲ್ಲೇ ಸತ್ಯದರ್ಶನ ಮಾಡುವುದು ಶಿಕ್ಷಣದ ಉದ್ದೇಶವೆಂದು ಸಾರಿದರು. ವಸ್ತುಗಳ ಪರಿಚಯುವನ್ನು ವಿಜ್ಞಾನ ದೃಷ್ಟಿಯಿಂದ ಪಡೆಯಬೇಕೇಂಬುದೇ ಅವರ್ ವಾದ. ಅವರ ತತ್ವ ದೃಷ್ಟಿಯಿಂದ ಶಿಕ್ಷಣರಂಗದಲ್ಲಿ ವಿಜ್ಞಾನಕ್ಕೆ, ಹಾಗೂ ನಿಸರ್ಗ ವಿಜ್ಞಾನಕ್ಕೆ ಹೆಚ್ಚಿನ ಪುರಸ್ಕಾರ ದೊರೆಯಿತು. ಇವರಲ್ಲಿ ಅರಿಸ್ಟಾಟಲ್, ಕಾರ್ಲ್ ಮಾರ್ಕ್ಸ್ ಮತ್ತು ಹರ್ಬರ್ಟ್ ಸ್ಪೆನ್ಸರ್—ಇವರ ಹೆಸರುಗಳನ್ನು ಉಲ್ಲೇಖಿಸಬಹುದು. ಸ್ಪೆನ್ಸರನು ಹೇಳುವಂತೆ 'ಶಿಕ್ಷಣದ ಉದ್ದೇಶ ಬರೀ ಜ್ಞಾನಾರ್ಜನೆಯಲ್ಲ—ಉಪಯುಕ್ತವಾದ ಜ್ಞಾನಾರ್ಜನೆ. ಅಂಥ ಉಪಯುಕ್ತ ಜ್ಞಾನಾರ್ಜನೆಯೆಂದರೆ, ದೇಹರಕ್ಷಣೆಗೆ ಅನುಕೂಲಿಸುವ ಜೀವಶಾಸ್ತ್ರ, ಮಾನವ ಶಾರೀರಶಾಸ್ತ್ರ—ಸಂತಾನ ರಕ್ಷಣೆಗೆ ಅನುಕೂಲಿಸುವಂಥ ಶಿಶು ಸಂರಕ್ಷಣಾ ವಿಜ್ಞಾನವೂ ಮನಶ್ಶಾಸ್ತ್ರಜ್ಞಾನವೂ ಆವಶ್ಯಕ; ಜೀವನೋಪಾಯಕ್ಕೆ ನೆರವಾಗುವ ವೃತ್ತಿ ಶಿಕ್ಷಣವೂ ಬೇಕು; ಜೊತೆಗೆ, ಸತ್ಪ್ರಜಾ ಜೀವನಕ್ಕೆ ಸಿದ್ಧಪಡಿಸುವ ಸಮಾಜ ವಿಜ್ಞಾನವೂ ಆವಶ್ಯಕ. ಎಂದರೆ, ಮಾನವನಿಗೆ ಉಪಯೋಗವೆನಿಸುವ ಜ್ಞಾನ ವಿಜ್ಞಾನ!' ಅವನ ಪ್ರಯತ್ನದ ಫಲವಾಗಿಯೇ ಇಂಗ್ಲೆಂಡಿನ ಶಾಲೆಗಳಲ್ಲಿ ವಿಜ್ಞಾನ ಬೋಧನೆಗೆ ಪ್ರಧಾನ ಸ್ಥಾನ ದೊರಕಿದ್ದು.

೩. **ಉಪಯುಕ್ತ ತತ್ವದೃಷ್ಟಿ** : ಮೇಲೆ ವಿವರಿಸಿದ ಎರಡು ತತ್ವ ದೃಷ್ಟಿಗಳಿಗೂ ಮಧ್ಯಸ್ಥವಾದುದು ಉಪಯುಕ್ತ ತತ್ವದೃಷ್ಟಿ. ಕೇವಲ ಆಧ್ಯಾತ್ಮಿಕವನ್ನಾಗಲಿ, ಐಹಿಕವನ್ನಾಗಲಿ ಪ್ರಧಾನ ಉದ್ದೇಶವನ್ನಾಗಿ ಮಾಡಿಕೊಳ್ಳದೆ, ಉಪಯುಕ್ತವೆನಿಸುವ ಎಲ್ಲಕ್ಕೂ ಸಮಾನ ಸ್ಥಾನವನ್ನು ಈ ತತ್ವವಾದಿಗಳು ಕೊಡುತ್ತಾರೆ. ಕೇವಲ ವಿಜ್ಞಾನವಾಗಲಿ, ಆಧ್ಯಾತ್ಮ ಜ್ಞಾನವಾಗಲಿ ಜೀವನದ ಎಲ್ಲ ಸಮಸ್ಯೆಗಳನ್ನೂ ಬಿಡಿಸಲಾರದು: ಅವೆರಡರ ಸಮನ್ವಯವೂ ಅಗತ್ಯ. ಮಗುವಿನ ವ್ಯಕ್ತಿತ್ವಕ್ಕೆ ಪ್ರಾಧಾನ್ಯತೆಯನ್ನು ಕೊಟ್ಟು ಇಹಲೋಕದ ಬಾಳಿಗೆ ಅನುಕೂಲಿಸುವಂಥ ಎಲ್ಲ ಶಿಕ್ಷಣದ ಕಡೆಗೂ ಈ ದೃಷ್ಟಿ ಗಮನ ಕೊಡುತ್ತದೆ. ಮೇಲೆ ವಿವರಿಸಿದ ಇನ್ನೆರಡು ತತ್ವದೃಷ್ಟಿಗಳಿಗಿಂತ ಈ ದೃಷ್ಟಿ ಆಧುನಿಕ ಶಿಕ್ಷಣರಂಗದಲ್ಲಿ ಕಾರ್ಯತಃ ಫಲಪ್ರದವಾಗಬಲ್ಲದು. ನೈತಿಕ ಜ್ಞಾನದ ಬೆಳವಣಿಗೆಗೂ ಸಮಾನ ಸ್ಥಾನವನ್ನು ಇದರಲ್ಲಿ ಕೊಟ್ಟಿದೆ. ಒಟ್ಟಿನಲ್ಲಿ ಮಾನವನ ಸರ್ವತೋಮುಖವಾದ ಸುಖಸಾಧನೆಗೆ ಸಾಧುವೆನಿಸುವ

ಎಲ್ಲ ಶಿಕ್ಷಣರಂಗಕ್ಕೂ ಈ ತತ್ತ್ವದೃಷ್ಟಿ ಆದರ್ಶವೂ ಉಪಯುಕ್ತವೂ ಆದುದು. ಇದನ್ನು ಪ್ರತಿಪಾದಿಸುವವರಲ್ಲಿ ವಿಲಿಯಂ ಜೇಮ್ಸ್ ಮತ್ತು ಜಾನ್ ಡ್ಯೂಯಿ ಪ್ರಮುಖರು. ವ್ಯಕ್ತಿಯ ಮತ್ತು ಸಮಾಜದ ಹಿತಸಾಧನೆಯೇ ಅವರ ಉದ್ದೇಶ: ವ್ಯಕ್ತಿಗೆ ಹಿತವಾಗುವಂತೆ ಅವನ ಸರ್ವತೋಮುಖವಾದ ಶಿಕ್ಷಣವಾಗಬೇಕು; ಈ ಎರಡನೆಯ ಗುರಿಯಿಂದ ವೃತ್ತಿಶಿಕ್ಷಣವೂ ಅಗತ್ಯವೆಂದು ಅವರು ವಾದಿಸುವರು. ಡ್ಯೂಯಿಯವರು ಹೇಳುವಂತೆ 'ಮಗು ಬೆಳೆಯುತ್ತಿರುವ, ಬದಲಾವಣೆ ಹೊಂದುತ್ತಿರುವ ವ್ಯಕ್ತಿ; ಆ ವ್ಯಕ್ತಿತ್ವದ ವಿಕಸನಕ್ಕೆ ಶಾಲೆಗಳು ನೆರವಾಗಬೇಕು. ಜೀವನದಲ್ಲಿ ಅಂಥ ಅನುಭವಗಳನ್ನು ಪಡೆಯುತ್ತಿರುವುದೇ ಶಿಕ್ಷಣ.' ಶಾಲೆಗಳು ಅವರ ಅಭಿಪ್ರಾಯದಲ್ಲಿ ಒಂದು ಪುಟ್ಟ ಸಮಾಜ. ವಯಸ್ಕರ ಸಮಾಜದ ಸಮಸ್ಯೆಗಳನ್ನೂ ಸನ್ನಿವೇಶಗಳನ್ನೂ ಸುಲಭವೂ ಸಮಂಜಸವೂ ಆದ ರೂಪದಲ್ಲಿ ಶಾಲೆಗಳಲ್ಲಿ ಅಳವಡಿಸಿ ಮಕ್ಕಳು ಸಮಾಜದಲ್ಲಿರುವಂತೆಯೇ ಭಾವಿಸುವಂತೆ ಮಾಡಬೇಕು. ಜೊತೆಗೆ, ಸಮಾಜದಲ್ಲಿ ಕಂಡುಬರುವ ನ್ಯೂನತೆಗಳನ್ನು ಹೋಗಲಾಡಿಸಿ ವಿಶಾಲ ಭಾವನೆ ಹುಟ್ಟುವಂತೆಯೂ, ಆ ಸಮಸ್ಯೆಗಳು ಕ್ರಮವಾಗಿ ಶಾಲೆಯ ಜೀವನದಲ್ಲಿ ಪರಿಚಯವಾಗುವಂತೆಯೂ ಮಾಡಬೇಕು. ಆ ಮೂಲಕ ಮಕ್ಕಳು ಮುಂದೆ ಬಾಳಬೇಕಾಗಿರುವ ಸಮಾಜದ ಎಲ್ಲ ಸಮಸ್ಯೆಗಳನ್ನೂ ಆಚರಿಸಿ ಬಿಡಿಸಿ ಅರಿತುಕೊಳ್ಳಲು ಸಹಾಯವಾಗುತ್ತದೆ. ಡ್ಯೂಯಿಯವರ ಈ ದೃಷ್ಟಿಯ ಆಧಾರದಮೇಲೆ ಅನೇಕ ನೂತನ ಶಿಕ್ಷಣ ಕ್ರಮಗಳು ಆಚರಣೆಗೆ ಬಂದಿವೆ.

**೪. ಕಾರ್ಯಕಾರಣ ತತ್ತ್ವದೃಷ್ಟಿ:** ಹಿಂದೆ ವಿವರಿಸಿದ ಮೂರು ತತ್ತ್ವದೃಷ್ಟಿಗಳೂ ಶಿಕ್ಷಣದ ಉದ್ದೇಶವನ್ನೂ ಶಿಕ್ಷಣದ ವಿಷಯವನ್ನೂ ತಿಳಿಸುತ್ತವೆಯೇ ಹೊರತು ಶಿಕ್ಷಣದ ಮಾರ್ಗವನ್ನು ಸೂಚಿಸುವುದಿಲ್ಲ. ಕಾರ್ಯಕಾರಣ ತತ್ತ್ವದೃಷ್ಟಿ ಮಕ್ಕಳ ಭಾವನೆಯ ಬೆಳವಣಿಗೆಯಾಗುವ ಕ್ರಮವನ್ನು ಸೂಚಿಸುತ್ತದೆ; ಎಂಥ ಸನ್ನಿವೇಶ ರಚನೆಗಳಿಂದ ಮಕ್ಕಳ ಮನಸ್ಸಿನಲ್ಲಿ ಎಂಥ ಭಾವನೆಗಳೂ ಅಭ್ಯಾಸಗಳೂ ಬೆಳೆಯುತ್ತವೆಂಬುದನ್ನು ವಿವರಿಸಲು ಯತ್ನಿಸುತ್ತದೆ. ನಾವು ಹೇಳುವ ವಿಷಯ ಎಷ್ಟು ಮುಖ್ಯವೋ ಹೇಳುವ ಕ್ರಮವೂ ಅಷ್ಟೇ ಮುಖ್ಯ. ಅದರಿಂದ ಈ ತತ್ತ್ವದೃಷ್ಟಿಯನ್ನೂ ಪ್ರಧಾನ

ವೆಂದು ಗಣಿಸಬೇಕಾಗಿದೆ. ಆದರೆ ಈ ತತ್ತ್ವದೃಷ್ಟಿ ಮಕ್ಕಳಿಗೆ ಎಂಥ ಜ್ಞಾನವನ್ನು ಕೊಡಬೇಕು, ಅದರ ಉದ್ದೇಶವೇನು ಎಂಬುದನ್ನು ನಿರ್ಧರಿಸುವ ಗೋಜಿಗೆ ಹೋಗುವುದಿಲ್ಲ; ಎಂದರೆ ಮಕ್ಕಳ ಮನಸ್ಸಿನ ರೀತಿಯನ್ನೂ ನಡವಳಿಕೆಯನ್ನೂ ಅನುಸರಿಸಿ ಕೊಡಬೇಕಾಗಿರುವ ಶಿಕ್ಷಣದ ಒಂದು ಕ್ರಮವೇ ಹೊರತು ನಿರ್ದಿಷ್ಟ ಜೀವನತತ್ತ್ವವಲ್ಲ. ಉಪಯುಕ್ತ ತತ್ತ್ವದೃಷ್ಟಿಯು ವ್ಯಕ್ತಿಯ ಮತ್ತು ಸಮಾಜದ ಹಿತವನ್ನು ಅನುಸರಿಸಿ ಕೊಡಬೇಕಾದ ಶಿಕ್ಷಣ ಯಾವುದೆಂದು ನಿರ್ಧರಿಸಿದರೆ, ಕಾರ್ಯಕಾರಣ ದೃಷ್ಟಿ ಆ ಶಿಕ್ಷಣವನ್ನು ಕೊಡುವ ಮಾರ್ಗವನ್ನು ಸೂಚಿಸುತ್ತದೆ. ಎಂದಮೇಲೆ ಎಲ್ಲ ಶಿಕ್ಷಕರಿಗೂ ಈ ಎರಡು ದೃಷ್ಟಿಗಳನ್ನೂ ಸಮನ್ವಯಗೊಳಿಸಿಕೊಂಡ ಒಂದು ಸಂಯುಕ್ತ ತತ್ತ್ವದೃಷ್ಟಿ ಫಲಪ್ರದವೂ ಅನಿವಾರ್ಯವೂ ಆಗಿದೆ. ಅಂಥ ಸಂಯುಕ್ತ ತತ್ತ್ವದೃಷ್ಟಿಯ ಆವಶ್ಯಕತೆಯನ್ನರಿತು, ಪರಿಚಯ ಮಾಡಿಕೊಂಡಂತೆ ಆಧುನಿಕ ಶಿಕ್ಷಣರಂಗದಲ್ಲಿ ಹಲವು ಮಹತ್ತರವಾದ ಮಾರ್ಪಾಡುಗಳಾಗುತ್ತಿವೆ: ಶಿಕ್ಷಣವನ್ನು ಉದ್ದೇಶಪೂರ್ವಕವಾದುದನ್ನಾಗಿ ಮಾಡಿ, ವಿಷಯದಲ್ಲಿ ಆಸಕ್ತಿ ಹುಟ್ಟಿಸಿ, ಸುಲಭವೂ ಯಶಸ್ವಿಯೂ ಆಗುವಂಥ ಬೋಧನಕ್ರಮ ಆ ಮೂಲಕ ನಮಗೆ ಅರಿವಾಗಿದೆ. ಶಾಲೆಗಳಲ್ಲಿ ಪ್ರಯೋಗ ಮಂದಿರಗಳನ್ನು ರಚಿಸಿ, ಮಕ್ಕಳು ಸ್ವತಃ ಪ್ರಯೋಗಗಳನ್ನು ಮಾಡಿ ವಿಷಯವನ್ನು ತಿಳಿದುಕೊಳ್ಳುವಂತೆ ಮಾಡುವುದೂ ಆರಂಭವಾಗಿದೆ. ಅವರ ನಡವಳಿಕೆಯನ್ನೂ ಮನೋಗುಣಗಳನ್ನೂ ರೂಪಿಸಲು ಸಹಾಯಕವೆನಿಸುವ ಮಾರ್ಗವನ್ನು ಕ್ರಿಯಾಕಾರಣ ತತ್ತ್ವದೃಷ್ಟಿ ತೋರಿಸುತ್ತದೆ. ಅವನ್ನು ಯಾವ ದೃಷ್ಟಿಯಲ್ಲಿ ರೂಪಿಸಬೇಕೆಂಬುದನ್ನು ಉಪಯುಕ್ತ ತತ್ತ್ವದೃಷ್ಟಿ ತೋರಿಸುತ್ತದೆ. ಇವೆರಡೂ ನಮ್ಮ ಶಿಕ್ಷಣ ಕ್ಷೇತ್ರದಲ್ಲಿ ಆಚರಣೆಗೆ ಬಂದರೆ ಮಕ್ಕಳ ಹುಟ್ಟುಗುಣಗಳನ್ನೂ ಅವುಗಳ ಸ್ವಭಾವವನ್ನೂ ತಿಳಿದು ಫಲಪ್ರದವಾದ ಸನ್ನಿವೇಶ ರಚನೆಯಿಂದ ಅವರ ವ್ಯಕ್ತಿತ್ವವನ್ನು ಬೆಳೆಸಬಹುದು. ಮಕ್ಕಳ ಹುಟ್ಟುಗುಣಗಳಲ್ಲಿ ಹಲವನ್ನು ತಿದ್ದಿ ಮಾರ್ಪಡಿಸಬೇಕು; ಮತ್ತೆ ಕೆಲವನ್ನು ಸಡಿಲಿಸಿ ಆ ಮಾನಸಶಕ್ತಿಯನ್ನು ಸಮಾಜ ಹಿತವೆನಿಸುವ ಮಾರ್ಗದಲ್ಲಿ ತಿರುಗಿಸಬೇಕು. ಶಾಲೆಯಲ್ಲಿ ಈ ಕಾರ್ಯ

ಸಾಧನೆಗೆ ಎಂಥ ಸನ್ನಿವೇಶ ರಚಿಸಬೇಕೆಂಬ ತಿಳಿವಳಿಕೆಯು ಕಾರ್ಯ ಕಾರಣ ತತ್ತ್ವದೃಷ್ಟಿಯಿಂದ ದೊರೆಯುತ್ತದೆ.

ಒಟ್ಟಿನಲ್ಲಿ ಎಲ್ಲ ಶಿಕ್ಷಣರಂಗಕ್ಕೂ ಮೇಲೆ ವಿವರಿಸಿದ ಸಂಯುಕ್ತ ತತ್ತ್ವದೃಷ್ಟಿ ಆವಶ್ಯಕ. ಒಂದೊಂದು ದೇಶದಲ್ಲೂ ಅದರೊಡನೆ ಆ ಜನಜೀವನದ ದೃಷ್ಟಿಧ್ಯೇಯಗಳು ಪ್ರತಿಬಿಂಬಿಸುವಂತೆ ಅದನ್ನು ಪೂರಣಮಾಡಿಕೊಳ್ಳಬೇಕು. ಅಂಥ ತತ್ತ್ವದೃಷ್ಟಿಯಲ್ಲಿ ಕಾರ್ಯಮುಖವಾಗಿರುವ ಶಿಕ್ಷಣ ಸಂಸ್ಥೆಗಳು ನಮ್ಮ ಜನಜೀವನದ ಸಮಸ್ಯೆಗಳನ್ನು ಆದರ್ಶವೆನಿಸುವಂತೆ ಬಿಡಿಸಿ, ಮಕ್ಕಳ ಎಳೆಯ ಹೃದಯಗಳ ಮೇಲೆ ಸತ್ಪರಿಣಾಮ ಹುಟ್ಟಿಸಬಹುದು. ಸ್ವಾರ್ಥಬುದ್ಧಿಯನ್ನು ಕಡಮೆ ಮಾಡಿ, ಮುಂದಿನ ಸಮಾಜದಲ್ಲಿ ಅವರು ಯಶಸ್ವಿಯಾಗಿ ಬಾಳುವ ಮತ್ತು ಸಮಾಜ ಹಿತವನ್ನು ಸಾಧಿಸುವ ಶಕ್ತಿಸಾಮರ್ಥ್ಯಗಳನ್ನು ನೀಡಬಹುದು. ಜಾತಿ, ಕುಲ, ಗೋತ್ರಗಳೆಂಬ ಭೇದ ಭಾವ ತೊಲಗಿ ವಿಶಾಲ ಭಾವನೆ ಅಂಕುರಿಸುವಂತೆ ಮಾಡಬಹುದು. ಆ ಮೂಲಕ ಭಾರತಭೂಮಿಯು ಪುರೋಭಿವೃದ್ಧಿಯ ಜೊತೆಗೆ ವಿಶ್ವದ ಕಲ್ಯಾಣವನ್ನೂ ಸಾಧಿಸಬಹುದು. ಅಂಥ ಭವ್ಯ ಭವಿಷ್ಯ ಮಾನವ ಲೋಕವೊಂದನ್ನು ನಿರ್ಮಿಸುವ ಕಾರ್ಯದಲ್ಲಿ ಉತ್ತಮ ಶಿಕ್ಷಣದೃಷ್ಟಿ ನಮಗೆ ಎಷ್ಟೊಂದು ನೆರವಾಗುತ್ತದೆಂಬುದು ತಾನಾಗಿಯೇ ಸ್ಪಷ್ಟಪಡುತ್ತದೆ.

ಇನ್ನು ಬೋಧನ ಕ್ರಮದ ವಿಷಯದಲ್ಲಿ ಒಂದೆರಡು ಮಾತು. ನಮ್ಮ ಶಿಕ್ಷಣರಂಗದ ತತ್ತ್ವದೃಷ್ಟಿ ಎಷ್ಟೇ ಸಾಧುವಾದ್ದಾದರೂ ಮಾರ್ಗ ಉಚಿತವಲ್ಲದಿದ್ದರೆ, ಅದು ಸಾಧನೆಯಾಗುವಂತೆಯೇ ಇಲ್ಲ. ಅದರಿಂದಲೇ ಆಧುನಿಕ ಕಾಲದಲ್ಲಿ ಮಕ್ಕಳ ಮನಸ್ಸಿನ ವ್ಯಾಪಾರವನ್ನು ತಿಳಿದು ಅದರ ಪರಿಚಯದಿಂದ ಶಿಕ್ಷಣಕ್ರಮವನ್ನು ಉತ್ತಮಪಡಿಸಲು ಹೊಸ ಹೊಸ ಪ್ರಯೋಗಗಳು ನಡೆಯುತ್ತಲೇ ಇವೆ. ಅಮೆರಿಕದಲ್ಲೂ ಇನ್ನಿತರ ಪಾಶ್ಚಾತ್ಯ ರಾಜ್ಯಗಳಲ್ಲೂ ಹಲವು ಫಲದಾಯಕವಾದ ಪ್ರಯೋಗಗಳು ನಡೆದು ಈಗಾಗಲೇ ಅಲ್ಲಲ್ಲಿ ಆಚರಣೆಗೂ ಬಂದಿವೆ. ಡಾಲ್ಟನ್ ಶಿಕ್ಷಣಕ್ರಮ, ಗೇರಿ ಶಿಕ್ಷಣ ಪದ್ಧತಿ, ಉದ್ಯಮ ಶಿಕ್ಷಣ ಪದ್ಧತಿ, ಮುಂತಾದ ನೂತನ ಮಾರ್ಗಗಳು ಶಿಕ್ಷಣರಂಗದಲ್ಲಿ ಹೊಸದೊಂದು ಯುಗವನ್ನೇ ಆರಂಭಿಸಿವೆ. ಆದರೆ ಭಾರತದಲ್ಲಿ ಅಷ್ಟೊಂದು ಪ್ರಯೋಗಗಳು ನಡೆದಿಲ್ಲ; ವಿದ್ಯಾಮಂದಿರ ಶಿಕ್ಷಣ, ವಾರ್ಧಾ ಶಿಕ್ಷಣ

ಯೋಜನೆ, ಮೂಲಶಿಕ್ಷಣ ಪದ್ಧತಿ—ಈ ಹಲವು ಕ್ರಮಗಳು ಆರಂಭವಾಗಿದ್ದರೂ ಇನ್ನೂ ಕಾರ್ಯಕ್ಷೇತ್ರದಲ್ಲಿ ಫಲಪ್ರದವಾಗುವಂತೆ ಆಚರಣೆಗೆ ಬಂದಿಲ್ಲ. ಭಾರತದಲ್ಲಿ ಪ್ರಯೋಗಗಳು ಶಿಕ್ಷಣರಂಗದಲ್ಲಿ ಅಷ್ಟಾಗಿ ನಡೆಯದಿರುವುದಕ್ಕೆ ಹಲವಾರು ಕಾರಣಗಳನ್ನು ಕೊಡಬಹುದು. ಅವುಗಳಲ್ಲಿ ಶಿಕ್ಷಣ ಶಾಖೆಯಲ್ಲೇ ಉತ್ತೇಜನವಿಲ್ಲದಿರುವುದೂ ಒಂದು. ಇನ್ನುಮೇಲಾದರೂ ಎಲ್ಲ ಶಿಕ್ಷಣ ಶಾಖೆಯವರೂ ಶಿಕ್ಷಕರಿಗೆ ಪ್ರಯೋಗ ನಡಸಲು ಎಲ್ಲ ಸಹಾಯ ಸಹಕಾರಗಳನ್ನೂ ನೀಡಿ ಉತ್ತೇಜನ ಕೊಡುವುದು ಅಗತ್ಯ. ನಮ್ಮ ಶಿಕ್ಷಣದ ದೃಷ್ಟಿಧ್ಯೇಯಗಳನ್ನು ನಾಡಿನ ಸುಸಂಸ್ಕೃತ ಮುಂದಾಳುಗಳೂ ಜನಜೀವನದ ಆವಶ್ಯಕತೆಗಳೂ ನಿರ್ಧರಿಸುವುದಾದರೆ, ಶಿಕ್ಷಣದ ಕ್ರಮವನ್ನು ಮಾತ್ರ ಶಿಕ್ಷಕರೇ ಅರಿತುಕೊಳ್ಳಬೇಕಾಗಿದೆ. ಅದರಿಂದ ಎಲ್ಲ ದೇಶದ ಶಿಕ್ಷಣ ಶಾಖೆಯವರೂ ಕೇವಲ ಪ್ರಯೋಗಗಳನ್ನು ನಡಸಲೋಸ್ಕರವೇ ಒಂದು ಶಾಖೆಯನ್ನು ನಿರಂತರವೂ ನಡಸಿಕೊಂಡು ಬರಬೇಕು. ಅವರಿಗೆ ನಾಡಿನ ಶಿಕ್ಷಣ ಸಮಸ್ಯೆಗಳ ಮೇಲೆ ಪ್ರಯೋಗ ನಡಸಿ ಉಚಿತವೆನಿಸುವ ನೂತನ ಪದ್ಧತಿಗಳನ್ನು ಆಚರಣೆಗೆ ತರಲು ಅವಕಾಶವೂ ಇರಬೇಕು. ಹಾಗೆ ಹೊಸ ಪ್ರಯೋಗಗಳನ್ನು ನಡಸಿ ನೂತನ ಕ್ರಮಗಳನ್ನು ಜಾರಿಗೆ ತರಬೇಕಾದವರು ಶಿಕ್ಷಕರು; ಅಂಥ ಶಿಕ್ಷಕರಿಗೆ ಹೆಚ್ಚಿನ ವಿರಾಮವನ್ನೂ ಸೌಲಭ್ಯವನ್ನೂ ಒದಗಿಸಿಕೊಟ್ಟು ಫಲಪ್ರದವಾದ ಪ್ರಯೋಗಗಳು ನಡೆಯಲು ನೆರವಾಗಬೇಕು. ವಿಶ್ವವಿದ್ಯಾನಿಲಯದವರೂ ಆ ಕಡೆ ಗಮನಕೊಟ್ಟು ನೂತನ ಶಿಕ್ಷಣ ಪ್ರಯೋಗಗಳು ನಡೆಯುವಂತೆ ಸಹಾಯ ನೀಡಬೇಕು. ಸಾಮಾನ್ಯವಾಗಿ ಹೊಸ ಶಿಕ್ಷಣ ಕ್ರಮಗಳೆಲ್ಲ ಮಕ್ಕಳ ಮನಶ್ಶಾಸ್ತ್ರದ ಪರಿಚಯದ ಆಧಾರದಮೇಲೇ ನಡೆಯಬೇಕಾಗಿರುವುದರಿಂದ ವಿಶ್ವವಿದ್ಯಾನಿಲಯದ ಮನಶ್ಶಾಸ್ತ್ರ ಶಾಖೆಗೂ ಶಿಕ್ಷಣ ಶಾಖೆಗೂ ಹೆಚ್ಚು ಸಂಪರ್ಕವಿದ್ದು ಒಮ್ಮುಖವಾಗಿ ಪ್ರಯೋಗಗಳನ್ನು ನಡಸಲು ಅವಕಾಶ ಇರಬೇಕು. ಎಷ್ಟು ಬೇಗ ನಮ್ಮ ಸಮಾಜವೂ, ಸರ್ಕಾರವೂ, ಶಿಕ್ಷಕರೂ ಈ ಆವಶ್ಯಕತೆಯನ್ನು ಅರಿತುಕೊಂಡು ಫಲಪ್ರದವಾದ ಕಾರ್ಯವನ್ನು ಆರಂಭಿಸುವರೋ ಅಷ್ಟು ಬೇಗ ನಮ್ಮ ಶಿಕ್ಷಣ ಕ್ರಮದಲ್ಲಿ ಪ್ರಗತಿಯಾಗಿ ಆ ಮೂಲಕ ಜನತೆಯ ಪುರೋಭಿವೃದ್ಧಿ ಸಾಧನೆಯಾದೀತು.

*

# ೩. ಶಿಕ್ಷಣದ ಗುರಿ

ಜನಾಂಗದ ಸರ್ವತೋಮುಖವಾದ ಅಭಿವೃದ್ಧಿಯೇ ಶಿಕ್ಷಣದ ಗುರಿ. ಸಮಾಜ ಶಿಕ್ಷಣದಿಂದ ಕ್ರಮ ಕ್ರಮವಾಗಿ ಉತ್ತಮಗೊಳ್ಳುತ್ತಾ ಸಾಗಬೇಕು. ಉತ್ತಮ ಸಮಾಜವೆಂದರೆ, ಒಬ್ಬೊಬ್ಬ ವ್ಯಕ್ತಿಯ ಸ್ವಭಾವಾದಿ ಗುಣಗಳು ಉತ್ತಮಗೊಂಡು, ಅವನ ಶಕ್ತಿ ವಿಶೇಷಗಳು ಪರಿಪೂರ್ಣವಾಗಿ ಬೆಳೆದು ಅವೆರಡರ ಸಹಾಯದಿಂದ ಜನತೆಯ ಕಲ್ಯಾಣ ಸಾಧಿಸುವಂತಾಗಬೇಕು. ಎಲ್ಲ ವ್ಯಕ್ತಿಗಳೂ ಶಿಕ್ಷಣದಿಂದ ನಿರಂತರವೂ ಆತ್ಮ ಪ್ರಗತಿಗೇರುತ್ತಿರುವುದರಿಂದ ಇಡೀ ಸಮಾಜವೇ ಪ್ರಗತಿಪಥದಲ್ಲಿ ಹೆಜ್ಜೆಯಿಟ್ಟು ಸಾಗುವಂತಾಗುತ್ತದೆ. ಆ ಮೂಲಕ ಕಾಲಕ್ರಮದಲ್ಲಿ ಮಾನವಕುಲದ ಉತ್ತಮ ಪೀಳಿಗೆ ಉದಯವಾಗುತ್ತದೆ. ಹೀಗೆ ಮಾನವನ ಸ್ವಭಾವಾದಿ ಹುಟ್ಟುಗುಣಗಳು ಮಾರ್ಪಡಬಲ್ಲವೆಂಬ ಸತ್ಯಾಂಶವನ್ನು ಅವಲಂಬಿಸಿ ಶಿಕ್ಷಕರು ತಮ್ಮ ಕಾರ್ಯವನ್ನು ಆರಂಭಿಸಬೇಕು. ಹಾಗೆ ಪ್ರಯತ್ನಿಸುವಾಗ ತಮ್ಮ ಕಾರ್ಯದಿಂದ ಮಕ್ಕಳ ಮನಸ್ಸಿನ ಮತ್ತು ನಡವಳಿಕೆಯ ಮೇಲೆ ಆಗಬೇಕಾದ ಪರಿಣಾಮ ಯಾವ ದಿಕ್ಪಥದಲ್ಲಿ, ಯಾವ ಗುರಿಗಾಗಿ ಸಾಗಬೇಕೆಂಬ ಅಂಶವನ್ನು ಅವರು ಮೊದಲೇ ಅರಿತುಕೊಂಡಿರಬೇಕು.

ಗುರಿಯೆಂದರೆ ನಾವು ಪಡೆಯಲಾಶಿಸುವ ಫಲ. ನಮ್ಮ ಶಿಕ್ಷಣದ ಗುರಿ ನಮ್ಮ ಮಕ್ಕಳು ಹೇಗೆ ರೂಪುಗೊಳ್ಳಬೇಕೆಂಬುದೇ ಆಗಿದೆ. ಆ ಗುರಿಯ ಪರಿಚಯವಿದ್ದರೆ ಮಾತ್ರ ಶಿಕ್ಷಕರು ಅದು ಈಡೇರುವಂತೆ ಶಾಲೆಯ ಸನ್ನಿವೇಶಗಳನ್ನು ರಚಿಸಿಕೊಳ್ಳಬಹುದು; ಪಠ್ಯಪುಸ್ತಕವನ್ನು ಆರಿಸಿಕೊಳ್ಳಬಹುದು. ಗುರಿಯಿಲ್ಲದ ಶಿಕ್ಷಕ ಕಣ್ಣಿಲ್ಲದ ಮಾರ್ಗದರ್ಶಕನಂತೆ. ಅಂಥ ಶಿಕ್ಷಣದಿಂದ ಮಕ್ಕಳ, ಆ ಮೂಲಕ ಜನಾಂಗದ ಕಲ್ಯಾಣ ಸಾಧನೆಯಾಗುವುದಾದರೂ ಹೇಗೆ?

ಯಾವ ಗುರಿಯಾದರೂ ಒಂದು ಗೊತ್ತಾದ ಫಲವನ್ನು ನಿರೀಕ್ಷಿಸುತ್ತದೆ. ಅದನ್ನು ಈಡೇರಿಸಿಕೊಳ್ಳುವ ಉದ್ದೇಶದಿಂದ ನಾವು ಕಾರ್ಯಮುಖರಾಗುತ್ತೇವೆ. ಆ ಗುರಿ ಆ ಜನಾಂಗದ ಜೀವನತತ್ವವನ್ನು ಅವಲಂಬಿಸಿರುತ್ತದೆ.

ಎಲ್ಲ ಕಾಲಕ್ಕೂ ಎಲ್ಲ ದೇಶಕ್ಕೂ ಒಂದೇ ಗುರಿ ಎಂದು ನಿಗದಿ ಮಾಡುವಂತಿಲ್ಲ. ಉತ್ತಮ ಗುರಿಯನ್ನು ಅರಸುವ ಯಾವ ಶಿಕ್ಷಣರಂಗವಾಗಲಿ ಹಲವು ಸಾಮಾನ್ಯ ಉದ್ದೇಶಗಳಿಂದ ಪ್ರೇರಿತವಾಗಿರುತ್ತದೆ: ಮೊದಲನೆಯದಾಗಿ, ಮಾನವ ಸ್ವಭಾವವೂ ಮನೋಗುಣವೂ ಶಿಕ್ಷಣದಿಂದ ಉತ್ತಮಗೊಳ್ಳಬೇಕು; ಎರಡನೆಯದಾಗಿ, ಆಯಾ ಸಮಾಜದ ಅಂದಿನ ಕುಂದುಕೊರತೆಗಳನ್ನು ನಿವಾರಿಸಿ, ಪರಿಷ್ಕರಿಸಬೇಕು. ಮೂರನೆಯದಾಗಿ, ಅಂಥ ಗುರಿಯ ನಿರ್ಮಾಣವಾಗುವಾಗ ವ್ಯಕ್ತಿಯ ಮತ್ತು ಸಮಾಜದ ಹಿತದೃಷ್ಟಿಯೆರಡನ್ನೂ ಗಣನೆಗೆ ತೆಗೆದುಕೊಂಡಿರಬೇಕು; ಒಟ್ಟಿನಲ್ಲಿ ಜನಜೀವನದ ದೃಷ್ಟಿಧ್ಯೇಯ ಗಳನ್ನನುಸರಿಸಿ, ಅದರ ಪುರೋಭಿವೃದ್ಧಿಯಾಗುವಂತೆ ಶಿಕ್ಷಣದ ಗುರಿಯೂ ರೂಪುಗೊಳ್ಳಬೇಕು. ಒಬ್ಬೊಬ್ಬ ವ್ಯಕ್ತಿಗೂ ಹಲವು ಮಾನಸಿಕ ಮತ್ತು ದೈಹಿಕ ಶಕ್ತಿಗಳು ವಂಶಗತವಾಗಿ ಬಂದಿವೆ. ಆ ಶಕ್ತಿವಿಶೇಷಗಳು ಸ್ಫುಟ ಗೊಂಡು ಬೆಳೆಯಬೇಕು; ಅವರ ಮನಸ್ಸು ಸಂಸ್ಕರಣಗೊಂಡು ಸಾಹಿತ್ಯ, ಕಲೆ, ಸಂಸ್ಕೃತಿ, ಮುಂತಾದವುಗಳ ಪರಿಜ್ಞಾನವನ್ನು ಪಡೆಯಬೇಕು. ತಾವು ಬಾಳುತ್ತಿರುವ ಸಮಾಜಕ್ಕೆ ತಮ್ಮ ಕಾಣಿಕೆಯನ್ನೂ ಸಲ್ಲಿಸಬೇಕು. ಮೇಲಿನ ಎಲ್ಲ ಅಂಶಗಳನ್ನೂ ನಮ್ಮ ಮನಸ್ಸಿನಲ್ಲಿಟ್ಟುಕೊಂಡು ನಮ್ಮ ಮಕ್ಕಳ ಮತ್ತು ಜನತೆಯ ಏಳಿಗೆಗೆ ಅನುಕೂಲಿಸುವಂಥ ಶಿಕ್ಷಣದ ಗುರಿಯನ್ನು ರೂಪಿಸಿ ಕೊಳ್ಳಬೇಕು.

ಇಷ್ಟು ಸುಲಭವಾಗಿ ಶಿಕ್ಷಣದ ಗುರಿಯನ್ನು ನಾವು ಹೇಳಿದರೂ ಅದನ್ನೇ ಅನೇಕ ತತ್ತ್ವಚಿಂತಕರು ವಿಧ ವಿಧವಾಗಿ ರೂಪಿಸಿರುವರು. ಅವುಗಳಲ್ಲಿ ಹಲವ ನ್ನಾದರೂ ಪರಿಚಯ ಮಾಡಿಕೊಳ್ಳುವುದು ಆವಶ್ಯಕ. ಕೆಲವರು ಮಕ್ಕಳ ಮನೋಗುಣಗಳನ್ನು ಸನ್ಮಾರ್ಗದಲ್ಲಿ ರೂಪಿಸುವುದೇ ಶಿಕ್ಷಣದ ಗುರಿಯೆಂದು ಹೇಳುವರು; ಇನ್ನು ಕೆಲವರು ಶಾಸ್ತ್ರ, ಸಾಹಿತ್ಯ, ಸಂಸ್ಕೃತಿಗಳ ಪರಿಚಯವೇ ಶಿಕ್ಷಣದ ಗುರಿಯೆನ್ನುವರು; ಮತ್ತೆ ಕೆಲವರು ಶಿಕ್ಷಣದ ಗುರಿ ವೃತ್ತಿ ಶಿಕ್ಷಣ ವೆನ್ನುವರು; ಹಲವರು ವ್ಯಕ್ತಿಗೆ ವಂಶಗತವಾಗಿ ಬಂದಿರುವ ಶಕ್ತಿ ಸಾಮರ್ಥ್ಯಗಳು ಬೆಳೆದು ಸ್ಫುಟಗೊಳ್ಳುವಂತೆ ಮಾಡುವುದೇ ಶಿಕ್ಷಣದ ಗುರಿ ಯೆನ್ನುವರು. ಇಂಗ್ಲೆಂಡಿನ ಶಿಕ್ಷಣತತ್ತ್ವ ವಿಶಾರದರಾದ ಟಿ. ಪಿ. ನನ್‌ರವರು ಶಿಕ್ಷಣದ ಗುರಿಯನ್ನು ಕುರಿತು 'ವಿದ್ಯಾರ್ಥಿಯ ವ್ಯಕ್ತಿತ್ವ ಪರಿಪೂರ್ಣವಾಗಿ

ವಿಕಸಿಸುವಂತೆ ಸನ್ನಿವೇಶವನ್ನು ಕಲ್ಪಿಸಬೇಕು' ಎಂದಿರುವರು. ಹಾಗಾದರೆ, ಸಮಾಜದ ಪುರೋಭಿವೃದ್ಧಿಯನ್ನು ಮರೆತಿರುವರೇ ಎಂಬ ಪ್ರಶ್ನೆ ಏಳಬಹುದು. ಅದನ್ನು ಅವರು ಮರೆತಿಲ್ಲ; 'ವ್ಯಕ್ತಿತ್ವದ ಪರಿಪೂರ್ಣ ಬೆಳವಣಿಗೆಯೆಂದರೆ ವ್ಯಕ್ತಿ ತಾನು ಸಮಾಜಕ್ಕೆ ಸಲ್ಲಿಸಬೇಕಾಗಿರುವ ಕಾಣಿಕೆಯನ್ನು ರೂಪುಗೊಳಿಸುವ ಏಕಮಾತ್ರ ಸಾಧನವೆಂಬ ಉದ್ದೇಶದಿಂದ ಕೂಡಿರಬೇಕು' ಎಂದೂ ವಿವರಿಸಿ, ವ್ಯಕ್ತಿಯ ಮತ್ತು ಸಮಾಜದ ಪುರೋಭಿವೃದ್ಧಿಯೆರಡೂ ಸಾಧನೆಯಾಗಬೇಕೆಂದೇ ಅಭಿಪ್ರಾಯಪಟ್ಟಿರುವರು. ರೇಮಾಂಟ್ ಎಂಬ ಮತ್ತೊಬ್ಬ ಶಿಕ್ಷಣಚತುರರು ಮಾನವನ ಗುಣಗಳನ್ನು ತಿದ್ದಿ ರೂಪಿಸುವುದೇ ಶಿಕ್ಷಣದ ಗುರಿಯೆಂದು ಹೇಳುವರು. ಆದರೆ ಸದ್ಗುಣವೊಂದಿದ್ದರೆ ಸಾಕು, ಬುದ್ಧಿಶಕ್ತಿ ಪ್ರಧಾನವಲ್ಲವೆಂದು ತಿಳಿಯಬಾರದು. ಮಾನವನ ಗುಣಗಳನ್ನು ರೂಪಿಸುವುದಕ್ಕೆ ಒಳ್ಳೆಯ ಅವಕಾಶವಾದರೋ, ಜ್ಞಾನಕ್ಕಿಂತ, ಪ್ರಧಾನವಾದುದು ಅನುಭವ ಮತ್ತು ಆಚರಣೆ. ಜೊತೆಗೆ, ಮುಂದೆ ವ್ಯಕ್ತಿ ಸಮಾಜದಲ್ಲಿ ಬಾಳಬೇಕಾಗಿರುವುದರಿಂದ ಅವನಿಗೆ ಸತ್ಪ್ರಜೆಯಾಗಿ ಬಾಳುವ ಶಕ್ತಿಯನ್ನೂ ದೊರಕಿಸಬೇಕು. ಶಿಕ್ಷಣದ ಗುರಿಯನ್ನು ಯಾರು ಹೇಗೆ ವಿವರಿಸಿದರೂ ಅವರ ಮೂಲ ಉದ್ದೇಶ ಮಾನವನ, ಆ ಮೂಲಕ ಮಾನವಕುಲದ ಕಲ್ಯಾಣ ಸಾಧನೆಯೇ ಆಗಿದೆ. ಹಾಗಾದರೆ ಅಂಥ ಕಲ್ಯಾಣ ಗುರಿ ಯಾವುದು? ಆ ಗುರಿಯನ್ನು ವಿಮರ್ಶಿಸುವ ಮುನ್ನ ಮಾನವ ಸಮಾಜ ಉದಯವಾದಂದಿನಿಂದಲೂ ಅದು ಬೆಳೆದು ರೂಪುಗೊಂಡ ಇತಿಹಾಸವನ್ನು ಸ್ವಲ್ಪ ಮಟ್ಟಿಗೆ ಪರಿಶೀಲಿಸುವುದು ಆವಶ್ಯಕ.

ಗುಹೆಗಳಲ್ಲಿ ವಾಸಿಸುತ್ತಾ ಆದಿಮಾನವನು ಆಗತಾನೆ ಕುಟುಂಬ ಜೀವನವನ್ನು ಆರಂಭಿಸಿದ್ದಾಗ ಅವನ ದೃಷ್ಟಿಯಲ್ಲಿ ಯಾವ ಶಿಕ್ಷಣ ಕ್ರಮವೂ ಇರಲಿಲ್ಲ. ಹಾಗೆಯೇ ಗುರಿಯೂ ಇದ್ದಿರಲಾರದು. ತಾಯಿತಂದೆಗಳು ಅಣ್ಣ ಅಕ್ಕಂದಿರು ಆಚರಿಸುತ್ತಿದ್ದುದನ್ನು ಮಕ್ಕಳು ಅನುಸರಿಸುತ್ತಿದ್ದರು. ಆ ಮೂಲಕ ದೊಡ್ಡವರ ನಡೆ ನುಡಿಗಳನ್ನು ಅರಿತುಕೊಂಡು ತಮ್ಮ ಜೀವನದಲ್ಲೂ ಅವು ಉಪಯೋಗವಾಗುವಂತೆ ಮಾಡಿಕೊಳ್ಳುತ್ತಿದ್ದರು. ಆ ಶಿಕ್ಷಣ ಉದ್ದೇಶಪೂರ್ವಕವಾಗಿ ಕ್ರಮವಾದ ಮಾರ್ಗದಲ್ಲಿ ನಡೆಯುತ್ತಿರಲಿಲ್ಲ: ಸ್ವಾಭಾವಿಕವಾಗಿ ಆಕಸ್ಮಿಕವಾಗಿ ಸಾಗುತ್ತಿತ್ತು. ಹಾಗೆಯೇ ನಿರ್ದಿಷ್ಟ ಗುರಿಯೂ ಇರಲಿಲ್ಲ; ಸಮಾಜ ಜೀವನ ಆರಂಭವಾದಂತೆ, ಶಿಕ್ಷಣ ಶಾಲೆಗಳು

ಅಸ್ತಿತ್ವಕ್ಕೆ ಬಂದಂತೆ, ಶಿಕ್ಷಣದ ಗುರಿಯೂ ರೂಪುಗೊಳ್ಳುತ್ತಾ ಬಂತು. ಹಬ್ಬ ಹುಣ್ಣಿಮೆಗಳಲ್ಲಿ ಇನ್ನಿತರ ಸಮಾಜ ಸಮಾರಂಭಗಳಲ್ಲಿ ನಡಸಬೇಕಾದ ಕೆಲವು ಆಚರಣೆಗಳನ್ನೂ ಆಚಾರ ವ್ಯವಹಾರಗಳನ್ನೂ ಮಕ್ಕಳು ಕಲಿಯ ಬೇಕಾಯಿತು. ಆಗಲೂ ದೊಡ್ಡವರು ಮಾಡುವುದನ್ನು ನೋಡಿ, ಮಾಡಿ ಕಲಿಯುತ್ತಿದ್ದರು. ಕಲಿತದ್ದು ಜೀವನದಲ್ಲಿ ಉಪಯೋಗವಾಗುವುದೆಂಬ ಉದ್ದೇಶವೇ ಅವರ ಅಂದಿನ ಗುರಿಯಾಗಿದ್ದಿರಬೇಕು.

ಮಾನವನಿಗೆ ವಾಕ್ಶಕ್ತಿ ಸಿದ್ಧಿಸಿ, ಭಾಷೆ ರೂಪುಗೊಂಡು, ಸಾಹಿತ್ಯ ಸಂಸ್ಕೃತಿಗಳು ನಿರ್ಮಾಣವಾದಂತೆ ಮಕ್ಕಳೂ ಆ ಭಾಷೆ, ಸಾಹಿತ್ಯ, ಸಂಸ್ಕೃತಿ ಗಳನ್ನು ಪರಿಚಯ ಮಾಡಿಕೊಳ್ಳುವುದು ಅನಿವಾರ್ಯವಾಯಿತು. ಪ್ರಾಚೀನ ಕಾಲದಲ್ಲಿ ಚೈನ, ಭಾರತ, ಮುಂತಾದ ಪ್ರಾಚ್ಯ ದೇಶಗಳಲ್ಲಿ ಈ ಬೆಳವಣಿಗೆ ಮೊದಲು ಆರಂಭವಾಯಿತು. ಆಗ ಶಿಕ್ಷಣದ ಗುರಿ ಅಂಥ ಹಲವು ಸಾಹಿತ್ಯ ಕೃತಿಗಳನ್ನು ಹೃದ್ಗತಮಾಡಿಸಿ ನೆನಪಿನಲ್ಲಿಡಿಸುವುದು ಮಾತ್ರವಾಗಿತ್ತು.

ಪ್ರಾಚೀನ ಭಾರತದ ಶಿಕ್ಷಣದಲ್ಲಿ ಆಧ್ಯಾತ್ಮ ತತ್ವಜ್ಞಾನಕ್ಕೆ ಹೆಚ್ಚಿನ ಪ್ರಾಶಸ್ತ್ಯವಿತ್ತು. ಹಿಂದಿನಿಂದಲೂ ಬಂದ ಹಲವು ಶಾಸ್ತ್ರಸಾಹಿತ್ಯವನ್ನೂ ಆಚಾರ ವ್ಯವಹಾರಗಳನ್ನೂ ಮಕ್ಕಳಿಗೆ ಕಲಿಸಿ, ಆ ಮೂಲಕ ಅವು ಮುಂದಿನ ಜನಾಂಗಕ್ಕೂ ಸಾರೋದ್ಧಾರವಾಗಿ ಬರುವಂತೆ ಮಾಡುವುದೇ ಮೂಲ ಉದ್ದೇಶವಾಗಿತ್ತು. ಅವರು ಅನುಸರಿಸುತ್ತಿದ್ದ ಕ್ರಮ ಕಂಠಪಾಠಮಾಡಿಸು ವುದು ಮಾತ್ರ. ಅದೂ, ಸಮಾಜದ ಹಲವರು ಮಾತ್ರ ಕಲಿಯುವಂತಿತ್ತು ; ಎಲ್ಲರಿಗೂ ಅವಕಾಶವಿರಲಿಲ್ಲ. ಆದ್ದರಿಂದ ಪ್ರಾಚೀನ ಭಾರತದ ಶಿಕ್ಷಣದ ಗುರಿ ಹಿಂದಿನ ಆಚಾರ ವ್ಯವಹಾರಾದಿ ಪದ್ಧತಿಗಳನ್ನೂ ಶಾಸ್ತ್ರಜ್ಞಾನವನ್ನೂ ಕಲಿತು ಉಳಿಸಿಕೊಳ್ಳುವುದೇ ಆಗಿತ್ತು. ವ್ಯಕ್ತಿ ಸ್ವತಂತ್ರವಾಗಿ ಅವುಗಳನ್ನು ಬೆದಕಿ ಹೊಸದನ್ನು ಸೇರಿಸುವಂತೆ ಇರಲಿಲ್ಲ. ಅದರಿಂದ ಸಮಾಜ, ಸಂಸ್ಕೃತಿ, ಸಂಪ್ರದಾಯ ಇವನ್ನೆಲ್ಲ ಹಿಂದಿದ್ದಂತೆ ಉಳಿಸಿ, ತಮ್ಮ ಸಂತತಿಯೂ ಆಚರಿಸು ವಂತೆ ಮಾಡುವಂತಾಯಿತೇ ಹೊರತು ಅವನ್ನು ಬೆಳಸುವ ಅವಕಾಶ ಇಲ್ಲ ವಾಗಿತ್ತು. ಸನಾತನವೆಂದು ಎಲ್ಲವನ್ನೂ ನಂಬುತ್ತಾ ಭಕ್ತಿಯಿಂದ ಅನುಸರಿಸಿ ಉಳಿಸಿಕೊಳ್ಳಬೇಕಾಗಿತ್ತು. ಅದರಿಂದ ಪ್ರಗತಿಯನ್ನು ವಿರೋಧಿಸುವ

ಸ್ವಭಾವ ಶಿಕ್ಷಣದ ಗುರಿಯಾಗುತ್ತಾ ಬಂತು. ಆ ಗುರಿ ಸಮಾಜದ ಭದ್ರತೆಗೆ ನೆರವಾಗಿದ್ದರೂ ಅದರ ಪ್ರಗತಿಗೆ ಅಡಚಣೆಯಾಯಿತು.

ಪ್ರಾಚೀನ ಗ್ರೀಕರಲ್ಲಿ ಜ್ಞಾನಾರ್ಜನೆಗೆ ಪ್ರಾಶಸ್ತ್ಯವಿತ್ತು. ಶಿಕ್ಷಣದ ಈ ಗುರಿಯಿಂದ ಮಕ್ಕಳನ್ನು ಸುಸಂಸ್ಕೃತರನ್ನಾಗಿ ಮಾಡಬೇಕೆಂಬ ಉದ್ದೇಶವನ್ನು ಗ್ರೀಕರಿಂದ ಜಗತ್ತು ಕಲಿತುಕೊಂಡಿತೆನ್ನಬಹುದು; ಜೊತೆಗೆ, ಅವರು ಸಮಾಜದ ಪುರೋಭಿವೃದ್ಧಿಯನ್ನೂ ಶಿಕ್ಷಣದ ಗುರಿಯಾಗಿ ಮಾಡಿಕೊಂಡಿದ್ದರು. ಜ್ಞಾನಾರ್ಜನೆಯಿಂದ ವ್ಯಕ್ತಿಗಳು ಸಮಾಜ ಸೇವೆಯನ್ನು ಯಶಸ್ವಿಯಾಗಿ ಮಾಡುವರೆಂದೇ ಅವರ ನಂಬಿಕೆ. ಅಲ್ಲದೆ, ಯಾವ ಯಾವ ಮಕ್ಕಳು ಯಾವ ಯಾವ ಕಾರ್ಯಕ್ಕೆ ಯೋಗ್ಯರೆಂದು ನಿರ್ಧರಿಸುವುದೂ ಶಿಕ್ಷಣದ ಗುರಿಯೆಂದು ನಂಬಿದ್ದರು. ಈ ಗುರಿಯನ್ನು ಇಂದಿಗೂ ಶಿಕ್ಷಣರಂಗದಲ್ಲಿ ಪ್ರಗತಿಪರ ದೃಷ್ಟಿಯೆಂದೇ ಪರಿಗಣಿಸಲಾಗಿದೆ.

ಪ್ರಾಚೀನ ಗ್ರೀಕರಲ್ಲಿ ಜ್ಞಾನಾರ್ಜನೆಗೆ ಪ್ರಾಶಸ್ತ್ಯವಿದ್ದರೆ, ರೋಮನರು ವೃತ್ತಿಶಿಕ್ಷಣಕ್ಕೇ ಹೆಚ್ಚು ಗೌರವವನ್ನು ಕೊಟ್ಟಿದ್ದರು. ಆ ಮೂಲಕ ವ್ಯಕ್ತಿಗಳನ್ನು ಸತ್ಪ್ರಜೆಗಳನ್ನಾಗಿಯೂ, ಶೂರ ಸೈನಿಕರನ್ನಾಗಿಯೂ, ಒಳ್ಳೆಯ ತಂದೆತಾಯಿಗಳನ್ನಾಗಿಯೂ ಮಾಡುವುದೇ ಶಿಕ್ಷಣದ ಗುರಿಯೆಂದು ಭಾವಿಸಿದ್ದರು.

ಯೂರೋಪಿನಲ್ಲಿ ಕ್ರೈಸ್ತ ಮತ ಪ್ರಬಲಿಸಿದಂತೆ ಸಮಾಜದ ಎಲ್ಲ ಕ್ಷೇತ್ರಗಳ ಮೇಲೂ ಮತಧರ್ಮದ ಕೈವಾಡ ಕ್ರಮ ಕ್ರಮವಾಗಿ ಬೀಳ ಹತ್ತಿತು. ಮಧ್ಯ ಯುಗಗಳ ಹೊತ್ತಿಗೆ ಆ ಕೈವಾಡ ಪರಾಕಾಷ್ಠದೆಶೆ ಮುಟ್ಟಿತು. ಜನಜೀವನದಲ್ಲಿ ಪರಲೋಕ ಚಿಂತನೆಗೇ ಹೆಚ್ಚಿನ ಪ್ರಾಶಸ್ತ್ಯ ಬೆಳೆದು ಪರಲೋಕದೃಷ್ಟಿ ಜೀವನದ ಪ್ರಧಾನ ಉದ್ದೇಶವಾಯಿತು. ಮತಧರ್ಮದ ತತ್ತ್ವಗಳನ್ನು ನಂಬಿ ಅದರಂತೆ ಆಚರಿಸುವಂತೆ ಮತಪೀಠಗಳು ಬೋಧಿಸುತ್ತಿದ್ದುವು. ಧರ್ಮನಿಷ್ಠೆ ವಿಚಾರ ಜ್ಞಾನಕ್ಕಿಂತ ಹೆಚ್ಚಿನದಾಗಿತ್ತು. ಸನಾತನ ಆದರ್ಶ ದೃಷ್ಟಿಯನ್ನೇ ನಂಬಿ ಅದರ ಆಧಾರದಮೇಲೆ ತಮ್ಮ ತತ್ತ್ವದೃಷ್ಟಿಯನ್ನೂ ಪೋಷಿಸಿಕೊಳ್ಳಬೇಕಾಗಿತ್ತು. ಅನಂತರ, ಮತಪೀಠಗಳು ಆ ದೃಷ್ಟಿ ಧ್ಯೇಯಗಳನ್ನೇ ಜನತೆಯಲ್ಲಿ ಹರಡಿ ಅದಕ್ಕೆ ನಿಷ್ಠೆಯಿಂದ ನಡೆದುಕೊಳ್ಳುವಂತೆ ಮಾಡಲು ಶಾಲೆಗಳನ್ನೂ ಆರಂಭಿಸಿದುವು. ಅಲ್ಲೂ ಪರಲೋಕ

ಕಲ್ಪನೆಗೂ ಆಧ್ಯಾತ್ಮ ಚಿಂತನೆಗೂ ಹೆಚ್ಚಿನ ಸ್ಥಾನ ಕೊಟ್ಟರು. ವಿಶ್ವವಿದ್ಯಾನಿಲಯುಗಳೂ ಆರಂಭವಾದುವು. ವೃತ್ತಿಶಿಕ್ಷಣವೂ ತಲೆಹಾಕಿತು. ಆದರೂ ಆಧ್ಯಾತ್ಮ ತತ್ತ್ವ ಸಾಧನೆ ಮತ್ತು ಹಿಂದಿನ ನಂಬಿಕೆಗಳ ಅನುಸರಣೆ–ಇವೇ ಶಿಕ್ಷಣದ ಗುರಿಯಾಗಿದ್ದುವು.

ಹದಿನಾರು – ಹದಿನೇಳನೆಯ ಶತಮಾನಗಳಲ್ಲಿ ಯುರೋಪಿನಲ್ಲಿ ನಡೆದ ನವೋದಯದ ಕಾಲದಲ್ಲೇ ಜನತೆಗೆ ಪರಲೋಕಕ್ಕಿಂತ ಇಹಲೋಕದ ಬಾಳಿನಲ್ಲಿ ಹೆಚ್ಚಿನ ಆಸಕ್ತಿ ಹುಟ್ಟಿತ್ತು. ದೂರದ ಪರಲೋಕದ ಸುಖದ ಕಲ್ಪನೆಗೆ ಬದಲು ಇಂದಿನ ಇಹಲೋಕದ ಬಾಳಿನಲ್ಲೇ ಏಕೆ ಸುಖಪಡಬಾರದು ಎಂಬ ಆಸೆ ಹೆಚ್ಚಿತ್ತು. ಮತಧರ್ಮದ ಶಿಕ್ಷಣಕ್ಕಿಂತ ಮಾನವನ ಐಹಿಕ ಸುಖಸಾಧನೆಗೆ ನೆರವಾಗತಕ್ಕ ಶಿಕ್ಷಣಕ್ಕೇ ಪ್ರಾಶಸ್ತ್ಯ ಕೊಡಲಾರಂಭಿಸಿದರು. ಅದರಿಂದ ವಿಜ್ಞಾನಶಾಸ್ತ್ರದ ಅಭ್ಯಾಸಕ್ಕೆ ಪ್ರಾಶಸ್ತ್ಯ ದೊರೆಯಿತು. ಆ ಶಾಸ್ತ್ರಜ್ಞಾನದಿಂದ ಸಮಾಜ ಕ್ರಾಂತಿ ಆರಂಭವಾಯಿತು; ವಿಚಾರ ದೃಷ್ಟಿ ಹೆಚ್ಚಿತು. ಮತಧರ್ಮದ ತತ್ತ್ವಗಳನ್ನು ಆ ದೃಷ್ಟಿಯಲ್ಲಿ ವಿಮರ್ಶಿಸಲಾರಂಭಿಸಿದರು. ಸನಾತನ ಕಾಲದಿಂದಲೂ ಮೌಢ್ಯದಿಂದ ನಂಬಿಕೊಂಡಿದ್ದ ಹಲವು ನಂಬಿಕೆಗಳ ಮತ್ತು ತತ್ತ್ವಗಳ ಸ್ಥಾನ ಸಡಿಲವಾಯಿತು. ಬರಬರುತ್ತ ವಿಜ್ಞಾನಕ್ಕೂ ಮತಧರ್ಮಕ್ಕೂ ಉತ್ತರ ದಕ್ಷಿಣ ಧ್ರುವಗಳಷ್ಟು ಅಂತರ ಕಾಣಹತ್ತಿತು. 'ಮತ ದೈವನಿರ್ಮಾಣವೆಂದರೂ, ಅದರ ತತ್ತ್ವ ಸಿದ್ಧಾಂತಗಳು ಮಾತ್ರ ಮಾನವನ ಬುದ್ಧಿ ಸಂಸ್ಕಾರಗಳು ರೂಪುಗೊಂಡಂತೆ ಕ್ರಮ ಕ್ರಮವಾಗಿ ಬೆಳೆದುಬಂದಿವೆ'ಯೆಂಬ ಅಭಿಪ್ರಾಯ ಹುಟ್ಟಿತು. ಎಂದಮೇಲೆ, ಮತಧರ್ಮ 'ಬೆಳೆಯುವ ಸ್ಥಿತಿ'ಯಲ್ಲಿರಬೇಕು; ಮಾನವನು ಸಂಸ್ಕರಣಗೊಳ್ಳುತ್ತಾ ಹೋದಂತೆ ಅವೂ ಮಾರ್ಪಡಬೇಕಾದ್ದು ಸಹಜವಾದುದೆಂದು ನಿರ್ಧಾರವಾಗುತ್ತಾ ಬಂತು; ವಿಚಾರದೃಷ್ಟಿಯ ಯುಗದಲ್ಲಿ ಆ ತತ್ತ್ವಸಿದ್ಧಾಂತಗಳನ್ನು ಪುನರ್ವಿಮರ್ಶಿಸುವುದು ಅನಿವಾರ್ಯವೆನಿಸಿತು. ಆ ಕಾಲದಲ್ಲಿ ಮಾರ್ಟಿನ್ ಲೂಥರ್ ಎಂಬವನು 'ಯಾವುದು ಸತ್ಯವಲ್ಲವೋ, ವಿಚಾರವಿರಹಿತವೋ ಅಂಥದು ದೇವರಿಗೂ ಒಪ್ಪುವುದಿಲ್ಲ' ಎಂಬ ನೂತನ ಸಂದೇಶವನ್ನು ಜನತೆಯಲ್ಲಿ ಪ್ರಚಾರಮಾಡಿದನು. ಅಂದಿನಿಂದ ಮತ ತತ್ತ್ವಗಳು ಸನಾತನವೂ ಪವಿತ್ರವೂ ಆದವಾದರೂ ಅವೂ ವಿಚಾರ ದೃಷ್ಟಿಯಲ್ಲೇ

ವಿಮರ್ಶಿತವಾಗಬೇಕೆಂಬ ಕಾತರ ಜನತೆಯಲ್ಲಿ ಹೆಚ್ಚಿತು. ಕ್ರಮವಾಗಿ ಸಮಾಜದ ಐಹಿಕ ಸುಖಶಾಂತಿಯೇ ಎಲ್ಲರ ದೃಷ್ಟಿಯಾಯಿತು. ವಿಜ್ಞಾನಕ್ಕೆ ಪ್ರಧಾನ ಸ್ಥಾನ ದೊರಕಿತು. ಶಾಲೆಗಳಲ್ಲೂ ಅದು ಬೋಧನವಸ್ತುವಾಯಿತು. ವ್ಯಕ್ತಿಯ ಮತ್ತು ಸಮಾಜದ ಸುಖಶಾಂತಿಯೇ ಶಿಕ್ಷಣದ ಗುರಿಯಾಗುತ್ತಾ ಬಂತು. ಅಷ್ಟರಲ್ಲಿ ಮನಶ್ಶಾಸ್ತ್ರವೂ ಬೆಳೆದು ಶಿಕ್ಷಣರಂಗದಲ್ಲಿ ಹೊಸ ಬೆಳಕು ಹೊರಸೂಸಿತು. ಹಿಂದಿನ ಎಲ್ಲ ಕಾಲದ ಶಿಕ್ಷಣರಂಗದ ಕಲ್ಯಾಣಗುಣಗಳನ್ನೂ ಅಳವಡಿಸಿಕೊಂಡ ಆಧುನಿಕ ಶಿಕ್ಷಣರಂಗ ಈಗ ಆರಂಭವಾಗುತ್ತಿದೆ. ಜಗತ್ತಿನ ಜನಜೀವನದ ಕಲ್ಯಾಣ ಸಾಧನೆಯೇ ಶಿಕ್ಷಣದ ಗುರಿಯೆನಿಸುತ್ತಿದೆ.

ಶಿಕ್ಷಣದ ಗುರಿ ಮಾನವ ಲೋಕದ ಕಲ್ಯಾಣ ಸಾಧನೆಯೆಂದು ಮೇಲೆ ವಿವರಿಸಿದ್ದರೂ ಅದರ ಅರ್ಥವನ್ನು ವಿವರಿಸುವಂತೆ ಅನೇಕ ತತ್ತ್ವಚಿಂತಕರು ತಮ್ಮ ಅಭಿಪ್ರಾಯಗಳನ್ನು ಹೊರಗೆಡಹಿರುತ್ತಾರೆ. ಅವುಗಳಲ್ಲಿ ಪ್ರಧಾನವೆನಿಸಿದ ಹಲವನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಮಾಂಟೇನ್ ಎಂಬವರು ಶಿಕ್ಷಣದ ಗುರಿಯನ್ನು ಪ್ರಸ್ತಾಪಿಸುತ್ತಾ 'ಶಿಕ್ಷಣದಿಂದ ಮನಸ್ಸು ಸಂಸ್ಕರಣಗೊಂಡು ಉತ್ತಮ ವಿವೇಚನಾಶಕ್ತಿ ಹೊರಮೂಡಲಾರದೆ ಹೋಗುವುದಾದರೆ ನಮ್ಮ ಮಕ್ಕಳಿಗೆ ಅಂಥ ಶಿಕ್ಷಣಕ್ಕಿಂತ ಟೆನ್ನಿಸ್ ಆಟ ಎಷ್ಟೋ ಫಲಪ್ರದವಾದ್ದು' ಎಂದು ಹೇಳಿರುವರು. ಜೊತೆಗೆ, ಸಮಾಜ ಸಂಪರ್ಕದಿಂದ ಮಕ್ಕಳ ಪ್ರತಿಭೆ ವಿಕಸಿಸಲೆಂಬ ಉದ್ದೇಶದಿಂದ ಪ್ರವಾಸ ಕಾರ್ಯ ಕೈಗೊಳ್ಳುವಂತೆ ಅವರು ಸಲಹೆ ಮಾಡುತ್ತಾರೆ. ಅವರ ದೃಷ್ಟಿಯಲ್ಲಿ ಕೇವಲ ಜ್ಞಾನಾರ್ಜನೆಗೇ ಪ್ರಾಧಾನ್ಯತೆ ಇಲ್ಲ: ಹಾಗೆ ಕಲಿತ ಜ್ಞಾನ ನಮ್ಮ ಅನುಭವಗಳನ್ನೂ ಕೆಲಸಗಳನ್ನೂ ಉತ್ತಮಪಡಿಸಲು ಉಪಯುಕ್ತವಾಗುವಂತೆ ಮಾಡುವುದು ಶಿಕ್ಷಣದ ಪ್ರಧಾನ ಗುರಿ.

ವಿಚಾರದೃಷ್ಟಿಯ ಯುಗದ ಅರುಣೋದಯದಲ್ಲಿ ಬಾಳಿದ ರೂಸೋ ಮತ್ತು ಪೆಸ್ಟಲಾಜಿ ಎಂಬ ತತ್ತ್ವಚಿಂತಕರಿಬ್ಬರೂ ಮಗುವಿನ ಮಾನಸಿಕ ವ್ಯಾಪಾರವನ್ನು ತಿಳಿದು, ಮಮತೆಯಿಂದ ಅದರ ಶಿಕ್ಷಣವನ್ನು ಸಾಧಿಸಬೇಕೆಂಬ ಸದ್ಭಾವನೆಯನ್ನು ಜನತೆಯಲ್ಲಿ ಹರಡಿದರು. ಅವರನಂತರ ಶಾಲೆಗಳಲ್ಲಿ ವಿಜ್ಞಾನವನ್ನು ಬೋಧಿಸುವಂತೆ ಮಾಡಲು ಉಗ್ರ ಪ್ರಚಾರವನ್ನು ನಡಸಿದ ಹರ್ಬರ್ಟ್ ಸ್ಪೆನ್ಸರನು ಮಕ್ಕಳು ಮುಂದೆ ಸಮಾಜದಲ್ಲಿ ಯಶಸ್ವಿ

ಯಾಗಿ ಬಾಳುವಂತೆ ಸಿದ್ಧಗೊಳಿಸುವ, ಮತ್ತು ತನ್ನ ಸಂಸ್ಕೃತಿಯನ್ನು ಸಂರಕ್ಷಿಸಿ ಬೆಳಸಲು ನೆರವಾಗುವ ವಿಜ್ಞಾನ ಶಾಸ್ತ್ರದ ಪರಿಚಯವೇ ಶಿಕ್ಷಣದ ಗುರಿಯೆಂದು ಹೇಳಿರುವನು.

ಅನಂತರ, ಕೇವಲ ವ್ಯಕ್ತಿಯ ಪುರೋಭಿವೃದ್ಧಿಯೆಡೆಗೇ ಗಮನಕೊಡುವುದರ ಬದಲು ಸಮಾಜದ ಯೋಗಕ್ಷೇಮವನ್ನೂ ಪ್ರಾಧಾನ್ಯವೆಂದು ಗಣಿಸುವ ಮನೋಭಾವ ಹುಟ್ಟಿತು. ಅದೇ ಅಭಿಪ್ರಾಯ ಜೀವನದ ಎಲ್ಲ ಕ್ಷೇತ್ರಗಳನ್ನೂ ಆವರಿಸಿತು. ವ್ಯಕ್ತಿ ಸಮಾಜದ ಅಂಗ ಮಾತ್ರವೆಂಬ ಭಾವನೆ ಬೆಳೆಯುತ್ತಾ ಬಂತು. ಎಲ್ಲ ವ್ಯಕ್ತಿಗಳೂ ಶಿಕ್ಷಣ ಪಡೆಯುವಂತಾಗಿ ಆ ಮೂಲಕ ಇಡೀ ಸಮಾಜದ ಪುರೋವೃದ್ಧಿ ಸಾಧನೆಯಾಗಬೇಕೆಂಬ ದೃಷ್ಟಿ ರೂಪುಗೊಳ್ಳುತ್ತಾ ಬಂತು. ಸಮಾಜದ ಎಲ್ಲ ವ್ಯಕ್ತಿಗಳ, ಎಂದರೆ, ಬಡವರ ಬಲ್ಲಿದರ, ದೊಡ್ಡವರ ಚಿಕ್ಕವರ, ಹಳ್ಳಿಗರ ಪಟ್ಟಣಿಗರ ಶಿಕ್ಷಣ ಸಮಸ್ಯೆಗಳು ತತ್ವಚಿಂತಕರ ಮನವನ್ನು ಸೆಳೆದವು. ವ್ಯಕ್ತಿಗಳ ಬೆಳವಣಿಗೆ ಮತ್ತು ಸಮಾಜದ ಕಲ್ಯಾಣ ಸಾಧನೆ ಎರಡೂ ಶಿಕ್ಷಣದ ಗುರಿಯೆನಿಸಿದುವು. ಅದರ ಆಧಾರದ ಮೇಲೆಯೇ ಈಚಿನ ಹಲವು ಶಿಕ್ಷಣಚತುರರು ಶಿಕ್ಷಣದ ಗುರಿಯನ್ನು ರೂಪಿಸಿರುವರು.

ವಿಲಿಯಂ ಜೇಮ್ಸ್‌ರವರು 'ವ್ಯಕ್ತಿಯು ಕಲಿತುದನ್ನು ಅವನು ಬಾಳಬೇಕಾಗಿರುವ ಸಮಾಜ ಸನ್ನಿವೇಶಗಳಿಗೆ ಅನ್ವಯಿಸುವಂತೆ ರೂಢಿಸುವುದೇ ಶಿಕ್ಷಣ'ದ ಗುರಿಯೆಂದು ಹೇಳಿರುವರು. ಕೇವಲ ಜ್ಞಾನಾರ್ಜನೆಯೇ ಮುಖ್ಯವಲ್ಲ. ಅದು ವ್ಯವಹಾರಕ್ಕೂ ಉಪಯುಕ್ತವಾಗುವಂತೆ ರೂಪುಗೊಳ್ಳಬೇಕು; ಜೊತೆಗೆ ವ್ಯಕ್ತಿ ಸಮಾಜದಲ್ಲಿದ್ದುಕೊಂಡು ಸಮಾಜ ಜೀವನ ಕ್ಷೇಮಕರವಾಗುವಂತೆ ಮಾಡಲು ಅನುಕೂಲಿಸುವ ಸದ್ಭಾವನೆಗಳೂ ಸಹೃದಯತೆಯೂ ಆವಶ್ಯಕವೆಂಬುದನ್ನೂ ನೆನಪಿನಲ್ಲಿಡಬೇಕು.

ಹಾರ್ನ್ ಎಂಬವರು ಒಳ್ಳೆಯ ದೈಹಿಕ ಮತ್ತು ಮಾನಸಿಕ ಶಕ್ತಿಯುಳ್ಳ ಒಬ್ಬ ಮಾನವ ವ್ಯಕ್ತಿಯ ಬುದ್ಧಿಶಕ್ತಿ, ರಸಾವೇಶಭಾವ ಮತ್ತು ಆತ್ಮಸಂಯಮ, ಮುಂತಾದ ಗುಣಗಳನ್ನು ಪರಿಪೂರ್ಣವಾಗಿಯೂ ಸಮಾಜ ಸನ್ನಿವೇಶಗಳಿಗೆ ಹೊಂದಿಕೊಳ್ಳುವಂತೆಯೂ ಬೆಳಸುವುದು ಶಿಕ್ಷಣದ ಗುರಿಯೆಂದು ಹೇಳಿರುವರು.

ಕೊಲಂಬಿಯ ವಿಶ್ವವಿದ್ಯಾನಿಲಯದ ಶಿಕ್ಷಣವಿಶಾರದರೆನಿಸಿದ ಬಟ್ಲರ್ ರವರು ತನ್ನ ಪೂರ್ವಿಕರಿಂದ ಪಡೆದುಕೊಂಡಿರುವ ಜ್ಞಾನಸಂಪತ್ತನ್ನು ಅನುಭವಿಸುವ ಶಕ್ತಿಸಾಮರ್ಥ್ಯಗಳನ್ನು 'ವ್ಯಕ್ತಿಗೆ ಕ್ರಮ ಕ್ರಮವಾಗಿ ನೀಡುವುದೇ ಶಿಕ್ಷಣದ ಗುರಿ'ಯೆಂದು ವಿವರಿಸಿರುವರು.

ಟಿ. ಪಿ. ನನ್ ಅವರು ಶಿಕ್ಷಣದ ಗುರಿಯನ್ನು ಕುರಿತು 'ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಶಕ್ತಿವಿಶೇಷಗಳನ್ನೂ ಅಭಿರುಚಿಯನ್ನೂ ತನಗೆ ಉಚಿತವೆನಿಸುವಂತೆ ಬೆಳಸಿಕೊಂಡು ಆ ಮೂಲಕ ಮಾನವ ಬಾಂಧವ್ಯತೆಯ ಮತ್ತು ಕ್ಷೇಮಚಿಂತನೆಯ ತಳಹದಿಯನ್ನು ಹಾಕಿಕೊಳ್ಳುವಂತಿರಬೇಕು,' ಎಂದು ವಿವರಿಸಿರುವರು. ಎಂದರೆ, ವ್ಯಕ್ತಿಯ ಪರಿಪೂರ್ಣವಾದ ಶಿಕ್ಷಣವೇ ಅವರ ಮೂಲ ಗುರಿ. ಆದರೂ ಆ ಗುರಿಯ ಅಂತರಾಳದಲ್ಲಿ ಸಮಾಜ ಹಿತವೂ ಅಡಗಿದೆ. ಯಾವ ವ್ಯಕ್ತಿಯೇ ಆಗಲಿ ಸಮಾಜ ಬಾಹಿರನಾಗಿ ಬಾಳುವುದು ಇಂದಿನ ಕಾಲಕ್ಕೊಪ್ಪದ ವಿಷಯ. ಹಾಗೆ ಜೀವಿಸುವಾಗ ವ್ಯಕ್ತಿಗಳು ತಮ್ಮ ಶಕ್ತಿವಿಶೇಷಗಳನ್ನು ಪರಿಪೂರ್ಣವಾಗಿ ಬೆಳಸಿಕೊಂಡಿದ್ದರೆ ಮಾತ್ರ ಸಮಾಜಕ್ಕೆ ಉತ್ತಮೋತ್ತಮ ಸೇವೆ ಸಲ್ಲುತ್ತದೆಯೆಂಬುದು ಅವರ ಅಭಿಪ್ರಾಯ.

ಎಚ್. ಜಿ. ವೆಲ್ಸ್‌ರವರು ಹೇಳುವಂತೆ 'ಶಿಕ್ಷಣದಿಂದ ಮಾನವನಲ್ಲಿ ಅಡಗಿರುವ ಅಮೃತತ್ವ ವಿಕಸಿಸಿ ಅವನ ಆತ್ಮ ವಿರಾಜಿಸುವಂತಾಗಬೇಕು.' ಎಂದರೆ, ಎಲ್ಲ ಮಾನವ ವ್ಯಕ್ತಿಗಳಲ್ಲೂ ಹಲವು ಶಕ್ತಿವಿಶೇಷಗಳಿವೆ; ಆ ಶಕ್ತಿವಿಶೇಷಗಳು ಶಿಕ್ಷಣದಿಂದ ಬೆಳೆದು ಪಳಗಿ ಮಾನವನನ್ನು ಸುಸಂಸ್ಕೃತನನ್ನಾಗಿಯೂ ಸತ್ಕಾರ್ಯನಿರತನನ್ನಾಗಿಯೂ ಮಾಡಬೇಕು. ಮಾನವತ್ವ ಶಿಕ್ಷಣದಿಂದ 'ದೈವತ್ವ'ವನ್ನು ಮುಟ್ಟುವಂತಾಗಬೇಕು.

ಫಿಂಡ್ಲೆಯವರು 'ಮಾನವನ ಎಲ್ಲ ಶಕ್ತಿಸಾಮರ್ಥ್ಯಗಳೂ ಅಭಿರುಚಿಗಳೂ ಸಮರಸವಾಗಿ ಬೆಳೆಯುವಂತೆ ಮಾಡುವುದೇ ಶಿಕ್ಷಣ' ಎಂದು ಹೇಳಿರುವರು.

ಇಂದಿನ ಜಗತ್ತಿನ ಉತ್ತಮ ಲೇಖಕರೂ, ತತ್ತ್ವಚಿಂತಕರೂ, ಶಿಕ್ಷಣ ಚತುರರೂ ಆದ ಬರ್ಟರಂಡ್ ರಸೆಲ್‌ರವರು ಹೇಳುವಂತೆ 'ವೀರರೂ, ಧೈರ್ಯಶಾಲಿಗಳೂ, ಸದ್ಭಾವನಾ ನಿರತರೂ, ಪ್ರತಿಭಾಸಂಪನ್ನರೂ ಆದ

ವ್ಯಕ್ತಿಗಳನ್ನೊಳಗೊಂಡ ಸಮಾಜ ನಿರ್ಮಾಣವೇ ಶಿಕ್ಷಣದ ಗುರಿ.' ಆ ಮೂಲಕ ಸಕಲ ಮಾನವರ ಕಲ್ಯಾಣ ಸಾಧನೆಯೂ ಆಗುವುದೆಂದು ಅವರು ಅಭಿಪ್ರಾಯಪಡುತ್ತಾರೆ. ಜನಜೀವನದಲ್ಲಿ ಸುಖಶಾಂತಿಗಳಿಲ್ಲದಿರುವುದಕ್ಕೆ ಅನಾರೋಗ್ಯ, ಬಡತನ, ಸಮರಸವರಿಯದ ದಾಂಪತ್ಯ ಜೀವನ—ಇವೇ ಕಾರಣವೆಂದು ಹೇಳುತ್ತಾ, ಅವುಗಳನ್ನು ತೊಡೆದುಹಾಕುವುದರಿಂದ ಜನತೆಯ ಕಲ್ಯಾಣ ಸಾಧನೆಯಾಗುತ್ತದೆಂದು ವಾದಿಸುವರು. 'ಶಿಕ್ಷಣದಿಂದ ವೀರ್ಯವತ್ತಾದ ಜನಾಂಗ ನಿರ್ಮಾಣವಾದರೆ ಅನಾರೋಗ್ಯ ತಾನಾಗಿಯೇ ಮಾಯವಾಗುತ್ತದೆ. ಬಡತನಕ್ಕೆ ಜನತೆಯ ಅಜ್ಞಾನವೇ ಕಾರಣವೆನ್ನಬೇಕು; ಶಿಕ್ಷಣದಿಂದ ಸದ್ಭಾವನಾ ನಿರತರಾದ ಜನಾಂಗ ಉದಯವಾಗುವುದಾದರೆ ಆ ಅಜ್ಞಾನವನ್ನು ಹೋಗಲಾಡಿಸಬೇಕೆಂಬ ಸಹೃದಯತೆ ಮೂಡುತ್ತದೆ. ಪ್ರತಿಭೆ ಆ ದಾರಿದ್ರ್ಯವನ್ನು ತೊಲಗಿಸಿ ಜನತೆಯನ್ನು ಭಾಗ್ಯವಂತರನ್ನಾಗಿ ಮಾಡುವ ಮಾರ್ಗವನ್ನು ಸೂಚಿಸುತ್ತದೆ. ಶಿಕ್ಷಣ ಅವರನ್ನು ಧೈರ್ಯಶಾಲಿಗಳನ್ನಾಗಿ ಮಾಡಿದ್ದರೆ, ಆ ಧೈರ್ಯ ಸಮಾಜದ ಬಡತನವನ್ನು ಕಳೆದು ಸಂಪದಭಿವೃದ್ಧಿಯನ್ನು ಸಾಧಿಸಲು ಆವೇಶವನ್ನೂ ಉತ್ಸಾಹವನ್ನೂ ಕೊಡಬಲ್ಲದು. ಆ ಮೂಲಕ ಜನಾಂಗದ ಪುರೋಭಿವೃದ್ಧಿಯಾದೀತು' ಎಂದು ಅವರು ವಾದಿಸಿರುವರು. ಸಾಮರಸ್ಯವಿಲ್ಲದ ದಾಂಪತ್ಯ ಜೀವನದಿಂದ ಆಗುತ್ತಿರುವ ಕಷ್ಟಪರಂಪರೆಗಳನ್ನು ಕುರಿತು 'ಸರಿಯಾದ ಶಿಕ್ಷಣವಿಲ್ಲದಿರುವುದೇ ಅದಕ್ಕೆ ಕಾರಣ. ನಮ್ಮ ಹೆಣ್ಣುಮಕ್ಕಳೂ ಗಂಡುಮಕ್ಕಳೂ ಉಚಿತವೂ ಆವಶ್ಯಕವೂ ಎನಿಸುವಂಥ ದಾಂಪತ್ಯ ವಿಜ್ಞಾನದ ಪರಿಚಯವನ್ನು ಮಾಡಿಕೊಳ್ಳುವುದರ ಮೂಲಕ ಅಂಥ ದುರಂತಗಳು ಮಾಯವಾದಾವು; ಬಾಳು ಸುಖಮಯವಾದೀತು' ಎಂದು ನುಡಿದು ಶಿಕ್ಷಣದಿಂದಲೇ ದಾಂಪತ್ಯ ಜೀವನ ಉತ್ತಮಗೊಳ್ಳಬೇಕೆಂದೂ ವಾದಿಸಿರುವರು.

ಅಮೆರಿಕದ ಉಪಯುಕ್ತ ತತ್ತ್ವವಾದಿಗಳೂ ಆಧುನಿಕ ಶಿಕ್ಷಣ ಜಗತ್ತಿನ ಪ್ರಧಾನ ವ್ಯಕ್ತಿಗಳೂ ಆದ ಡ್ಯೂಯಿಯವರು ಹೇಳುವಂತೆ 'ಸಮಾಜದ ಹಿತದೃಷ್ಟಿಯಲ್ಲಿ ವ್ಯಕ್ತಿಯ ಅನುಭವಗಳು ಬೆಳೆಯುವಂತೆ ಮಾಡಿ, ತನ್ನ ಶಕ್ತಿಸಾಮರ್ಥ್ಯಗಳನ್ನು ಸದ್ವಿನಿಯೋಗಪಡಿಸಿಕೊಳ್ಳಲು ನೆರವಾಗುವ ಸದ್ಭಾವನೆಗಳನ್ನು ಮೂಡಿಸುವುದೇ ಶಿಕ್ಷಣದ ಗುರಿ. ಮಕ್ಕಳು ದೊಡ್ಡವರ

ಅನುಭವಗಳನ್ನು ಅನುಕರಿಸುವುದರ ಜೊತೆಗೆ ತಾವೂ ಪ್ರಯತ್ನಪೂರ್ವಕ ವಾಗಿ ಹೊಸ ಅನುಭವಗಳನ್ನು ಪಡೆದು, ಹಿಂದಿನದನ್ನು ಅದರೊಡನೆ ಕೂಡಿಸಿ ಬೆಳಸಿಕೊಂಡು ನಿರಂತರವೂ ಪ್ರಗತಿಪಥದಲ್ಲಿ ಮುಂದುವರಿಯುತ್ತಿರಬೇಕು. ಜೊತೆಗೆ, ಅವರು ಸಮಾಜದ ಸನ್ನಿವೇಶಗಳೊಡನೆ ಮಾತ್ರ ಅನುಸರಿಸಿ ಕೊಂಡರೆ ಸಾಲದು: ಅಂಥ ಸನ್ನಿವೇಶಗಳನ್ನು ಉತ್ತಮಪಡಿಸಲೂ ಯತ್ನಿಸ ಬೇಕು. ಆ ಮೂಲಕ ಮುಂದಿನ ಸಮಾಜ ಇಂದಿನದಕ್ಕಿಂತ ಉತ್ತಮ ಗೊಳ್ಳಬೇಕು. ಆ ಕಾರ್ಯಸಾಧನೆಗೆ ಶಿಕ್ಷಣ ನೆರವಾಗುವಂತಿರಬೇಕು.' ಎಂದಮೇಲೆ ಶಿಕ್ಷಣದ ಗುರಿ ವ್ಯಕ್ತಿಗಳ ಗುಣವಿಶೇಷಗಳನ್ನು ಮಾತ್ರ ಬೆಳಸು ವುದಲ್ಲ: ಸಮಾಜದ ಪ್ರಗತಿಯನ್ನು ಸಾಧಿಸಲೂ ಅವರು ಶಕ್ತರಾಗಬೇಕು. ಹಾಗೆಯೇ ಶಿಕ್ಷಣದ ಗುರಿ ಅನುಭವವನ್ನು ಒಮ್ಮೆ ಮಾತ್ರ ನೀಡುವುದಲ್ಲ; ವ್ಯಕ್ತಿಯ ಪೂರ್ವಿಕರ ಅನುಭವಗಳನ್ನು ಮಾತ್ರ ಸ್ಮರಣೆಗೆ ತಂದುಕೊಡು ವುದೂ ಅಲ್ಲ. ಡ್ಯೂಯಿಯವರು ಹೇಳುವ ಶಿಕ್ಷಣದ ಗುರಿ ವ್ಯಕ್ತಿ ನಿರಂತರವೂ ಹೊಸ ಹೊಸ ಅನುಭವಗಳನ್ನು ಕಟ್ಟಿಕೊಂಡು ಪ್ರಗತಿಗೇರುವಂತಾಗಬೇಕು. ಅವನ ಮೂಲಕ ಸಮಾಜವೂ ಚಿರಂತನ ಉತ್ತಮ ಮಾರ್ಗದಲ್ಲಿ ಮುಂದು ವರಿಯುತ್ತಿರಬೇಕು.

ಡ್ಯೂಯಿಯವರ ಅನುಯಾಯಿಯಾದ ಕಿಲ್‌ಪ್ಯಾಟ್ರಿಕ್‌ರವರು ಅದೇ ದೃಷ್ಟಿಯನ್ನು ತಮ್ಮದೇ ಆದ ಬೇರೊಂದು ಮಾರ್ಗದಲ್ಲಿ ವಿವರಿಸಿರುವರು. 'ಶಿಕ್ಷಣ ಜೀವನಕ್ಕೆ ಸಂಬಂಧಪಟ್ಟದ್ದು; ಅದರಿಂದ ಬಾಳಿನ ಅನುಭವ ದೊರೆತು ಜೀವನ ಉತ್ತಮಗೊಳ್ಳಬೇಕು. ಹೊಸ ಅನುಭವಗಳನ್ನು ಪಡೆದು, ಅವು ಹಳೆಯ ಅನುಭವಗಳೊಡನೆ ಬೆರೆತುಕೊಂಡು, ಸಮರಸವಾಗಿ, ನಿರಂತ ರವೂ ನೂತನವೂ ಉತ್ತಮವೂ ಆದ ಬಾಳು ನಿರ್ಮಾಣವಾಗುತ್ತಾ ಹೋಗ ಬೇಕು. ಎಂದಮೇಲೆ, ಯಾವ ಜೀವನದಿಂದ ಅನುಭವ ಹೆಚ್ಚಿ ಹೃದಯ ವೈಶಾಲ್ಯ ಬೆಳೆದು, ಹೊಸ ಅನುಭವಗಳ ಕಡೆಗೆ ಹೆಜ್ಜೆಯಿಡಲು ಸಾಧ್ಯವಾಗು ತ್ತದೆಯೋ ಅಂಥ ಜೀವನವೇ ನಿಜವಾದ ಶಿಕ್ಷಣ. ಹೊಸ ಹೊಸ ಅನುಭವ ಗಳನ್ನು ಪಡೆದು ವ್ಯಕ್ತಿ ಸುಸಂಸ್ಕೃತನೆನಿಸುವಂತೆಯೂ ಅವನು ವ್ಯವಹರಿ ಸುವ ಸಮಾಜವೂ ನಿರಂತರ ಪ್ರಗತಿಪಥದಲ್ಲಿ ಮುಂದುವರಿಯುವಂತೆಯೂ ಆಗಬೇಕು' ಎಂದು ಶಿಕ್ಷಣದ ಗುರಿಯನ್ನು ರೂಪಿಸಿರುವರು.

ಮೇಲಿನ ದೃಷ್ಟಿಯಲ್ಲಿ ಮಕ್ಕಳು ಹೊಸ ಹೊಸ ಅನುಭವಗಳನ್ನು ಪಡೆಯುತ್ತ ಮುಂದುವರಿಯುವುದು ಶಿಕ್ಷಣದ ಗುರಿಯಾಯಿತು. ಅದು ಈಡೇರಬೇಕಾದರೆ. ಶಾಲೆಗಳು ಮಕ್ಕಳು ಜೀವನವನ್ನು ನಡಸುವ ಸ್ಥಳಗಳಾಗಬೇಕು; ಪುಟ್ಟ ಪುಟ್ಟ ಸಮಾಜಗಳಾಗಬೇಕು. ಅಂಥ ಸಮಾಜದಲ್ಲಿ ಮಗುವೇ ಪ್ರಧಾನ ವಸ್ತು. ಜೀವನದಲ್ಲಿ ನಡೆದುಕೊಳ್ಳುವಂತೆ ಅಲ್ಲೂ ಮಕ್ಕಳು ನಡೆದುಕೊಂಡು ಅನುಭವಗಳನ್ನು ಗಳಿಸಬೇಕು. ಅದೇ ಶಿಕ್ಷಣದ ಮಾರ್ಗವಾಗಬೇಕು. ಅದರಿಂದ ಆರ್ಷೇಯವಾಗಿ ಬಂದ ಹಲವು ಆಚಾರ ವಿಚಾರಗಳನ್ನೂ ಸಂಸ್ಕೃತಿ ಸಂಪ್ರದಾಯಗಳನ್ನೂ ಮಕ್ಕಳು ಪರಿಚಯ ಮಾಡಿಕೊಳ್ಳುವುದರ ಜೊತೆಗೆ, ತಮ್ಮ ಚಟುವಟಿಕೆಯಿಂದ ಹೊಸ ಅನುಭವಗಳನ್ನು ಸಾಧಿಸುತ್ತಾ ಬೆಳೆಯುತ್ತಿರಬೇಕು. ಅಂಥ ಶಿಕ್ಷಣದ ಗುರಿ ನಮ್ಮ ಶಿಕ್ಷಣ ಪ್ರಪಂಚಕ್ಕೆ ಈಗ ಅಮೂಲ್ಯವಾದ ಸಲಹೆಯಾಗಿದೆ. ಇದರೊಡನೆ ಕೇವಲ ಓದುಬರೆಹವೇ ಶಿಕ್ಷಣದ ಗುರಿಯೆಂದು ಹೇಳುವ ಸಂಕುಚಿತ ದೃಷ್ಟಿಯನ್ನು ಹೋಲಿಸಿ ನೋಡಿದರೆ ಅಜಗಜಾಂತರ ವ್ಯತ್ಯಾಸ ಕಂಡುಬರುತ್ತದೆ. ಹಾಗಾದರೆ ಓದುಬರೆಹ ಲೆಖ್ಖಾಚಾರಗಳು ಮುಖ್ಯವಲ್ಲವೇ ಎಂಬ ಪ್ರಶ್ನೆ ಏಳಬಹುದು. ಇವೆರಡರಲ್ಲಿ ಯಾವುದನ್ನೂ ನಿರ್ಲಕ್ಷಿಸುವಂತಿಲ್ಲ. ಆದರೆ ಕೇವಲ ಓದುಬರೆಹ ಲೆಖ್ಖಾಚಾರಗಳನ್ನು ಕಲಿಯುವುದು ಮಾತ್ರ ಶಿಕ್ಷಣದ ಗುರಿಯಲ್ಲ: ಅದು ಜೀವನದ ವಿಶಾಲ ಪರಿಚಯವಾಗುವಂತೆ ಮಾಡಲು ಸಾಧನ ಮಾತ್ರ. ಎಂದಮೇಲೆ ಓದುಬರೆಹ ಲೆಖ್ಖಾಚಾರಗಳನ್ನೂ ಅನುಭವ ಸಾಧನೆಯನ್ನೂ ಸಮನ್ವಯಗೊಳಿಸಿಕೊಂಡು ಮಕ್ಕಳ ಶಿಕ್ಷಣ ನಡೆಯಬೇಕು. ಜೊತೆಗೆ, ಅವರವರ ಅಭಿರುಚಿಗಳನ್ನು ಅರಿತುಕೊಂಡು ಅವನ್ನು ಬೆಳಸುವ ಯತ್ನವೂ ನಡೆಯಬೇಕು.

ಮೇಲೆ ಹೇಳಿದ ದೃಷ್ಟಿಯಲ್ಲಿ ಅವಲೋಕಿಸುವುದಾದರೆ ನಿಜವಾದ ಶಿಕ್ಷಣದ ಗುರಿ ಬಹು ವಿಶಾಲವಾದುದು—ಜೀವನದಷ್ಟೇ ವಿಶಾಲವಾದುದು. ಸಮಾಜ ಜೀವನದಿಂದಲೂ, ವಾತಾವರಣದ ಪ್ರಭಾವದಿಂದಲೂ ಮಕ್ಕಳಿಗೆ ಶಿಕ್ಷಣ ದೊರೆಯಬೇಕು; ಕೇವಲ ಪುಸ್ತಕಗಳನ್ನು ಹೃದ್ಗತ ಮಾಡುವುದರಿಂದಲೇ ಅಲ್ಲ. ದೈಹಿಕ, ನೈತಿಕ, ಸಾಮಾಜಿಕ ಸನ್ನಿವೇಶಗಳು ವ್ಯಕ್ತಿಯ ಮೇಲೆ ಪರಿಣಾಮ ಹುಟ್ಟಿಸುತ್ತಲೇ ಇರುತ್ತವೆ. ಆ ಪರಿಣಾಮ

ದಿಂದ ವ್ಯಕ್ತಿಯ ಭಾವನೆ, ಯೋಚನೆ, ಕ್ರಿಯೆ, ಮುಂತಾದುವುಗಳು ಮಾರ್ಪ ಡುತ್ತಿರುತ್ತವೆ. ಹಾಗೆಯೇ ವ್ಯಕ್ತಿಯೂ ತನ್ನ ಶಕ್ತಿಸಾಮರ್ಥ್ಯಗಳಿಂದ ಸನ್ನಿವೇಶಗಳನ್ನೂ ಮಾರ್ಪಡಿಸುತ್ತಿರುತ್ತಾನೆ. ಹೀಗೆ ವ್ಯಕ್ತಿ ಸನ್ನಿವೇಶ ಗಳಿಂದ ಮಾರ್ಪಟ್ಟು, ತಾನೂ ಅವನ್ನು ಮಾರ್ಪಡಿಸಿ ಪಡೆಯುವ ಅನುಭವ ಕೋಟಿಯೇ ಶಿಕ್ಷಣ. ಅದರಿಂದ ಶಿಕ್ಷಣ ದ್ವಿಮುಖವಾದುದು. ಇಂಥ ಶಿಕ್ಷಣಕಾರ್ಯದಲ್ಲಿ ಮೂರು ಅಂಶಗಳು ಸಂಬಂಧಿಸಿವೆ; ವ್ಯಕ್ತಿ, ಸನ್ನಿವೇಶ ಮತ್ತು ಅನ್ವಯ ಕಾರ್ಯ. ಒಬ್ಬೊಬ್ಬ ವ್ಯಕ್ತಿಯೂ ಇನ್ನೊಬ್ಬ ವ್ಯಕ್ತಿಯಿಂದ ಅಭಿರುಚಿ, ಪ್ರತಿಭೆ, ಬುದ್ಧಿಶಕ್ತಿ, ಮುಂತಾದ ಮನೋಗುಣಗಳಲ್ಲಿ ಭಿನ್ನ ವಾಗಿರುತ್ತಾನೆ. ಕೆಲವರು ಇದನ್ನೊಪ್ಪದೆ ಎಲ್ಲರ ಭಾವನೆಗಳೂ ಒಂದೇ ಎಂದು ವಾದಿಸಿ, ಸಮಾಜದ ಭಾವನೆಗಳೇ ವ್ಯಕ್ತಿಯದೆಂದು ಹೇಳುವರು. ಈ ಹೇಳಿಕೆಯಲ್ಲಿ ಸ್ವಲ್ಪ ಸತ್ಯಾಂಶವಿದ್ದರೂ ಪೂರ್ಣವಾಗಿ ನಿಜವೆನ್ನು ವಂತಿಲ್ಲ. ಎಲ್ಲ ವ್ಯಕ್ತಿಗಳಿಗೂ ಹಲವು ಹುಟ್ಟುಗಳೇನೋ ಸಾಮಾನ್ಯವಾಗಿವೆ. ಆದರೆ ಆ ಗುಣಗಳ ಪರಿಮಾಣದಲ್ಲೂ ಮಾರ್ಪಡುವ ಶಕ್ತಿಯಲ್ಲೂ ಒಬ್ಬ ವ್ಯಕ್ತಿ ಇನ್ನೊಬ್ಬನನ್ನು ಹೋಲುವುದೇ ಇಲ್ಲ. ಒಬ್ಬ ವ್ಯಕ್ತಿ ಪೂರ್ಣವಾಗಿ ಇನ್ನಿತರರಿಂದ ಭಿನ್ನವೆಂದಾಗಲಿ, ಎಲ್ಲ ವ್ಯಕ್ತಿಗಳೂ ಸಮಾಜದ ಒಂದೇ ರೀತಿಯ ಮುರುಕುಗಳೆಂದಾಗಲಿ ಪರಿಗಣಿಸುವಂತಿಲ್ಲ. ಅದರಿಂದ ಆಯಾ ವ್ಯಕ್ತಿಗೆ ಇರತಕ್ಕ ವಿಶೇಷ ಶಕ್ತಿಯನ್ನು ಪರಿಶೀಲಿಸಿ ಅದು ಪೂರ್ಣತೆ ಗೇರುವ ಸನ್ನಿವೇಶಗಳನ್ನೊದಗಿಸುವುದೂ ಶಿಕ್ಷಣದ ಗುರಿಯೆ. ಹಾಗೆಯೇ ಎಲ್ಲ ವ್ಯಕ್ತಿಗಳಲ್ಲೂ ಸಾಮಾಜಿಕ ಗುಣಧರ್ಮಗಳೂ ವೃದ್ಧಿ ಹೊಂದಬೇಕು. ಆಗ ಮಾತ್ರ ತಮ್ಮ ತಮ್ಮ ವಿಶೇಷ ಗುಣಗಳು ಪರಿಪೂರ್ಣತೆಗೇರಿ ವ್ಯಕ್ತಿಗಳು ಜೀವನದ ವಿವಿಧ ಕ್ಷೇತ್ರಗಳಲ್ಲಿ ಪ್ರವೀಣರೂ ಮುಂದಾಳುಗಳೂ ಆಗುತ್ತಾರೆ. ಅಂಥ ವ್ಯಕ್ತಿಗಳು ಮಾತ್ರ ತಮ್ಮ ಸನ್ನಿವೇಶಗಳನ್ನು ತಮ್ಮ ಪ್ರಭಾವದಿಂದಲೂ ಶಕ್ತಿಸಾಮರ್ಥ್ಯದಿಂದಲೂ ಮಾರ್ಪಡಿಸಬಲ್ಲರು. ಅವರ ಸಾಮಾಜಿಕ ಗುಣ ಧರ್ಮಗಳೂ ಸನ್ಮಾರ್ಗದಲ್ಲಿ ಬೆಳೆದಿದ್ದರೆ ಆ ಮಾರ್ಪಾಟುಗಳು ಸಮಾಜಕ್ಕೆ ಹಿತವೆನಿಸುವಂತೆ ನೆರವೇರಬಲ್ಲವು. ಆ ಮೂಲಕವೇ ಅಲ್ಲವೇ ಸಕಲ ಮಾನವರ ಕಲ್ಯಾಣ ಸಾಧನೆಯಾಗುವುದು? ಅಂಥ ಪ್ರತಿಫಲ ನಮ್ಮ ಶಿಕ್ಷ ಣದ ಗುರಿಯಾಗಿರಬೇಕು.

ಇದುವರೆಗೂ ವ್ಯಕ್ತಿಯ ಸರ್ವತೋಮುಖವಾದ ಬೆಳವಣಿಗೆಯೇ ಶಿಕ್ಷಣದ ಗುರಿಯೆಂದು ವಿವರಿಸಲಾಗಿದೆ. ಆದರೆ ಕೆಲವರು ಏಕಮುಖವಾದ ಗುರಿಯನ್ನು ವಾದಿಸುವುದುಂಟು. ಅವುಗಳಲ್ಲಿ ಕೆಲವನ್ನು ಪರಿಚಯಮಾಡಿಕೊಳ್ಳುವುದು ಉಚಿತವೆನಿಸದಿರಲಾರದು.

ಕೆಲವರು ಮಾನಸಿಕ ಬೆಳವಣಿಗೆಗೆ ಪ್ರಾಶಸ್ತ್ಯಕೊಟ್ಟರೆ ಮತ್ತೆ ಕೆಲವರು ದೈಹಿಕ ಬೆಳವಣಿಗೆಗೆ ಪ್ರಾಶಸ್ತ್ಯಕೊಡುತ್ತಾರೆ. ನಿಜವಾಗಿ ಇವುಗಳಲ್ಲಿ ಒಂದನ್ನು ಬಿಟ್ಟು ಇನ್ನೊಂದನ್ನು ಸಾಧಿಸುವಂತೆಯೇ ಇಲ್ಲ; ಸಾಧಿಸಲು ಯತ್ನಿಸುವುದು ಉಚಿತವೂ ಅಲ್ಲ. ಎರಡೂ ಜೊತೆಯಲ್ಲೇ ವೃದ್ಧಿಯಾಗಬೇಕು. ಪ್ರತಿಭಾವಂತರಾದ ಬಲಹೀನರು ಸಮಾಜ ದೃಷ್ಟಿಯಲ್ಲಾಗಲಿ, ವ್ಯಕ್ತಿಯ ದೃಷ್ಟಿಯಲ್ಲಾಗಲಿ ಯಶಸ್ವಿಯಾಗಿ ಬಾಳಲಾರರು. ಹಾಗೆಯೇ ಬಲಾಢ್ಯರಾದ ಪ್ರತಿಭಾಹೀನರ ಬಾಳೂ ಉಪಯುಕ್ತ ಎನಿಸಲಾರದು. ಆದರಿಂದ ದೃಢಕಾಯರೂ ಬುದ್ಧಿಶಾಲಿಗಳೂ ಆದ ಜನತೆಯ ನಿರ್ಮಾಣವೇ ಶಿಕ್ಷಣದ ಗುರಿಯಾಗಿರಬೇಕು. ಮಕ್ಕಳ ಬುದ್ಧಿಶಕ್ತಿಯನ್ನು ಬೆಳಸುವುದೇ ಶಿಕ್ಷಣದ ಗುರಿಯೆಂದು ಕೆಲವರು ವಾದಿಸಿದರೆ ಅವರನ್ನು ಸದ್ಗುಣಿಗಳನ್ನಾಗಿ ಮಾಡುವುದೇ ಆ ಗುರಿಯೆಂದು ಮತ್ತೆ ಕೆಲವರು ವಾದಿಸುವುದುಂಟು. ಈ ಸಂದರ್ಭದಲ್ಲಿ ಒಂದಂಶವನ್ನು ನೆನಪಿನಲ್ಲಿಡಬೇಕು: ಬುದ್ಧಿಯಿಲ್ಲದ ಸದ್ಗುಣಿಯಿಂದ ಅನರ್ಥವಾಗುವಂತೆ ಗುಣಹೀನನ ಬುದ್ಧಿಶಕ್ತಿಯಿಂದಲೂ ಅನರ್ಥವಾಗಬಹುದು. ಎರಡರಲ್ಲಿ ಯಾವುದು ಕುಂಠಿತವಾದರೂ ವ್ಯಕ್ತಿಯ ಮತ್ತು ಸಮಾಜದ ಜೀವನ ಸುಗಮವಾಗುವಂತಿಲ್ಲ. ಬುದ್ಧಿಶಕ್ತಿಯಂತೆ ಸದ್ಭಾವನೆಗಳನ್ನೂ ಬೆಳಸುವುದು ಶಿಕ್ಷಣದ ಗುರಿಯಾಗಿರಬೇಕು.

ಕೆಲವರು ವ್ಯಕ್ತಿಗಳಿಗೆ ಉದ್ಯೋಗ ಶಿಕ್ಷಣ ಕೊಡುವುದೇ ನಮ್ಮ ಶಿಕ್ಷಣದ ಗುರಿಯೆಂದೂ, ಇನ್ನು ಕೆಲವರು ಅವರನ್ನು ಸಂಸ್ಕೃತಿಸಂಪನ್ನರನ್ನಾಗಿ ಮಾಡುವುದೇ ಶಿಕ್ಷಣದ ಗುರಿಯೆಂದೂ ವಾದಿಸುವರು. ಮೊದಲನೆಯ ದೃಷ್ಟಿಯನ್ನು ಜೀವನೋಪಾಯದ ಗುರಿಯೆಂದೂ, ಎರಡನೆಯದನ್ನು ಮಾನಸ ಸಂಸ್ಕರಣದ ಗುರಿಯೆಂದೂ ಕರೆಯಬಹುದು. ಇವುಗಳನ್ನು ವಿಮರ್ಶಿಸುವಾಗ, ಕೇವಲ ಹೊಟ್ಟೆ ಹೊರೆದುಕೊಂಡು ಬದುಕುವುದೂ ಒಂದು ಜೀವನವೆ, ಸುಸಂಸ್ಕೃತರಾದರೂ ಸಂಪಾದನೆಯ ಮಾರ್ಗವನ್ನೇ

ಕಾಣದವರ ಜೀವನ ಸಾರ್ಥಕವೆ, ಎಂಬ ಪ್ರಶ್ನೆಗಳೇಳುತ್ತವೆ. ಇವೆರಡು ಶಕ್ತಿಗಳೂ ಇದ್ದರೆ ಮಾತ್ರ ಬಾಳು ಸುಖವಾಗುವುದು. ಇವೆರಡರಲ್ಲಿ ಒಂದು ಮಾತ್ರ ಇದ್ದರೆ ವ್ಯಕ್ತಿಗಾಗಲಿ ಸಮಾಜಕ್ಕಾಗಲಿ ಸುಖವಿರಲಾರದು. ಮಾನವನಂಥ ಮಹೋನ್ನತ ಜೀವಿ ಪಶುವಿನಂತೆ ಹೊಟ್ಟೆ ಹೊರೆದುಕೊಂಡು ಬಾಳಿ, ಸತ್ತರೆ, ಜೀವನ ಸಾರ್ಥಕವಾಗಲಾರದು. ಹಾಗೆಯೇ ಅನ್ನ ಬಟ್ಟೆಗಾಗಿ ಇತರರನ್ನು ಅವಲಂಬಿಸುವ ಸಂಸ್ಕೃತಿಸಂಪನ್ನನ ಬಾಳೂ ಸಮಾಜಕ್ಕೆ ಒಂದು ಹೊರೆಯೇ. ವೃತ್ತಿ ಶಿಕ್ಷಣದಿಂದ ಜೀವನೋಪಾಯವಾದರೆ ಮಾನಸ ಸಂಸ್ಕರಣದಿಂದ ಬಾಳು ರಮ್ಯವಾಗಿ ಜೀವನದಲ್ಲಿ ಶಾಂತಿ ನೆಲಸಬಲ್ಲದು. ಜೀವನೋಪಾಯ ಶಕ್ತಿಯ ಜೊತೆಗೆ ಸಂಸ್ಕೃತಿಯ ಮನಶ್ಶಾಂತಿ ಇದ್ದಾಗಲೇ ವ್ಯಕ್ತಿಗೂ ಸಮಾಜಕ್ಕೂ ಸುಖವೆನ್ನಿಸುವುದು. ಸಂಸ್ಕೃತಿ ವ್ಯಕ್ತಿಯನ್ನು ವಿನಯಸಂಪನ್ನನನ್ನಾಗಿಯೂ ಚತುರ ಸಂಭಾಷಿಣಿಯನ್ನಾಗಿಯೂ ಮಾಡಬಲ್ಲದು. ವಿರಾಮ ಕಾಲವನ್ನು ಸದ್ವಿನಿಯೋಗಪಡಿಸಿಕೊಳ್ಳಲೂ ಅವಕಾಶವಾಗುತ್ತದೆ. ಜೀವನೋಪಾಯಕ್ಕಾಗಿ ದುಡಿದು ಮನೆಗೆ ಬಂದು ವಿರಾಮ ಕಾಲದಲ್ಲಿ ಕಲೆ, ಸಾಹಿತ್ಯ, ಮುಂತಾದುವುಗಳಲ್ಲಿ ವಿಹರಿಸಿ ಮನಶ್ಶಾಂತಿಯನ್ನು ಪಡೆದರೆ ಮುಂದಿನ ದಿನ ಹೆಚ್ಚಿನ ಉತ್ಸಾಹದಿಂದ ನಮ್ಮ ವೃತ್ತಿಯಲ್ಲಿ ನಿರತರಾಗಬಹುದು. ಎಂದರೆ, ವೃತ್ತಿಯ ಜಂಜಡ ಸಂಸ್ಕೃತಿಯಿಂದ ಪರಿಹಾರವಾಗುತ್ತದೆ. ಜೊತೆಗೆ ಮಾನಸ ಸಂಸ್ಕರಣ ನಮ್ಮ ವೃತ್ತಿಯನ್ನು ಉತ್ತಮಪಡಿಸಲೂ ನೆರವಾಗುತ್ತದೆ. ಆದರಿಂದ ನಮ್ಮ ಮಕ್ಕಳಿಗೆ ವೃತ್ತಿ ಶಿಕ್ಷಣವನ್ನು ಕೊಡುವುದರ ಜೊತೆಗೆ ಕಲೆ, ಸಾಹಿತ್ಯ, ಮುಂತಾದುವುಗಳಲ್ಲಿ ಅಭಿರುಚಿಯನ್ನೂ ಬೆಳಸುವದು ನಮ್ಮ ಶಿಕ್ಷಣದ ಗುರಿಯಾಗಿರಬೇಕು. ಇವೆರಡೂ ಸಮರಸವಾಗಿ ಬೆಳೆದಿದ್ದರೇಯೆ ವ್ಯಕ್ತಿಯ ಬಾಳು ಆನಂದಮಯವಾಗಿ ಸಮಾಜದಲ್ಲಿ ಸುಖಶಾಂತಿಗಳು ನೆಲಸುವುದು.

ಕೆಲವರು ಜ್ಞಾನಾರ್ಜನೆಗೆ ಹೆಚ್ಚಿನ ಸ್ಥಾನವನ್ನೂ, ಇನ್ನು ಕೆಲವರು ಮಾನಸಿಕ ಶಿಸ್ತಿನ ಶಿಕ್ಷಣಕ್ಕೆ ಹೆಚ್ಚಿನ ಸ್ಥಾನವನ್ನೂ ಕೊಡುವುದುಂಟು. ಜ್ಞಾನಾರ್ಜನೆ ಅಗತ್ಯ: ಹಾಗೂ ಉಪಯುಕ್ತ ಜ್ಞಾನಾರ್ಜನೆ ಎಲ್ಲರಿಗೂ ಅಗತ್ಯ. ಶಾಲೆಗಳು ಮಕ್ಕಳಿಗೆ ಅದನ್ನು ಒದಗಿಸಲೇ ಬೇಕು. ಆದರೆ ಗ್ರೀಕ್, ಲ್ಯಾಟಿನ್, ಮುಂತಾದ ಭಾಷೆಗಳ ಅರ್ಥವಾಗದ ಶ್ಲೋಕಗಳನ್ನು

ಹೃದ್ಗತಮಾಡಿಸುವುದರಿಂದ ಈ ಧ್ಯೇಯ ಸಿದ್ಧಿಸುವಂತಿಲ್ಲ. ಹಿಂದಿನ ಶಿಕ್ಷಕರು ಮಕ್ಕಳ ಮನಸ್ಸಿನಲ್ಲಿ ಒಂದೊಂದು ಶಕ್ತಿಗೂ ಒಂದೊಂದು ಭಾಗ ವಿದೆಯೆಂದು ತಿಳಿದಿದ್ದರು. ಆ ಭಾಗಕ್ಕೆ ಯಾವುದಾದರೂ ಕೆಲಸ ಕೊಟ್ಟು ಕಸರತ್ತು ಮಾಡಿಸಿದರೆ ಆಗ ಮನಸ್ಸಿಗೆ ಒಂದು ಶಿಕ್ಷಣ (ಶಿಸ್ತು) ದೊರಕು ವುದೆಂದೂ, ಮನಸ್ಸು ಆ ಅನುಭವದಿಂದ ಇತರ ಕಾರ್ಯಗಳನ್ನು ನಿರ್ವಹಿ ಸುವ ಶಕ್ತಿಯನ್ನು ಪಡೆಯುವುದೆಂದೂ ನಂಬಿದ್ದರು. ಅವರ ಈ ಭಾವನೆ ಸಾಧುವಲ್ಲವೆಂದು ಈಗ ದೃಢಪಟ್ಟಿದೆ. ಒಂದೊಂದು ಕೆಲಸ ಮಾಡು ವುದಕ್ಕೂ ಮೆದುಳಿನಲ್ಲಿ ಒಂದೊಂದು ಶಕ್ತಿಯಿಲ್ಲ. ಅರ್ಥ ತಿಳಿಯದಿದ್ದರೂ ಕಷ್ಟಪಟ್ಟು ಒಂದು ಲ್ಯಾಟಿನ್ ಪದ್ಯವನ್ನು ಕವಾತು ಮಾಡಿದಂತೆ ಹೃದ್ಗತ ಮಾಡಿದರೆ ಅದರಿಂದ ಆಗುವ ಮನಸ್ಸಿನ ಶಿಕ್ಷಣದಿಂದ ಕನ್ನಡ ಕವನ ವೊಂದನ್ನು ಹೃದ್ಗತಮಾಡಲು ಯಾವ ವಿಧದಲ್ಲೂ ಸಹಾಯವಾಗುವಂತಿಲ್ಲ. ಆದರೆ, ಹಾಗೆ ಹೃದ್ಗತಮಾಡುವ ಉತ್ತಮ ಮಾರ್ಗವನ್ನು ಮಕ್ಕಳಿಗೆ ಕಲಿ ಸಿದ್ದರೆ ಆ ಮಾರ್ಗದ ಪರಿಚಯ ಮಾತ್ರ ಬೇರೆ ಕ್ಷೇತ್ರಗಳಲ್ಲೂ ಸಹಾಯ ಮಾಡುತ್ತದೆ. ಕುರುಡು ಕಸರತ್ತಿನಿಂದ ಮನಸ್ಸಿಗೆ ಯಾವ ಶಿಕ್ಷಣವೂ ದೊರಕುವುದಿಲ್ಲ; ಇತರ ಕ್ಷೇತ್ರಗಳಲ್ಲಿ ತಕ್ಕಷ್ಟು ಪ್ರಯೋಜನವೂ ಆಗಲಾ ರದು. ಏನನ್ನಾದರೂ ಕಲಿಯಲಿ, ಮನಸ್ಸಿಗೆ ಕಸರತ್ತಾದರೆ ಸಾಕು ಎಂದು ವಾದಿಸುವುದು ಸೂಕ್ತವಲ್ಲ. ಒಳ್ಳೆಯ ಮಾರ್ಗದಲ್ಲಿ ಕಲಿಯಲಿ: ಅದರಿಂದ ಕಲಿಯುವ ರೀತಿ ಪರಿಚಯವಾಗಿ, ಮನಸ್ಸಿಗೆ ಶಿಸ್ತೂ ದೊರಕುತ್ತದೆ. ಹಾಗೆಯೇ ಒಳ್ಳೆಯ ಜ್ಞಾನವನ್ನು ಕಲಿಯಲಿ: ಅದು ಜೀವನದಲ್ಲಿ ಉಪ ಯೋಗವಾಗುತ್ತದೆ. ಮನಸ್ಸಿಗೆ ಶಿಸ್ತನ್ನು ದೊರಕಿಸುವುದೂ ಜ್ಞಾನಾರ್ಜನೆ ಯಂತೆಯೇ ಆವಶ್ಯಕ. ಆದರೆ ಮನಸ್ಸಿನ ಕಸರತ್ತು ಉಪಯುಕ್ತ ಜ್ಞಾನ ವನ್ನು ಕಲಿಯುವುದರ ಮೂಲಕ ನಡೆಯಲಿ. ಆಗ ಜೀವನಕ್ಕೆ ಅನುಕೂಲಿ ಸುವ ಜ್ಞಾನಾರ್ಜನೆಯಾಗುತ್ತದೆ. ಕಸರತ್ತು ನಡೆಯುವಾಗ ಒಳ್ಳೆಯ ಕ್ರಮದ ಪರಿಚಯವನ್ನೂ ಮಕ್ಕಳು ಮಾಡಿಕೊಳ್ಳಲಿ; ಅದರಿಂದ ಅವರು ಪಡೆಯುವ ಶಿಸ್ತು ಇನ್ನಿತರ ಕ್ಷೇತ್ರಗಳಲ್ಲೂ ಪ್ರಯೋಜನಕಾರಿಯಾಗು ತ್ತದೆ. ಜ್ಞಾನಾರ್ಜನೆಯೊಂದೇ ಸಾಲದೆಂಬುದನ್ನು ಎಲ್ಲರೂ ಒಪ್ಪಬೇಕು.

ಅದರಿಂದಾದ ಅನುಭವದಿಂದ ಇತರ ಸನ್ನಿವೇಶಗಳಲ್ಲೂ ವಿವೇಚನೆಯಿಂದ ವರ್ತಿಸಲು ಅನುಕೂಲಿಸುವ ' ಶಿಸ್ತೂ ' ಆವಶ್ಯಕ.

ಮೇಲೆ ಪ್ರತಿಪಾದಿಸಿದ ಏಕಮುಖವಾದ ನಾಲ್ಕು ವಾದಗಳಲ್ಲಿ ಯಾವುದರಲ್ಲೂ ಒಂದೇ ಗುರಿ ಸಾಧುವಲ್ಲ. ಏಕೆಂದರೆ, ನಾವು ತರಪೇತು ಮಾಡುತ್ತಿರುವುದು ಒಂದು ದೇಹವನ್ನಲ್ಲ, ಒಂದು ಮನಸ್ಸನ್ನಲ್ಲ—ಇಡೀ ಮಾನವನನ್ನು! ಆದರಿಂದ ವ್ಯಕ್ತಿಯ ಸರ್ವತೋಮುಖವಾದ ಅಭಿವೃದ್ಧಿ ಸಾಧನೆಯಾಗಬೇಕಾದರೆ, ಉತ್ತಮ ಜೀವನ ನಡಸುವಂತಾಗಬೇಕಾದರೆ ಸರ್ವಾಂಗೀಯ ಶಿಕ್ಷಣವೀಯಬೇಕು. ಅವನ ದೇಹ ವೃದ್ಧಿಗೊಳ್ಳಬೇಕು. ಮನಸ್ಸು ಸಂಸ್ಕರಣಗೊಳ್ಳಬೇಕು. ವೃತ್ತಿನೈಪುಣ್ಯತೆ ಬರಬೇಕು. ಸಾಹಿತ್ಯ, ಕಲೆ—ಇವುಗಳ ಅಭಿರುಚಿಯೂ ಬೆಳೆಯಬೇಕು. ಸಮಾಜ ಜೀವನವನ್ನು ನಡಸುವ ಶಕ್ತಿಸಾಮರ್ಥ್ಯಗಳೂ ದೊರಕಬೇಕು. ಕುಟುಂಬ ಜೀವನವನ್ನು ಸುಖಮಯವಾಗಿಸಿಕೊಳ್ಳುವ ಶಿಕ್ಷಣವೂ ದೊರಕಬೇಕು. ಸಮಾಜದಲ್ಲಿ ಬಾಳಲು ಅನುಕೂಲಿಸುವ ಸಹಕಾರ, ಸದ್ಭಾವನೆ, ಸಹೃದಯತೆಗಳೂ ಬೆಳೆಯಬೇಕು. ಒಟ್ಟಿನಲ್ಲಿ ವ್ಯಕ್ತಿಯ ಮತ್ತು ಸಮಾಜದ ಜೀವನ ಸುಖ ಶಾಂತಿಗಳ ತವರಾಗಿ ಪ್ರಗತಿಯನ್ನು ಸಾಧಿಸುವಂತೆ ಮಾಡುವುದೇ ನಮ್ಮ ಶಿಕ್ಷಣದ ಗುರಿಯಾಗಬೇಕು.

# ೪. ಶಿಕ್ಷಣ ಸಾಧನಗಳು

ಶಿಕ್ಷಣ ಸಾಧನಗಳಲ್ಲಿ ಪಾಠಶಾಲೆ ಪ್ರಧಾನವಾದ್ದಾದರೂ ಜನತೆಯಲ್ಲಿ ಅದೊಂದೇ ಶಿಕ್ಷಣ ಸಾಧನವೆಂಬ ನಂಬಿಕೆ ಬೇರೂರಿದೆ; ವಿದ್ಯಾರ್ಥಿಗಳಲ್ಲಿ ಕಂಡುಬರಬಹುದಾದ ನ್ಯೂನತೆಗಳಿಗೆಲ್ಲ ಪಾಠಶಾಲೆಗಳೇ ಕಾರಣವೆನ್ನುವ ಮನೋಭಾವವೂ ಬೆಳೆದುಬಂದಿದೆ. ಆದರೆ ಮಕ್ಕಳ ಶಿಕ್ಷಣ ಕಾರ್ಯವನ್ನು ಸಾಧಿಸುತ್ತಿರುವ ಇತರ ಸಂಘಸಂಸ್ಥೆಗಳೂ ಇವೆಯೆಂಬುದನ್ನು ಎಲ್ಲರೂ ಅರಿತುಕೊಳ್ಳಬೇಕು.

ಮಕ್ಕಳು ಪಾಠಶಾಲೆಗಳಲ್ಲಿರುವ ಕಾಲವಾದರೂ ಎಷ್ಟು? ಕೇವಲ ದಿನಚರಿಯಲ್ಲಿ ಕಾಲು ಭಾಗವನ್ನು ಮಾತ್ರ ಅಲ್ಲಿ ಕಳೆಯುವರು. ಮಿಕ್ಕ ಮುಕ್ಕಾಲು ಭಾಗವನ್ನು ತಾಯಿತಂದೆಗಳೊಡನೆಯೂ, ಸಮಾಜದ ಇನ್ನಿತರ ಸನ್ನಿವೇಶಗಳಲ್ಲೂ ವಿನಿಯೋಗಿಸುವರು. ಎಂದಮೇಲೆ ಆ ಸನ್ನಿವೇಶಗಳೂ ಮಕ್ಕಳ ಬೆಳವಣಿಗೆಯಲ್ಲಿ ಪಾಠಶಾಲೆಗಳಷ್ಟೋ, ಇನ್ನೂ ಹೆಚ್ಚಾಗಿಯೋ ತಮ್ಮ ಕೈವಾಡವನ್ನು ಬೀರಿಯೇ ಬೀರುತ್ತವೆ. ಜೀವನವೇ ಶಿಕ್ಷಣವೆಂದ ಮೇಲೆ ಮಕ್ಕಳಲ್ಲಿ ಕಾಣಬಹುದಾದ ಲೋಪದೋಷಗಳಿಗಾಗಲಿ ಸದ್ವರ್ತನೆ ಗಳಿಗಾಗಲಿ ಪಾಠಶಾಲೆಗಳಂತೆ ಇತರ ಸಂಘಸಂಸ್ಥೆಗಳೂ ಕಾರಣವಾಗಿವೆ ಯೆಂಬುದು ಸ್ಪಷ್ಟಪಡುತ್ತವೆ. ಹಾಗಾದರೆ ಅಂಥ ಜವಾಬ್ದಾರಿ ಹೊತ್ತಿರುವ ಸಮಾಜದ ಇತರ ಸಂಘಸಂಸ್ಥೆಗಳಾವುವು?

**ಶಿಕ್ಷಣ ಸನ್ನಿವೇಶಗಳು ಮತ್ತು ಸಂಸ್ಥೆಗಳು:** ಮಕ್ಕಳು ಆಡುವ, ವಾಸಿಸುವ, ವ್ಯವಹರಿಸುವ, ವಿಹರಿಸುವ, ಎಲ್ಲ ಸನ್ನಿವೇಶಗಳೂ ಅವರ ಜೀವ ನದಲ್ಲಿ ಪರಿಣಾಮ ಹುಟ್ಟಿಸುತ್ತಲೇ ಇವೆ. ಅಂಥ ಅನೇಕ ಶಿಕ್ಷಣ ಸನ್ನಿವೇಶ ಗಳಲ್ಲಿ ಪಾಠಶಾಲೆಯೂ ಒಂದು. ಹಾಗೆ ಮಕ್ಕಳ ಜೀವನದಲ್ಲಿ ಪರಿಣಾಮ ಕಾರಿಯಾಗಿ ಶಿಕ್ಷಣವನ್ನುಂಟುಮಾಡುವ ಸಂಘಸಂಸ್ಥೆಗಳಲ್ಲಿ ನಾಟಕ, ಚಲನ ಚಿತ್ರ, ಪುಸ್ತಕಭಂಡಾರ, ಜಾಹೀರಾತು ಪ್ರಕಟನೆ, ವಸ್ತುಪ್ರದರ್ಶನ, ಕಲಾ ಭವನ, ಬಾಲಚಮೂ, ಮುಂತಾದವು ಪ್ರಧಾನವಾದವು. ಜೊತೆಗೆ

ಕುಟುಂಬ, ಸಮಾಜ, ಮಠಪೀಠ, ಸರ್ಕಾರ ಮತ್ತು ಪಾಠಶಾಲೆಗಳೂ ಅದೇ ಕಾರ್ಯವನ್ನು ಸಾಧಿಸುತ್ತಿವೆ.

೧. **ನಾಟಕಗಳು:** ನಾಟಕಗಳು ಶಿಕ್ಷಣ ಸಂಸ್ಥೆಯೆಂದಿದ್ದರೆ ಹಿಂದಿನವರು ಒಪ್ಪುತ್ತಿರಲಿಲ್ಲ. ಪಾಶ್ಚಿಮಾತ್ಯರಲ್ಲೂ ಈ ಅಭಿಪ್ರಾಯವಿತ್ತು. ನಾಟಕ ಆಡುವುದಾಗಲಿ, ನೋಡುವುದಾಗಲಿ ನಿಷಿದ್ಧವೆಂದು ಅನೇಕರು ಭಾವಿಸಿದ್ದರು. ಈಗ ಆ ದೃಷ್ಟಿ ಬಹುವಾಗಿ ಬದಲಾಯಿಸಿದೆ. ಹಿಂದಿನಿಂದಲೂ ನಾಟಕ ಕಲೆಯಲ್ಲಿ ಮಾನವನಿಗೆ ಪರಿಚಯವಿದ್ದರೂ ಅದೂ ಒಂದು ಶಿಕ್ಷಣ ಕ್ರಮವೆಂದು ಭಾವಿಸಿರಲಿಲ್ಲ. ಈಚೆಗೆ ಪಾಠಶಾಲೆಗಳಲ್ಲೂ ಪಾಠಗಳನ್ನು ನಾಟಕೀಕರಣವಾಗಿ ಬೋಧಿಸುವುದನ್ನು ನೋಡಿದರೆ ಆ ಕ್ರಮದ ಬೆಲೆ ಗೊತ್ತಾಗುತ್ತದೆ. ಹಲವು ಸಂಸ್ಥೆಗಳು ತಮ್ಮ ಆದರ್ಶಗಳನ್ನು ನಾಟಕದ ಮೂಲಕ ಜನತೆಯ ಮೇಲೆ ಬೀರಿ, ಸತ್ಪರಿಣಾಮವನ್ನುಂಟುಮಾಡಲು ಯತ್ನಿಸುತ್ತಿವೆ. ಅಂಥ ನಾಟಕ ಸಂಸ್ಥೆಯ ಉದ್ದೇಶ ಜನತೆಯ ಶಿಕ್ಷಣ ಸಾಧನೆಯೇ ಆಗಿದೆ. ನಾಟಕಗಳು ಜನಜೀವನದಲ್ಲಿ ಬೆಳೆದುಬಂದಿರುವ ಕಲೆ, ಸಂಸ್ಕೃತಿ ಮತ್ತು ಸಾಹಿತ್ಯಗಳನ್ನು ಮನಮೋಹಕವಾಗಿ ಪ್ರದರ್ಶಿಸುತ್ತವೆ. ರಂಗಭೂಮಿಯ ರಚನೆ, ಅಲಂಕಾರ, ಬೆಳಕನ್ನೆರಚುವ ವಿದ್ಯುದ್ದೀಪಗಳ ಇಂದ್ರಜಾಲ, ಸನ್ನಿವೇಶ ರಚನೆಗಾಗಿ ಉಪಯೋಗಿಸಿಕೊಂಡಿರುವ ಚಿತ್ರಕಲಾ ಕೌಶಲ್ಯ—ಇವೆಲ್ಲ ಜನತೆಯ ಭಾವನೆಯ ಬೆಳವಣಿಗೆಗೂ ಮನರಂಜನೆಗೂ ನೆರವಾಗುತ್ತವೆ. ಕೆಲವು ಸಂಸ್ಥೆಗಳು ಕೇವಲ ಆರ್ಥಿಕದೃಷ್ಟಿಯಿಂದಲೇ ಹೊರಟಿದ್ದರೂ ಮೇಲಿನ ಆವಶ್ಯಕತೆಯ ಕಡೆ ಗಮನ ಕೊಟ್ಟ ಹೊರತು ತಮ್ಮ ಉದ್ದೇಶ ನೆರವೇರುವಂತಿಲ್ಲ. ನಾಡಿನ ಪ್ರಖ್ಯಾತ ನಟನಟಿಯರ ಅನುಪಮ ಕಲಾ ಕೌಶಲ್ಯವನ್ನು ನೋಟಕರಿಗೆ ಒದಗಿಸುವಾಗ ಅಪ್ರಾಸಂಗಿಕವಾಗಿಯಾದರೂ ಅವರಲ್ಲಿ ಕಲೋಪಾಸನೆಯನ್ನು ಹುಟ್ಟಿಸುವುದು; ಸಂಗೀತ, ನೃತ್ಯ, ಅಭಿನಯ ಮತ್ತು ಸಾಹಿತ್ಯ—ಇವು ನೋಟಕರ ಮನಸ್ಸಿನಮೇಲೆ ಪರಿಣಾಮ ವುಂಟುಮಾಡಿಯೇ ಮಾಡುತ್ತವೆ. ಆ ಪರಿಣಾಮ ಒಳ್ಳೆಯದಾಗಿರಬಹುದು; ಕೆಟ್ಟದ್ದೂ ಆಗಿರಬಹುದು. ಜನತೆಯ ವಿಮರ್ಶನಶಕ್ತಿ ಹೆಚ್ಚಿದಂತೆ ನಾಟಕ ಸಂಸ್ಥೆಗಳೂ ಸಮಾಜದ ಹಿತದೃಷ್ಟಿಯ ಕಡೆ ಹೊಂದಿಕೊಳ್ಳಬೇಕಾಗುತ್ತದೆ. ಕೆಲವು ಸಂಸ್ಥೆಗಳು ಆರ್ಥಿಕದೃಷ್ಟಿಯಿಲ್ಲದೆ ಕೇವಲ ಕಲಾಭಿಮಾನದಿಂದಲೇ

ಸಮಾಜದ ಪುರೋಭಿವೃದ್ಧಿಗಾಗಿ ದುಡಿಯುತ್ತಿವೆ. ಅಂಥ ನಾಟಕಗಳ ಉದ್ದೇಶ ಶಿಕ್ಷಣವೆನ್ನುವುದರಲ್ಲಿ ಅನುಮಾನವಿಲ್ಲ. ನಾಟಕದ ವಸ್ತು ಪೌರಾಣಿಕವಾಗಿದ್ದರೆ ನಮ್ಮ ಹಿಂದಿನವರ ಜೀವನವನ್ನು ಚಿತ್ರಿಸಿ ನಮ್ಮ ಇತಿಹಾಸ, ಸಂಸ್ಕೃತಿ, ಸಾಹಿತ್ಯ, ಕಲೆ, ಇವುಗಳಲ್ಲಿ ಅಭಿಮಾನ ಹುಟ್ಟಿಸುತ್ತವೆ; ಸಾಮಾಜಿಕವಾಗಿದ್ದರೆ ಇಂದಿನ ಜಟಿಲ ಸಮಸ್ಯೆಗಳನ್ನು ಜನತೆಯ ಮುಂದಿಟ್ಟು ವಿಚಾರಪರರನ್ನಾಗಿ ಮಾಡುತ್ತವೆ. ಒಟ್ಟಿನಲ್ಲಿ ನಾಟಕದ ಉದ್ದೇಶ ನೋಟಕರ ಬಹುಮುಖವಾದ ಶಿಕ್ಷಣವೇ ಆಗಿದೆ.

೨. **ಚಲನಚಿತ್ರ:** ಆಧುನಿಕ ಕಾಲದ ಶಿಕ್ಷಣ ಸಾಧನಗಳಲ್ಲಿ ಚಲನ ಚಿತ್ರವೂ ಒಂದು. ಈ ಚಿತ್ರ ನಿರ್ಮಾಣ ಕಾರ್ಯ ಬೆಳೆದಂತೆ ನಾಟಕಗಳಿಗೆ ಧಕ್ಕೆ ಬರುತ್ತಿದೆಯೆಂದು ಹಲವರು ಹೇಳುವರು. ಹೇಗೇ ಆಗಲಿ, ೨೦-೩೦ ವರ್ಷಗಳಿಂದೀಚೆಗೆ ಚಲನಚಿತ್ರಗಳು ಪ್ರಾಮುಖ್ಯತೆಗೆ ಬಂದಿವೆ. ಅವು ನಾಟಕಗಳಿಗಿಂತ ಹೆಚ್ಚು ಆಕರ್ಷಣೀಯವಾಗಿ ಪರಿಣಮಿಸುತ್ತಿವೆಯೆಂಬುದರಲ್ಲಿ ಸಂದೇಹವಿಲ್ಲ. ನಾಟಕಗಳು ಸಜೀವ ಪಾತ್ರಗಳನ್ನು ರಂಗಭೂಮಿಯ ಮೇಲೆ ತಂದು, ಅವರ ಕಲೆಯನ್ನು ಪ್ರದರ್ಶಿಸುತ್ತವೆ; ಚಲನಚಿತ್ರಗಳು ವೈಭವದ ದೃಶ್ಯಗಳನ್ನೂ, ವಿವಿಧ ಸನ್ನಿವೇಶಗಳನ್ನೂ ಹೆಚ್ಚು ಸ್ವಾಭಾವಿಕವಾಗಿಯೂ ಜೀವಂತವಾಗಿಯೂ ತೋರಿಸುವುವು. ಈ ದೃಷ್ಟಿಯಿಂದ ನಾಟಕದಲ್ಲಿ ತರಲಾಗದ ಹಲವು ವೈಶಿಷ್ಟ್ಯಗಳನ್ನು ಇಲ್ಲಿ ಕಾಣಬಹುದು. ಈ ಕಾರಣದಿಂದಲೇ ಚಲನಚಿತ್ರಗಳು ಹೆಚ್ಚು ಆಕರ್ಷಣೀಯವಾಗಿರುವುದು. ಆರ್ಥಿಕ ದೃಷ್ಟಿಯಿಂದ ಚಲನಚಿತ್ರ ನಾಟಕದ ಸ್ಪರ್ಧಿಯಾಗಿದ್ದರೂ ಶಿಕ್ಷಣ ದೃಷ್ಟಿಯಿಂದ ಯಾವ ತೊಂದರೆಯೂ ಇಲ್ಲ. ನಾಟಕದಲ್ಲಿ ನುರಿತವರೇ ಚಲನ ಚಿತ್ರದಲ್ಲಿ ಸಾಮಾನ್ಯವಾಗಿ ಬರುವರು. ನಾಟಕಗಳೇ ಚಲನಚಿತ್ರಗಳಾಗಿ ಪರಿಣಾಮಗೊಂಡು, ಆಕರ್ಷಣೀಯವೂ ಪರಿಣಾಮಕಾರಿಯೂ ಆದ ಶಿಕ್ಷಣ ಕೊಡುತ್ತಿವೆ.

ನಾಟಕಗಳಂತೆ ಚಲನಚಿತ್ರಗಳೂ ಸತ್ಪರಿಣಾಮವನ್ನು ಹುಟ್ಟಿಸುವಂತೆ ದುಷ್ಪರಿಣಾಮವನ್ನೂ ಹುಟ್ಟಿಸಬಹುದು: ಮಾನವನ ಮೋಹಕ ಸ್ವಭಾವವನ್ನು ಆಕರ್ಷಿಸಿ, ಕೇವಲ ಅರ್ಥ ಸಾಧನೆಗೆ ಹೊರಟಿರುವ ಚಿತ್ರಗಳೂ ಉಂಟು. ಅವುಗಳನ್ನು ಪರಿಶೀಲಿಸಿ, ಜನತೆಯಲ್ಲಿ ಸತ್ಪರಿಣಾಮವನ್ನುಂಟುಮಾಡತಕ್ಕ

ಚಿತ್ರ ಪ್ರದರ್ಶನಕ್ಕೆ ಅವಕಾಶವನ್ನೊದಗಿಸಿಕೊಡಲು ಈಚೆಗೆ ಎಲ್ಲ ದೇಶಗಳಲ್ಲೂ ಸೆನ್ಸಾರ್ ಸಂಸ್ಥೆಗಳು ರಚನೆಯಾಗಿವೆ. ಚಲನಚಿತ್ರ ಪ್ರಭಾವಯುತವಾದ ಶಿಕ್ಷಣ ಸಾಧನವಾದ್ದರಿಂದ ಅವುಗಳಮೇಲೆ ಹದ್ದುಬಸ್ತು ಅನಿವಾರ್ಯ. ಜನತೆಯ ವಿಚಾರದೃಷ್ಟಿಯ ಬೆಳವಣಿಗೆ, ನಾಡ ಸಂಸ್ಕೃತಿಯ ಪ್ರಸರಣ, ಜೀವನದ ಸುಖಶಾಂತಿಗೆ ಆವಶ್ಯಕವಾದ ಸಹನೆ ಸಹಕಾರಗಳ ಬೋಧನೆ—ಈ ಕಾರ್ಯಗಳನ್ನು ಚಿತ್ರಗಳು ಸಾಧಿಸುವಂತಿರಬೇಕು. ಜೊತೆಗೆ, ಜೀವನದ ವಿವಿಧ ರಂಗಗಳ ಪ್ರಗತಿಗೆ ನೆರವಾಗತಕ್ಕ ಇತರ ವಿಧದ ಶಿಕ್ಷಣವನ್ನೂ ಕೊಡುವಂತೆ ಏರ್ಪಡಿಸಬೇಕು. ಅಮೆರಿಕ, ರಷ್ಯ ಮತ್ತು ಇತರ ದೇಶಗಳಲ್ಲಿ ಆರೋಗ್ಯ ಮತ್ತು ದೈಹಿಕ ಶಿಕ್ಷಣಕ್ಕೆ ಪ್ರತ್ಯೇಕ ಚಿತ್ರಗಳೇ ಹೊರಟಿವೆ; ದೇಶ ವಿದೇಶಗಳ ಜನಜೀವನ, ಕಲೆ, ಸಂಸ್ಕೃತಿ ಮತ್ತು ನಾಗರಿಕತೆಗಳನ್ನು ಪ್ರದರ್ಶಿಸುವ ಚಿತ್ರಗಳೂ ಪ್ರಚಾರಕ್ಕೆ ಬರುತ್ತಿವೆ; ಯಂತ್ರಯುಗದ ಉದ್ಯೋಗ ವೈಭವವನ್ನು ತೋರಿಸುವ ಚಿತ್ರಗಳೂ ಹೊರಬೀಳುತ್ತಿವೆ; ಒಟ್ಟಿನಲ್ಲಿ ಚಲನಚಿತ್ರ ಆಧುನಿಕ ಕಾಲದ ಶಕ್ತಿಯುತವೂ ಪ್ರಭಾವಯುತವೂ ಆದ ಶಿಕ್ಷಣ ಸಾಧನವಾಗಿ ಪರಿಣಮಿಸುತ್ತಿದೆ.

೩. **ಪತ್ರಿಕೆಗಳು:** ಜನತೆಯಲ್ಲಿ ಅಕ್ಷರ ಪ್ರಚಾರ ಹೆಚ್ಚಿದಂತೆ ಪತ್ರಿಕೆಗಳ ಬಳಕೆಯೂ ಹೆಚ್ಚುತ್ತಿದೆ; ಅವನ್ನು ಓದುವುದು ಅನೇಕರಿಗೆ ದಿನಚರಿಯಾಗಿಬಿಟ್ಟಿದೆ. ನಗರಗಳಲ್ಲಿ ಮಾತ್ರವಲ್ಲ—ನಾಡಿನ ಮೂಲೆಮೂಲೆಗಳಲ್ಲೂ ದಿನಪತ್ರಿಕೆ, ವಾರಪತ್ರಿಕೆ ಮತ್ತು ಮಾಸಪತ್ರಿಕೆಗಳು ಹರಡಿ ಜನತೆಯಲ್ಲಿ ಜ್ಞಾನ ಪ್ರಸರಣವನ್ನು ಆರಂಭಿಸಿವೆ. ಅವುಗಳಲ್ಲಿ ಜಗತ್ತಿನ ದಿನದಿನದ ವಾರ್ತೆಯನ್ನು ಪ್ರಕಟಿಸುವ ದಿನಪತ್ರಿಕೆಗಳೇ ಹೆಚ್ಚು. ಪತ್ರಿಕೆಯಲ್ಲಿ ಪ್ರಕಟವಾಗುವ ವಿಷಯವನ್ನೂ, ಅವುಗಳಮೇಲೆ ಹೊರಬೀಳುವ ಸಂಪಾದಕೀಯ ಮತ್ತು ಸಾರ್ವಜನಿಕ ಅಭಿಪ್ರಾಯಗಳನ್ನೂ ಓದಿ, ತಿಳಿದುಕೊಂಡು, ತಮ್ಮ ವೈಯಕ್ತಿಕ ಅಭಿಪ್ರಾಯವನ್ನು ತಾಳುವಾಗ ಜನತೆಯ ವಿಚಾರಶಕ್ತಿ ಬೆಳೆಯುತ್ತದೆ. ಜೊತೆಗೆ ಜನಜೀವನದ ಮುನ್ನಡೆ, ರಾಜಕೀಯ ಘಟನೆಗಳು, ಉದ್ಯೋಗಗಳ ಬೆಳವಣಿಗೆ, ಮುಂತಾದವುಗಳ ಪರಿಚಯವೂ ಆಗಿ, ಓದುಗರ ಮನಸ್ಸಿನ ಸಂಸ್ಕರಣವೂ ಆಗುತ್ತದೆ.

ವಾರಪತ್ರಿಕೆ, ಪಕ್ಷಪತ್ರಿಕೆ, ಮಾಸಪತ್ರಿಕೆ, ಮುಂತಾದವು ಉದ್ಯೋಗ,

ಶಿಕ್ಷಣ, ಕಲೆ, ಸಾಹಿತ್ಯ, ಸಂಸ್ಕೃತಿ—ಇವುಗಳನ್ನು ಕುರಿತ ಲೇಖನಗಳನ್ನು ಎಲ್ಲ ಮಟ್ಟದ ಜನತೆಗೂ ಒದಗಿಸಿಕೊಟ್ಟು, ಆ ಮೂಲಕ ಸಾರ್ವಜನಿಕ ಶಿಕ್ಷಣವನ್ನು ಸಾಧಿಸುತ್ತಿವೆ. ಅವುಗಳಲ್ಲಿ ಹಲವು ಜೀವಾಳವಿಲ್ಲದೆ ಓದುಗರಿಗೆ ಬೇಸರ ಹಿಡಿಸಬಹುದು; ಮತ್ತೆ ಕೆಲವು ಸ್ವಾರ್ಥವೆನ್ನಬಹುದಾದ ಹಲವು ರೀತಿಯ ಪ್ರಚಾರ ಕಾರ್ಯಕ್ಕೆ ಹೊರಟಿರಬಹುದು. ಅಂಥವು ಆರ್ಥಿಕ ಬಲವಿಲ್ಲದೆ ನಿಂತುಹೋಗುತ್ತವೆ. ಜನತೆಯ ವಿಚಾರಜ್ಞಾನವನ್ನು ಹೆಚ್ಚಿಸತಕ್ಕ, ಜೀವನವನ್ನು ಸಂಸ್ಕರಿಸಿ ವಿಶಾಲ ದೃಷ್ಟಿಯನ್ನು ಬೆಳೆಸತಕ್ಕ, ಪತ್ರಿಕೆಗಳು ಮಾತ್ರ ಉಳಿದು, ಶಿಕ್ಷಣ ಕಾರ್ಯವನ್ನು ಸಾಧಿಸುವಂತಾಗುತ್ತದೆ. ಜನತೆಯ ಭಿನ್ನರುಚಿಯನ್ನು ಅನುಸರಿಸಿ ವಿವಿಧ ಪತ್ರಿಕೆಗಳು ಹುಟ್ಟಿಕೊಂಡಿವೆ. ಮಕ್ಕಳಿಂದ ಹಿಡಿದು ದೊಡ್ಡವರ ವರೆಗೂ ಅನುಕೂಲಿಸುವ ವಿಚಾರಪೂರಿತ ಸಾಹಿತ್ಯ ಹೊರಬೀಳುತ್ತಿದೆ. ಹಾಗೆಯೇ, ಲಘು ಹಾಸ್ಯದಿಂದ ಹಿಡಿದು ಕಠಿನವಾದ ವಿಜ್ಞಾನ, ಸಾಹಿತ್ಯ, ವಿಮರ್ಶೆ, ಮೊದಲಾದವುಗಳ ಮೇಲೂ ಲೇಖನಗಳು ಹೊರಬೀಳುತ್ತಿವೆ. ಒಟ್ಟಿನಲ್ಲಿ ಪತ್ರಿಕೆಗಳು ಜನತೆಯ ಬಹುಮುಖವಾದ ಶಿಕ್ಷಣವನ್ನು ಸಾಧಿಸುತ್ತಿವೆ.

೪. **ಪುಸ್ತಕಭಂಡಾರಗಳು**: ಹಿಂದಿನಿಂದಲೂ ಪುಸ್ತಕಭಂಡಾರಗಳೇನೋ ಪ್ರಚಾರದಲ್ಲಿವೆ; ಆದರೆ ಅವುಗಳಿಂದ ಶಿಕ್ಷಣವನ್ನು ಪಡೆಯುತ್ತಿದ್ದವರ ಸಂಖ್ಯೆ ಮಾತ್ರ ಗಣನೀಯವಾಗಿರಲಿಲ್ಲ; ಆಧುನಿಕ ಕಾಲದಲ್ಲಿ ಎಲ್ಲ ಪ್ರಗತಿಪರ ರಾಷ್ಟ್ರಗಳೂ ಪುಸ್ತಕಭಂಡಾರಗಳನ್ನು ಹೆಚ್ಚು ಹೆಚ್ಚಾಗಿ ಸ್ಥಾಪಿಸಿ, ಜನತೆಗೆ ಶಿಕ್ಷಣ ಸೌಲಭ್ಯವನ್ನು ಒದಗಿಸುತ್ತಿವೆ. ಪ್ರಪಂಚದ ಬೇರೆ ಬೇರೆ ದೇಶಗಳಲ್ಲಿ ಪ್ರಕಟವಾದ ಉತ್ತಮೋತ್ತಮ ಗ್ರಂಥಗಳು ಅಲ್ಲಿ ದೊರೆಯುತ್ತವೆ. ವಿರಾಮ ಕಾಲದಲ್ಲಿ ಪುಸ್ತಕಭಂಡಾರಗಳಲ್ಲಿ ಶಿಕ್ಷಣ ಪಡೆದೇ ಎಷ್ಟೋ ಮಂದಿ ವಿದ್ವಾಂಸರಾಗಿರುತ್ತಾರೆ. ಎಲ್ಲ ಅಂತಸ್ತಿನ ಜನರೂ ಅಲ್ಲಿ ಸೇರುವುದರಿಂದ, ಅವರೊಡನೆ ನಾವು ವ್ಯವಹರಿಸುವ ಅವಕಾಶವಿರುವುದರಿಂದ, ನಮ್ಮ ನಡೆನುಡಿಗಳಲ್ಲೂ ಸತ್ಪರಿಣಾಮವುಂಟಾಗುವುದು. ಅಲ್ಲಿನ ಅಧಿಕಾರಿಗಳು ಪುಸ್ತಕಗಳನ್ನು ವರ್ಗೀಕರಿಸಿ ಸರಿಯಾಗಿ ಜೋಡಿಸಿರುವುದರಿಂದ, ವಾಚಕರಿಗೆ ಶೀಘ್ರವಾಗಿಯೂ ಸಮಗ್ರವಾಗಿಯೂ ವಿಚಾರಜ್ಞಾನ ಒದಗುತ್ತದೆ. ಈಚೆಗೆ ಪುಸ್ತಕಭಂಡಾರಗಳನ್ನು ಒಂದು ಕಡೆಯಿಂದ

ಇನ್ನೊಂದು ಕಡೆಗೂ ಸಾಗಿಸಿಕೊಂಡು ಹೋಗಿ, ಅಲ್ಲಿನವರಿಗೂ ಶಿಕ್ಷಣ ಸೌಲಭ್ಯವನ್ನು ಒದಗಿಸುವ ಕಾರ್ಯವನ್ನು ಕೈಕೊಂಡಿದ್ದಾರೆ.

**೫. ವಸ್ತು ಪ್ರದರ್ಶನ ಮತ್ತು ಕಲಾಭವನ:** ಜನತೆಯ ಶಿಕ್ಷಣಕ್ಕೆ ಇವೂ ನೆರವಾಗುತ್ತಿವೆ; ವಸ್ತು ಪ್ರದರ್ಶನಾಲಯಗಳು ನಾಡಿನ ಉದ್ಯೋಗ, ಕಲಾ ವೈಭವ, ಪ್ರಕೃತಿಸಂಪತ್ತು ಮತ್ತು ಸಂಸ್ಕೃತಿ—ಇವುಗಳಿಗೆ ಸಂಬಂಧಿಸಿದ ವಸ್ತುಗಳನ್ನು ಪ್ರದರ್ಶಿಸಿ ಆಕರ್ಷಣೀಯವೂ ಪ್ರತ್ಯಕ್ಷ ಬೋಧಕವೂ ಆದ ಶಿಕ್ಷಣವನ್ನು ಕೊಡುತ್ತವೆ. ಕಲಾಭವನಗಳೂ ಶಿಕ್ಷಣ ಕಾರ್ಯದಲ್ಲಿ ನೆರವಾಗುತ್ತವೆ. ಅಲ್ಲಿನ ಚಿತ್ರಗಳು, ಶಿಲ್ಪಗಳು ಮತ್ತು ಇನ್ನಿತರ ಸನ್ನಿವೇಶಗಳು ನಮ್ಮವರ ಕಲಾಕೌಶಲದ ಸೊಬಗನ್ನು ಮನಸ್ಸಿನಲ್ಲಿ ಮೂಡಿಸುತ್ತವೆ. ಜನತೆಯ ಕಲ್ಯಾಣಕ್ಕಾಗಿ ದುಡಿದ ಮಹಾಪುರುಷರ ಚಿತ್ರಗಳು ನಮ್ಮ ಮನಸ್ಸಿನಲ್ಲಿ ದೇಶಪ್ರೇಮವನ್ನು ಹುಟ್ಟಿಸುವುದಲ್ಲದೆ, ಒಳ್ಳೆಯ ಇತಿಹಾಸ ಪಾಠವಾಗಿಯೂ ಪರಿಣಮಿಸುತ್ತವೆ. ಅಲ್ಲಿನ ಕಲಾವೈಭವ ನಮ್ಮ ಮನಸ್ಸಿನಲ್ಲಿ ಆನಂದವನ್ನೂ ಉತ್ಸಾಹವನ್ನೂ ಹುಟ್ಟಿಸಿ, ಸತ್ಯ ಸೌಂದರ್ಯಗಳ ಕಡೆ ಅಭಿಮಾನ ಹೆಚ್ಚಿಸುತ್ತದೆ.

**೬. ರೇಡಿಯೋ:** ಕೇವಲ ಹತ್ತು-ಹದಿನೈದು ವರ್ಷಗಳಿಂದೀಚೆಗೆ ರೇಡಿಯೋ ಕಾರ್ಯಕ್ರಮ ಅತ್ಯಂತ ವ್ಯಾಪ್ತಿಯುತವಾದ ಶಿಕ್ಷಣವಾಗಿ ಪರಿಣಮಿಸಹತ್ತಿದೆ. ಅನೇಕ ಶಿಕ್ಷಣ ಸಂಸ್ಥೆಗಳೂ ಇತರ ಸಮಾಜ ಸಂಸ್ಥೆಗಳೂ ಇದರ ಉಪಯೋಗವನ್ನು ಜನತೆಗೆ ಒದಗಿಸುತ್ತಿವೆ. ನಾಗರಿಕ ಕುಟುಂಬಗಳೂ ಈ ಸಾಧನವನ್ನು ಒದಗಿಸಿಕೊಳ್ಳುತ್ತಿವೆ. ಪ್ರಸರಣ ಕೇಂದ್ರಗಳು ಜನತೆಯ ಶಿಕ್ಷಣಕ್ಕೂ ಮನರಂಜನೆಗೂ ಅನುಕೂಲಿಸುವಂಥ ಕಾರ್ಯಕ್ರಮವನ್ನು ಇಟ್ಟುಕೊಳ್ಳುತ್ತಿವೆ. ನಾಡಿನಲ್ಲಿ ಪ್ರಖ್ಯಾತರಾದವರಿಂದ ಸಂಗೀತ, ಭಾಷಣ, ನಾಟಕ, ಮುಂತಾದವುಗಳನ್ನು ಪ್ರಸಾರಮಾಡಲು ಏರ್ಪಡಿಸುತ್ತಾರೆ. ಸಂಗೀತವನ್ನು ರೇಡಿಯೋ ಮೂಲಕ ಬೋಧಿಸುವುದಂತೂ ಒಂದು ವಿಶೇಷ ರೀತಿಯ ಶಿಕ್ಷಣವೇ ಆಗಿ ಪರಿಣಮಿಸುತ್ತಿದೆ. ಆಗಾಗ ತಜ್ಞರ ಪ್ರವಾಸದ ಅನುಭವಗಳು, ವಿಚಾರ ಪ್ರಚೋದಕವಾದ ಸಮಾಜ ಚಿತ್ರಗಳು, ಸಾಹಿತ್ಯ, ಸಂಸ್ಕೃತಿ, ಕಲೆಗಳನ್ನು ಕುರಿತ ವಿಮರ್ಶೆಗಳು, ವಿಜ್ಞಾನ ಮತ್ತು ಉದ್ಯೋಗಗಳಿಗೆ ಸಂಬಂಧಿಸಿದ ಭಾಷಣಗಳು, ವಾಣಿಜ್ಯ ವ್ಯವಹಾರಗಳ

ವಾರ್ತೆಗಳು ಪ್ರಸಾರವಾಗುತ್ತವೆ; ಮೇಲಿನ ವಿಷಯುಗಳ ಮೇಲೆ ಆ ವಿಷಯು ದಲ್ಲಿ ಚತುರರಾದವರೇ ಭಾಷಣ ಮಾಡುವುದರಿಂದ ಜನರಿಗೆ ಅಧಿಕಾರ ಯುತವಾದ ಜ್ಞಾನವೂ ದೊರೆಯಲು ಅವಕಾಶವಾಗುತ್ತದೆ. ರೇಡಿಯೋ ಸಾಧನದ ಉಪಯೋಗ ಹೆಚ್ಚು ಹೆಚ್ಚಾಗಿ ಬಳಕೆಗೆ ಬಂದಂತೆ ಕೋಟ್ಯಂತರ ಜನತೆಯ ಶಿಕ್ಷಣ ಸಾಧನೆಯಾಗಿ, ಜ್ಞಾನದ ಮಟ್ಟ ಹೆಚ್ಚುವುದರಲ್ಲಿ ಸಂಶಯವಿಲ್ಲ.

೭. **ಕುಟುಂಬ:** ಮಾನವನ ಪ್ರಾಚೀನತಮ ಶಿಕ್ಷಣ ಸಂಸ್ಥೆಯೆಂದರೆ ಕುಟುಂಬ ಜೀವನ. ಮಕ್ಕಳಿಗೆ ಮೊಟ್ಟಮೊದಲು ಶಿಕ್ಷಣ ಆರಂಭವಾಗು ವುದು ಕುಟುಂಬ ಜೀವನದಿಂದ. ಮಿಕ್ಕೆಲ್ಲ ಶಿಕ್ಷಣ ಸಂಸ್ಥೆಗಳಿಗಿಂತಲೂ ಒಂದು ದೃಷ್ಟಿಯಲ್ಲಿ ಅದು ಹೆಚ್ಚಿನ ಪರಿಣಾಮವನ್ನು ಹುಟ್ಟಿಸುವುದು; ಹಾಗೂ, ಅವಿಭಕ್ತ ಕುಟುಂಬವಾದರೆ ಅದರ ಕೈವಾಡ ಇನ್ನೂ ಹೆಚ್ಚಿನದೂ ವಿಶಾಲವೂ ಆಗಿರುತ್ತದೆ. ತಾಯಿತಂದೆಗಳೇ ಮಕ್ಕಳ ಶಿಕ್ಷಣವನ್ನು ಆರಂಭಿಸುತ್ತಾರೆ. ತಮ್ಮ ಮಕ್ಕಳೆಂಬ ಮಮತೆಯಿಂದಲೂ ಪ್ರೀತಿಯಿಂದಲೂ ತಿಳಿವಳಿಕೆ ಹೇಳುವಾಗ ಅವರು ಒಳ್ಳೆಯ ಪರಿಣಾಮ ಹುಟ್ಟಿಸಬಲ್ಲರು. ಮಕ್ಕಳಿಗೆ ಅವರಲ್ಲಿ ಪ್ರೇಮಾಸಕ್ತಿಗಳು ಮೂಡಿರುತ್ತವೆ; ಅಬಲರಾಗಿ, ಅಸಹಾಯ ರಾಗಿರುವ ಶೈಶವಕಾಲದಲ್ಲಿ ತಾಯಿತಂದೆಗಳು ಮಮತೆಯಿಂದ ನೀಡುವ ಶಿಕ್ಷಣ ಅವರ ಇಡೀ ಜೀವನದಮೇಲೇ ಪರಿಣಾಮಕಾರಿಯಾಗಬಲ್ಲದು. ಮಗುವಿನ ತೀರ ಎಳತನದಲ್ಲಿ ತಾಯಿಯಿಂದ ಶಿಕ್ಷಣ ಆರಂಭವಾಗುತ್ತದೆ; ಅನಂತರ ಅಕ್ಕಅಣ್ಣಂದಿರ ಮೂಲಕವೂ, ಆಮೇಲೆ ಕುಟುಂಬದ ಹಿರಿಯ ರಿಂದಲೂ ನಡೆಯುತ್ತದೆ. ದೊಡ್ಡವರು ಮಾತಾಡುವುದನ್ನೂ ವರ್ತಿಸು ವುದನ್ನೂ ನೋಡಿ ಮಗು ಅವರನ್ನು ಅನುಕರಿಸಲು ಯತ್ನಿಸುತ್ತದೆ; ಹೀಗೆ ಒಳ್ಳೆಯ ಕುಟುಂಬ ಜೀವನ ಮಕ್ಕಳಿಗೆ ಅಮೂಲ್ಯವೂ ಉಚಿತವೂ ಆದ ಶಿಕ್ಷಣವಾಗಿ ಪರಿಣಮಿಸುತ್ತದೆ. ಹಗಲಿರುಳೂ ಆ ಕಾಲದಲ್ಲಿ ಮಗು ಕುಟುಂಬ ದಲ್ಲೇ ಇರುವುದರಿಂದಲೂ, ಆಗ ಅದರ ಮಾನಸಿಕ ಮತ್ತು ಭೌತಿಕ ಬೆಳ ವಣಿಗೆಯ ಅಸ್ತಿಭಾರ ನಿರ್ಮಾಣವಾಗಬೇಕಾಗಿರುವುದರಿಂದಲೂ ತಾಯಿ ತಂದೆಗಳೂ ಇನ್ನಿತರ ಬಂಧುಗಳೂ ತಮ್ಮ ನಡೆ ನುಡಿಗಳು ಮಕ್ಕಳ ಮೇಲೆ ತೀವ್ರವಾದ ಪರಿಣಾಮವನ್ನು ಹುಟ್ಟಿಸುತ್ತವೆಂಬುದನ್ನು ಅರಿಯಬೇಕು.

ಎಲ್ಲ ರೀತಿಯಿಂದಲೂ ಮಕ್ಕಳ ಆ ಕಾಲದಲ್ಲಿ ಉಚಿತವಾದ ಶಿಕ್ಷಣವಾಗುವಂತೆ ಎಚ್ಚರಿಕೆಯಿಂದ ನಡೆದುಕೊಳ್ಳಬೇಕು. ಆದರೆ, ಜೀವನೋಪಾಯದ ತೊಡಕುಗಳು ಹೆಚ್ಚಿದಂತೆ ಕುಟುಂಬ ಮಕ್ಕಳ ಶಿಕ್ಷಣದ ಕಡೆಗೆ ತಕ್ಕಷ್ಟು ಗಮನ ಕೊಡಲು ಸಾಧ್ಯವಾಗುತ್ತಿಲ್ಲ. ತಮ್ಮ ಭಾಗದ ಆ ಕೆಲಸಗಳನ್ನು ದಾದಿಯರಿಗೋ, ಇತರ ಸಂಘಸಂಸ್ಥೆಗಳಿಗೋ ವಹಿಸುವ ಮನೋಭಾವ ಬೆಳೆಯುತ್ತಿದೆ. ಒಂದೆರಡು ದಶಮಾನಗಳಿಂದೀಚೆಗೆ ಎರಡು ವರ್ಷದ ಮಕ್ಕಳಿಗೂ ಶಿಕ್ಷಣ ಕೊಡುವಂಥ ಶಿಶುವಿಹಾರಗಳು ಎಲ್ಲ ದೇಶಗಳಲ್ಲೂ ಬಳಕೆಗೆ ಬರುತ್ತಿವೆ. ಪಾಶ್ಚಾತ್ಯ ದೇಶಗಳಲ್ಲಿ ಈ ಶಿಶುವಿಹಾರಗಳನ್ನು ಮತಪೀಠದವರು ನಡಸುತ್ತಿದ್ದಾರೆ. ಇನ್ನು ಕೆಲವು ದೇಶಗಳಲ್ಲಿ ಸಮಾಜ ಸಂಸ್ಥೆಗಳು ಆ ಭಾರವನ್ನು ವಹಿಸಿಕೊಂಡಿವೆ. ಈಚೆಗೆ, ಸರ್ಕಾರ ಶಿಶು ವಿಹಾರಗಳನ್ನು ಆರಂಭಿಸಲು ಯತ್ನಿಸುತ್ತಿದೆ. ಶೈಶವಾವಸ್ಥೆಯ ಆ ಕಾಲದ ಮಕ್ಕಳ ಶಿಕ್ಷಣವನ್ನು ವಹಿಸಿಕೊಳ್ಳತಕ್ಕ ಶಿಕ್ಷಣ ಸಂಸ್ಥೆಗಳು ಎಷ್ಟೇ ಹುಟ್ಟಿಕೊಂಡಿದ್ದರೂ ತಾಯಿತಂದೆಗಳ ಜವಾಬ್ದಾರಿ ತಪ್ಪಿತೆಂದು ಹೇಳುವಂತಿಲ್ಲ: ಕುಟುಂಬ ಜೀವನದ ಶಿಕ್ಷಣ ಅವೆಲ್ಲವನ್ನೂ ಮೀರಿಸಬಲ್ಲದು. ತಾವು ಎಳೆಯ ದಿನಗಳಲ್ಲಿ ಕಲಿತ ನಡೆನುಡಿಗಳನ್ನು ಮಹಾಪುರುಷರನೇಕರು ಆಜೀವವೂ ಸ್ಮರಣೆಗೆ ತಂದುಕೊಂಡಿರುವರು. ಸಂಯುಕ್ತ ಸಂಸ್ಥಾನದ ಅಧ್ಯಕ್ಷನಾಗಿದ್ದ ಏಬ್ರಹಾಂ ಲಿಂಕನ್ನನು 'ಇಂದಿನ, ಮುಂದಿನ, ನನ್ನ ಜೀವನದ ರೂಪುರೇಖೆಗಳನ್ನು ಚಿತ್ರಿಸಿದವರು ನನ್ನ ತಾಯಿ!' ಎಂದು ಅಭಿಮಾನದಿಂದ ಸ್ಮರಿಸಿಕೊಂಡು ಕುಟುಂಬ ಜೀವನದಿಂದಾಗುವ ಶಿಕ್ಷಣದ ಪ್ರಭಾವವನ್ನು ಜಗತ್ತಿಗೆ ತೋರಿಸಿಕೊಟ್ಟಿರುವನು. ತಾಯಿಯಂತೆ ಮಕ್ಕಳ ಪೋಷಣೆಯನ್ನು ವಹಿಸಿಕೊಳ್ಳುವ ದಾದಿಯರೂ ಪರಿಣಾಮಕಾರಿಯಾದ ಶಿಕ್ಷಣವೀಯಬಲ್ಲರು. 'ಜಗತ್ತನ್ನೆಲ್ಲ ಸುತ್ತಿ, ಪಡೆಯುವ ಎಲ್ಲ ಅನುಭವಗಳನ್ನೂ ನನ್ನ ದಾದಿ ಹೇಳುತ್ತಿದ್ದ ಕಥೆಗಳು ಮೀರಿಸುವಂತಿದ್ದುವು!' ಎಂದು ಕೆಲವರು ಹೇಳಿಕೊಂಡಿರುವುದುಂಟು. 'ತಂದೆಯಂತೆ ಮಕ್ಕಳು' ಎಂಬ ನಾಣ್ನುಡಿ ನಮ್ಮಲ್ಲಿ ಬಳಕೆಯಲ್ಲಿದೆ. 'ಮಕ್ಕಳಂತೆ ತಂದೆ' ಎಂದೂ ಅದನ್ನು ನಾವು ತಿರುಗಿಸಿ ಹೇಳಬಹುದು. ಏಕೆಂದರೆ, ಇಂದಿನ ಮಕ್ಕಳನ್ನು ಹೇಗೆ ಬೆಳಸುತ್ತೇವೆಯೋ ಹಾಗೆ ಮುಂದಿನ ಜನಾಂಗ ರೂಪುಗೊಳ್ಳುತ್ತದೆ. ಅದರಿಂದ

ತಾಯಿತಂದೆಗಳು ಮನೆಯಲ್ಲಿ ಆರಂಭಿಸುವ ಶಿಕ್ಷಣ ಅವರ ಮುಂದಿನ ಜೀವನದ ರೂಪುರೇಖೆಗಳನ್ನೇ ನಿರ್ಮಿಸಬಲ್ಲದು. ಅವರ ದೈವಿಕ ಭಾವನೆ, ನೈತಿಕ ದೃಷ್ಟಿ, ಇತರ ಜೀವನ ಧ್ಯೇಯಗಳು—ಇವೆಲ್ಲ ತಾಯಿ ಆರಂಭದಲ್ಲಿ ನೀಡುವ ಶಿಕ್ಷಣದ ತಳಹದಿಯ ಮೇಲೇ ಬೆಳೆಯಬೇಕಾಗಿದೆ. ಕುಟುಂಬ ಜೀವನ ಮಕ್ಕಳಿಗೆ ಮೊಟ್ಟಮೊದಲನೆಯದೂ ಅತ್ಯಂತ ಪರಿಣಾಮಕಾರಿಯೂ ಆದ ಶಿಕ್ಷಣ ಸಂಸ್ಥೆ.

ನಾವು ಕುಟುಂಬ ಜೀವನಕ್ಕೆ ಇಷ್ಟು ಮಹತ್ತರ ಸ್ಥಾನವನ್ನು ಕೊಟ್ಟಿದ್ದರೂ ಅದರ ಕಾರ್ಯಕ್ಷೇತ್ರಕ್ಕೂ ಒಂದು ಮಿತಿಯಿದೆ. ಮಕ್ಕಳು ಬೆಳೆದಂತೆ ಹೊರಗಿನ ಸಮಾಜದಲ್ಲೂ ಬಾಳಬೇಕಾಗುತ್ತದೆ; ವಿಶಾಲ ಜಗತ್ತಿನ ಬೇರೆ ಬೇರೆ ಜನಾಂಗಗಳೊಡನೆಯೂ ವ್ಯವಹರಿಸಬೇಕಾಗುತ್ತದೆ. ಅದಕ್ಕೆಲ್ಲ ಕುಟುಂಬ ಶಿಕ್ಷಣ ಸಾಲದಾಗುತ್ತದೆ; ಜೊತೆಗೆ, ಮಕ್ಕಳು ಸಮಾಜದ ಎಲ್ಲ ಅಂತಸ್ತಿನ ಇತರ ಕುಟುಂಬದ ಮಕ್ಕಳೊಡನೆಯೂ ವ್ಯವಹರಿಸುವುದು ಆ ಕಾಲದಲ್ಲಿ ಆವಶ್ಯಕ. ಅನೇಕ ಕುಟುಂಬದ ಮಕ್ಕಳಿಗೆ ಈ ಸೌಲಭ್ಯ ಇರಲಾರದು. ತಾಯಿತಂದೆಗಳು ಅಷ್ಟು ಪ್ರೇಮಾದರಗಳಿಂದ ಮಕ್ಕಳಿಗೆ ತಿಳಿವಳಿಕೆ ಹೇಳಿದ್ದರೂ, ಅಂದಂದು ಮಕ್ಕಳಿಗೂ ತಾಯಿತಂದೆಗಳಿಗೂ ನಡೆಯುವ ದುರಂತ ಜಗಳಗಳು ಆಶ್ಚರ್ಯ ಹುಟ್ಟಿಸುವಂತಿವೆ. ತಾಯಿ ತಂದೆಗಳಿಗೂ ಮಕ್ಕಳಿಗೂ ಇರಬಹುದಾದ ಭಿನ್ನದೃಷ್ಟಿಯೇ ಇಂಥ ದುರಂತಕ್ಕೆ ಮೂಲಕಾರಣವೆನ್ನಬಹುದು. ಅಗಾಧವಾಗಿ ಜೀವನ ವಿಸ್ತರಿಸಿರುವುದರಿಂದಲೂ, ದೊಡ್ಡವರಾದಂತೆ ಮಕ್ಕಳು ಸಮಾಜದಲ್ಲಿ ವ್ಯವಹರಿಸುವುದರಿಂದಲೂ ಅಂಥ ಭಿನ್ನದೃಷ್ಟಿ ಮಕ್ಕಳಲ್ಲಿ ಹುಟ್ಟುವುದೆಂದೂ, ಆ ಮೂಲಕವೇ ಜಗಳಗಳೂ ಆರಂಭವಾಗುವುವೆಂದೂ ಹಲವರು ಹೇಳುವರು. ಎಂದಮೇಲೆ ಕುಟುಂಬ ಜೀವನಕ್ಕಿಂತ ಹೆಚ್ಚು ಕೈವಾಡವನ್ನು ಬೀರತಕ್ಕ ಇತರ ಶಿಕ್ಷಣ ಸಂಸ್ಥೆಗಳು ಆಧುನಿಕ ಜೀವನದಲ್ಲಿ ಬೆಳೆದುಬರುತ್ತಿರಬೇಕು!

**೮. ಸಮಾಜ ಜೀವನ:** ವಯಸ್ಸು ಹೆಚ್ಚಿದಂತೆ ಮಕ್ಕಳು ಸಮಾಜದಲ್ಲಿ ಭಾಗ ವಹಿಸಲು ಆರಂಭಿಸುತ್ತಾರೆ. ಸಮಾಜದ ಸಂಪ್ರದಾಯಗಳಿಗೂ ನೈತಿಕ ಆಚರಣೆಗಳಿಗೂ ಅವರು ತಲೆಬಾಗಬೇಕಾಗುತ್ತದೆ. ಅದರಿಂದ ಅವರು ಇತರ ವ್ಯಕ್ತಿಗಳೊಡನೆ ಮಿಳಿತು ಬಾಳಲು ಸಹಾಯವಾಗುತ್ತದೆ.

ಯಾವ ಕುಟುಂಬವಾಗಲಿ ಸಮಾಜ ಜೀವನದಲ್ಲಿ ಎಷ್ಟರಮಟ್ಟಿಗೆ ಭಾಗಿಯಾಗುತ್ತದೋ, ಅಷ್ಟೂ ಹೆಚ್ಚಾಗಿ ಆ ಶಿಕ್ಷಣದ ಕೈವಾಡ ಅದರ ಮೇಲೆ ಬೀಳುತ್ತದೆ. ನಮ್ಮ ದೇಶದಲ್ಲಿ ಒಂದು ಮತದವರು ಅದೇ ಮತದ ಇತರ ಕುಟುಂಬಗಳೊಡನೆ ಮಿಳಿಯುವುದು ಸಾಮಾನ್ಯವಾಗಿ ವಾಡಿಕೆಗೆ ಬಂದಿದೆ. ಅಲ್ಲಲ್ಲಿ ಒಂದೊಂದು ಜಾತಿಗೂ ಪ್ರತ್ಯೇಕ ಅಗ್ರಹಾರಗಳೂ ಮೊಹಲ್ಲಗಳೂ ಏರ್ಪಟ್ಟಿರುವುದನ್ನು ಇಂದಿಗೂ ನೋಡಬಹುದು; ಇತ್ತೀಚಿನವರೆಗೂ ಜಾತಿ ಗೋತ್ರಗಳನ್ನನುಸರಿಸಿಯೇ ಶಾಲೆಗಳು ಆರಂಭವಾಗಿ ನಡೆದುಕೊಂಡು ಬರುತ್ತಿದ್ದುವು; ಈ ಸಂಪ್ರದಾಯ ಮಕ್ಕಳಲ್ಲಾಗಲಿ ದೊಡ್ಡವರಲ್ಲಾಗಲಿ ವಿಶಾಲದೃಷ್ಟಿಯ ಸೋದರಭಾವನೆಯನ್ನು ಬೆಳಸುವಂತಿಲ್ಲ; ಸಂಕುಚಿತ ದೃಷ್ಟಿಯನ್ನೂ ಮತ ವೈಷಮ್ಯವನ್ನೂ ಪ್ರತ್ಯೇಕವೆಂಬ ಭಾವವನ್ನೂ ಹೆಚ್ಚಿಸುತ್ತದೆ. ಶಾಲೆಗಳಲ್ಲಾಗಲಿ, ಸಮಾಜದಲ್ಲಾಗಲಿ ಎಲ್ಲ ಮತದವರೂ ಕಲೆತು ಬಾಳುವುದು ಅವಶ್ಯಕ. ಆಗ ನಮ್ಮ ಮಕ್ಕಳಲ್ಲೂ ದೊಡ್ಡವರಲ್ಲೂ ಸೋದರ ಭಾವವೂ ಧರ್ಮ ಸಹಿಷ್ಣುತೆಯೂ ಬೆಳೆಯಲು ಅವಕಾಶವಾಗುತ್ತದೆ. ಶಾಲೆಗಳಲ್ಲಿ ಎಲ್ಲ ಮತದ ಎಲ್ಲ ಅಂತಸ್ತಿನ ಮಕ್ಕಳೂ ಒಂದೆಡೆ ಕುಳಿತು ಶಿಕ್ಷಣ ಪಡೆಯುವಂತಿರಬೇಕು. ಅಂಥ ಆಚರಣೆ ಸುಲಭವೂ ಸಹಜವೂ ಆಗಬೇಕಾದರೆ ರೂಢಮೂಲವಾಗಿ ಬಂದಿರುವ ಸಮಾಜದ ಸಂಕುಚಿತ ಸಂಪ್ರದಾಯಗಳು ಸಡಿಲವಾಗಿ ವಿಶಾಲಭಾವನೆ ಹೆಚ್ಚಬೇಕು. ಅಂಥ ರೀತಿಯ ಶಾಲೆಗಳಲ್ಲಿ ಕುಳಿತು ಎಲ್ಲ ಮಕ್ಕಳೂ ಒಂದೇ ರೀತಿಯ ಸಂಪ್ರದಾಯವನ್ನು ಅನುಸರಿಸಲು ಅವಕಾಶವಾಗಿ, ಸೌಹಾರ್ದದಿಂದ ಬಾಳುವ ಮನೋಧರ್ಮ ಅವರಲ್ಲಿ ಬೆಳೆಯುವಂತಾಗಬೇಕು. ನಮ್ಮ ನಾಡಿನಲ್ಲಿ ಜಾತಿಮತಗಳ ಸಮಸ್ಯೆ ವಿಷಮಿಸಿ ಇಂದಿಗೂ ದಾರುಣ ಸನ್ನಿವೇಶಗಳನ್ನು ಹುಟ್ಟಿಸುತ್ತಿದೆ. ಶಿಕ್ಷಣರಂಗದಲ್ಲಾದರೂ ಈ ಭಿನ್ನಭಾವನೆಗೆ ಅವಕಾಶ ಕೊಡದೆ ಎಲ್ಲರೂ ಒಂದೇ ಎಂಬ ದೃಷ್ಟಿ ಬೆಳೆಯುವಂತೆ ಮಾಡಬೇಕು. ಆ ಮೂಲಕ ಮಾತ್ರ ಮುಂದಿನ ಸಮಾಜದಲ್ಲಿ ಮತಸಹಿಷ್ಣುತೆ ತೋರಿಬರಲು ಅವಕಾಶವಾದೀತು. ಜೊತೆಗೆ, ನಮ್ಮ ಸಮಾಜದಲ್ಲಿ ಭಾಷೆ, ಸಂಸ್ಕೃತಿ ಮತ್ತು ಇನ್ನಿತರ ಭಿನ್ನತೆಗಳು ಇದ್ದುಕೊಂಡು, ಆ ಸೋದರಭಾವನೆಯ ಬೆಳವಣಿಗೆಗೆ ಅಡ್ಡಿಯಾಗಿವೆ. ಅಂಥ ಭಿನ್ನದೃಷ್ಟಿಯ ಆಚರಣೆಗಳನ್ನು ಏಕೀಕರಣಗೊಳಿಸುವುದು ಅನಿ

ವಾರ್ಯ. ಹಾಗೆ ಮಾಡುವಾಗ, ಯಾವ ಭಾಷೆಯನ್ನು ಆಡಬೇಕು? ಯಾವುದನ್ನು ಬಿಡಬೇಕು? ಯಾವ ಸಂಸ್ಕೃತಿಗೆ ಪ್ರಾಧಾನ್ಯತೆ ಕೊಡಬೇಕು? ಯಾವ ಧರ್ಮವನ್ನು ಅನುಸರಿಸಬೇಕು?—ಈ ಸಮಸ್ಯೆಗಳು ಮಾರುಕ್ಷಣದಲ್ಲೇ ಎದ್ದುಕೊಳ್ಳುತ್ತವೆ. ಅವನ್ನು ಬಿಡಿಸುವಾಗ ಯಾವ ದೃಷ್ಟಿಗಾಗಲಿ ಪಕ್ಷಪಾತ ತೋರಬೇಕಾಗಿಲ್ಲ. ಯಾವ ಭಾಷೆ, ಯಾವ ಸಂಸ್ಕೃತಿ, ಯಾವ ಧರ್ಮ—ರಾಷ್ಟ್ರದ ಪುರೋಭಿವೃದ್ಧಿಗೆ ನೆರವಾಗುತ್ತದೋ ಅದನ್ನು ಆಚರಣೆಗೆ ತರಲು ಯತ್ನಿಸಬೇಕು. ಆ ದೃಷ್ಟಿಗೆ ಎಲ್ಲರೂ ತಲೆಬಾಗಬೇಕು. ಆ ಮೂಲಕ ಏಕದೃಷ್ಟಿಯನ್ನು ಮಕ್ಕಳ ಮನಸ್ಸಿನಲ್ಲಿ ಬಿತ್ತಿ ಎಲ್ಲರೂ ಸೋದರರೆಂಬ ವಿಶಾಲ ಜೀವನದೃಷ್ಟಿಯನ್ನು ಮೂಡಿಸಬೇಕು. ಯಾವ ಸಮಾಜವಾಗಲಿ, ತನ್ನ ಹಿತಕ್ಕಿಂತ ಇಡೀ ರಾಷ್ಟ್ರದ ಹಿತವೇ ಪವಿತ್ರವೆಂದು ಭಾವಿಸಿದಾಗ ಇಂಥ ಅನೇಕ ಭಿನ್ನತೆಗಳು ಮಾಯವಾಗುತ್ತವೆ. ಸದ್ಭಾವನೆಗಳಿಂದ ಪರಿಷ್ಕರಣಗೊಂಡ ಅಂಥ ಸಮಾಜ ವ್ಯಕ್ತಿಗಳಿಗೆ ಅತ್ಯುತ್ತಮವಾದ ಶಿಕ್ಷಣವನ್ನು ಕೊಡಬಲ್ಲದು.

೯. **ಮತಪೀಠಗಳು:** ಎಲ್ಲ ಮತಗಳೂ ಉತ್ತಮ ನೈತಿಕ ಭಾವನೆಗಳನ್ನೂ, ಪರಿಶುದ್ಧವಾದ ಮನೋಧರ್ಮವನ್ನೂ ದೃಢವಾದ ದೃಷ್ಟಿಧ್ಯೇಯಗಳನ್ನೂ ಪ್ರತಿಪಾದಿಸುತ್ತವೆ. ಕ್ರೈಸ್ತ ಮತಪೀಠಗಳಲ್ಲಿ ಪ್ರತಿ ಭಾನುವಾರವೂ ಕೊಡುವ ಧರ್ಮಶಿಕ್ಷಣವೂ, ಮಸೀದಿಗಳಲ್ಲಿ ಕೊರಾನಿನ ಪಠನದ ಮೂಲಕ ನಡೆಯುವ ಸನ್ಮಾರ್ಗಬೋಧನೆಯೂ, ಹಿಂದೂ ದೇವಾಲಯಗಳಲ್ಲಿ ನಡೆಯುವ ಧರ್ಮಗೋಷ್ಠಿಗಳೂ ಜನಜೀವನವನ್ನು ಪರಿಷ್ಕರಿಸಿ, ಉತ್ತಮವೂ ಉದಾತ್ತವೂ ಆದ ಸಮಾಜ ನಿರ್ಮಾಣಕ್ಕೆ ನೆರವಾಗುತ್ತವೆ. ಆದರೆ, ಉಚಿತವಾದ ರೀತಿಯಲ್ಲಿ ಈ ಬೋಧನೆ ನಡೆದ ಹೊರತು ಮತವೈಷಮ್ಯ ಜನತೆಯಲ್ಲಿ ಹುಟ್ಟಿ, ಸಮಾಜದ ಸುಖಶಾಂತಿಗೆ ಭಂಗ ಬರಬಹುದು. ಅಂಥ ಸಂದರ್ಭಗಳಲ್ಲಿ ಕೇವಲ ಮತವೈಶಿಷ್ಟ್ಯಗಳಿಗೇ ಪ್ರಾಧಾನ್ಯತೆ ಕೊಟ್ಟು, ಮತ–ಮತಗಳಿಗಿರುವ ಭಿನ್ನತೆಯನ್ನು ಒತ್ತಿ ಹೇಳುವುದರಿಂದ ಜನರಿಗೆ ದುರ್ಬೋಧನೆಯಾಗುತ್ತದೆ; ಜನಜೀವನದಲ್ಲಿ ದ್ವೇಷಾಸೂಯೆಗಳು ಹೆಚ್ಚಿ ಸೌಹಾರ್ದ ಮಾಯವಾಗುತ್ತದೆ. ಪರಮತಗಳಲ್ಲಿ ಸಹನೆ ಸೌಹಾರ್ದ ಮತ್ತು ಸದ್ಭಾವನೆಗಳು ಎಲ್ಲ ವ್ಯಕ್ತಿಗಳಿಗೂ ಅವಶ್ಯಕ. ಅದರಿಂದ

ಅಂದಂದು ಒದಗುವ ದುರಂತ ಘಟನೆಗಳು ನಿಂತಾವು. ಈ ಉದಾತ್ತ ಧ್ಯೇಯಗಳಿಂದ ಪ್ರೇರಿತವಾದ ಯಾವ ಮತತತ್ತ್ವ ಬೋಧನೆಯಾದರೂ ಇಡೀ ಸಮಾಜದ ಕಲ್ಯಾಣಕ್ಕೆ ನೆರವಾದೀತು. ಆದರೆ, ಅಂಥ ಉದಾತ್ತ ದೃಷ್ಟಿಧ್ಯೇಯಗಳನ್ನು ಬೋಧಿಸುವ ಗುರುಗಳು ಸಿಕ್ಕುವುದು ಕಷ್ಟ. ಈ ಕೊರತೆಯಿಂದ ಮತಧರ್ಮ ಶಿಕ್ಷಣವೇ ಬೇಡವೆನ್ನುವುದು ಉಚಿತವಲ್ಲ. ಅನಾದಿ ಕಾಲದಿಂದಲೂ ಧಾರ್ಮಿಕ ಭಾವನೆ ಮಾನವನಲ್ಲಿ ಉತ್ತಮೋತ್ತಮ ಗುಣಗಳು ಬೆಳೆಯುವಂತೆ ಮಾಡಿ, ಮಾನಸ ಸಂಸ್ಕರಣಕ್ಕೆ ನೆರವಾಗಿದೆ. ಅಂಥ ಸಂಪತ್ತನ್ನು ದೂರೀಕರಿಸುವುದೆಂದರೆ ನಮ್ಮ ಹಿಂದಿನವರು ನಮಗಾಗಿ ದುಡಿದು ಗಳಿಸಿಟ್ಟಿರುವ ಒಂದು ಜ್ಞಾನನಿಧಿಯನ್ನೇ ಕಳೆದುಕೊಂಡಂತಾಗುತ್ತದೆ; ಆದರೆ, ಸಮಾಜದ ಹಿತಕ್ಕನುಕೂಲಿಸುವಂತೆ ಅದನ್ನು ಬೋಧಿಸುವುದು ಹೇಗೆ? ಭಿನ್ನಮತಗಳ ತವರಾದ ನಮ್ಮ ನಾಡಿನ ಪಾಠಶಾಲೆಗಳಲ್ಲಿ ಧಾರ್ಮಿಕ ಶಿಕ್ಷಣವನ್ನು ಏರ್ಪಡಿಸುವಾಗಲೂ ಇದೇ ವಿಧವಾದ ತೊಡಕುಗಳು ಹುಟ್ಟಿಕೊಳ್ಳುತ್ತವೆ. ಯಾವ ಮತ ತತ್ತ್ವದ ಬೋಧನೆಗೆ ಹೆಚ್ಚಿನ ಪ್ರಾಶಸ್ತ್ಯ ಕೊಡಬೇಕೆಂಬುದು ಇಂದಿಗೂ ನಮ್ಮನ್ನು ಬಾಧಿಸುತ್ತಲೇ ಇದೆ. ಇದನ್ನೆದುರಿಸಿ ಇತ್ಯರ್ಥಪಡಿಸಲು ಯತ್ನಿಸಿ ವಿಫಲರಾದವರು ಮತಧರ್ಮ ಶಿಕ್ಷಣ ಉಚಿತವಲ್ಲವೆಂಬ ತೀರ್ಮಾನಕ್ಕೆ ಬಂದಿರುವುದೂ ಉಂಟು. ಆದರೆ, ನಮ್ಮ ಪಾಠಶಾಲೆಗಳಲ್ಲಿ ನೈತಿಕ ಮತ್ತು ಆಧ್ಯಾತ್ಮಿಕ ಶಿಕ್ಷಣವನ್ನು ಕೊಡಲೇ ಬೇಕು. ಎಲ್ಲ ಮತಗಳಲ್ಲೂ ಉತ್ತಮ ನೈತಿಕ ತತ್ತ್ವಗಳಿದ್ದೇ ಇವೆ; ಪರಿಶುದ್ಧವಾದ ದೈವಿಕ ಭಾವನೆಯನ್ನು ಬೆಳೆಸತಕ್ಕ ಜ್ಞಾನಪರಂಪರೆಯೂ ಇದೆ. ಆದರೆ, ಗೌಣವಾದ ಹಲವು ಭಿನ್ನ ಆಚಾರವ್ಯವಹಾರಗಳು ಒಂದೊಂದು ಮತದಲ್ಲೂ ಕಾಣಬಹುದು. ಅಂಥ ಗೌಣ ವಿಷಯಗಳನ್ನು ಬೋಧಿಸಬೇಕೆಂದು ಎಲ್ಲ ಮತಗಳೂ ಒತ್ತಾಯ ಮಾಡುವುದು ಉಚಿತವಲ್ಲ; ಫಲಪ್ರದವೂ ಅಲ್ಲ. ಯಾವ ಮತತತ್ತ್ವಗಳೇ ಆಗಲಿ, ಅತಿಮಾನುಷನೂ, ದಯಾಮಯಿಯೂ, ಅಮೃತ ಸ್ವರೂಪಿಯೂ ಆದ ದೇವರಲ್ಲಿ ಭಕ್ತಿ ಹುಟ್ಟಿಸುವಂತೆ ರೂಪುಗೊಂಡಿವೆ; ಅವನ ಇನ್ನಿತರ ಸೃಷ್ಟಿಯಲ್ಲಿ, ಹಾಗೂ ಮಾನವರಲ್ಲಿ ಸೋದರಭಾವ ಮೂಡಿಸುವಂತೆ ರಚನೆಗೊಂಡಿವೆ. ಅಂಥ ದೇವರು ಎಲ್ಲ ಜನರಿಗೂ ತಂದೆ;—ಅವನ ಮುಂದೆ ನಾವೆಲ್ಲ ಸಮಾನರು; ಆ ಮಂಗಳ

ಮೂರ್ತಿಯಲ್ಲಿ ಗೌರವವನ್ನೂ, ಅವನ ಮಕ್ಕಳಲ್ಲಿ ಸೋದರಭಾವವನ್ನೂ ತೋರುವುದಕ್ಕಿಂತ ಉತ್ತಮ ಧರ್ಮವಾವುದು? ಎಂದಮೇಲೆ, ಎಲ್ಲ ಮತಗಳಿಗೂ ಸಾಮಾನ್ಯವೆನಿಸುವ ಉದಾತ್ತ ತತ್ವಗಳನ್ನು ಬೋಧಿಸುವುದು ಉತ್ತಮ ಧರ್ಮಶಿಕ್ಷಣ. ಶಾಲೆಗಳಲ್ಲಾಗಲಿ, ಮತಪೀಠಗಳಲ್ಲಾಗಲಿ ಬೋಧಕರು ವಿಶ್ವಪ್ರೇಮಿಗಳಾಗಿರಬೇಕು. ಉದಾತ್ತ ಧ್ಯೇಯಗಳಿಂದ ಪ್ರೇರಿತರಾದ ಗುರುವರ್ಯನು ವಿದ್ವೇಷವಿಲ್ಲದೆ, ಪಕ್ಷಪಾತವಿಲ್ಲದೆ ಎಲ್ಲ ಮತಗಳಿಗೂ ಮೂಲ ತತ್ವಗಳಂತಿರುವ ಪ್ರಧಾನ ವಿಷಯಗಳ ಕಡೆ ಮಾತ್ರ ಗಮನಕೊಟ್ಟು ಬೋಧಿಸುವನು. ಅಂಥ ಧಾರ್ಮಿಕ ಶಿಕ್ಷಣ ಎಂದಿಗಿಂತಲೂ ಇಂದು ನಮ್ಮ ಸಮಾಜಕ್ಕೆ ಅನಿವಾರ್ಯವಾಗಿದೆ.

ಭಾರತೀಯರ ಜೀವನದಲ್ಲಿ ಅನಾದಿ ಕಾಲದಿಂದಲೂ ಧಾರ್ಮಿಕ ಶಿಕ್ಷಣ ಮಹತ್ತರವಾದ ಪರಿಣಾಮವನ್ನು ಬೀರುತ್ತಲೇ ಬಂದಿದೆ; ಜನತೆಯಲ್ಲಿ ಸದ್ಭಾವನೆಗಳು ಮೂಡಿಸಿ ಸಮಾಜದಲ್ಲಿ ಶಾಂತಿ ಸೌಹಾರ್ದ ನೆಲಸುವಂತೆ ಮಾಡಲೂ ನೆರವಾಗುತ್ತಿದೆ. ಆದರೂ, ಅಂದಂದು ಮತಘರ್ಷಣೆಗಳ ದುರಂತ ಘಟನೆಗಳೂ ನಡೆದುಹೋಗುತ್ತಿವೆ. ಇವು ತಪ್ಪಬೇಕಾದರೆ ಧರ್ಮಬೋಧಕರು ಸರ್ವ ಧರ್ಮಗಳಿಗೂ ತಳಹದಿಯಂತಿರುವ ಉದಾತ್ತ ತತ್ವಗಳಿಗೆ ಪ್ರಾಧಾನ್ಯತೆಯನ್ನು ಕೊಟ್ಟು, ವೈಷಮ್ಯ ಹೆಚ್ಚಿಸಬಹುದಾದ ಭಿನ್ನತೆಗಳನ್ನು ಗೌಣವಾಗಿ ಪರಿಗಣಿಸಬೇಕು. 'ಜಗತ್ತಿಗೆಲ್ಲ ಒಬ್ಬ ದೇವರು; ನಾವೆಲ್ಲ ಅವನ ಮಕ್ಕಳು' ಎಂಬ ಹಿರಿಯ ಭಾವನೆ ಜನತೆಯಲ್ಲಿ ಮೂಡುವಂತೆ ಬೋಧಿಸಬೇಕು. ಅಂದು ನಮ್ಮ ಮತಪೀಠಗಳು ಜನತೆಯ ಕಲ್ಯಾಣ ಸಾಧನೆಗೆ ಕಾರ್ಯತಃ ನೆರವಾದಾವು.

ಭಾರತದಲ್ಲೂ ಪಾಶ್ಚಾತ್ಯ ದೇಶಗಳಲ್ಲೂ ಮತಪೀಠಗಳು ಅನಾದಿ ಕಾಲದಿಂದಲೂ ಶಿಕ್ಷಣ ಕೇಂದ್ರಗಳಾಗಿವೆ. ಆದರೆ, ಅಲ್ಲಿನ ಶಿಕ್ಷಣ ದೈವಿಕ ಭಾವನೆ ಮೂಡಿಸುತ್ತಿದ್ದರೂ ಮತ ಸಹಿಷ್ಣುತೆಯನ್ನು ಬೋಧಿಸುವಂತಿರಲಿಲ್ಲ. ಜೊತೆಗೆ, ಜನರ ವಿಚಾರಪರತೆಯನ್ನು ತುಳಿದು, ಮೂಢ ನಂಬಿಕೆಗಳಿಗೂ ಅಂಧ ಸಂಪ್ರದಾಯಗಳಿಗೂ ತಲೆಬಾಗುವಂತೆ ಮಾಡಿ, ತಮ್ಮ ಅಧಿಕಾರ ನಡಸುವುದೇ ಆ ಶಿಕ್ಷಣದ ಉದ್ದೇಶವಾಗುತ್ತ ಬಂತು; ಜನಜೀವನದಲ್ಲಿ ವಿಚಾರಪರತೆ ಹೆಚ್ಚಿದಂತೆ, ಧೈರ್ಯ ಬೆಳೆದಂತೆ, ಅಂಥ ಶಿಕ್ಷಣ ಧ್ಯೇಯವನ್ನು

ವಿರೋಧಿಸಲಾರಂಭವಾಯಿತು; ಕ್ರಮ ಕ್ರಮವಾಗಿ ಸರ್ಕಾರ ಮತಪೀಠಗಳ ಆ ಕಾರ್ಯವನ್ನು ವಹಿಸಿಕೊಂಡು, ಜನತೆಯಲ್ಲಿ ವಿಚಾರದೃಷ್ಟಿಯನ್ನು ಬೆಳಸು ವಂತೆ ಶಿಕ್ಷಣವನ್ನು ಕೊಡುವ ಪಾಠಶಾಲೆಗಳನ್ನು ಆರಂಭಿಸಬೇಕಾಯಿತು. ಆದರೂ ಮತಪೀಠಗಳು ಇಂದಿಗೂ ಅಪ್ರತ್ಯಕ್ಷವಾಗಿಯಾದರೂ ತಮ್ಮ ಶಿಕ್ಷಣ ಕೈವಾಡವನ್ನು ಜನತೆಯ ಮೇಲೆ ಉಳಿಸಿಕೊಂಡೇ ಬಂದಿವೆ; ಆಧು ನಿಕ ಮಾನವ ಜನಾಂಗದ ಅಭಿವೃದ್ಧಿಗೆ ಅವು ಮುಂದೂ ನೆರವಾಗಬೇಕಾದರೆ ಅವುಗಳ ಅಂತರಂಗದಲ್ಲಿ ಪರಿಶುದ್ಧವೂ, ಉದಾತ್ತವೂ, ವಿಶ್ವವ್ಯಾಪಕವೂ ಆದ ದೃಷ್ಟಿ ಅಂಕುರಿಸಬೇಕು.

**೧೦. ವೃತ್ತಿ ಅಥವಾ ಉದ್ಯೋಗ:** ಎಲ್ಲ ವಿಧದ ಉದ್ಯೋಗಗಳೂ ಮಾನವನ ಶಿಕ್ಷಣಸಾಧನಗಳೇ. ವೈದ್ಯ, ಶಿಲ್ಪಿ, ಬೇಸಾಯಗಾರ, ಶಿಕ್ಷಕ, ನ್ಯಾಯವಾದಿ, ಕಾರ್ಖಾನೆಯ ಕೂಲಿ—ಈ ಯಾವ ಉದ್ಯೋಗಿಯೇ ಆಗಲಿ ತನ್ನ ವೃತ್ತಿಯಲ್ಲಿ ನಿರತನಾಗಿರುವಾಗ ಹೊಸ ಹೊಸ ಸಮಸ್ಯೆಗಳೇಳುತ್ತಿರು ತ್ತವೆ; ಅವನ್ನು ಬಿಡಿಸಿಕೊಂಡು ಮುಂದುವರಿಯುವಾಗ ಹೊಸ ಹೊಸ ಕ್ರಮಗಳೂ ಮಾರ್ಗಗಳೂ ಗೋಚರವಾಗುತ್ತವೆ; ಆ ಮೂಲಕ ಅವರಿಗೆ ಅವರವರ ಉದ್ಯೋಗಗಳಲ್ಲಿ ಹೆಚ್ಚಿನ ಅನುಭವವೂ ಶಿಕ್ಷಣವೂ ದೊರೆ ತಂತಾಗುತ್ತದೆ. ಅನೇಕ ಕಾರ್ಖಾನೆಗಳಲ್ಲಿ ತಮ್ಮ ಕೆಲಸಗಾರರಿಗೆ ಹೆಚ್ಚಿನ ಶಿಕ್ಷಣವನ್ನು ಉದ್ದೇಶಪೂರ್ವಕವಾಗಿಯೂ ಕೊಡುವುದುಂಟು. ಅದರಿಂದಲೂ ಕೆಲಸಗಾರನಿಗೆ ತನ್ನ ವೃತ್ತಿಯಲ್ಲಿ ಹೆಚ್ಚಿನ ನೈಪುಣ್ಯ ದೊರಕುತ್ತದೆ. ಉದ್ಯೋಗ ನಿರತನಾಗಿರುವ ಯಾವ ಉದ್ಯೋಗಿಯಾಗಲಿ ನಿರಂತರವೂ ಹೊಸ ಹೊಸ ಮಾರ್ಗಗಳನ್ನು ಉದ್ದೇಶಪೂರ್ವಕವಾಗಿ ಅರಸುತ್ತಿದ್ದು, ತನ್ನ ಕೆಲಸವನ್ನು ಉತ್ತಮಗೊಳಿಸಲೂ ಯತ್ನಿಸುತ್ತಿರುತ್ತಾನೆ. ಹೀಗೆ ವ್ಯಕ್ತಿ ಗಳಿಗೆ ಅವರು ಅವಲಂಬಿಸಿರುವ ಉದ್ಯೋಗಗಳೇ ಶಿಕ್ಷಣಸಾಧನಗಳಾಗಿವೆ.

ಯಂತ್ರ ಯುಗದ ಈ ಕಾಲದಲ್ಲಿ ಎಲ್ಲ ಉದ್ಯೋಗಿಗಳಿಗೂ ಬೇಕಾದ ಹಾಗೆ ವಿರಾಮ ದೊರಕುತ್ತದೆ. ಆ ವಿರಾಮ ಕಾಲದಲ್ಲಿ ಅವರು ಇತರ ವೃತ್ತಿ ಯಲ್ಲಿರುವವರೊಂದಿಗೂ ಕಲೆಯುವುದು ಒಳ್ಳೆಯದು. ಅದರಿಂದ ಅವರಿಗೆ ಇತರ ಉದ್ಯೋಗಗಳ ಪರಿಚಯವೂ ಆಗುತ್ತದೆ. ವಿರಾಮ ಕಾಲದಲ್ಲಿ ಕೆಲಸ ಗಾರರಿಗೆ ಮನರಂಜನೆಯ ಕಾರ್ಯಗಳ ಏರ್ಪಾಡೂ ಆಗಬೇಕು, ಆಗ ಅವರ

ಜೀವನೋಪಾಯದ ಜೊತೆಗೆ ವಿರಾಮವನ್ನು ಸದುಪಯೋಗಪಡಿಸಿಕೊಂಡು, ಮನರಂಜನೆಯಾಗಿ ತಮ್ಮ ಕೆಲಸಕ್ಕೆ ಹೆಚ್ಚಿನ ಉತ್ಸಾಹದಿಂದ ಹಿಂದಿರುಗಲು ಅವಕಾಶವಾಗುತ್ತದೆ; ಉದ್ಯೋಗ ಸಂಸ್ಥೆಗಳೂ, ಸರ್ಕಾರವೂ, ಸಮಾಜವೂ ಕೆಲಸಗಾರರಿಗೆ ತಮ್ಮ ವೃತ್ತಿಯ ಶಿಕ್ಷಣದ ಜೊತೆಗೆ ಮನರಂಜನೆಯ ಕಾರ್ಯವನ್ನೂ ಇತರ ವೃತ್ತಿಯ ಪರಿಚಯವನ್ನೂ ಮಾಡಿಕೊಡಬೇಕು. ಬಹುಮುಖವಾದ ಅಂಥ ಶಿಕ್ಷಣದಿಂದ ವ್ಯಕ್ತಿಯ ಜೀವನದಲ್ಲಿ ಹರ್ಷವೂ ಉತ್ಸಾಹವೂ ಮೂಡಿ, ವೃತ್ತಿಯಲ್ಲಿ ನೈಪುಣ್ಯವೂ ಸಾಧನೆಯಾಗುತ್ತದೆ; ಕಾರ್ಖಾನೆಗಳ ಮತ್ತು ಉದ್ಯೋಗಗಳ ಉತ್ಪನ್ನ ಹೆಚ್ಚಿ, ನಾಡಿನ ಸಂಪದಭಿವೃದ್ಧಿಗೆ ನೆರವಾಗುತ್ತದೆ.

**೧೧. ಸರ್ಕಾರ ಅಥವಾ ರಾಷ್ಟ್ರ :** ಸಮಾಜ ಅನೇಕ ಕುಟುಂಬಗಳನ್ನೊಳಗೊಂಡಿದ್ದರೆ, ರಾಷ್ಟ್ರ ಅನೇಕ ಸಮಾಜಗಳ ಸಮುದಾಯವಾಗಿರುತ್ತದೆ. ಕುಟುಂಬದಲ್ಲಾಗಲಿ ಸಮಾಜದಲ್ಲಾಗಲಿ ಸ್ವಾರ್ಥಬುದ್ಧಿ ತಲೆಹಾಕಿದರೂ ಸರ್ಕಾರ ಅಥವಾ ರಾಷ್ಟ್ರದಲ್ಲಿ ಅದು ಇರುವಂತಿಲ್ಲ: ಎಲ್ಲ ಸಮಾಜಗಳ ಎಲ್ಲ ವ್ಯಕ್ತಿಗಳ ಸುಖಶಾಂತಿಯೇ ಅದರ ಧ್ಯೇಯವಾಗಿರಬೇಕು. ಕುಲ ಗೋತ್ರಗಳ ತಾರತಮ್ಯವಿಲ್ಲದೆ, ಬಡವ ಬಲ್ಲಿದರೆಂಬ ಪಕ್ಷಪಾತವಿಲ್ಲದೆ, ರಾಷ್ಟ್ರ ಎಲ್ಲರ ಕಲ್ಯಾಣವನ್ನೂ ಸಾಧಿಸಬೇಕು. ಬಡವರೋ, ಐಶ್ವರ್ಯವಂತರೋ, ಪ್ರತಿಭಾಶಾಲಿಗಳೋ, ದಡ್ಡರೋ, ನಿರ್ಬಲರೊ ಅಂಗಹೀನರೋ—ಅವರೆಲ್ಲರ ಶಿಕ್ಷಣದ ಭಾರ ಸರ್ಕಾರಕ್ಕೆ ಸೇರಿದ್ದು. ಬಡತನ ವ್ಯಕ್ತಿಯ ಪರಿಪೂರ್ಣ ಶಿಕ್ಷಣಕ್ಕೆ ಎಲ್ಲೂ ಅಡ್ಡಿ ಬರಬಾರದು. ಅಂಗವಿಹೀನರೂ ನಿರ್ಬಲರೂ ಉಚಿತವಾದ ಶಿಕ್ಷಣ ಪಡೆದು ಬದುಕಿ ಬಾಳುವಂತಾಗಬೇಕು. ಮಂಕು ಬುದ್ಧಿಯವರಿಗೂ ಮಡ್ಡಿಗಳಿಗೂ ರಕ್ಷಣೆ ಬೇಕು. ಅಂಥ ಕಾರ್ಯವನ್ನು ಸಮಾಜ ಸಂಸ್ಥೆಗಳಿಗೆ ವಹಿಸುವುದರಿಂದ ಸರ್ಕಾರದ ಭಾರ ಸ್ವಲ್ಪ ಮಟ್ಟಿಗೆ ಕಡಮೆಯಾಗುವುದಾದರೂ, ಎಲ್ಲ ವ್ಯಕ್ತಿಗಳಿಗೂ ತೃಪ್ತಿಕರವಾದ ಶಿಕ್ಷಣ ದೊರಕಿಸುವುದು ಕಷ್ಟವಾಗುತ್ತದೆ. ಸಮಾಜಕ್ಕೆ ಆ ಕಾರ್ಯ ವಹಿಸಿದಾಗ ಪ್ರಬಲರಾದ ಹಲವರು ಅದರ ಫಲವನ್ನು ಪಡೆಯಬಹುದು; ಹಿಂದುಳಿದವರು ಹಿಂದೆಯೇ ಉಳಿದು ಬಿಡಬಹುದು; ಎಲ್ಲ ವ್ಯಕ್ತಿಗಳಿಗೂ ಉಚಿತವಾದ ಶಿಕ್ಷಣ ಕೊಡಲು ರಾಷ್ಟ್ರವೇ ಸರಿಯಾದ ಸಾಧನ. ಮಕ್ಕಳಿಂದ ಮುದುಕರವರೆಗಿನ ಎಲ್ಲಾ ವಯಸ್ಸಿನ ವ್ಯಕ್ತಿ

ಗಳಿಗೂ ಕ್ರಮವಾದ ಶಿಕ್ಷಣ ವ್ಯವಸ್ಥೆ ಮಾಡುವುದು ಅದರ ಕಾರ್ಯ. ಅನಿವಾರ್ಯವೊದಗಿ ಇತರ ಸಮಾಜ ಸಂಸ್ಥೆಗಳಿಗೆ ಆ ಕಾರ್ಯದಲ್ಲಿ ಸ್ವಲ್ಪವನ್ನಾದರೂ ವಹಿಸಬೇಕಾಗಿ ಬಂದಾಗ ಅಂಥ ಸಂಸ್ಥೆಗಳು ರಾಷ್ಟ್ರದ ಎಲ್ಲ ವ್ಯಕ್ತಿಗಳಿಗೂ ಸಮಾನವೂ ಉಚಿತವೂ ಆದ ಶಿಕ್ಷಣವನ್ನು ಕೊಡುವಂತೆ ಕಡ್ಡಾಯ ಮಾಡಬೇಕು. ಸಾರ್ವತ್ರಿಕ ಶಿಕ್ಷಣ ಅನಿವಾರ್ಯವೆನಿಸಿರುವ ಈ ಕಾಲದಲ್ಲಿ ಸರ್ಕಾರದ ಹೊರೆಯಲ್ಲಿ ಸಾಧ್ಯವಾದಷ್ಟನ್ನು ಸಮಾಜವೂ ವಹಿಸಿಕೊಳ್ಳಬೇಕೆನ್ನುವುದೇನೋ ಸಹಜ. ಹಾಗೆ ವಹಿಸುವಾಗ ಅಂಥ ಸಂಸ್ಥೆಗಳಲ್ಲಿ ಸ್ವಾರ್ಥಬುದ್ಧಿಯಿಲ್ಲದಂತೆ ಮಾಡಿ, ಇಡೀ ರಾಷ್ಟ್ರದ ಪುರೋಭಿವೃದ್ಧಿಯ ಕಡೆ ಗಮನವನ್ನು ಸೆಳೆಯಬೇಕು.

ಹೀಗೆ ಸರ್ಕಾರ ಅಥವಾ ರಾಷ್ಟ್ರ ಜನತೆಯ ಶಿಕ್ಷಣ ನಿರ್ವಹಣ ಕಾರ್ಯದ ಒಂದು ಸಂಸ್ಥೆಯಾಗಿರುವುದರ ಜೊತೆಗೆ, ಒಂದು ಶಿಕ್ಷಣ ಸಾಧನವೂ ಆಗಿದೆ. ರಾಜ್ಯದ ಆಡಳಿತ ವ್ಯವಸ್ಥೆ, ಸಮಾಜದ ಸುಖ ಶಾಂತಿಗಾಗಿ ಏರ್ಪಡಿಸಿರುವ ವಿಧಿನಿಯಮಗಳು, ಅಂದಂದು ನೂತನವಾಗಿ ಹೊರಡುವ ರಾಜ್ಯಶಾಸನಗಳು—ಇವೆಲ್ಲ ಜನತೆಗೆ ಒಂದು ರೀತಿಯ ಪ್ರಜಾಜೀವನ ಶಿಕ್ಷಣವನ್ನು ನಿರಂತರವೂ ನೀಡುತ್ತಿವೆ. ಯಾವ ಸರ್ಕಾರವಾಗಲಿ, ತನ್ನ ದೃಷ್ಟಿ ಧ್ಯೇಯಗಳನ್ನು ಮುಂದುವರಿಸಲೂ, ಸಮಾಜದ ಸುಖ ಶಾಂತಿಯನ್ನು ಪಾಲಿಸಲೂ ಜನತೆಗೆ ಸತ್ಪ್ರಜಾ ಜೀವನದ ಶಿಕ್ಷಣ ಕೊಡುವುದು ಅಗತ್ಯ. ಆದ್ದರಿಂದ ರಾಷ್ಟ್ರದ ಎಲ್ಲ ವ್ಯಕ್ತಿಗಳೂ ಶಿಕ್ಷಣ ಪಡೆಯುವಂತೆ ಮಾಡುವುದು ಸರ್ಕಾರದ ಕರ್ತವ್ಯ.

**೧೨. ಪಾಠಶಾಲೆಗಳು :** ಮೇಲಿನ ವಿವಿಧ ಸನ್ನಿವೇಶಗಳೂ ಸಂಘ ಸಂಸ್ಥೆಗಳೂ ಶಿಕ್ಷಣ ಕಾರ್ಯವನ್ನು ಸಾಧಿಸುವುವಾದರೂ, ಆ ಕಾರ್ಯ ಸಾಧನೆಯ ನಿರ್ದಿಷ್ಟ ಉದ್ದೇಶದಿಂದಲೇ ನಿರ್ಮಿತವಾಗಿರತಕ್ಕ ಸಂಸ್ಥೆಗಳೆಂದರೆ ಪಾಠಶಾಲೆಗಳು. ಮಕ್ಕಳ ಎಳೆಯ ದಿನಗಳಲ್ಲಿ ಈ ಸಂಸ್ಥೆಗಳು ಅತ್ಯಂತ ಪ್ರಭಾವಯುತವಾದ ಕೈವಾಡವನ್ನು ಬೀರಬಲ್ಲವು. ಅವರ ಸ್ವಭಾವಾದಿ ಹುಟ್ಟು ಗುಣಗಳು, ಮನಶ್ಶಕ್ತಿ ಮತ್ತು ಸಂವೇದನೆಗಳು ಕಾರ್ಯಮುಖವಾಗುವ ಸನ್ನಿವೇಶಗಳನ್ನು ರಚಿಸಿ, ನಿರ್ದಿಷ್ಟ ರೂಪದಲ್ಲಿ ಅವನ್ನು ತಿದ್ದಿ ಸಂಸ್ಕರಿಸಿ, ಅವರ ವ್ಯಕ್ತಿತ್ವವನ್ನು ರೂಪಿಸುವ ಕಾರ್ಯದಲ್ಲಿ ಅವು ಪ್ರಧಾನ ಪಾತ್ರವನ್ನು

ವಹಿಸುತ್ತಿವೆ; ಅವರ ದೈಹಿಕ, ಸಾಮಾಜಿಕ ಮತ್ತು ನೈತಿಕ ಬೆಳವಣಿಗೆಗೂ ಬಹುಮುಖವಾದ ಪ್ರಚೋದನೆಯನ್ನು ಒದಗಿಸುತ್ತಿವೆ. ಪಾಠಶಾಲೆಗಳು ಇಷ್ಟೊಂದು ಪ್ರಭಾವಯುತವಾದ ಶಿಕ್ಷಣ ಸಂಸ್ಥೆಯಾದ್ದರಿಂದಲೇ ಸಮಾಜ ಅವನ್ನು ಹಿಡಿತದಲ್ಲಿರಿಸಿಕೊಂಡು, ತನ್ನ ಪುರೋಭಿವೃದ್ಧಿಗೊಪ್ಪುವಂತೆ ಅಲ್ಲಿನ ಕಾರ್ಯಕಲಾಪಗಳನ್ನು ನಿಷ್ಕರ್ಷಿಸಲು ಯತ್ನಿಸುತ್ತದೆ.

ಪಾಠಶಾಲೆ ಸಮಾಜದ ಒಂದು ಅಂಗ; ಜನಾಂಗದ ಸಾಹಿತ್ಯ, ಸಂಸ್ಕೃತಿ, ಸಂಪ್ರದಾಯಗಳನ್ನೂ, ಆಚಾರ ವ್ಯವಹಾರಗಳನ್ನೂ, ಇತಿಹಾಸ ಮತ್ತು ಕಲಾಸಂಪತ್ತನ್ನೂ ಮಕ್ಕಳಿಗೆ ಅಲ್ಲಿ ಪರಿಚಯಮಾಡಿಕೊಡಲಾಗುತ್ತದೆ. ಆ ಮೂಲಕವೇ ಸಮಾಜ ತನ್ನ ವೈಶಿಷ್ಟ್ಯಗಳನ್ನು ಉಳಿಸಿಕೊಂಡು ಮುಂದುವರಿಯಲು ಶಕ್ತವಾಗಿದೆ. ಹಿಂದಿನವರ ಅನುಭವವನ್ನು ಮಾತ್ರ ಪಡೆಯುವುದರಿಂದ ಸಮಾಜದ ಪರಿಚಯುವಾಗಬಹುದು; ಆ ಮೂಲಕ ಸಮಾಜದವೈಶಿಷ್ಟ್ಯಗಳೂ ಉಳಿದುಕೊಳ್ಳಬಹುದು; ಆದರೆ ಅದರ ಪುರೋಭಿವೃದ್ಧಿ ಅಷ್ಟರಿಂದಲೇ ಸಾಧ್ಯವಾಗಲಾರದು. ಎಂದಮೇಲೆ, ಶಾಲೆಯಲ್ಲಿ ಮಕ್ಕಳು ಸಮಾಜ ಸ್ವರೂಪದ ಪರಿಚಯಮಾಡಿಕೊಳ್ಳುವುದರ ಜೊತೆಗೆ ಅದರ ಪ್ರಗತಿಯನ್ನೂ ಸಾಧಿಸುವ ಶಕ್ತಿಯನ್ನು ಪಡೆಯಬೇಕು. ಅಂದು ಮಾತ್ರ ಸಮಾಜದ ವೈಶಿಷ್ಟ್ಯ ಉಳಿದುಕೊಳ್ಳುವುದರ ಜೊತೆಗೆ ಪ್ರಗತಿ ಪಥದಲ್ಲಿ ಬೆಳೆಯಲೂ ಅವಕಾಶವಾಗುತ್ತದೆ. ಈ ಎರಡೂ ದೃಷ್ಟಿಗಳನ್ನು ಗಮನದಲ್ಲಿರಿಸಿಕೊಂಡು, ವ್ಯಕ್ತಿಯನ್ನು ಸಮಾಜ ಜೀವನಕ್ಕೆ ಅಣಿಗೊಳಿಸುವಂತೆ ಶಾಲೆಗಳು ರೂಪುಗೊಳ್ಳಬೇಕು.

ಅಂಥ ಶಿಕ್ಷಣ ಪ್ರಭಾವವನ್ನು ಮಕ್ಕಳ ಮೇಲೆ ಶಾಲೆಗಳು ಬೀರುವುದರಿಂದ ಅಲ್ಲಿನ ಕಾರ್ಯಕಲಾಪಗಳನ್ನು ಎಚ್ಚರಿಕೆಯಿಂದ ರೂಪಿಸಬೇಕು. ಅತಿವೇಗವಾಗಿ ಮುಂದುವರಿಯುತ್ತಿರುವ ಆಧುನಿಕ ಮಾನವ ಸಮಾಜದಲ್ಲಿ ನಮ್ಮ ಮಕ್ಕಳು ಮುಂದೆ ಬಾಳಬೇಕಾಗಿದೆ; ಅವರಿಗೆ ಹಲವು ಸಾಂಪ್ರದಾಯಿಕ ವಿಷಯಗಳನ್ನು ಹೃದ್ಗತ ಮಾಡಿಸಿ ಸಮಾಜದ ಸ್ತಬ್ಧ ಸ್ವರೂಪವನ್ನು ಪರಿಚಯ ಮಾಡಿಕೊಡುವುದರಿಂದಲೇ ಅವರ ಶಿಕ್ಷಣ ಪರಿಪೂರ್ಣವಾಯಿತೆಂದು ಭಾವಿಸಕೂಡದು: ಪ್ರಚಲಿತ ಸಮಾಜದ ನೂತನ ಸನ್ನಿವೇಶಗಳಿಗೆ ತಕ್ಕಂತೆ ನಡೆದುಕೊಳ್ಳುವ ಶಕ್ತಿಯನ್ನೂ ಅವರಿಗೆ ಒದಗಿಸಬೇಕು. ಶಾಲೆಯು

ಸಾಮಾಜಿಕ ಜೀವನದಲ್ಲಿ ಮಕ್ಕಳನ್ನು ಪಳಗಿಸುವಾಗ, ಅವರ ಸ್ವಾಭಾವಿಕ ಗುಣ ಶಕ್ತಿಗಳು ಸರ್ವ ವಿಹಿತವೆನಿಸುವಂತೆ ಬೆಳಸಬೇಕೆಂಬುದು ಸ್ವಭಾವ; ಆದರೆ ಸಮಾಜದಲ್ಲಿ ಹೊಂದಿಕೊಳ್ಳುವ ಅನಿವಾರ್ಯಕ್ಕಾಗಿ ವ್ಯಕ್ತಿಯ ಗುಣ ವಿಶೇಷಗಳನ್ನು ಅದುಮಿ, ಬಲಿಕೊಡಬಾರದು: ಅವರವರ ಶಕ್ತಿ ಸಾಮರ್ಥ್ಯ ಗಳು ಬೆಳೆದು ಅಭಿವೃದ್ಧಿಗೆ ಬರಬೇಕು; ಜೊತೆಗೆ ಶಾಲೆಯು ಸಮಾಜದ ಜೀವನಕ್ಕೂ ಹೊಂದಿಕೊಳ್ಳಬೇಕು. ಇವೆರಡೂ ದೃಷ್ಟಿಗಳನ್ನು ಅನುಸರಿ ಸಿಯೇ ಶಾಲೆಯ ಕಾರ್ಯಕಲಾಪಗಳು ರೂಪುಗೊಳ್ಳಬೇಕು. ಹಾಗೆ ರೂಪು ಗೊಂಡ ಶಾಲಾ ಜೀವನದಿಂದ ವ್ಯಕ್ತಿ ಮುಂದೆ ತನ್ನ ಜೀವನದಲ್ಲಿ ಯಶಸ್ವಿ ಯಾಗುವುದರ ಜೊತೆಗೆ, ಸಮಾಜದ ಸತ್ಪ್ರಜೆಯಾಗಿಯೂ ಬಾಳುವ ಶಕ್ತಿ ಯನ್ನು ಪಡೆಯಬಲ್ಲನು. ಆ ಮಹೋದ್ದೇಶಕ್ಕಾಗಿ ಶಾಲೆಗಳು ಎಲ್ಲ ವ್ಯಕ್ತಿ ಗಳಿಗೂ ಅವರವರಿಗೆ ಉಚಿತವೆನಿಸುವ ಮಟ್ಟದ ಸರ್ವಾಂಗೀಯ ಶಿಕ್ಷಣ ವೀಯಲು ಯತ್ನಿಸಿ, ಅವರ ವ್ಯಕ್ತಿತ್ವ ಪರಿಪೂರ್ಣವಾಗಿ ವಿಕಸಿಸುವಂತೆ ನೆರ ವಾಗಬೇಕು; ಜೊತೆಗೆ, ಜ್ಞಾನಾರ್ಜನೆ, ಸೌಂದರ್ಯೋಪಾಸನೆ, ವೃತ್ತಿಶಿಕ್ಷಣ, ಸಹಕಾರಾದಿ ಸದ್ಭಾವನೆ–ಇವೆಲ್ಲ ಸಿದ್ಧಿಸುವಂತೆಯೂ ಏರ್ಪಡಿಸಬೇಕು. ಅಂಥ ಉತ್ತಮ ಶಿಕ್ಷಣವೊದಗಿಸಬೇಕಾದರೆ ಶಾಲೆಯಲ್ಲೂ ಸಮಾಜದ ಸನ್ನಿವೇಶ ಗಳನ್ನೇ ನಿರ್ಮಿಸಬೇಕು. ಸಮಾಜದಲ್ಲಿ ಬಾಳುವಂತೆ ಅಲ್ಲಿಯೂ ಬಾಳುತ್ತಾ ಚಟುವಟಿಕೆಯ ಸನ್ನಿವೇಶಗಳಿಂದ ಶಿಕ್ಷಣ ಪಡೆಯುಬೇಕು. ಆದರೆ ಉದ್ಯೋಗ ವೈಭವದ ಆಧುನಿಕ ಸಮಾಜ ಬಹು ಸಂಕೀರ್ಣವಾಗಿ ಹೋಗಿದೆ; ಅಂಥ ಸಂಕೀರ್ಣ ಸಮಾಜದ ಸನ್ನಿವೇಶಗಳನ್ನು ಇದ್ದಕ್ಕಿದ್ದಹಾಗೆ ಶಾಲೆಯಲ್ಲೂ ತರುವುದು ಸಾಧ್ಯವಿಲ್ಲ; ತಂದರೂ ಫಲಪ್ರದವಲ್ಲ: ಸಮಾಜದ ಆ ಸನ್ನಿ ವೇಶಗಳನ್ನು ಸುಲಭವೂ ಸರಳವೂ ಆದ ಸ್ವರೂಪದಲ್ಲಿ ಶಾಲೆಗಳಲ್ಲಿ ಅಳವಡಿಸ ಬೇಕು; ಮಕ್ಕಳ ಸಣ್ಣದೂ ಎಳೆಯದೂ ಆದ ಸಮಾಜ ಜೀವನಕ್ಕೆ ಒಪ್ಪು ವಂತಿರಬೇಕು. ವಯಸ್ಕರ ಸಮಾಜದಲ್ಲಿ ರೂಪುಗೊಂಡಿರುವ ಬಗೆಬಗೆಯ ಸನ್ನಿವೇಶಗಳು ಸಹಸ್ರಾರು ವರ್ಷಗಳ ಮಾನವನ ಯತ್ನದ ಫಲವಾಗಿ ರೂಪು ಗೊಂಡವು; ಅವನ್ನು ಕ್ರಮ ಕ್ರಮವಾಗಿ ಬಾಲಕ ಬಾಲಕಿಯರಿಗೆ ಅನುಭವ ಮಾಡಿ ಕೊಡಲು ಭಿನ್ನ ಅಂತಸ್ತಿನ ಶಾಲೆಗಳೂ ಏರ್ಪಡಬೇಕು. ಜೊತೆಗೆ, ಇಂದಿನ ವಯಸ್ಕ ಸಮಾಜದ ಎಲ್ಲ ಗುಣಗಳೂ ಯೋಗ್ಯವೆಂದು ಭಾವಿಸು

ವಂತಿಲ್ಲ. ಅಂಥ ದೋಷಮಯವಾದ ಸನ್ನಿವೇಶಗಳಸಂದರ್ಭಗಳನ್ನೆಲ್ಲ ಶುದ್ಧವೂ ಕ್ಷೇಮಕರವೂ ಪ್ರಗತಿದಾಯಕವೂ ಆದ ಮಾರ್ಗದಲ್ಲಿ ಪರಿಷ್ಕರಿಸಿ, ಶಾಲೆಯ ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಅಂಥ ಶಾಲಾ ಜೀವನ ದಲ್ಲಿ ಮಕ್ಕಳು ಉದಾತ್ತ ರೀತಿಯಲ್ಲಿ ಬಾಳುತ್ತಾ, ಮುಂದಿನ ಸಮಾಜದ ಪ್ರಗತಿಗೆ ನೆರವಾಗುವ ಮನೋಭಾವವನ್ನು ಬೆಳಸಿಕೊಂಡಾರು.

ವಯಸ್ಕ ಸಮಾಜದಲ್ಲಿ ಬಗೆಬಗೆಯ ಸಂಬಂಧಗಳು, ಆದರ್ಶಗಳು, ಮತಗಳು, ಪಂಥಗಳು ಎದ್ದುಕೊಂಡು ಭಿನ್ನ ಭಿನ್ನ ಪ್ರಭಾವಗಳ ಅಲೆಗಳು ಸಾಮಾನ್ಯರಿಗೆ ದಿಗ್ಭ್ರಮೆ ಹಿಡಿಸುವಂತೆ ಹೊಯ್ದಾಡುತ್ತಿವೆ. ಯಾವುದಕ್ಕೆ ನಡೆದುಕೊಳ್ಳಬೇಕೆಂಬುದೇ ಅನೇಕರಿಗೆ ತಿಳಿಯುವಂತಿಲ್ಲ. ಅಂಥ ಸಮಾಜದ ಸನ್ನಿವೇಶಗಳನ್ನೇ ಶಾಲೆಯ ಎಳೆಯ ಮಕ್ಕಳ ಮುಂದೆ ತಂದೊಡ್ಡುವುದಾದರೆ, ಅವರು ತಬ್ಬಿಬ್ಬಿಯಾದಾರು! ಆದರಿಂದ, ಯಾವುವು ಮಕ್ಕಳಲ್ಲಿ ಹೃದಯ ವೈಶಾಲ್ಯತೆಯನ್ನು ಬಿತ್ತಿ, ಸಹಕಾರ, ಸದ್ಭಾವನೆ, ಸತ್ಯಸಂಧತೆ, ಮುಂತಾದ ಉದಾತ್ತ ಮಾನವಗುಣಗಳನ್ನು ಬೆಳಸುವುವೋ ವಯಸ್ಕ ಸಮಾಜದಿಂದ ಅಂಥ ಸನ್ನಿವೇಶಗಳನ್ನು ಆರಿಸಿ ಅಳವಡಿಸಬೇಕು.

ಅಂಥ ಮಹಾಕಾರ್ಯ ಸಾಧಿಸಬೇಕಾಗಿರುವ ಶಾಲೆಗಳ ಜೀವನ ಮಕ್ಕಳಿಗೆ ಒಂದು ಹೊರೆಯಾಗಬಾರದು; ಯಾರೋ ತಮ್ಮಮೇಲೆ ಹೇರಿದ ಕಾರ್ಯವದೆಂದು ಜಿಗುಪ್ಸೆಪಟ್ಟುಕೊಂಡರೆ ಶಾಲೆಯನ್ನೂ ಅಲ್ಲಿ ಬೋಧಿಸುವುದನ್ನೂ ಅವರು ದ್ವೇಷಿಸುವಂತಾಗುವರು. ನಿತ್ಯ ಜೀವನದಲ್ಲಿ ಹೇಗೆ ಹೊರಗಡೆ ಬಾಳುತ್ತಿರುವರೋ ಅಂಥ ಸನ್ನಿವೇಶಗಳನ್ನು ಉದಾತ್ತಗೊಳಿಸಿ, ಶಾಲೆಯಲ್ಲೂ ಅಳವಡಿಸಿದರೆ, ಆನಂದದಿಂದ ಅದು ತಮ್ಮ ಜೀವನಕ್ಕೆ ಸಂಬಂಧಿಸಿದ್ದೆಂಬ ಆಸಕ್ತಿಯಿಂದ ಕಲಿತಾರು.

ಹೀಗೆ ರೂಪುಗೊಂಡ ಶಾಲೆಗಳಿಗೆ ಮಿಕ್ಕ ಸಾಮಾಜಿಕ ಸಂಸ್ಥೆಗಳಿಗಿಂತ ಹಲವು ಹೆಚ್ಚಿನ ಶಿಕ್ಷಣ ಸೌಲಭ್ಯಗಳಿವೆ. ಮನೆಗಳಲ್ಲಿ ಮಕ್ಕಳಿಗೆ ಆಡಲು, ವ್ಯವಹರಿಸಲು ಒಬ್ಬಿಬ್ಬರು ಮಾತ್ರ ಇರುತ್ತಾರೆ; ಶಾಲೆಯಲ್ಲಾದರೆ ನೂರಾರು ಮಂದಿ ದೊರಕುತ್ತಾರೆ; ಎಲ್ಲ ಮಕ್ಕಳೂ ಸಾಮಾನ್ಯವಾಗಿ ಒಂದೇ ವಯಸ್ಸಿನವರಾದ್ದರಿಂದ ಒಬ್ಬರೊಡನೊಬ್ಬರು ಸರಾಗವಾಗಿ ಮಿಳಿತು, ವ್ಯವಹರಿಸಿ, ಅವರದೇ ಆದ ಒಂದು ಬಾಲಸಮಾಜದಲ್ಲಿ ಬಾಳಲು ಅವಕಾಶವಿರುತ್ತದೆ;

ಅಲ್ಲಿರತಕ್ಕ ಮಕ್ಕಳಲ್ಲಿ ಭಿನ್ನ ರೀತಿಯ ಜಾತಿಗೋತ್ರಗಳವರೂ, ಆಚಾರ ವ್ಯವಹಾರದವರೂ ಭಿನ್ನ ಮಾನಸಿಕ, ನೈತಿಕ ಮತ್ತು ಆರ್ಥಿಕ ಸ್ಥಿತಿಯವರೂ ಇರುತ್ತಾರೆ. ಆದ್ದರಿಂದ ಸಂಕುಚಿತ ರೀತಿಯ ಕುಟುಂಬದಲ್ಲಿದ್ದ ಮಕ್ಕಳಿಗೆ ಸಮಾಜದ ವಿಶಾಲವೂ ಬಹುಮುಖವೂ ಆದ ಸ್ವರೂಪ ಗೊತ್ತಾಗುತ್ತದೆ. ಅವರ ದೃಷ್ಟಿಯೂ ಸಮಾಜದ ಭಿನ್ನತೆಯ ಕಡೆ ಹರಿಯುತ್ತದೆ. ಅಂಥ ಸಮಾಜದಲ್ಲಿ ಬಾಳುವಾಗ ವಿಶಾಲ ಭಾವನೆಯ ಆವಶ್ಯಕತೆಯೂ ಅವರಿಗೆ ತೋರಿಬರುತ್ತದೆ. ಒಟ್ಟಿನಲ್ಲಿ, ಶಾಲೆಗಳು ಮಕ್ಕಳದೇ ಆದ ಒಂದು ಸಮಾಜ ಜೀವನ. ಅಲ್ಲಿ ಅವರ ಸಾಮಾಜಿಕ ಗುಣಗಳು ಬೆಳೆಯುತ್ತವೆ; ಆಜೀವವೂ ನಿಲ್ಲಬಲ್ಲ ಸ್ನೇಹಬಾಂಧವ್ಯಗಳೂ ಆರಂಭವಾಗುತ್ತವೆ. ಹಾಗೂ, ಈಚೆಗೆ ಪ್ರಾಧಾನ್ಯತೆಯನ್ನು ಪಡೆಯುತ್ತಿರುವ ಶಾಲೆಯ ಆಟ, ಸಂಘಸಂಸ್ಥೆಗಳು, ಉತ್ಸವ ಸಮಾರಂಭಗಳು—ಇವೇ ಮೊದಲಾದ ಪಾಠೇತರ ಶಾಲಾಜೀವನ ದಿಂದ ಮಕ್ಕಳ ಸಾಮಾಜಿಕ ಶಕ್ತಿ ಹೆಚ್ಚಿ, ಎಲ್ಲರೂ ಸೋದರರೆಂಬ ವಿಶಾಲ ಭಾವನೆ ನೆಲಸಲು ಅವಕಾಶವಾಗುತ್ತದೆ.

**೧೩. ಇತರ ಶಿಕ್ಷಣ ಸಾಧನಗಳು:** ಮೇಲಿನ ವಿವಿಧ ಶಿಕ್ಷಣ ಸಾಧನಗಳ ಜೊತೆಗೆ ಆಧುನಿಕ ಜೀವನದ ಪ್ರಗತಿಗೆ ಶಿಕ್ಷಣವಿತ್ತು, ನೆರವಾಗ ತಕ್ಕ ಬಗೆ ಬಗೆಯ ಸಂಘಸಂಸ್ಥೆಗಳೂ ಸನ್ನಿವೇಶಗಳೂ ಬಳಕೆಗೆ ಬಂದಿವೆ, ಬರುತ್ತಿವೆ. ಬಾಲಚಮೂ, ಗರ್ಲ್ ಗೈಡ್, ರೆಡ್ ಕ್ರಾಸ್ ಮುಂತಾದ ಅಂತರ ರಾಷ್ಟ್ರೀಯ ಸಂಸ್ಥೆಗಳು ಜನತೆಯ ಮಾನಸಿಕ ಮತ್ತು ದೈಹಿಕ ಬೆಳವಣಿಗೆಗೆ ನೆರವಾಗುತ್ತಿವೆ; ಕೈಗಾರಿಕೆ, ಕಲೆ, ಉದ್ಯೋಗಗಳನ್ನೂ ಕಲಿಸುತ್ತಿವೆ. ಸಮಾಜ ಜೀವನಕ್ಕೆ ಅನುಕೂಲಿಸುವ ಸದ್ಭಾವನೆಗಳನ್ನೂ ವರ್ತನೆಗಳನ್ನೂ ಮಕ್ಕಳಲ್ಲಿ ರೂಪಿಸಲು ಯತ್ನಿಸುತ್ತಿವೆ. ಹಾಗೆಯೇ ಹಳ್ಳಿಯ ಯಕ್ಷಗಾನ ಗಳೂ, ಭಜನೆ, ಹರಿಕಥೆ, ಶಿವಕಥೆಗಳೂ ಜನತೆಯ ಮಾನಸ ಸಂಸ್ಕಾರ ಣಕ್ಕೂ ನೈತಿಕ ಬೆಳವಣಿಗೆಗೂ ಪರಿಣಾಮಕಾರಿಯಾಗಿ ಕೆಲಸಮಾಡುತ್ತಿವೆ.

ವ್ಯಾಪಾರಗಾರರು ತಮ್ಮ ವಸ್ತುಗಳನ್ನು ಪ್ರದರ್ಶಿಸಿ, ಅವುಗಳನ್ನು ಕುರಿತ ಲೇಖನ್ನಗಳನ್ನೂ ಚಿತ್ರಗಳನ್ನೂ ಆಕರ್ಷಣೀಯವಾಗಿ ಪ್ರಕಟಿಸಿ, ತಮ್ಮ ಹಿತದೃಷ್ಟಿಯಿಂದಲಾದರೂ ಜನತೆಗೆ ಶಿಕ್ಷಣವೀಯುತ್ತಿದ್ದಾರೆ. ಹಲವು

ಜಾಹೀರಾತು ಪ್ರಕಟನೆಗಳು ನಮ್ಮ ಮನಸ್ಸಿನಲ್ಲಿ ಎಷ್ಟೊಂದು ವಿಚಾರ ಪ್ರವಾಹವನ್ನು ಹುಟ್ಟಿಸುವುವೆಂಬುದು ಅನೇಕರಿಗೆ ಅನುಭವವಿರುವ ವಿಷಯ.

ವ್ಯಕ್ತಿಯ ಶಿಕ್ಷಣ ಸಮಾಜದ ಪುರೋಭಿವೃದ್ಧಿಗೆ ಮೂಲ ಕಾರಣ ಒಂದು ಸಮಾಜದ ಸಂಸ್ಕೃತಿಸಂಪ್ರದಾಯಗಳೂ ಇತರ ವೈಶಿಷ್ಟ್ಯಗಳೂ ಅನೂಚಾನವಾಗಿ ನಡೆದುಕೊಂಡು ಬರುವುದಕ್ಕೂ ಆ ಸಮಾಜ ನಿರಂತರವೂ ಪ್ರಗತಿಪಥದಲ್ಲಿ .ಮುಂದುವರಿಯುವುದಕ್ಕೂ ವ್ಯಕ್ತಿಗಳ ಸರ್ವತೋಮುಖ ವಾದ ಶಿಕ್ಷಣ ಬಹುವಾಗಿ ನೆರವಾಗುತ್ತದೆ. ಹಾಗೆಯೇ, ಸಮಾಜ ತನ್ನ ಎಲ್ಲ ವ್ಯಕ್ತಿಗಳ ಮೇಲೂ ಕೈವಾಡವನ್ನು ಇಟ್ಟುಕೊಂಡು, ಒಬ್ಬರೊಡನೊಬ್ಬರು ಸಹಕರಿಸಿ ನಡೆದುಕೊಳ್ಳುವಂತೆ ಮಾಡಲೂ ಶಿಕ್ಷಣ ಆವಶ್ಯಕ. ಆದ್ದರಿಂದ ಸಮಾಜ ತನ್ನ ಹಿತದೃಷ್ಟಿಯಿಂದಲೇ ಶಾಲೆಗಳ ಜೊತೆಗೆ, ಮೇಲಿನ ವಿವಿಧ ಶಿಕ್ಷಣ ಸಾಧನಗಳನ್ನೂ ಜನತೆಗೆ ಒದಗಿಸುವುದು ಅನಿವಾರ್ಯ. ಸಮಾಜದ ಎಲ್ಲ ಸಂಘಸಂಸ್ಥೆಗಳೂ ತಮ್ಮ ಶಕ್ತಿಸಾಮರ್ಥ್ಯಗಳನ್ನೆಲ್ಲ ವಿನಿಯೋಗಿಸಿ, ಜನತೆಗೆ ಶಿಕ್ಷಣವಿತ್ತು, ಜೀವನದ ಮಟ್ಟವನ್ನು ಉತ್ತಮಪಡಿಸಬೇಕು. ನಾವು ವಾಸಿಸತಕ್ಕ, ವಿಹರಿಸತಕ್ಕ, ಶ್ರಮಿಸತಕ್ಕ ಎಲ್ಲ ಸನ್ನಿವೇಶಗಳೂ ಶಿಕ್ಷಣ ವಾತಾ ವರಣದಿಂದ ವಿರಾಜಿಸಬೇಕೆಂಬುದೇ ಸಮಾಜದ ಹೆಗ್ಗುರಿಯಾಗಿರಬೇಕು.

# ೫. ಶಿಕ್ಷಣ ಸಾಧನೆಯ ಮೂಲವಸ್ತುಗಳು

ಮಕ್ಕಳ ಮಾನಸಿಕ ವ್ಯಾಪಾರವನ್ನು ಸಮಾಜ ಸನ್ನಿವೇಶಗಳೊಡನೆ ಹೊಂದಿಕೊಳ್ಳುವಂತೆ ರೂಪುಗೊಳಿಸುವುದು ಶಿಕ್ಷಣದ ಪ್ರಧಾನ ಕಾರ್ಯ. ಆದ್ದರಿಂದ ಎಲ್ಲ ಶಿಕ್ಷಕರಿಗೂ ಮಕ್ಕಳ ಮನಸ್ಸಿನ ಮೂಲಸ್ವರೂಪದ ಪರಿಚಯ ಅತ್ಯಾವಶ್ಯಕ. ಆ ಮೂಲಸ್ವರೂಪವನ್ನು ತಿದ್ದಿ, ಮಾರ್ಪಡಿಸಿ, ಉಚಿತವೆನಿಸುವ ರೀತಿಯಲ್ಲಿ ಬೆಳಸಬೇಕು. ಎಂದಮೇಲೆ, ಶಿಕ್ಷಣ ಸಾಧನೆಗೆ ಮಕ್ಕಳ ಮನೋಗುಣಗಳೇ ಮೂಲವಸ್ತು.

**ಮಕ್ಕಳ ಮೂಲ ಸ್ವಭಾವ:** ತಂದೆತಾಯಿಗಳ ದೈಹಿಕ ಮತ್ತು ಮಾನಸಿಕ ಗುಣವಿಶೇಷಗಳು ಮಕ್ಕಳಿಗೂ ವಂಶಗತವಾಗಿ ಬರುತ್ತವೆ. ಅವನ್ನು ಅನುವಂಶೀಯ ಗುಣಗಳೆಂದು ಕರೆಯಬಹುದು. ಮಕ್ಕಳ ಮನಸ್ಸಿನ ಹುಟ್ಟುಗುಣಗಳು ಹಲವು ದೃಷ್ಟಿಗಳಲ್ಲಿ ಪ್ರಾಣಿಗಳಲ್ಲಿರುವಂತೆಯೇ ಇರುತ್ತವೆ. ಅವು ಸಂಸ್ಕರಣಗೊಳ್ಳುವುದು ಶಿಕ್ಷಣದಿಂದ; ಶಿಕ್ಷಕರು ತಮ್ಮ ಕಾರ್ಯವನ್ನು ಈ ಅಸಂಸ್ಕೃತ ಮೂಲವಸ್ತುಗಳಿಂದಲೇ ಆರಂಭಿಸಬೇಕು. ಶಿಕ್ಷಣ ಕಾರ್ಯಸಾಧನೆಗೆ ಈ ಮನೋಗುಣಗಳು ಅಷ್ಟು ಮುಖ್ಯವೆಂದಮೇಲೆ ಶಿಕ್ಷಕರಿಗೆ ಅವುಗಳ ಪರಿಚಯ ಅನಿವಾರ್ಯವೇ ಆಗುತ್ತದೆ.

ಮಕ್ಕಳ ಮನಸ್ಸಿನ ಮೂಲ ಸ್ವಭಾವಗಳನ್ನು ನಾಲ್ಕು ರೀತಿಯಾಗಿ ವಿಂಗಡಿಸಬಹುದು: ೧. ಪರಾವರ್ತಿತ ಪ್ರತಿಕ್ರಿಯೆಗಳು ೨. ಹುಟ್ಟುಗುಣಗಳು ೩. ಸಂವೇದನೆಗಳು ಮತ್ತು ೪. ಶಕ್ತಿಸಾಮರ್ಥ್ಯಗಳು (ಬುದ್ಧಿಶಕ್ತಿ).

**೧. ಪರಾವರ್ತಿತ ಪ್ರತಿಕ್ರಿಯೆಗಳು:** ಹುಟ್ಟಿದಂದಿನಿಂದ ಸಾಯುವವರೆಗೂ ಇವು ಒಂದೇ ರೀತಿಯಲ್ಲಿರುತ್ತವೆ. ಬಿರುಸಿನಿಂದ ಕಣ್ಣಿನ ಕಡೆ ಕೈ ಬೀಸಿದಾಗ ತಕ್ಷಣ ರೆಪ್ಪೆಗಳು ಮುಚ್ಚಿಕೊಳ್ಳುತ್ತವೆ. ಮತ್ತೊಬ್ಬರು ಆಕಳಿಸುವುದನ್ನು ಕಂಡಾಗ ನಾವೂ ಆಕಳಿಸಿಬಿಡುತ್ತೇವೆ. ಹೀಗೆ ಇವು ನಮ್ಮ ಇಷ್ಟದಂತೆ ನಡೆಯುತಕ್ಕವಲ್ಲ. ಹೃದಯದ ಬಡಿತ, ಶ್ವಾಸಕೋಶಗಳ ಸಂಕೋಚ ವಿಕಾಸ, ಆಹಾರ ಜೀರ್ಣಕಾರ್ಯ, ಮುಂತಾದ ಕ್ರಿಯೆಗಳೂ ಹೀಗೆಯೇ. ದೊಡ್ಡವರಲ್ಲಾಗಲಿ, ಚಿಕ್ಕವರಲ್ಲಾಗಲಿ, ಅವುಗಳ ಪ್ರತಿಕ್ರಿಯೆಯಲ್ಲಿ ಯಾವ

ಮಾರ್ಪಾಡೂ ಕಂಡುಬರುವುದಿಲ್ಲ. ಎಂದರೆ, ಪರಾವರ್ತಿತ ಪ್ರತಿಕ್ರಿಯೆಗಳು ಸ್ವತಂತ್ರವಾಗಿ ನಡೆಯತಕ್ಕವು. ಅವು ಶಿಕ್ಷಣದಿಂದ ಮಾರ್ಪಡುವುದು ಕಡಮೆ. ಆದ್ದರಿಂದ ಶಿಕ್ಷಕರಿಗೆ ಅವುಗಳ ಪರಿಚಯ ಅನಿವಾರ್ಯವಲ್ಲ.

೨. **ಹುಟ್ಟುಗುಣಗಳು:** ಇವು ದೇಹದ ಎಲ್ಲ ಭಾಗಗಳಿಗೂ ಅನ್ವಯಿಸತಕ್ಕವು; ಮಕ್ಕಳ ವ್ಯಕ್ತಿತ್ವವನ್ನೂ ನಡೆನುಡಿಗಳನ್ನೂ ನಿರ್ಮಿಸತಕ್ಕವು. ಶಿಕ್ಷಣದಿಂದ ಇವು ಮಾರ್ಪಡಬಲ್ಲವಾದ್ದರಿಂದ ಇವುಗಳ ಪ್ರಯೋಜನ ಶಿಕ್ಷಕರಿಗೆ ಅಮೂಲ್ಯವಾದ್ದು. ಅಂಥ ಹುಟ್ಟುಗುಣಗಳನ್ನು ತಿದ್ದಿ, ಮಾರ್ಪಡಿಸಿ, ವ್ಯಕ್ತಿಯ ಸದ್ವರ್ತನೆಯನ್ನು ರೂಪಿಸಬೇಕಾಗಿರುವುದರಿಂದ ಅವುಗಳ ಪರಿಚಯ ಶಿಕ್ಷಕರಿಗೆ ಅಗತ್ಯವಾಗಿರಬೇಕು.

೩. **ಸಂವೇದನಾ ಕ್ರಿಯೆ:** ಸಂವೇದನಾ ಕ್ರಿಯೆಗಳು ದೇಹದ ಅಂಗಗಳ, ಮುಖ್ಯವಾಗಿ ರಸಗ್ರಂಥಿಗಳ ಮೇಲೆ ಪರಿಣಾಮ ಹುಟ್ಟಿಸತಕ್ಕವು. ಯಾವುದಾದರೂ ವಿರೂಪವಾದ ಆಕೃತಿಯನ್ನು ಕಂಡಾಗ ನಮಗೆ ಭಯವಾಗುತ್ತದೆ; ಯಾರಾದರೂ ಬೈದಾಗ, ಅಥವಾ ನಮ್ಮ ಕೆಲಸವನ್ನು ತಡೆದಾಗ, ಕೋಪವುಂಟಾಗುತ್ತದೆ; ನಮ್ಮ ಹಿತರನ್ನು ಕಂಡಾಗ ಪ್ರೀತಿಯುಂಟಾಗುತ್ತದೆ; ಈ ಮನೋರಸಗಳೇ ಸಂವೇದನೆಗಳು. ಮಕ್ಕಳಲ್ಲಿ ಈ ಸಂವೇದನೆಗಳು ಮೂಲರೂಪದಲ್ಲೇ ಇರುತ್ತವೆ. ಅವು ಶಿಕ್ಷಣದಿಂದ ವ್ಯಕ್ತಿಯ ಮತ್ತು ಸಮಾಜದ ಜೀವನಕ್ಕೆ ಸಹಾಯಕವಾಗುವಂತೆ ಮಾರ್ಪಟ್ಟು, ರೂಪುಗೊಳ್ಳಬೇಕು. ಅವು ಉಚಿತವೂ ಸಮನ್ವಯವೂ ಆದ ರೀತಿಯಲ್ಲಿ ಬೆಳೆಯುವುದಾದರೆ ಜೀವನದಲ್ಲೊದಗಬಹುದಾದ ಉದ್ರೇಕ ಸಮಯದಲ್ಲೂ ಕಠಿನ ಸಂದರ್ಭಗಳಲ್ಲೂ ಸ್ಥಿರಚಿತ್ತದಿಂದಿರಬಹುದು. ಅವು ಕ್ರಮವಾದ ರೀತಿಯಲ್ಲಿ ಮಾರ್ಪಡದಿದ್ದರೂ, ಅಪೂರ್ಣವಾಗಿ ಮಾರ್ಪಟ್ಟರೂ, ಮಕ್ಕಳ ಮುಂದಿನ ಜೀವನದಲ್ಲಿ ಚಿತ್ತಸ್ಥೈರ್ಯವಿಲ್ಲದೆ, ಸದ್ವರ್ತನೆಗಳು ಬೆಳೆಯಲಾರವು. ಆದ್ದರಿಂದ ಎಲ್ಲ ಶಿಕ್ಷಕರಿಗೂ ಮಕ್ಕಳ ಮೂಲ ಸಂವೇದನೆಗಳ ಪರಿಚಯವೂ ಆವಶ್ಯಕ.

೪. **ಬುದ್ಧಿಶಕ್ತಿ:** ಇದು ಮನಸ್ಸಿಗೆ ಮಾತ್ರ ಸಂಬಂಧಿಸಿದ್ದು. ಬುದ್ಧಿಶಕ್ತಿ ಅಥವಾ ಕಲಿಯುವ ಶಕ್ತಿ ಒಬ್ಬೊಬ್ಬರಿಗೂ ಭಿನ್ನವಾಗಿರುತ್ತದೆ. ಒಬ್ಬನಿಗೆ ಯಾವುದಾದರೂ ಒಂದು ವಿದ್ಯೆಯಲ್ಲಿರುವ ಆಸಕ್ತಿ ಇನ್ನೊಬ್ಬನಿಗೆ ಇಲ್ಲದಿರಬಹುದು; ಅಭಿರುಚಿಯಲ್ಲೂ ಇದೇ ರೀತಿಯ ಭಿನ್ನತೆ ಕಂಡುಬರುತ್ತದೆ.

ಒಂದೇ ರೀತಿಯ ಆಸಕ್ತಿ ಅಭಿರುಚಿಗಳಿರುವವರಲ್ಲೂ ಅವುಗಳ ಪರಿಮಾಣದಲ್ಲಿ ಹೆಚ್ಚುಕಡಮೆಯಿರಬಹುದು; ಒಬ್ಬನಿಗೆ ಸಂಗೀತದಲ್ಲಿ ಆಸಕ್ತಿಯಿದ್ದರೆ ಚಿತ್ರ ಕಲೆಯಲ್ಲಿ ಇನ್ನೊಬ್ಬನಿಗೆ; ಸಾಹಿತ್ಯದಲ್ಲಿ ಅಭಿರುಚಿ ಕೆಲವರಿಗಿದ್ದರೆ ಶಿಲ್ಪಕಲೆ ಯಲ್ಲಿ ಮತ್ತೆ ಕೆಲವರಿಗಿರಬಹುದು. ಇದೇ ರೀತಿಯ ಭಿನ್ನತೆ ಅವರ ಮಾನ ಸಿಕ ಶಕ್ತಿ ಸಾಮರ್ಥ್ಯಗಳಲ್ಲೂ ಕಂಡುಬರುತ್ತದೆ. ಒಬ್ಬನಿಗೆ ಜಕಣಾಚಾರಿ ಯಂಥ ಶಿಲ್ಪಿಯಾಗುವ ಶಕ್ತಿಯಿದ್ದರೆ ಇನ್ನೊಬ್ಬನಿಗೆ ಸಾಮಾನ್ಯ ಕಲ್ಲು ಕುಟಿಗನಾಗುವ ಶಕ್ತಿ ಮಾತ್ರವಿರಬಹುದು; ರವಿವರ್ಮನಂಥ ಕಲಾವಿದ ನಾಗುವ ಶಕ್ತಿ ಒಬ್ಬನಿಗಿದ್ದರೆ ಜಾಹೀರಾತು ಪ್ರಕಟನೆಯ ಚಿತ್ರವನ್ನು ಬರೆಯ ಬಹುದಾದ ಶಕ್ತಿ ಮಾತ್ರ ಇನ್ನೊಬ್ಬನಿಗಿರಬಹುದು. ಮನಸ್ಸಿನ ಈ ಶಕ್ತಿ ಸಾಮರ್ಥ್ಯಗಳೂ ಭಿನ್ನತೆಗಳೂ ತಂದೆತಾಯಿಗಳಿಂದ ವಂಶಗತವಾಗಿ ಬರು ತ್ತವೆ. ಅವು ಜೀವನದಲ್ಲಿ ಸನ್ನಿವೇಶಗಳ (ಶಿಕ್ಷಣದ) ಕೈವಾಡದಿಂದ ಬೆಳೆದು ಪರಿಪೂರ್ಣಾವಸ್ಥೆಗೆ ಬರಬೇಕು. ಮಕ್ಕಳ ಎಲ್ಲ ಸ್ವಭಾವಗಳಿಗಿಂತಲೂ ಬುದ್ಧಿಶಕ್ತಿ ಅತ್ಯಂತ ಹೆಚ್ಚಾಗಿ ಮಾರ್ಪಟ್ಟು ಬೆಳೆಯುವ ರೀತಿಯಲ್ಲಿದೆ. ಆದ್ದರಿಂದ ಅದರ ಪರಿಚಯ ಶಿಕ್ಷಕರಿಗೆ ಅತ್ಯಂತ ಆವಶ್ಯಕ.

ಹೀಗೆ ವಂಶಗತವಾಗಿ ಬರುವ ಮಕ್ಕಳ ಮೂಲಸ್ವಭಾವ ಪ್ರಚೋದಿತ ವಾದಾಗ ಒಂದು ಪ್ರತಿಕ್ರಿಯೆಯುಂಟಾಗುತ್ತದೆ. ಈ ಕ್ರಿಯಾ ಪ್ರತಿಕ್ರಿಯೆ ಗಳ ಸಂಬಂಧ ಸನ್ಮಾರ್ಗದಲ್ಲಿ ಬೆಳೆದು, ವ್ಯಕ್ತಿಯ ಮತ್ತು ಸಮಾಜದ ಪುರೋ ಭಿವೃದ್ಧಿಗೆ ನೆರವಾಗುವಂತೆ ಮಾಡುವುದೇ ಶಿಕ್ಷಣದ ಗುರಿ. ಇದನ್ನು ವಿಶದೀ ಕರಿಸಲು ಒಂದು ಉದಾಹರಣೆ ಕೊಡಬಹುದು: ಮಕ್ಕಳಿಗೆ ಪದಾರ್ಥಸಂಗ್ರಹ ಮಾಡುವುದು ವಂಶಗತವಾಗಿ ಬಂದಿರುವ ಒಂದು ಹುಟ್ಟುಗುಣ; ಮೊದ ಮೊದಲು ಅವರು ಕಂಡ ಪದಾರ್ಥಗಳನ್ನು ಆಯ್ದು ತುಂಬಿಕೊಳ್ಳುವರು. ಯಾವುದಾದರೂ ವಿಚಿತ್ರ ವಸ್ತು ಸಿಕ್ಕಿತೆಂದರೆ ತಂದು ಬಚ್ಚಿಟ್ಟುಕೊಳ್ಳುವರು. ಏತಕ್ಕೂ ಬಾರದ ಚಿಪ್ಪುಗಳನ್ನೊ, ಚೂರುಗಳನ್ನೊ, ಮಕ್ಕಳು ದೊಡ್ಡ ನಿಧಿಯಂತೆ ಕೂಡಿಟ್ಟುಕೊಂಡಿರುವುದನ್ನು ನಮ್ಮಲ್ಲನೇಕರು ನೋಡಿರುತ್ತೇವೆ. ಅದಕ್ಕೆ ಕಾರಣ, ಅವರಿಗೆ ವಂಶಗತವಾಗಿ ಬಂದಿರುವ ಪದಾರ್ಥಸಂಗ್ರಹ ಗುಣ. ಈ ಗುಣ ಮಕ್ಕಳಲ್ಲಿ ಬಹು ತೀಕ್ಷ್ಣವಾಗಿರುತ್ತದೆ. ಅದನ್ನು ಕ್ರಮ ವಾದ ರೀತಿಯಲ್ಲಿ ಉಪಯೋಗಿಸಿಕೊಳ್ಳದಿದ್ದರೆ ಮಕ್ಕಳು ಜಿಪುಣರಾಗ

ಬಹುದು; ದುರಾಸೆಗೂ ತುತ್ತಾಗಬಹುದು. ಆ ಗುಣಗಳು ವ್ಯಕ್ತಿಗೂ ಉಪಯೋಗವಲ್ಲ; ಸಮಾಜಕ್ಕೂ ಹಿತವಲ್ಲ; ಸರಿಯಾದ ಮಾರ್ಗದಲ್ಲಿ ಅದನ್ನು ಮಾರ್ಪಡಿಸಬೇಕು: ತರಗತಿಯಲ್ಲಿ ಬೋಧಿಸಿದ ಯಾವುದಾದರೂ ಒಂದು ಪಾಠಕ್ಕೆ ಸಂಬಂಧಿಸಿದ ಹೆಚ್ಚು ವಿಷಯಗಳನ್ನು ಪುಸ್ತಕಭಂಡಾರದ ಪುಸ್ತಕಗಳನ್ನು ಹುಡುಕಿ, ಸಂಗ್ರಹಿಸುವಂತೆ ಮಕ್ಕಳಿಗೆ ಪ್ರೋತ್ಸಾಹಿಸಿದರೆ ಆ ಗುಣ ಉಪಯುಕ್ತವಾದ ಮಾರ್ಗದಲ್ಲಿ ರೂಪುಗೊಂಡಂತಾಗುತ್ತದೆ. ಹಾಗೆಯೇ ಇನ್ನೊಂದು ಉದಾಹರಣೆ ಕೊಡಬಹುದು: ತರಗತಿಯಲ್ಲಿ ಉಪಾಧ್ಯಾಯರು 'ಎರಡೆರಡಲು ಎಷ್ಟು?' ಎಂದು ಪ್ರಶ್ನಿಸುತ್ತಾರೆ. ಅದು ಸನ್ನಿವೇಶ. ಹುಡುಗನು ಅದಕ್ಕೆ ಉತ್ತರ ಕೊಡಬೇಕು. ಅದೇ ಪ್ರತಿಕ್ರಿಯೆ. ಒಬ್ಬನು ಮೂರು, ಇನ್ನೊಬ್ಬನು ಐದು ಎಂದು ಉತ್ತರ ಹೇಳಬಹುದು. ಆಗ ಏರ್ಪಟ್ಟಿರುವ ಕ್ರಿಯಾ–ಪ್ರತಿಕ್ರಿಯಾ ಸಂಬಂಧ ಸರಿಯಾಗಿಲ್ಲ. ನಾಲ್ಕು ಎಂದು ಹೇಳುವುದು ಸರಿಯಾದ ಸಂಬಂಧ. ಹೀಗೆ ಮಕ್ಕಳ ಮನೋವ್ಯಾಪಾರದ ಕ್ರಿಯಾ–ಪ್ರತಿಕ್ರಿಯೆಗಳ ಸರಿಯಾದ ರೀತಿಯ ಸಂಬಂಧ ಏರ್ಪಡಿಸುವುದು ಶಿಕ್ಷಣ. ಶಿಕ್ಷಣವಿಲ್ಲದಿದ್ದಾಗಲೂ ಮಕ್ಕಳ ಮನೋಗುಣಗಳು ಸನ್ನಿವೇಶ ಒದಗಿದಾಗ ಪ್ರತಿಕ್ರಿಯೆಯನ್ನು ನಡಸುತ್ತವೆ; ಒಂದು ರೀತಿಯಲ್ಲಿ ವರ್ತಿಸುತ್ತವೆ. ಆದರೆ ಅದು ಸರಿಯಾದ್ದಲ್ಲದಿರಬಹುದು. ಹಾಗೆ ವರ್ತಿಸುವ ರೀತಿ ಉಚಿತವಾಗಿರಬೇಕು. ಕ್ರಿಯಾ–ಪ್ರತಿಕ್ರಿಯೆಗಳ ಮೂಲಕ ಮಕ್ಕಳ ಮೂಲ ಸ್ವಭಾವ ಪಳಗಿದಂತೆಲ್ಲ ಅವರಿಗೆ ಉಚಿತ ರೀತಿಯಲ್ಲಿ ವರ್ತಿಸುವ ಅಭ್ಯಾಸವಾಗುತ್ತದೆ. ಆಗ ಅವರ ಮನಸ್ಸು ಸಂಸ್ಕರಣಗೊಳ್ಳುತ್ತದೆ. ಇದನ್ನೇ ಶಿಕ್ಷಣವೆನ್ನುವುದು.

ವಂಶಪಾರಂಪರ್ಯವಾಗಿ ಬರುವ ಹುಟ್ಟುಗುಣಗಳನ್ನು ಮನಶ್ಶಾಸ್ತ್ರಜ್ಞರು ಬಗೆಬಗೆಯಾಗಿ ವಿಂಗಡಿಸಿರುತ್ತಾರೆ. ಅವುಗಳಲ್ಲಿ ಮ್ಯಾಗ್ಡೂಗಲ್‌ರವರು ಮಾಡಿರುವ ವಿಂಗಡನೆ ಸರಳವಾಗಿಯೂ ಹೆಚ್ಚು ಸಮ್ಮತವಾಗಿಯೂ ಇರುವುದರಿಂದ ಅದನ್ನೇ ಇಲ್ಲಿ ಮೊದಲು ಕೊಡಲಾಗಿದೆ. ಅವರ ಅಭಿಪ್ರಾಯದ ಪ್ರಕಾರ ಹುಟ್ಟುಗುಣಗಳು ಹನ್ನೆರಡು: ಛಲ, ಓಡಿಹೋಗುವುದು, ಕುತೂಹಲ, ಪ್ರತಿಭಟನೆ, ಪರಾಜಯ, ಸ್ವಪ್ರತಿಷ್ಠೆ, ಜನ್ಮದಾತೃತ್ವ, ಸಂತಾನಾಭಿವೃದ್ಧಿ, ಪದಾರ್ಥಸಂಗ್ರಹ, ರಚನೆ, ಸಾಂಘಿಕ ಜೀವನ, ಆಹಾರವೂಡಿಸು

ವುವು. ಥಾರ್ನ್‌ಡೈಕರವರು ಇಂದ್ರಿಯ ಸೂಕ್ಷ್ಮತೆ, ಅವಧಾನ, ಆತ್ಮ ಸಂಯಮ, ಆಹಾರ ಸೇವನೆ, ಗೃಹರಕ್ಷಣಾಪೇಕ್ಷೆ, ಭಯ, ಹೋರಾಟ, ಸಾಮಾಜಿಕ ಗುಣ, ಸಂಘಜೀವನಾಪೇಕ್ಷೆ, ರಚನೆ, ನೆನಪು ಮತ್ತು ಸಂವೇದನೆ ಎಂಬುದಾಗಿ ವಿಂಗಡಿಸಿರುವರು. ಅವರು ಸಂವೇದನೆಯನ್ನೂ ಒಂದು ಹುಟ್ಟು ಗುಣವೆಂದೇ ಭಾವಿಸಿದ್ದಾರೆ; ಮ್ಯಾಗ್ಡೂಗಲ್‌ರವರು ಹೇಳದಿರುವ ಹಲವು ಹುಟ್ಟುಗುಣಗಳೂ ಸೇರಿಕೊಂಡಿವೆ. ವುಡ್‌ವಾರ್ತ್ ಎಂಬವರು ಮತ್ತೊಂದು ರೀತಿಯಲ್ಲಿ ವಿಂಗಡಿಸಿರುವರು: ಹುಟ್ಟುಗುಣಗಳನ್ನು ದೈಹಿಕ ಮತ್ತು ಸಾಂಘಿಕ ಎಂಬ ಎರಡು ಗುಂಪುಗಳಾಗಿ ವಿಂಗಡಿಸಿ, ಹಸಿವು, ಬಾಯಾರಿಕೆ, ಉಸಿರಾಡುವುದು—ಇವು ದೈಹಿಕವಾದವೆಂದೂ, ಸಂಘಾಭಿಲಾಷೆ, ದಾಂಪತ್ಯ ಜೀವನಾಭಿಲಾಷೆ, ಜನ್ಮದಾತೃತ್ವ—ಮುಂತಾದವು ಸಾಂಘಿಕ ಗುಣಗಳೆಂದೂ ಪರಿಗಣಿಸಿರುವರು. ಇವರು ಉಸಿರಾಡುವ ಪ್ರತಿಕ್ರಿಯೆಯನ್ನು ಹುಟ್ಟುಗುಣ ವೆಂದು ಗಣಿಸಿಕೊಂಡಿದ್ದಾರೆ. ಹುಟ್ಟುಗುಣಗಳನ್ನು ಇನ್ನು ಕೆಲವು ಮನ ಶ್ಶಾಸ್ತ್ರಜ್ಞರು ದೈಹಿಕ, ಸನ್ನಿವೇಶಗಳಿಗೆ ಪ್ರತಿಕ್ರಿಯಾತ್ಮಕ ಮತ್ತು ಸಾಂಘಿಕ ಎಂಬ ಮೂರು ಪಂಗಡಗಳಾಗಿ ವಿಂಗಡಿಸುವರು. ಆಹಾರ ಸೇವನೆ, ನಿದ್ರೆ ಮತ್ತು ಉಸಿರಾಡುವುದು—ಇವು ದೈಹಿಕ ಪಂಗಡಕ್ಕೆ ಸೇರಿದವು. ಸಂಘಾ ಭಿಲಾಷೆ, ಸ್ವಪ್ರತಿಷ್ಠೆ, ಮರುಕ ಮತ್ತು ದಾಂಪತ್ಯ ಜೀವನಾಭಿಲಾಷೆ—ಇವು ಸಾಂಘಿಕವಾದವು. ರಚನೆ, ಪ್ರತಿಭಟನೆ, ಹೋರಾಟ, ಪರಾಜಯ, ಸಂಗ್ರಹಾ ಸಕ್ತಿ—ಇವು ಸನ್ನಿವೇಶಗಳಿಗೆ ಪ್ರತಿಕ್ರಿಯಾತ್ಮಕವಾದವು.

ಹೀಗೆ ಬೇರೆ ಬೇರೆ ಮನಶ್ಶಾಸ್ತ್ರಜ್ಞರು ಬೇರೆ ಬೇರೆ ರೀತಿಯಲ್ಲಿ ಹುಟ್ಟು ಗುಣಗಳನ್ನು ವಿಂಗಡಿಸಿರುವರು: ಕೆಲವರು ಕೆಲವನ್ನು ಬಿಟ್ಟಿದ್ದರೆ, ಇನ್ನು ಕೆಲವರು ಕೆಲವನ್ನು ಹೊಸದಾಗಿ ಸೇರಿಸಿರುವರು; ಕೆಲವರು ಹುಟ್ಟುಗುಣ ಗಳೆಂದು ಗಣಿಸಿರುವುದನ್ನು ಇನ್ನು ಕೆಲವರು ಗಣಿಸುವುದಿಲ್ಲ. ಸಂವೇದನೆ ಗಳನ್ನೂ ಹುಟ್ಟುಗುಣಗಳನ್ನೂ ಒಂದಕ್ಕೊಂದಕ್ಕೆ ಸಮಾವೇಶಗೊಳಿಸಿ ಕೊಂಡಿರುವುದೇ ಇದಕ್ಕೆ ಮೂಲಕಾರಣ. ಕೆಲವು ಹುಟ್ಟುಗುಣಗಳ ಪ್ರಕಾಶ ನಕ್ಕೆ ಕೆಲವು ಸಂವೇದನೆಗಳು ಪ್ರಚೋದಕವಾಗಿದ್ದರೂ ಅವನ್ನು ಪ್ರತ್ಯೇಕ ವಾಗಿಯೇ ಪರಿಗಣಿಸುವುದು ಉತ್ತಮ. ಮ್ಯಾಗ್ಡೂಗಲ್‌ರವರ ವಿಂಗಡನೆ ಯಲ್ಲಿ ಈ ಅಂಶ ಸ್ಪಷ್ಟಪಟ್ಟಿದೆ.

ಮೇಲೆ ವಿವರಿಸಿದ ಹುಟ್ಟುಗುಣಗಳು ಎಲ್ಲರಿಗೂ ವಂಶಗತವಾಗಿ ಬರುತ್ತವೆ. ಆದರೆ ಅವುಗಳ ತೀಕ್ಷ್ಣತೆಯಲ್ಲಿ ಹೆಚ್ಚು ಕಡಮೆಯಿರಬಹುದು. ಆದರೂ, ಪ್ರಕೃತಿದತ್ತವಾಗಿ ಬಂದಿರುವ ಆ ಗುಣಗಳನ್ನೇ ವಿದ್ಯಾಭ್ಯಾಸಕ್ಕೆ ಮೂಲವಸ್ತುಗಳನ್ನಾಗಿ ಮಾಡಿಕೊಳ್ಳಬೇಕು. ಆ ಗುಣಗಳು ಪ್ರೇರಕಗಳಿಂದ ಕಾರ್ಯಮುಖವಾಗಿ ಪ್ರಕಾಶಗೊಳ್ಳುತ್ತವೆ. ಇಂಥ ಪ್ರೇರಕಗಳನ್ನೇ ಸನ್ನಿವೇಶಗಳೆಂದು ಕರೆಯುವುದು; ಆಗಲೇ ಮಕ್ಕಳು ಚಟುವಟಿಕೆಯಿಂದಿರುವುದು. ಎಂದಮೇಲೆ, ಹುಟ್ಟುಗುಣಗಳನ್ನು ತಿದ್ದಬೇಕಾದರೆ ಮಕ್ಕಳು ಚಟುವಟಿಕೆಯಾಗಿರಬೇಕು. ಇದಕ್ಕೊಪ್ಪುವ ಸನ್ನಿವೇಶಗಳನ್ನು ರಚಿಸಬೇಕು. ಹಾಗಾದರೆ ಆ ಸನ್ನಿವೇಶಗಳು ಹೇಗಿರಬೇಕು? ಯಾವ ಸನ್ನಿವೇಶಗಳಿಂದ ಮಕ್ಕಳು ಚಟುವಟಿಕೆಯಾಗಿದ್ದು ಅವರ ಹುಟ್ಟುಗುಣಗಳು ವ್ಯಕ್ತಿಯ ಮತ್ತು ಸಮಾಜದ ಹಿತಕ್ಕೆ ಒಪ್ಪುವಂತೆ ಮಾರ್ಪಟ್ಟು ರೂಪುಗೊಳ್ಳುತ್ತವೋ ಅಂಥ ಸನ್ನಿವೇಶಗಳನ್ನು ರಚಿಸಬೇಕು. ಆ ಸನ್ನಿವೇಶಗಳು ಮಕ್ಕಳ ವಯೋಗುಣವನ್ನು ಅವಲಂಬಿಸಿಯೂ ಇರಬೇಕು. ಆದ್ದರಿಂದಲೇ ಶಿಕ್ಷಣವನ್ನು ಬೇರೆ ಬೇರೆ ಅಂತಸ್ತುಗಳಾಗಿ ವಿಂಗಡಿಸಿ, ಆಯಾ ಅಂತಸ್ತಿಗೆ ಅನುಗುಣವಾದ ಶಿಕ್ಷಣಶಾಲೆಗಳನ್ನು ಗೊತ್ತುಮಾಡಿರುವುದು. ಯಾವ ಯಾವ ಅಂತಸ್ತಿನಲ್ಲಿ ಯಾವ ಯಾವ ರೀತಿಯ ಚಟುವಟಿಕೆಗಳಿಂದ ಆ ಮನೋಗುಣಗಳನ್ನು ಸಂಸ್ಕರಿಸಬಹುದೆಂಬುದನ್ನು ಪಿಂಟ್ನರ್ ಎಂಬವರು ಸೂಚಿಸಿರುವ ಪಟ್ಟಿಯಿಂದ ತಿಳಿಯಬಹುದು. (ಪುಟ ೮೭)

**ಸಂವೇದನೆಗಳು** (ರಸಭಾವ): ಕೆಲವು ಮನಶ್ಶಾಸ್ತ್ರಜ್ಞರು ಸಂವೇದನೆಗಳಿಗೂ ಹುಟ್ಟುಗುಣಗಳಿಗೂ ಸಂಬಂಧವನ್ನು ಕಲ್ಪಿಸಿರುವರು. ಎಲ್ಲ ಹುಟ್ಟುಗುಣಗಳ ಪ್ರದರ್ಶನಕ್ಕೂ ಒಂದೊಂದು ಸಂವೇದನೆ ಕಾರಣಭೂತವೆಂದು ವಿವರಿಸಿರುವರು. ಈ ಸಂವೇದನೆಗಳಲ್ಲಿ ಪ್ರಧಾನವಾದವು ಮೂರು: ಕೋಪ, ಭೀತಿ, ಪ್ರೀತಿ.

ದೊಡ್ಡ ಶಬ್ದವಾದಾಗಲೂ, ಒರಗಿಕೊಂಡಿರುವ ಪದಾರ್ಥವನ್ನು ತಕ್ಷಣ ತೆಗೆದುಬಿಡುವುದರಿಂದಲೂ ಮಕ್ಕಳಿಗೆ ಭೀತಿಯುಂಟಾಗುತ್ತದೆ. ವಿಕೃತ ವಸ್ತುಗಳೂ, ಹಾವು ಮುಂತಾದ ಚಲಿಸುವ ಪ್ರಾಣಿಗಳೂ ಮಕ್ಕಳಿಗೆ ಭೀತಿ ಹುಟ್ಟಿಸುವುವು. ಇದು ಬಹು ತೀಕ್ಷ್ಣವಾದ ಮನೋರಸಗಳಲ್ಲೊಂದಾಗಿರು

ವುದರಿಂದ ಮಕ್ಕಳ ಎಳೆಯತನದಲ್ಲಿ ಅನುಚಿತವಾದ ಭೀತಿಯನ್ನು ಹುಟ್ಟಿಸಬಾರದು. ಅದರ ದುಷ್ಪರಿಣಾಮ ಅವರ ಇಡೀ ಜೀವನವನ್ನೇ ಹೇಡಿತನಕ್ಕೂ ಅಕಾರಣ ಭೀತಿಗೂ ತುತ್ತುಮಾಡುವುದು. ಆ ಮನೋರಸದ ಶಕ್ತಿಯನ್ನು ಶಿಕ್ಷಣಕಾರ್ಯಕ್ಕೆ ಉಪಯೋಗಿಸಿಕೊಳ್ಳಬೇಕು. ಆಟಪಾಠಗಳಲ್ಲಿ ಹಿಂದುಳಿದೇನೆಂಬ ಭೀತಿಗೆ ಅದನ್ನು ಮಾರ್ಪಡಿಸುವುದರಿಂದ ವ್ಯಕ್ತಿಯ ಹಿತದೃಷ್ಟಿಯಿಂದ ಅನುಕೂಲವೆನಿಸುತ್ತದೆ. ಹೀಗೆ, ಮೂಲ ಮನೋರಸವನ್ನು ಉತ್ತಮ ಮಾರ್ಗದಲ್ಲಿ ಪ್ರವಹಿಸುವಂತೆ ಮಾಡುವುದರಿಂದ ಅದನ್ನು ಸದ್ವಿನಿಯೋಗಪಡಿಸಿಕೊಂಡಂತಾಗುತ್ತದೆ.

ಕೋಪವೂ ಕೂಡ ಸಂವೇದನೆಗಳಲ್ಲಿ ಬಹು ತೀಕ್ಷ್ಣವಾದುದೇ. ಮಗು ಏನಾದರೂ ಮಾಡುತ್ತಿರುವಾಗ ತಡೆದರೆ ಕೋಪ ಬರುತ್ತದೆ. ಏನು ಮಾಡಬೇಕೆಂಬ ಮಾರ್ಗ ಕಾಣದೆ ಒದೆಯುವುದು, ಕಿರುಚುವುದು, ತಲೆ ಕೈಕಾಲುಗಳನ್ನು ಆಡಿಸುವುದು ಆರಂಭವಾಗುತ್ತವೆ. ಸ್ವಾಭಾವಿಕವಾಗಿ ಬಂದಿರುವ ಈ ಮೂಲ ರಸಪ್ರವೃತ್ತಿಯ ಶಕ್ತಿಯನ್ನು ಸದ್ವಿನಿಯೋಗಪಡಿಸಿಕೊಳ್ಳಬೇಕು; ಅದನ್ನು ತನ್ನ ಆಟಪಾಠಗಳಲ್ಲಿ ಇತರರನ್ನು ಮೀರಿಸಬೇಕೆಂಬ ಸ್ಪರ್ಧೆಗೆ ತಿರುಗಿಸಿದಾಗ ಅವರ ಶಿಕ್ಷಣಾಭಿವೃದ್ಧಿ ಉತ್ತಮಗೊಂಡೀತು. ಅನೇಕ ಉಪಾಧ್ಯಾಯರು ದೇಹದಂಡನೆಯ ಭೀತಿಯನ್ನು ಹುಟ್ಟಿಸಿ ಕಾರ್ಯ ಸಾಧಿಸಲು ಯತ್ನಿಸುವರು. ಇದು ಅಷ್ಟು ಉಚಿತವಲ್ಲ. ತನ್ನ ಜೊತೆಗಾರರಿಂದ ಬೇರ್ಪಡುವ, ಇತರರು ಅವನ ಕೆಲಸದಿಂದ ಜಿಗುಪ್ಸೆಪಟ್ಟುಕೊಂಡಾರೆನಿಸುವ ರೀತಿಯಲ್ಲಿ ಆ ಸಂವೇದನೆಯನ್ನು ಮಾರ್ಪಡಿಸಿದಾಗ ಅದರಿಂದ ವ್ಯಕ್ತಿಯ ನೈತಿಕ ಮತ್ತು ಮಾನಸಿಕ ಬೆಳವಣಿಗೆಗೆ ಅವಕಾಶವಾಗುವುದಲ್ಲದೆ ಸಾಮಾಜಿಕ ಹಿತವೂ ಸಾಧನೆಯಾಗುತ್ತದೆ. ಮಕ್ಕಳು ಕೋಪ ಬಂದಾಗ ವರ್ತಿಸುವಂತೆ ದೊಡ್ಡವರಾದಮೇಲೆಯೂ ವರ್ತಿಸುವುದಾದರೆ ಅದು ಪಾಶವೀ ಗುಣದಂತೆ ಕಾಣುತ್ತವೆ. ನಾಗರಿಕ ಸಮಾಜದಲ್ಲಿ ಎಲ್ಲ ವ್ಯಕ್ತಿಗಳೂ ಸಹಕರಿಸಿ, ಉತ್ತಮವೂ ಉದಾತ್ತವೂ ಆದ ಜೀವನವನ್ನು ನಡಸಬೇಕಾಗಿದೆ. ಮಕ್ಕಳಲ್ಲಿರುವ ಈ ಅಸಂಸ್ಕೃತ ಸಂವೇದನೆ ಶಿಕ್ಷಣದಿಂದ ಸಂಸ್ಕರಣಗೊಳ್ಳಬೇಕು. ಉಚಿತವಾದ ಮಾರ್ಗದಲ್ಲಿ ಆ ರಸಶಕ್ತಿ ಪ್ರವಹಿಸುವಂತಾಗಬೇಕು. ವ್ಯಕ್ತಿ ಶಾಂತಿ ಸಹನೆಗಳಿಂದ ಸಮಾಜದಲ್ಲಿ ಭಾಗಿಯಾಗುವಂತೆ ರೂಪುಗೊಳ್ಳ

## ಮಕ್ಕಳ ಬೇರೆ ಬೇರೆ ವಯಸ್ಸಿನಲ್ಲಿ ಬೇರೆ ಬೇರೆ ಗುಣಗಳನ್ನು ಸಂಸ್ಕರಿಸುವ ಚಟುವಟಿಕೆಯ ಸನ್ನಿವೇಶಗಳನ್ನು ತೋರಿಸುವ ಪಟ್ಟಿ

| ಬೆಳವಣಿಗೆಯ ಅಂತಸ್ತು | ಹಸ್ತಪಾಟವವನ್ನು ಬೆಳಸುವ ಚಟುವಟಿಕೆ | ದೈಹಿಕ ಶಿಕ್ಷಣಕ್ಕೆ ನೆರವಾಗುವ ಚಟುವಟಿಕೆ | ಸಾಮಾಜಿಕ ಜೀವನವನ್ನು ಬೆಳಸುವ ಸಾಂಘಿಕ ಚಟುವಟಿಕೆ | ವಾಕ್‌ಶಕ್ತಿಯನ್ನು ಸ್ಫುಟಗೊಳಿಸುವ ಚಟುವಟಿಕೆ | ಭಯವನ್ನು ಸಂಸ್ಕರಿಸುವ ಚಟುವಟಿಕೆ |
|---|---|---|---|---|---|
| ೧ನೇ ವರ್ಷದೊಳಗೆ | ಆಟದ ಬೊಂಬೆಗಳು | ತೆವಳುವುದು | ತಂದೆ ತಾಯಿಗಳು | ಕೂಗುವುದು | ತಾಯಿಯ ಅಸಂತೋಷ |
| ೨ನೇ ವರ್ಷದೊಳಗೆ | ಉಪಯುಕ್ತವಾದ ಆಟದ ಸಾಮಾನು | ಕೈಗಾಡಿ ತಳ್ಳುವುದು | ಮನೆಯ ಇತರರು | ಇತರ ಮಕ್ಕಳೊಡನೆ ಮಾತಾಡುವುದು | ಇತರರ ಅಸಂತೋಷ |
| ಶಿಶುವಿಹಾರದಲ್ಲಿ | ಶಿಕ್ಷಣದ ಆಟದ ಸಾಮಾನು | ಓಡುವುದು ಕುಣಿಯುವುದು | ತರಗತಿಯ ಮಕ್ಕಳು | ಕತೆ ಹೇಳುವುದು, ಹಾಡು ಹೇಳುವುದು | ಉಪಾಧ್ಯಾಯರ ಶಿಕ್ಷೆ |
| ಪ್ರಾಥಮಿಕ ಶಾಲೆಯಲ್ಲಿ | ಅಂಗಡಿ, ಹೊಲಿಗೆ, ಮಣ್ಣಿನ ಕೆಲಸ, ಕಾಗದದ ಕೆಲಸ | ಗುಡುಗಾಟ, ಚೆಂಡಾಟ, ಅವಿತಾಟ, ಇತ್ಯಾದಿ | ಜವಾಸ, ಜೊತೆಗಾರರು | ಕತೆ, ನಾಟಕ, ಹಾಡು | ಜೊತೆಗಾರರ, ಜನರ ಅತೃಪ್ತಿ |
| ಸೆಕೆಂಡರೀ ಶಾಲೆಗಳಲ್ಲಿ | ಪ್ರಯೋಗಶಾಲೆಯ ಕೆಲಸ | ಅಂಗಸಾಧನೆ, ನೃತ್ಯ | ಆಟದ ಕೂಟ, ಸಂಘ, ಸಂಸ್ಥೆ | ನಾಟಕ, ಚರ್ಚೆ | ಸಮಾಜದ ಅತೃಪ್ತಿ |
| ಕಾಲೇಜುಗಳಲ್ಲಿ | ಪ್ರಯೋಗಶಾಲೆಯ ಶಿಕ್ಷಣ | ವ್ಯಾಯಾಮ, ಸೈನಿಕ ಚಟುವಟಿಕೆ | ಎಲ್ಲ ವಿಧವಾದ ಸಾಂಘಿಕ ಜೀವನ | ನಾಟಕ ಚರ್ಚೆ ಭಾಷಣ | ಸಮಾಜದ ಅತೃಪ್ತಿ |

ಬೇಕು. ಜೊತೆಗೆ, ತನ್ನ ಕಾರ್ಯಗಳನ್ನು ಯಶಸ್ವಿಯಾಗಿ ನಡಸಿಕೊಂಡು ಬರುವ ಹುಮ್ಮಸ್ಸೂ ಬರಬೇಕು. ಹೀಗೆ ಮಕ್ಕಳ ಮೂಲ ಪಾಶವೀಗುಣಗಳನ್ನು ವ್ಯಕ್ತಿಗೂ ಸಮಾಜಕ್ಕೂ ಹಿತವೆನಿಸುವ ರೀತಿಯಲ್ಲಿ ಪ್ರವಹಿಸುವಂತೆ ಮಾಡುವುದಕ್ಕೆ 'ಮೂಲಗುಣಗಳನ್ನು ಉದಾತ್ತಗೊಳಿಸುವುದು' ಎಂದು ಕರೆಯಬಹುದು; 'ಸ್ವಭಾವ ಸಂಸ್ಕರಣ'ವೆಂದೂ ಹೇಳಬಹುದು. ಮೇಲೆ ಹೇಳಿದ ಎರಡು ಸಂವೇದನೆಗಳಂತೆ ಪ್ರೀತಿಯೂ ಮಾನವನ ಮುಖ್ಯವಾದ ಒಂದು ರಸಪ್ರವೃತ್ತಿ. ಇದು ತೀರ ಎಳತನದಲ್ಲಿ ತಾಯಿತಂದೆಗಳ ಮಮತೆಯಲ್ಲಿ ಆರಂಭವಾಗಿ, ಶಾಲೆಯ ಜೀವನದಲ್ಲಿ ಜೊತೆಗಾರರ ಸ್ನೇಹದ ರೂಪವನ್ನು ತಾಳಿ, ತಾರುಣ್ಯದಲ್ಲಿ ಸಹಧರ್ಮಿಣಿಯ ಅನುರಾಗದಲ್ಲಿ ಪ್ರಕಾಶವಾಗುವುದೆಂದು ಹಲವರು ಹೇಳುವರು. ಈ ಸಂವೇದನೆಯನ್ನು ವೃದ್ಧಿಪಡಿಸಿಕೊಂಡು ಮುಂದೆ ಸಮಾಜದ ಎಲ್ಲ ವ್ಯಕ್ತಿಗಳಲ್ಲೂ ಮಧುರಬಾಂಧವ್ಯ ಏರ್ಪಡುವಂತೆ ಮಾಡುವುದು ಶಿಕ್ಷಣದ ಕೆಲಸ.

ಮಕ್ಕಳ ಹುಟ್ಟುಗುಣಗಳೂ ಸಂವೇದನೆಗಳೂ ಮಾರ್ಪಡುವ ಸ್ವಭಾವವುಳ್ಳವು. ಆದ್ದರಿಂದ ಉಚಿತವೆನಿಸುವ ರೀತಿಯಲ್ಲಿ ಅವನ್ನು ತಿದ್ದಿ ಬೆಳಸಿಕೊಳ್ಳುವುದು ಸಾಧ್ಯ. ಅದನ್ನು ವಿವರಿಸಲು ಎರಡು ಶಿಕ್ಷಣ ಪ್ರಯೋಗಗಳನ್ನು ಇಲ್ಲಿ ಕೊಟ್ಟಿದೆ.

೧. ಅಮೆರಿಕದ ಮನಶ್ಶಾಸ್ತ್ರಜ್ಞರಾದ ವಾಟ್ಸನ್‌ರವರು ಬಿಳಿಯ ಇಲಿಯೊಂದನ್ನು ಮಗುವಿನ ಮುಂದೆ ಪ್ರದರ್ಶಿಸಿದರು. ಮಗು ಅದನ್ನು ಮುಟ್ಟಲು ಪ್ರಯತ್ನಿಸಿತು. ಆ ಕ್ಷಣಕ್ಕೆ ಸರಿಯಾಗಿ ಒಂದು ದೊಡ್ಡ ಶಬ್ದ ಮಾಡಿದರು. ಆಗ ಮಗು ಹೆದರಿ, ಕೈಯನ್ನು ಹಿಂದಕ್ಕೆಳೆದುಕೊಂಡಿತು. ಮತ್ತೆ ಇಲಿಯನ್ನು ತೋರಿದರು. ಮಗು ಪುನಃ ಮುಟ್ಟಲು ಹೋಯಿತು. ತಿರುಗಿ ಶಬ್ದ ಮಾಡಿದರು; ಚೀರುತ್ತ ಕೈಹಿಂದಕ್ಕೆಳೆದುಕೊಂಡಿತು. ಹೀಗೆ ಅನೇಕಸಲ ಪ್ರಯೋಗ ನಡಸಿದುದರ ಫಲವಾಗಿ ಮಗು ಇಲಿಯನ್ನು ಕಂಡೊಡನೆಯೇ ಹೆದರಿ ಚೀರಲಾರಂಭಿಸಿತು. ಸ್ವಾಭಾವಿಕವಾಗಿ, ಮೊದಮೊದಲು ಇಲಿಯನ್ನು ಕಂಡಾಗ ಅದಕ್ಕೆ ಭಯವಾಗುತ್ತಿರಲಿಲ್ಲ. ಆದರೆ ಶಬ್ದದಿಂದ ಭಯವಾಗುತ್ತಿತ್ತು. ಇಲಿಯನ್ನು ಕಂಡೊಡನೆಯೇ ಶಬ್ದವೂ ಕೇಳಿಬರುತ್ತಿದ್ದುದರಿಂದ ಶಬ್ದದ ಭೀತಿಗೂ ಇಲಿಯ ನೋಟಕ್ಕೂ ಸಂಬಂಧ ಕಲ್ಪನೆಯಾಗಿ ಹೋಯಿತು. ಕಡೆ ಕಡೆಗೆ ಶಬ್ದವಿಲ್ಲದೆ ಬರಿ ಇಲಿಯನ್ನು ತೋರಿಸಿದರೆ ಸಾಕು, ಬೆಚ್ಚಲಾರಂಭಿಸಿತು. ಸ್ವಭಾವತಃ ಮಗುವಿನ ಹುಟ್ಟುಗುಣ ಇಲಿಯನ್ನು ಪ್ರೀತಿಸುವಂತಿತ್ತು. ಮೇಲಿನ

ಶಬ್ದದ ಸನ್ನಿವೇಶ ರಚನೆಯಿಂದ ಆ ಹುಟ್ಟುಗುಣ ಭೀತಿಯಾಗಿ ಪರಿಣಮಿಸಿತು. ಎಂದರೆ, ಮಕ್ಕಳ ಮೂಲಸ್ವಭಾವಗಳನ್ನು ಸನ್ನಿವೇಶ ರಚನೆಯಿಂದ ಮಾರ್ಪಡಿಸ ಬಹುದು. ಮೊದಲು ಮಗು ವರ್ತಿಸುತ್ತಿದ್ದ ರೀತಿ ಈಗ ಮಾರ್ಪಟ್ಟಿತು. ಹೀಗೆ ಮಾರ್ಪಟ್ಟ ವರ್ತನೆಯನ್ನು ಪರಿವರ್ತಿತ ವರ್ತನೆಯೆನ್ನಬಹುದು. ವಾಟ್ಸನ್ನರು ಈ ಪರಿವರ್ತಿತ ವರ್ತನೆಯನ್ನು ಮರಳಿ ಮಾರ್ಪಡಿಸಿ ಹಿಂದಿನ ಸ್ಥಿತಿಗೇ ತರಲು ಯತ್ನಿಸಿದರು: ಮೊದಮೊದಲು ಮಗು ಇಲಿಯ ನೋಟವನ್ನೇ ಸಹಿಸುತ್ತಿರಲಿಲ್ಲ. ಸ್ವಲ್ಪ ತಿಂಡಿ ಕೊಡುವುದು, ಆಗ ಇಲಿ ತೋರಿಸುವುದು—ಹೀಗೆ ಮಾಡುತ್ತಾ ಬಂದಂತೆ ಮಗು ತಿಂಡಿಯ ಪ್ರೀತಿಯಿಂದ ಇಲಿಯನ್ನು ಸಹಿಸುತ್ತಾ ಬಂತು. ಅನೇಕಸಾರಿ ಈ ಪ್ರಯೋಗ ನಡಸಿದರು. ಆಗ ಬರಿ ಇಲಿಯೊಂದನ್ನೇ ತಂದರೂ ಮಗು ಅದನ್ನು ಪ್ರೀತಿಯಿಂದ ಮುಟ್ಟುವಂತಾಯಿತು. ಇಲಿಯಲ್ಲಿದ್ದ ಮಗುವಿನ ಭಯ ನಿವಾರಣೆಯಾದದ್ದು ಸನ್ನಿವೇಶ ರಚನೆಯಿಂದ.

೨. ರಷ್ಯದ ಪ್ಯಾವಲೋ ಎಂಬ ಇನ್ನೊಬ್ಬ ವಿಜ್ಞಾನಿ ನಾಯಿಯ ಮೇಲೆ ಒಂದು ಪ್ರಯೋಗ ನಡಸಿದನು. ನಾಯಿಗೆ ಮಾಂಸ ಕಂಡರೆ ಸ್ವಾಭಾವಿಕವಾಗಿ ಜೊಲ್ಲು ಬರುತ್ತದೆ. ಅದಕ್ಕೆ ಮಾಂಸ ಹಾಕುವಾಗ ಒಂದು ಗಂಟೆ ಬಾರಿಸುತ್ತಿದ್ದನು. ಮಾಂಸ ತೋರಿಸುವುದೂ ಗಂಟೆ ಬಾರಿಸುವುದೂ ಏಕಕಾಲದಲ್ಲಿ ನಡೆಯುತ್ತಿದ್ದುವು. ಮೊದಲು ನಾಯಿಗೆ ಮಾಂಸ ಕಂಡೊಡನೆ ಸುರಿಯುತ್ತಿದ್ದ ಜೊಲ್ಲು ಗಂಟೆ ಸದ್ದು ಕೇಳಿದೊಡನೆಯೇ ಸುರಿಯುವಂತಾಯಿತು. ಕೊನೆ ಕೊನೆಗೆ ಬರೀ ಗಂಟೆ ಸದ್ದನ್ನು ಮಾತ್ರ ಮಾಡಿ ಮಾಂಸ ತೋರದಿದ್ದರೂ ಜೊಲ್ಲು ಸುರಿಯುವಂತಾಯಿತು. ನಾಯಿಯ ಮೂಲಸ್ವಭಾವ ಮಾಂಸ ಕಂಡಾಗ ಜೊಲ್ಲು ಸುರಿಸುವುದು; ಸನ್ನಿವೇಶ ರಚನೆಯಿಂದ ಈ ಮೂಲಗುಣ ಮಾರ್ಪಾಡಾಯಿತು. ಮಾಂಸದ ನೋಟಕ್ಕೂ ಗಂಟೆಯ ಸದ್ದಿಗೂ ಸಂಬಂಧ ಕಲ್ಪನೆಯಾಯಿತು. ಗಂಟೆಯ ಸದ್ದಿಗೇ ಜೊಲ್ಲುಗರೆಯುವುದು ಅದರ ಪರಿವರ್ತಿತ ವರ್ತನೆಯಾಯಿತು.

ಹೀಗೆ, ಉಚಿತವಾದ ಸನ್ನಿವೇಶ ರಚನೆಯಿಂದ ಮಕ್ಕಳ ಮೂಲ ಸ್ವಭಾವವನ್ನು ಮಾರ್ಪಡಿಸಬಹುದೆಂಬ ಅಂಶ ಸ್ಪಷ್ಟಪಡುತ್ತದೆ. ಮಕ್ಕಳಿಗೆ ವಂಶಗತವಾಗಿ ಬರುವ ಆ ಸ್ವಭಾವಗಳು ಪ್ರಾಣಿಗಳಲ್ಲಿರುವಂತೆಯೇ ಇರುತ್ತವೆ. ಹಾಗೆಯೇ ಬೆಳೆಯುವುದಾದರೆ ವ್ಯಕ್ತಿಗಾಗಲಿ ಸಮಾಜಕ್ಕಾಗಲಿ ಹಿತವೆನಿಸಲಾರವು. ಅವುಗಳನ್ನು ಹಿತವೆನಿಸುವ ಮಾರ್ಗದಲ್ಲಿ ಮಾರ್ಪಡಿಸಿ ಬೆಳಸುವುದೇ ಶಿಕ್ಷಣ. ಹುಟ್ಟುಗುಣಗಳು ಮಾರ್ಪಡಬಲ್ಲವಾದ್ದರಿಂದಲೇ ಶಿಕ್ಷಣ ಸಾಧ್ಯವಾಗಿದೆ. ಮಾನವನ ಸ್ವಭಾವ ಆ ಮೂಲಕ ಉತ್ತಮಗೊಳ್ಳಲು ಅವಕಾಶವೆನಿಸಿದೆ. ಮಕ್ಕಳ ಸಮಾಜಹಿತವೆನಿಸದ ಹುಟ್ಟುಗುಣಗಳನ್ನು

ನಮ್ಮ ಪೂರ್ವಿಕರು ಮೊಟಕುಮಾಡಲು ಯತ್ನಿಸುತ್ತಿದ್ದರು. ಹಾಗೆ ಮಕ್ಕಳ ಆ ಮಾನಸಶಕ್ತಿಯನ್ನು ಅದುಮಿಡುವುದರಿಂದ ತಾತ್ಕಾಲಿಕವಾಗಿ ಅದು ತಣ್ಣಗಾದರೂ ಮಾನಸಕ್ಷೇತ್ರದಲ್ಲಿ ಸುಪ್ತಾವಸ್ಥೆಯಲ್ಲಿ ಅಡಗಿಯೇ ಇರುತ್ತದೆ. ಮುಂದೆ ಅವಕಾಶ ಸಿಕ್ಕಿದಾಗ ಜೀವನದಲ್ಲಿ ಇಮ್ಮಡಿ—ಮುಮ್ಮಡಿ ರಭಸದಿಂದ ಹೊರಮೂಡಿ, ಕಂಟಕಪ್ರಾಯವಾದೀತು. ಆದ್ದರಿಂದ ಉಚಿತವಲ್ಲದ ಹುಟ್ಟುಗುಣಗಳನ್ನು ದಮನಮಾಡಲು ಯತ್ನಿಸುವುದು ಒಳ್ಳೆಯದಲ್ಲ. ಅವನ್ನು ಮಾರ್ಪಡಿಸಿ ಸಮಾಜಕ್ಕೂ ವ್ಯಕ್ತಿಗೂ ಹಿತವೆನಿಸುವ ಮಾರ್ಗದಲ್ಲಿ ಪ್ರಕಾಶಗೊಳ್ಳುವಂತೆ ಮಾಡಬೇಕು. ಮಕ್ಕಳ ಹುಟ್ಟುಗುಣಗಳ ಸ್ವರೂಪವನ್ನು ಶಿಕ್ಷಕರು ಅರಿತುಕೊಂಡು ಅವುಗಳನ್ನು ಅನುಕೂಲವೆನಿಸುವ ರೀತಿಯಲ್ಲಿ ಉಪಯೋಗಿಸಿಕೊಳ್ಳಬೇಕು: ಮೊಟಕುಮಾಡಲು ಎಂದೂ ಯತ್ನಿಸಬಾರದು. 'ಹುಟ್ಟುಗುಣಗಳನ್ನು ಸಂಸ್ಕರಿಸಿ ಉದಾತ್ತಗೊಳಿಸು; ದಮನಮಾಡಬೇಡ' ಎಂಬುದು ಶಿಕ್ಷಕರ ನಿತ್ಯ ಮಂತ್ರವಾಗಿರಬೇಕು.

ಮಕ್ಕಳಿಗೆ ವಂಶಗತವಾಗಿ ಬರುವ ಸಂವೇದನೆಗಳ ಮೂಲಸ್ವಭಾವವೂ ವರ್ತನೆಯೂ ಪ್ರಾಣಿಗಳಿಗಿರುವಂತೆಯೇ ಇರುತ್ತವೆ. ಅವರ ಈ ವರ್ತನೆ ನೋಡಲು ಉಚಿತವೆನಿಸಬಹುದಾದರೂ, ದೊಡ್ಡವರೂ ಅದೇ ರೀತಿ ವರ್ತಿಸುವುದಾದರೆ ಅಕ್ಷಮ್ಯವಾದೀತು! ಅಂಥವರನ್ನು 'ಪಶು'ಗಳೆನ್ನಬೇಕಾಗುತ್ತದೆ. ಎಂದಮೇಲೆ ಮಕ್ಕಳ ಸಂವೇದನೆಗಳು ಸಂಸ್ಕರಣಗೊಳ್ಳಬೇಕು. ಸಮಾಜದಲ್ಲಿ ವ್ಯಕ್ತಿ ಸಮರಸಜೀವನವನ್ನು ನಡಸಬೇಕಾಗಿರುವುದರಿಂದ ಆ ಮೂಲಸಂವೇದನೆಗಳಲ್ಲಿ ಅಪಾಯಕರವಾದ ಪ್ರತಿಕ್ರಿಯೆಗಳನ್ನು ಕಡಮೆ ಮಾಡಬೇಕು. ಹಲವನ್ನು ಪೋಷಿಸಿ ಬೆಳಸಬೇಕು; ಇನ್ನು ಕೆಲವನ್ನು ಉಚಿತ ಮಾರ್ಗದಲ್ಲಿ ಪ್ರವಹಿಸುವಂತೆ ಮಾರ್ಪಡಿಸಬೇಕು. ಸುಸಂಸ್ಕೃತ ವ್ಯಕ್ತಿಯಾಗಿ ಮುಂದೆ ಬಾಳುವಾಗ ಯಾವ ಯಾವ ಸನ್ನಿವೇಶಗಳಲ್ಲಿ ಹೇಗೆ ಹೇಗೆ ವರ್ತಿಸಬೇಕೆಂಬುದನ್ನೂ ಅರಿತುಕೊಂಡಿರಬೇಕು.

ಮೂಲಸಂವೇದನೆಗಳ ರಭಸವನ್ನು ಕಡಮೆಮಾಡಲು ಯತ್ನಿಸಿದಾಗ ಆ ಸಂವೇದನೆಗಳ ಶಕ್ತಿ ಕೆಲವರಲ್ಲಿ ಮಾನಸರಂಗದೊಳಗೇ ವ್ಯಾಪಿಸುತ್ತದೆ. ಅಂಥ ವ್ಯಕ್ತಿಗಳು ಯಾವುದಾದರೂ ಒಂದು ಸನ್ನಿವೇಶದಿಂದಾಗುವ ಪ್ರಚೋದನೆಯಿಂದ ತಮ್ಮ ಸಂವೇದನಾಶಕ್ತಿ ಹೊರಗಡೆ ಪ್ರಕಾಶಕ್ಕೆ ಬರುವಂತೆ

ಮಾಡುವುದರ ಬದಲು, ಮನಸ್ಸಿನಲ್ಲೇ ಬಗೆ ಬಗೆಯಾಗಿ ಸಂವೇದನೆಗಳನ್ನು ಅನುಭವಿಸುವರು. ಅಂಥವರನ್ನು ಅಂತರ್ಮುಖವ್ಯಕ್ತಿಗಳೆಂದು ಕರೆಯ ಬಹುದು; ಯಾವುದಕ್ಕೂ ಅವರು ಅತಿಯಾಗಿ ಮನೋವೇದನೆಯಿಂದ ತಪ್ತ ರಾಗುವರು. ಅನೇಕ ವೇಳೆ ಕಾರ್ಯತಃ ಏನನ್ನೂ ಮಾಡರು. ಆ ಮೂಲ ಸಂವೇದನೆಗಳನ್ನು ಮಾರ್ಪಡಿಸಿ ಬೆಳಸಿ, ಕಾರ್ಯರೂಪದಲ್ಲಿ ಪ್ರಕಾಶಗೊಳಿಸು ವಾಗ ಮತ್ತೆ ಕೆಲವರು ಎಲ್ಲವನ್ನೂ ಕಾರ್ಯದಲ್ಲಿ ಪ್ರದರ್ಶಿಸುವರೇ ಹೊರತು ಮನಸ್ಸಿಗೆ ಅಷ್ಟಾಗಿ ಹಚ್ಚಿಕೊಳ್ಳುವುದಿಲ್ಲ. ಅಂಥವರನ್ನು ಬಹಿರ್ಮುಖವ್ಯಕ್ತಿ ಗಳೆಂದು ಕರೆಯಬಹುದು. ಇವೆರಡು ರೀತಿಯ ವ್ಯಕ್ತಿತ್ವವೂ ಎಲ್ಲರಲ್ಲೂ ಸಮರಸವಾಗಿ ಬೆಳೆದುಬಂದಿರಬೇಕು: ಯಾವುದೊಂದು ಅತಿಯಾದರೂ ಅದರಿಂದ ಅನರ್ಥವಾದೀತು; ವ್ಯಕ್ತಿತ್ವ ಪರಿಪೂರ್ಣವಾದಂತಾಗುವುದಿಲ್ಲ. ಶಿಕ್ಷಣ ಈ ಅಂಶಗಳನ್ನೂ ಗಮನದಲ್ಲಿಟ್ಟುಕೊಂಡು ಮಕ್ಕಳ ಸ್ವಾಭಾವಿಕ ಸಂವೇದನೆಗಳನ್ನು ಸಂಸ್ಕರಿಸಿ ಉದಾತ್ತಗೊಳಿಸಿ, ಆ ಮೂಲಕ ವ್ಯಕ್ತಿಯ ಮತ್ತು ಸಮಾಜದ ಜೀವನ ಸುಖಶಾಂತಿಗಳ ತವರಾಗುವಂತೆ ಯತ್ನಿಸಬೇಕು

ಎಲ್ಲ ಮಕ್ಕಳಿಗೂ ಮನಸ್ಸಿಗೆ ಸಂಬಂಧಿಸಿದ ಕೆಲವು ಶಕ್ತಿಸಾಮರ್ಥ್ಯ ಗಳು ವಂಶಗತವಾಗಿ ಬರುತ್ತವೆ. ಜ್ಞಾನ ಮತ್ತು ಕೌಶಲ್ಯಗಳು ಬುದ್ಧಿಶಕ್ತಿ ಯನ್ನು ಅವಲಂಬಿಸಿದ್ದರೂ ಅವು ವಂಶಗತವಾಗತಕ್ಕವಲ್ಲ: ಜೀವನದಲ್ಲಿ ಕಲಿಯತಕ್ಕವು. ಮಕ್ಕಳಲ್ಲಿ ಪ್ರಥಮತಃ ಯಾವ ಜ್ಞಾನವಾಗಲಿ, ಕೌಶಲ್ಯ ವಾಗಲಿ, ದೃಷ್ಟಿಧ್ಯೇಯಗಳಾಗಲಿ ಕಂಡುಬರುವುದಿಲ್ಲ; ಒಳ್ಳೆಯದು, ಕೆಟ್ಟದ್ದು ಎಂಬ ಅರಿವೂ ಇರುವುದಿಲ್ಲ; ಆರೋಗ್ಯವೆಂಬುದಾಗಲಿ, ಅದರ ಆವಶ್ಯಕತೆ ಯಾಗಲಿ ಅವರಿಗೆ ಪರಿಚಯವಿರುವುದಿಲ್ಲ; ಸುತ್ತಣ ಜನ, ಸಮಾಜ, ಸಂಸ್ಥೆ —ಇವೊಂದೂ ಅರ್ಥವಾಗದ ಸಮಸ್ಯೆ. ನ್ಯಾಯಾನ್ಯಾಯಗಳಾಗಲಿ ಕರುಣ ಕ್ರೋಧಗಳಾಗಲಿ ಅರ್ಥವಾಗುವಂತಿಲ್ಲ: ಆದರೂ ಇವೆಲ್ಲ ಜ್ಞಾನವನ್ನೂ ಪಡೆ ಯಲು ಅನುಕೂಲಿಸುವ ಮನಶ್ಶಕ್ತಿ ಅವರಿಗೆ ವಂಶಗತವಾಗಿ ಬಂದಿರುತ್ತದೆ. ಕಲಿಯಲು ಅನುಕೂಲವಾಗುವ ಈ ಶಕ್ತಿಸಾಮರ್ಥ್ಯಗಳು ಪ್ರಕೃತಿದೇವಿ ಅವರಿಗೆ ಕೊಟ್ಟಿರುವ ಮಹಾಭಾಗ್ಯ. ಆ ಮೂಲಶಕ್ತಿಗಳು ಮಕ್ಕಳಿಗೆ ದೊರೆ ತಿದ್ದರೂ ಅವು ವಿಕಸಿಸಿ ಬೆಳೆಯಬೇಕು. ಇಲ್ಲವಾದರೆ ಬಹುವಾಗಿ ವ್ಯರ್ಥ ವಾದಂತೆಯೇ; ಆ ಮೂಲಶಕ್ತಿಗಳು ಯಾರಲ್ಲಿ ಬೆಳೆಯುತ್ತಿಲ್ಲವೋ ಅಂಥವರು

ಅನಾಗರಿಕ—ಆದಿಮಾನವನ ಅಂತಸ್ತಿನಲ್ಲೇ ಉಳಿದಂತಾಗುತ್ತದೆ; ಇಂದಿನ ಸಂಕೀರ್ಣ ಸಮಾಜದಲ್ಲಿ ಬಾಳಲನುಕೂಲಿಸುವ ಜ್ಞಾನವೂ ಕಲೆಯೂ ಹಸ್ತಗತವಾಗುವಂತಿಲ್ಲ. ಆದ್ದರಿಂದ ಈ ಮೂಲಶಕ್ತಿಗಳನ್ನು ಉಪಯೋಗಿಸಿಕೊಂಡು ಶಿಕ್ಷಕರು, ಮಕ್ಕಳು ಜ್ಞಾನಿಗಳೂ ಕುಶಲರೂ ಸದ್ಭಾವನಾನಿರತರೂ ಆಗುವಂತೆ ಮಾಡಬೇಕು. ಹೀಗೆ ವಂಶಗತವಾಗುವ ಮೂಲಶಕ್ತಿಗಳು ಒಬ್ಬೊಬ್ಬ ಮಕ್ಕಳಲ್ಲೂ ಹೆಚ್ಚು ಕಡಮೆಯಿರುತ್ತವೆ; ಎಲ್ಲ ಮಕ್ಕಳಲ್ಲೂ ಪ್ರಕೃತಿದತ್ತವಾಗಿ ಬಂದಿರುವ ಈ ಶಕ್ತಿಸಾಮರ್ಥ್ಯಗಳು ಎಷ್ಟರಮಟ್ಟಿಗೆ ಫಲದಾಯಕವಾಗಬಹುದೋ ಅಷ್ಟೊ ಪೂರ್ಣವಾಗಿ ಅವನ್ನು ಬೆಳಸಿಕೊಳ್ಳುವುದು ಶಿಕ್ಷಕರ ಕರ್ತವ್ಯ. ಆ ಶಕ್ತಿಸಾಮರ್ಥ್ಯಗಳಾವುವೂ ವ್ಯರ್ಥವಾಗದಂತೆ ನೋಡಿಕೊಳ್ಳಬೇಕು. ಜೊತೆಗೆ, ಅವುಗಳ ಬೆಳವಣಿಗೆಗೆ ಶೈಶವಾವಸ್ಥೆ ಅತ್ಯಂತ ಉತ್ತಮವೂ ಲಾಭದಾಯಕವೂ ಆದ ಕಾಲ; ಆ ಕಾಲದಲ್ಲಿ ಅವರ ಜ್ಞಾನ, ಕೌಶಲ ಮತ್ತು ದೃಷ್ಟಿಧ್ಯೇಯಗಳು ಪರಿಪೂರ್ಣವಾಗಿ ವಿಕಸಿಸುವಂತೆ ಯತ್ನಿಸಬೇಕು.

ಪ್ರಕೃತಿದತ್ತವಾಗಿ ಬಂದಿರುವ ಬುದ್ಧಿಶಕ್ತಿಯನ್ನು ಪೂರ್ಣವಾಗಿ ಬೆಳಸಿ ಮಕ್ಕಳಿಗೆ ಜ್ಞಾನ, ಕೌಶಲ ಮತ್ತು ದೃಷ್ಟಿಧ್ಯೇಯಗಳನ್ನು ರೂಢಿಸಿಕೊಡುವುದು ಒಂದು ರೀತಿಯಲ್ಲಿ ಸರಳವಾದ ಕಾರ್ಯ. ಆದರೆ ಅವರ ಸಂವೇದನೆಗಳನ್ನು ಸಂಸ್ಕರಿಸುವಾಗ ಉಪಾಧ್ಯಾಯರಿಗೆ ಹೆಚ್ಚಿನ ಕೌಶಲ ಬೇಕಾಗುತ್ತದೆ; ಮಕ್ಕಳ ಮೂಲಸಂವೇದನೆಗಳನ್ನು ತಿದ್ದಿ ಪಳಗಿಸುವಾಗ ಬಲು ಎಚ್ಚರಿಕೆಯಿಂದ ವರ್ತಿಸಬೇಕು. ಹಾಗೂ, ಪ್ರೀತಿಯ ಮನೋಗುಣವನ್ನು ತಿದ್ದುವಾಗ ಆ ಕಾಲದಲ್ಲಿ ಅದು ಯಾವ ಸ್ವರೂಪದಲ್ಲಿರುತ್ತದೆಂಬದನ್ನು ತಿಳಿಯಬೇಕು. ನಿಷ್ಕಪಟವಾದ ಅವರ ಪ್ರೀತಿಯ ಸ್ವರೂಪ ವಯಸ್ಕರಲ್ಲೂ ಇರುವುದಾದರೆ ಸಮಾಜದಲ್ಲಿ ಎಷ್ಟು ಸುಖಶಾಂತಿ ನೆಲಸೀತೆಂದು ಯಾರಿಗಾದರೂ ಅನ್ನಿಸದಿರದು. ಅಂಥ ಪವಿತ್ರ ಮನೋಗುಣವನ್ನು ಉಳಿಸಿ ಬೆಳಸಿಕೊಳ್ಳಬೇಕು. ಕೋಪ ಮತ್ತು ಭೀತಿ ಅಹಿತವಾದ ವರ್ತನೆಯೆಂಬುದು ಮಕ್ಕಳಿಗೆ ಅರಿವಾಗಬೇಕು. ಅವಶ್ಯಕವೆನಿಸಿದರೆ ಅಂಥ ವರ್ತನೆಗಳಿಂದ ಅಹಿತವೂ ದಂಡನೆಯೂ ಒದಗುವ ಸನ್ನಿವೇಶಗಳನ್ನು ರಚಿಸಿ, ಮಕ್ಕಳು ಅವುಗಳನ್ನು ಕಡಮೆಮಾಡಿಕೊಳ್ಳುವಂತೆ ಮಾಡಬೇಕು. ಹುಟ್ಟುಗುಣಗಳನ್ನು ಬೆಳಸು

ವುದಕ್ಕೂ ಈ ಮಾರ್ಗ ಅನ್ವಯವಾಗುತ್ತದೆ. ಹೋರಾಟದ ಗುಣವನ್ನೇ ತೆಗೆದುಕೊಳ್ಳುವ: ಇದು ಮಕ್ಕಳಲ್ಲಿರುವಂತೆಯೇ ಬೆಳೆದರೆ ಉಚಿತವಲ್ಲ. ಆ ಶಕ್ತಿಯ ಪ್ರವಾಹವನ್ನು ತಡೆಯುವುದೂ ಹಿತವಲ್ಲ: ಇತರರುಅಸಂತೋಷ ಪಟ್ಟಾರೆಂಬ, ಅವರ ಜೊತೆ ತಪ್ಪೇತೆಂಬ ಅರಿವನ್ನು ಮಕ್ಕಳಿಗೆ ಹುಟ್ಟಿಸಿ, ಅದು ಅಹಿತವೆಂದು ಅವರಿಗೆ ತಿಳಿಸಬೇಕು. ಜೊತೆಗೆ, ಆ ಗುಣದ ಮಾನಸಶಕ್ತಿ ಉಚಿತ ಮಾರ್ಗದಲ್ಲಿ ಪ್ರವಹಿಸುವಂತೆಯೂ ಸನ್ನಿವೇಶ ರಚಿಸಬೇಕು. ಆ ಹೋರಾಟದ ಶಕ್ತಿ ತನ್ನ ಪಾಠಗಳಲ್ಲಿ ಸ್ಪರ್ಧೆ ಹುಟ್ಟಿಸುವುದಾದರೆ ವ್ಯಕ್ತಿಯ ಶಿಕ್ಷಣಕ್ಕೆ ಅನುಕೂಲವಾಗುತ್ತದೆ. ಆಟದಲ್ಲೂ ಅಷ್ಟೇ. ಆದರೆ ಅದು ಅತಿಯಾದರೆ ಸಮಾಜಕ್ಕೆ ಅಹಿತವಾಗಬಹುದು. ವ್ಯಕ್ತಿ ಮತ್ತು ಸಮಾಜ—ಇವೆರಡರ ಹಿತವೂ ಸಾಧನೆಯಾಗುವಂತೆ ಮೂಲಗುಣಗಳು ಮಾರ್ಪಟ್ಟು ಬೆಳೆಯಬೇಕು. ಹೀಗೆಯೇ ಇತರ ಹುಟ್ಟುಗುಣಗಳೂ ತಮ್ಮ ಮೂಲರೂಪದಿಂದ ಉದಾತ್ತಗೊಳ್ಳಬೇಕು. ಮಕ್ಕಳು ಪದಾರ್ಥಗಳನ್ನು ಹಿಡಿದುಕೊಂಡು ಆಡುವುದು ಒಂದು ಹುಟ್ಟುಗುಣ. ವಿವೇಕರಹಿತವಾದ ಮಕ್ಕಳ ಅಂಥ ಗುಣಗಳನ್ನು ಕ್ರಮ ಕ್ರಮವಾಗಿ ಮಾರ್ಪಡಿಸಿ ಬೆಳಸಬೇಕು; ಬಿಲ್ಲೆಗಳನ್ನೊ, ಗುಂಡುಗಳನ್ನೊ, ಚತುರ ರೀತಿಯಲ್ಲಿ ಜೋಡಿಸುವುದು, ಬಳಪ ಸೀಸದಕಡ್ಡಿ ಮುಂತಾದವನ್ನು ಸರಿಯಾಗಿ ಹಿಡಿಯುವುದು—ಈ ಕಾರ್ಯಗಳನ್ನು ಮಾಡಲು ಆ ಗುಣವನ್ನು ಮಾರ್ಪಡಿಸಿಕೊಳ್ಳಬೇಕು. ಅದೇ ಹಸ್ತಪಾಟವವನ್ನು ಮುಂದೆ, ಟೈಪುಮಾಡುವ, ಮುದ್ರಣ ಮಾಡುವ, ಯಂತ್ರಗಳನ್ನು ನಡಸುವ ಕಾರ್ಯಗಳಿಗೂ ಪಳಗಿಸಿಕೊಳ್ಳಬಹುದು. ಇತರರು ತನ್ನನ್ನು ಮೆಚ್ಚಬೇಕೆಂಬ ಮನೋಗುಣ ಮಕ್ಕಳಿಗೆ ಮೊದಲಿಂದಲೂ ಇರುತ್ತದೆ. ಇದಿಷ್ಟರಿಂದಲೇ ಮಕ್ಕಳು ಕೃತಕೃತ್ಯರಾದಾರೆಂದು ಭಾವಿಸುವಂತಿಲ್ಲ. ಅನೇಕ ವೇಳೆ ಅದು ಬರಿಯ ಹಗಲುಗನಸಾಗಿ ಉಳಿದು, ಆ ಮಾನಸಶಕ್ತಿ ವ್ಯರ್ಥವಾದೀತು; ಅದೇ ಕಾತರವನ್ನು ತನ್ನ ಪಠ್ಯಪುಸ್ತಕಗಳಲ್ಲಿ ಬರುವ ನಾಯಕನಾಯಿಕೆಯರನ್ನೋ, ಕಾವ್ಯಸಂಪತ್ತನ್ನೋ, ಶೈಲಿಯನ್ನೋ ಅಭಿನಂದಿಸಲು ತಿರುಗಿಸಿದರೆ ಆಗ ಅದರಿಂದ ನಿಜವಾದ ಲಾಭವುಂಟಾದೀತು. ಹುಟ್ಟುಗುಣಗಳನ್ನಾಗಲಿ ಸಂವೇದನೆಗಳನ್ನಾಗಲಿ ತಿದ್ದಿ ಬೆಳಸಿಕೊಳ್ಳುವ ಕಾರ್ಯ ಕೆಲವೇ ಕ್ಷಣಗಳಲ್ಲಿ ಸಾಧ್ಯವೆಂದು

ಭಾವಿಸಬಾರದು: ಅದು ಕ್ರಮಕ್ರಮವಾಗಿ ನಡೆಯಬೇಕು. 'ಆ ರೀತಿಯಿರ ಬೇಕು, ಈ ರೀತಿಯಿರಬೇಕು' ಎಂದು ಮಕ್ಕಳಿಗೆ ಸುಮ್ಮನೆ ಅಪ್ಪಣೆ ಮಾಡು ವುದರಿಂದಾಗಲಿ 'ಇದನ್ನು ಬೇಡ; ಅದನ್ನು ಕಲಿ' ಎಂದು ಆಕಾಶ ಭಾಷಣ ಮಾಡುವುದರಿಂದಾಗಲಿ ಅವು ಮಾರ್ಪಟ್ಟು ಬೆಳೆಯಲಾರವು: ಉಚಿತವಾದ ಸನ್ನಿವೇಶಗಳನ್ನು ರಚಿಸಬೇಕು. ಆ ಸನ್ನಿವೇಶಗಳಿಂದ ಮಕ್ಕಳ ಮನೋ ಗುಣಗಳೂ ಸಂವೇದನೆಗಳೂ ಪ್ರತಿಕ್ರಿಯಾರೂಪದಲ್ಲಿ ವರ್ತಿಸಲು ಮೊದ ಲಾಗುತ್ತವೆ. ಯಾವುದು ತೀಕ್ಷ್ಣಗೊಳ್ಳಬೇಕೋ, ಯಾವುದು ಸಡಿಲವಾಗ ಬೇಕೋ, ಯಾವುದು ಮಾರ್ಪಡಬೇಕೋ ಎಂಬುದನ್ನು ತಿಳಿದು ಅದರಂತೆ ಸನ್ನಿವೇಶಗಳನ್ನು ರಚಿಸಿಕೊಂಡು ಮಕ್ಕಳ ಶಿಕ್ಷಣಕಾರ್ಯವನ್ನು ಸಾಧಿಸ ಬೇಕು. ಶಿಕ್ಷಕರಿಗೆ ಮಕ್ಕಳ ಮನೋವ್ಯಾಪಾರದ ಪರಿಚಯ ಎಷ್ಟೊಂದು ಆವಶ್ಯಕವೆಂಬುದು ಇದರಿಂದ ವ್ಯಕ್ತವಾಗುತ್ತದೆ.

**ಶಿಕ್ಷಣ ಕಾರ್ಯಕ್ಕೆ ಸಂಬಂಧಿಸಿದ ಇತರ ಅಂಶಗಳು:** ಹೀಗೆ ಮಕ್ಕಳಿಗೆ ವಂಶಗತವಾಗಿ ಬರುವ ಮೂಲಸ್ವಭಾವಗಳು ಸನ್ನಿವೇಶಗಳಿಂದ ಸಂಸ್ಕರಣಗೊಂಡಾಗ ಶಿಕ್ಷಣವಾಯಿತೆನ್ನುತ್ತೇವೆ. ಅವರ ಹುಟ್ಟುಗುಣ, ಸಂವೇದನೆ ಮತ್ತು ಬುದ್ಧಿಶಕ್ತಿ—ಇವನ್ನು ಉಚಿತ ರೀತಿಯಲ್ಲಿ ಬೆಳಸುವಾಗ ಮಕ್ಕಳ ದೀರ್ಘವಾದ ಶೈಶವಾವಸ್ಥೆಯನ್ನೂ, ಆ ಕಾಲ ಶಿಕ್ಷಣಕ್ಕೆ ಪ್ರಾಮುಖ್ಯ ವಾದ್ದೆಂಬುದನ್ನೂ ಶಿಕ್ಷಕರು ಅರಿತುಕೊಳ್ಳಬೇಕು. ಮಕ್ಕಳ ದೈಹಿಕ ಮತ್ತು ಮಾನಸಿಕ ವ್ಯಾಪಾರಗಳಿಗಿರುವ ಸಂಬಂಧವನ್ನೂ ಯಾವ ವಯಸ್ಸಿನವರೆಗೂ ಶಿಕ್ಷಣ ಪಡೆಯಬಹುದೆಂಬುದನ್ನೂ, ಆ ಕಾರ್ಯದಲ್ಲಿ ವಂಶಗತವಾಗಿ ಬಂದಿ ರುವ ಮಾನಸಶಕ್ತಿಗಳೂ, ಸನ್ನಿವೇಶದ ಪ್ರಭಾವವೂ ಎಷ್ಟೆಷ್ಟರಮಟ್ಟಿನ ಕೈವಾಡ ತೋರಬಲ್ಲವೆಂಬುದನ್ನೂ ಪರಿಚಯಮಾಡಿಕೊಳ್ಳಬೇಕು. ಕೊನೆ ಯದಾಗಿ ಒಬ್ಬೊಬ್ಬ ಮಗುವಿನ ಮೂಲಸ್ವಭಾವದಲ್ಲಿರುವ ಭಿನ್ನತೆಯನ್ನೂ ಅರಿತುಕೊಂಡಿರಬೇಕು. ಮೇಲಿನ ಐದು ಅಂಶಗಳ ಪರಿಚಯ ಮಕ್ಕಳ ಮೂಲಸ್ವಭಾವದ ಪರಿಚಯದಷ್ಟೇ ಶಿಕ್ಷಣಕಾರ್ಯಕ್ಕೆ ಅನಿವಾರ್ಯವಾದುದು.

**೧. ಶೈಶವಾವಸ್ಥೆಯ ಪ್ರಾಮುಖ್ಯತೆ:** ಮಾನವೇತರ ಪ್ರಾಣಿ ಗಳಲ್ಲಿ ಶೈಶವಾವಸ್ಥೆಯ ಕಾಲದ ಪರಿಮಾಣದಲ್ಲಿ ತುಂಬ ವ್ಯತ್ಯಾಸ ಕಂಡುಬರು ತ್ತದೆ. ಮೊಟ್ಟೆಯೊಡೆದು ಹೊರಬಿದ್ದೊಡನೆಯೇ ಕೋಳಿಯ ಮರಿ ಕೊಕ್ಕಿ

ನಿಂದ ಧಾನ್ಯಗಳನ್ನು ಆರಿಸಿಕೊಳ್ಳಲು ಯತ್ನಿಸುತ್ತದೆ. ಮೊದಮೊದಲು ತಾಯಿ ಗುಟಕನ್ನು ಕೊಡುವುದಾದರೂ ಧಾನ್ಯವನ್ನು ಕೊಕ್ಕಿನಿಂದ ಆರಿಸುವ ಸ್ವಭಾವ ಮರಿಗಳಿಗೆ ವಂಶಗತವಾಗಿಯೇ ಬರುತ್ತದೆ. ಹುಟ್ಟಿದಂದಿನಿಂದಲೇ ಆ ಕಾರ್ಯವನ್ನು ಅವು ಆರಂಭಿಸಬಲ್ಲವು. ಆದ್ದರಿಂದ ಜೀವನವನ್ನು ಆರಂಭಿಸಲು ಅವುಗಳಿಗೆ ಶಿಕ್ಷಣ ಅಷ್ಟಾಗಿ ಅನಿವಾರ್ಯವಲ್ಲ. ಬೆಕ್ಕಿನ ಮರಿಗಳಾದರೆ ವಾತಾವರಣದೊಡನೆ ಹೊಂದಿಕೊಂಡು ಬಾಳಲು ಹಲವು ವಾರಗಳಾದರೂ ಕಲಿಯಬೇಕು. ನಾಯಿ ಮರಿಗಳಿಗಾದರೆ ಒಂದೆರಡು ತಿಂಗಳುಗಳೇ ಬೇಕು. ಮಂಗಗಳ ಮರಿಗಳು ಇನ್ನೂ ಹೆಚ್ಚು ಕಾಲ ತೆಗೆದುಕೊಳ್ಳುತ್ತವೆ. ಚಿಂಪಾಂಜಿ ಎಂಬ ಮಾನವ ಮಂಗದ ಮರಿಗಳು ಇನ್ನೂ ಹೆಚ್ಚು ಕಾಲ ತೆಗೆದುಕೊಳ್ಳುತ್ತವೆ. ಅನಾಗರಿಕ ಮಾನವನ ಮಕ್ಕಳಿಗೆ ಹಲವು ವರ್ಷಗಳಾದರೂ ಬೇಕು. ನಾಗರಿಕ ಮಾನವನಲ್ಲಾದರೊ, ಅವನ ಜೀವಮಾನದ ಸುಮಾರು ಮೂರನೆಯ ಒಂದು ಭಾಗದಷ್ಟು ಕಾಲವಾದರೂ ಶಿಕ್ಷಣಕ್ಕೆ ಬೇಕಾಗುತ್ತದೆ. ಹೀಗೆ, ಕೆಳವರ್ಗದ ಪ್ರಾಣಿಗಳಲ್ಲಿ ಶೈಶವಾವಸ್ಥೆಯ ಕಾಲ ಗಮನಾರ್ಹವಾಗಿಲ್ಲ. ಹುಟ್ಟಿದಂದಿನಿಂದಲೂ ಅವು ಸನ್ನಿವೇಶಗಳೊಡನೆ ಹೊಂದಿಕೊಂಡು ಬಾಳಬಲ್ಲವು. ಅದಕ್ಕೆ ಅನುಕೂಲಿಸುವ ಹಲವು ಸ್ವಾಭಾವಿಕ ಪ್ರತಿಕ್ರಿಯೆಗಳು ಅವುಗಳಿಗೆ ವಂಶಗತವಾಗಿ ಬಂದು ಹುಟ್ಟಿದಂದಿನಿಂದಲೂ ಫಲಕಾರಿಯಾಗಿ ಕೆಲಸಮಾಡಬಲ್ಲವು. ಮೇಲ್ವರ್ಗದ ಪ್ರಾಣಿಗಳಲ್ಲಿ ಮರಿಗಳಿಗೆ ಕೆಲ ಕಾಲವಾದರೂ ಶಿಕ್ಷಣ ಅನಿವಾರ್ಯ. ಆ ಕಾಲದಲ್ಲಿ ತಂದೆತಾಯಿಗಳ ರಕ್ಷಣೆ ಮತ್ತು ಶಿಕ್ಷಣ ಅವುಗಳಿಗೆ ಆವಶ್ಯಕ. ಎಂದರೆ, ಆ ಮರಿಗಳಲ್ಲಿರುವ ಹಲವು ಶಕ್ತಿಸಾಮರ್ಥ್ಯಗಳೂ ಹುಟ್ಟುಗುಣಾದಿ ಸ್ವಭಾವಗಳೂ ಬೆಳೆದುಬರಬೇಕು. ಅನಾಗರಿಕ ಮಾನವನಲ್ಲೂ ಆ ಶಕ್ತಿ ವಿಶೇಷಗಳು ಶೈಶವಾವಸ್ಥೆಯಲ್ಲಿ ಬೆಳೆದು ಪ್ರಬುದ್ಧಾವಸ್ಥೆಗೆ ಬರಬೇಕಾಗುತ್ತದೆ. ನಾಗರಿಕ ಮಾನವನಲ್ಲಿ ಜನನ ಕಾಲದಿಂದಲೂ ಹಲವು ಜೀವಕ್ರಿಯೆಗಳೂ, ಸ್ವಾಭಾವಿಕ ಪ್ರತಿಕ್ರಿಯೆಗಳೂ ನಡೆಯುವಂತಿದ್ದರೂ, ಮಾನಸಿಕ ಮತ್ತು ದೈಹಿಕ ಶಕ್ತಿಸಾಮರ್ಥ್ಯಗಳೂ, ಗುಣಗಳೂ, ಸಂವೇದನೆಗಳೂ, ಅಭಿರುಚಿ ಆಸಕ್ತಿಗಳೂ ಬೆಳೆದು ಜೀವನದಲ್ಲಿ ರೂಪುಗೊಳ್ಳಬೇಕು. ದಿನದಿನಕ್ಕೂ ನೂತನವೇರುತ್ತಿರುವ, ಸಂಕೀರ್ಣವಾಗುತ್ತಿರುವ ಆಧುನಿಕ ಸಮಾಜದ ಬೇರೆ ಬಗೆಯ ಸನ್ನಿ

ವೇಶಗಳಿಗೂ ಸಮಸ್ಯೆಗಳಿಗೂ ಎದುರಾಗಿ, ಯಶಸ್ವಿಯಾಗಿ ಬಾಳುವಾಗ ಯಾವುದು ಉಚಿತ, ಯಾವುದು ಅಲ್ಲ ಎಂಬದನ್ನು ತಿಳಿದಕೊಳ್ಳಬೇಕು. ಅದಕ್ಕನುಕೂಲಿಸುವಂತೆ ಮಕ್ಕಳ ದೈಹಿಕ ಮತ್ತು ಮಾನಸಿಕ ಸ್ವರೂಪ ವೃದ್ಧಿಯಾಗುವ, ಮಾರ್ಪಡುವ ಸ್ಥಿತಿಯಲ್ಲಿದೆ. ಮೆದುಳು ಗಾತ್ರದಲ್ಲಿ ದೊಡ್ಡದಾಗುವಂತಿದ್ದು, ನರವ್ಯೂಹದ ರಚನೆ ಕ್ರಮ ಕ್ರಮವಾಗಿ ಸಂಕೀರ್ಣತೆಗೇರುವಂತಿದ್ದು, ಸಂಕೀರ್ಣ ಸಮಾಜಕ್ಕೆ ಅನುಗೊಳಿಸುವ ಸಂಸ್ಕರಣವನ್ನು ಪಡೆಯಲು ಅನುಕೂಲಿಸುವಂತಿದೆ. ಮಗುವಿನ ಶೈಶವಾವಸ್ಥೆ ದೀರ್ಘವಾದರೂ ಅಸಹಾಯವಾದದ್ದು. ಜನನ ಕಾಲದಲ್ಲಿ ಕೇವಲ ಮೂರನೆಯ ಒಂದು ಭಾಗದಷ್ಟು ಮಾತ್ರ ನರವ್ಯೂಹ ಸಿದ್ಧಿಸಿದ್ದರೂ ಮಿಕ್ಕ ಮೂರನೆಯ ಎರಡು ಭಾಗ ಜೀವನದಲ್ಲಿ ರೂಪುಗೊಳ್ಳಬೇಕಾಗಿದೆ. ಎಂದಮೇಲೆ, ಮಕ್ಕಳ ಮನಸ್ಸು ಬಹುವಾಗಿ ಬೆಳೆದು, ಮಾರ್ಪಾಟ್ಟು ಜೀವನದಲ್ಲಿ ಸಿದ್ಧಿಸಬೇಕು. ಈ ಮಾರ್ಪಡುವ ಸ್ವಭಾವವನ್ನು ಮಕ್ಕಳ ಮನಸ್ಸಿನ ಮಾರ್ದವಸ್ಥಿತಿಯೆಂದು ಕರೆಯಬಹುದು. ಈ ಸ್ಥಿತಿಯಿಂದಲೇ ಶಿಕ್ಷಣ ಸಾಧ್ಯವಾಗಿರುವುದು. ಆರ್ಜಿಸಿದ ಅನುಭವವನ್ನೂ ಜ್ಞಾನವನ್ನೂ ಮರೆಯದಿರುವುದೂ, ಅವುಗಳ ಸಹಾಯದಿಂದ ಮುಂದೆ ಜೀವನದಲ್ಲಿ ಎದುರು ಬರುವ ಸಮಸ್ಯೆಗಳನ್ನು ಬಿಡಿಸಿ ಹೊಸ ಹೊಸ ಸನ್ನಿವೇಶಗಳಲ್ಲಿ ಹಿಂದಿಗಿಂತ ಉತ್ತಮ ರೀತಿಯಲ್ಲಿ ನಡೆದುಕೊಳ್ಳುವುದೂ ಬುದ್ಧಿಶಕ್ತಿಯ ಸೂಚನೆಗಳು. ಕಾಲ ಕಾಲಕ್ಕೂ ವ್ಯತ್ಯಸ್ತ ಹೊಂದುತ್ತಿರುವ, ಬಗೆಬಗೆಯ ಭಿನ್ನತೆಯನ್ನೂ ವೈವಿಧ್ಯವನ್ನೂ ತೋರುತ್ತಿರುವ, ಆಧುನಿಕ ಜೀವನದ ಸನ್ನಿವೇಶಗಳಲ್ಲಿ ಹೊಂದಿಕೊಂಡು ಮಾನವನು ಬಾಳುವಂತಾಗಿರುವುದು ಅವನ ಬುದ್ಧಿಶಕ್ತಿಯ ಸಹಾಯದಿಂದ, ಅದಕ್ಕಿರುವ ಅನುಪಮ ಅನ್ವಯ ಶಕ್ತಿಯಿಂದ. ಬುದ್ಧಿಶಕ್ತಿಯ ಅಪಕ್ವಸ್ಥಿತಿಯೂ, ಮಾರ್ದವ ಸ್ವರೂಪವೂ ಮಾನವನ ಎಲ್ಲ ಅಭಿವೃದ್ಧಿಗೂ (ಶಿಕ್ಷಣಕ್ಕೂ) ಕಾರಣವೆನ್ನಬೇಕು. ಶೈಶವಾವಸ್ಥೆಯ ಮಕ್ಕಳ ಮಾನಸಿಕರೂಪ ಕಲಿಯುವ ಶಕ್ತಿಯನ್ನು ಪಡೆದಿದೆಯೇ ಹೊರತು ನಿರ್ದಿಷ್ಟ ಸ್ವರೂಪದಲ್ಲಿ ರೂಪುಗೊಂಡು ಪ್ರಬುದ್ಧವಾಗಿಲ್ಲ. ಹೀಗೆ ಮಾರ್ದವ ಸ್ಥಿತಿಯಲ್ಲಿರುವ ಶೈಶವಕಾಲದ ಮಕ್ಕಳ ಮನಸ್ಸಿನ ಅಪಕ್ವ ಸ್ವರೂಪದಿಂದ ಒಳ್ಳೆಯದೂ ಆಗಿದೆ: ಕೆಡಕೂ ಆಗಿದೆ: ವಂಶಗತವಾಗಿ ಬರಬು ರೂಢಮೂಲವಾಗಿಹೋಗಿರುವ ಯಾವ ತಿಳಿವಳಿಕೆ

ಯಾಗಲಿ, ಆಚಾರ ವರ್ತನೆಗಳಾಗಲಿ ಇಲ್ಲದಿರುವುದರಿಂದ ಮುಂದೆ ಅನುಕೂಲ ವಾದ ರೀತಿಯಲ್ಲಿ ಆ ಮನೋಗುಣಗಳನ್ನೂ, ಶಕ್ತಿಸಾಮರ್ಥ್ಯಗಳನ್ನೂ ಬೆಳಸಿಕೊಳ್ಳುವ ಅವಕಾಶವಿರುವುದು ಮಾನವನ ಒಂದು ಭಾಗ್ಯ; ಆದರೆ ಹಲವು ಕೆಳವರ್ಗದ ಪ್ರಾಣಿಗಳಲ್ಲಿ ವಂಶಗತವಾಗಿ ಬಂದಿರುವಂತೆ ಶೈಶವಾವಸ್ಥೆ ಯಲ್ಲಿ ಜೀವನಾರಂಭಕ್ಕೆ ಅನುಕೂಲಿಸುವ ಪಕ್ವವಾದ ವರ್ತನೆಗಳು ಇಲ್ಲದಿರು ವುದು ಮಾನವನ ಶೈಶವಾವಸ್ಥೆಯ ಅಸಹಾಯ ಸ್ಥಿತಿಯನ್ನು ಸೂಚಿಸುತ್ತದೆ; ಕೇವಲ ಆ ವರ್ತನೆಗಳನ್ನೂ, ಸನ್ನಿವೇಶದೊಡನೆ ಹೊಂದಿಕೊಳ್ಳಲು ನೆರವಾಗುವ ಪ್ರತಿಕ್ರಿಯೆಗಳನ್ನೂ ಸಾಧಿಸಲು ಅನುಕೂಲಿಸುವ ಶಕ್ತಿಮಾತ್ರ ಅವನಿಗೆ ವಂಶಗತವಾಗಿ ಬರುತ್ತದೆ. ಹಾಗೆ ಬಂದಿರುವ ಈ ಸಾಧನ ಫಲಪ್ರದ ವಾಗಬೇಕಾದರೆ ಸನ್ನಿವೇಶಗಳಿಂದ ಸಂಸ್ಕರಣಗೊಳ್ಳಬೇಕು. ಎಂದರೆ, ಶೈಶವಾವಸ್ಥೆ ವ್ಯಕ್ತಿಯನ್ನು ಸಾಮಾಜಿಕ, ಭೌತಿಕ ಮತ್ತು ನೈತಿಕ ಸನ್ನಿವೇಶ ಗಳಿಗೆ ಹೊಂದಿಕೊಳ್ಳುವಂತೆ ಶಿಕ್ಷಣ ಕೊಡಬೇಕಾದ ಕಾಲ. ಜೀವನದ ಆದ್ಯಂತವೂ ಶಿಕ್ಷಣ ನಡೆಯಬಹುದಾದರೂ, ಸನ್ನಿವೇಶಗಳೊಡನೆ ಯಶಸ್ವಿ ಯಾಗಿ ಅನ್ವಯಿಸಿಕೊಂಡು ಬಾಳುವಂತೆ ಮಾಡಲು ಶೈಶವಾವಸ್ಥೆ ಉಚಿತ ವಾದ್ದು. ಆ ಕಾಲದಲ್ಲಿ ವಂಶಗತವಾಗಿ ಬಂದಿರುವ ಮೂಲಸ್ವಭಾವಾದಿ ಶಕ್ತಿ ಗಳು ಸಂಸ್ಕರಣಗೊಂಡು ವಿಕಸಿಸಬೇಕು. ಶೈಶವಾವಸ್ಥೆ ಎಷ್ಟು ದೀರ್ಘವಾಗಿ ದ್ದರೆ ಅಷ್ಟೂ ಹೆಚ್ಚಿನ ಶಿಕ್ಷಣವನ್ನು ಕೊಡಬಹುದು. ಮಾನವನ ಸಂಸ್ಕೃತಿ ವಿಕಸಿಸಿದಂತೆ, ನಾಗರಿಕತೆ ಬೆಳೆದಂತೆ, ಅನುಭವ ವೈವಿಧ್ಯದಲ್ಲೂ ಸಂಕೀರ್ಣತೆ ಯಲ್ಲೂ ಹೆಚ್ಚಿದಂತೆ, ಮಕ್ಕಳ ಶಿಕ್ಷಣ ಕಾಲವೂ (ಶೈಶವ ಕಾಲ) ಹೆಚ್ಚುತ್ತಾ ಬರುತ್ತಿದೆ. ದೈಹಿಕವಾಗಿ ಮಕ್ಕಳು ೧೪-೧೫ ವರ್ಷಗಳಲ್ಲಿ ಪ್ರೌಢಾವಸ್ಥೆ ಗೇರಿದರೂ ಅವರ ಮಾನಸಿಕ ಶಿಕ್ಷಣ ೨೦-೨೫ ವರ್ಷಗಳಾದರೂ ಪೂರ್ಣಾವಸ್ಥೆ ಯನ್ನು ಮುಟ್ಟುವಂತಿಲ್ಲ. ಮಕ್ಕಳು ಎಷ್ಟು ಪರಿಪೂರ್ಣವಾದ ಶಿಕ್ಷಣ ಪಡೆ ದಿರುವರೋ ಅಷ್ಟೂ ಉತ್ತಮ ಕಾಣಿಕೆಯನ್ನು ಅವರು ಸಮಾಜಕ್ಕೆ ಸಲ್ಲಿಸ ಬಲ್ಲರು. ಆ ಮೂಲಕ ಸಮಾಜವೂ ಪಾವನವಾಗುವುದು. ಹೀಗೆ ನಿಸ್ಸಹಾಯ ವೆನಿಸಿದ ಶೈಶವ ಕಾಲದ ಮಾನವನ ಬೆಳವಣಿಗೆಗಾಗಿ ಸಮಾಜ ಸ್ಥಾಪಿಸಿರುವ ಸಂಸ್ಥೆಗಳೇ ಶಿಕ್ಷಣಶಾಲೆಗಳು. ಎಂದಮೇಲೆ ಆ ಕಾಲ ಮಕ್ಕಳ ಶಿಕ್ಷಣ ಕ್ಕಾಗಿಯೇ ಉಪಯೋಗವಾಗತಕ್ಕದ್ದು ಅನಿವಾರ್ಯವೂ ಔಚಿತವೂ ಆಗಿದೆ.

**೨. ದೈಹಿಕ ಮತ್ತು ಮಾನಸಿಕ ವ್ಯಾಪಾರಗಳಿಗಿರುವ ಸಂಬಂಧ:** ಮನಸ್ಸು ದೇಹದಲ್ಲಿ ಬಂಧಿತವಾಗಿದೆಯೆಂಬ ಭಾವನೆ, ಮನಸ್ಸೇ ಬೇರೆ ದೇಹವೇ ಬೇರೆ ಎಂಬ ತಪ್ಪಭಿಪ್ರಾಯವನ್ನು ಹುಟ್ಟಿಸುತ್ತದೆ. ದೇಹವೂ ಮನಸ್ಸೂ ಪ್ರತ್ಯೇಕವಾಗಿರದೆ, ಒಂದರೊಡನೊಂದು ಹೆಣೆದುಕೊಂಡು ಬಾಂಧವ್ಯದಿಂದಿವೆ. ಮಾನವನ ಯಾವ ಕ್ರಿಯೆಯಾಗಲಿ ಪ್ರತಿಕ್ರಿಯೆಯಾಗಲಿ ಮನಸ್ಸು ಮತ್ತು ದೇಹ ಇವೆರಡರ ವ್ಯಾಪಾರಗಳನ್ನೂ ಒಳಗೊಂಡೇ ಇವೆ. ಮಾನವ ಯಂತ್ರ, ಮನಸ್ಸು ಮತ್ತು ದೇಹ—ಇವೆರಡರ ಅನ್ಯೋನ್ಯ ವ್ಯಾಪಾರಗಳಿಂದಲೇ ನಡೆಯುತ್ತಿರುವುದು. ಭಾವನೆ, ಸಂವೇದನೆ ಮತ್ತು ವರ್ತನೆ—ಇವು ನಮ್ಮ ದೇಹದ ಸ್ಥಿತಿಗಳನ್ನು ತಿಳಿಸುತ್ತವೆ; ಕೋಪವನ್ನೋ ಭಾವನೆಯನ್ನೋ ಅನುಭವಿಸುವಾಗ ನಮ್ಮ ವರ್ತನೆ ದೈಹಿಕವಾಗಿ ಪ್ರದರ್ಶಿತವಾಗುತ್ತದೆ. ಮನಸ್ಸು ಆರೋಗ್ಯವಾಗಿದ್ದರೆ ದೇಹವೂ ಆರೋಗ್ಯವಾಗಿರುತ್ತದೆ. ದೇಹ ಆರೋಗ್ಯವಾಗಿದ್ದರೆ ಮಾನಸಿಕ ಶಕ್ತಿಯೂ ಚೆನ್ನಾಗಿರುತ್ತದೆ. ಆದ್ದರಿಂದ ಮನಸ್ಸಿಗೂ ದೇಹಕ್ಕೂ ಇರುವ ಅನ್ಯೋನ್ಯ ಸಂಬಂಧ ಸ್ಪಷ್ಟಪಡುತ್ತದೆ. ನಿಜವಾದ ಶಿಕ್ಷಣ ಇವೆರಡಕ್ಕೂ ಸಂಬಂಧಿಸಿಯೇ ಇರಬೇಕು. ಬುದ್ಧಿಶಾಲಿಗಳಾದ ಮಕ್ಕಳು ಸಾಮಾನ್ಯವಾಗಿ ಆರೋಗ್ಯವಾಗಿಯೂ ಇರುತ್ತಾರೆ. ಇವು ಒಂದನ್ನೊಂದು ಅವಲಂಬಿಸಿರುವುದರಿಂದ ಇವೆರಡರ ಶಿಕ್ಷಣವೂ ಜೊತೆಯಲ್ಲೇ ಸಾಗಬೇಕೆಂಬ ಅಂಶವನ್ನು ಪ್ರಾಚೀನ ಗ್ರೀಕರು ಮನಗಂಡಿದ್ದರು; ಅವರ ಶಿಕ್ಷಣಪ್ರಪಂಚದಲ್ಲಿ ಹಾಡುವುದು, ಕುಣಿಯುವುದು, ಓಡುವುದು, ಅಂಗಸಾಧನೆ—ಈ ದೈಹಿಕ ಶಿಕ್ಷಣಕ್ಕೂ ಪ್ರಾಧಾನ್ಯವಿತ್ತು.

**೩. ಮಕ್ಕಳು ಶಿಕ್ಷಣ ಪಡೆಯಬಹುದಾದ ಕಾಲ:** ಇಡೀ ಜೀವನದಲ್ಲೇ ಶಿಕ್ಷಣ ಏಕಪ್ರಕಾರವಾಗಿ ನಡೆಯುತ್ತಿರುತ್ತದೆಂದು ಹಿಂದೆ ವಿವರಿಸಿರುತ್ತೇವೆ. ಹುಟ್ಟಿದಂದಿನಿಂದ ಸಾಯುವತನಕವೂ ಶಿಕ್ಷಣದ ಕಾಲವಾಯಿತು. ಆದರೂ ಮಕ್ಕಳ ೧೪ನೆಯ ವರ್ಷದೊಳಗೆ ನಡೆಯುವ ಶಿಕ್ಷಣ ಅವರ ೪೦ನೆಯ ವಯಸ್ಸಿನಲ್ಲಿ ನಡೆಯುವುದಕ್ಕಿಂತ ಎಷ್ಟೋ ಉತ್ತಮವೂ ಫಲದಾಯಕವೂ ಆಗಿರುತ್ತದೆ. ಮಕ್ಕಳ ಭಾವನೆ, ಯೋಚನೆ, ವರ್ತನೆ, ಮುಂತಾದವೆಲ್ಲಾ ಎಳೆಯ ಕಾಲದಲ್ಲೇ ರೂಪುಗೊಳ್ಳುವುದರಿಂದ ಶಿಕ್ಷಣದ

ಆರಂಭ ಬಾಲ್ಯದಲ್ಲೇ ಆಗಬೇಕು. ಕೆಂಪಾಗಿ ಕಾದಿರುವಾಗ ತಾನೆ ಕಬ್ಬಿಣ ವನ್ನು ಬಡಿಯಬೇಕಾಗಿರುವುದು? ನರವ್ಯೂಹ ಇನ್ನೂ ಮಾರ್ದವ ಸ್ಥಿತಿ ಯಲ್ಲಿದ್ದು ಮಾರ್ಪಡುವ ಸ್ವರೂಪದಲ್ಲಿರುವಾಗಲೇ ಶಿಕ್ಷಣ ಆಗಬೇಕು. ಶಿಕ್ಷಣದ ಕಾಲವನ್ನು ಆದಷ್ಟು ಹೆಚ್ಚಿಸುವುದು ಆಧುನಿಕ ಸಮಾಜದ ಉದ್ದೇಶವಾದರೂ ಬಾಲ್ಯದಲ್ಲಿ ಅದರ ಹೆಚ್ಚು ಭಾಗ ನಡೆಯಬೇಕು; ಬಹು ಮುಖವಾದ ಶಿಕ್ಷಣವೂ ಆಗಲೇ ದೊರೆಯಬೇಕು. ವಯಸ್ಸಾದಮೇಲೂ ಕಲಿಯಬಹುದೆಂಬುದೇನೋ ನಿಜ. ಥಾರ್ನ್‌ಡೈಕ್‌ರವರು ೫೦ ವರ್ಷದ ಸುಮಾರಿನಲ್ಲಿ ಕಲಿಯಲು ಸಾಧ್ಯವೆಂಬುದನ್ನು ತೋರಿಸಿರುತ್ತಾರೆ. ಆದರೆ ವಯಸ್ಸು ಹೆಚ್ಚಿದಂತೆ ಶಿಕ್ಷಣದಿಂದಾಗುವ ಪ್ರತಿಫಲ ಕ್ರಮವಾಗಿ ಕಡಮೆ ಯಾಗುತ್ತದೆ; ಕಲಿಯುವಾಗ ವ್ಯಯವಾಗುವ ಮಕ್ಕಳ ಶಕ್ತಿ ಸಾಮರ್ಥ್ಯ ಗಳಿಗೂ, ಫಲಿತಾಂಶಗಳಿಗೂ ಹೋಲಿಸಿ ನೋಡಿದರೆ ಬಾಲ್ಯದಷ್ಟು ವಯಸ್ಸಾದಮೇಲೆ ಶಿಕ್ಷಣ ಫಲಪ್ರದವಲ್ಲವೆಂಬುದು ಸ್ಥಿರಪಡುತ್ತದೆ. ೨೦ನೆಯ ವಯಸ್ಸಿನೊಳಗೆ ಮಕ್ಕಳ ಮೆದುಳು ತೀವ್ರವಾಗಿ ಬೆಳೆದು ಪ್ರವರ್ಧಮಾನಸ್ಥಿತಿ ಮುಟ್ಟುತ್ತದೆ. ಆ ಕಾಲದಲ್ಲಿ ಮಕ್ಕಳ ಶಿಕ್ಷಣಕಾರ್ಯ ಹೆಚ್ಚು ಫಲಪ್ರದವಾಗಬಲ್ಲದು.

ಹಲವು ಶಿಕ್ಷಕರೂ ಪೋಷಕರೂ ಮಕ್ಕಳ ಶಿಕ್ಷಣ ಕಾಲದ ಪರಿಮಾಣ ವನ್ನು ಕಡಮೆ ಮಾಡಲು ಶಿಕ್ಷಣವನ್ನು ತ್ವರಿತಗೊಳಿಸುವುದುಂಟು. ಆದಷ್ಟು ಬೇಗ ಶಾಲೆ, ಕಾಲೇಜುಗಳ ಹಂತವನ್ನು ಹತ್ತಿಸಿ ಕಡೆಹಾಯಿಸಲು ಹಲವು ರೀತಿಯ ಕೃತಕ ಕ್ರಮಗಳನ್ನು ಕೈಗೊಳ್ಳುವರು. ಆ ಕಾಲದ ಮಕ್ಕಳ ಜೀವನದ ಹೆಚ್ಚು ಭಾಗವನ್ನು ಓದುವುದರಲ್ಲಿ ಕಳೆಯುವಂತೆ ಮಾಡುವುದು, ಡಬ್ಬಲ್ ಪ್ರಮೋಷನ್ ಕೊಡಿಸುವುದು, ಮುಂತಾದ ಕೃತಕ ಯತ್ನಗಳು ಒಳ್ಳೆಯವಲ್ಲ. ಪ್ರಕೃತಿದತ್ತವಾಗಿರುವ ಶೈಶವಕಾಲ ಶಿಕ್ಷಣಕ್ಕಾಗಿಯೇ. ಆ ಕಾಲವನ್ನು ಪೂರ್ಣವಾಗಿಯೂ ಕ್ರಮವಾಗಿಯೂ ಉಪಯೋಗಿಸಿಕೊಳ್ಳ ಬೇಕು. ಅದಿಲ್ಲದೆ, ಮೊಟಕು ಮಾಡಲು ಬಾಲಕರ ಶಿಕ್ಷಣದ ವೇಗವನ್ನು ತೀವ್ರಗೊಳಿಸುವುದು ಅಪಾಯಕರ. ಸುಮಾರು ೨೦ನೆಯ ವಯಸ್ಸಿನ ಪೂರ್ತಿ ಶಿಕ್ಷಣ ಅವಶ್ಯಕವೆಂಬ ಧ್ಯೇಯದಿಂದ ತರಗತಿಗಳನ್ನು ಏರ್ಪಡಿಸಿದೆ. ಒಂದೊಂದು ತರಗತಿಯ ಜೀವನವನ್ನೂ ಪೂರ್ಣವಾಗಿಯೂ ಕ್ರಮ

ವಾಗಿಯೂ ಅನುಭವಿಸಿದರೇಯೆ ಮಕ್ಕಳ ಶಿಕ್ಷಣ ಪೂರ್ಣವಾಯಿತೆಂದು ಹೇಳಬೇಕು. ಆ ಕಾಲವನ್ನು ಮೊಟಕುಮಾಡುವ ಯತ್ನ ಫಲಪ್ರದವಲ್ಲ. ಹಾಗೆಯೇ, ಶಿಕ್ಷಣದ ಕಾಲಾವಧಿಯನ್ನು ಅತಿ ದೀರ್ಘವಾಗಿ ಹೆಚ್ಚಿಸುವುದೂ ಉಚಿತವಲ್ಲ. ಈ ಎರಡು ರೀತಿಯ ಲೋಪಗಳನ್ನೂ ಸರಿಪಡಿಸಿಕೊಂಡು ಮಕ್ಕಳ ಶಿಕ್ಷಣಕಾರ್ಯವನ್ನು ಸಾಧಿಸುವುದು ಉಪಾಧ್ಯಾಯರ ದಕ್ಷತೆಯನ್ನು ಅವಲಂಬಿಸಿದೆ.

ಶಾಲಾ ವ್ಯವಸ್ಥೆಯ ಅನುಕೂಲ್ಯಕ್ಕಾಗಿ ಶಿಕ್ಷಣದ ಕಾಲವನ್ನು ಹಲವು ಅಂತಸ್ತುಗಳಾಗಿ ವಿಂಗಡಿಸಿದೆ. ಶೈಶವಕಾಲ, ಪ್ರಾಥಮಿಕ ಶಿಕ್ಷಣಕಾಲ, ಮಾಧ್ಯಮಿಕ ಶಿಕ್ಷಣಕಾಲ ಮತ್ತು ಪ್ರೌಢ ಶಿಕ್ಷಣಕಾಲ. ಯಾವ ಕಾರಣ ದಿಂದಲೇ ಆಗಲಿ, ಒಂದು ಶಾಲೆಯ ಅಂತಸ್ತನ್ನು ಬಿಟ್ಟು ಮುಂದಿನದಕ್ಕೆ ಹಾರುವುದು ಉಚಿತವಲ್ಲ. ಪ್ರತಿಯೊಂದು ಅಂತಸ್ತಿನ ಶಿಕ್ಷಣ ಸಂಸ್ಥೆಯಲ್ಲೂ ಮಕ್ಕಳು ಪೂರ್ಣವಾಗಿ ಭಾಗಿಯಾಗಬೇಕು. ಎಲ್ಲವೂ ಆವಶ್ಯಕವೇ. ಶಿಕ್ಷಕರಾಗಲಿ, ಪೋಷಕರಾಗಲಿ ಯಾವುದೋ ಒಂದು ಅಂತಸ್ತಿನ ಶಿಕ್ಷಣ ಪ್ರಾಧಾನ್ಯವೆಂದು ಭಾವಿಸುವುದು ಸರಿಯಲ್ಲ; ಮಕ್ಕಳು ನವತಾರುಣ್ಯವನ್ನು ಹತ್ತುವಾಗ ಆರಂಭವಾಗುವ ಪ್ರೌಢ ಶಿಕ್ಷಣ ಉತ್ತಮವೆಂದು ಹಲವರು ಭಾವಿಸುವರು; ಅವರ ಭವಿಷ್ಯ ಜೀವನವನ್ನೇ ರೂಪಿಸುವಂಥ ಪ್ರಾಥಮಿಕ ಶಾಲೆಗಳೇ ಮುಖ್ಯವೆಂದು ಇನ್ನು ಕೆಲವರು ಭಾವಿಸುವರು; ನಿಜವಾಗಿ ನೋಡುವುದಾದರೆ ಎಲ್ಲವೂ ಮುಖ್ಯವೇ. ಒಂದೊಂದು ಅಂತಸ್ತಿನಲ್ಲೂ ಒಂದೊಂದು ವಿಶಿಷ್ಟ ರೀತಿಯ ಬೆಳವಣಿಗೆ ಆಗಬೇಕು. ಯಾವುದು ಉಳಿದು ಹೋದರೂ ಕುಂದೇ. ಮುಂದಿನ ಮೆಟ್ಟಿಲನ್ನು ಹತ್ತುವ ಮುನ್ನ ಹಿಂದಿನ ಅಂತಸ್ತಿನ ಶಿಕ್ಷಣ ಪರಿಪೂರ್ಣವಾಗಿ ಮುಗಿದೇ ಇರಬೇಕು.

**೪. ಅನುವಂಶೀಯತೆ ಮತ್ತು ಸನ್ನಿವೇಶ:** ಮಕ್ಕಳಿಗೆ ತಾಯಿ ತಂದೆಗಳ ಮಾನಸಿಕ ಮತ್ತು ದೈಹಿಕ ಲಕ್ಷಣಗಳೂ ಅಭಿರುಚಿ ಆಸಕ್ತಿಗಳೂ ವಂಶಗತವಾಗಿ ಬರುತ್ತವೆ. ಮಕ್ಕಳ ಶಿಕ್ಷಣಕಾರ್ಯಕ್ಕೆ ಈ ಅನುವಂಶೀಯ ಗುಣವಿಶೇಷಗಳೇ ನೆರವಾಗತಕ್ಕವೆಂದು ಕೆಲವರು ವಾದಿಸುವರು. ಅವರ ಅಭಿಪ್ರಾಯದಂತೆ ಮಗುವಿನ ಭವಿಷ್ಯ ಜೀವನವನ್ನೇ ಈ ಅನುವಂಶೀಯತೆ ನಿರ್ಧರಿಸುವುದೆಂದು ಸಿದ್ಧಾಂತ. ಮತ್ತೆ ಕೆಲವರು ಅನುವಂಶೀಯ ಗುಣ

ಗಳು ಹೇಗೇ ಇರಲಿ, ಅವರ ಮುಂದಿನ ಜೀವನದ ರೂಪು ರೇಖೆಗಳನ್ನು ನಿರ್ಧರಿಸತಕ್ಕವು ಅವರು ವಾಸಮಾಡತಕ್ಕ ಸನ್ನಿವೇಶ ಮತ್ತು ಪಡೆಯತಕ್ಕ ಶಿಕ್ಷಣ ಎಂದು ವಾದಿಸುವರು. ಇವೆರಡು ದೃಷ್ಟಿಗಳೂ ವೈಪರೀತ್ಯವನ್ನು ಮುಟ್ಟಿರತಕ್ಕವೇ. ಅನುವಂಶೀಯ ಗುಣಗಳು ಮುಖ್ಯವೇ: ವ್ಯಕ್ತಿಯ ದೈಹಿಕ ಸ್ವರೂಪವೂ ಅಂಗಸೌಷ್ಠವವೂ ಬಹುವಾಗಿ ಅನುವಂಶೀಯತೆಯನ್ನು ಅನುಸರಿಸುತ್ತವೆ. ಅಂಗರಚನೆ, ತೂಕ, ಕಣ್ಣ ಬಣ್ಣ, ಮುಖದ ಲಕ್ಷಣ—ಈ ದೈಹಿಕ ಗುಣಗಳು ಅನುವಂಶೀಯತೆಯನ್ನು ಅವಲಂಬಿಸಿವೆ. 'ತಂದೆಯಂತೆ ಮಗು' ಎನ್ನುವುದು ಅದಕ್ಕಾಗಿಯೇ. ರೋಗ ಪ್ರತಿಭಟನಾ ಶಕ್ತಿಯೂ, ಮಾನಸಿಕ ಶಕ್ತಿವಿಶೇಷಗಳೂ ವಂಶಗತವಾಗಿ ಬರುತ್ತವೆ. ಪ್ರತಿಭೆ, ವ್ಯವಹಾರ ಚಾತುರ್ಯ, ವಾಗ್ವಿದಗ್ಧತೆ, ಕಷ್ಟಸಹಿಷ್ಣುತೆ, ಇವೂ ವಂಶಗತವಾಗುವುವಂತೆ. ಅಮೆರಿಕದ ಜ್ಯೂಕ್ ಎಂಬ ನೀಚ ಮಾನವನ ಐದು ಸಂತತಿಗಳಲ್ಲಿ ಮೂಡಿದವರೆಲ್ಲರೂ ಅಧಮರೇ ಆದರೆಂಬ ಅಂಶ ಈ ಅನುವಂಶೀಯತೆಯ ದೃಷ್ಟಿಯನ್ನು ಪೋಷಿಸುತ್ತದೆ. ಹೀಗೆ ಅನುವಂಶೀಯವಾಗಿ ಬರುವ ಗುಣವಿಶೇಷಗಳು ವ್ಯಕ್ತಿಯ ಸ್ವರೂಪವನ್ನು ನಿರ್ಧರಿಸುವುವಾದರೂ ಅವನು ಬಾಳತಕ್ಕ ಸನ್ನಿವೇಶಗಳೂ ತಮ್ಮ ಕೈವಾಡವನ್ನು ತೋರಿಸಿಯೇ ತೀರುತ್ತವೆ. ಮನೆಯಲ್ಲಿ ಬಾಳುವಾಗ ತಾಯಿತಂದೆಗಳು ಆಚರಿಸುವ ಸಂಪ್ರದಾಯ, ಆಡುವ ಭಾಷೆ, ನಡೆಯುವ ರೀತಿ, ಮುಂತಾದವುಗಳ ಕೈವಾಡ ಮಕ್ಕಳಮೇಲೆ ಬಿದ್ದೇ ಬೀಳುತ್ತದೆ. ಆದ್ದರಿಂದ ತಾಯಿತಂದೆಗಳಿಂದ ಮಕ್ಕಳಿಗೆ ಎರಡು ವಿಧವಾದ ಸಂಪತ್ತು ಹಸ್ತಗತವಾಗುತ್ತದೆ: ಮೊದಲನೆಯದಾಗಿ, ಅನುವಂಶೀಯವಾಗಿ ಬರುವ ದೈಹಿಕ ಮತ್ತು ಮಾನಸಿಕ ಶಕ್ತಿವಿಶೇಷಗಳು; ಎರಡನೆಯದಾಗಿ, ಸಾಮಾಜಿಕ ಸಂಪ್ರದಾಯಾದಿ ಆಚಾರಗಳು (ಸನ್ನಿವೇಶ)—ವ್ಯಕ್ತಿಯನ್ನು ನಿರ್ಮಿಸುವಾಗ ಈ ಎರಡೂ ತಮ್ಮ ತಮ್ಮ ಪ್ರಭಾವವನ್ನು ಬೀರಿಯೇ ಬೀರುತ್ತವೆ. ಹಾಗಾದರೆ ಯಾವುದು, ಹೇಗೆ ಮಕ್ಕಳ ಭವಿಷ್ಯ ಜೀವನವನ್ನು ರೂಪಿಸಲು ನೆರವಾಗುತ್ತದೆ? ಅನುವಂಶೀಯತೆ ಶಿಕ್ಷಣದ ಸ್ವರೂಪವನ್ನು ಎಷ್ಟರಮಟ್ಟಿಗೆ ನಿರ್ಧರಿಸುತ್ತದೆ? ಸನ್ನಿವೇಶ ಎಷ್ಟರಮಟ್ಟಿನ ಕೈವಾಡವನ್ನು ಬೀರುತ್ತದೆ? ಎಂಬ ಅಂಶಗಳನ್ನು ವಿವೇಚಿಸೋಣ.

ಇತ್ತೀಚಿನ ಸಂಶೋಧನೆಗಳಿಂದ ಅನುವಂಶೀಯ ಗುಣಗಳೂ ಸನ್ನಿವೇಶವೂ ಎಷ್ಟೆಷ್ಟರ ಮಟ್ಟಿನ ಕೈವಾಡ ಬೀರುತ್ತವೆಂಬ ಅಂಶ ದೃಢಪಟ್ಟಿದೆ. ಆ ಆಧಾರದ ಮೇಲೆ ಹೇಳುವುದಾದರೆ, ಅನುವಂಶೀಯ ಗುಣಗಳು ಮಕ್ಕಳು ಶಿಕ್ಷಣ ಪಡೆಯಬಹುದಾದ ಪರಮಾವಧಿ ಮಟ್ಟವನ್ನು ನಿರ್ಧರಿಸುತ್ತವೆ; ಆ ಅನುವಂಶೀಯ ಶಕ್ತಿಗಳು ಫಲಕಾರಿಯಾಗಿ ಬೆಳೆಯುವ ಮಟ್ಟವನ್ನು ಸನ್ನಿವೇಶ ನಿರ್ಧರಿಸುತ್ತದೆ. ಅನುವಂಶೀಯ ಶಕ್ತಿ ಎಷ್ಟೇ ಉತ್ತಮದ್ದಾದರೂ ಸರಿಯಾದ ಸನ್ನಿವೇಶವಿಲ್ಲದಿದ್ದರೆ ಆ ಶಕ್ತಿಯ ಬಹು ಭಾಗ ವ್ಯರ್ಥವಾದಂತೆಯೇ. ಹಾಗೆಯೇ ಸನ್ನಿವೇಶ ಎಷ್ಟೇ ಉಚಿತವಾಗಿದ್ದರೂ ಅನುವಂಶೀಯ ಶಕ್ತಿಯೇ ಇಲ್ಲದಿದ್ದರೆ ಅದು ಫಲದಾಯಕವಾಗಲಾರದು. ಆದ್ದರಿಂದ ಅನುವಂಶೀಯ ಶಕ್ತಿಗಳು ಪರಿಪೂರ್ಣಾವಸ್ಥೆಗೆ ಬೆಳೆಯುವಂಥ ಸನ್ನಿವೇಶಗಳನ್ನು ಹೊಂದಿಸಿಕೊಳ್ಳಬೇಕು. ಅವೆರಡೂ ಶಿಕ್ಷಣ ಕಾರ್ಯದಲ್ಲಿ ನೆರವಾಗತಕ್ಕವೇ. ಅವುಗಳಲ್ಲಿ ಹೆಚ್ಚಿನದಾವುದು, ಕಡಮೆಯದಾವುದು ಎಂಬಂಶಗಳಲ್ಲಿ ಬೇಕಾದಹಾಗೆ ವಾದವಿವಾದಗಳು ನಡೆದಿವೆ. ಆದರೆ ಅದು ವ್ಯರ್ಥ ವಾದ. ಏಕೆಂದರೆ, ಅವೆರಡರಲ್ಲಿ ಒಂದನ್ನುಳಿದು ಇನ್ನೊಂದು ತನ್ನ ಕೈವಾಡವನ್ನು ತೋರುವಂತೆಯೇ ಇಲ್ಲ. ಅನುವಂಶೀಯ ಶಕ್ತಿಯಿಲ್ಲದ ಮಕ್ಕಳಿಗೆ ಎಷ್ಟೇ ಉತ್ತಮ ಸನ್ನಿವೇಶವಿದ್ದರೂ ಪ್ರಯೋಜನವಿಲ್ಲ. ಹಾಗೆಯೇ ಎಂಥ ಉತ್ತಮ ಅನುವಂಶೀಯ ಗುಣಗಳಿದ್ದರೂ ಸನ್ನಿವೇಶದ ಸೌಲಭ್ಯವಿಲ್ಲದಿದ್ದರೆ ಅವು ವಿಕಸಿಸಿ ಪ್ರಕಾಶಕ್ಕೆ ಬರಲಾರವು. ಒಂದರ ಪ್ರಭಾವ ಇನ್ನೊಂದನ್ನು ಅವಲಂಬಿಸಿಯೇ ಪ್ರಕಾಶಗೊಳ್ಳಬೇಕು. ಈ ನಿರ್ಧಾರ ದೈಹಿಕ ಮತ್ತು ಬುದ್ಧಿಶಕ್ತಿಯ ಬೆಳವಣಿಗೆಯಲ್ಲಿ ಒಪ್ಪುವುದಾದರೂ ನೈತಿಕ ಶಕ್ತಿಯ ಬೆಳವಣಿಗೆಯಲ್ಲಿ ಸನ್ನಿವೇಶದ ಕೈವಾಡವೇ ಹೆಚ್ಚೆಂದು ಹಲವರು ಹೇಳುವರು. ಹಾಗೆಯೇ ಮಕ್ಕಳ ಸಂವೇದನೆಗಳನ್ನು ಸಂಸ್ಕರಿಸಿ ರೂಪಿಸುವಾಗಲೂ ಸನ್ನಿವೇಶ ಹೆಚ್ಚಿನ ಪ್ರಭಾವವನ್ನು ಬೀರಬಲ್ಲದೆಂದೂ ಹೇಳುವರು.

ಉತ್ತಮ ರೀತಿಯ ಅನುವಂಶೀಯ ಶಕ್ತಿಯುಳ್ಳ ಮಕ್ಕಳಿಗೆ ಸನ್ನಿವೇಶ (ಶಿಕ್ಷಣ)ದಿಂದ ಪ್ರಯೋಜನವಾದೀತು: ಅನುವಂಶೀಯ ಶಕ್ತಿಯೇ ಇಲ್ಲದ ಬಾಲಕ ಬಾಲಿಕೆಯರಿಗೆ ಎಷ್ಟು ಶಿಕ್ಷಣ ಕೊಟ್ಟರೂ ಆಗುವ ಪ್ರಯೋಜನ

ಅಷ್ಟರಲ್ಲೇ ಇದೆ. 'ಮಕ್ಕಳನ್ನು ನಾವು ವಿದ್ಯಾವಂತರನ್ನಾಗಿ ಮಾಡುತ್ತೇವೆ' ಎಂದು ಹೇಳಿಕೊಳ್ಳುವ ಉಪಾಧ್ಯಾಯರು ಅವರಲ್ಲಿರಬಹುದಾದ ಶಕ್ತಿಗಳನ್ನು ಬೆಳಸುತ್ತೇವೆಯೇ ಹೊರತು ಹೊಸದಾಗಿ ಅವನ್ನು ಸೃಷ್ಟಿಸಲು ಸಾಧ್ಯವೇ ಇಲ್ಲವೆಂಬುದನ್ನು ಗಮನಿಸಬೇಕು. ನಾವು ಕೊಡಬಹುದಾದ ಶಿಕ್ಷಣದ ಪರಮಾವಧಿಗೂ ಒಂದು ಮಿತಿಯಿದೆ. ಆ ಮಿತಿ ವಂಶಗತವಾಗಿ ಬಂದಿರುವ ಶಕ್ತಿಯನ್ನೇ ಅವಲಂಬಿಸಿದೆ. ಶಾಲೆ ಕಾಲೇಜುಗಳೇನೋ ಸ್ಥಾಪಿತವಾಗಿವೆ; ಅವು ಮಕ್ಕಳ ವಂಶಗತವಾಗಿ ಬಂದಿರುವ ಶಕ್ತಿಸಾಮರ್ಥ್ಯಗಳನ್ನು ಬೆಳಸತಕ್ಕ ಸನ್ನಿವೇಶಗಳು ಮಾತ್ರ. ಆ ಶಿಕ್ಷಣದಿಂದ ಉತ್ತಮ ಅನುವಂಶೀಯ ಶಕ್ತಿಯುಳ್ಳವರೇನೊ ಮಹಾಪುರುಷರಾಗಬಹುದು. ಹಾಗೆ ಅವರು ಮಹಾ ಪುರುಷರಾಗಲು ಶಾಲೆಗಳೂ ಕಾಲೇಜುಗಳೂ ಸಹಾಯಕ ಸನ್ನಿವೇಶಗಳೇ ಹೊರತು ಅವರಿಗೆ ಮಹಾಪುರುಷರಾಗುವ ಶಕ್ತಿಗಳನ್ನು ಹೊಸದಾಗಿ ಕೊಡ ಲಾರವು. ಈ ಕಾರಣದಿಂದ ದಡ್ಡನೊಬ್ಬನಿಗೆ ಶಿಕ್ಷಣ ಕೊಡುವುದು ವ್ಯರ್ಥ ವೆಂದು ಯಾರೂ ಕೈಬಿಡಬಾರದು. ಅವನು ದಡ್ಡನೆಂದು ತೀರ್ಮಾನಿಸುವ ಮುನ್ನ ಅವನ ಅನುವಂಶೀಯ ಗುಣಗಳನ್ನೂ ಶಕ್ತಿಸಾಮರ್ಥ್ಯಗಳನ್ನೂ ಅಭಿರುಚಿ ಆಸಕ್ತಿಗಳನ್ನೂ ಚೆನ್ನಾಗಿ ಪರಿಶೀಲಿಸಬೇಕು. ಯಾವ ಮಗುವೇ ಆಗಲಿ ಜನ್ಮತಃ ಎಲ್ಲ ವಿಧದಲ್ಲೂ ದಡ್ಡನಾಗಿರಲಾರ. ಅವನಿಗೆ ಗಣಿತ ತಲೆಗೆ ಹಿಡಿಯದಿದ್ದರೆ, ಚೆನ್ನಾಗಿ ತಮಟೆಯನ್ನಾದರೂ ಬಾರಿಸಬಲ್ಲ! ಉತ್ತಮ ವಾಕ್ ಶಕ್ತಿಯಿಲ್ಲದಿದ್ದರೆ, ಚಿತ್ರಕಲೆಯಲ್ಲಾದರೂ ಅಭಿರುಚಿಯಿರ ಬಹುದು. ಆದ್ದರಿಂದ ಮಕ್ಕಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಅವರಿಗಿರುವ ವಿಶೇಷ ರೀತಿಯ ಅಭಿರುಚಿ ಆಸಕ್ತಿಗಳನ್ನೂ ಶಕ್ತಿಸಾಮರ್ಥ್ಯಗಳನ್ನೂ ಪರಿಚಯ ಮಾಡಿಕೊಳ್ಳಬೇಕು. ಯಾವುದರಲ್ಲಿ ಅಭಿರುಚಿ ಆಸಕ್ತಿಗಳೂ, ಶಕ್ತಿಸಾಮರ್ಥ್ಯಗಳೂ ವಂಶಗತವಾಗಿಯಾಗಲಿ ಸನ್ನಿವೇಶ ನಿಮಿತ್ತವಾಗಿ ಯಾಗಲಿ ಕಾಣಬರುತ್ತವೋ ಆ ಮಾರ್ಗದಲ್ಲಿ ಅವನಿಗೆ ಶಿಕ್ಷಣ ಕೊಡಬೇಕು. ಆ ಶಕ್ತಿವಿಶೇಷಗಳು ಪರಿಪೂರ್ಣವಾಗಿ ಬೆಳೆದು ಪ್ರಕಾಶಕ್ಕೆ ಬರುವ ರೀತಿ ಯಲ್ಲಿ ಶಿಕ್ಷಣವೀಯಬೇಕು.

**೫. ವೈಯಕ್ತಿಕ ಭಿನ್ನತೆಗಳು :** ಒಂದು ಮಗುವನ್ನು ಇನ್ನೊಂದು ಮಗುವಿನೊಡನೆ ಹೋಲಿಸಿದರೆ ವ್ಯತ್ಯಾಸ ಕಂಡುಬರುತ್ತವೆ. ಒಬ್ಬ ತಾಯ

ಮಕ್ಕಳಾದರೂ ಅನುವಂಶೀಯ ಗುಣಗಳಲ್ಲಿ ಅಷ್ಟಿಷ್ಟು ವ್ಯತ್ಯಾಸ ಇದ್ದೇ ಇರುತ್ತದೆ. ಹೀಗೆ ಭಿನ್ನತೆಯನ್ನು ಪಡೆಯುವುದು ಹುಟ್ಟುಗುಣ. ಜೊತೆಗೆ, ಬೇರೆ ಬೇರೆ ಮಕ್ಕಳು ವಾಸಿಸುವ ಸನ್ನಿವೇಶದಲ್ಲೂ ಭಿನ್ನತೆಯಿರುತ್ತದೆ.

'ತಾಯಿತಂದೆಗಳಂತೆ ಮಕ್ಕಳು' ಎಂದು ಹಿಂದೆ ಹೇಳಿದ ಮಾತು ಸ್ಥೂಲವಾದ ಅರ್ಥದಲ್ಲಿ. ಪ್ರಾಮುಖ್ಯ ಗುಣವಿಶೇಷಗಳೇನೋ ಮಕ್ಕಳಿಗೆ ವಂಶಗತವಾಗಿ ಬಂದರೂ, ಕೆಲವು ಸೂಕ್ಷ್ಮರೀತಿಯ ನೂತನ ಭಿನ್ನತೆಗಳು ಅವರಲ್ಲಿ ಹೊಸದಾಗಿ ಹುಟ್ಟಿಕೊಂಡಿರುತ್ತವೆ. ಈ ಭಿನ್ನತೆಗಳು ಒಬ್ಬೊಬ್ಬರಲ್ಲೂ ಒಂದೊಂದು ರೀತಿಯಿರಬಹುದು. ಒಬ್ಬ ತಾಯಮಕ್ಕಳಲ್ಲೂ ವ್ಯತ್ಯಾಸ ಕಂಡುಬರುವುವು. ಬೇರೆ ಬೇರೆ ತಾಯಿತಂದೆಗಳ ಮಕ್ಕಳನ್ನು ಹೋಲಿಸಿದಾಗ ಈ ವ್ಯತ್ಯಾಸ ಇನ್ನೂ ಪ್ರಧಾನವಾಗಿ ಕಾಣುತ್ತದೆ. ಜೊತೆಗೆ ಮಕ್ಕಳು ವಾಸಿಸುವ ಸನ್ನಿವೇಶದಲ್ಲೂ ಭಿನ್ನತೆಯಿರುತ್ತದೆ. ಶಾಲೆಗೆ ಸೇರುವ ಮುಂಚೆ ಅವರಿಗೆ ದೊರೆತಿರುವ ಆರೋಗ್ಯ ಸೌಕರ್ಯ, ಆಹಾರ, ಶಿಕ್ಷಣ, ನಿದ್ರೆ ಮತ್ತು ತಾಯಿತಂದೆಯರ ಸಹವಾಸ, ಅಕ್ಕ ಅಣ್ಣಂದಿರ ಮಾತುಕತೆ-ಈ ಸನ್ನಿವೇಶಗಳು ಒಬ್ಬೊಬ್ಬ ಮಗುವಿಗೂ ಒಂದೊಂದು ರೀತಿಯಲ್ಲಿದ್ದು ಅವುಗಳಿಂದಾಗಿರುವ ಕೈವಾಡವೂ ಭಿನ್ನವಾಗಿರುತ್ತದೆ. ಮಕ್ಕಳು ಶಾಲೆಗೆ ಬರುವ ಹೊತ್ತಿಗೆ ಅವರಿಗೆ ವಂಶಗತವಾಗಿ ಬಂದಿರುವ ಹಲವು ಭಿನ್ನತೆಗಳ ಜೊತೆಗೆ ಸನ್ನಿವೇಶದಿಂದಲೂ ಭಿನ್ನ ಸಂಸ್ಕರಣವಾಗಿರುತ್ತದೆ.

ಮಕ್ಕಳು ಶಾಲೆಗೆ ಬಂದೊಡನೆ ಅವರ ಈ ಎರಡು ರೀತಿಯ ಭಿನ್ನತೆಗಳನ್ನೂ ಅರಿತುಕೊಳ್ಳುವುದು ಶಿಕ್ಷಕರ ಮೊದಲ ಕೆಲಸ. ಹೆಣ್ಣುಮಕ್ಕಳಿಗೂ ಗಂಡುಮಕ್ಕಳಿಗೂ ಮಾನಸಿಕ ಸ್ವಭಾವದಲ್ಲಿ ಭಿನ್ನತೆಯಿರುತ್ತದೆಯೆಂದು ಹಲವರು ಹೇಳುವರು. ಇನ್ನು ಕೆಲವರು ಅಂಥ ಗಣನೀಯ ವ್ಯತ್ಯಾಸಗಳಿಲ್ಲವೆಂದು ವಾದಿಸುವರು. ಆದರೆ ಇಷ್ಟು ಮಾತ್ರ ನಿಜ: ಗಂಡುಮಕ್ಕಳಲ್ಲೇ ಪರಿಶೀಲಿಸಿದಾಗ ಅವರವರಲ್ಲಿ ಕಂಡುಬರುವಷ್ಟು ಭಿನ್ನತೆ ಹೆಣ್ಣುಮಕ್ಕಳಲ್ಲಿ ತೋರಿಬರುವುದಿಲ್ಲ. ಸರ್ವಸಾಮಾನ್ಯ ಶಕ್ತಿಯುಳ್ಳವರು ಹೆಣ್ಣುಮಕ್ಕಳಲ್ಲಿ ಹೆಚ್ಚು. ಗಂಡುಮಕ್ಕಳಲ್ಲಿ ಅತ್ಯಂತ ದಡ್ಡರೂ ಅತ್ಯಂತ ಮೇಧಾವಿಗಳೂ ಹೆಚ್ಚು. ಜೊತೆಗೆ, ಶಾಲೆಗೆ ಸೇರುವ ಹೊತ್ತಿಗೆ ಹೆಣ್ಣುಮಕ್ಕಳ ಅಭಿರುಚಿ ಆಸಕ್ತಿಗಳೂ ಇನ್ನಿತರ ಹಲವು ವರ್ತನೆಗಳೂ ಭಿನ್ನ ರೀತಿ

ಯಲ್ಲಿ ಬೆಳೆಯಲು ಆರಂಭವಾಗಿರುತ್ತವೆ. ಪ್ರೌಢಾವಸ್ಥೆಯಲ್ಲಿ ಮಾತ್ರ ಹೆಣ್ಣು ಮಕ್ಕಳಿಗೂ ಗಂಡುಮಕ್ಕಳಿಗೂ ಸಂವೇದನೆಗಳಲ್ಲಿ ಮಹತ್ತರವಾದ ಭಿನ್ನ ರೀತಿಯ ಬದಲಾವಣೆ ಆರಂಭವಾಗುತ್ತದೆ.

ಒಬ್ಬೊಬ್ಬರಿಗೂ ವಂಶಗತವಾಗಿ ಬಂದಿರುವ ಮಾನಸಿಕ ಶಕ್ತಿಯ ಪರಿಮಾಣದಲ್ಲೂ ಹೆಚ್ಚು ಕಡಮೆಯಿರುತ್ತದೆ. ಸಮಾಜದಲ್ಲಿ ಅತ್ಯಂತ ಮೇಧಾವಿಗಳ ಸಂಖ್ಯೆಯೂ ಅತ್ಯಂತ ದಡ್ಡರ ಸಂಖ್ಯೆಯೂ ತೀರ ಕಡಮೆ. ಮಧ್ಯ ವರ್ಗದವರೇ ಹೆಚ್ಚು. ಈ ಆಧಾರದಮೇಲೆ ಮಕ್ಕಳನ್ನು ಮೂರು ಪ್ರಧಾನ ಗುಂಪುಗಳಾಗಿ ವಿಂಗಡಿಸಬಹುದು. ಅತ್ಯಂತ ಮೇಧಾವಿಗಳು, ಮಧ್ಯಮ ವರ್ಗದವರು ಮತ್ತು ದಡ್ಡರು. ಒಂದು ಗುಂಪಿನ (ಏಕ ರೀತಿಯಲ್ಲಿ ಸಂಸ್ಕರಣ ಹೊಂದಿರುವ) ಮಕ್ಕಳನ್ನು ಪರಿಶೀಲಿಸಿ, ಅವರ ಬುದ್ಧಿಶಕ್ತಿಯ ಆಧಾರದ ಮೇಲೆ ವಿಂಗಡಿಸಿದಾಗ, ಮಧ್ಯಮ ವರ್ಗದ ಮಕ್ಕಳ ಸಂಖ್ಯೆಯೇ ಅತ್ಯಂತ ಹೆಚ್ಚಾಗಿರುತ್ತದೆ. ಅತ್ಯಂತ ದಡ್ಡರೂ ಅತ್ಯಂತ ಮೇಧಾವಿಗಳೂ ತೀರ ಅಲ್ಪ ಸಂಖ್ಯೆಯಲ್ಲಿರುತ್ತಾರೆ. ಇದು ಪ್ರಕೃತಿಯಲ್ಲಿ ಕಾಣುವ ಇನ್ನಿತರ ಭಿನ್ನತೆಗಳಿಗೂ ಅನ್ವಯಿಸುತ್ತದೆ. ಇದನ್ನು 'ಸಾಮಾನ್ಯ ಪ್ರಸರಣ ನಿಯಮ'ವೆಂದು ಕರೆಯುವರು.

ಹೀಗೆ ಮಕ್ಕಳನ್ನು ಅವರವರಿಗೆ ವಂಶಗತವಾಗಿ ಬಂದಿರುವ ಬುದ್ಧಿಶಕ್ತಿಯ ಆಧಾರದಮೇಲೆ ವಿಂಗಡಿಸುವಾಗ ಬಲು ಎಚ್ಚರಿಕೆಯಿಂದ ಅವರ ಹುಟ್ಟು ಮಾನಸಿಕಶಕ್ತಿಯ ಭಿನ್ನತೆಯಾವುದು, ಸನ್ನಿವೇಶದ ಪ್ರಭಾವದಿಂದಾಗಿರುವ ಭಿನ್ನತೆ ಯಾವುದು ಎಂಬ ಅಂಶಗಳನ್ನು ಪರಿಶೀಲಿಸಬೇಕು. ಹಾಗೆ ವಿಂಗಡಿಸದ ಒಂದೊಂದು ಗುಂಪಿನಲ್ಲೂ ಕೂಡ ಭಿನ್ನ ಮನಶ್ಶಕ್ತಿಯನ್ನು ಪಡೆದವರಿರುತ್ತಾರೆ.

ತರಗತಿಗಳನ್ನು ಏರ್ಪಡಿಸುವಾಗ ಒಂದು ಮಟ್ಟದ ಮನಶ್ಶಕ್ತಿಯವರನ್ನು ಒಂದು ಪಂಗಡವಾಗಿ ಮಾಡುವುದರಿಂದ ಏಕರೀತಿಯ ಶಿಕ್ಷಣವನ್ನು ಕೊಡಲು ಅನುಕೂಲವಾಗುತ್ತದೆಂದು ಹಲವರು ಪ್ರತಿಪಾದಿಸುವರು. ಆ ರೀತಿ ಏರ್ಪಟ್ಟ ತರಗತಿಯ ಎಲ್ಲ ಮಕ್ಕಳೂ ಸುಮಾರು ಏಕಮಟ್ಟದ ಬುದ್ಧಿಶಕ್ತಿಯುಳ್ಳವರಾದ್ದರಿಂದ ಆ ತರಗತಿಗೊಪ್ಪುವ ಶಿಕ್ಷಣವನ್ನು ಕೊಡಲು ಸಾಧ್ಯವಾದರೂ, ಅದು ಉಚಿತವಲ್ಲವೆಂದು ಮತ್ತೆ ಕೆಲವರು ವಾದಿಸುತ್ತಾರೆ.

ಏಕೆಂದರೆ, ದಡ್ಡರಾದವರು ಯಾವುದೋ ಒಂದು ಮಾರ್ಗದಲ್ಲಿ ದಡ್ಡರಾಗಿರಬಹುದು: ಎಲ್ಲ ಮಾರ್ಗದಲ್ಲೂ ಅಲ್ಲ. ವ್ಯಾಕರಣ ಕಲಿಯಲಾರದ ಒಬ್ಬನು ಮರಗೆಲಸದಲ್ಲಿ ಅಭಿರುಚಿ ಪಡೆದಿರಬಹುದು. ಒಂದು ಮಾರ್ಗದಲ್ಲಿ ದಡ್ಡನಾದರೆ ಇನ್ನೊಂದು ರೀತಿಯಲ್ಲಿ ಬುದ್ಧಿಶಕ್ತಿಯಿರುತ್ತದೆ. ಆದರೂ ಅಂಥ ಬಾಲಕರನ್ನೆಲ್ಲ ದಡ್ಡರೆಂದು ಒಂದು ಮೂಲೆಗೊತ್ತುವುದು ಉಚಿತವಲ್ಲ. ಅವರ ಭಿನ್ನರುಚಿಗಳನ್ನು ಹುಡುಕಿ ಅದರ ಆಧಾರದಮೇಲೆ ಅವರಿಗೊಪ್ಪುವ ಶಿಕ್ಷಣ ಕೊಡುವುದು ಮೇಲು.

ಮಕ್ಕಳ ಬಿಂಬಕಲ್ಪನಾ ರೀತಿಯಲ್ಲೂ ಭಿನ್ನತೆ ಕಂಡುಬರಬಹುದು. ಕೆಲವರಿಗೆ ದರ್ಶನ ಬಿಂಬಕಲ್ಪನಾ ಶಕ್ತಿ ಚೆನ್ನಾಗಿದ್ದರೆ ಕೆಲವರಿಗೆ ಶ್ರವಣ ಬಿಂಬಕಲ್ಪನಾ ಶಕ್ತಿ ಹೆಚ್ಚಾಗಿರುತ್ತದೆ; ಕೆಲವರಿಗೆ ಸ್ಥಾವರ ರೂಪದ ಬಿಂಬ ಕಲ್ಪನೆಯಲ್ಲಿ ಚತುರತೆಯಿದ್ದರೆ ಮತ್ತೆ ಕೆಲವರಿಗೆ ಚಲನ ಬಿಂಬಕಲ್ಪನೆಯಲ್ಲಿ ಹೆಚ್ಚಿನ ಚಾತುರ್ಯವಿರುತ್ತದೆ. ಹಾಗೆಯೇ ಸಂವೇದನೆಗಳ ಸ್ವರೂಪದಲ್ಲೂ ವ್ಯತ್ಯಾಸ ಕಂಡುಬರುತ್ತದೆ. ಕೆಲವರು ಆಗ್ರಹದಿಂದಿದ್ದರೆ ಕೆಲವರು ರಸಿಕರು; ಕೆಲವರು ಸಹನೆಯುಳ್ಳವರಾದರೆ ಇನ್ನು ಕೆಲವರು ಉದ್ರೇಕಗೊಳ್ಳುವ ಪ್ರಕೃತಿಯವರು. ಹೀಗೆ ಭಿನ್ನ ರೀತಿಯ ರಸಭಾವವನ್ನು ಮಕ್ಕಳು ಪ್ರದರ್ಶಿಸಬಹುದು. ಏಕರೀತಿಯ ರಸಭಾವವುಳ್ಳವರಲ್ಲೂ ಅದರ ತೀಕ್ಷ್ಣತೆಯಲ್ಲಿ ಹೆಚ್ಚುಕಡಮೆಯಿರಬಹುದು. ಹಾಗೆಯೇ ಮಕ್ಕಳ ವೈಯಕ್ತಿಕ ಮತ್ತು ಸಾಮಾಜಿಕ ವರ್ತನೆಯಲ್ಲೂ ಭಿನ್ನತೆ ಕಂಡುಬರಬಹುದು. ಕೆಲವರು ಸಾಹಸಿಗಳಾದರೆ ಕೆಲವರು ನಾಚಿಕೆಯಿಂದ ಹಿಂಜರಿಯತಕ್ಕವರು; ಕೆಲವರು ತೀವ್ರಗಾಮಿಗಳಾದರೆ ಇನ್ನು ಕೆಲವರು ನಿಧಾನಿಗಳು; ಹೀಗೆಯೇ ಇತರ ಗುಣಗಳಲ್ಲೂ ವರ್ತನೆಗಳಲ್ಲೂ ಭಿನ್ನತೆ ಕಂಡುಬರಬಹುದು.

ಮಕ್ಕಳು ಕಲಿಯುವ ರೀತಿಯಲ್ಲೂ ವ್ಯತ್ಯಾಸವಿದೆ: ಕೆಲವರು ತರಗತಿಯಲ್ಲಿ ಬೋಧಿಸಿದ ಪಾಠಗಳನ್ನು ಚೆನ್ನಾಗಿ ಕಲಿಯಬಲ್ಲರು; ಆದರೆ, ಅವರಿಗೆ ಹೊಸ ರೀತಿಯ ಶಿಕ್ಷಣವನ್ನು ಸ್ವತಂತ್ರವಾಗಿ ಪಡೆಯುವ ಶಕ್ತಿಯಿಲ್ಲದಿರಬಹುದು. ಅಂಥವರು ಕೇವಲ ವಿಷಯವನ್ನು ನೆನಪಿಡಬಲ್ಲ ವಿದ್ಯಾರ್ಥಿಗಳ ಮಾತ್ರ. ಮತ್ತೆ ಕೆಲವರು ಹೇಳಿದ ವಿಷಯಗಳನ್ನು ತಿಳಿದುಕೊಂಡು ಅದರ ಸಾಮಾನ್ಯ ರೂಪುರೇಖೆಗಳನ್ನೂ ತತ್ತ್ವದೃಷ್ಟಿಯನ್ನೂ ಗ್ರಹಿಸಿ ಅದರ

ಆಧಾರದಮೇಲೆ ಹೊಸ ಹೊಸ ಸಮಸ್ಯೆಗಳನ್ನು ಬಿಡಿಸಿಕೊಂಡು ಸ್ವತಂತ್ರವಾಗಿ ಜ್ಞಾನಾರ್ಜನೆ ಮಾಡಬಲ್ಲರು. ಅಂಥವರು ಪ್ರಯೋಗಕುಶಲರು. ಇನ್ನು ಕೆಲವರು ತರಗತಿಯ ಪಾಠಗಳಲ್ಲಿ ಆಸಕ್ತಿಯಿಲ್ಲದೆ ವಿಮುಖರಾಗಿದ್ದರೂ ಪರೀಕ್ಷೆಯಲ್ಲಿ ಯಶಸ್ವಿಯಾಗಬಲ್ಲ ಶಕ್ತಿಯುಳ್ಳವರು; ಅವರಿಗೆ ತರಗತಿಯ ಬೋಧನೆಗಿಂತ ಸ್ವತಂತ್ರವಾಗಿ ಕಲಿಯಬಲ್ಲ ಶಕ್ತಿ ಹೆಚ್ಚು ಸಹಾಯಮಾಡುತ್ತದೆ; ಅಂಥ ಬಾಲಕ ಬಾಲಕಿಯರನ್ನು ಅನೇಕವೇಳೆ ಉಪಾಧ್ಯಾಯರು ದಡ್ಡರೆಂದು ಭಾವಿಸಬೇಕಾಗಿ ಬರಬಹುದು; ಆದರೆ ಸೂಕ್ಷ್ಮವಾಗಿ ವಿಮರ್ಶಿಸಿ ಪರಿಶೀಲಿಸಿದಾಗ ಅವರು ಸ್ವತಂತ್ರವಾಗಿ ಕಲಿಯಬಲ್ಲ ಶಕ್ತಿಯುಳ್ಳವರೆಂಬುದು ಸ್ಥಿರಪಡುತ್ತದೆ. ಹೀಗೆ ಎಲ್ಲ ಮಕ್ಕಳಿಗೂ ವಂಶಗತವಾಗಿ ಬರುವ ಬುದ್ಧಿಯ ಸ್ವರೂಪ ಏಕರೀತಿಯದಾಗಿದ್ದರೂ ಆ ಶಕ್ತಿಯ ಪರಿಮಾಣ, ತೀಕ್ಷ್ಣತೆ ಮತ್ತು ಅಭಿರುಚಿಗಳಲ್ಲಿ ಭಿನ್ನತೆಯಿರುತ್ತದೆ. ಜೊತೆಗೆ, ಒಂದು ವಯಸ್ಸಿನಲ್ಲಿರುವ ಒಬ್ಬರ ಆ ಗುಣವಿಶೇಷಗಳು ಮತ್ತೊಂದು ವಯಸ್ಸಿನಲ್ಲಿ ಹೆಚ್ಚು ಕಡಮೆಯಾಗಬಹುದು. ಆದರಿಂದ ಏಕರೀತಿಯ ಮನಶ್ಶಕ್ತಿಯುಳ್ಳವರನ್ನೇ ಒಮ್ಮೆ ವರ್ಗೀಕರಣ ಮಾಡಿದರೂ, ಅವರ ಬೆಳವಣಿಗೆಯಾದಂತೆ, ವಯಸ್ಸು ಹೆಚ್ಚಿದಂತೆ ಭಿನ್ನತೆ ಮರಳಿ ತಲೆದೋರಬಹುದು.

ಮೇಲಿನ ರೀತಿಯನ್ನನುಸರಿಸಿ ಮಕ್ಕಳನ್ನು ಒಂದು ತರಗತಿಯಲ್ಲಿ ವರ್ಗೀಕರಿಸಿದ್ದರೂ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಅವರು ಒಬ್ಬರನ್ನೊಬ್ಬರು ಹೋಲುವುದೇ ಇಲ್ಲ: ವಿವಿಧ ರೀತಿಯ ಮಾನಸಿಕ ಭಿನ್ನತೆಗಳು ಕಂಡು ಬರುತ್ತವೆ. ಆದರೂ ಉಪಾಧ್ಯಾಯರಿಗೆ ಅವರಲ್ಲಿ ಯಾವ ಭಿನ್ನತೆಯೂ ಸಾಧಾರಣವಾಗಿ ಕಾಣಬರುವುದಿಲ್ಲ: ಎಲ್ಲರೂ ಒಂದೇ ಪಡಿಯಚ್ಚಿನಲ್ಲಿ ಎರಕ ಹೊಯ್ದ ಬೊಂಬೆಗಳಂತಿರುತ್ತಾರೆ. ಉಪಾಧ್ಯಾಯರು ಅವರ ಮಾನಸಿಕ ಶಕ್ತಿಯ ಸ್ವರೂಪ, ತೀಕ್ಷ್ಣತೆ, ಪರಿಮಾಣ, ಮುಂತಾದವನ್ನು ಸೂಕ್ಷ್ಮವಾಗಿ ಪರಿಶೀಲಿಸದಿರುವುದೇ ಇದಕ್ಕೆ ಕಾರಣ. ಆಗ ಎಲ್ಲರನ್ನೂ ಏಕರೀತಿಯಲ್ಲಿ ಭಾವಿಸಿ ಒಂದೇ ವಿಧವಾದ ಶಿಕ್ಷಣ ಕೊಡಲು ಯತ್ನಿಸುವುದು ಸ್ವಭಾವ. ತುಂಬ ಮೇಧಾವಿಯಾದ ಬಾಲಕನಿಗೆ ಒಪ್ಪುವಂತೆ ಪಾಠ ಮಾಡುವಾಗ ಅವನಿಗೆ ಅನುಕೂಲವಾಗಿ ಪರಿಣಮಿಸಿದರೂ ಅದೇ ತರಗತಿಯಲ್ಲಿರುವ ಮಧ್ಯಮ ವರ್ಗದವರ ಮತ್ತು ದಡ್ಡರ ಪಾಡೇನು? ಅಥವಾ ದಡ್ಡರಿಗೆ

ಅನುಕೂಲಿಸುವಂತೆ ಹೇಳಿದರೂ ಮೇಧಾವಿಯಾದ ಬಾಲಕನಿಗೆ ಎಷ್ಟು ಬೇಜಾರಾಗುವುದಿಲ್ಲ? ಸಾಧ್ಯವಾದ ಮಟ್ಟಿಗೂ ಬಾಲಕರನ್ನು ಅವರವರ ಬುದ್ಧಿಶಕ್ತಿಯ ಆಧಾರದಮೇಲೆ ವಿಂಗಡಿಸಿ ವರ್ಗೀಕರಿಸಿಕೊಂಡು ಉಪಾಧ್ಯಾಯರು ಮೇಲಿನ ಸಮಸ್ಯೆಗಳನ್ನು ಬಿಡಿಸಿ ಅನುಕೂಲಪಡಿಸಿಕೊಳ್ಳಬೇಕು. ಅವರು ಭಿನ್ನ ಅಭಿರುಚಿಗಳನ್ನೂ ಗಣನೆಗೆ ತೆಗೆದುಕೊಳ್ಳಬೇಕು: ಯೋಧನಾಗುವ ಅಭಿರುಚಿಯುಳ್ಳ ಬಾಲಕನಿಗೆ ವ್ಯಾಕರಣ ಬೋಧನೆ ವ್ಯರ್ಥವಾಗಿ ಪರಿಣಮಿಸೀತು! ಅವರವರ ಅಭಿರುಚಿ ಆಸಕ್ತಿಗಳನ್ನೂ ಉಪಾಧ್ಯಾಯರು ಅರಿತುಕೊಂಡು ತಮ್ಮ ಶಿಕ್ಷಣವನ್ನು ಅವುಗಳಿಗೂ ಅನುಕೂಲಿಸುವಂತೆ ಮಾರ್ಪಡಿಸಿಕೊಳ್ಳುವುದು ಅಗತ್ಯ. ಹಾಗಾದರೆ, ಮಕ್ಕಳಲ್ಲಿರುವ ಅಂಥ ಬಗೆ ಬಗೆಯ ಭಿನ್ನತೆಗಳನ್ನು ಪರಿಚಯಮಾಡಿಕೊಳ್ಳುವುದು ಹೇಗೆ?

ಮಕ್ಕಳ ಮನಸ್ಸಿನ ವೈವಿಧ್ಯತೆಯನ್ನೂ ಭಿನ್ನತೆಯನ್ನೂ ಅರಿತುಕೊಳ್ಳಬೇಕಾದರೆ ಪ್ರತ್ಯೇಕವಾಗಿ ಪ್ರತಿಯೊಬ್ಬರನ್ನೂ ಸೂಕ್ಷ್ಮವಾಗಿ ಪರೀಕ್ಷಿಸಬೇಕು. ಅಂಥ ಪರೀಕ್ಷೆಯಿಂದ ಅವರವರಿಗೆ ಸಂಬಂಧಪಟ್ಟ ಎಲ್ಲ ಅಂಶಗಳನ್ನೂ ಸಮಗ್ರವಾಗಿ ಅರಿತುಕೊಳ್ಳಬಹುದು. ಹಾಗೆ ವ್ಯಕ್ತಿಗಳನ್ನು ಪರೀಕ್ಷಿಸುವಾಗ ಕೆಳಗೆ ವಿವರಿಸಿರುವ ಮಾರ್ಗವನ್ನು ಅನುಸರಿಸಬಹುದು:

ಮೊದಲು, ಮಗುವಿನ ಪೂರ್ವಿಕರ ಇತಿಹಾಸವನ್ನು ಸಂಗ್ರಹಿಸುವುದು: ಅವರ ಆರೋಗ್ಯ, ಸಮಾಜ ಜೀವನ, ಮನೋಗುಣ, ಬುದ್ಧಿಶಕ್ತಿ, ವಿದ್ಯಾಭ್ಯಾಸ, ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಚರಿತ್ರೆಯನ್ನು ಸಂಗ್ರಹಿಸಬೇಕು.

ಎರಡನೆಯದಾಗಿ, ಮಗುವಿನ ಹಿಂದಿನ ಜೀವನದ ಪರಿಚಯವನ್ನು ಮಾಡಿಕೊಳ್ಳಬೇಕು: ದೈಹಿಕಸ್ಥಿತಿ, ಸಾಮಾಜಿಕ ಮತ್ತು ಸಂವೇದನಾ ಜೀವನ, ಬುದ್ಧಿಶಕ್ತಿಯ ಸ್ವರೂಪ, ಮತ್ತು ದೊರಕಿರುವ ಶಿಕ್ಷಣ—ಇವೆಲ್ಲವನ್ನೂ ಸಂಗ್ರಹಿಸಬೇಕು.

ಮೂರನೆಯದಾಗಿ, ಮಗುವಿನ ಇಂದಿನ ಸ್ಥಿತಿಯನ್ನು ತಿಳಿಯಬೇಕು: ದೈಹಿಕಸ್ಥಿತಿ, ಮನಸ್ಸಿನ ಸ್ವರೂಪ, ಬುದ್ಧಿಶಕ್ತಿಯ ಮಟ್ಟ, ಸಂವೇದನಾ ಜೀವನ ಮತ್ತು ಪಡೆದಿರುವ ಶಿಕ್ಷಣ—ಇವನ್ನು ಪರಿಶೀಲಿಸಿ ತಿಳಿದುಕೊಳ್ಳಬೇಕು.

ಅನಂತರ ಅವರ ಬುದ್ಧಿಶಕ್ತಿಯನ್ನನುಸರಿಸಿ ವರ್ಗೀಕರಿಸಬೇಕು. ಮೇಧಾವಿಗಳು, ಮಧ್ಯಮ ವರ್ಗದವರು, ದಡ್ಡರು, ಅಂಗಹೀನರು, ಬುದ್ಧಿಹೀನರು, ಅಬಲರು, ಉದ್ರೇಕ ಪ್ರವೃತ್ತಿಯವರು—ಈ ಸ್ವಭಾವಾನುಸಾರವಾಗಿ ಅವರನ್ನು ವಿಂಗಡಿಸಿಕೊಳ್ಳಬೇಕು. ಆಗ ಒಬ್ಬೊಬ್ಬ ಬಾಲಕನೂ ಭಿನ್ನ ಪ್ರಕೃತಿಯವನಾಗಿ ತೋರುತ್ತಾನೆ; ಒಬ್ಬೊಬ್ಬ ಬಾಲಕನಿಗೇ ಪ್ರತ್ಯೇಕ ಶಿಕ್ಷಣ ಕೊಡಬೇಕಾಗುತ್ತದೆ. ಸಮಾಜದ ಎಲ್ಲ ವ್ಯಕ್ತಿಗಳೂ ಶಿಕ್ಷಣ ಪಡೆಯಬೇಕೆನ್ನುವ ಈ ಕಾಲದಲ್ಲಿ ಒಬ್ಬೊಬ್ಬ ಬಾಲಕನಿಗೂ ಪ್ರತ್ಯೇಕವಾಗಿ, ಅವನಿಗೊಪ್ಪುವ ಶಿಕ್ಷಣವನ್ನು, ಅವನಿಗೆ ಹಿಡಿಯುವ ರೀತಿಯಲ್ಲಿ ಕೊಡುವುದು ಸಾಧ್ಯವೇ ಎಂಬ ಪ್ರಶ್ನೆ ತಾನಾಗಿಯೇ ಏಳುತ್ತದೆ. ಆದರೂ ಅದನ್ನು ಸಾಧ್ಯವಾಗದ ಕಾರ್ಯವೆಂದು ತಳ್ಳಿಹಾಕುವುದೂ ಉಚಿತವಲ್ಲ. ಎಲ್ಲ ವ್ಯಕ್ತಿಗಳಿಗೂ ಶಿಕ್ಷಣ ಕೊಡಲೇಬೇಕು; ಮೇಲಿನ ರೀತಿಯಲ್ಲೇ ಕೊಡಬೇಕು—ಇವೆರಡು ದೃಷ್ಟಿಗಳನ್ನೂ ಸಮನ್ವಯಗೊಳಿಸಿಕೊಂಡು ಆದಷ್ಟು ಯಶಸ್ವಿಯೂ, ಸರ್ವವ್ಯಾಪಕವೂ ಆದ ಶಿಕ್ಷಣವನ್ನು ಕೊಡುವಂತೆ ಮಾಡುವ ಕಾರ್ಯ ಎಲ್ಲ ಶಿಕ್ಷಣವೇತ್ತರ ಮುಂದೆಯೂ ಇಂದು ನಿಂತಿರುವ ಪ್ರಧಾನ ಸಮಸ್ಯೆ. ಅದು ಇತ್ಯರ್ಥಗೊಂಡು ಸುಗಮವಾಗಿ ಶಿಕ್ಷಣವಾಗುವಂತೆ ಮಾಡುವುದು ಶಿಕ್ಷಕರ ಸಾಹಸ ಸ್ಫೂರ್ತಿಯನ್ನೂ ಕೌಶಲ್ಯವನ್ನೂ ಅವಲಂಬಿಸಿದೆ.

ಸಮಾಜದ ಎಲ್ಲ ವ್ಯಕ್ತಿಗಳಿಗೂ ಶಿಕ್ಷಣ, ಹಾಗೂ ಅವರಿಗೊಪ್ಪುವ ಪ್ರತ್ಯೇಕ ಶಿಕ್ಷಣ ಕೊಡಲು ಸಾಧ್ಯವಾದಾಗ ಶಿಕ್ಷಣರಂಗದಲ್ಲಿ ಹಲವು ಬದಲಾವಣೆಗಳು ಅನಿವಾರ್ಯವಾಗುತ್ತವೆ. ಅವುಗಳಲ್ಲಿ ಕೆಲವು ಶಾಲೆಯ ವ್ಯವಸ್ಥೆಗೆ ಸಂಬಂಧಿಸಿದವು; ಇನ್ನು ಕೆಲವು ಬೋಧನಕ್ರಮಕ್ಕೆ ಸಂಬಂಧಿಸಿದವು.

ಈಗಿರುವ ಪಠ್ಯವಿಷಯದಲ್ಲಿ ಹಲವು ಮಾರ್ಪಾಡುಗಳಾಗಬೇಕು. ಒಂದು ತರಗತಿಯ ಎಲ್ಲ ಬಾಲಕರಿಗೂ ಒಂದೇ ಪಠ್ಯಭಾಗವನ್ನು ಗೊತ್ತುಮಾಡುವ ಬದಲು ಅವರವರ ಮಾನಸಶಕ್ತಿಯನ್ನನುಸರಿಸಿ ನಿಗದಿಮಾಡಬೇಕು. ಹಿಂದೆ ವಿವರಿಸಿರುವಂತೆ ತರಗತಿಯನ್ನು ಮೂರು ಭಾಗ ಮಾಡಿ, ಪ್ರತಿಭಾಶಾಲಿಗಳಾದ ವರ್ಗಕ್ಕೆ ಹೆಚ್ಚಿನ ಪಠ್ಯವಿಷಯವನ್ನೂ, ಮಧ್ಯಮ ವರ್ಗದವರಿಗೆ ಸ್ವಲ್ಪ ಕಡಮೆ ವಿಷಯವನ್ನೂ, ದಡ್ಡರಿಗೆ ತೀರ ಕಡಮೆ ಭಾಗವನ್ನೂ ನಿಯಮಿಸುವುದು ಉತ್ತಮ. ಹೀಗೆ ಮೂರು ಅಂತಸ್ತಿನ ಸಮಾ

ನಾಂತರ ಪಠ್ಯ ವಿಷಯಗಳನ್ನು ಗೊತ್ತುಮಾಡುವುದರಿಂದ ಮೂರು ವಿಧದ ವಿದ್ಯಾರ್ಥಿಗಳಿಗೂ ಬೋಧಿಸಲು ಅನುಕೂಲವಾಗುತ್ತದೆ. ಹೀಗೆಯೆ ಪ್ರಾಥಮಿಕ ಶಿಕ್ಷಣವನ್ನು ಮುಗಿಸುವ ಕಾಲದಲ್ಲೂ ಪರಿಮಾಣದ ವ್ಯತ್ಯಾಸವನ್ನು ಮಾಡಿ ಅವರವರ ಬುದ್ಧಿಶಕ್ತಿಗಳನ್ನನುಸರಿಸಿ ಆಯಾ ಬಾಲಕರು ಶಿಕ್ಷಣ ಪಡೆಯುವಂತೆ ಏರ್ಪಡಿಸಬಹುದು. ಅಮೆರಿಕದವರು ಈ ಕ್ರಮವನ್ನು ಅಲ್ಲಲ್ಲಿ ಆಚರಣೆಗೆ ತಂದಿದ್ದಾರೆ: ಅತ್ಯಂತ ಮೇಧಾವಿಗಳಾದ ವಿದ್ಯಾರ್ಥಿಗಳುಳ್ಳ ತರಗತಿ ನಾಲ್ಕೇ ವರ್ಷದಲ್ಲೂ, ಮಧ್ಯಮ ವರ್ಗದವರು ಐದು ವರ್ಷಗಳಲ್ಲೂ, ತೀರ ದಡ್ಡರಾದವರು ಪೂರ್ತಿ ಆರು ವರ್ಷಗಳಲ್ಲೂ ಪ್ರಾಥಮಿಕ ಶಿಕ್ಷಣವನ್ನು ಮುಗಿಸುವಂತೆ ಏರ್ಪಾಟು ಮಾಡಿರುತ್ತಾರೆ. ಆ ಮೂಲಕ ಭಿನ್ನ ಬುದ್ಧಿಶಕ್ತಿಯುಳ್ಳ ಬಾಲಕರು ಅವರವರ ಶಕ್ತ್ಯಾನುಸಾರ ವೇಗವಾಗಿಯೋ ನಿಧಾನವಾಗಿಯೋ ಶಿಕ್ಷಣವನ್ನ ಮುಗಿಸಲು ಸಾಧ್ಯವಾಗುತ್ತದೆ. ಅದಕ್ಕೊಪ್ಪುವಂತೆ ಪ್ರಾಥಮಿಕ ಶಾಲೆಯ ಪಾಠದ ಹಂಚಿಕೆಯಲ್ಲೂ ವ್ಯತ್ಯಾಸವಾಗಬೇಕು: ಪ್ರಾಥಮಿಕ ಶಾಲೆಗೆ ಗೊತ್ತಾದ ಇಡೀ ಪಠ್ಯ ಭಾಗವನ್ನು ಆರು ವರ್ಷಗಳಲ್ಲಿ ಮುಗಿಸುವ ಹಂಚಿಕೆಯೊಂದೂ, ಐದು ವರ್ಷಗಳಲ್ಲಿ ಮುಗಿಸುವ ಹಂಚಿಕೆ ಇನ್ನೊಂದೂ, ನಾಲ್ಕೇ ವರ್ಷಗಳಲ್ಲಿ ಮುಗಿಸುವ ಹಂಚಿಕೆ ಮತ್ತೊಂದೂ ಸಿದ್ಧವಾಗಬೇಕು.

ಮೇಲೆ ವಿವರಿಸಿದ ಎರಡು ರೀತಿಯ ಮಾರ್ಪಾಡುಗಳೂ ಬಾಲಕರ ಭಿನ್ನ ಮಾನಸಶಕ್ತಿಯನ್ನು ಅನುಸರಿಸಿ ಪ್ರತ್ಯೇಕವೂ ಉಚಿತವೂ ಆದ ಶಿಕ್ಷಣವನ್ನು ಕೊಡಲು ಅನುಕೂಲಿಸುತ್ತವೆ. ತರಗತಿಯ ಬಾಲಕರಲ್ಲಿ ಮೇಧಾವಿಗಳಾದವರು ಒಂದು ವರ್ಷದ ಪಠ್ಯ ಭಾಗವನ್ನು ಅರ್ಧ ವರ್ಷದಲ್ಲೇ ಮುಗಿಸಬಹುದು: ಅಂಥವರು ಅದೇ ತರಗತಿಯಲ್ಲಿ ಕೊಳೆಯುವುದು ಉಚಿತವಲ್ಲ: ಅವರನ್ನು ಅರ್ಧ ವರ್ಷದ ಅಂತ್ಯದಲ್ಲಿ ಪರೀಕ್ಷಿಸಿ ಮುಂದಿನ ತರಗತಿಗೆ ವರ್ಗಾಯಿಸುವ ಅವಕಾಶವಿರಬೇಕು. ಅಂಥ ಅವಕಾಶವಿರುವ ಶಾಲೆಗಳಲ್ಲಿ ಮಧ್ಯ ಕಾಲದಲ್ಲಿ ತೇರ್ಗಡೆಯಾಗಿ ಬಂದ ಹೊಸ ಬಾಲಕರಿಗೂ ಅನುಕೂಲಿಸುವ ರೀತಿಯಲ್ಲಿ ಪಾಠದ ಹಂಚಿಕೆಯನ್ನು ಮೇಲಿನ ತರಗತಿಯಲ್ಲಿ ಮಾಡಿಕೊಂಡಿರಬೇಕು. ಮತ್ತೆ ಕೆಲವು ವಿದ್ಯಾರ್ಥಿಗಳಿಗೆ ಕೆಲ ಕೆಲವು ವಿಷಯಗಳಲ್ಲಿ ಮಾತ್ರ ಜಾಗ್ರತೆಯಾಗಿ ಕಲಿಯುವ ಶಕ್ತಿಯಿರುತ್ತದೆ. ಅಂಥ

ಬಾಲಕರು ಆ ವಿಷಯದಲ್ಲಿ ಮಾತ್ರ ತೇರ್ಗಡೆ ಹೊಂದಿ ಮುಂದಿನ ತರಗತಿಯ ಆ ವಿಷಯವನ್ನು ಅಭ್ಯಾಸಿಸುವುದಕ್ಕೂ ಅನುಕೂಲವಿರಬೇಕು. ಎಂದರೆ, ಒಬ್ಬ ಬಾಲಕನು ಭಾಷೆಯಲ್ಲಿ ಎರಡನೆಯ ತರಗತಿಯಲ್ಲಿರಬಹುದು; ಗಣಿತದಲ್ಲಿ ಮೂರನೆಯ ತರಗತಿಯಲ್ಲಿರಬಹುದು. ಯಾವ ವಿಷಯದಲ್ಲಿ ಅವನಿಗೆ ಹೆಚ್ಚು ಅಭಿರುಚಿಯಿದೆಯೋ ಅದರಲ್ಲಿ ಜಾಗ್ರತೆ ಪ್ರಾವೀಣ್ಯತೆ ಪಡೆಯಲು ಅವಕಾಶವಾಗುತ್ತದೆ. ಆ ವಿಷಯವನ್ನು ಮಾತ್ರ ಪರೀಕ್ಷಿಸಿ ಅದರಲ್ಲಿ ಮಾತ್ರ ತೇರ್ಗಡೆಯನ್ನು ಕೊಡುವುದು ಪ್ರೌಢಶಾಲೆಗಳಲ್ಲಿ ಮಾತ್ರ ಯಶಸ್ವಿಯಾಗುವಂತೆ ಕಾಣುತ್ತದೆ. ಹಾಗೆ ಏರ್ಪಟ್ಟ ಶಾಲೆಗಳಲ್ಲಿ ವೇಳಾ ಪತ್ರಿಕೆಯನ್ನು ಎಚ್ಚರಿಕೆಯಿಂದ ಏರ್ಪಡಿಸಬೇಕು. ಒಂದು ಕಾಲದಲ್ಲಿ ಇಡೀ ಶಾಲೆಯಲ್ಲೆಲ್ಲ ಒಂದೇ ವಿಷಯದ ತರಗತಿಗಳಿರಬೇಕು. ಆಗ ಬಾಲಕರು ತಮ್ಮ ತಮ್ಮ ಶಿಕ್ಷಣಾಭಿವೃದ್ಧಿಯ ಮೇಲೆ ಬೇರೆಬೇರೆ ರೀತಿಯ ತರಗತಿಯಲ್ಲಿ ಕುಳಿತು ಒಂದೇ ವಿಷಯವನ್ನು ಕಲಿಯಲು ಅನುಕೂಲವಾಗುತ್ತದೆ. ಶಾಲೆಯ ವ್ಯವಸ್ಥೆಯಲ್ಲಿ ಮಾಡಬಹುದಾದ ಇಂಥ ಬದಲಾವಣೆಗಳಿಂದ ಎಲ್ಲ ವಿದ್ಯಾರ್ಥಿಗಳಿಗೂ ಪ್ರತ್ಯೇಕ ಗಮನವನ್ನು ಕೊಟ್ಟಂತಾಗುತ್ತದೆ: ಸಾರ್ವತ್ರಿಕ ಶಿಕ್ಷಣವೂ ಆದಂತಾಗುತ್ತದೆ. ಆಗ ಬೋಧನಕ್ರಮದಲ್ಲಿಯೂ ಬದಲಾವಣೆಗಳಾಗುತ್ತವೆ. ಎಲ್ಲರಿಗೂ ಒಂದೇ ವಿಷಯವನ್ನು ಒಂದೇ ರೀತಿಯಲ್ಲಿ ಬೋಧಿಸುವುದರಿಂದ ಹಲವರಿಗೆ ಅನುಕೂಲವಾದರೆ, ಮತ್ತೆ ಕೆಲವರಿಗೆ ಅನಾನುಕೂಲವಾಗುತ್ತದೆ. ಈ ನ್ಯೂನತೆ ತೊಲಗಿ, ಎಲ್ಲ ಬಾಲಕರಿಗೂ ಪ್ರತ್ಯೇಕ ಗಮನ ಕೊಡಲು ಅನುಕೂಲಿಸುವಂತೆ ಡಾಲ್ಟನ್ ಶಿಕ್ಷಣ ಯೋಜನೆ, ವಿನೆಟ್ಕ ಶಿಕ್ಷಣ ಪದ್ಧತಿ, ಮೇಲ್ವಿಚಾರಣೆಯ ಗ್ರಂಥಪಠನೆ, ಮುಂತಾದ ನೂತನ ಶಿಕ್ಷಣ ಪದ್ಧತಿಗಳು ಜಾರಿಗೆ ಬಂದಿವೆ. ಮಕ್ಕಳು ಅವರವರ ಶಕ್ತಿ ಸಾಮರ್ಥ್ಯಗಳಿಗೆ ಅನುಗುಣವಾಗಿ ಶಿಕ್ಷಣವನ್ನು ಪಡೆಯಬಹುದಾದ ರೀತಿಯಲ್ಲಿ ಬೋಧನಕ್ರಮ ಅವುಗಳಲ್ಲಿ ಏರ್ಪಟ್ಟಿದೆ. ಅವರವರು ಪಡೆದಿರುವ ಶಿಕ್ಷಣದ ಮಟ್ಟವನ್ನು ಅವಲಂಬಿಸಿ ಪಾಠಗಳನ್ನು ಕಲಿಯಲು ನಿಗದಿ ಮಾಡುವರು. ಒಬ್ಬೊಬ್ಬರಿಗೂ ಗಮನಕೊಟ್ಟು ಅವರಿಗೆ ಅನುಕೂಲಿಸುವಂತೆ ಪ್ರಶ್ನೆಗಳನ್ನೂ ಸಮಸ್ಯೆಗಳನ್ನೂ ಎಚ್ಚರಿಕೆಯಿಂದ ಹಂಚುವರು. ಪ್ರತ್ಯೇಕ

ವಾಗಿ ಎಲ್ಲ ಬಾಲಕರಿಗೂ ಉಪಾಧ್ಯಾಯರು ಗಮನಕೊಟ್ಟು ಅವರಿಗೆ ಅನುಕೂಲಿಸುವಂತೆ ಬೋಧಿಸುತ್ತಾ ಅವರ ಶಿಕ್ಷಣವನ್ನು ಸಾಧಿಸುವರು.

ಹೀಗೆ ಮಕ್ಕಳ ಭಿನ್ನ ಶಕ್ತಿಸಾಮರ್ಥ್ಯಗಳನ್ನೂ ಅಭಿರುಚಿ ಆಸಕ್ತಿಗಳನ್ನೂ ಅನುಸರಿಸಿ ಶಾಲಾ ವ್ಯವಸ್ಥೆಯನ್ನೂ ಬೋಧನಕ್ರಮವನ್ನೂ ಮಾರ್ಪಡಿಸಿಕೊಳ್ಳುವಾಗ ಪ್ರತಿಯೊಂದು ಮಗುವಿನ ವ್ಯಕ್ತಿ ಪರಿಚಯವೂ ಪೂರ್ಣವಾಗಿ ಶಿಕ್ಷಕರಿಗಿರಬೇಕು. ಯಾರು ಯಾರು ಯಾವ ಯಾವ ಮಾರ್ಗದಲ್ಲಿ ಎಷ್ಟೆಷ್ಟರ ಮಟ್ಟಿನ ಪ್ರಾವೀಣ್ಯತೆ ಪಡೆಯಬೇಕೆಂಬುದು ಅವರ ಮನಸ್ಸಿನಲ್ಲಿ ಮೊದಲೇ ರೂಪುಗೊಳ್ಳಬೇಕು. ಯಾರಿಗೆ ಸಾಂಸ್ಕೃತಿಕ ಶಿಕ್ಷಣದಲ್ಲಿ ಅಭಿರುಚಿಯಿದೆ, ಯಾರಿಗೆ ವೃತ್ತಿಶಿಕ್ಷಣದಲ್ಲಿ ಆಸಕ್ತಿಯಿದೆ ಎಂಬುವೂ ನಿರ್ಧರವಾಗಬೇಕು. ಕೆಲವರು ವೃತ್ತಿಶಿಕ್ಷಣಕ್ಕಿಂತ ಸಾಂಸ್ಕೃತಿಕ ಶಿಕ್ಷಣ ಹೆಚ್ಚು ಗೌರವಯುತವಾದ್ದೆಂದು ಭಾವಿಸಿ ಅಭಿರುಚಿಯಿಲ್ಲದವರಿಗೂ ಆ ಶಿಕ್ಷಣವನ್ನು ಕೊಡಲು ಯತ್ನಿಸುವರು; ಅದು ಫಲಪ್ರದವಲ್ಲ. ಒಂದು ಉತ್ಕೃಷ್ಟವೆಂದಾಗಲಿ, ಇನ್ನೊಂದು ನಿಕೃಷ್ಟವೆಂದಾಗಲಿ ಹೇಳುವಂತಿಲ್ಲ. ಯಾರಿಗೆ ಯಾವುದರಲ್ಲಿ ಅಭಿರುಚಿಯಿದೆಯೋ ಅದೇ ಅವರಿಗೆ ಉತ್ಕೃಷ್ಟವಾದ ಶಿಕ್ಷಣ. ಈ ವಿವೇಚನೆಯಿಲ್ಲದೆ ಎಲ್ಲರೂ ಒಂದೇ ರೀತಿಯ ಶಿಕ್ಷಣ ಪಡೆಯಲೆಳಸುವುದು ಉಚಿತವೂ ಅಲ್ಲ; ಫಲಪ್ರದವೂ ಆಗಲಾರದು. ಸಮಾಜದ ಪುರೋಭಿವೃದ್ಧಿಗೂ ಆ ರೀತಿಯ ಶಿಕ್ಷಣ ನೆರವಾಗಲಾರದು. ಮಕ್ಕಳಲ್ಲೂ ತಾಯಿತಂದೆಗಳಲ್ಲೂ ಈ ಎರಡು ವಿಧದ ಶಿಕ್ಷಣಗಳೂ ಉಪಯುಕ್ತವಾದವೇ ಎಂಬ ಮನೋಭಾವ ಬೆಳೆಯುವಂತಾಗಬೇಕು.

ಮಕ್ಕಳಿಗೆ ವಂಶಗತವಾಗಿ ಬಂದಿರುವ ಶಕ್ತಿಸಾಮರ್ಥ್ಯಗಳ ಭಿನ್ನತೆಯ ಪರಿಚಯ ಅವರ ಯೋಗ್ಯತೆಯನ್ನು ನಿರ್ಧರಿಸುವಾಗಲೂ, ಬಹುಮಾನ ಹಂಚುವಾಗಲೂ ಸಹಾಯವಾಗುತ್ತದೆ: ಒಂದು ತರಗತಿಯಲ್ಲಿ ಹುಟ್ಟು ಮೇಧಾವಿಯೊಬ್ಬನು ಎಪ್ಪತ್ತು ಅಂಕೆಯನ್ನು ತೆಗೆದುಕೊಂಡು ತರಗತಿಯಲ್ಲಿ ಪ್ರಥಮ ಸ್ಥಾನ ಪಡೆದರೆ ಅವನೇ ಪ್ರಶಂಸೆಗೆ ಅರ್ಹನಾಗುವ ಸಂಪ್ರದಾಯ ಎಲ್ಲ ಕಡೆಯೂ ಇದೆ. ಅದೇ ತರಗತಿಯ ದಡ್ಡನೊಬ್ಬನು ಅರವತ್ತು ಅಂಕೆ ತೆಗೆದುಕೊಂಡರೂ ಗಣನೆಗೇ ಬರುವಂತಿಲ್ಲ. ಇದು ಉಚಿತವಲ್ಲ. ಬುದ್ಧಿ

ಶಾಲೆಯಾದ ಬಾಲಕ ಎಪ್ಪತ್ತು ತೆಗೆದುಕೊಳ್ಳುವುದಕ್ಕಿಂತ ದಡ್ಡ ಅರವತ್ತು ತೆಗೆದುಕೊಳ್ಳುವುದೇ ಹೆಚ್ಚು ಪ್ರಶಂಸಾರ್ಹವಾದುದು. ಅದರಿಂದ ಹುಟ್ಟು ಬುದ್ಧಿಶಕ್ತಿಯ ಜೊತೆಗೆ ಅವರ ಉದ್ಯೋಗಶೀಲತೆಯನ್ನೂ ಗಣನೆಗೆ ತೆಗೆದುಕೊಂಡಂತಾಗುತ್ತದೆ. ಈ ಗಣನೆಯ ಮೇರೆಗೇ ಅವರ ಶಿಕ್ಷಣಾಭಿವೃದ್ಧಿಯನ್ನೂ ಅಳೆಯಬೇಕು; ತೇರ್ಗಡೆಯನ್ನೂ ಮಾಡಿಸಬೇಕು; ಮತ್ತು ಬಹುಮಾನಗಳನ್ನೂ ಹಂಚಬೇಕು. ಅಂಥ ಸಂಪ್ರದಾಯ ನಮ್ಮ ಶಿಕ್ಷಣ ರಂಗದಲ್ಲಿ ಆರಂಭವಾದರೆ ಸಾಮಾನ್ಯ ದರ್ಜೆಯ ವಿದ್ಯಾರ್ಥಿಗಳನೇಕರಿಗೆ ಉತ್ತೇಜನಕೊಟ್ಟಂತಾಗುತ್ತದೆ.

ಮಕ್ಕಳ ಮಾನಸ ಸಂವೇದನೆಗಳ ತೀಕ್ಷ್ಣದೆಸೆಯಲ್ಲೂ ಭಿನ್ನತೆಯಿರುವುದರಿಂದ ಶಾಲಾ ನಿಯಮಗಳಿಗೂ ಶಿಸ್ತುಗಳಿಗೂ ತಲೆಬಾಗಿ ಎಲ್ಲ ಬಾಲಕರೂ ಏಕರೀತಿಯಲ್ಲಿ ವರ್ತಿಸಲಾರರು; ಹಾಗೆ ಆಶಿಸುವುದೂ ಸರಿಯಲ್ಲ. ಹಲವರಲ್ಲಿ ಕಂಡುಬರುವ ವಿರೂಪ ವರ್ತನೆಗೆ ಅವರನ್ನು ಅವಿಧೇಯರೆಂದು ಶಿಕ್ಷಿಸಲು ಯತ್ನಿಸುವುದೂ ವಿವೇಕವಲ್ಲ. ಅದಕ್ಕೆ ಮೂಲಭೂತವಾದ ಅವರ ಸಂವೇದನಾ ಜೀವನವನ್ನು ಉಚಿತ ಮಾರ್ಗದಲ್ಲಿ ರೂಪಿಸಲು ಯತ್ನಿಸುವುದು ಅಗತ್ಯ. ಈ ದೃಷ್ಟಿಯಿಂದಲೇ ಶಾಲೆಯಲ್ಲಿ ಶಿಸ್ತನ್ನು ಕಾಪಾಡುವ ಕ್ರಮ ಏರ್ಪಡಬೇಕು.

ಹೀಗೆ ಮಕ್ಕಳ ಭಿನ್ನ ರೀತಿಯ ದೈಹಿಕ ಮತ್ತು ಮಾನಸಿಕ ಪ್ರಕೃತಿಗಳನ್ನೂ, ಅಭಿರುಚಿ ಆಸಕ್ತಿಗಳನ್ನೂ, ಸಂವೇದನಾ ಪ್ರತಿಕ್ರಿಯೆಗಳನ್ನೂ ಅನುಸರಿಸಿ ಶಿಕ್ಷಣರಂಗದ ಯೋಜನೆ, ಶಾಲೆಯ ವ್ಯವಸ್ಥೆ, ಪಠ್ಯ ವಿಷಯಗಳ ನಿಗದಿ, ಬೋಧನಕ್ರಮಗಳ ಅನುಸರಣೆ, ಮುಂತಾದವುಗಳನ್ನು ಆಚರಣೆಗೆ ತರುವುದರಿಂದ ಎಲ್ಲ ಮಕ್ಕಳಲ್ಲೂ ಅವರವರಿಗೆ ಪ್ರಕೃತಿದತ್ತವಾಗಿ ಬಂದಿರುವ ಶಕ್ತಿಸಾಮರ್ಥ್ಯಗಳೂ ಅಭಿರುಚಿ ಆಸಕ್ತಿಗಳೂ ಪೂರ್ಣವಾಗಿ ಬೆಳೆಯಬಲ್ಲವು. ಅಂಥ ಶಿಕ್ಷಣದಿಂದ ವ್ಯಕ್ತಿಗೂ ಅನುಕೂಲವಾಗುವುದು; ಅವನಿಂದ ಸಮಾಜಕ್ಕೂ ಉತ್ತಮೋತ್ತಮ ಕಾಣಿಕೆ ಸಲ್ಲಲು ಅವಕಾಶವಾಗುವುದು; ದಡ್ಡರನ್ನು ಪ್ರತಿಭಾಶಾಲಿಗಳೊಡನೆ ನೂಕಬೇಕಾಗುವ ಪ್ರಸಂಗವೂ ತಪ್ಪುವುದು; ಪ್ರತಿಭಾಶಾಲಿಗಳು ದಡ್ಡರೊಡನೆ ಕುಂಟುತ್ತ ನಡೆಯುವ ಬೇಸರವೂ

ನಿಲ್ಲುವುದು. ಅಂಥ ಶಿಕ್ಷಣದಿಂದ ಭಗವಂತನ ಎಲ್ಲ ಮಕ್ಕಳೂ ಅವರವರು ಪಡೆದುಕೊಂಡು ಬಂದಿರುವ ದೈಹಿಕ ಮತ್ತು ಮಾನಸಿಕ ಸಂಪತ್ತನ್ನು ಅವರವರಿಗೊಪ್ಪುವಂತೆ ಪೋಷಿಸಿ, ಬೆಳಸಿಕೊಳ್ಳಬಹುದು. ಆ ಮೂಲಕ ಎಲ್ಲರಿಗೂ ಸಮಾನಸ್ಥಾನವಿದ್ದು ಪ್ರಜಾಸತ್ತಾತ್ಮಕ ಸಮಾಜ ಜೀವನವೂ ರೂಪುಗೊಳ್ಳುವುದು.

# ೬. ಮಕ್ಕಳ ಬೆಳವಣಿಗೆಯ ಮುಖ್ಯವಾದ ಅಂತಸ್ತುಗಳು

ಮಕ್ಕಳಿಗೆ ವಂಶಗತವಾಗಿ ಬರುವ ಹುಟ್ಟುಗುಣ, ಸಂವೇದನೆ, ಬುದ್ಧಿ ಶಕ್ತಿ, ಅಭಿರುಚಿ, ಆಸಕ್ತಿ, ಮುಂತಾದವನ್ನು ಸಂಸ್ಕರಿಸಿ ಅವರ ವ್ಯಕ್ತಿತ್ವ ವಿಕಸಿಸುವಂತೆ ಮಾಡುವುದು ಶಿಕ್ಷಣದ ಕಾರ್ಯವೆಂದು ಹಿಂದಿನ ಅಧ್ಯಾಯ ದಲ್ಲಿ ವಿವರಿಸಿರುತ್ತೇವೆ. ಆ ಮೂಲವಸ್ತುಗಳು ಕಾರ್ಯಪ್ರವರ್ತವಾಗುವಂತೆ ಉಚಿತವೆನಿಸುವ ಸನ್ನಿವೇಶಗಳನ್ನು ಒದಗಿಸುವುದಕ್ಕಾಗಿಯೇ ಶಾಲೆಗಳು ಏರ್ಪಟ್ಟಿರುವುದು. ಮಕ್ಕಳ ವಯೋಗುಣಗಳನ್ನನುಸರಿಸಿ ಆಯಾ ಕಾಲಕ್ಕೆ ಒಪ್ಪತಕ್ಕ ಚಟುವಟಿಕೆಯ ಸನ್ನಿವೇಶಗಳನ್ನು ಒದಗಿಸಬೇಕು. ಎಂದರೆ, ಮಕ್ಕಳ ಬೇರೆ ಬೇರೆ ವಯಸ್ಸಿಗೆ ಅನುಕೂಲಿಸುವಂಥ ಪಠ್ಯ ವಸ್ತುವೂ ಶಿಕ್ಷಣ ಸಂಸ್ಥೆಗಳೂ ಅಗತ್ಯ. ಮಕ್ಕಳು ವಯಸ್ಸಿನಲ್ಲಿ ಮುಂದುವರಿದಂತೆ ಅವರವರ ಗುಣಕ್ಕೆ ಒಪ್ಪುವ ಹೆಚ್ಚಿನ ಶಿಕ್ಷಣವನ್ನೂ ಕೊಡುವಂಥ ಪಠ್ಯ ವಸ್ತುವೂ ಶಾಲೆಗಳೂ ಏರ್ಪಡಬೇಕು. ಒಂದೊಂದು ಕಾಲದ ವಯೋಗುಣವನ್ನನುಸರಿಸಿ ಏರ್ಪಟ್ಟಿರುವ ಶಾಲೆಗಳಲ್ಲಿ ಅದಕ್ಕೊಪ್ಪುವ ಬೋಧನಕ್ರಮವೂ, ಶಾಲೆಯ ಶಿಸ್ತು, ಸಂವಿಧಾನ ಮತ್ತು ವ್ಯವಸ್ಥೆಗಳೂ ಅನಿವಾರ್ಯ. ಅದ ರಿಂದಲೇ ಆಧುನಿಕ ಶಿಕ್ಷಣಶಾಸ್ತ್ರದಲ್ಲಿ ಮಕ್ಕಳ ಬೆಳವಣಿಗೆಯ ಬೇರೆ ಬೇರೆ ಅಂತಸ್ತುಗಳ ವಯೋಗುಣಗಳ ಪರಿಚಯಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿದೆ.

ಮಕ್ಕಳ ಬೆಳವಣಿಗೆಯನ್ನು ಮೂರು ಮುಖ್ಯ ಘಟ್ಟಗಳನ್ನಾಗಿ ವಿಭಾಗಿಸಬಹುದು: ೬ನೆಯ ವರ್ಷದವರೆಗೆ ಶೈಶವಾವಸ್ಥೆ; ೬ರಿಂದ ೧೨ನೆಯ ವರ್ಷದವರೆಗೆ ಬಾಲ್ಯಾವಸ್ಥೆ; ೧೨ರಿಂದ ೧೮ರ ವರೆಗೆ ಪ್ರೌಢಾವಸ್ಥೆ; ಈ ಅಂತಸ್ತುಗಳನ್ನು ಪುನಃ ಉಪಭಾಗಗಳನ್ನಾಗಿಯೂ ವಿಂಗಡಿಸಬಹುದು. ಅವುಗಳಲ್ಲಿ ಅವಶ್ಯಕವೆನಿಸತಕ್ಕವನ್ನು ಕೆಳಗೆ ವಿವರಿಸಲಾಗಿದೆ.

**೧. ಶೈಶವಾವಸ್ಥೆ : (ಕ) ಮೊದಲನೆಯ ವರ್ಷ : ಶಿಕ್ಷಣ**

ದೃಷ್ಟಿಯಿಂದ ಇದು ಅಷ್ಟು ಪ್ರಧಾನವಲ್ಲ; ಆದರೂ ವರ್ಷದ ಅಂತ್ಯದೊಳಗಾಗಿ ಅನೇಕ ಮಾನವೇತರ ಪ್ರಾಣಿಗಳಿಗಿಂತ ಶಿಶುಗಳು ಹೆಚ್ಚಿನ ಶಿಕ್ಷಣವನ್ನು ಪಡೆಯುತ್ತವೆ. ದೈಹಿಕ ಭಾಗಗಳು ಶೀಘ್ರವಾಗಿ ವೃದ್ಧಿಹೊಂದುತ್ತಿರುತ್ತವೆ; ತೂಕದಲ್ಲೂ ಎತ್ತರದಲ್ಲೂ ಮುಂದೆ ಎಂದೂ ಹೆಚ್ಚದಷ್ಟು ವೇಗವಾಗಿ ಬೆಳೆಯುತ್ತವೆ. ಎದೆ ವಿಸ್ತರಿಸಿ ಹೃದಯದ ಚಲನೆ ಅತಿ ವೇಗವಾಗಿರುತ್ತದೆ; ಮೆದುಳೂ ಬೆಳೆಯುತ್ತಿರುತ್ತದೆ. ಆಗ ಮಕ್ಕಳ ಹಸ್ತಪಾಟವ ತೀರ ಅಪಕ್ವವಾಗಿರುತ್ತದೆ; ಕೈಗಳಿಗೆ ವಸ್ತುಗಳನ್ನು ಹಿಡಿಯುವ, ಮುಟ್ಟಿ ಆಡಿಸುವ ಶಕ್ತಿಯಿರುವುದಿಲ್ಲ; ಆ ವರ್ಷದ ಕೊನೆಕೊನೆಗೆ ಅದು ಸಾಧಾರಣವಾಗಿ ಬರುತ್ತದೆ. ಮೊದಮೊದಲು, ಕಂಡ ವಸ್ತುಗಳನ್ನು ಕೈಯಿಂದ ಮುಟ್ಟುವುದೂ, ಅನಂತರ ಬೆರಳಿನಿಂದ ಹಿಡಿಯುವುದೂ ಆರಂಭವಾಗುತ್ತವೆ; ಅವುಗಳ ವೈಶಿಷ್ಟ್ಯವಾಗಲಿ, ದೂರವಾಗಲಿ ತಿಳಿಯುವಂತಿಲ್ಲ; ಚಂದ್ರನನ್ನೂ ಹಿಡಿಯಲು ಕೈನೀಡುತ್ತವೆ; ಹಾಲಿನ ಸೀಸೆಗೆ ಹೇಗೋ ಹಾಗೆ ದೀಪದ ಉರಿಗೂ ಕೈಯೊಡ್ಡುತ್ತವೆ. ಇಂಥ ಅರ್ಥವಿಹೀನ ಕ್ರಿಯೆಗಳು ಕ್ರಮಕ್ರಮವಾಗಿ ಪಳಗಿ, ಉದ್ದೇಶಿಸಿದಂತೆ ಹಿಡಿಯುವುದು, ಗುಣ ಮತ್ತು ದೂರಗಳನ್ನು ಅರಿಯುವುದು ಸಾಧ್ಯವಾಗುತ್ತವೆ. ಕಾರ್ಯಕಾರಣ ಜ್ಞಾನವೂ ಇರುವುದಿಲ್ಲ; ಬೆಂಕಿ ಮುಟ್ಟಿದರೆ ಸುಡುತ್ತದೆಯೆಂಬುದು ಗೊತ್ತಿಲ್ಲ. ಒಮ್ಮೆ ಮುಟ್ಟಿ ಸುಟ್ಟರೂ ಪುನಃ ಹಿಡಿಯಲು ಯತ್ನಿಸುತ್ತವೆ. ಕ್ರಮ ಕ್ರಮವಾಗಿ ಬೆಂಕಿ ಮುಟ್ಟಿದರೆ ಸುಡುವುದೆಂಬ ಜ್ಞಾನ ಬರುತ್ತದೆ. ಹಾಗೆಯೇ ಬಿಸಿ ಹಾಲನ್ನು ಕುಡಿಯುವುದೂ ಕೂಡ. ಇದು ಮಕ್ಕಳ ಅಸಹಾಯತನದ ಕಾಲ. ಆಗ ಅವರ ಆಹಾರ, ಆರೋಗ್ಯ, ನೈರ್ಮಲ್ಯ, ಮುಂತಾದ ಆವಶ್ಯಕತೆಗಳ ಕಡೆ ತುಂಬ ಗಮನಕೊಡಬೇಕು. ವೃದ್ಧಿಯಾಗುತ್ತಿರುವ ಅವರ ದೇಹಾರೋಗ್ಯಕ್ಕೆ ಉಚಿತವಾದ ಆಹಾರ ಮತ್ತು ಬಟ್ಟೆಗಳನ್ನು ಒದಗಿಸಬೇಕು. ಮಗುವಿನ ಸಂವೇದನೆಗಳ ಕಡೆ ಎಚ್ಚರಿಕೆಯಿಂದಿರಬೇಕು. ಅನಾವಶ್ಯಕವಾಗಿ ರೇಗಿಸುವುದು, ಹೆದರಿಸುವುದು ಮತ್ತು ಉದ್ರೇಕಗೊಳಿಸುವುದು ಅಪಾಯಕರ.

**(ಖ) ೧ನೆಯ ವರ್ಷದಿಂದ ಮೂರನೆಯ ವರ್ಷದವರೆಗೆ:** ಮೊದಲ ವರ್ಷ ಮಕ್ಕಳಿಗೆ ಜಗತ್ತು ಅರ್ಥವಾಗುವಂತಿಲ್ಲ. ತಮ್ಮಷ್ಟಕ್ಕೆ

ತಾವು ಇರುತ್ತವೆ. ಇನ್ನುಮುಂದೆ ಇತರರಲ್ಲಿ ಸ್ವಲ್ಪ ಆಸಕ್ತಿ ಬರುತ್ತದೆ. ಅವರು ಮಾಡುವ ಕೆಲಸವನ್ನೂ ಆಡುವ ಮಾತನ್ನೂ ಅನುಕರಿಸಲು ಯತ್ನಿಸುತ್ತವೆ; ತಾವೂ ಇತರರಂತೆಯೇ ಎಂದು ತಿಳಿದು ಅವರಂತೆ ವರ್ತಿಸಲು ಮೊದಲುಮಾಡುತ್ತವೆ; ಮೊದಮೊದಲು ಪದಾರ್ಥಗಳಿಗೂ, ಪ್ರಾಣಿಗಳಿಗೂ, ಮಾನವರಿಗೂ ವ್ಯತ್ಯಾಸ ಕಂಡುಬರುವುದಿಲ್ಲ; ವಸ್ತುಗಳನ್ನೂ ಮಾತಾಡಿಸಲು ಯತ್ನಿಸುತ್ತವೆ. ಅವು ಮಾತಾಡದಿರುವುದನ್ನು ಕಂಡು ಅವನ್ನು ಮನಸ್ಸಿನಲ್ಲೇ ದೂಷಿಸಲೂ ಬಹುದು. ಆದರೆ ಈ ಕಾಲದ ಕೊನೆ ಕೊನೆಗೆ ಪ್ರಾಣಿಗಳನ್ನೂ, ನಿರ್ಜೀವ ವಸ್ತುಗಳನ್ನೂ, ಮಾನವರನ್ನೂ ಗುರುತಿಸುವ ಶಕ್ತಿ ಬರುತ್ತದೆ; ಒಬ್ಬೊಬ್ಬರನ್ನೂ ಗುರುತಿಸುವುದೂ ಆರಂಭವಾಗುತ್ತದೆ. ಅನಂತರ ಒಬ್ಬ ವ್ಯಕ್ತಿಯೇ ಬೇರೆ ಬೇರೆ ಸಮಯದಲ್ಲಿ ಬೇರೆ ಬೇರೆ ರೀತಿಯಲ್ಲಿ ವರ್ತಿಸುವನೆಂಬುದನ್ನೂ ಪರಿಚಯ ಮಾಡಿಕೊಳ್ಳುತ್ತವೆ. ಅಂಬೆಗಾಲಿಂದ ಚಲಿಸುವುದೂ, ದೊಡ್ಡವರು ಸಿಕ್ಕಿದರೆ ಅವರನ್ನು ತಬ್ಬಿ ಹತ್ತುವುದೂ, ಆಮೇಲೆ ಗೋಡೆ, ಬಾಗಿಲು ಹಿಡಿದು ನಿಲ್ಲುವುದೂ, ನಡೆಯುವುದೂ ಮೊದಲಾಗುತ್ತವೆ. ಪದಾರ್ಥಗಳನ್ನು ಹಿಡಿಯುವುದು, ತಿರುಗಿಸುವುದು ಮುಟ್ಟಿ ನೋಡಿ ಅವುಗಳ ವಿಷಯವನ್ನು ತಿಳಿದುಕೊಳ್ಳುವುದು ಸಾಧ್ಯವಾಗುತ್ತವೆ. ಇದು ನಮಗೆ ಆಶ್ಚರ್ಯವಾದರೂ ಮಕ್ಕಳಿಗೆ ನಿಜವಾದ ಸಂಶೋಧನ ಕಾರ್ಯ! ಈ ಕಾಲದ ಮಕ್ಕಳ ಇನ್ನೊಂದು ಪ್ರಧಾನ ಗುಣವೆಂದರೆ ಅನುಕರಣ ಶಕ್ತಿ. ಕೆಲಸ ಮಾಡುತ್ತಿರುವ ದೊಡ್ಡವರನ್ನು ದುರುಗುಟ್ಟಿಕೊಂಡು ನೋಡುತ್ತವೆ; ಮಾತನಾಡುವವರ ಕಡೆಗೇ ಕಿವಿಗೊಟ್ಟು ಕೇಳುತ್ತವೆ. ಅವರ ನಡೆನುಡಿಗಳನ್ನು ಅನುಕರಣ ಮಾಡುವುದಕ್ಕಾಗಿಯೇ ಹಾಗೆ ಮಾಡುವುದು. ದೊಡ್ಡವರಿಗೆ ಬೇರೆ ಬೇರೆ ಕಾಲದಲ್ಲಿ ಸಂತೋಷ, ಜಿಗುಪ್ಸೆ, ವ್ಯಸನ, ಮುಂತಾದ ಬೇರೆ ಬೇರೆ ಮನೋಭಾವಗಳಿರುವುದೂ ಗೊತ್ತಾಗುತ್ತದೆ. ಏನಾದರೂ ಕೆಲಸಮಾಡಿ ದೊಡ್ಡವರನ್ನು ನಗಿಸಲು, ತೃಪ್ತಿಪಡಿಸಲು, ತಮ್ಮ ಕಡೆ ಗಮನ ಸೆಳೆಯಲು ಪ್ರಯತ್ನಿಸುತ್ತವೆ. ನಾಚಿಕೆ ಮತ್ತು ಉತ್ಸಾಹಗಳೂ ಮನಸ್ಸಿನಲ್ಲಿ ಕಾರ್ಯಪ್ರವರ್ತವಾಗುವುವು. ಇತರರನ್ನು ಮೆಚ್ಚಿಸಲು ಸುಳ್ಳನ್ನೂ ಹೇಳುತ್ತವೆ. ಮಕ್ಕಳ ಈ ಮನೋಗುಣವನ್ನರಿಯದೆ ಆಗ ಅವರನ್ನು ಖಂಡಿ

ಸಲು ಯತ್ನಿಸಬಾರದು. ಆದರಿಂದ ಅವರು ಹಿಂಜರಿಯುವ ಮತ್ತು ಉತ್ಸಾಹ ಗುಂದುವ ಸ್ವಭಾವದವರಾಗುವರು. ಇತರರನ್ನು ಒಲಿಸಲು ಮಕ್ಕಳು ಏನೇನನ್ನೋ ಮಾಡುತ್ತಿರುತ್ತವೆ. ಅವರನ್ನು 'ನೀನು ತುಂಬ ಒಳ್ಳೆಯ ಮಗು!' ಎಂದುಬಿಟ್ಟರೆ ಅವರಿಗೆ ಬಲು ಸಂತೋಷ. ಅವರನ್ನು ಆ ಮೂಲಕ ಒಳ್ಳೆಯ ನಡತೆಗೆ ಪ್ರೋತ್ಸಾಹಿಸಬಹುದು. ಇತರ ವ್ಯಕ್ತಿಗಳಂತೆ ತಮಗೂ ಬೇರೆ ಬೇರೆ ಮನೋಭಾವಗಳಿರುವುದು ಪರಿಚಯಕ್ಕೆ ಬಂದಂತೆ ತಮ್ಮ ಆ ಬೇರೆ ಬೇರೆ ಮನೋಭಾವಗಳನ್ನೂ ಪ್ರದರ್ಶಿಸಿ ಇತರರನ್ನು ಮೆಚ್ಚಿಸಲು ಯತ್ನಿಸುತ್ತವೆ. ಮಾನವರ ಗುಣಗಳನ್ನು ಅರಿತಂತೆ ಪದಾರ್ಥಗಳ ಗುಣಗಳನ್ನೂ ಅರಿಯಲು ಯತ್ನಿಸುತ್ತವೆ: ಅವನ್ನು ಹಿಡಿಯುವುದು, ಬಡಿಯುವುದು, ಕಲಸುವುದು, ಚೆಲ್ಲುವುದು, ಮುಂತಾದ ವಿಧವಿಧವಾದ ಪ್ರಯೋಗಗಳನ್ನು ನಡಸುತ್ತವೆ. ಅವುಗಳ ಕಾಠಿನ್ಯ, ಮಾರ್ದವ, ಮುಂತಾದ ಗುಣಗಳನ್ನು ಅರಿಯುತ್ತವೆ. ಎಲ್ಲವೂ ಅವಕ್ಕೆ ಆಟ. ಆದರೆ ಆ ಮೂಲಕ ಬೇಕಾದಷ್ಟು ಜ್ಞಾನಾರ್ಜನೆ ಮಾಡುತ್ತವೆ. ಎಷ್ಟು ಹೊತ್ತಾದರೂ ಬೇಸರವಿಲ್ಲದೆ ಪದಾರ್ಥಗಳನ್ನು ಪರಿಶೀಲಿಸುತ್ತವೆ. ಎರಡನೆಯ ವರ್ಷದಿಂದ ಭಾಷೆಯಲ್ಲೂ ಆಸಕ್ತಿ ಹುಟ್ಟುತ್ತದೆ. ಪದಗಳನ್ನು ಇತರರಿಂದ ಕೇಳುವುದು, ಅವನ್ನು ತಾವೇ ಆಡಿಕೊಳ್ಳುವುದು—ಕಂಡುಬರುತ್ತವೆ. ಇತರರೊಡನೆ ಕ್ರಮಕ್ರಮವಾಗಿ ಅವನ್ನು ಬಿಡಿಬಿಡಿಯಾಗಿ ಆಡುವುದೂ, ಆಮೇಲೆ ಅನೇಕ ಪದಗಳನ್ನು ಅರ್ಥ ಸೂಚಿಸುವಂತೆ ಹೇಳುವುದೂ ಬರುತ್ತವೆ. ಮಾತಾಡುವುದು ರೂಪುಗೊಂಡಂತೆ ಹೆಚ್ಚು ಹೆಚ್ಚು ಪದಗಳನ್ನು ಕಲಿತಂತೆ ಪ್ರಶ್ನೆಹಾಕುವುದಕ್ಕೆ ಆರಂಭಿಸುತ್ತವೆ. ಸುತ್ತ ಕಾಣುವ ಜಗತ್ತಿನ ವಿಷಯಗಳನ್ನು ಕುತೂಹಲದಿಂದ ಕೇಳುತ್ತವೆ. ಈ ಪ್ರಶ್ನೆಗಳಿಂದ ಬಹುವಾಗಿ ಶಿಕ್ಷಣ ಪಡೆಯಬಲ್ಲವು. ಕಲ್ಪನಾ ಶಕ್ತಿಯೂ ಹೆಚ್ಚುತ್ತದೆ; ನೋಡಿದ ದೊಡ್ಡವರ ಕೆಲಸವನ್ನು ಮಾಡಲು ಯತ್ನಿಸುತ್ತವೆ. ಮರಳಲ್ಲಿ ಗುಹೆ ಕಟ್ಟುತ್ತವೆ. ಕೋಲನ್ನೇ ಕುದುರೆಯೆಂದು ಸವಾರಿಮಾಡುತ್ತವೆ. ಎಲ್ಲವೂ ಅವರ ಕಲ್ಪನೆಯ ರಾಜ್ಯದಲ್ಲಿ ನಿಜವೆಂದೇ ತೋರುತ್ತದೆ. ಈ ಕಾಲದ ಕೊನೆ ಕೊನೆಗೆ ತಾವೂ ಕುಟುಂಬದ ವ್ಯಕ್ತಿಗಳೆಂಬ ಭಾವ ಬರುತ್ತದೆ. ಇತರರು ತಮ್ಮ ಆಟಗಳನ್ನೂ ನಡೆನುಡಿಗಳನ್ನೂ ನೋಡುತ್ತಾರೆ ಎಂಬುದೂ ಗೊತ್ತಾಗುತ್ತದೆ. ಅವರು ಮೆಚ್ಚುವ ತೆರದಲ್ಲಿ

ನಡೆಯಬೇಕೆಂಬ ಆಸಕ್ತಿಯೂ ಬಂದು ಅದರಂತೆ ನಡೆಯಲೂ ಯತ್ನಿಸುತ್ತವೆ.

**(ಗ) ೩ರಿಂದ ೬ ವರ್ಷದವರೆಗೆ:** ಈ ಕಾಲದಲ್ಲಿ ಮಕ್ಕಳ ಬಗೆ ಬಗೆಯ ಆಸಕ್ತಿಗಳು ಹೊರಸೂಸುತ್ತವೆ; ಮನೋಭಾವವನ್ನು ವ್ಯಕ್ತಪಡಿಸುವ ಆಸಕ್ತಿ, ಪದಾರ್ಥ ಪರಿಶೀಲನಾಸಕ್ತಿ, ಭಾಷಾ ಜ್ಞಾನದ ಆಸಕ್ತಿ, ಅಭಿನಯ ಮತ್ತು ಕಲ್ಪನೆಗಳ ಆಸಕ್ತಿ, ಪ್ರಶ್ನಿಸುವ ಆಸಕ್ತಿ, ತಾನು ಮಾಡುವುದರಲ್ಲಿ, ಕೇಳುವುದರಲ್ಲಿ ಆಸಕ್ತಿ ಮತ್ತು ಸಮಾಜ ಜೀವನದಲ್ಲಿ ಆಸಕ್ತಿ—ಇವೇ ಮೊದಲಾದ ಆಸಕ್ತಿಗಳು ಆಗ ಕಾರ್ಯಮುಖವಾಗುವುದರಿಂದ ಆ ಆಸಕ್ತಿಗಳು ಕೆಲಸಮಾಡಿ, ಸೂಕ್ತವಾದ ಮಾರ್ಗದಲ್ಲಿ ವಿಕಸಿಸುವಂತೆ ನೆರವಾಗುವ ಸನ್ನಿವೇಶಗಳನ್ನು ಒದಗಿಸಬೇಕು. ಹತ್ತೊಂಬತ್ತನೆಯ ಶತಮಾನದ ಅಂತ್ಯದವರೆಗೂ ಈ ಕಾಲ ಶಿಕ್ಷಣ ದೃಷ್ಟಿಯಲ್ಲಿ ಪ್ರಧಾನವಲ್ಲವೆಂದು ಹಲವರು ಭಾವಿಸಿದ್ದರು. ಆದರೆ, ಈಚೆಗೆ ಇದು ನಿಜವಾಗಿಯೂ ಅಮೂಲ್ಯವೆಂದು ಭಾವಿಸಿ ಈ ಕಾಲಕ್ಕೂ ಅನ್ವಯಿಸುವಂಥ ಶಿಶುವಿಹಾರಗಳು ಪ್ರಪಂಚದ ಎಲ್ಲ ದೇಶಗಳಲ್ಲೂ ಆರಂಭವಾಗುತ್ತಿವೆ. ಆ ಶಿಶುವಿಹಾರಗಳ ಉದ್ದೇಶವನ್ನೂ ಅಲ್ಲಿನ ಸನ್ನಿವೇಶಗಳನ್ನೂ ಬೇರೊಂದು ಕಡೆ ವಿವರಿಸಲಾಗಿದೆ.

ಶೈಶವ ಕಾಲದ ಈ ಮೂರನೆಯ ಅವಸ್ಥೆಯಲ್ಲಿ ಮಕ್ಕಳ ವೈಯಕ್ತಿಕ ಮತ್ತು ಸಾಮಾಜಿಕ ಗುಣಗಳು ಬಹುವಾಗಿ ವೃದ್ಧಿ ಹೊಂದುತ್ತವೆ. ಅನುಭವ ಹೆಚ್ಚಿದಂತೆ ತಮ್ಮ ಶಕ್ತಿಸಾಮರ್ಥ್ಯಗಳಲ್ಲಿ ಅಭಿಮಾನವೂ ಬೆಳೆದುಬರುತ್ತದೆ. ಇತರರ ನಡೆನುಡಿಗಳನ್ನು ಅನುಕರಿಸುವುದರ ಜೊತೆಗೆ, ತಮ್ಮಷ್ಟಕ್ಕೆ ತಾವೇ ಅವನ್ನು ಆಚರಿಸುವುದೂ ಆರಂಭವಾಗುತ್ತದೆ. ಪದಸಂಪತ್ತು ಹೆಚ್ಚಿದಂತೆ ಪದಾರ್ಥಗಳನ್ನೂ ಕೆಲಸಗಳನ್ನೂ ಗುರುತಿಸಿ ಉಚ್ಚರಿಸುವುದೂ ಬರುತ್ತದೆ; ತಂದೆಯಂತೆ ಆಡುವುದೂ, ತಾಯಿಗೆ ಮನೆಗೆಲಸದಲ್ಲಿ ಸಹಾಯಮಾಡುವಂತೆ ಯತ್ನಿಸುವುದೂ ಆರಂಭವಾಗುತ್ತವೆ; ಸ್ವಾಭಿಮಾನ ಬೆಳೆದಂತೆ ಸ್ವತಂತ್ರಿಸಿ ನಡೆಯುವುದೂ ಮೊದಲಾಗುತ್ತದೆ: ಇತರರು ಹೇಳುವುದನ್ನೂ ಮಾಡುವುದನ್ನೂ ಆಗಾಗ ಒಪ್ಪುವುದಿಲ್ಲ. ತಾನು ಮಾಡುತ್ತಿರುವುದನ್ನು ಯಾರಾದರೂ ತಡೆದರೆ, ಸರಿಯಲ್ಲವೆಂದರೆ ಕೋಪ ಬೇಗ ಬರುತ್ತದೆ. ಅದನ್ನೇ ಸರಿಯೆಂದು ಒಪ್ಪಿದರೆ ಅವರ ಸಂತೋಷಕ್ಕೆ ಪಾರವೇ ಇಲ್ಲ. ಅವರ ಈ ಹಠಮಾರಿತನ

ವನ್ನು ತಂದೆತಾಯಿಗಳು ದುರ್ನಡತೆಯೆಂದು ಭಾವಿಸಬಾರದು: ಅದು ಆ ಕಾಲದ ಮಕ್ಕಳ ಸ್ವಾಭಾವಿಕ ಗುಣ. ತಮ್ಮ ಸಾಮರ್ಥ್ಯದಲ್ಲಿ ಹೊಸ ನಂಬಿಕೆ ಹುಟ್ಟುತ್ತಿರುವುದೇ ಅದಕ್ಕೆ ಕಾರಣ. ಇತರರು ಮಾಡಿದ್ದನ್ನು ಒಮ್ಮೊಮ್ಮೆ ಒಪ್ಪದೆ ತಾವೇ ಪುನಃ ಕೆಲಸಗಳನ್ನು ಮಾಡಲು ತೊಡಗುವುದೂ ಇದೇ ಕಾರಣದಿಂದ. ಈ ವಿಷಯವನ್ನರಿಯದ ತಂದೆತಾಯಿಗಳು ನೀತಿ ನಿಯಮ ಗಳನ್ನು ಹೇಳಲೂ ದಂಡಿಸಲೂ ಯತ್ನಿಸುವರು. ಅದು ಅನಾವಶ್ಯಕ. ಕುತೂ ಹಲದಿಂದ ಸ್ವತಂತ್ರವಾಗಿ ಮಕ್ಕಳು ವಿಷಯವನ್ನು ತಿಳಿಯಲು ಮಾಡುವ ಯತ್ನವಿದೆಂದು ಅವರನ್ನು ಪ್ರಶಂಸಿಸುವುದು ಉತ್ತಮ. ಅಂಥ ಚಟುವಟಿಕೆ ಗಳ ಮೂಲಕ ಅವರಿಗೆ ನಿಜವಾದ ಹೊಸ ಜ್ಞಾನ ಉಂಟಾಗುತ್ತದೆ. ಎಂದರೆ, ಅವರು ನೀತಿ ನಿಯಮಗಳಿಗೆ ತಲೆಬಾಗುವಂತೆ ಮಾಡುವುದು ಅನಾವಶ್ಯಕ ವೆಂದು ಭಾವಿಸಬಾರದು. ಅದೂ ಅಗತ್ಯ. ಆದರೆ ತಮ್ಮ ಕೆಲಸಗಳ ಫಲವಾಗಿ ಹುಟ್ಟುವ ಅನುಭವಗಳಿಂದ ಅವರು ಒಳ್ಳೆಯ ವರ್ತನೆ ಕಲಿಯುವಂತಾಗ ಬೇಕು. ಕೆಟ್ಟದ್ದನ್ನು ಮಾಡಿದರೆ ಮನಸ್ಸಿಗೆ ನೋವಾಗುವಂತೆಯೂ ಒಳ್ಳೆ ಯದನ್ನು ಮಾಡಿದಾಗ ಸಂತೋಷ ಹುಟ್ಟುವಂತೆಯೂ ಸನ್ನಿವೇಶಗಳನ್ನು ತಂದೊಡ್ಡಿ ಅವುಗಳ ಫಲವಾಗಿಯೇ ಅವರನ್ನು ಸನ್ಮಾರ್ಗಕ್ಕೆ ಆಕರ್ಷಿಸ ಬೇಕು.

ಇತರ ಮಕ್ಕಳೊಡನೆ ಭಾಗವಹಿಸಬೇಕೆಂಬ ಕಾತರ ಕ್ರಮ ಕ್ರಮವಾಗಿ ಹೆಚ್ಚುತ್ತದೆ. ಹೊರಗಡೆ ಆಡುವ ಅಭಿಲಾಷೆಯೂ ಬೆಳೆದು, ಸಮಾಜದ ಅನು ಭವವನ್ನು ಪಡೆಯಲು ಯತ್ನಿಸುವರು. ದೊಡ್ಡವರು ಮಾಡುವುದನ್ನು ಇನ್ನೂ ಅನುಕರಿಸುತ್ತಿದ್ದರೂ ಸ್ವತಂತ್ರವಾಗಿಯೂ ಅವನ್ನು ಆಚರಿಸಲು ಯತ್ನಿಸುತ್ತಾರೆ.

ಮನಸ್ಸು ಬೆಳೆದು ಹೊಸ ಹೊಸ ಜ್ಞಾನದ ಪರಿಚಯವಾಗುತ್ತದೆ; ಯಾವುದು ನಿಜ, ಯಾವುದು ಸುಳ್ಳು ಎಂಬ ಅರಿವು ಮೂಡುತ್ತದೆ; ವಿವಿಧ ವಿಷಯಗಳ ಮೇಲೆ ಪ್ರಶ್ನಿಸುವ ಕುತೂಹಲವೂ ದಿನ ದಿನಕ್ಕೆ ಹೆಚ್ಚುತ್ತದೆ. ಆ ಪ್ರಶ್ನೆಗಳಿಗೆ ಬೇಸರಪಟ್ಟುಕೊಳ್ಳದೆ ಉತ್ತರ ತಿಳಿಸಬೇಕು. ನಿಜ; ಅವು ಗಳಲ್ಲಿ ಹಲವು ತೊಡಕಾಗಿರುತ್ತವೆ. ಅವುಗಳಿಗೆ ಆಗ ಶಾಸ್ತ್ರೀಯವಾದ ಉತ್ತರ ಗಳನ್ನೇ ಹೇಳಬೇಕಾಗಿಲ್ಲ—ಆದರೆ ಸುಳ್ಳು ಹೇಳಬಾರದು. ಅವರ ಕುತೂ

ಹಲ ನಿವಾರಿಸುವಂಥ ಸಾಮಾನ್ಯ ಉತ್ತರ ಕೊಟ್ಟರೆ ಸಾಕು. ಸುಮಾರು ನಾಲ್ಕನೆಯ ವರ್ಷದಿಂದ ಕೇವಲ ಒಂದೋ ಎರಡೋ ಪ್ರಶ್ನೆಗಳನ್ನು ಹಾಕುವುದರ ಬದಲು ಬೇರೆ ಬೇರೆ ವಿಷಯಗಳ ವಿಸ್ತಾರವಾದ ವಿವರಣೆಯನ್ನೇ ತಿಳಿಯಲು ಬಯಸುತ್ತಾರೆ. ಒಂದು ಪೂರ್ಣ ಕಥೆಯನ್ನೋ, ಒಂದು ವಸ್ತುವಿನ ಅಥವಾ ಜನಾಂಗದ ಪೂರ್ಣ ಚರಿತ್ರೆಯನ್ನೋ ಕೇಳುವ ಕಾತರ ಬರುತ್ತದೆ. ಅದ್ಭುತಮಹಾದ್ಭುತಗಳ ಕಟ್ಟುಕಥೆ ಕೇಳುವುದೆಂದರೆ ತುಂಬ ಆಸಕ್ತಿ. ಅವುಗಳ ಮೂಲಕ ಅವರ ಕಲ್ಪನಾಶಕ್ತಿ ಬಹುವಾಗಿ ಹೆಚ್ಚುತ್ತದೆ. ಆ ಕಥೆಗಳನ್ನು ಕೇಳಿದಮೇಲೆ ತಾವೂ ನೂತನವಾಗಿ ಕಲ್ಪಿಸಿಕೊಂಡು ಹೇಳಲು ಯತ್ನಿಸುತ್ತಾರೆ. ಅವರು ಆ ಕಾಲದಲ್ಲಿ ಹೇಳುವ ಅನೇಕ ಸುಳ್ಳುಗಳಿಗೆಲ್ಲ ಈ ಕಲ್ಪನಾಶಕ್ತಿಯ ಉತ್ಸಾಹವೇ ಕಾರಣ. ಹಾಗೆಯೇ ಜ್ಞಾಪಕ ಶಕ್ತಿಯೂ ಅಭಿವೃದ್ಧಿ ಹೊಂದುತ್ತದೆ. ಕೇಳಿದ್ದನ್ನು, ನೋಡಿದ್ದನು, ಆಡಿದ್ದನ್ನು, ಮಾಡಿದ್ದನ್ನು ಜ್ಞಾಪಕಕ್ಕೆ ತಂದುಕೊಂಡು ಪುನಃಪುನಃ ಆಚರಿಸುವುದುಂಟು. ಈ ಕಾರ್ಯಕ್ಕೆ ಅವರ ಬಾಷಾಜ್ಞಾನ ತುಂಬ ನೆರವಾಗುತ್ತದೆ. ಹೀಗೆ ವಿವಿಧ ಮುಖವಾಗಿ ಹೆಚ್ಚಿರುವ ತಮ್ಮ ಅನುಭವವನ್ನು ಪ್ರದರ್ಶಿಸಲು ಹಾತೊರೆಯುತ್ತಿರುತ್ತಾರೆ. ಮಾತಿನ ಮೂಲಕವೋ, ಬರೆಯುವುದರ ಮೂಲಕವೋ, ಕೃತಿಯ ಮೂಲಕವೋ ಅದನ್ನು ಸಾಧಿಸಲು ಯತ್ನಿಸುತ್ತಾರೆ. ಭಾವಗಳನ್ನು ಪ್ರದರ್ಶಿಸಲು ಆ ಕಾಲದಲ್ಲಿ ತಕ್ಕ ಸನ್ನಿವೇಶಗಳನ್ನು ಒದಗಿಸಬೇಕು. ಕಥೆ ಹೇಳಲೂ, ಇತರರೊಡನೆ ಸಂವಾದಮಾಡಲೂ ಅವಕಾಶ ಕಲ್ಪಿಸಬೇಕು. ಬಣ್ಣದಿಂದ, ಸುಣ್ಣದಿಂದ, ಚಿತ್ರ, ಮುಂತಾದವನ್ನು ಬರೆಯಲು ಪ್ರೋತ್ಸಾಹಿಸಬೇಕು; ಕೈ ಕೆಲಸಗಳಿಗಾಗಿ ಕಾಗದ, ಕಡ್ಡಿ, ಮಣ್ಣಿ, ಮುಂತಾದವನ್ನು ಒದಗಿಸಿಕೊಡಬೇಕು. ಒಳಗೇ ಹುದುಗಿಕೊಂಡಿರುವ ಮಕ್ಕಳ ಮನೋಭಾವಗಳನ್ನು ಪ್ರಕಾಶಕ್ಕೆ ತರಲು ಎಲ್ಲ ಪ್ರಯತ್ನಗಳನ್ನೂ ನಡೆಸಬೇಕು.

ತಾಳವಿಟ್ಟಂತೆ ಹಾಡುವುದು, ನಾಟಕದಲ್ಲಿ ಅಭಿನಯಿಸುವುದು, ದೊಡ್ಡವರ ದಿನಚರಿಯನ್ನು ತಾನೂ ಆಚರಿಸುವುದು—ಈ ಕಾರ್ಯಗಳಲ್ಲಿ ಅವರಿಗೆ ಬಲು ಆಸಕ್ತಿ. ನೃತ್ಯಗೀತೆಗಳನ್ನೂ ಅಭಿನಯ ಗೀತೆಗಳನ್ನೂ ಹೇಳಿಸಿ ಸಣ್ಣ ಸಂವಾದದ ನಾಟಕಗಳನ್ನು ಆಡಿಸಬೇಕು. ಕಪ್ಪೆಗೂಡು ಕಟ್ಟುವುದು, ಚಾರುಗುಬ್ಬೆ ಆಡುವುದು, ಓಡುವುದು—ಇವೇ ಮುಂತಾದವುಗಳನ್ನು ಮಾಡಲು

ಪ್ರೋತ್ಸಾಹಿಸಬೇಕು. ಅದರಿಂದ ಅವರ ಕುತೂಹಲ ಈಡೇರಿ ಮಾನಸಿಕ ಗುಣಗಳು ಸ್ಫುಟಗೊಳ್ಳುವುದರ ಜೊತೆಗೆ ದೈಹಿಕ ಬೆಳವಣಿಗೆಯೂ ಆಗುತ್ತದೆ. ಮರಗಿಡಗಳನ್ನೂ ಪ್ರಾಣಿಗಳನ್ನೂ ಬಣ್ಣ ಬಣ್ಣದ ಹೂಗಳನ್ನೂ ಪರಿಶೀಲಿಸುವ ಆಸಕ್ತಿ ಅವರಿಗೆ ಇರುವುದರಿಂದ ಆ ಅವಕಾಶಗಳನ್ನೂ ಕಲ್ಪಿಸಬೇಕು.

ದೊಡ್ಡವರು ಮಾಡುವುದನ್ನು ನೋಡಿ ಮಕ್ಕಳು ತಾವೂ ಓದುವುದನ್ನೂ ಬರೆಯುವುದನ್ನೂ ಕಲಿಯಲು ಯತ್ನಿಸುವುದು ಸ್ವಭಾವವಾದರೂ ಈ ಕಾಲದಲ್ಲಿ ಓದುಬರಹ ಕಲಿಸಲು ಯತ್ನಿಸುವುದು ಉಚಿತವಲ್ಲ. ಅಂಕೆಗಳನ್ನು ಬೇಕಾದರೆ ಆಟದ ರೂಪದಲ್ಲಿ ಎಣಿಸುವುದರ ಮೂಲಕ ಅಭ್ಯಾಸ ಮಾಡಿಸಬಹುದು. ಪದ್ಯ, ಕಥೆ, ನಾಟಕ, ನೋಡಿದ್ದನ್ನು ವರ್ಣಿಸುವುದು, ಇತರರೊಡನೆ ಮಾತಾಡುವುದು—ಇವುಗಳ ಮೂಲಕ ಅವರ ಭಾಷೆಯ ಜ್ಞಾನವನ್ನು ಹೆಚ್ಚಿಸಿದರೆ ಸಾಕು.

ಒಟ್ಟಿನಲ್ಲಿ ಈ ಕಾಲ ಮಕ್ಕಳ ವಿದ್ಯಾಭ್ಯಾಸಕ್ಕೆ ಒಂದು ತಳಹದಿಯಂತಿದೆ; ಆಗ ಓದುಬರಹ, ಲೆಕ್ಕಗಳನ್ನು ಹೇಳಿಕೊಡದಿದ್ದರೂ ಅವುಗಳನ್ನು ಕಲಿಯಲು ಆವಶ್ಯಕವಾದ ಪೂರ್ವಭಾವಿಯಾದ ಶಿಕ್ಷಣದಂತಿದೆ. ಅವರಲ್ಲಿ ಪರಿಶೀಲನಾಸಕ್ತಿಯನ್ನೂ ಇಂದ್ರಿಯ ಪಟುತ್ವವನ್ನೂ ಹೆಚ್ಚಿಸಿ ಒಳ್ಳೆಯ ಅಭ್ಯಾಸಗಳನ್ನು ಕಲಿಸಿ ಸಾಮಾಜಿಕ ಜೀವನವನ್ನು ಬೆಳಸುವುದೇ ಈ ಕಾಲಕ್ಕೆ ಉಚಿತವಾದ ಶಿಕ್ಷಣ. ಆರೋಗ್ಯ, ದೇಹದಾರ್ಢ್ಯ ವರ್ಧಿಸುವಂತೆ ಆಟಪಾಠಗಳನ್ನು ಅನುಗೊಳಿಸಿ ಮಕ್ಕಳು ಹರ್ಷಚಿತ್ತರಾಗಿ ಆನಂದದಿಂದ ಬಾಳುವಂತೆ ಶಿಶುವಿಹಾರಗಳ ಸನ್ನಿವೇಶಗಳು ರಚನೆಯಾಗಬೇಕು.

**೨. ಬಾಲ್ಯಾವಸ್ಥೆ (ಪ್ರಾಥಮಿಕ ಶಿಕ್ಷಣದ ಕಾಲ):** ಮಕ್ಕಳು ದೈಹಿಕವಾಗಿ ವೃದ್ಧಿಹೊಂದುತ್ತಾ, ಗಾತ್ರದಲ್ಲೂ ಭಾರದಲ್ಲೂ ಹೆಚ್ಚುತ್ತವೆ. ಸ್ವತಂತ್ರವಾಗಿ ಬದುಕುವ ಶಕ್ತಿಸಾಮರ್ಥ್ಯಗಳು ಬಂದಂತೆ ಸ್ವಾವಲಂಬನ ಶಕ್ತಿಯೂ ಹೆಚ್ಚುತ್ತದೆ. ಸಣ್ಣಪುಟ್ಟ ಕಲ್ಪನೆಯ ಆಟಗಳಲ್ಲಿ ವಿಹರಿಸುತ್ತಿದ್ದ ಮಕ್ಕಳು ಈಗ ನಿಯಮಬದ್ಧವಾದ ಆಟಗಳನ್ನು ಆಡಲಿಚ್ಛಿಸುತ್ತಾರೆ; ಕೇವಲ ಕಲ್ಪನಾ ವ್ಯವಹಾರಕ್ಕಾಗಿ ಆಟವಾಡುವ ಬದಲು ಸ್ಪರ್ಧೆಯಿಂದ, ನಿರ್ದಿಷ್ಟ ದೃಷ್ಟಿಯಿಂದ ಪ್ರೇರಿತರಾಗಿ ಆಡಲು ಬಯಸುತ್ತಾರೆ. ಅದಕ್ಕಾಗಿ

ಎಷ್ಟೇ ಕಷ್ಟವಾದರೂ ಸಹಿಸುವ ಮನೋಭಾವವೂ ಬೆಳೆದಿರುತ್ತದೆ. ಜೊತೆಗೆ ಬಗೆ ಬಗೆಯ ಆಟಗಳನ್ನೂ ಆಡಲು ಬಯಕೆ ಹೆಚ್ಚುತ್ತದೆ. ಸಮಾಜ ಜೀವನದ ಅನುಭವ ಹೆಚ್ಚಿದಂತೆ ತಾವು ಪೂರ್ಣವಾಗಿ ಪ್ರತ್ಯೇಕ ವ್ಯಕ್ತಿಗಳಲ್ಲವೆಂದೂ ಸಮಾಜದ ಒಂದು ಅಂಗ ಮಾತ್ರವೆಂದೂ ಭಾವಿಸುತ್ತಾರೆ. ಸಮಾಜದ ಇತರರು ತಮ್ಮನ್ನು ನೋಡಿ ಮೆಚ್ಚಬೇಕೆಂಬ ಅಭಿಲಾಷೆಯಿಂದ ಅದರ ಹಿತಚಿಂತನೆಯಲ್ಲೇ ನಡೆಯಲು ಯತ್ನಿಸುತ್ತಾರೆ. ಅವರ ನಡೆ, ನುಡಿ, ವ್ಯವಹಾರ, ಮುಂತಾದ ಜೀವನದ ಬೇರೆ ಬೇರೆ ಕ್ಷೇತ್ರಗಳಲ್ಲಿ ಜಾಣತನದಿಂದ ವರ್ತಿಸುವುದನ್ನು ಕಾಣಬಹುದು. ಅನೇಕ ವೇಳೆ ಸ್ವಾರ್ಥದಿಂದ ಕೆಟ್ಟ ಮಾರ್ಗವನ್ನೂ ಹಿಡಿಯುವುದುಂಟು. ಆಗ ಅಂಥ ಮಾರ್ಗಾನುಸರಣೆಯಿಂದ ಮನೋವ್ಯಥೆಯುನ್ನುಂಟುಮಾಡುವ ಸನ್ನಿವೇಶಗಳನ್ನು ತಂದೊಡ್ಡಬೇಕು. ಈ ಕಾಲದಲ್ಲಿ ಸಹವಯಸ್ಸಿನ ಸ್ನೇಹಿತರೊಡನೆ ತುಂಬ ವಿಶ್ವಾಸದಿಂದಿರುವುದುಂಟು. ತನ್ನ ಚಿಕ್ಕ ಸಮಾಜದ ಮುಂದಾಳುತನವನ್ನು ವಹಿಸಿ, ಪ್ರಕಾಶಕ್ಕೆ ಬರಬೇಕೆಂಬ ಕಾತರವೂ ತುಂಬ ಇರುತ್ತದೆ.

ಆಗ ಮಕ್ಕಳ ವೈಯಕ್ತಿಕ ಶಕ್ತಿಸಾಮರ್ಥ್ಯಗಳೂ ಅಭಿರುಚಿ ಆಸಕ್ತಿಗಳೂ ಬೆಳೆಯಲು ಆರಂಭವಾಗುತ್ತವೆ. ಮೊದಮೊದಲು ದೊಡ್ಡವರ ಮೇಲ್ಪಂಕ್ತಿಯನ್ನು ಅನುಸರಿಸಿ ನಡೆದುಕೊಂಡರೂ ಅನಂತರ ತಮ್ಮದೇ ಆದ ನೂತನ ಮಾರ್ಗದಲ್ಲಿ ಮುನ್ನಡೆಯಲು ಯತ್ನಿಸುತ್ತಾರೆ. ಅವರಲ್ಲಿ ಹುದುಗಿರುವ ವೈಶಿಷ್ಟ್ಯಗಳು ಪ್ರಕಾಶಕ್ಕೆ ಬರಲು ಹಾತೊರೆಯುತ್ತಿರುವುದೇ ಇದಕ್ಕೆ ಕಾರಣ. ಆ ಶಕ್ತಿ ವಿಶೇಷಗಳು ಪ್ರಕಾಶಗೊಂಡು ಅವರವರ ವ್ಯಕ್ತಿತ್ವ ಬೆಳೆಯುವಂತೆ ಚಟುವಟಿಕೆಗಳನ್ನು ಶಾಲೆಗಳಲ್ಲಿ ಏರ್ಪಡಿಸಬೇಕು. ಉದ್ಯಮಗಳ ಶಿಕ್ಷಣವನ್ನು ಪ್ರಾಥಮಿಕ ಶಾಲೆಯಲ್ಲಿ ಏರ್ಪಡಿಸಬೇಕು. ಒಂದೊಂದು ಉದ್ಯಮದಲ್ಲೂ ಅನೇಕ ಶಕ್ತಿಗಳು ಪ್ರದರ್ಶನಕ್ಕೆ ಬರುವುದರಿಂದ ಈ ಕಾಲದಲ್ಲಿ ಉದ್ಯಮ ಶಿಕ್ಷಣ ಉತ್ತಮ. ಅದರಿಂದ ಅವರವರಲ್ಲಿ ಹುದುಗಿರುವ ವಿಶೇಷ ಶಕ್ತಿಗಳು ಪ್ರಕಾಶಕ್ಕೆ ಬರಲು ಅವಕಾಶವಾಗುತ್ತದೆ.

ಅನೇಕ ವೇಳೆ ಸ್ವಾಭಿಮಾನದಿಂದ ಪ್ರೇರಿತರಾಗಿ ಮಕ್ಕಳು ಇತರರ ಅಪ್ಪಣೆಯನ್ನು ಉಲ್ಲಂಘಿಸುವುದುಂಟು; ಕಠಿನ ಶಾಸನಗಳಿಂದ ಅದನ್ನು ತಡೆದು ಬಿಗಿಹಿಡಿಯಲು ಯತ್ನಿಸುವುದು ಫಲಪ್ರದವಲ್ಲ: ಆ ಸ್ವಾಭಾವಿಕ

ವರ್ತನೆಯನ್ನು ವ್ಯಕ್ತಿತ್ವವನ್ನು ಬೆಳಸಲು ಉಚಿತ ಮಾರ್ಗದಲ್ಲಿ ಪ್ರವಹಿಸುವಂತೆ ತಿರುಗಿಸಿಕೊಳ್ಳಬೇಕು. ಕಲ್ಪನಾದೃಷ್ಟಿ ಹೆಚ್ಚಿರುತ್ತದೆ; ದೃಷ್ಟಿವೈಶಾಲ್ಯ ಸಿದ್ಧಿಸಿರುತ್ತದೆ. ಕಟ್ಟುಕಥೆಗಳ ಮೇಲೆ ಆಸಕ್ತಿ ಕಡಮೆಯಾಗುತ್ತದೆ. ಆದ್ದರಿಂದ ನಿಜವಾದ ಕಥೆಗಳನ್ನು ಹೇಳಬೇಕು. ಒಂದು ಗಳುವನ್ನೇ ಕುದುರೆಯೆಂದು ಭಾವಿಸುವುದು ಹೋಗಿ ನಿಜವಾದ ಕುದುರೆಯೇ ಸವಾರಿಗೆ ಬೇಕೆಂದು ಕೇಳುವ ಕಾಲವಿದು. ಕೇವಲ ಕಲ್ಪನೆಗಳಿಂದ ಪಡೆಯುವ ಭಾವನೆಗಳಿಂದಲೇ ತೃಪ್ತಿಪಡುವ ಬದಲು ನಿಜವಾದ ಅನುಭವ ಪಡೆಯಲು ಯತ್ನಿಸುತ್ತಾರೆ. ಹುಡುಗಾಟಿಕೆ ಕಡಮೆಯಾಗುತ್ತಾ ಬಂದು ಉದ್ದೇಶಪೂರ್ವಕವಾದ ಜೀವನ ಆರಂಭವಾಗುತ್ತದೆ. ಕೇವಲ ಆಟದ ಆಕರ್ಷಣೆಗಿಂತ ಪದಾರ್ಥದ ಉಪಯುಕ್ತತೆ ಹೆಚ್ಚಿನದಾಗುತ್ತದೆ. ಯೋಚಿಸುವುದೂ ವಿಮರ್ಶಿಸುವುದೂ ಮೊದಲಾಗುತ್ತವೆ ಆ ಮೂಲಕವೇ ಪದಾರ್ಥಗಳ ಯೋಗ್ಯತೆಯನ್ನು ನಿಷ್ಕರ್ಷಿಸುವ ಯತ್ನವೂ ನಡೆಯುತ್ತದೆ. ಸ್ವೈಚ್ಛಸ್ಥಿತಿಗೂ ಕಲ್ಪನಾ ಸ್ವರೂಪಕ್ಕೂ ವ್ಯತ್ಯಾಸವನ್ನು ಕಂಡುಕೊಳ್ಳುತ್ತಾರೆ. ಜೊತೆಗೆ ನಿರ್ಮಾಣ ಮತ್ತು ರಚನಾ ಶಕ್ತಿಗಳು ಸ್ಫುಟಗೊಳ್ಳುತ್ತವೆ. ಒಂದೇ ವಿಷಯದಲ್ಲಿ ಆಳವಾದ ಜ್ಞಾನವನ್ನು ಪಡೆಯಲು ಮನಸ್ಸನ್ನು ಸ್ಥಿರಮಾಡಿಕೊಂಡು ದುಡಿಯುವ ಸಂಯಮವೂ ಸಿದ್ಧಿಸಿರುತ್ತದೆ. ಆದ್ದರಿಂದ ಈ ಕಾಲ ಜ್ಞಾನಾರ್ಜನೆಯ ದೃಷ್ಟಿಯಿಂದ ಮುಖ್ಯವಾದ್ದು. ಮಕ್ಕಳಿಗೂ ಬೇಗ ಕಲಿಯಬೇಕೆಂಬ ಆಸಕ್ತಿಯಿರುತ್ತದೆ. ಆದ್ದರಿಂದ ಓದುವುದನ್ನೂ ಬರೆಯುವುದನ್ನೂ ಆರಂಭಿಸಬೇಕು. ಮನಸ್ಸಿನ ಭಾವಗಳನ್ನು ಚಿತ್ರ, ಬಣ್ಣ, ರಚನೆ, ಮೊದಲಾದವುಗಳಿಂದ ಪ್ರಕಾಶಪಡಿಸುವಂತೆ ಅವಕಾಶ ಕಲ್ಪಿಸಿ, ಅವರ ಅನುಭವ, ರಚನಾ ಕೌಶಲ ಮತ್ತು ಜ್ಞಾನ ರಾಶಿ ಹೆಚ್ಚುವಂತೆ ಮಾಡಬೇಕು. ಕೇವಲ ಕುರುಡು ಓದು ಆರಂಭವಾಗುವುದೂ ಈ ಕಾಲದಲ್ಲೇ! ಮಕ್ಕಳು ಸ್ವೈಚ್ಛಸ್ಥಿತಿಯಿಂದ ದೂರವಾಗಿ ಕೂಚುಭಟ್ಟರಾಗದಂತೆ ನೋಡಿಕೊಂಡು, ಓದಿದ ಜ್ಞಾನ ಮತ್ತು ಅನುಭವಗಳು ಅವರ ಚಟುವಟಿಕೆಗಳಿಂದ ಸ್ಫುಟಗೊಳ್ಳುವಂತೆ ಉದ್ಯಮಗಳನ್ನೂ ಶಾಲೆಯ ಕಾರ್ಯಕ್ರಮಗಳಲ್ಲಿ ಅಳವಡಿಸಬೇಕು.

ಶಾಸನಗಳನ್ನು ಗೌರವಿಸಿ ಸತ್ಪ್ರಜೆಗಳಾಗಿ ಬಾಳುವಂತೆ ಮಾಡಲು ಈ ಕಾಲ ತುಂಬ ಅನುಕೂಲವಾದ್ದು. ಹಾಗೆ ನೀತಿ ನಿಯಮಗಳಿಗೆ ತಲೆಬಾಗಿ

ನಡೆದುಕೊಳ್ಳುವಂತೆ ಮಾಡುವಾಗ ಉಪಾಧ್ಯಾಯರು ತುಂಬ ಕೌಶಲ್ಯ ಉಪಯೋಗಿಸಬೇಕು. ಸ್ವಾಭಿಮಾನದಿಂದ ತುಳುಕಾಡುತ್ತಿರುವ ಮಕ್ಕಳಲ್ಲಿ ಬೇರೊಬ್ಬರು ಆ ಶಾಸನಗಳನ್ನು ತಮ್ಮಮೇಲೆ ಹೇರಲು ಬಂದಿರುವರೆಂಬ ಭಾವನೆ ಹುಟ್ಟಬಾರದು. ಅಂಥ ನಿಯಮಾನುಸರಣೆ ವಿದ್ಯಾರ್ಥಿಗೂ ಶಾಲೆಗೂ ಹಿತವೆಂಬ ಅಂಶವನ್ನು ಅವರು ಮನಗಾಣುವಂತೆ ಸನ್ನಿವೇಶಗಳನ್ನು ಒದಗಿಸಬೇಕು. ಅಂಥ ಶಾಲೆಯ ಜೀವನವನ್ನು ಬಾಳಿದ ಮಕ್ಕಳು ಮುಂದಿನ ಸಮಾಜದ ಶಾಸನಗಳನ್ನು ಸಂತೋಷದಿಂದ ಪಾಲಿಸಿಕೊಂಡು ಬಾಳುವ ವ್ಯಕ್ತಿಗಳಾಗಬಲ್ಲರು. ಸಮಾಜದ ಮತ್ತು ವ್ಯಕ್ತಿಯ ಹಿತಕ್ಕೆ ಅಂಥ ಶಾಸನ ಪಾಲನೆ ಅವಶ್ಯಕವೆಂಬ ತಿಳಿವೂ ಮಾನಸ ಸಂಸ್ಕರಣವೂ ಈ ಕಾಲದಲ್ಲೇ ಹುಟ್ಟಬೇಕು. ಶಾಲೆಯಲ್ಲಿ ಮಕ್ಕಳಿಗೆ ಸ್ವಾತಂತ್ರ್ಯವಿರಬಾರದೆಂದು ಇದರಿಂದ ಭಾವಿಸಬಾರದು. ಅವರಿಗೆ ಸ್ವಾತಂತ್ರ್ಯವಿರಬೇಕು; ಒಂದೊಂದು ವೇಳೆ ನೀತಿ ನಿಯಮಗಳನ್ನು ಉಲ್ಲಂಘಿಸಲೂ ಸ್ವಾತಂತ್ರ್ಯ ಇರಬೇಕು: ಆದರೆ ಅದರಿಂದ ಎಲ್ಲರಿಗೂ ಅಹಿತವೆಂಬುದನ್ನು ಅವರು ಅರಿತುಕೊಳ್ಳುವಂತೆ ಮಾಡಬೇಕು. ತನ್ನಿಚ್ಛೆಯಂತೆ ನಡೆದರೆ ಸಮಾಜದ ಹಿತಕ್ಕೆ ಹಾನಿ ತಟ್ಟೀತೆಂಬ ಪರಿಜ್ಞಾನ ಬರಬೇಕು. ತನ್ನ ಕಷ್ಟವನ್ನು ಬದಿಗಿರಿಸಿ ಸಮಾಜದ ಹಿತವೇ ಮುಖ್ಯವೆಂದೆಣಿಸಿ, ಬಾಳುವ ಮನೋಭಾವವೂ ಬೆಳೆಯಬೇಕು.

ಈ ಕಾಲದ ಕೊನೆ ಕೊನೆಗೆ ಮಕ್ಕಳು ತಮ್ಮ ಶಕ್ತಿ ಸಾಮರ್ಥ್ಯಗಳಲ್ಲಿ ಹೆಚ್ಚಿನ ನಂಬಿಗೆಯನ್ನೂ ಧೈರ್ಯವನ್ನೂ ಅರಿತುಕೊಂಡು ಸ್ವಾಭಿಮಾನಿಗಳಾಗುವರು. ಈ ಸ್ವಾಭಿಮಾನ ಅತಿಯಾಗಿ ಅನೇಕ ವೇಳೆ ಸ್ವಾರ್ಥವಾಗಿಯೂ ಪರಿಣಮಿಸುವುದು. ಆಗ ಇತರರ ಹಕ್ಕುಬಾಧ್ಯತೆಗಳನ್ನು ತುಳಿಯಲೂ ಹಿಂಜರಿಯರು. ಚಿಕ್ಕವರಾದರೂ ನಿಷ್ಕರುಣ ಸ್ವಾರ್ಥಪ್ರಿಯರಾಗಿ ನಡೆದುಕೊಳ್ಳಬಹುದು. ಮಕ್ಕಳ ಈ ಸ್ವಭಾವವನ್ನು ಅರಿತುಕೊಂಡು, ಅದರಿಂದ ಸಮಾಜಕ್ಕೂ ತಮಗೂ ಕೇಡಾಗುವುದೆಂದು ತೋರಿಸಿಕೊಡುವುದು ಅಗತ್ಯ. ಆಟಪಾಟಗಳಲ್ಲೂ ಶಾಲೆಯ ಸಮಾಜ ಜೀವನದಲ್ಲೂ ತನ್ನ ಗೆಲವಿಗಾಗಿ ಸ್ವಾರ್ಥದಿಂದ ಹೋರಾಡುವುದನ್ನು ತಪ್ಪಿಸಿ, ತನ್ನ ಗುಂಪಿನ, ತನ್ನ ತರಗತಿಯ ತನ್ನ ಶಾಲೆಯ, ಜಯವೇ ತನ್ನ ಜಯವೆಂಬ ಅಭಿಮಾನವನ್ನು ಬೆಳಸಬೇಕು.

ಮಕ್ಕಳಿಗೆ ಸಮಾಜದ ಮೆಚ್ಚಿಗೆಯನ್ನು ಗಳಿಸಲು ಈಗ ಇನ್ನೂ ಹೆಚ್ಚಿನ

ಕಾತರ. ಅದಕ್ಕಾಗಿ ಸಾಹಸಗಳನ್ನು ನಡಸಿಯಾರು। ಹಾಗೆಯೇ ಸಮಾಜದ ಅವಹೇಳನವನ್ನು ತಪ್ಪಿಸಿಕೊಳ್ಳಲು ಏನನ್ನಾದರೂ ಮಾಡಿಬಿಡುತ್ತಾರೆ; ಸಮಾಜದ ನೀತಿನಿಯಮಗಳನ್ನೂ ಮುರಿದುಬಿಡುವರು. ಅದರಿಂದ ಪೋಷಕರೂ ಶಿಕ್ಷಕರೂ ಮಕ್ಕಳು ಶಾಲೆಯಲ್ಲಿರುವಾಗಲೂ ಆಡುವಾಗಲೂ ಅವರನ್ನು ಎಚ್ಚರಿಕೆಯಿಂದ ಪರಿಶೀಲಿಸುತ್ತಿದ್ದು, ಉಚಿತಕ್ರಮ ಕೈಗೊಳ್ಳಬೇಕು. ಹಿಯ್ಯಾಳಿಸುವ ಜೊತೆಗಾರರಿಂದ ಅವರನ್ನು ಬಿಡಿಸಿ ಉಚಿತವೆನಿಸುವ ಸಂಘವನ್ನು ಏರ್ಪಡಿಸಿಕೊಡಬೇಕು. ಅವಹೇಳನದಿಂದ ತಪ್ಪಿಸಿಕೊಳ್ಳಲು ಅನೀತಿಯ ಕಾರ್ಯ ಮಾಡಬೇಕಾಗಿ ಬರುವ ಪ್ರಸಂಗಗಳನ್ನು ಕಡಮೆಮಾಡಬೇಕು.

ಪ್ರಾಥಮಿಕ ಶಾಲೆಯ ಕೊನೆಯ ಹಂತವನ್ನು ಸಮೀಪಿಸಿದಂತೆ ಮಕ್ಕಳು ಕಲೆ, ಸೌಂದರ್ಯಗಳಲ್ಲಿ ಅಭಿರುಚಿ ಆಸಕ್ತಿಗಳನ್ನು ತೋರುತ್ತಾರೆ. ಹಾಡುವುದು, ಚಿತ್ರ ಬರೆಯುವುದು ಮೊದಲಾದ ಲಲಿತಕಲೆಗಳಲ್ಲಿ ತಕ್ಕಮಟ್ಟಿನ ಆಸಕ್ತಿ ಆರಂಭವಾಗಿರುತ್ತದೆ. ತಮ್ಮ ಅಭಿರುಚಿಗೊಪ್ಪುವಂಥ ಕಲೆಗಳಲ್ಲಿ ಹೆಚ್ಚಿನ ಸಂಸ್ಕರಣ ನಡೆದು ಉಪಾಸಕರಾಗುವ ಆಶೆಯೂ ಅವರಿಗೆ ಬಂದಿರುತ್ತದೆ.

ಬಾಲ್ಯಾವಸ್ಥೆಯ ಈ ಕಾಲ ಮಕ್ಕಳಿಗೆ ಓದುಬರಹ ಮತ್ತು ಲೆಕ್ಕವನ್ನು ಕಲಿಸಲು ಸೂಕ್ತವಾದ್ದು. ಮನಸ್ಸಿನ ಭಾವಗಳನ್ನು ಪ್ರದರ್ಶಿಸುವ ಪ್ರಬಂಧಗಳನ್ನೂ, ಭಾಷೆಗೆ ನೆರವಾಗುವ ವ್ಯಾಕರಣ ಜ್ಞಾನವನ್ನೂ, ಗುಣಶೀಲಗಳನ್ನು ಬೆಳಸುವ ನೀತಿಯ ಕಥೆಗಳನ್ನೂ, ಸುಲಭ ಸಾಹಿತ್ಯ, ಪ್ರಕೃತಿ ಪಾಠ, ಮಹಾಪುರುಷರ ಜೀವನ ಚರಿತ್ರೆ, ಸಮಾಜ ಜೀವನ, ಮುಂತಾದ ವಿಷಯಗಳನ್ನೂ ಆಗ ಬೋಧಿಸಬೇಕು. ಅವರ ದಿನಚರಿಯಲ್ಲೂ ಕಲಾಭಿರುಚಿ, ಸೌಂದರ್ಯೋಪಾಸನೆ, ಪ್ರಕೃತಿ ಪ್ರೇಮ, ಇವು ಬೆಳೆಯುವಂತೆ ಮಾಡಬೇಕು. ಮೇಲಣ ವಿಷಯಗಳು ಎಲ್ಲರಿಗೂ ಅವಶ್ಯಕ. ಅವುಗಳ ಜೊತೆಗೆ ಮಕ್ಕಳ ಅಭಿರುಚಿ ಆಸಕ್ತಿಗಳು ಅಭಿವೃದ್ಧಿಗೊಳ್ಳುವಂತೆ ಚಟುವಟಿಕೆಗಳನ್ನೂ ಪಠ್ಯ ವಸ್ತು ಒಳಗೊಂಡಿರಬೇಕು.

ಮೇಲೆ ವಿವರಿಸಿದ ಮಕ್ಕಳ ಜೀವನಕಾಲ ಒಂದು ನಿರ್ದಿಷ್ಟವಾದ ಘಟ್ಟದಂತಿದೆ. ಆ ಆರು ವರ್ಷ ಕಾಲವೂ ಒಂದು ಶಾಲೆಯಲ್ಲಿ ಅವರಿಗೆ ಶಿಕ್ಷಣ

ಕೊಡುವುದು ಉಚಿತ. ಆದರಿಂದಲೇ ಅದನ್ನು ಪ್ರಾಥಮಿಕ ಶಿಕ್ಷಣದ ಕಾಲ ಎಂದು ಕರೆದಿರುವುದು. ಪಾಶ್ಚಿಮಾತ್ಯ ದೇಶಗಳಲ್ಲಿ ೧೨ನೇ ವರ್ಷದ ತನಕ ಪ್ರಾಥಮಿಕ ಶಿಕ್ಷಣವಿರುತ್ತದೆ. ಭಾರತದ ಹಲವು ಕಡೆಗಳಲ್ಲೂ ಹಾಗೆಯೇ ಇದೆ. ಆದರೆ ಕೆಲವೆಡೆ ಪ್ರಾಥಮಿಕ ಶಿಕ್ಷಣ ನಾಲ್ಕು ವರ್ಷಗಳು; ಮತ್ತು ಇನ್ನು ಕೆಲವು ಕಡೆ ಐದು ವರ್ಷಕಾಲ ಮಾತ್ರ. ಈ ಭಿನ್ನತೆ ಹೋಗಿ ಎಲ್ಲ ಕಡೆಯೂ ಆರು ವರ್ಷ ಕಾಲ ಪ್ರಾಥಮಿಕ ಶಿಕ್ಷಣ ಇರುವಂತಾಗಬೇಕು. ಅನಂತರ ೧೨ರಿಂದ ೧೮ ರವರೆಗೆ ಆರು ವರ್ಷ ಪ್ರೌಢ (ಸೆಕೆಂಡರೀ) ಶಿಕ್ಷಣದ ಕಾಲವಾಗಿ ಗಣನೆಯಾಗಬೇಕು. ಹಾಗೆ ಮಾಡುವುದರಿಂದ ಮಕ್ಕಳ ಆಯಾ ಕಾಲದ ವಯೋಗುಣಕ್ಕೆ ತಕ್ಕಂತೆ ಪಠ್ಯವಸ್ತುವನ್ನೂ ಶಾಲೆಯ ವ್ಯವಸ್ಥೆಗಳನ್ನೂ ಏರ್ಪಡಿಸಿಕೊಳ್ಳಲು ಸಹಾಯವಾಗುತ್ತದೆ.

೩. ಪ್ರೌಢಾವಸ್ಥೆ (ಪ್ರೌಢ ಶಿಕ್ಷಣಕಾಲ ೧೨ರಿಂದ ೧೮ರ ವರೆಗೆ): ಬಾಲ್ಯಾವಸ್ಥೆಯಿಂದ ಮಕ್ಕಳು ತಾರುಣ್ಯವನ್ನು ಆರಂಭಿಸುವ ನವತಾರುಣ್ಯದ ಈ ಕಾಲದಲ್ಲಿ ಅವರ ದೈಹಿಕ, ಮಾನಸಿಕ, ನೈತಿಕ ಮತ್ತು ಸಾಮಾಜಿಕ ಶಕ್ತಿಸಾಮರ್ಥ್ಯಗಳು ಗಮನಾರ್ಹವೂ ನಿರ್ದಿಷ್ಟವೂ ಆದ ಮಾರ್ಗದಲ್ಲಿ ಬೆಳೆಯಲನುವಾಗುತ್ತವೆ. ಅಷ್ಟೇಕೆ, ಇಡೀ ವ್ಯಕ್ತಿತ್ವವೇ ನೂತನವೂ, ದೃಢವೂ, ತೀಕ್ಷ್ಣವೂ ಆದ ಸ್ವರೂಪವನ್ನು ತಾಳುತ್ತದೆ.

ದೇಹದ ಗಾತ್ರವೂ ಎತ್ತರವೂ ಹೆಚ್ಚುತ್ತವೆ; ಹೃದಯಕೋಶ ವಿಕಸಿಸಿ, ತೀಕ್ಷ್ಣವಾಗಿ ಕೆಲಸಮಾಡುತ್ತದೆ; ಮಾಂಸಖಂಡಗಳು ಬಲಗೊಳ್ಳುತ್ತವೆ; ನರವ್ಯೂಹ ಸೂಕ್ಷ್ಮಗ್ರಾಹಿಯಾಗುತ್ತದೆ; ಹೆಣ್ಣು, ಗಂಡು ಮಕ್ಕಳ ಶಾರೀರಕ ಗುಣಗಳು ಸ್ಫುಟಗೊಂಡು ಪ್ರಕಾಶಗೊಳ್ಳುತ್ತವೆ; ಬಾಲಕ ಬಾಲಕಿಯರ ಭಿನ್ನ ವರ್ಚಸ್ಸೂ ವ್ಯಕ್ತಿತ್ವವೂ ರೂಪುಗೊಳ್ಳಲಾರಂಭಿಸುತ್ತವೆ. ವಾಕ್‌ಪಟಲಗಳು ವೃದ್ಧಿ ಹೊಂದಿ ಧ್ವನಿಯಲ್ಲಿ ಹೊಸ ಮಾಧುರ್ಯ ಕಂಡುಬರುತ್ತದೆ. ಅಂಗಗಳು ಪುಷ್ಟಿಗೊಂಡು ಮಿಂಚುತ್ತವೆ. ಇಡೀ ಶರೀರಕ್ಕೇ ನೂತನ ಕಾಂತಿ ಬಂದು ಯೌವನದ ಸೌಂದರ್ಯ ರಾರಾಜಿಸುತ್ತದೆ.

ಸಮಾಜ ಜೀವನದಲ್ಲಿ ನೂತನ ಆಸಕ್ತಿ ಆರಂಭವಾಗುತ್ತದೆ. ಕೇವಲ ಅದನ್ನು ಅನುಸರಿಸುವುದರಿಂದಲೇ ತೃಪ್ತರಾಗದೆ ತಮ್ಮ ವೈಶಿಷ್ಟ್ಯವನ್ನು ಅದರಮೇಲೆ ಬೀರಿ ತಮ್ಮ ದಾರಿಯಲ್ಲಿ ಸಮಾಜವನ್ನು ರೂಪಿಸಲು

ಯತ್ನಿಸುವ ಧೀರತನವೂ ಮುಂದಾಳುತನ ವಹಿಸುವ ಆಕಾಂಕ್ಷೆಯೂ ಪ್ರಕಾಶಕ್ಕೆ ಬರುತ್ತವೆ. ತಮ್ಮ ನಡೆನುಡಿಗಳನ್ನು ನೋಡಿ ಸಮಾಜ ಮೆಚ್ಚಬೇಕು, ಅದಕ್ಕಾಗಿ ಇತರರಂತೆ ತಾವೂ ನಡೆದುಕೊಳ್ಳಬೇಕು, ಎಂಬ ಮನೋಭಾವವೂ ಜೊತೆಗೆ ವಿವೇಚನಾದೃಷ್ಟಿಯೂ ಮೂಡುತ್ತವೆ. ಕುರಿಗಳಂತೆ ಹಿಂಡನ್ನು ಅವಲಂಬಿಸಲು ಒಪ್ಪುವುದಿಲ್ಲ. ತನ್ನ ಶಕ್ತಿಸಾಮರ್ಥ್ಯಗಳಲ್ಲಿ ಹೆಚ್ಚಿನ ನಂಬಿಗೆಯೂ, ಆಸಕ್ತಿಯೂ ಇದ್ದು ಸ್ವಾಭಿಮಾನದಿಂದ ಕಾರ್ಯಪ್ರವರ್ತರಾಗುತ್ತಾರೆ. ಆದರೆ ಹಿಂದಿನ ಸ್ವಾಭಿಮಾನದಂತೆ ಇದು ಸ್ವಾರ್ಥದ್ದಾಗಿರದೆ ಸಮಾಜದ ಪ್ರಗತಿಯ ಕಡೆ ವಾಲಿರುತ್ತದೆ. ತಾನೂ ಸಮಾಜದ ವ್ಯಕ್ತಿಯಾದ್ದರಿಂದ ತನ್ನಿಂದಲೂ ಸಮಾಜ ಮುಂದುವರಿಯಬೇಕೆಂದರಿತು ತಮ್ಮ ತಮ್ಮ ವಿಶಿಷ್ಟ ಕಾಣಿಕೆಯನ್ನು ಸಲ್ಲಿಸಬೇಕೆಂಬ ಹೆಬ್ಬಯಕೆ ಅಂಕುರಿಸುತ್ತದೆ. ಅಲ್ಲದೆ ತಮ್ಮೊಳಗಿರುವ ಶಕ್ತಿಸಾಮರ್ಥ್ಯಗಳು ಸಮಾಜದ ಹಿನ್ನೆಲೆಯ ಮೂಲಕವೇ ಪ್ರಕಾಶಕ್ಕೆ ಬರಬೇಕೆಂಬುದೂ ಆ ಮೂಲಕ ತಮ್ಮ ವ್ಯಕ್ತಿತ್ವವನ್ನು ಸಮಾಜ ಮೆಚ್ಚಿ ಗೌರವಿಸುವುದೆಂದೂ ಅರಿವಾಗುತ್ತದೆ.

ನವತಾರುಣ್ಯದ ದೈಹಿಕ ಸೌಂದರ್ಯದೊಡನೆ ಸಾಮಾಜಿಕ ಜೀವನ ಆರಂಭವಾಗಿ ಒಂದು ನೂತನ ವ್ಯಕ್ತಿತ್ವ ಮೂಡುತ್ತಿರುವಾಗಲೇ ಅವರ ಮಾನಸರಂಗದಲ್ಲಿ ಅಗಾಧವಾದ ಮಾರ್ಪಾಡುಗಳಾಗಹತ್ತಿರುತ್ತವೆ. ಶಾರೀರಕ ಗುಣಧರ್ಮಗಳು ಸ್ಫುಟಗೊಂಡು ರಸಿಕ ಜೀವನ ಆರಂಭವಾಗುತ್ತದೆ; ಬಾಲಕರು ಬಾಲಕಿಯರಲ್ಲೂ ಬಾಲಕಿಯರು ಬಾಲಕರಲ್ಲೂ ನೂತನ ಆಸಕ್ತಿಯನ್ನು ತೋರಿ ಪ್ರೇಮಾದರಗಳಿಂದ ವರ್ತಿಸುವರು. ಮಾನಸಶಕ್ತಿಯ ಪ್ರವಾಹ ಪ್ರಣಯದಲ್ಲಿ ಪ್ರವಹಿಸುವುದುಂಟು. ಸಂವೇದನೆಗಳು ಬಹು ರಭಸದಲ್ಲಿ ಮೊಳಗುತ್ತಿರುತ್ತವೆ. ಆವೇಶ ತುಳುಕಾಡುತ್ತದೆ. ಕರುಣ, ಕ್ರೋಧ, ಸಮಾಜಚಿಂತನೆ, ಮುಂತಾದ ಮನೋಗುಣಗಳು ವ್ಯಕ್ತಿಯನ್ನು ಒಂದೊಂದೂ ತನ್ನದೇ ಆದ ದಿಕ್ಕಿನಲ್ಲಿ ಸೆಳೆಯೊಯ್ಯಲು ಯತ್ನಿಸುತ್ತದೆ. ಅಷ್ಟೇಕೆ, ಯೌವನದ ಪ್ರಣಯದ ಜ್ವಾಲೆ ಇಡೀ ವ್ಯಕ್ತಿಯ ಜೀವನದ ಮೇಲೇ ವ್ಯಾಪಿಸಿ, ಅವನ ನಡೆನುಡಿಗಳ ಮೇಲೂ ಇನ್ನಿತರ ವರ್ತನೆಗಳ ಮೇಲೂ ಹೊಸ ಬಣ್ಣವನ್ನು ನೀಡಿರುತ್ತದೆ. ಅಂಥ ಸಮಯದಲ್ಲಿ ಆ ಮಹಾ ಮಾನಸಶಕ್ತಿಯ ಭೋರ್ಗರೆವ ಪ್ರವಾಹವನ್ನು ಉಚಿತ ಮಾರ್ಗದಲ್ಲಿ

ಯನ್ನು ಕೋರಿ ಪ್ರೇಮಾಸಕ್ತಿಗಳಿಂದ ವರ್ತಿಸುವರು. ಮಾನಸ ಶಕ್ತಿಯ ಪ್ರವಾಹ ಪ್ರಣಯ ಪಥದಲ್ಲಿ ಪ್ರವಹಿಸುವುದುಂಟು. ಸಂವೇದನೆಗಳು ಮಹಾ ರಭಸದಲ್ಲಿ ಮೊಳಗುತ್ತಿರುತ್ತವೆ. ಆವೇಶ ತುಳುಕಾಡುತ್ತದೆ. ಕರುಣ, ಕ್ರೋಧ, ಸಮಾಜಚಿಂತನೆ, ಮುಂತಾದ ಮನೋಗುಣಗಳು ವ್ಯಕ್ತಿಯನ್ನು ಒಂದೊಂದೂ ತನ್ನದೇ ಆದ ದಿಕ್ಕಿನಲ್ಲಿ ಸೆಳೆದೊಯ್ಯಲು ಯತ್ನಿಸುತ್ತದೆ. ಅಷ್ಟೇಕೆ, ಯೌವನದ ಪ್ರಣಯದ ಜ್ವಾಲೆ ಇಡೀ ವ್ಯಕ್ತಿಯ ಜೀವನದ ಮೇಲೆ ವ್ಯಾಪಿಸಿ, ಅವನ ನಡೆನುಡಿಗಳ ಮೇಲೂ ಇನ್ನಿತರ ವರ್ತನೆಗಳ ಮೇಲೂ ಹೊಸ ಬಣ್ಣವನ್ನು ನೀಡಿರುತ್ತದೆ. ಅಂಥ ಸಮಯದಲ್ಲಿ ಆ ಮಾನಸ ಶಕ್ತಿಯ ಭೋರ್ಗರೆವ ಪ್ರವಾಹವನ್ನು ಉಚಿತ ಮಾರ್ಗದಲ್ಲಿ ತಿರುಗಿಸಿ, ವ್ಯಕ್ತಿಗೂ ಸಮಾಜಕ್ಕೂ ಹಿತವಾಗುವಂತೆ ಮಾಡುವಾಗ ಶಿಕ್ಷಣ ಚತುರರು ತಮ್ಮ ಚಾತುರ್ಯವನ್ನೆಲ್ಲ ವಿನಿಯೋಗಿಸಬೇಕಾದೀತು. ಆಗ ಯುವಕ ಯುವತಿಯರ ಆ ಶಕ್ತಿಯನ್ನು ಕಲೋಪಾಸನೆ, ಸೌಂದರ್ಯೋಪಾಸನೆಗಳ ಕಡೆ ತಿರುಗಿಸಿದರೆ ಅತ್ಯಂತ ಫಲಪ್ರದವಾಗಿ ರೂಪುಗೊಳ್ಳುತ್ತದೆ. ಆ ಕಾಲದ ಮನಶ್ಶಕ್ತಿ ಬಲು ಪ್ರಬಲವಾದದ್ದು. ಸಾಮಾಜಿಕ, ವೈಯ್ಯಕ್ತಿಕ ಮತ್ತು ನೈತಿಕ ಮಾರ್ಗಗಳಲ್ಲಿ ಅದು ಫಲದಾಯಕವಾಗುವಂತೆ ಪರಿವರ್ತಿಸಿಕೊಳ್ಳಬೇಕು; ಹಾಗೆಯೇ ಸ್ವಾಭಿಮಾನ ಮತ್ತು ಇತರ ಹುಟ್ಟುಗುಣಗಳ ಶಕ್ತಿಯನ್ನೂ ವ್ಯಕ್ತಿ ಮತ್ತು ಸಮಾಜಗಳ ಹಿತಕ್ಕೊಪ್ಪುವಂತೆ ತಿರುಗಿಸಿಕೊಳ್ಳಬೇಕು.

ಯುವಕರ ವಿವಿಧ ಸಂವೇದನೆಗಳ ತರಂಗಗಳು ಆ ಕಾಲದಲ್ಲಿ ತುಂಬ ನವುರಾಗಿಯೂ, ವೇಗವಾಗಿಯೂ ಮೊಳಗುತ್ತಿರುತ್ತವೆ. ಬಾಲಕ ಬಾಲಕಿಯರ ಮನಸ್ಸಿನಲ್ಲಿ ಪ್ರೇಮವಾಹಿನಿ ಹರಿಯುತ್ತದೆ. ಅವರ ನಡೆನುಡಿಗಳಲ್ಲಿ ಕೋಮಲತೆ, ರಮ್ಯತೆ ಮುಂತಾದ ಹೊಸ ಚೆಲುವು ಮೂಡುತ್ತದೆ. ಮಾತಿನಲ್ಲೂ ಕೆಲಸದಲ್ಲೂ ನಾಜೋಕು, ರಸಿಕತೆ, ಕಲಾಪ್ರಿಯತೆ, ಗಾಂಭೀರ್ಯ, ಶೀಲ, ಅಭಿಮಾನಪೂರ್ವಕವಾದ ಸೇವಾಕಾಂಕ್ಷೆ — ಇವೇ ಮುಂತಾದ ಉದಾತ್ತ ಜೀವನ ಧ್ಯೇಯಗಳು ಗೋಚರಿಸುತ್ತವೆ. ಇವೆಲ್ಲಕ್ಕೂ ಯೌವನದ ಮಾನಸಿಕ ಶಕ್ತಿಯೇ ಬಣ್ಣ ಕೊಡುವ ತವರೆಂದು ಹೇಳಬಹುದು.

ಯುವಕರ ಮಾನಸಿಕ ಮತ್ತು ದೈಹಿಕ ವಯೋಗುಣಗಳ ಪರಿಚಯ ಶಿಕ್ಷಕರಿಗೆ ಬಹು ಅಗತ್ಯ; ಪೋಷಕರಿಗೂ ಅಷ್ಟೆ. ಕಾರಣಾಂತರಗಳಿಂದ

ಯುವಕರು ಅಡ್ಡದಾರಿ ಹಿಡಿದರೆ ಅವರನ್ನು ಸನ್ಮಾರ್ಗಕ್ಕೆ ತರಲು ಧರ್ಮೋಪದೇಶದಿಂದಾಗಲಿ ನೀತಿನಿಯಮಗಳಿಂದಾಗಲಿ ಸಾಧ್ಯವಾಗದು: ಹೊಡೆದು ಬೈದು ದಂಡಿಸಿದರೂ ಅದೇ ಪ್ರತಿಫಲ. ಅದು ಬೇಡ ಇದು ಬೇಡ ಎಂದು ತಿದ್ದಿ ಹಾಕಲು ಯತ್ನಿಸಿದರೆ ಯುವಕರ ಅಂತರಾತ್ಮ ಉರಿದೇಳುತ್ತದೆ. ಆದರೆ, ಅವರ ವಿವೇಚನಾ ಶಕ್ತಿಯನ್ನು ಪ್ರಚೋದಿಸಿ, ಉಚಿತವೆನಿಸುವ ಮಾರ್ಗ ಅರಿವಾಗುವಂತೆ ಮಾಡಬೇಕು. ವ್ಯವಹಾರಗಳ ಫಲದಿಂದ, ವಿಚಾರ ವಿನಿಮಯದಿಂದ, ಸಕಾರಣವಾಗಿರುವಂತೆ, ಸ್ನೇಹಪೂರ್ವಕವಾಗಿ ಒಳ್ಳೆಯ ನಡತೆಯ ಕಡೆ ಅವರ ಮನಸ್ಸು ಒಲಿಯುವಂತೆ ಮಾಡಬೇಕು.

ಪ್ರೌಢ ತರುಣ ತರುಣಿಯರಿಗೆ ತಮ್ಮ ವ್ಯಕ್ತಿತ್ವಕ್ಕೆ ಕಳಂಕ ಬರಬಾರದೆಂಬ ಹಿರಿಯ ಬಯಕೆಯಿರುತ್ತದೆ. ಅದಕ್ಕಾಗಿ ತಮ್ಮ ಮನಸ್ಸಿನಲ್ಲಿರಬಹುದಾದ ಅನೇಕ ಆಸೆ ಆಕಾಂಕ್ಷೆಗಳನ್ನು ಅದುಮಿ ಹಿಡಿಯುತ್ತಾರೆ. ಇತರರು ಹಂಗಿಸಿಯಾರೆಂಬ ಭೀತಿಯಿಂದ ಎಂಥ ಕಷ್ಟಗಳನ್ನಾದರೂ ಸಹಿಸಿಯಾರು. ಹಲವು ತರುಣತರುಣಿಯರು ಇದ್ದಕ್ಕಿದ್ದ ಹಾಗೆ ಕಾಂತಿಹೀನರಾಗುತ್ತಿರುವುದಕ್ಕೆ ಇಂಥ ಯಾವುದೋ ಒಂದು ಕಾರಣವಿರುತ್ತದೆ. ಅದರಂತೆಯೇ ಯಾವುದೋ ಭವ್ಯ ಭವಿಷ್ಯವೊಂದನ್ನು ನೆನೆದು, ಮನಸ್ಸಿನಲ್ಲಿ ಗಾಳಿಗೋಪುರ ಕಟ್ಟಿಕೊಂಡು ಹಿರಿಹಿಗ್ಗಿನಲ್ಲಿ ಮೆರೆಯುವುದೂ ಉಂಟು. ಹೀಗೆ ದುಃಖದಿಂದ ಕುಗ್ಗುವುದೂ ಸುಖದಿಂದ ಹಿಗ್ಗುವುದೂ ಈ ಕಾಲದಲ್ಲಿ ಅತಿಯಾಗಿರುತ್ತದೆ. ಆಗಾಗ ಮುಂದಿನ ಜೀವನದ ಯೋಚನೆಗಳೂ ಸುಳಿದುಕೊಂಡು ತಲೆಯೆಲ್ಲವನ್ನೂ ಕೆಡಿಸಿಕೊಳ್ಳುವುದೂ ಉಂಟು. ಕಷ್ಟಗಳಿಗಾಗಿಯೋ ಮನೋವಿಫಲತೆಗೋ, ಇತರರು ಹಂಗಿಸುವರೆಂದೋ ತುಂಬ ನಿರಾಶೆಯೂ ನಿರುತ್ಸಾಹವೂ ಹುಟ್ಟಿ, ಜೀವನವೇ ಒಂದು ಹೊರೆಯಾಗಿ ಪರಿಣಮಿಸುವುದೂ ಉಂಟು.

ನವ ಯುವಕ ಯುವತಿಯರಲ್ಲಿ ನೂತನವಾಗಿ ಆದರ್ಶಗಳು ಮೂಡುತ್ತವೆ. ದೇಶಾಭಿಮಾನ ಅವುಗಳಲ್ಲಿ ಬಹು ಮುಖ್ಯವಾದದ್ದು. ಅದರ ಸಾಧನೆಗಾಗಿ ತಮ್ಮ ಮಿಕ್ಕೆಲ್ಲ ಅಸ್ತಿತ್ವವನ್ನೂ ಬಲಿಕೊಡಲು ಸಿದ್ಧರಿರುವರು. ಜಗತ್ತಿನ ಎಲ್ಲ ದೇಶಗಳ ಸ್ವಾತಂತ್ರ್ಯ ಹೋರಾಟಗಳಲ್ಲೂ ಈ ವಯಸ್ಸಿನವರೇ ಹೆಚ್ಚು ಭಾಗವಹಿಸಿರುವುದನ್ನು ಅರಿತಾಗ ಆ ಅಂಶ ಸ್ಪಷ್ಟಪಡುತ್ತದೆ. ನಾಡಿನ ರಾಜಕೀಯ ಮುಂದಾಳುಗಳೂ ಆದರ್ಶಜೀವಿಗಳೂ ಅವರ ಆರಾಧನಾ

ಮೂರ್ತಿಗಳಾಗುತ್ತಾರೆ. ದೇಶಭಕ್ತರನೇಕರ ಭಾವಚಿತ್ರಗಳನ್ನು ಭಕ್ತಿ ಸ್ಫೂರ್ತಿಗಳಿಂದ ಪೂಜಿಸುವ ಯುವಕರನ್ನು ನೋಡಿದರೆ ಈ ಅಂಶ ಸ್ಥಿರಪಡು ತ್ತದೆ. ಅಂಥ ಮಹಾವ್ಯಕ್ತಿಗಳ ಮಟ್ಟಕ್ಕೆ ತಾವೂ ಏರಬೇಕೆಂಬ ಕನಸು ಅವರ ಜೀವನದ ನಿತ್ಯಮಂತ್ರವಾಗಿರುತ್ತದೆ.

ಮತಧರ್ಮಶಿಕ್ಷಣಕ್ಕೂ ಇದು ಉಚಿತವಾದ ಕಾಲ. ಪವಿತ್ರ ದೃಷ್ಟಿ ಧ್ಯೇಯಗಳಿಂದ ಪ್ರೇರಿತರಾಗಿ, ಮತಧರ್ಮದಲ್ಲಿ ಯುವಕರಿಗೆ ಅಭಿಮಾನ ಉಕ್ಕುತ್ತಿರುತ್ತದೆ. ಈ ಅಭಿಮಾನ ಅನೇಕವೇಳೆ ಮತಾಂಧತೆಯ ರೂಪ ವನ್ನೂ ತಾಳಬಹುದು. ಅದಕ್ಕೆ ಅವಕಾಶ ಕೊಡದಂಥ ಶಿಕ್ಷಣ ಆವಶ್ಯಕ. ನೈತಿಕ ಮತ್ತು ದೈಹಿಕ ಭಾವನೆಗಳೂ ಬೇರೂರುವುದೂ ಈ ಕಾಲದಲ್ಲೇ. ಆಗ ಧರ್ಮಭ್ರಷ್ಟರಾಗಿ ನಾಸ್ತಿಕರಾದರೆ ಆಜೀವವೂ ಅವರ ಮನಸ್ಸಿನಲ್ಲಿ ದೈವಿಕಭಾವನೆಯ ನಿಶ್ಚಲ ಚಿತ್ರ ಬೇರೂರಲಾರದು. ಇತರ ಮತಗಳ ಧರ್ಮ ತತ್ತ್ವಗಳನ್ನೂ ಅಭ್ಯಾಸಿಸಿ, ಆ ದೃಷ್ಟಿಧ್ಯೇಯಗಳಿಂದ ಆಕರ್ಷಿತರಾಗಿ ಮತಾಂತರ ಹೊಂದುವ ಮನೋಭಾವವೂ ಈ ಕಾಲದಲ್ಲಿ ತೀಕ್ಷ್ಣವಾಗಿರು ತ್ತದೆ. ಜೀವನಯಾತ್ರೆಯ ಎಡರುತೊಡರುಗಳಿಂದ ಉಂಟಾಗುವ ಅವ ಮಾನವನ್ನು ಸಹಿಸಲು ಯುವಕರಿಗೆ ದುಸ್ಸಹ. 'ಛಲದಂಕ ಮಲ್ಲರೂ, ಮಾನಧನರೂ' ಆಗಿ ವರ್ತಿಸುವಂತೆ ತೋರುತ್ತಾರೆ.

ದೈಹಿಕ, ಮಾನಸಿಕ ಮತ್ತು ನೈತಿಕ ಶಕ್ತಿಗಳು ಇಷ್ಟೊಂದು ತೀಕ್ಷ್ಣ ವಾಗಿ ಜ್ವಲಿಸುವ ಈ ಕಾಲ ಶಿಕ್ಷಣ ದೃಷ್ಟಿಯಿಂದ ಬಹು ಮುಖ್ಯವಾದದ್ದು. ಜೊತೆಗೆ, ಪ್ರಣಯ ಜೀವನದ ಹೊಂಬೆಳಕು ಅವರ ಇಡೀ ವ್ಯಕ್ತಿತ್ವಕ್ಕೇ ನೂತನ ಕಾಂತಿ ತಂದಿರುತ್ತದೆ. ಆ ಕಾಲದ ಶಿಕ್ಷಣದ ಭಾರವನ್ನು ಹೊತ್ತಿರುವ ಶಿಕ್ಷಕರೂ ಪೋಷಕರೂ ಬಲು ಎಚ್ಚರಿಕೆಯಿಂದಲೂ ಕೌಶಲ್ಯದಿಂದಲೂ ಕಾರ್ಯ ಸಾಧಿಸಬೇಕು. ಬೋಧನಕ್ರಮ, ಶಿಸ್ತಿನ ಸಮಸ್ಯೆ, ಶಾಲಾ ಸಂವಿ ಧಾನ ಮತ್ತು ಸಾಮಾಜಿಕ ಶಿಕ್ಷಣ ಇವೆಲ್ಲ ತುಂಬ ತೊಡಕಿನವಾಗಿದ್ದು, ಉಪಾ ಧ್ಯಾಯರು ದಕ್ಷರೂ, ಕುಶಲರೂ ಅಲ್ಲದಿದ್ದರೆ ಅನರ್ಥವಾಗಬಹುದು.

ಆ ಕಾಲದ ಕೊನೆಕೊನೆಗೆ ಸಮಾಜದಲ್ಲಿ ತಾನೂ ಒಬ್ಬ ಸತ್ಪ್ರಜೆ ಯಾಗಿ ಬಾಳಬೇಕೆಂಬ ಅಭಿಲಾಷೆ ಬೆಳೆದು ಸಮಾಜದ ನೀತಿನಿಯಮಗಳಿಗೂ ಸಂಪ್ರದಾಯಗಳಿಗೂ ಹೊಂದಿಕೊಂಡು ಹೋಗುವ ಯತ್ನ ನಡೆಯುತ್ತದೆ.

ಆ ಮೂಲಕ ಸಮಾಜದ ಕಟ್ಟಿಗೆ ತಾನಾಗಿಯೇ ತಲೆಬಾಗಿ ಅದರ ಸುಖ ಶಾಂತಿಗೆ ನೆರವಾಗುವ ಬುದ್ಧಿಯೂ ಬೆಳೆಯುತ್ತದೆ. ಆದರೂ ಕೆಲವರು ಸಮಾಜ ಜೀವನದಲ್ಲಿ ಆಸಕ್ತಿಯೇ ಇಲ್ಲದೆ ತಮ್ಮ ಅಂತರಂಗದಲ್ಲಿ ಯಾವುದೋ ಚಿಂತನೆಯನ್ನೋ ಸಾಧನೆಯನ್ನೋ ನಡಸುತ್ತಿರುತ್ತಾರೆ. ಅಂಥವರ ಶಿಕ್ಷಣ ಬಹು ತೊಡಕಿನದಾಗುತ್ತದೆ.

ನೂತನ ಜ್ಞಾನಾಕಾಂಕ್ಷೆಯೂ ಯುವಕರಲ್ಲಿ ಬಹುವಾಗಿರುತ್ತದೆ. ಹಾಗೂ ಸಂಶೋಧನೆಯೆಂದರೆ ಪ್ರಾಣ. ಪ್ರಪಂಚದ ಆಗು ಹೋಗಿನ, ಜೀವನದ ರೂಪು ರೇಖೆಗಳ, ಪರಿಚಯ ಮಾಡಿಕೊಳ್ಳಲು ಅವರಿಗೆ ತುಂಬ ಕಾತರ. ಯಾವ ನೂತನ ವಿಷಯಗಳು ಪರಿಚಯವಾಗಲಿ, ಅವುಗಳಿಗೆ ಆಧಾರಭೂತವಾದ ಒಂದು ಸಾಮಾನ್ಯ ತತ್ತ್ವವನ್ನೋ ನಿಯಮವನ್ನೋ ಕಲ್ಪಿಸಲು ಯತ್ನಿಸುತ್ತಾರೆ. ತಾವು ಓದಿದ, ಕಂಡ, ತಿಳಿದ ವಿಷಯಗಳ ಮೇಲೆ ನಿರರ್ಗಳವಾಗಿ ಯೋಚಿಸಿ ಅವುಗಳಿಗೆ ಸಂಬಂಧಿಸಿದ ನೂತನ ತತ್ತ್ವಗಳನ್ನು ಕಂಡುಕೊಳ್ಳಲು ಆಳವಾಗಿ ಅಭ್ಯಾಸ ಮಾಡುತ್ತಾರೆ. ಕೆಲವರಲ್ಲಿ ಇಂಥ ವಿಚಾರದೃಷ್ಟಿ ಅತಿಯಾಗಿ ಹಗಲುಗನಸಿನ ಕಲ್ಪನಾ ಚಿತ್ರಗಳನ್ನು ಕಟ್ಟಿಕೊಂಡು ನಿಲುಗಡೆಯಿಲ್ಲದೆ ವೈಪರೀತ್ಯಕ್ಕೆ ಹೋಗುವುದೂ ಕಂಡುಬರುತ್ತದೆ.

ಹಾಗೆ ಕೇವಲ ಭಾವನೆಗಳ ಗೋಪುರಗಳನ್ನೇ ಕಟ್ಟಿಕೊಂಡು ಕಾಲ ಕಳೆಯುವವರನ್ನು ಕಾರ್ಯಮುಖರಾಗುವಂತೆ ಪ್ರೋತ್ಸಾಹಿಸುವುದು ಉತ್ತಮ. ಆಗ ಮಾತ್ರ ಕೇವಲ ಆಲೋಚನಾ ಪ್ರಪಂಚದಲ್ಲೇ ಮಗ್ನರಾಗಿರುವವರನ್ನು ಪ್ರಪಂಚದ ಇನ್ನಿತರ ವ್ಯವಹಾರದ ಕಡೆಗೂ ಸೆಳೆದು, ಅವರ ವ್ಯಕ್ತಿತ್ವ ಏಕಮುಖವಾಗಿ ಬೆಳೆದು ಅಪೂರ್ಣವಾಗುವುದನ್ನು ನಿವಾರಿಸಬಹುದು: ವಿಜ್ಞಾನಶಾಸ್ತ್ರದ ಪ್ರಯೋಗಗಳನ್ನು ನಡಸುವಂತೆ ಪ್ರೋತ್ಸಾಹಿಸಬೇಕು; ಉತ್ತಮವೂ ಲಾಭದಾಯಕವೂ ಆದ ಪುಸ್ತಕಗಳನ್ನು ಓದುವಂತೆ ಉತ್ಸಾಹ ತುಂಬಬೇಕು. ಆದರೆ, ಕೇವಲ ಪುಸ್ತಕವೊಂದೇ ಜ್ಞಾನಾರ್ಜನೆಯ ಸಾಧನವೆಂದು ಭಾವಿಸದಂತೆ ನೋಡಿಕೊಳ್ಳಬೇಕು. ಸಮಾಜದಿಂದಲೂ ಕಲಿಯಬೇಕಾದ ದಿವ್ಯಾನುಭವಗಳಿವೆಯೆಂಬುದನ್ನು ಮನದಟ್ಟು ಮಾಡಿಕೊಟ್ಟು, ಶಾಲೆಯ ವಿವಿಧ ಸಂಘಸಂಸ್ಥೆಗಳಲ್ಲಿ ಭಾಗವಹಿಸಲು ಅವಕಾಶ ಕಲ್ಪಿಸಬೇಕು. ಜೊತೆಗೆ, ಅಂಗಸಾಧನೆ, ಮಲ್ಲಯುದ್ಧ, ಕೋಲಾಟ

ಮುಂತಾದವುಗಳ ಮೂಲಕ ದೇಹಕ್ಕೂ ಕೆಲಸವಾಗಿ ಮಾಂಸಖಂಡಗಳು ಪುಷ್ಟಿಗೊಂಡು ಬಲವಾಗುವಂತೆಯೂ ಬುದ್ಧಿ ಮತ್ತು ಮನಸ್ಸು ಎರಡೂ ಸಮಸಮವಾಗಿ ಶಿಕ್ಷಣಗೊಳ್ಳುವಂತೆಯೂ ಮಾಡಬೇಕು.

ಯುವಕರ ಅಭಿರುಚಿಆಸಕ್ತಿಗಳು ಈ ಕಾಲದ ಪೂರ್ವಾರ್ಧದಲ್ಲಿ ವಿಶಿಷ್ಟ ಮಾರ್ಗದಲ್ಲಿ ಬೆಳೆಯಲು ಆರಂಭಿಸುತ್ತವೆ. ಆದ್ದರಿಂದ ಉಪಾಧ್ಯಾಯರು ಆಗ ಒಬ್ಬೊಬ್ಬರಲ್ಲೂ ಆಸಕ್ತಿ ವಹಿಸಿ, ವೈಯ್ಯಕ್ತಿಕವಾಗಿ ಅವರ ನಿಜವಾದ ಅಭಿರುಚಿಯನ್ನು ಅರಿತುಕೊಳ್ಳಬೇಕು. ಅಮೆರಿಕದಲ್ಲಿ ಅದಕ್ಕೋಸ್ಕರವೇ 'ಜೂನಿಯರ್ ಹೈಸ್ಕೂಲ್' ಎಂಬ ಹೆಸರಿನ ಶಿಕ್ಷಣ ಸಂಸ್ಥೆಗಳಿವೆ. ಅವುಗಳನ್ನು ನಮ್ಮ ಮಾಧ್ಯಮಿಕ ಶಾಲೆಗಳ ಮೇಲ್ತರಗತಿಗಳಿಗೆ ಹೋಲಿಸಬಹುದು. ಅಭಿರುಚಿಯ ನಿಷ್ಕರ್ಷೆಯೇ ಆ ಶಾಲೆಗಳ ಮೂಲ ಉದ್ದೇಶ. ಅಲ್ಲಿ ಯಾರಿಗೆ ಯಾವುದರಲ್ಲಿ ಆಸಕ್ತಿಯಿದೆಯೆಂಬುವನ್ನು ಪರಿಶೀಲಿಸಿದ ಮೇಲೆ ಮುಂದಿನ 'ಸೀನಿಯರ್ ಹೈಸ್ಕೂಲಿ'ನಲ್ಲಿ ಆ ವಿಷಯವನ್ನು ಐಚ್ಛಿಕ ಭಾಗವನ್ನಾಗಿ ಕೊಡುತ್ತಾರೆ. ಅದರಿಂದ ಅವರ ಅಭಿರುಚಿ ಪ್ರಕಾಶಗೊಳ್ಳಲು ಅನುಕೂಲವಾದ ಸನ್ನಿವೇಶನಗಳನ್ನು ಕಲ್ಪಿಸಿದಂತಾಗುತ್ತದೆ.

ಯುವಕರ ಮನಸ್ಸಿನಲ್ಲಿ ಮುಂದಿನ ತಮ್ಮ ಜೀವನೋಪಾಯದ ದೃಷ್ಟಿಯೂ ಇರುತ್ತದೆ. ಅವರು ಸ್ವತಂತ್ರವಾಗಿ ಅತಿ ಬೇಗ ಜೀವನ ಆರಂಭಿಸಬೇಕಾಗಿರುವುದರಿಂದ ಅದಕ್ಕನುಕೂಲಿಸುವ ಉದ್ಯಮಗಳ ಶಿಕ್ಷಣವೂ ಈ ಕಾಲದಲ್ಲಿ ನಡೆಯಬೇಕು. ಅವರ ಆಸಕ್ತಿಗಳನ್ನರಿತು ಅವರಿಗೊಪ್ಪುವ ವೃತ್ತಿ ಶಿಕ್ಷಣವನ್ನು ಕೊಡುವುದುತ್ತಮ. ಕೆಲವು ಪಾಠಶಾಲೆಗಳಲ್ಲಿ ಒಂದೋ, ಎರಡೋ ಐಚ್ಛಿಕ ವಿಷಯಗಳಿದ್ದು ಅಭಿರುಚಿಯಿರಲಿ, ಇಲ್ಲದಿರಲಿ ಅದನ್ನೇ ಕೊಡುವುದುಂಟು. ಇದು ತುಂಬ ಅನ್ಯಾಯ. ಶಾಲೆಯಲ್ಲಿ ಇರುವುದನ್ನೇ ಅಭ್ಯಾಸಿಸುವಂತೆ ಎಲ್ಲರನ್ನೂ ಆ ಮೂಲಕ ಬಲಾತ್ಕರಿಸುವುದು ಶಿಕ್ಷಣ ದೃಷ್ಟಿಯಿಂದ ಹಿತಕರವಲ್ಲ; ಅವರವರ ಅಭಿರುಚಿಗೆ ತಕ್ಕಂತೆ ಶಿಕ್ಷಣ ಕೊಡದಿರುವುದು ಪ್ರಜಾಸತ್ತಾತ್ಮಕ ತತ್ತ್ವಕ್ಕೂ ಒಪ್ಪುವುದಿಲ್ಲ; ಮೇಲಾಗಿ, ಸಮಾಜದ ಹಿತವೂ ಸಾಧನೆಯಾಗುವಂತಿಲ್ಲ: ಮೊದಲನೆಯದಾಗಿ, ವ್ಯಕ್ತಿಗೆ ನಿಜವಾದ ಅಭಿರುಚಿ ಆಸಕ್ತಿಗಳಿರುವ ವಿದ್ಯೆ ಕಲಿಯಲು ಅವಕಾಶವಿಲ್ಲವಾಗಿ ಅವನ ಶಕ್ತಿ ಸಾಮರ್ಥ್ಯಗಳು ಪ್ರಕಾಶಕ್ಕೆ ಬಾರದೆ, ಅವನಿಂದ ಸಲ್ಲಬಹುದಾಗಿದ್ದ ವಿಶಿಷ್ಟ

ಕಾಣಿಕೆ ಸಮಾಜಕ್ಕೆ ನಷ್ಟವಾಗುತ್ತದೆ; ಎರಡನೆಯದಾಗಿ, ಬಹು ಮಂದಿ ಮುಂತೆ ಒಂದೇ ಕೆಲಸವನ್ನು ಅವಲಂಬಿಸಬೇಕಾಗಿ ಬಂದು ಸಮಾಜಕ್ಕೆ ಬೇಕಾದ ಎಲ್ಲ ಆವಶ್ಯಕತೆಗಳನ್ನೂ ಪೂರೈಸುವುದು ಕಷ್ಟವಾಗುತ್ತದೆ. ಇಂಥ ದೋಷಗಳನ್ನು ನಿವಾರಿಸಲು ಪ್ರೌಢಶಾಲೆಗಳಲ್ಲಿ ಆದಷ್ಟು ಹೆಚ್ಚು ಸಂಖ್ಯೆಯಲ್ಲಿ ಕೈಕೆಲಸ, ಉದ್ಯಮ, ಕಲೆಗಳನ್ನು ಐಚ್ಛಿಕ ವಿಷಯವಾಗಿ ಏರ್ಪಡಿಸುವುದು ಆವಶ್ಯಕ.

ಹೀಗೆ ಮಕ್ಕಳ ಬೇರೆ ಬೇರೆ ವಯಸ್ಸಿನಲ್ಲಿ ದೈಹಿಕ ಮತ್ತು ಮಾನಸಿಕ ಗುಣಗಳಲ್ಲಿ ಭಿನ್ನತೆ ಕಂಡುಬರುತ್ತದೆ. ಆ ವಯೋಗುಣಗಳನ್ನು ಗಣನೆಗೆ ತೆಗೆದುಕೊಂಡು ಶಿಕ್ಷಣರಂಗದ ಎಲ್ಲ ಕಾರ್ಯಗಳನ್ನೂ ಉಚಿತವೆನಿಸುವಂತೆ ಏರ್ಪಡಿಸಿಕೊಳ್ಳಬೇಕು. ಮಕ್ಕಳ ವಯೋಗುಣಗಳಾವುವೂ ಶಿಕ್ಷಣವಿಲ್ಲದೆ ಮಂಕಾಗದಂತೆ, ಅವುಗಳು ಪ್ರಕಾಶಕ್ಕೆ ಬರುವ ವಯಸ್ಸನ್ನು ಅರಿತು, ಅವುಗಳನ್ನು ಸಂಸ್ಕರಿಸಲು ನೆರವಾಗುವ ಚಟುವಟಿಕೆಗಳನ್ನೂ, ಇತರ ಸನ್ನಿವೇಶಗಳನ್ನೂ ಏರ್ಪಡಿಸಿಕೊಂಡು ಶಾಲೆಗಳು ಅಂತಸ್ತುಗಳಾಗಿ ರೂಪುಗೊಳ್ಳಬೇಕು. ಅಂಥ ಒಂದೊಂದು ಶಾಲೆಯ ಜೀವನವನ್ನೂ ಮಕ್ಕಳು ಪೂರ್ಣವಾಗಿಯೂ ಫಲಪ್ರದವಾಗಿಯೂ ಬಾಳುವಂತಾಗಬೇಕು.

# ೭. ಪಠ್ಯವಸ್ತುವಿನ ನಿರ್ಮಾಣ

ಮಕ್ಕಳ ಬೆಳವಣಿಗೆಯ ಅಂತಸ್ತುಗಳನ್ನೂ ಅವುಗಳ ವಯೋಗುಣಗಳನ್ನೂ ವಿವರಿಸಿ ಆಯಾ ಕಾಲಗಳಿಗೊಪ್ಪುವ ಶಿಕ್ಷಣದ ಸ್ವರೂಪವನ್ನು ಸ್ಥೂಲವಾಗಿ ತಿಳಿದುಕೊಂಡೆವು. ನಮ್ಮ ಶಿಕ್ಷಣರಂಗ ಯಶಸ್ವಿಯಾದ ಕಾರ್ಯ ಸಾಧಿಸಬೇಕಾದರೆ ಆಯಾ ಅಂತಸ್ತಿಗೊಪ್ಪುವ ಶಾಸ್ತ್ರೀಯ ಪಠ್ಯವಸ್ತು ಅಗತ್ಯವೆಂಬ ಅಂಶವೂ ಆ ಮೂಲಕ ಸ್ಪಷ್ಟಪಟ್ಟಿದೆ. ಭಾರತೀಯ ಶಿಕ್ಷಣ ರಂಗದ ಇಂದಿನ ಪಠ್ಯವಿಷಯ ಉಚಿತವಾಗಿಲ್ಲವೆಂಬ ಅಭಿಪ್ರಾಯ ಜನತೆಯಲ್ಲಿ ಬೇರೂರಿದೆ. ಈ ವಿಷಯುವನ್ನು ಪರಿಶೀಲಿಸುವ ಮುನ್ನ, ಪಠ್ಯವಿಷಯವನ್ನು ನಿರ್ಮಿಸುವಾಗ ಯಾವ ಯಾವ ತತ್ವದೃಷ್ಟಿಗಳು ನೆರವಾಗಿವೆಯೆಂಬುದನ್ನು ಪರಿಚಯ ಮಾಡಿಕೊಳ್ಳುವುದು ಅಗತ್ಯ.

೧. **ಪೂರ್ವವಾಸನೆಗಳ ಪುನರಾವೃತ್ತಿಯ ತತ್ವದೃಷ್ಟಿ :** ಮಾನವನಿಗೆ ತನ್ನ ಪೂರ್ವಜರ ಇತಿಹಾಸ, ಸಂಸ್ಕೃತಿ, ಸಾಹಿತ್ಯ, ಮತ್ತು ಇತರ ಕಲೆಗಳು ವಿವಿಧ ರೂಪದಲ್ಲಿ ಹಸ್ತಗತವಾಗಿ ಬರುತ್ತಿವೆ. ಈ ಅನುಭವಸಂಪತ್ತೆಲ್ಲ ಒಂದುಕಾಲದ ಜನತೆಯಾಗಲಿ, ಒಂದೇ ತಲೆಮಾರಿನಲ್ಲಾಗಲಿ ಸಾಧಿಸಿದ್ದಲ್ಲ: ಆದಿಮಾನವನು ಉದಯುವಾದಂದಿನಿಂದ ಇಂದಿನವರೆಗೂ ಕ್ರಮ ಕ್ರಮವಾಗಿ ಬೆಳೆದು, ವಿಕಸಿಸಿದೆ. ಆ ಅನುಭವರಾಶಿಯನ್ನು ಇಂದಿನ ಮಕ್ಕಳು ಅರಿತುಕೊಳ್ಳುವಾಗ ನಮ್ಮ ಪೂರ್ವಜರು ಅದನ್ನು ಸಾಧಿಸಿದ ಕ್ರಮದಲ್ಲೇ ಪರಿಚಯ ಮಾಡಿಕೊಳ್ಳಬೇಕೆಂಬುದೇ ಈ ತತ್ವದೃಷ್ಟಿಯ ತಿರುಳು. ಮಂಗ ಪೂರ್ವಜರಿಂದ ಆದಿಮಾನವನು ಉದಯವಾಗಿ ವಿಕಸಿಸಿದಂತೆ ಅವನ ಮನಶ್ಶಕ್ತಿ ಕ್ರಮ ಕ್ರಮವಾಗಿ ಮಜಲುಮಜಲುಗಳಾಗಿ ಉತ್ಕರ್ಷಣಗೊಂಡು, ರೂಪುಗೊಳ್ಳುತ್ತಾ ಬಂತು. ಅದೇ ಕ್ರಮದಲ್ಲಿ ಇಂದಿನ ನಮ್ಮ ಮಕ್ಕಳ ಮನಸ್ಸೂ ಬೆಳೆಯುತ್ತಾ ಬರುವುದೆಂಬುದೂ, ಮಕ್ಕಳ ಬೇರೆ ಬೇರೆ ವಯಸ್ಸಿಗೆ ಪಠ್ಯವಿಷಯವನ್ನು ಗೊತ್ತುಮಾಡುವಾಗ ಮಾನವನ ವಂಶೇತಿಹಾಸದಲ್ಲಿ ಕಂಡುಬರುವ ಅಂತಸ್ತುಗಳನ್ನೇ ಅನುಸರಿಸಬೇಕೆಂಬುದೂ ಈ ತತ್ವದೃಷ್ಟಿಯ ವಾದ. ಮಾನವನ ಬೆಳವಣಿಗೆಯಲ್ಲೂ, ಅವನ ವಂಶದ ಚರಿತ್ರೆಯಲ್ಲಿ ಯಾವ ಕ್ರಮ

ದಲ್ಲಿ ಮನಶ್ಶಕ್ತಿ, ಹುಟ್ಟುಗುಣ, ಸಂವೇದನೆ ಮುಂತಾದವು ಸ್ಫುರಿಸಿದುವೋ ಅದೇ ಕ್ರಮದಲ್ಲಿ ಮಕ್ಕಳಲ್ಲೂ ಪ್ರಕಾಶನಕ್ಕೆ ಬರುತ್ತವೆಂಬುವೇ ಈ ತತ್ತ್ವದೃಷ್ಟಿಗಿರುವ ಆಧಾರ. ಎಂದರೆ ವಂಶೇತಿಹಾಸದ ಬೆಳವಣಿಗೆಯ ಘಟ್ಟಗಳು ಮಕ್ಕಳ ಬೆಳವಣಿಗೆಯಲ್ಲೂ ಕ್ರಮವಾಗಿ ಪುನರಾವರ್ತನೆಯಾಗುವುವೆಂದು ಇದರ ಅಭಿಪ್ರಾಯ. ಇದನ್ನು ವಿವರಿಸಲು ಭಾಷೆಯ ಬೆಳವಣಿಗೆಯನ್ನು ಉದಹರಿಸಬಹುದು: ಆದಿಮಾನವನಿಗೆ ಮೊದಲು ಕೇವಲ ಶಬ್ದಮಾಡಲು ಮಾತ್ರ ಬರುತ್ತಿತ್ತು; ಆಗ ಅವನು ಅಂಗ ಭಂಗಿಗಳಿಂದ ಮಾನದಿಚ್ಛೆಯನ್ನು ವಿವರಿಸುತ್ತಿದ್ದನು. ಆಮೇಲೆ ಮಾತು ಸಿದ್ಧಿಸಿತು; ಮಾತಾಡುವ ಶಕ್ತಿ ಬೆಳೆದಂತೆ ಭಾಷೆಯೂ ರೂಪುಗೊಳ್ಳುತ್ತಾ ಬಂತು; ಕೊನೆಗೆ, ಸಾಹಿತ್ಯ ನಿರ್ಮಾಣವಾಯಿತು. ಮಕ್ಕಳಲ್ಲೂ ಮೊದಲು 'ಕಾಕಾ, ಮಾಮಾ, ಆಹಾ, ಕೂಕೂ' ಇತ್ಯಾದಿ ಅರ್ಥವಿರಹಿತ ಶಬ್ದಗಳು ಮಾತ್ರ ಉಚ್ಚಾರಣೆಯಲ್ಲದ್ದು ಮೇಲೆ ವಿವರಿಸಿದ ಕ್ರಮದಲ್ಲೇ ಮುಂದೆ ವಾಕ್ಶಕ್ತಿ ಬೆಳೆದು, ಭಾಷೆ ಪಕ್ವವಾಗುತ್ತದೆ. ಹೀಗೆಯೇ ಇತರ ವಿಷಯಗಳಲ್ಲೂ ಕೂಡ. ಆದ್ದರಿಂದ ಮಾನವನ ವಂಶದಲ್ಲಿ ಬೇರೆ ಬೇರೆ ಅನುಭವ ಸಂಪತ್ತು ಸಿದ್ಧಿಸಿದ ಮತ್ತು ಬುದ್ಧಿ ವಿಕಾಸಗೊಂಡ ಕ್ರಮವನ್ನು ತಿಳಿದುಕೊಂಡು, ಮಕ್ಕಳ ಬೇರೆ ಬೇರೆ ವಯಸ್ಸಿಗೆ ಆ ಕ್ರಮದಲ್ಲೇ ಪಠ್ಯವಸ್ತುವನ್ನು ನಿಯಮಿಸುವುದು ಸೂಕ್ತವೆಂದು ಹಲವರು ಭಾವಿಸಿದರು. ಆದರೆ ಈ ಅಭಿಪ್ರಾಯ ಸಾಧುವಲ್ಲ. ಈ ವಾದ ಅನೇಕ ಸಂದರ್ಭಗಳಲ್ಲಿ ಅರ್ಥವಿರಹಿತವಾಗಿ ತೋರುತ್ತದೆ. ಆದರೂ ಈ ತತ್ತ್ವದೃಷ್ಟಿಯಿಂದ ಮಕ್ಕಳ ಮನಶ್ಶಕ್ತಿ ಅಭಿವೃದ್ಧಿಯಾಗುವ ಕ್ರಮವನ್ನು ಅರಿತುಕೊಂಡು, ಆ ಮೂಲಕ, ಅದಕ್ಕೆ ಅನುಕೂಲಿಸುವ ರೀತಿಯಲ್ಲಿ ಪಠ್ಯವಸ್ತುವನ್ನು ಆರಿಸಿ, ಅಳವಡಿಕೊಳ್ಳಲು ಶಿಕ್ಷಕರಿಗೆ ಸಹಾಯವಾಗುತ್ತದೆ.

**೨. ಸಂಸ್ಕೃತಿಯ ಐತಿಹಾಸಿಕ ಘಟ್ಟಗಳ ತತ್ತ್ವದೃಷ್ಟಿ:** ಜರ್ಮನಿಯ ಹರ್ಬಾರ್ಟ್ ಮತ್ತು ಅವನ ಅನುಯಾಯಿಗಳು ಕಳೆದ ಶತಮಾನದಲ್ಲಿ ಈ ವಾದವನ್ನು ಆರಂಭಿಸಿದರು. ಮಾನವವರ್ಗದ ಚರಿತ್ರೆಯನ್ನು ಪರಿಶೀಲಿಸಿದರೆ ಅವನ ನಾಗರಿಕತೆ ಹಲವು ಪ್ರಧಾನ ಘಟ್ಟಗಳಾಗಿ ಬೆಳೆದು ಬಂದಿದೆಯೆಂಬುದು ಗೊತ್ತಾಗುತ್ತದೆ. ನಮ್ಮ ಶಾಲೆಗಳಲ್ಲೂ ಆ ಕ್ರಮದಲ್ಲೇ ಪಠ್ಯವಸ್ತುವನ್ನು ನಿಯಮಿಸಬೇಕೆಂಬುದು ಅವರ ವಾದ. ಅದನ್ನು ಉದಹರಿಸಲು

ವಾಹನಗಳ ಬೆಳವಣಿಗೆಯನ್ನು ತೆಗೆದುಕೊಳ್ಳುವ: ಮೊದಲು ಮಾನವನಿಗೆ ವಾಹನಗಳಿರಲಿಲ್ಲ. ಎತ್ತಿನ ಗಾಡಿ, ಮೋಟಾರು ಬಂಡಿ, ಜಹಜು, ವಿಮಾನ ಇವೆಲ್ಲ ಕ್ರಮವಾಗಿ ಬಳಕೆಗೆ ಬಂದುವು. ಮಕ್ಕಳಿಗೂ ಮೊದಲು ಎತ್ತಿನ ಗಾಡಿಯ ವಿಷಯವೊಂದನ್ನೇ ತಿಳಿಸಿ, ಆಮೇಲೆ, ಕ್ರಮಕ್ರಮವಾಗಿ ಇನ್ನಿತರ ವಾಹನಗಳನ್ನೂ ಕಾಲಕಳೆದಂತೆಲ್ಲ ಪರಿಚಯ ಮಾಡಿಕೊಡುವುದು; ಎಂದರೆ, ವಿದ್ಯಾರ್ಥಿ ಬೆಳೆದು ಪ್ರಬುದ್ಧನಾಗುವವರೆಗೆ ವಿಮಾನದ ವಿಷಯ ತಿಳಿಯುವಂತೆಯೇ ಇಲ್ಲ! ಇದೂ ಹಿಂದಿನ ತತ್ವದೃಷ್ಟಿಯಷ್ಟೇ ಅಭಾಸವಾಗಿ ಕಾಣುತ್ತದೆ. ಆದರೂ ಹಲವು ಉತ್ಸಾಹಿ ಶಿಕ್ಷಣವೇತ್ತರು ಇದನ್ನು ಜರ್ಮನಿಯ ಹಲವು ಕಡೆಗಳಲ್ಲಿ ಪ್ರಚಾರಮಾಡಿ ಪಠ್ಯವಸ್ತುವನ್ನು ಅದಕ್ಕೊಪ್ಪುವಂತೆ ಸಿದ್ಧಮಾಡಿದರು. ಮಾನವನ ಇತಿಹಾಸವನ್ನು ಐದು ಭಾಗವಾಗಿ ವಿಂಗಡಿಸಿ ಮಕ್ಕಳು ಆ ಕ್ರಮದಲ್ಲಿಯೇ ಸಂಸ್ಕೃತಿ ನಾಗರಿಕತೆಗಳ ಪರಿಚಯ ಮಾಡಿಕೊಳ್ಳಬೇಕೆಂದು ಗೊತ್ತುಮಾಡಿದರು. ಕೆಳಗೆ ಸೂಚಿಸಿರುವಂತೆ ಚರಿತ್ರೆಯ ಪಠ್ಯವಸ್ತುವನ್ನು ಗೊತ್ತುಮಾಡಿದ್ದರು:

| ಐತಿಹಾಸಿಕ ಘಟ್ಟ (ಯುಗ)ಗಳು: | | ಅವುಗಳಿಗೊಪ್ಪುವ ಪಠ್ಯವಸ್ತು |
|---|---|---|
| ೧. ಬೇಟೆಯ ಯುಗ | .... | ರಾಬಿನ್ಸನ್ ಕ್ರೂಸೋವಿನ ಕಥೆ |
| ೨. ಪರಿವ್ರಾಜಕ ಯುಗ | .... | ಪೇಟ್ರಿಯಾರ್ಕ್‌ಗಳ ಚರಿತ್ರೆ |
| ೩. ಬೇಸಾಯದ ಯುಗ | .... | ರಾಜರ, ನ್ಯಾಯಾಧೀಶರ ಚರಿತ್ರೆ |
| ೪. ವೃತ್ತಿ ವಿಂಗಡನೆಗಳ, ವಾಣಿಜ್ಯ ಶೃಗಾರಿಕೆಗಳ, ಮತ್ತು ಸಣ್ಣ ನಗರಗಳ ಯುಗ | .... | ಜರ್ಮನಿಯ ಮಧ್ಯ ಯುಗದ ಚರಿತ್ರೆ |
| ೫. ಔದ್ಯೋಗಿಕ ಯುಗ | .... | ಅಧುನಿಕ ಜರ್ಮನಿಯ ಇತಿಹಾಸ |

ಮೇಲೆ ಚರಿತ್ರೆಯ ವಿಷಯವನ್ನು ಮಾತ್ರ ತೆಗೆದುಕೊಂಡು ಮಕ್ಕಳ ಶಾಲಾ ಜೀವನದಲ್ಲಿ ಯಾವ ಕ್ರಮದಲ್ಲಿ ಚರಿತ್ರೆಯ ಬೇರೆ ಬೇರೆ ಭಾಗಗಳನ್ನು ಬೋಧಿಸಬೇಕೆಂಬುದನ್ನು ವಿವರಿಸಿದೆ. ಎಂದರೆ, ಪ್ರೌಢವಯಸ್ಸಿಗೆ ಬರುವ ತನಕ ಆಧುನಿಕ ಚರಿತ್ರೆಯನ್ನು ಅವರಿಗೆ ಬೋಧಿಸುವಂತೆಯೇ ಇಲ್ಲ. ಇದರಿಂದ ಅಂದಿನವರೆಗೂ ಈ ದಿನದ ಜೀವನದ ವಿಷಯಗಳನ್ನೇ ಅರಿತು

ಕೊಳ್ಳುವಂತಿಲ್ಲ! ಮಕ್ಕಳಿಗೆ ಅದನ್ನು ತಿಳಿಯಲು ಅತಿ ಕುತೂಹಲವಿದ್ದರೂ ಬೋಧಿಸುವಂತಿಲ್ಲ!

ತಾತ್ವಿಕವಾಗಿ ಈ ಯೋಜನೆ ಸಾಧುವಿರುವಂತೆ ತೋರಿದರೂ ನ್ಯೂನತೆ ತುಂಬಿದೆ. ಈ ದಿನದ ಮಕ್ಕಳ ಮೆದುಳು ಗತಕಾಲದ ಮಾನವನ ಮೆದುಳಿಗಿಂತ ಬಹುವಾಗಿ ಮುಂದುವರಿದಿದೆ; ಜೊತೆಗೆ, ಅವರು ಬಾಳಬೇಕಾಗಿರುವುದು ಗತಕಾಲದ ಯಾವುದೋ ಯುಗದಲ್ಲಲ್ಲ: ಇಂದಿನ ಸಮಾಜದಲ್ಲಿ; ಹಿಂದಿನವರು ತಮ್ಮ ಸಾಧನೆಯ ಮಾರ್ಗದಲ್ಲಿ ಪ್ರಯೋಗಾರ್ಥವಾಗಿ ನಡೆದ ಮತ್ತು ಈ ದಿನಕ್ಕೆ ಉಪಯುಕ್ತವಲ್ಲದ, ಬಾಳನ್ನು ಬಾಳುವುದು ಫಲಪ್ರದವಲ್ಲ; ಅವರು ಸಾಧಿಸದ ಅನುಭವಗಳೆಲ್ಲದರ ಸಾರವನ್ನು ನಾವು ಉಪಯೋಗಿಸಿಕೊಳ್ಳಬೇಕು; ಅದರಿಂದ ನಾವು ಲಾಭ ಪಡೆದುಕೊಳ್ಳಬೇಕು. ಎಂದ ಮೇಲೆ ಅನಾವಶ್ಯಕವಾದ ಆ ಅಂತಸ್ತುಗಳನ್ನೆಲ್ಲ ಇಂದಿನವರೂ ಪುನರಾವರ್ತಿಸುವುದು ವ್ಯರ್ಥ; ಮೇಲಾಗಿ ಗತಕಾಲದ ಆ ಸನ್ನಿವೇಶಗಳನ್ನು ಶಾಲೆಯಲ್ಲಿ ತರುವುದಾದರೂ ಹೇಗೆ ಸಾಧ್ಯ! ಮಾನವನ ಆ ಸಾಧನೆಗಳೆಲ್ಲ ಕೇವಲ ಕುತೂಹಲ ಜನಕವಾದ ಚಾರಿತ್ರಿಕ ವಿಷಯಗಳೇ ಹೊರತು ನಮ್ಮ ಶಾಲೆಯ ಪಠ್ಯ ವಿಷಯಗಳನ್ನು ರೂಪಿಸಲು ನೇರವಾಗುವುದಿಲ್ಲ. ಅಲ್ಲದೆ, ಮಕ್ಕಳ ಮನಸ್ಸಿನ ಸ್ವರೂಪ, ಅದು ಬಳೆಯುವ ರೀತಿ ಮುಂತಾದವನ್ನು ಈ ತತ್ತ್ವದೃಷ್ಟಿ ಗಣನೆಗೇ ತೆಗೆದುಕೊಂಡಿಲ್ಲ. ಆದ್ದರಿಂದ ಹಲವುಕಾಲ ಈ ವಾದ ಶಿಕ್ಷಣರಂಗದಲ್ಲಿದ್ದರೂ ಈಗ ಪೂರ್ಣವಾಗಿ ಬೆಂಬಲರಹಿತವಾಗಿದೆ.

೩. **ಮನಶ್ಶಕ್ತಿಗಳ ಕಸರತ್ತಿನ ತತ್ತ್ವದೃಷ್ಟಿ:** ಮೊದಮೊದಲು ಮನಶ್ಶಾಸ್ತ್ರಜ್ಞರು ಮಾನವನ ಮನಸ್ಸಿನಲ್ಲಿ ಬಿಡಿಬಿಡಿಯಾದ ಅನೇಕ ಸ್ಥಾನಗಳಿವೆಯೆಂದೂ, ಒಂದೊಂದೂ ಒಂದೊಂದು ಮನಶ್ಶಕ್ತಿಯ ಕೇಂದ್ರವಾಂದಿರವೆಂದೂ ನಂಬಿದ್ದರು. ಅದರ ಆಧಾರದ ಮೇಲೆ, ಮನಸ್ಸಿನ ಆ ಶಕ್ತಿಗಳಿಗೊಪ್ಪುವ ವಿಷಯಗಳನ್ನು ಓದಿಸುವುದರ ಮೂಲಕ ಕಸರತ್ತು ಮಾಡಿಸಿದರೆ ಅವುಗಳು ಬೆಳದು ವ್ಯಕ್ತಿಯ ಶಿಕ್ಷಣ ಸಾಧನೆಯಾಗುತ್ತದೆಂದು ನಂಬಿ ಅದರಂತೆ ಪಠ್ಯವಸ್ತುವನ್ನು ರೂಪಿಸಲು ಆರಂಭಿಸಿದರು. ಯಾವ ವಿಷಯ ಮನಶ್ಶಕ್ತಿಗೆ ಒಳ್ಳೆಯ ಕಸರತ್ತು ಮಾಡಿಸಬಲ್ಲದೋ ಆ ವಿಷಯ ಪಠ್ಯವಸ್ತುವಿನಲ್ಲಿ ಸೇರಿತು. ಎಂದಮೇಲೆ ಮನಶ್ಶಕ್ತಿಯನ್ನು ಕಸರತ್ತುಮಾಡಿಸಿ

ಶಿಸ್ತು ಬೆಳಸುವುದೇ ಶಿಕ್ಷಣವೆಂದು ಭಾವನೆಗೆ ಬಂತು. ಅಂಥ ಪಠ್ಯವಸ್ತು ಜೀವನಕ್ಕೆ ಉಪಯುಕ್ತವೇ, ಅಲ್ಲವೇ ಎಂಬ ಗಣನೆಯೇ ಇಲ್ಲವಾಯಿತು. ಇಂಗ್ಲೆಂಡಿನ ಪ್ರೌಢಶಾಲೆಗಳಲ್ಲಿ ಇದೇ ಕಾರಣದಿಂದ ಅರ್ಥವಾಗದಿದ್ದರೂ, ಉಪಯುಕ್ತವಲ್ಲದಿದ್ದರೂ ಗ್ರೀಕ್ ವ್ಯಾಕರಣವನ್ನು ಅಭ್ಯಾಸಮಾಡಬೇಕಾಗಿತ್ತು. ಹಾಗೆಯೇ ಕಣ್ಣು ಮತ್ತು ಇತರ ಜ್ಞಾನೇಂದ್ರಿಯಗಳಿಗೂ ಕಸರತ್ತಾಗಲೆಂದು ಪ್ರಕೃತಿಪಾಠವೂ ಪಠ್ಯವಸ್ತುವಾಯಿತು. ಹೀಗೆ ಮಾನಸಶಕ್ತಿಗಳನ್ನೆಲ್ಲ ಒಂದು ಪಟ್ಟಿಮಾಡಿ, ಅವುಗಳಲ್ಲಿ ಒಂದೊಂದಕ್ಕೂ ಅತ್ಯುತ್ತಮ ಕಸರತ್ತುಮಾಡಿಸಬಲ್ಲ ವಿಷಯಗಳನ್ನು ಜೋಡಿಸಿ, ಪಠ್ಯವಸ್ತುವನ್ನು ರೂಪಿಸುವ ಯತ್ನ ನಡೆಯಿತು. ಜ್ಞಾಪಕಶಕ್ತಿಯ ತರಬಿಯತ್ತಿಗೆ ಕೋಷ್ಟಕಗಳ ಅಭ್ಯಾಸವೂ ಅರ್ಥರಹಿತವಾದರೂ ಕಠಿನತಮವೆನಿಸುವ ಅನ್ಯಭಾಷೆಯ ಪದ್ಯಗಳ ಕಂಠಪಾಠವೂ ಆರಂಭವಾದುವು. ಪರಿಶೀಲನ ಶಕ್ತಿಯನ್ನು ಸ್ಫುಟಗೊಳಿಸಲು ವಿಜ್ಞಾನಕ್ಕೂ ಸ್ಥಳ ಸಿಕ್ಕಿತು. ಕಲ್ಪನೆ ಮತ್ತು ಪ್ರತಿಭೆಗಳನ್ನು ಪುಷ್ಟಿಗೊಳಿಸಲು ಸಾಹಿತ್ಯವೂ ಸೇರಿತು. ವಿಚಾರದೃಷ್ಟಿಯನ್ನು ಪ್ರಚೋದಿಸಲು ಗಣಿತವೂ ಪಠ್ಯವಸ್ತುವಾಯಿತು. ಒಟ್ಟಿನಲ್ಲಿ ಅವೆಲ್ಲ ಪಠ್ಯವಸ್ತುವಾದದ್ದು ಅವುಗಳ ಉಪಯುಕ್ತತೆಗಲ್ಲ: ಅವುಗಳು ಕೊಡಬಹುದೆಂದು ನಂಬಿದ್ದ ಕಸರತ್ತಿಗಾಗಿ! ಆದರೆ ಮನಶ್ಶಾಸ್ತ್ರ ಬೆಳೆದಂತೆ ಈ ತತ್ವದೃಷ್ಟಿ ತಪ್ಪೆಂದು ಗೊತ್ತಾಯಿತು. ಮನಶ್ಶಕ್ತಿಗಳು ಮೆದುಳಿನಲ್ಲಿ ಬಿಡಿಬಿಡಿಯಾಗಿ ಕೆಲಸಮಾಡುವ ಅಂಗಗಳೆಂಬ ಭಾವನೆ ಸುಳ್ಳಾಯಿತು. ಆ ತತ್ವವಾದಿಗಳು ಯಾವುದಾದರೂ ಒಂದು ವಿಷಯದ ಮೂಲಕ ಜ್ಞಾಪಕ, ಆಲೋಚನೆ, ಪರಿಶೀಲನೆ, ವಿವೇಚನೆ ಮುಂತಾದ ಶಕ್ತಿಗಳು ತರಬಿಯತ್ತಾದರೆ ಮುಂದೆ ಆ ಶಕ್ತಿಗಳು ಎಲ್ಲಸಂದರ್ಭಗಳಲ್ಲೂ ಅಷ್ಟೇ ಚುರುಕಿನಿಂದ ಕೆಲಸಮಾಡುತ್ತವೆಂದೂ ನಂಬಿದ್ದರು. ಈಚಿನ ಸಂಶೋಧನೆಗಳಿಂದ ಇದೂ ಸತ್ಯವಲ್ಲವೆಂದು ಸ್ಥಿರಪಡುತ್ತಿದೆ. ಕೋಷ್ಟಕಗಳನ್ನು ಹೃದ್ಗತಮಾಡಿಸಿ, ಕಂಠಪಾಠಮಾಡುವ ಶಕ್ತಿಯನ್ನು ಕಸರತ್ತು ಮಾಡಿಸಿದ್ದರೆ, ಆ ಶಕ್ತಿ ಮುಂದೆ ಪದ್ಯವೊಂದನ್ನು ಹೃದ್ಗತಮಾಡಲು ಯಾವ ರೀತಿಯಲ್ಲೂ ನೆರವಾಗಲಾರದೆಂದೂ ಸಂಶೋಧನೆಗಳಿಂದ ಸ್ಥಿರಪಟ್ಟಿತು. ಯಾವ ಒಂದು ವಿಷಯವೇ ಆಗಲಿ ಮತ್ತೊಂದು ವಿಷಯಕ್ಕಿಂತ ಚೆನ್ನಾಗಿ ಮನಶ್ಶಕ್ತಿಗಳನ್ನು ಕಸರತ್ತು ಮಾಡಿಸಬಲ್ಲದೆಂಬ

ಹಳೆಯ ವಾದ ಬರೀ ಕಲ್ಪನೆಯದು. ಯಾವ ಮನಶ್ಶಕ್ತಿಯ ಬೆಳವಣಿಗೆಗೇ ಆಗಲಿ, ಮುಂದೆ ಅದು ಅಂಥ ಸಂದರ್ಭಗಳಲ್ಲಿ ಕಾರ್ಯಮುಖವಾಗಿ ಕೆಲಸ ಮಾಡುವಂತಾಗಬೇಕಾದರೆ ಸಹಾಯವಾಗತಕ್ಕದ್ದು ಅಭ್ಯಾಸಿಸುವ ಪಠ್ಯ ವಸ್ತುವಲ್ಲ, ಆ ವಿಷಯವನ್ನು ಅಭ್ಯಾಸಿಸುವಾಗ ಅನುಸರಿಸುವ ಕ್ರಮ. ಹಾಗೆ ಸೂಕ್ತವಾದ ಕ್ರಮದಲ್ಲಿ ಯಾವ ವಿಷಯವನ್ನೇ ಅಭ್ಯಾಸಮಾಡಿಸಲಿ ಸಂಬಂಧಿಸಿದ ಇತರ ವಿಷಯಗಳನ್ನು ಅಭ್ಯಾಸಿಸಲು ಮುಂದೆ ಅದರಿಂದ ಸಹಾಯವಾಗುತ್ತದೆ. ಸಂಶೋಧನೆಗಳು ಬೆಳೆದಂತೆ ಮನಶ್ಶಕ್ತಿಯ ಕಸರತ್ತಿನ ಈ ತತ್ತ್ವದೃಷ್ಟಿಯನ್ನು ಪಠ್ಯವಸ್ತುವಿನ ನಿರ್ಮಾಣಕ್ಕೆ ಉಪಯೋಗಿಸಿ ಕೊಳ್ಳುವುದು ನಿಲ್ಲುತ್ತಿದೆ.

೪. **ಜೀವನೋಪಾಯದ ತತ್ತ್ವದೃಷ್ಟಿ:** ಮೇಲಿನ ತತ್ತ್ವದೃಷ್ಟಿಗಳು ಪಠ್ಯವಸ್ತುವನ್ನು ನಿರ್ಮಿಸುವಾಗ ಉಪಯುಕ್ತತೆಯ ಅಂಶವನ್ನು ಸಂಪೂರ್ಣ ವಾಗಿ ಮರೆತೇಬಿಟ್ಟವೆ. ಅವುಗಳಿಗೆ ವ್ಯತಿರಿಕ್ತವಾದ ಇನ್ನೊಂದು ದೃಷ್ಟಿ ಹಲವು ವರ್ಷಗಳ ಹಿಂದೆ ಆರಂಭವಾಗಿ ಇಂದಿಗೂ ಪ್ರಬಲವಾಗಿ ಉಳಿದು ಕೊಂಡು ಬಂದಿದೆ. ಇದೇ ಜೀವನೋಪಾಯದ ತತ್ತ್ವದೃಷ್ಟಿ. ಇದರ ಪ್ರಕಾರ ಯಾವ ವಿಷಯ ಜೀವನೋಪಾಯಕ್ಕೆ ನೆರವಾಗುವುದೋ ಅಂಥ ವಿಷಯ ಗಳು ಮಾತ್ರ ಪಠ್ಯವಸ್ತುವಾಗಿ ಸೇರಬೇಕು; ಮಿಕ್ಕವಕ್ಕೆ ಸ್ಥಳವಿಲ್ಲ. ಸಾಮಾನ್ಯ ಪೋಷಕನೊಬ್ಬನನ್ನು ತನ್ನ ಮಗನಿಗೆ ಪ್ರಾಥಮಿಕ ಶಾಲೆಯಲ್ಲಿ ಏನು ಕಲಿಸಬೇಕೆಂದು ಕೇಳಿದರೆ 'ಓದುವುದು, ಬರೆಯುವುದು, ಲೆಕ್ಕ, ಜೀವನೋಪಾಯಕ್ಕೆ ನೆರವಾಗತಕ್ಕ ಮರಗೆಲಸ, ವ್ಯವಸಾಯ ಮುಂತಾದ ವನ್ನು ಕಲಿಸಿ; ಮಗಳಿಗಾದರೆ ಹೊಲಿಗೆ, ಮನೆಗೆಲಸ ಮತ್ತು ಇತರ ಕೆಲಸ ಗಳನ್ನು ಕಲಿಸಿ, ಎಂದು ಹೇಳುತ್ತಾನೆ. ಪ್ರೌಢಶಾಲೆಯಲ್ಲೂ ಅದನ್ನೇ ಕಲಿಸ ಬೇಕೆಂದು ಬಯಸುತ್ತಾನೆ; ಚರಿತ್ರೆ, ಭೂವಿವರಣೆ, ವಿಜ್ಞಾನ, ಆರೋಗ್ಯ ಮುಂತಾದವನ್ನು ಕೇಳುವುದೇ ಇಲ್ಲ. ಹೀಗೆ ಜೀವನಕ್ಕೆ ಉಪಯುಕ್ತವಾಗಬಲ್ಲ ವಿಷಯಗಳನ್ನು ಪಠ್ಯವಸ್ತುವಿನಲ್ಲಿ ಸೇರಿಸುವುದರಲ್ಲಿ ಔಚಿತ್ಯವೇನೋ ಇದೆ. ಪ್ರಾಥಮಿಕ ಶಾಲೆಯಲ್ಲಿ ಅಂಥ ಉಪಯುಕ್ತ ವಿಷಯಗಳ ಅಲ್ಪಸ್ವಲ್ಪ ವಿವರಣೆ ಯನ್ನೂ, ಪ್ರೌಢಶಾಲೆಗಳಲ್ಲಿ ಸಂಪೂರ್ಣವಾಗಿ ಉದ್ಯೋಗ ಶಿಕ್ಷಣವನ್ನೂ ಕೊಡಬೇಕೆಂದು ಕೆಲವರು ಹೇಳುವರು. ಪ್ರೌಢಶಾಲೆಗಳಲ್ಲಾಗಲಿ ಪ್ರಾಥ

ಮಿಕ ಶಾಲೆಗಳಲ್ಲಾಗಲಿ ಉದ್ಯೋಗಗಳನ್ನು ಕಲಿಸಬೇಕಾಗಿಲ್ಲ; ಆ ಉದ್ಯೋಗಗಳನ್ನು ಮುಂದೆ ಕಲಿಯಲು ಆವಶ್ಯಕವೆನಿಸುವ ಶಕ್ತಿಯನ್ನು ಒದಗಿಸಿದರೆ ಸಾಕೆಂದು ಇನ್ನು ಕೆಲವರು ವಾದಿಸುವರು. ಮತ್ತೆ ಕೆಲವರು 'ಯಾವ ಶಾಲೆಯಲ್ಲಾಗಲಿ, ಆ ಶಾಲೆಯ ಕೊನೆಯ ವರ್ಷದೊಳಗಾಗಿ ವಿದ್ಯಾರ್ಥಿಗಳಿಗೆ ಕೈಕೆಲಸ, ಕಲೆಗಳಲ್ಲಿ ಚೆನ್ನಾಗಿಯೇ ಶಿಕ್ಷಣ ಕೊಡಬೇಕೆಂದು ಹೇಳುವರು. ಅಂಥವರು ಮಾತ್ರ ಶಾಲೆ ಬಿಟ್ಟ ತಕ್ಷಣ ಜೀವನೋಪಾಯ ಹುಡುಕಿಕೊಳ್ಳಬಹುದೆಂದು ಅವರು ವಾದಿಸುವರು. ಈ ದೃಷ್ಟಿಯಲ್ಲಿ ಪಠ್ಯವಸ್ತು ನಿರ್ಮಿತವಾಗಿ ಶಿಕ್ಷಣ ಆರಂಭವಾದರೆ ಪಾಠಶಾಲೆಗಳು ಕಾರ್ಖಾನೆಯಂತೆಯೋ ಅಂಗಡಿಯಂತೆಯೋ ಇರುತ್ತವೆಯೇ ಹೊರತು ಸಂಸ್ಕೃತಿಯ ಕೇಂದ್ರಗಳಾಗುವಂತಿಲ್ಲ! ಮನಶ್ಶಕ್ತಿಗಳ ಕಸರತ್ತಿನ ತತ್ತ್ವದೃಷ್ಟಿ ಉತ್ತರಧ್ರುವದಂತಿದ್ದರೆ ಜೀವನೋಪಾಯದ ತತ್ತ್ವದೃಷ್ಟಿ ದಕ್ಷಿಣಧ್ರುವದಂತಿದೆ. ಇವೆರಡು ತತ್ತ್ವದೃಷ್ಟಿಗಳಿಗೂ ಮಧ್ಯಸ್ಥವೆನಿಸುವ ಮತ್ತೊಂದು ತತ್ತ್ವದೃಷ್ಟಿಯನ್ನು ಕಳೆದ ಶತಮಾನದ ಕೊನೆಕೊನೆಗೆ ಹರ್ಬರ್ಟ್ ಸ್ಪೆನ್ಸರ್ ಆರಂಭಿಸಿದನು. ಅದರ ಪ್ರಕಾರ 'ಪಠ್ಯವಸ್ತು ಮನಶ್ಶಕ್ತಿಗೆ ಕಸರತ್ತು ಮಾಡಿಸುವಂತಿರಬೇಕು; ಆದರೆ, ಅದು ಉಪಯುಕ್ತವೂ ಆಗಿರಬೇಕು!' ಎಂದು ವಾದಿಸಿ ಎರಡು ಗುರಿಗಳನ್ನೂ ಒಂದೇ ದೃಷ್ಟಿಯಲ್ಲಿ ಕೇಂದ್ರೀಕರಿಸಿದನು. ಈ ವಾದದ ಫಲವಾಗಿಯೇ ಆ ಕಾರ್ಯಕ್ಕೆ ಅತ್ಯುತ್ತಮ ವಿಷಯವೆಂದು ವಿಜ್ಞಾನ ಗಣನೆಗೆ ಬಂತು; ಪಠ್ಯವಸ್ತುವಿನಲ್ಲಿ ಅದು ಪ್ರಧಾನ ಸ್ಥಾನವನ್ನೂ ಪಡೆಯಿತು.

ಮೇಲಿನ ಯಾವ ದೃಷ್ಟಿಯೇ ಆಗಲಿ ಪಠ್ಯ ವಿಷಯ ನಿರ್ಮಾಣಕ್ಕೆ ಪೂರ್ಣವಾಗಿ ಅನುಕೂಲವಲ್ಲ. ಮಕ್ಕಳ ಅಭಿರುಚಿ ಆಸಕ್ತಿಗಳನ್ನಾಗಲಿ ಅವರ ಮಾನಸಿಕ ವ್ಯಾಪಾರದ ಸ್ವರೂಪವನ್ನಾಗಲಿ ಅವು ಗಣನೆಗೇ ತೆಗೆದುಕೊಂಡಿಲ್ಲ. ಕಲಿಯುವ ಮಕ್ಕಳನ್ನೇ ಗಣನೆಗೆ ತೆಗೆದುಕೊಳ್ಳದ ತತ್ತ್ವದೃಷ್ಟಿ ಹೇಗೆ ತಾನೆ ಉಚಿತವೆನಿಸುವ ಪಠ್ಯವಸ್ತುವನ್ನು ನಿರ್ಮಿಸೀತು? ನಮ್ಮ ಶಾಲೆಗಳು ಫಲಪ್ರದವಾದ ಶಿಕ್ಷಣ ಕೊಡುವಂತಾಗಬೇಕಾದರೆ ಪಠ್ಯವಸ್ತು ಮಕ್ಕಳ ಮನಸ್ಸಿನ ಪರಿಚಯವನ್ನೂ ಸಮಾಜದ ಆವಶ್ಯಕತೆಯನ್ನೂ ಗಣನೆಗೆ ತೆಗೆದುಕೊಳ್ಳುವ ತತ್ತ್ವದೃಷ್ಟಿಯ ಆಧಾರದ ಮೇಲೆಯೇ ರೂಪುಗೊಳ್ಳಬೇಕು. ಈಚೆಗೆ ಈ ಮಾರ್ಗವಾಗಿ ಅಲ್ಪಸ್ವಲ್ಪ ಆಸಕ್ತಿ ಹುಟ್ಟಿ ಸಮಾಜದ

ಆವಶ್ಯಕತೆಯನ್ನನುಸರಿಸಿ ಪಠ್ಯವಸ್ತುವನ್ನು ನಿರ್ಮಿಸುವ ಕಾರ್ಯ ಆರಂಭ ವಾಗಿದೆ. ಆದರೂ ಮಕ್ಕಳ ಮನಸ್ಸಿನ ಕಡೆ ತಕ್ಕಷ್ಟು ಗಮನ ಕೊಟ್ಟಿಲ್ಲ. ಹಾಗೆ ದೊಡ್ಡವರು ಮಕ್ಕಳ ಮೇಲೆ ತಮಗಿಷ್ಟವೆನಿಸಿದ ಪಠ್ಯವಸ್ತುವನ್ನು ಹೇರಿದರೆ ಅವರು ಹೇಗೆ ಆಸಕ್ತಿಯಿಂದ ಕಲಿತಾರು? ಇಂಥ ದೋಷವನ್ನು ನಿವಾರಿಸಲು ಅಮೆರಿಕದವರು ಯತ್ನಿಸಿ ತಮ್ಮ ಉತ್ಸಾಹದ ಭರದಲ್ಲಿ ಮೊದ ಮೊದಲು, ಮಕ್ಕಳೇ ಸರ್ವಸ್ವವೆಂದು ಗಣಿಸಿ, ಅವರ ಅಭಿರುಚಿ ಆಸಕ್ತಿ ಗಳಿಗೇ ಪ್ರಾಧಾನ್ಯತೆ ಕೊಟ್ಟು ಅದಕ್ಕೊಪ್ಪುವ ಪಠ್ಯ ವಿಷಯವನ್ನು ನಿರ್ಮಿ ಸಲು ಯತ್ನಿಸಿದರು; ಆದರೆ ಈಚೆಗೆ ಸಮಾಜದ ಆವಶ್ಯಕತೆಯ ಕಡೆಯೂ ಅವರು ಗಮನ ಕೊಡುತ್ತಿದ್ದಾರೆ. ಮಕ್ಕಳ ಅಭಿರುಚಿ ಆಸಕ್ತಿಗಳನ್ನೂ ಸಮಾಜದ ಆವಶ್ಯಕತೆಯನ್ನೂ ಸಮನ್ವಯಗೊಳಿಸಿಕೊಂಡ ತತ್ತ್ವದೃಷ್ಟಿ ಪಠ್ಯವಸ್ತುವಿನ ನಿರ್ಮಾಣಕ್ಕೆ ಒಳ್ಳೆಯ ಮಾರ್ಗವನ್ನು ತೋರಬಲ್ಲದು.

ಸೂಕ್ತವಾದ ದೃಷ್ಟಿಧ್ಯೇಯಗಳ ಆಧಾರದ ಮೇಲೆ ಪಠ್ಯವಸ್ತುವನ್ನು ನಿರ್ಮಿಸುವುದಾದರೂ ಆ ಪಠ್ಯವಸ್ತುವಿನಲ್ಲಿ ಯಾವ ವಿಷಯಕ್ಕೆ ಪ್ರಾಧಾನ್ಯತೆ ಕೊಡಬೇಕೆಂಬ ಸಮಸ್ಯೆ ಏಳಬಹುದು. ಪ್ರಥಮಸ್ಥಾನ ವಿಜ್ಞಾನಕ್ಕೋ, ಸಾಹಿತ್ಯಕ್ಕೋ, ಎಂಬ ವಾದ ಹುಟ್ಟಬಹುದು. ಇವುಗಳಲ್ಲಿ ಯಾವುದಕ್ಕೆ ಅಗ್ರಸ್ಥಾನವೆಂಬುದು ಇತ್ಯರ್ಥವಾಗದ ಸಮಸ್ಯೆಯಾದರೂ ಅವೆರಡೂ ಇಂದು ಉಪಯುಕ್ತವೆನಿಸದ ಬ್ರಾಹ್ಮೀ ಲಿಪಿಯ ಪರಿಚಯಕ್ಕಿಂತ ಹೆಚ್ಚಿನ ಪ್ರಾಧಾ ನ್ಯತೆ ಪಡೆಯಬೇಕೆಂಬುದರಲ್ಲಿ ಯಾವ ಅನುಮಾನವೂ ಇರಲಾರದು! ಹಾಗಾದರೆ ಯಾವ ಕ್ರಮದಲ್ಲಿ ಯಾವ ಯಾವ ಪಠ್ಯವಸ್ತುವನ್ನು ಜೋಡಿಸ ಬೇಕು? ಶಿಕ್ಷಣ ಫಲಪ್ರದವಾಗಬೇಕಾದರೆ ಮಕ್ಕಳಿಗೆ ಆರೋಗ್ಯ ಅನಿವಾರ್ಯ; ಅದರಿಂದ ಆರೋಗ್ಯಕ್ಕೆ ಪ್ರಥಮಸ್ಥಾನ ಕೊಡಬಹುದು. ಅದಿಲ್ಲದ ಮಿಕ್ಕೆಲ್ಲ ಶಿಕ್ಷಣಗಳಿಂದ ಆಗುವ ಪುರುಷಾರ್ಥವಾದರೂ ಯಾವುದು? ಹಾಗೆಯೇ ಸಮಾಜದಲ್ಲಿ ಅವರು ಬದುಕಿ ಬಾಳಬೇಕಾಗಿರುವುದರಿಂದ ಆ ಸಮಾಜದ ದೃಷ್ಟಿಧ್ಯೇಯಗಳನ್ನೂ, ಸಂಸ್ಕೃತಿ ಸಂಪ್ರದಾಯಗಳನ್ನೂ, ಆಚಾರ ವ್ಯವಾ ಹಾರಾದಿ ನೈತಿಕ ದೃಷ್ಟಿಯನ್ನೂ, ಧಾರ್ಮಿಕ ಮತ್ತು ದೈವಿಕ ಶಿಕ್ಷಣವನ್ನೂ ಯಾವುದಾದರೂ ಒಂದು ರೀತಿಯಲ್ಲಿ ಕೊಡಲೇಬೇಕು. ಶತ ಶತಮಾನಗಳ ಮಾನವನ ಬಾಳಿನ ಮಹಾ ಘಟನೆಗಳನ್ನೂ ಸಾಹಸಸ್ಫೂರ್ತಿಗಳ ದಿವ್ಯ

ಕೃತಿಗಳನ್ನೂ, ಇನ್ನಿತರ ಆದರಣೀಯವೆನಿಸುವ ಅನುಭವಗಳನ್ನೂ ಒಳಗೊಂಡ ಚರಿತ್ರೆಯ ಜ್ಞಾನ ಅನಿವಾರ್ಯವೇ ಎನ್ನಿಸುತ್ತದೆ. ಜನತೆಯ ದಿವ್ಯಭಾವಗಳನ್ನೂ, ಮಹಾ ಪ್ರತಿಭೆಯನ್ನೂ ಕಲ್ಪನಾಸ್ಫೂರ್ತಿಯನ್ನೂ ಕಲಾಕೌಶಲವನ್ನೂ ಸಾರಸಂಗ್ರಹವಾಗಿ ಅಂತರ್ಗತ ಮಾಡಿಕೊಂಡು ಮಾನವನ ಮಹಾ ಸಾಧನೆಗಳಲ್ಲೊಂದಾಗಿರುವ ಸಾಹಿತ್ಯವೂ, ಸಮಾಜದಲ್ಲಿ ವ್ಯವಹರಿಸಲು ಭಾಷಾಜ್ಞಾನವೂ ಆವಶ್ಯಕವೇ. ಜಗತ್ತು ಒಂದೇ ಜೀವನರಂಗವಾಗಿ ಅನ್ಯೋನ್ಯ ಬಾಂಧವ್ಯ ಏರ್ಪಡುತ್ತಿರುವ ಈ ಕಾಲದಲ್ಲಿ ಅಂತರರಾಷ್ಟ್ರೀಯ ವ್ಯವಹಾರಕ್ಕೆ ಪರಭಾಷೆಯೊಂದರ ಪರಿಚಯವೂ ಅಗತ್ಯವೆನಿಸುತ್ತದೆ; ಪ್ರಗತಿಪರ ಜನಾಂಗಗಳ ಜೀವನಾನುಭವವನ್ನು ಅರಿಯಲು ಆ ಜನತೆಯ ಸಾಹಿತ್ಯವನ್ನು ಪರಿಚಯಮಾಡಿಕೊಳ್ಳುವುದೂ ಆವಶ್ಯಕ. ಸೃಷ್ಟಿಯ ಕಲಾಕೃತಿಯಾಗಿ ರಾರಾಜಿಸುತ್ತಿರುವ ಈ ಸುಂದರ ವಿಶ್ವದ ಪರಿಚಯವನ್ನೂ ಮಾಡಿಕೊಳ್ಳಬೇಕಾಗಿದೆ. ಅದಕ್ಕೆ ಭೂಗೋಳ, ಪ್ರಕೃತಿ ವಿಜ್ಞಾನ ಮುಂತಾದ ವಿಷಯಗಳನ್ನೂ ಅಭ್ಯಾಸಿಸಬೇಕು. ಸ್ವಾವಲಂಬಿಯಾಗಿ ವ್ಯಕ್ತಿ ಬಾಳುವುದಕ್ಕೂ ಸಮಾಜದ ಆರ್ಥಿಕ ಭದ್ರತೆಗೂ ಆವಶ್ಯಕವಾಗುವಂಥ ವೃತ್ತಿ ಶಿಕ್ಷಣವನ್ನಂತೂ ಮರೆಯುವಂತೆಯೇ ಇಲ್ಲ. ವಿಜ್ಞಾನ ಯುಗದಲ್ಲಿ ಬಾಳುತ್ತಿರುವ ಈ ಕಾಲದ ನಮಗೆ ಹಲವು ವಿಜ್ಞಾನ ಶಾಖೆಗಳ ಜ್ಞಾನವಿಲ್ಲದಿದ್ದರೆ ಬಾಳು ಪೂರ್ಣವಾಗಲಾರದು. ಆಧುನಿಕ ಜಗತ್ತಿನ ನಿರಂತರವೂ ಭೋರ್ಗರೆಯುತ್ತಿರುವ ಉದ್ಯೋಗಗಳ ಜಂಜಡದಲ್ಲಿ ನಮ್ಮ ಅಂತರಾತ್ಮನಿಗೆ ಶಾಂತಿ, ರಮ್ಯತೆ ಮತ್ತು ಆನಂದವನ್ನು ನೀಡುವ ಸಂಗೀತ, ಚಿತ್ರಕಲೆ, ಕೈಕೆಲಸ ಮುಂತಾದ ಮನೋರಂಜಕ ವಿದ್ಯೆ ಎಲ್ಲರಿಗೂ ಆವಶ್ಯಕವೇ. ಎಂದಮೇಲೆ 'ಇಷ್ಟೊಂದು ಪಠ್ಯ ವಿಷಯಗಳನ್ನು ಮಕ್ಕಳ ಮೇಲೆ ಹೇರುವುದೆ? ಇದು ದಯಾರಹಿತವಾದ ಕಾರ್ಯವಲ್ಲವೆ?, ಎಂದು ಹಲವರಾದರೂ ಪ್ರಶ್ನಿಸುವರು. ಮೇಲೆ ಹೇಳಿದ ಎಲ್ಲ ವಿಷಯಗಳಲ್ಲೂ ಮಕ್ಕಳು ಪಾಂಡಿತ್ಯವನ್ನು ಪಡೆಯಬೇಕೆಂದಲ್ಲ: ಅವರ ಎಳೆಯ ವಯಸ್ಸಿನಲ್ಲಿ ಅವರ ಅಭಿರುಚಿ ಆಸಕ್ತಿಗಳೂ ಹುಟ್ಟುಗುಣಗಳೂ ಒಂದೊಂದೂ ಒಂದೊಂದು ಕಾಲದಲ್ಲಿ ಪ್ರಕಾಶಗೊಳ್ಳಲು ಯತ್ನಿಸುತ್ತಿರುತ್ತದೆ. ಸರಿಯಾದ ಚಟುವಟಿಕೆಯ (ಶಿಕ್ಷಣದ) ಸನ್ನಿವೇಶವಿಲ್ಲದಿದ್ದರೆ ಅದು ಹಾಗೆಯೇ ತಣ್ಣಗಾಗಬಹುದು.

ಅಂಥ ಅನರ್ಥವನ್ನು ನಿವಾರಿಸಲೆಂದೇ ಪ್ರಾಥಮಿಕ ದೆಶೆಯಲ್ಲಿ ಮಕ್ಕಳಿಗೆ ಬಹುಮುಖವಾದ ಶಿಕ್ಷಣ ಕೊಡಬೇಕಾದ ಆವಶ್ಯಕತೆಯಿರುವುದು.

**ಇಂದಿನ ಪಠ್ಯವಸ್ತುವಿನ ನ್ಯೂನತೆಗಳು :** ಬೋಧನ ಕಾರ್ಯದಲ್ಲಿ ಶಿಕ್ಷಕರಿಗೆ ಅನುಕೂಲಿಸುವಂತೆಯೂ ಮಾರ್ಗದರ್ಶಕವಾಗುವಂತೆಯೂ ಪಠ್ಯ ವಸ್ತುವನ್ನು ನಿರ್ಮಿಸಬೇಕು. ಅದರಿಂದ ಮಕ್ಕಳಿಗೆ ಫಲಪ್ರದವಾದ ಶಿಕ್ಷಣ ವಾಗಬೇಕಾದರೆ ಪಠ್ಯವಿಷಯ ಜೀವನದ ಆವಶ್ಯಕತೆ, ದೃಷ್ಟಿಧ್ಯೇಯ ಮತ್ತು ಮಕ್ಕಳ ಮನೋವ್ಯಾಪಾರದ ಪರಿಚಯ—ಇವೆಲ್ಲವನ್ನೂ ಗಣನೆಗೆ ತೆಗೆದು ಕೊಂಡೇ ರೂಪುಗೊಂಡಿರಬೇಕು. ಬೋಧನೆಯ ವಿಷಯದಲ್ಲೂ ಕಲಿವಿನ ವಿಷಯದಲ್ಲೂ ರೂಢಮೂಲವಾದ ಮೂಢನಂಬಿಗೆಗಳು ಇನ್ನೂ ನೆಲಸಿವೆ. ಮಕ್ಕಳ ಮನಸ್ಸು ನಿರಾಕಾರವಾದ ಮೇಣದಂಥ ವಸ್ತುವೆಂದೂ ಅದರ ಮೇಲೆ ಉಪಾಧ್ಯಾಯರು ಏನು ಬೇಕಾದರೂ ಗುರುತಿಸಬಹುದೆಂದೂ ಅನೇಕರು ನಂಬಿರುವರು. ಇಂಥ ನಂಬಿಕೆಗಳ ಮತ್ತು ಸೂಕ್ತವೆನಿಸದ ತತ್ತ್ವದೃಷ್ಟಿಗಳ ಮೇಲೆ ರೂಪುಗೊಂಡಿರುವ ಇಂದಿನ ನಮ್ಮ ಪಠ್ಯವಸ್ತು ಉಚಿತವಲ್ಲವೆಂದು ಜನಜೀವನದಲ್ಲಿ ಅಂದಂದು ಕೂಗು ಕೇಳಿಬರುತ್ತಿದೆ. ಈಗ ಇರತಕ್ಕ ಪಠ್ಯ ವಿಷಯ ಮಕ್ಕಳಿಗೆ ಆಸಕ್ತಿ ಹುಟ್ಟಿಸಿ, ಅವರ ಅಭಿ ರುಚಿಗಳನ್ನು ಬೆಳಸುವ ರೀತಿಯದಲ್ಲ: ದೊಡ್ಡವರು ಅದನ್ನು ಮಕ್ಕಳ ಮೇಲೆ ತಮ್ಮಿಷ್ಟದಂತೆ ಹೇರಿರುತ್ತಾರೆ. ಹಾಗೆ ಏರ್ಪಟ್ಟ ಅನುಚಿತ ಪಠ್ಯ ವಸ್ತುವನ್ನು ಮಕ್ಕಳ ಮನಸ್ಸಿಗೆ ತುಂಬಲು ಯತ್ನಿಸುವ ಮಾರ್ಗವೂ ವಿಜ್ಞಾನ ಸಮ್ಮತವಾದದ್ದಲ್ಲ. ಎಂದಮೇಲೆ ಇಂದಿನ ಪಠ್ಯವಸ್ತುವಿನಂತೆ ಬೋಧನ ಕ್ರಮವೂ ಪರಿಷ್ಕರಣಗೊಳ್ಳಬೇಕಾಗಿದೆ.

ನಮ್ಮ ಶಾಲೆಗಳ ಸದ್ಯದ ಪಠ್ಯವಸ್ತು ಶಿಕ್ಷಣಶಾಖೆ ನಿರ್ಮಿಸಿದ್ದು; ಅದು ಅನೇಕ ಭಾಗಗಳಾಗಿಯೂ, ಆ ಭಾಗಗಳು ಉಪ ಭಾಗಗಳಾಗಿಯೂ ಏರ್ಪಟ್ಟು ಪಟ್ಟಿಯ ರೂಪದಲ್ಲಿ ಸಿದ್ಧವಾಗಿದೆ; ಆಯಾ ತರಗತಿಗೆ ನಿಯ ಮಿತವಾಗಿರುವ ಪಠ್ಯವಸ್ತುವನ್ನು ತಿಂಗಳುವಾರು ಹಂಚಿಕೆ ಹಾಕಿಕೊಂಡು ವರ್ಷಾಂತ್ಯದಲ್ಲಿ ಪೂರೈಸಿದರೆ ಉಪಾಧ್ಯಾಯರ ಕೆಲಸ ಮುಗಿಯಿತು. ಅವರಿಂದ ಮೇಲ್ಪಟ್ಟ ಅಧಿಕಾರಿಗಳೂ ತೃಪ್ತಿಪಟ್ಟುಕೊಂಡಾರು. ಹೀಗೆ ಪಠ್ಯವಸ್ತುವನ್ನು ಯಾಂತ್ರಿಕವಾಗಿ ರೂಪಿಸಿ, ಉಪಯೋಗಿಸಿಕೊಳ್ಳುವುದ

ರಿಂದ ನಮ್ಮ ಶಿಕ್ಷಣ ಎಷ್ಟು ಅನರ್ಥಕಾರಿಯಾಗಬಹುದೆಂಬುದನ್ನು ಊಹಿಸಿಕೊಳ್ಳಬಹುದು.

ಶಿಕ್ಷಣರಂಗದ ದೃಷ್ಟಿಧ್ಯೇಯಗಳು ಒಂದು ಜನಾಂಗದ ಭವಿತವ್ಯತೆಯನ್ನು ರೂಪಿಸುವುವೆಂದು ಹೇಳುವರು. ಆ ದೃಷ್ಟಿಧ್ಯೇಯಗಳನ್ನು ಪಠ್ಯವಸ್ತುವಿನ ಮೂಲಕ ಮಕ್ಕಳ ಮನೋರಾಜ್ಯದಲ್ಲಿ ಮೂಡಿಸಲು ಯತ್ನಿಸುತ್ತೇವೆ. ಎಂದಮೇಲೆ, ಜನಾಂಗದ ಪುರೋಭಿವೃದ್ಧಿಗೆ ಶಾಲೆಗಳಲ್ಲಿ ಗೊತ್ತುಪಡಿಸಿರುವ ಪಠ್ಯವಸ್ತು ಎಷ್ಟೊಂದು ಮುಖ್ಯವೆಂದು ಸ್ಪಷ್ಟಪಡುತ್ತದೆ. ಈ ದಿನ ಉಪಯೋಗದಲ್ಲಿರುವ ಪಠ್ಯವಿಸ್ತುವಿನ ನಿರ್ಮಾಣದಲ್ಲಿ ಉತ್ತಮ ತತ್ವದೃಷ್ಟಿಯ ಆಧಾರವಿರುವುದಿಲ್ಲವಾದ್ದರಿಂದ ಅನೇಕ ಕುಂದುಕೊರತೆಗಳು ಕಂಡುಬರುತ್ತವೆ. ಅವುಗಳಲ್ಲಿ ಪ್ರಧಾನವಾದವನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಇಂದಿನ ಪಠ್ಯವಸ್ತು ಕೇವಲ ಪರೀಕ್ಷೆಗಳಲ್ಲಿ ಕೇಳುವ ವಿಷಯಕ್ಕೇ ಅನೇಕ ಭಾಗಗಳಾಗಿ ಆ ಭಾಗಗಳು ಮರಳಿ ಉಪಭಾಗಗಳಾಗಿ ಪಟ್ಟಿಯಂತೆ ರೂಪುಗೊಂಡಿದೆ. ಪರಿಪಕ್ವಗೊಂಡ ಪರಿಣತರ ದೃಷ್ಟಿಯಲ್ಲಿ ಇದು ಉಚಿತವೆನ್ನುವಂತಿದ್ದರೂ ಮಕ್ಕಳಿಗೆ ಅರ್ಥವಾಗದ ರೀತಿಯ ಜೋಡಣೆಯಾಗಿದೆ. ಚರಿತ್ರೆ, ಭೂಗೋಳ, ಆರೋಗ್ಯ, ಪಾಧಾನ್ಯವಿತ್ತು ಭಾಷೆ—ಇವೆಲ್ಲ ಒಂದೊಂದು ಪ್ರತ್ಯೇಕ ಭಾಗಗಳಾಗಿ ಬೇರ್ಪಟ್ಟು ಒಂದೊಂದೂ ಒಂದೊಂದು ಭಿನ್ನಜ್ಞಾನವೆಂಬಂತೆ ತೋರುತ್ತದೆ. ನಿಜವಾದ ಜೀವನದಲ್ಲಿ ಆ ಒಂದೊಂದು ಭಾಗವೂ ಸಂಬಂಧಿಸಿಯೇ ಉಪಯೋಗಕ್ಕೆ ಬರುತ್ತದೆ. ವ್ಯವಸಾಯಕ್ಕೂ ಭೂವಿವರಣೆಗೂ ನಿಜವಾದ ಸಂಬಂಧವಿದ್ದರೂ ಪಠ್ಯವಸ್ತು ಅದನ್ನು ಸ್ಫುಟಗೊಳಿಸುತ್ತಿಲ್ಲ; ಹಾಗೆಯೇ ಭಾಷೆಗೂ ಮಿಕ್ಕೆಲ್ಲ ಭಾಗಗಳಿಗೂ ಸಂಬಂಧವಿದ್ದರೂ ಅವೆಲ್ಲ ಪ್ರತ್ಯೇಕ ಪಾಠಗಳಂತೆ ಎಣಿಕೆಯಾಗುತ್ತಿವೆ.

ಪಠ್ಯವಸ್ತುವಿನ ಪರಿಮಾಣವೂ ಹೆಚ್ಚಾಗಿದ್ದು 'ವರ್ಷದೊಳಗಾಗಿ ಈ ಹೊರೆಯನ್ನು ಮುಗಿಸುವುದು ಹೇಗೆ?' ಎಂದು ಉಪಾಧ್ಯಾಯರು ಭಾವಿಸುತ್ತಾರೆ. ಒಂದೊಂದು ವಿಷಯವೂ ಭಾಗಗಳಾಗಿಯೂ, ಉಪಭಾಗಗಳಾಗಿಯೂ ವಿಭಾಗವಾಗಿರುವುದೇ ಇದಕ್ಕೆ ಕಾರಣ—ಅಲ್ಲಿರುವ ವಿಷಯ ಸಂಪತ್ತಿನಿಂದಲ್ಲ. ಈ ಅನುಚಿತವಾದ ಪಠ್ಯವಸ್ತುವಿನ ದಂಡ

ಕಾರಣ್ಯದಲ್ಲಿ ಯಾವುದು ಉಪಯುಕ್ತವಾದ್ದು, ಯಾವುದು ಅಲ್ಲ ಎಂಬುದನ್ನು ಮಕ್ಕಳು ಅರಿಯದೆ ನಿಜವಾಗಿಯೂ ಉಪಯುಕ್ತವೆನಿಸುವ ಭಾಗಕ್ಕೆ ತಕ್ಕಷ್ಟು ಗಮನ ಕೊಡಲಾರರು.

ಇಂದಿನ ಪಠ್ಯ ವಿಷಯಕ್ಕೂ ಜೀವನದ ಆವಶ್ಯಕತೆಗೂ ಹೊಂದಿಕೆ ತೋರಿಬರುತ್ತಿಲ್ಲ: ಯಂತ್ರದಂತೆ ಲಕ್ಷಗಟ್ಟಲೆಯ ಲೆಕ್ಕಗಳನ್ನು ತರಗತಿಯಲ್ಲಿ ಮಾಡಿಸಿದರೂ ನಿತ್ಯ ಜೀವನದಲ್ಲಿ ಎದುರು ಬರುವ ಹಲವು ಬಳಕೆಯ ಲೆಕ್ಕಗಳನ್ನು ಮಾಡುವ ಸಾಮರ್ಥ್ಯ ವಿದ್ಯಾರ್ಥಿಗಳಿಗೆ ಬಂದಿರುವುದಿಲ್ಲ; ತರಗತಿಯಲ್ಲಿ ಕಲಿಯುವ ಭಾಷೆಗೂ ಆಡುವ ಭಾಷೆಗೂ ತುಂಬ ಭಿನ್ನತೆಯಿದೆ; ಚರಿತ್ರೆ ಭೂವಿವರಣೆ ಪ್ರಜಾಧರ್ಮ ಮುಂತಾದವು ಓದುವಂತಿವೆಯೇ ಹೊರತು ಬಾಳಿಕೆಗೆ ಆವಶ್ಯಕವಾದ ಅನುಭವವನ್ನು ಹೆಚ್ಚಿಸುವಂತಿಲ್ಲ. ಶಾಲೆಗಳಲ್ಲಿ ಅಭ್ಯಾಸಿಸುವ ಕೈಕೆಲಸದ ಚಟುವಟಿಕೆಗಳು ನಿತ್ಯಜೀವನಕ್ಕೆ ನೆರವಾಗುವಂತಿಲ್ಲ; ಹೀಗೆ ತೋರಿಬರುವ ಭಿನ್ನತೆಗೆ ಜೀವನದ ಆವಶ್ಯಕತೆಯನ್ನು ತಕ್ಕಷ್ಟು ಪರಿಗಣಿಸದೆ ಪಠ್ಯವಸ್ತು ರೂಪುಗೊಂಡಿರುವುದೇ ಕಾರಣವೆನ್ನಬೇಕು.

ಸದ್ಯದ ಪಠ್ಯವಸ್ತು ಓದುವುದು, ಬರೆಯುವುದು, ಲೆಕ್ಕಾಚಾರ, ಮುಂತಾದ ಜ್ಞಾನಾರ್ಜನೆಗೇ ಪ್ರಾಶಸ್ತ್ಯ ಕೊಡುತ್ತಿದೆ; ಆ ಜ್ಞಾನದಿಂದ ನಮ್ಮ ಜೀವನ ಉತ್ತಮಗೊಳ್ಳಬೇಕೆಂಬ ಅಂಶದ ಕಡೆ ಗಮನ ಕೊಡುತ್ತಿಲ್ಲ. ಸಮಗ್ರ ವ್ಯಾಕರಣವನ್ನು ಪಠಿಸಿ, ದೊಡ್ಡ ದೊಡ್ಡ ಲೆಕ್ಕಗಳನ್ನು ಮಾಡಿ ಪ್ರಶಸ್ತಿ ಪಡೆದರೂ ನಿತ್ಯಜೀವನದಲ್ಲಿ ಹೆಚ್ಚಿಗೆ ಆಲೋಚನೆ, ಕಲ್ಪನೆ, ಪ್ರತಿಭೆ ಮುಂತಾದ ಶಕ್ತಿಗೆ ಪ್ರಚೋದಿತವಾಗಿ ಕಾರ್ಯಮುಖವಾಗುವಂತಿಲ್ಲ; ಎದುರು ಬರುವ ಸಮಸ್ಯೆಗಳನ್ನು ಯಶಸ್ವಿಯಾಗಿ ವಿವೇಚಿಸಿ ಇತ್ಯರ್ಥಪಡಿಸುವ ಸಾಮರ್ಥ್ಯವನ್ನೂ ಬೆಳೆಸುವಂತಿಲ್ಲ; ದೈವದತ್ತವಾಗಿ ಬಂದಿರುವ ಮಕ್ಕಳ ಶಕ್ತಿಸಾಮರ್ಥ್ಯಗಳು ಪ್ರಕಾಶಕ್ಕೆ ಬರುವಂತೆ ಮಾಡುವ ಸನ್ನಿವೇಶಗಳೂ ಪಠ್ಯವಸ್ತುವಿನಲ್ಲಿ ಕಡಮೆ.

ಶಾಲೆಗಳಲ್ಲಿ ಬೋಧಿಸುವ ಪಠ್ಯವಿಷಯ ಹೊರಗಡೆ ಜೀವನದಲ್ಲಿ ಉಪಯುಕ್ತವಾಗದುದನ್ನು ಕಂಡು ಮಕ್ಕಳು 'ಅದು ಕೇವಲ ಪರೀಕ್ಷೆಗಾಗಿ' ಎಂದು ಭಾವಿಸುವಂತೆ ಮಾಡಿದೆ. ಶಾಲೆಯಲ್ಲಿ ಕಲಿಯುವುದೇ ಒಂದು,

ಹೊರಗಡೆ ಬೇಕಾದ್ದು ಮತ್ತೊಂದು—ಹೀಗಾಗಿ ಶಾಲೆಯ ಜೀವನಕ್ಕೂ ಹೊರಗಡೆಯ ಜೀವನಕ್ಕೂ ಭಿನ್ನತೆ ಕಲ್ಪನೆಯಾಗುತ್ತಿದೆ. ಶಾಲೆಯಲ್ಲಿ ಕಲಿತದ್ದು ಜೀವನಕ್ಕೆ ನೆರವಾಗದಂತಾಗುತ್ತಿದೆ. 'ಶಾಲೆಗಳು ಮಕ್ಕಳನ್ನು ಮುಂದಿನ ಜೀವನಕ್ಕೆ ಸಿದ್ಧಪಡಿಸುವ ಸ್ಥಳ' ಎಂಬ ಭಾವನೆಯಿಂದ ಪಠ್ಯ ವಿಷಯವನ್ನು ರೂಪಿಸಿರುವುದೂ ಈ ಭಿನ್ನತೆಗೆ ಕಾರಣವೆನ್ನಬೇಕು. 'ಶಾಲೆಗಳು ಮಕ್ಕಳು ನಿಜವಾದ ಜೀವನವನ್ನು ನಡಸುವ ಸ್ಥಳ'ವೆಂದು ಭಾವಿಸಿದ್ದರೆ ಇದು ತಲೆದೋರುತ್ತಿರಲಿಲ್ಲ. ಮಕ್ಕಳಿಗೆ ತಮ್ಮ ಅನುಭವವನ್ನೂ ಅಭಿರುಚಿ ಆಸಕ್ತಿಗಳನ್ನೂ ಚಿತ್ರ, ಕೈಕೆಲಸ, ಆಟ, ಮುಂತಾದ ಚಟುವಟಿಕೆಗಳ ಮೂಲಕ ಪ್ರಕಾಶಪಡಿಸಲು ಆಸಕ್ತಿಯಿರುತ್ತದೆ. ಅಂಥವರಿಗೆ ಪಾಠ ಓದಿ ಜ್ಞಾನಾರ್ಜನೆ ಮಾಡಿರೆಂದು ಶಾಲೆಯಲ್ಲಿ ಕೂರಿಸುವುದು ಬಲವಂತ ಮಾಘಸ್ನಾನದಂತಾಗುತ್ತದೆ. ಇದು ಪ್ರೌಢಶಾಲೆ ಮುಂತಾದ ಮೇಲ್ತರಗತಿಯ ಶಿಕ್ಷಣರಂಗದಲ್ಲಿ ಅಷ್ಟಿಷ್ಟು ಸಹಜವೆನಿಸಿದರೂ ಪ್ರಾಥಮಿಕ ಶಾಲೆಗಳಲ್ಲಿ ಜಿಗುಪ್ಸೆ ಹುಟ್ಟಿಸಿಬಿಡುತ್ತದೆ. ಜೊತೆಗೆ ಅವರ ಚಟುವಟಿಕೆ, ಕಾರ್ಯಾಸಕ್ತಿ, ಅಭಿರುಚಿ ಮತ್ತು ಕಲ್ಪನಾಶಕ್ತಿ' ಮುಂತಾದ ಗುಣಗಳು ಮಂಕಾಗುತ್ತವೆ ನಿಜವಾದ ಪಠ್ಯವಸ್ತು ಮಕ್ಕಳ ಈ ಗುಣಗಳ ಬೆಳವಣಿಗೆಗೆ ಸೂಕ್ತ ಸನ್ನಿವೇಶಗಳನ್ನು ಒದಗಿಸಬೇಕು; ಆದರೆ ಈಗ ಇದಕ್ಕೆ ವಿರುದ್ಧವಾಗಿದೆ; ಅದರಿಂದಲೇ ಹೊರಗಡೆ ತುಂಬ ಚಟುವಟಿಕೆಯಿಂದಿರುವ ಮಕ್ಕಳು ಶಾಲೆಯ ಆವರಣದಲ್ಲಿ ಮಂಕರಂತೆ ಕುಳಿತುಬಿಡುತ್ತಾರೆ.

ಇಂದಿನ ಪಠ್ಯವಸ್ತು ಮಕ್ಕಳು ಹೃದ್ಗತಮಾಡಿ ಪರೀಕ್ಷೆಯಲ್ಲಿ ಒಪ್ಪಿಸಿಬಿಡಲು ಯೋಗ್ಯವಾಗಿದೆಯೇ ಹೊರತು ಅವರ ಆಲೋಚನಾಶಕ್ತಿಯನ್ನು ಹೆಚ್ಚಿಸುವಂತಿಲ್ಲ. ನಮ್ಮ ಸಮಾಜ ಜೀವನದಲ್ಲಿ ಕಂಡುಬರುವ ಮೂಢ ನಂಬಿಕೆಗಳನ್ನೂ ಕೆಟ್ಟ ಸಂಪ್ರದಾಯಗಳನ್ನೂ ವಿಚಾರಬುದ್ಧಿಯಿಂದ ವಿಮರ್ಶಿಸುವ ಆವಶ್ಯಕತೆಯಿರುವ ಈ ಕಾಲದಲ್ಲಿ ಇಂಥ ಪಠ್ಯವಸ್ತು ಆ ದೃಷ್ಟಿಯಲ್ಲಿ ಅಪ್ರಯೋಜಕವೆನಿಸುತ್ತಿದೆ. ಪರೀಕ್ಷೆಗಾಗಿ ಏನನ್ನೋ ಓದಬೇಕು; ನಿಜವಾದ ಬಾಳಿಗಾಗಿಯಲ್ಲ—ಎಂಬ ಮನೋಭಾವ ಹುಟ್ಟಿ, ಅವರ ಆಲೋಚನಾಶಕ್ತಿಯೂ ಹೆಚ್ಚಲಾರದು. ನಮ್ಮ ಜೀವನಕ್ಕೆ ಸಂಬಂಧಿಸಿದ ಸಮಸ್ಯೆಯಂತೆ ಅದು ರೂಪುಗೊಂಡಿದ್ದರೆ ಮಾತ್ರ ಅದರಲ್ಲಿ ಆಸಕ್ತಿಯಿದ್ದು

ಮಕ್ಕಳು ವಿಮರ್ಶಿಸುವ, ಮತ್ತು ಸೂಕ್ತ ನಿರ್ಧಾರಕ್ಕೆ ಬರುವ ಶಕ್ತಿಯನ್ನು ಪಡೆದಾರು. ವೃತ್ತಿಶಿಕ್ಷಣದಲ್ಲೂ ಇದೇ ರೀತಿಯ ಹಳೆಯ ಕಾಲದ ಪಠ್ಯ ವಸ್ತುವಿದ್ದು ಮಕ್ಕಳ ಆಸಕ್ತಿಯನ್ನು ಕೆರಳಿಸಲಾರದಾಗಿದೆ. ಯಾವುದು ಜೀವನಕ್ಕೆ ಸಂಬಂಧಿಸಿದ ಉದ್ಯಮದಂತಿದೆಯೋ ಅಂಥ ವಸ್ತು ಮಾತ್ರ ಮಕ್ಕಳಲ್ಲಿ ನಿಜವಾದ ಆಸಕ್ತಿಯನ್ನೂ, ಆಲೋಚನೆ, ವಿಮರ್ಶೆ, ಕಲ್ಪನೆ, ಮುಂತಾದ ಶಕ್ತಿಗಳನ್ನೂ ಹೆಚ್ಚಿಸಬಲ್ಲದು.

ಇಷ್ಟೊಂದು ಅಗಾಧವಾದ ಪಠ್ಯವಸ್ತು ನಿಯಮಿತವಾಗಿದ್ದರೂ ಮಕ್ಕಳ ಮನಸ್ಸಿನಲ್ಲಿ ಒಳ್ಳೆಯ ದೃಷ್ಟಿಧ್ಯೇಯಗಳನ್ನೂ, ರಸಿಕತೆ, ಕಲಾಭಿಮಾನ ಮತ್ತು ಸೌಂದರ್ಯೋಪಾಸನೆ, ಮುಂತಾದವನ್ನೂ ಹೆಚ್ಚಿಸುವಂತಿಲ್ಲ. ಪರೀಕ್ಷೆಗಾಗಿ ಹಲವಂಶಗಳನ್ನು ಹೃದ್ಗತ ಮಾಡಿಸುವದಕ್ಕಾಗಿಯೇ ರೂಪುಗೊಂಡಂತೆ ಕಾಣುವ ಇಂಥ ಪಠ್ಯವಸ್ತು ಮಕ್ಕಳಲ್ಲಿ ಸತ್ಪ್ರಜಾ ಜೀವನಕ್ಕೆ ಆವಶ್ಯಕವಾದ ಸಹಕಾರ ಸದ್ಭಾವನೆಗಳನ್ನು ಮೂಡಿಸುವುದರ ಬದಲು ನಿರುತ್ಸಾಹ, ನಿರಾಸಕ್ತಿ, ಸೋಮಾರಿತನ ಮತ್ತು ಇನ್ನಿತರ ದುರಭ್ಯಾಸಗಳ ಕಡೆ ಹೆಜ್ಜೆಯಿಡುವಂತೆ ಮಾಡುತ್ತದೆ. ತಮ್ಮ ಮೇಲೆ ಹೇರಿರುವ ಪಠ್ಯವಸ್ತುವನ್ನು ಕಲಿಯುವುದರಲ್ಲಿ ಆಸಕ್ತಿ ಮೂಡದೆ ಉಪಾಧ್ಯಾಯರನ್ನೂ, ಅನಂತರ ಸಮಾಜವನ್ನೂ ಮೋಸಗೊಳಿಸುವ ಮನೋಭಾವವೂ ಮಕ್ಕಳಲ್ಲಿ ಹುಟ್ಟಿಕೊಳ್ಳುತ್ತದೆ. ಜೀವನಕ್ಕೆ ಅತಿಮುಖ್ಯವಾದ ಕಲೋಪಾಸನಾ ದೃಷ್ಟಿಯನ್ನು ಇಂದಿನ ಪಠ್ಯವಿಷಯ ಬೆಳಸಲಾರದಾಗಿದೆ. ನಿಜವಾದ ಉದ್ಯಮಗಳನ್ನೊಳಗೊಳ್ಳದಿರುವುದೇ ಇದಕ್ಕೆ ಕಾರಣವೆನ್ನಬೇಕು. ಇಂದಿನ ಪಠ್ಯವಸ್ತು ಒಳ್ಳೆಯ ಭಾವನೆಗಳನ್ನೂ ದೃಷ್ಟಿಧ್ಯೇಯಗಳನ್ನೂ ತಿಳಿಸುವ ಜ್ಞಾನವನ್ನು ಒಳಗೊಂಡಿಲ್ಲವೆಂದು ಹೇಳುವ ಮಾತಿದಲ್ಲ. ಅಂಥ ಬೋಧನೆ ಅದರಲ್ಲಿರಬಹುದು. ಆದರೆ ಆ ಜ್ಞಾನವನ್ನು ಪ್ರಾಯೋಗಿಕವಾಗಿ ಉಪಯೋಗಿಸಿಕೊಂಡು, ಅಭ್ಯಾಸಿಸಿ ಕಲಿಯುವ ಅವಕಾಶ ಅಲ್ಲಿ ಇರುವುದಿಲ್ಲ. ಆರೋಗ್ಯ ಪಾಠವನ್ನು ಬೋಧಿಸಿದರೂ ಆರೋಗ್ಯಕರವಾದ ಅಭ್ಯಾಸಗಳನ್ನು ಕಲಿಸುತ್ತಿಲ್ಲ. ಪ್ರಜಾಧರ್ಮವನ್ನು ಕಲಿತರೂ ಸತ್ಪ್ರಜಾ ಜೀವನವನ್ನು ಅವರಲ್ಲಿ ಅಭ್ಯಾಸಕ್ಕೆ ತರುತ್ತಿಲ್ಲ. ಗ್ರಾಮಾಂತರ ಶಾಲೆಗಳಲ್ಲಿ ವ್ಯವಸಾಯ ಬೋಧನೆ ಮಾಡುವುದು ಕಂಡುಬಂದರೂ ಗ್ರಾಮಜೀವನದಲ್ಲಿ ವಿದ್ಯಾರ್ಥಿಗಳಿಗೆ ಆಸಕ್ತಿ ಹುಟ್ಟಿಸುವಂತಿಲ್ಲ.

ಒಟ್ಟಿನಲ್ಲಿ, ಭರತಖಂಡದಲ್ಲಿ ಈಗತಾನೆ ಆರಂಭವಾಗಿರುವ ಪ್ರಜಾಸತ್ತಾತ್ಮಕ ಸ್ವತಂತ್ರ ಸಮಾಜದಲ್ಲಿ ಸತ್ಪ್ರಜೆಗಳಾಗಿ ಬಾಳಲು, ಮತ್ತು ತಮ್ಮ ಅಭಿರುಚಿ ಆಸಕ್ತಿಗಳನ್ನು ಪೋಷಿಸಿಕೊಂಡು, ವ್ಯಕ್ತಿತ್ವವನ್ನು ಪೂರ್ಣವಾಗಿ ಪಕ್ವಗೊಳಿಸಿಕೊಂಡು—ನಮ್ಮ ಜನಜೀವನಕ್ಕೆ ನೆರವಾಗುವಂತೆ ಶಿಕ್ಷಣ ಕೊಡಲು ನಮ್ಮ ಪಠ್ಯವಸ್ತು ಉಚಿತ ಸನ್ನಿವೇಶಗಳನ್ನು ಒಳಗೊಂಡಿಲ್ಲ. ಒಬ್ಬೊಬ್ಬ ಪ್ರಜೆಯೂ ತನಗೂ ರಾಷ್ಟ್ರಕ್ಕೂ ಇರುವ ಬಾಂಧವ್ಯವನ್ನು ಕಂಡುಕೊಂಡು, ತನ್ನ ಮತ್ತು ರಾಷ್ಟ್ರದ ಪುರೋಭಿವೃದ್ಧಿಗೆ ನೆರವಾಗುವಂಥ ಜೀವನ ಕೇವಲ ಗ್ರಂಥಪಠನದಿಂದ ಪಕ್ವಗೊಳ್ಳಲಾರದು: ಆ ಜೀವನವನ್ನು ಶಾಲೆಯಲ್ಲಿ ನಡೆಸುವಂತಿದ್ದರೆ ಮಾತ್ರ ಅದನ್ನು ಕಲಿತಾರು. ಆದ್ದರಿಂದ ನಮ್ಮ ಮುಂದಿನವರು ಶಾಲೆಗಳಲ್ಲಿ ಆಚರಣೆಯ ಮೂಲಕ ಸತ್ಪ್ರಜಾ ಜೀವನವನ್ನು ಕಲಿಯುವಂತೆ ನಮ್ಮ ಪಠ್ಯ ವಿಷಯವನ್ನು ಮಾರ್ಪಡಿಸುವುದು ಅನಿವಾರ್ಯವೆನಿಸಿದೆ. ಆ ಮೂಲಕ ಉತ್ತಮ ಸಮಾಜದ ನಿರ್ಮಾಣವಾದೀತು.

ಇಂದಿನ ಪಠ್ಯ ವಿಷಯ ದೈಹಿಕ ಶಿಕ್ಷಣದ ಕಡೆ ತಕ್ಕಷ್ಟು ಗಮನ ಕೊಟ್ಟಿಲ್ಲ. ಲಜಪತರಾಯರು ಹೇಳುವಂತೆ ಲಕ್ಷಾಂತರ ಜನರು ಅಕಾಲ ಮೃತ್ಯುವಿಗೆ ತುತ್ತಾಗುತ್ತಿರುವುದಕ್ಕೆ ಅವರ ಶಾಲಾ ಜೀವನದಲ್ಲಿ ದೈಹಿಕ ಶಿಕ್ಷಣಕ್ಕೆ ತಕ್ಕಷ್ಟು ಗಮನವನ್ನು ಕೊಡದಿರುವುದೇ ಕಾರಣವೆನ್ನಬಹುದು. ನಾವು ಸಾರ್ವಜನಿಕ ಆರೋಗ್ಯದ ಕಡೆ ಉಚಿತ ರೀತಿಯಾಗಿ ಗಮನ ಕೊಡದೆ ಅನೇಕರ ಪ್ರಾಣಹಾನಿಗೆ ಕಾರಣರಾಗಿ ಮಹಾಪರಾಧಿಗಳಾಗುತ್ತಿದ್ದೇವೆ; ನಮ್ಮ ನಾಡಿನಲ್ಲಿ ಹತ್ತಾರು ವರ್ಷಗಳಿಂದ ಶಿಕ್ಷಣದಲ್ಲಿ ಆಸಕ್ತಿ ಹುಟ್ಟಿ ಬೆಳೆಯುತ್ತಿದ್ದರೂ ದೈಹಿಕ ಅಭಿವೃದ್ಧಿಯ ಕಡೆ ತಕ್ಕಷ್ಟು ಗಮನ ಕೊಡುತ್ತಿಲ್ಲ. ಇಂಥ ಏಕಮುಖವಾದ ದೃಷ್ಟಿಯಿಂದ ನಿರ್ಮಿತವಾದ ಪಠ್ಯವಿಷಯ ನಮ್ಮ ಮುಂದಿನ ಜನತೆಯನ್ನು ನಿರ್ವೀರ್ಯರನ್ನಾಗಿ ಮಾಡೀತು! ವರ್ಷಂಪ್ರತಿ ನಮ್ಮ ಶಿಕ್ಷಣ ಸಂಸ್ಥೆಗಳಿಂದ ಕಾಳಿದಾಸ, ಭವಭೂತಿ, ಪಂಪ,ರನ್ನ, ಷಡಕ್ಷರಿ—ಮುಂತಾದ ಕವಿಗಳ ಗ್ರಂಥಗಳನ್ನು ಹೃದ್ಗತಮಾಡಿದ ಲಕ್ಷಗಟ್ಟಲೆ ವಿದ್ಯಾರ್ಥಿಗಳು ಹೊರಬೀಳುತ್ತಿದ್ದರೂ ದೃಢಕಾಯರೂ, ಆರೋಗ್ಯವಂತರೂ, ಒಳ್ಳೆಯ ಅಂಗಸೌಷ್ಠವವುಳ್ಳವರೂ ಆದ ಯುವಕರ ಸಂಖ್ಯೆ ಕ್ರಮಕ್ರಮವಾಗಿ ಕಡಮೆಯಾಗುತ್ತಿದೆ. ಸುಖಮಯವಾದ ಜೀವನಕ್ಕೆ ಅವಶ್ಯಕವೆನಿಸುವ

ಮೂಲಕ ಸ್ಫುಟಗೊಳ್ಳಲು ನಿರಾತಂಕವಾದ ಸನ್ನಿವೇಶಗಳು ದೊರಕಿ, ಸಮಾಜಜೀವನಕ್ಕೆ ಅನಿವಾರ್ಯವಾದ ಸಹಕಾರ ಸದ್ಭಾವನೆಗಳೂ ಇತರ ದೃಷ್ಟಿಧ್ಯೇಯಗಳೂ ಶಾಲಾ ಜೀವನದಿಂದ ರೂಪುಗೊಂಡು ಮುಂದಿನ ಜೀವನಕ್ಕೂ ನೆರವಾಗುತ್ತವೆ. ಇಂದುತಾನೆ ಸ್ವಾತಂತ್ರ್ಯದ ಹೊಂಬೆಳಕನ್ನು ಕಂಡಿರುವ ಭರತಖಂಡ ಅಂಥ ಸತ್ಪ್ರಜಾವೃಂದದಿಂದ ತಾನೇ ಸುಭದ್ರವಾದ ತಳಹದಿಯ ಮೇಲೆ ತನ್ನ ಪುರೋಭಿವೃದ್ಧಿಯನ್ನು ಸಾಧಿಸಲು ಯತ್ನಿಸ ಬೇಕಾಗಿರುವುದು? ಎಂದಮೇಲೆ, ನಮ್ಮ ಶಾಲೆಗಳಲ್ಲಿ ಹಾಗೂ ಪ್ರಾಥಮಿಕ ಶಾಲೆಗಳಲ್ಲಿ ಸೂಕ್ತವೆನಿಸುವ ಪಠ್ಯವಸ್ತುವನ್ನು ನಿರ್ಮಿಸುವುದು ನಮ್ಮ ಮುಂದೆ ಇರತಕ್ಕ ರಾಷ್ಟ್ರ ಪುನರುಜ್ಜೀವನದ ಇನ್ನಿತರ ಸಮಸ್ಯೆಗಳಷ್ಟೇ ಪ್ರಧಾನವಾದದ್ದಾಗಿದೆ.

# ೮. ಪಠ್ಯವಸ್ತುವಿನ ಪುನರ್ವ್ಯವಸ್ಥೆ

ಪಠ್ಯವಸ್ತುವಿನ ನ್ಯೂನತೆಗಳನ್ನು ಪರಿಹರಿಸಲು ಅಂದಂದು ಯತ್ನ ನಡೆದಿದ್ದರೂ, ಇಂದಿಗೂ ಎಲ್ಲ ನ್ಯೂನತೆಗಳೂ ಉಳಿದುಕೊಂಡೇ ಬಂದಿವೆ! ನಮ್ಮ ನಾಡಿನಲ್ಲಿ ನಿರಕ್ಷರತೆಯನ್ನು ನಿರ್ಮೂಲಮಾಡಲು ಯತ್ನ ನಡೆದಿದ್ದರೂ ಇಂಥ ನಿರುತ್ಸಾಹ ಹುಟ್ಟಿಸುವ ಅನುಚಿತ ರೀತಿಯ ಪಠ್ಯವಸ್ತುವಿನಿಂದ ಆ ಕಾರ್ಯ ಯಶಸ್ವಿಯಾಗಿಲ್ಲ. ನಾಡಿನ ಭಾಗ್ಯೋದಯವಾಗಬೇಕಾದರೆ ಯಶಸ್ವಿಯಾಗತಕ್ಕ ಸಾರ್ವತ್ರಿಕ ಶಿಕ್ಷಣ ಯೋಜನೆಯೊಂದು ಅನಿವಾರ್ಯ; ಅಂಥ ಕಾರ್ಯದಲ್ಲಿ ತೊಡಗುವಾಗ ಪಠ್ಯವಿಷಯದ ಪುನರ್ವ್ಯವಸ್ಥೆ ಮೊದಲ ಕೆಲಸವಾಗುತ್ತದೆ. ಅಂಥ ನೂತನ ಪಠ್ಯವಸ್ತುವನ್ನು ನಿರ್ಮಿಸಲು ನೆರವಾಗುವ ದೃಷ್ಟಿ ಧ್ಯೇಯಗಳನ್ನೂ ಆಧುನಿಕ ಶಿಕ್ಷಣರಂಗದ ಸಂಶೋಧನೆಗಳನ್ನೂ ನಾವು ಮೊದಲು ಪರಿಚಯ ಮಾಡಿಕೊಳ್ಳಬೇಕು.

ಮೊದಲನೆಯದಾಗಿ, ಇಂದಿನ ಪಠ್ಯವಿಷಯ ಇಂಗ್ಲೀಷರು ಭಾರತದ ಆಡಳಿತ ಸೌಕರ್ಯಕ್ಕಾಗಿ, ಕರಣಿಕರ ಸೃಷ್ಟಿಗಾಗಿ, ರೂಪಿಸಿದ್ದು. ಅದೂ, ಅವರ ಮಾತೃಭೂಮಿಯಲ್ಲಿದ್ದುದನ್ನೇ ಇಲ್ಲಿಯೂ ತಂದು ಕೂರಿಸಲಾಗಿದೆ. ಎಂದಮೇಲೆ, ಅದು ನಮ್ಮ ಜನಜೀವನಕ್ಕೊಪ್ಪದ ಪಠ್ಯವಸ್ತು. ಈಗ ಆ ಪರಕೀಯ ಆಡಳಿತ ಕೊನೆಗೊಂಡಿದೆ; ಕೇವಲ ಕರಣೀಕರನ್ನು ನಿರ್ಮಿಸುವುದೇ ನಮ್ಮ ಇಂದಿನ ಧ್ಯೇಯವಲ್ಲ—ಭವ್ಯ ಜನಾಂಗವನ್ನು ನಿರ್ಮಿಸಬೇಕಾಗಿದೆ. ಕಷ್ಟ, ಕಾರ್ಪಣ್ಯ, ನಿರಕ್ಷರತೆ, ಅಜ್ಞಾನ, ಅನಾರೋಗ್ಯ, ಮುಂತಾದ ತೊಂದರೆಗಳಲ್ಲಿ ಸಿಲುಕಿರುವ ಭಾರತದ ಮಾನವಕೋಟಿಯ ಕಲ್ಯಾಣವನ್ನು ಸಾಧಿಸಬೇಕಾಗಿದೆ. ಅದಕ್ಕೊಪ್ಪುವಂಥ ಪಠ್ಯವಸ್ತುವನ್ನು ನಿರ್ಮಿಸುವಾಗ ಕೇವಲ ಒಂದೆರಡು ಬದಲಾವಣೆಗಳಿಂದ ಆ ಕಾರ್ಯ ಸಾಧಿಸಲು ಸಾಧ್ಯವಿಲ್ಲ. ಹಾಗೂ, ಪ್ರಾಥಮಿಕ ಶಾಲೆಗಳಲ್ಲಿ ಪೂರ್ಣವಾಗಿಯೇ ಪಠ್ಯವಸ್ತುವನ್ನು ಬದಲಾಯಿಸಬೇಕಾಗಿದೆ. ನಮ್ಮ ಜನತೆಯ ಶಕ್ತಿ ಸಾಮರ್ಥ್ಯಗಳು ಬೆಳೆದು, ನಾಡಿಗೆ ಆ ಮೂಲಕ ಸೇವೆಯು ಸಂದು, ಜನಾಂಗ ಸರ್ವ ವಿಧದಲ್ಲೂ ಪುಷ್ಟಿಗೊಳ್ಳುವಂಥ ಪಠ್ಯವಿಷಯವನ್ನು ಶಾಲೆಗಳ ಬೇರೆ ಬೇರೆ ಅಂತಸ್ತುಗಳನ್ನನು

ಸರಿಸಿ ರೂಪಿಸಬೇಕು. ಹಾಗೆ ಮಾಡುವಾಗ ಪಾಶ್ಚಿಮಾತ್ಯ ಶಿಕ್ಷಣರಂಗದಲ್ಲಿ ಸಂಶೋಧನೆ ನಡೆದು ಬೆಳಕಿಗೆ ಬಂದಿರುವ ಹಲವಂಶಗಳನ್ನೂ ಗಣನೆಗೆ ತೆಗೆದುಕೊಳ್ಳಬೇಕು. ಕಲಿವು, ಪಠ್ಯವಿಷಯ, ಬೋಧನಕಾರ್ಯ ಇವುಗಳ ಶಾಸ್ತ್ರೀಯ ಸ್ವರೂಪವನ್ನು ಪರಿಚಯ ಮಾಡಿಕೊಳ್ಳಬೇಕು. ಎಂದರೆ, ಪಠ್ಯ ವಿಷಯವನ್ನು ನಿರ್ಮಿಸಲು ಕೈಹಾಕುವಾಗ ಸಮಾಜದ ದೃಷ್ಟಿ ಧ್ಯೇಯಗಳು, ಆವಶ್ಯಕತೆಗಳು ಮತ್ತು ಮಕ್ಕಳ ಮನಸ್ಸಿನ ಪರಿಚಯ—ಇವನ್ನೆಲ್ಲ ಗಣನೆಗೆ ತೆಗೆದುಕೊಳ್ಳಬೇಕು.

**ಪಠ್ಯವಸ್ತುವಿನ ನಿರ್ಮಾಣಕ್ಕೆ ಆಧಾರಗಳು:** ಆಧುನಿಕ ಜನಾಂಗ ಗಳಲ್ಲಿ ಅಮೆರಿಕದವರು ಪಠ್ಯವಿಷಯದ ಔಚಿತ್ಯದ ವಿಷಯದಲ್ಲಿ ಬಹುವಾಗಿ ಸಂಶೋಧಿಸಿ ತುಂಬ ಆಸಕ್ತಿಯನ್ನು ತೋರಿರುವರು. ಆ ಕಾರ್ಯಕ್ಕೆ ನೆರ ವಾಗತಕ್ಕ ನೀತಿನಿಯಮಗಳನ್ನೊಳಗೊಂಡ ಗ್ರಂಥಗಳನ್ನೂ ಬೆಳಕಿಗೆ ತಂದಿರುವರು. ಅಲ್ಲಿನ 'ರಾಷ್ಟ್ರೀಯ ಶಿಕ್ಷಣ ಸಂಸ್ಥೆ'ಯವರು 'ಪಠ್ಯವಸ್ತು ನಿರ್ಮಾಣಕ್ಕೆ ಆಧಾರಗಳು' ಎಂಬ ಗ್ರಂಥವನ್ನು ಸಮಿತಿಯೊಂದರ ಸಲಹೆ ಯಂತೆ ಪ್ರಕಟಿಸಿ ಜಗತ್ತಿಗೇ ಮಾರ್ಗದರ್ಶಕರಾಗಿರುವರು. ಆ ಸಮಿತಿಯಲ್ಲಿ ಹೆರಾಲ್ಡ್ ರಗ್, ಕಿಲ್‌ಪ್ಯಾಟ್ರಿಕ್, ಬ್ಯಾಗ್ಲೆ, ಮುಂತಾದ ಶಿಕ್ಷಣ ಚತುರರೂ ಇದ್ದರು. ಅಲ್ಲಿ ವಿವರಿಸಿರುವ ಅಂಶಗಳು ಅಮೆರಿಕದ ಜನಾಂಗಕ್ಕೆ ಅನ್ವಯಿಸ ತಕ್ಕವಾದರೂ ಎಲ್ಲ ಶಿಕ್ಷಣರಂಗಕ್ಕೂ ಆದರ್ಶಪ್ರಾಯವಾಗಿರುವುದರಿಂದ ಅವನ್ನಿಲ್ಲಿ ಉಲ್ಲೇಖಿಸಿದೆ.

೧. ಪಠ್ಯವಸ್ತುವನ್ನು ನಿರ್ಮಿಸುವಾಗ ಮಗುವಿನ ವ್ಯಕ್ತಿತ್ವದ ಬೆಳ ವಣಿಗೆಗೂ, ಅದರ ಸಾಮಾಜಿಕ ಜೀವನದ ವಿಕಸನಕ್ಕೂ ತಕ್ಕಷ್ಟು ಗಮನ ಕೊಡಬೇಕು. ಮಕ್ಕಳು ಬೇರೆ ಬೇರೆ ವಯಸ್ಸಿನಲ್ಲಿ ಯಾವ ಯಾವ ಆಸಕ್ತಿ ಯನ್ನೂ ಚಟುವಟಿಕೆಯನ್ನೂ ತೋರಿಸುವರೆಂಬುದನ್ನು ಅರಿತುಕೊಂಡು ಅವಕ್ಕೊಪ್ಪುವಂಥ ಉದ್ಯಮಗಳನ್ನು ಪಠ್ಯವಿಷಯದಲ್ಲಿ ಅಳವಡಿಸಬೇಕು. ಜೊತೆಗೆ, ಮಕ್ಕಳು ಮುಂದೆ ಸಮಾಜದಲ್ಲಿ ಬಾಳುವಾಗ ಎಂಥ ಜೀವನವನ್ನು ನಡಸಬೇಕಾಗಿದೆಯೋ ಅಂಥ ಬಾಳನ್ನು ಶಾಲೆಯಲ್ಲೂ ಬಾಳುವಂತೆ ಸನ್ನಿ ವೇಶಗಳನ್ನು ಕಲ್ಪಿಸಲು ಅವಕಾಶಮಾಡಬೇಕು. ಇಂದಿನ ನಮ್ಮ ಸಮಾಜ ದಲ್ಲಿ ಅನೇಕ ಕುಂದುಕೊರತೆಗಳೂ ಸಮಸ್ಯೆಗಳೂ ಇವೆ. ಅಂಥ ಕುಂದು

ಕೊರತೆಗಳನ್ನು ನಿವಾರಿಸಿಕೊಂಡು ಸಮಸ್ಯೆಗಳನ್ನು ಇತ್ಯರ್ಥಪಡಿಸಿಕೊಂಡು ಅವರು ಬಾಳಬೇಕಾಗಿದೆ. ಆ ಮೂಲಕ ಪ್ರಗತಿಪಥದಲ್ಲಿ ಹೆಜ್ಜೆಯಿಡುವಂತಾಗಬೇಕು. ಸಮಾಜದಲ್ಲಿ ಮುಂದೆ ಎದುರು ಬರತಕ್ಕ ಆ ರೀತಿಯ ಸನ್ನಿವೇಶಗಳನ್ನೂ ಸಮಸ್ಯೆಗಳನ್ನೂ ಶಾಲಾಜೀವನದಲ್ಲೂ ಮಕ್ಕಳು ಅನುಭವಿಸುವಂತೆಯೂ, ಅವು ನಿತ್ಯ ಜೀವನದ ಸಮಸ್ಯೆಗಳಂತೆಯೇ ಎಂದರಿತು ಸ್ವಾಭಾವಿಕವಾಗಿ ಅವನ್ನು ಇತ್ಯರ್ಥಪಡಿಸಲು ಆಸಕ್ತಿಯಿಂದ ಯತ್ನಿಸುವಂತೆಯೂ ಪಠ್ಯವಿಷಯ ಸನ್ನಿವೇಶಗಳನ್ನು ಒಳಗೊಂಡಿರಬೇಕು. ಆ ಮೂಲಕ ಮಕ್ಕಳು ನಿಜವಾದ ಜೀವನವನ್ನು ಶಾಲೆಯಲ್ಲಿ ಬಾಳಿ ಆಲೋಚನಾ ಶಕ್ತಿಯನ್ನೂ ಅನುಭವ ಆದರ್ಶಗಳನ್ನೂ ಹೆಚ್ಚಿಸಿಕೊಂಡಾರು. ಅಂಥ ಜೀವನ ನಡಸುವಾಗ ಸಹಕಾರ ಸದ್ಭಾವನೆಗಳೂ ಇತರ ಸಾಮಾಜಿಕ ಸದ್ಗುಣಗಳೂ ಅವರಲ್ಲಿ ಮೊಳೆತು, ಬೆಳೆಯುವುವು. ಜೊತೆಗೆ, ವಂಶಗತವಾಗಿ ಬಂದಿರುವ ಅವರ ಅಭಿರುಚಿ ಆಸಕ್ತಿಗಳೂ ಶಕ್ತಿ ಸಾಮರ್ಥ್ಯಗಳೂ ಆ ಚಟುವಟಿಕೆಗಳ ಮೂಲಕ ಪ್ರಕಾಶನಗೊಂಡು ಅಭಿವೃದ್ಧಿಗೆ ಬರಬಲ್ಲವು.

೨. ಪಠ್ಯವಸ್ತುವನ್ನು ನಿರ್ಮಿಸುವವರಿಗೆ ಸಾಮಾಜಿಕ ಪರಿಜ್ಞಾನ ಚೆನ್ನಾಗಿರಬೇಕು. ಕೇವಲ ಮಗುವಿನ ಮನೋವ್ಯಾಪಾರವನ್ನು ಬಲ್ಲ ಮನಶ್ಶಾಸ್ತ್ರಜ್ಞರಾದರೆ ಸಾಲದು: ಸಮಾಜದ ರೂಪು ರೇಖೆಗಳನ್ನೂ, ಕುಂದು ಕೊರತೆಗಳನ್ನೂ ಎದುರು ಬರುತ್ತಿರುವ ಸಮಸ್ಯೆಗಳನ್ನೂ, ಅವು ಇತ್ಯರ್ಥಗೊಳ್ಳಬೇಕಾಗಿರುವ ಉತ್ತಮ ಮಾರ್ಗವನ್ನೂ ಬಲ್ಲವರಾಗಿರಬೇಕು; ಜನಾಂಗದ ತತ್ತ್ವದೃಷ್ಟಿಯನ್ನನುಸರಿಸಿ ಶಿಕ್ಷಣದ ಗುರಿಯನ್ನು ಚೆನ್ನಾಗಿ ಅರಿತವರಾಗಿರಬೇಕು; ಆಧುನಿಕ ಸಂಶೋಧನೆಗಳಿಂದ ನಿಷ್ಕರ್ಷೆಯಾಗಿರುವ ಮಕ್ಕಳ ಸ್ವಭಾವಾದಿ ಹುಟ್ಟುಗುಣಗಳನ್ನು ಸಂಸ್ಕರಿಸಲು ಉಚಿತವೆನಿಸುವ ಚಟುವಟಿಕೆಗಳನ್ನೂ ಆ ಕಾರ್ಯಕ್ಕೆ ನೆರವಾಗತಕ್ಕ ಉಪಕರಣಗಳನ್ನೂ ತಿಳಿದವರಾಗಿರಬೇಕು; ಬೇರೆ ಬೇರೆ ಅಂತಸ್ತಿನ ಶಾಲೆಗಳಲ್ಲಿ ಯಾವ ಯಾವ ಚಟುವಟಿಕೆಯ ಉದ್ಯಮಗಳನ್ನೂ ಉಪಕರಣಗಳನ್ನೂ ಉಪಯೋಗಿಸಿಕೊಳ್ಳಬೇಕೆಂಬುದನ್ನೂ ಪರಿಚಯ ಮಾಡಿಕೊಂಡಿರಬೇಕು.

೩. ನಮ್ಮ ಸಮಾಜದ ಹಿಂದಿನ, ಇಂದಿನ, ಮುಂದಿನ ರೂಪುರೇಖೆಗಳ ಪರಿಚಯವಾಗುವಂತೆ ಪಠ್ಯವಸ್ತು ಬೇರೆ ಬೇರೆ ಅಂಶಗಳನ್ನು ಸಮರಸವಾಗಿ

ಅಳವಡಿಸಿಕೊಂಡಿರಬೇಕು. ಜನತೆಯ ಮನೋಭಾವ, ದೃಷ್ಟಿ ಧ್ಯೇಯ, ಸಂಘಸಂಸ್ಥೆಗಳ ಪರಿಚಯ, ಅವುಗಳ ಉಪಯೋಗ, ಇಂದಿನ ಜೀವನ ಸಮಸ್ಯೆಗಳ ಸ್ವರೂಪ, ನಾಡಿನ ಪ್ರಖ್ಯಾತವಾದ ಕೈಗಾರಿಕೆಗಳು, ಕಲೆಗಳು— ಇವೆಲ್ಲವನ್ನೂ ಶಾಲಾಜೀವನದಿಂದ ಮಕ್ಕಳು ಪರಿಚಯ ಮಾಡಿಕೊಳ್ಳುವಂತೆ ಪಠ್ಯವಸ್ತು ರೂಪುಗೊಳ್ಳಬೇಕು. ಒಟ್ಟಿನಲ್ಲಿ ನಮ್ಮ ಪಠ್ಯವಸ್ತು ಸಮಾಜದ ಸ್ವರೂಪವನ್ನೂ, ನಮ್ಮವರು ಇದುತನಕ ಸಾಧಿಸಿರುವ ಜ್ಞಾನರಾಶಿಯನ್ನೂ ಅವರ ಸಾಹಸೋದ್ಯಮಗಳನ್ನೂ ಪ್ರದರ್ಶಿಸುವಂತೆ ರೂಪುಗೊಳ್ಳಬೇಕು.

೪. ಇಂದಿನ ಪಠ್ಯವಸ್ತು ಭಾಷೆ, ಚರಿತ್ರೆ, ಗಣಿತ, ಭೂಗೋಳ, ಮುಂತಾದ ಪ್ರತ್ಯೇಕ ಭಾಗಗಳಾಗಿ ರೂಪುಗೊಂಡಿದೆ. ಜನಜೀವನದಲ್ಲಿ ಬಾಳುವಾಗ ಈ ಎಲ್ಲ ಜ್ಞಾನಗಳೂ ಪ್ರತ್ಯೇಕ ಪ್ರತ್ಯೇಕವಾಗಿ ಉಪಯೋಗ ವಾಗುವುದಿಲ್ಲ—ಒಂದರೊಡನೊಂದು ಸಂಬಂಧಿಸಿಯೇ ಬಳಕೆಗೆ ಬರುತ್ತದೆ. ಶಾಲೆಗಳಲ್ಲಿ ಹೀಗೆ ಪ್ರತ್ಯೇಕೀಕರಿಸುವುದು ಕೃತಕವಾದ್ದು. ಪಠ್ಯವಸ್ತುವಿನ ನಿರ್ಮಾಪಕರು ಪ್ರಾಥಮಿಕ ಶಾಲೆಗಳಲ್ಲಾದರೂ ಈ ಕೃತಕತೆಯನ್ನು ನಿವಾರಿಸುವುದು ಆವಶ್ಯಕ. ಏಕೆಂದರೆ, ಆಗ ಮಕ್ಕಳು ಕೇವಲ ಮನೆ ಯಲ್ಲಿದ್ದಂತೆ ಶಾಲೆಯಲ್ಲೂ ಇರಬೇಕು. ಅಲ್ಲಿ ಕಾಣುವ, ಆಡುವ, ನೋಡುವ, ಸನ್ನಿವೇಶಗಳನ್ನೇ ಇಲ್ಲೂ ಅನುಭವಿಸುವಂತಿರಬೇಕು. ಭಿನ್ನ ವಿಷಯಗಳಾಗಿ ಈಗ ಏರ್ಪಟ್ಟಿರುವ ವಿವಿಧ ಜ್ಞಾನಗಳೆಲ್ಲ ಒಂದು ಉದ್ಯಮವನ್ನೋ ಸಮಾ ರಂಭವನ್ನೋ ಅಥವಾ ಇತರ ಚಟುವಟಿಕೆಯ ಸನ್ನಿವೇಶಗಳನ್ನೋ ರಚಿಸು ವಾಗ ಒಟ್ಟಿಗೆ ಉಪಯೋಗಕ್ಕೆ ಬರುತ್ತವೆ; ಒಂದಕ್ಕೊಂದಕ್ಕೆ ಸಂಬಂಧಿಸಿ ದಂತೆಯೇ ತೋರುತ್ತವೆ. ಮಕ್ಕಳು ಆ ಮೂಲಕ ಬೇರೆಬೇರೆ ವಿಷಯಗಳನ್ನು ಅವುಗಳ ಸ್ವಾಭಾವಿಕ ರೂಪದಲ್ಲಿ ಪರಿಚಯಮಾಡಿಕೊಳ್ಳುವಂತೆ ಪಠ್ಯವಸ್ತು ರೂಪುಗೊಳ್ಳಬೇಕು. ಆಗ, ಪ್ರತ್ಯೇಕವಾಗಿರುವ ಬೇರೆ ಬೇರೆ ವಿಷಯಗಳು ಒಂದಕ್ಕೊಂದು ಸಂಬಂಧಿಸಿಕೊಂಡು ಉದ್ದೇಶಪೂರ್ವಕವಾದ ಉದ್ಯಮ ವೊಂದರಲ್ಲಿ ನೆರವಾಗುತ್ತವೆ. ಜೀವನದಲ್ಲಿ ನೆರವಾಗತಕ್ಕ ಮತ್ತು ಮಕ್ಕಳ ಚಟುವಟಿಕೆಗಳನ್ನು ಹೆಚ್ಚಿಸತಕ್ಕ ಉದ್ಯಮಗಳನ್ನೇ ಆರಿಸಿ ಶಾಲಾ ಜೀವನ ದಲ್ಲಿ ಆಚರಿಸುವುದರಿಂದ ಅಗತ್ಯವೆನಿಸುವ ಜ್ಞಾನ ಮಕ್ಕಳಿಗೇ ಹೊಳೆದು ಅದನ್ನು ತಿಳಿಯಲು ತಾವಾಗಿ ಕಾತರ ತೋರಿಸುತ್ತಾರೆ. ಆಗ ಅವರು ಒಮ್ಮೆ

ಭೂಗೋಳದ ಜ್ಞಾನ ಮಾತ್ರಬಯಸುತ್ತಲೂ ಮತ್ತೊಮ್ಮೆ ಚರಿತ್ರೆಯ ಜ್ಞಾನವನ್ನು ಮಾತ್ರ ತಿಳಿಯಲಿಚ್ಛಿಸುತ್ತಲೂ ಇರುವುದಿಲ್ಲ: ಯಾವ ಭಾಗವೇ ಆಗಲಿ, ಆ ವಿಷಯಕ್ಕೆ ಸಂಬಂಧಿಸಿದ ಎಲ್ಲ ಜ್ಞಾನವನ್ನೂ ತಿಳಿಯಲು ಆಸೆ ಯಿರುತ್ತದೆ. ಆದ್ದರಿಂದ ಚಟುವಟಿಕೆಯಿಂದಿರುವ ಮಕ್ಕಳ ಆವಶ್ಯಕತೆಯೇ ಪ್ರಧಾನವೆಂದು ಗಣಿಸಿ, ಅಂದಿನ ಸನ್ನಿವೇಶಕ್ಕೋ ಸಮಸ್ಯಾ ಪರಿಹಾರಕ್ಕೋ ಯಾವ ಜ್ಞಾನ ಬೇಕಾಗಿರಲಿ, ಅದು ಪ್ರತ್ಯೇಕ ಭಾಗಕ್ಕೆ ಸೇರಿದ್ದೆಂಬ ಯೋಚನೆಯೇ ಇಲ್ಲದೆ ಆರಿಸಿಕೊಳ್ಳುವಂತಿರಬೇಕು. ಅಂದು ಮಾತ್ರ ಕಲಿವು ಮಕ್ಕಳಿಗೆ ಸ್ವಾಭಾವಿಕವಾಗಿ ತೋರೀತು. ಶಾಲೆಯೂ ಜೀವನದ ರಂಗವೇ ಎಂದು ಭಾಸವಾದೀತು. ಆ ಉದ್ಯಮವನ್ನು ಆಚರಿಸುತ್ತಿರುವಾಗ ಆವಶ್ಯ ಕತೆ ತೋರಿದಂತೆ, ಸನ್ನಿವೇಶಗಳನ್ನುಪಯೋಗಿಸಿಕೊಂಡು ಉಪಾಧ್ಯಾಯರು ಆ ವಿಷಯಕ್ಕೆ ಸಂಬಂಧಿಸಿದ ಇತರ ಅಂಶಗಳನ್ನೂ, ಅರ್ಥವಿವರಣೆ, ತತ್ತ್ವ ನಿರೂಪಣೆ, ಸಂಘಸಂಸ್ಥೆಗಳ ಪರಿಚಯ, ಜೀವನಕ್ರಮ ಮುಂತಾದವು ಗಳನ್ನೂ ವಿವರಿಸುವ ಅವಕಾಶವಿರುವಂತೆ ಪಠ್ಯವಿಷಯ ನಿರ್ಮಿತವಾಗ ಬೇಕು. ಆ ಮೂಲಕವೇ ಮಕ್ಕಳಿಗೆ ಸಮಾಜದ ನಿಜವಾದ ಸ್ವರೂಪದ ಸಮಗ್ರ ದರ್ಶನ ಮಾಡಿಕೊಡಲು ಸಾಧ್ಯ.

ಹೀಗೆ ಪಠ್ಯವಿಷಯಗಳನ್ನು ಹಲವು ಉದ್ಯಮಗಳನ್ನಾಗಿ ರೂಪಿಸು ವುದರಿಂದ ಈಗಿರುವ ಹಲವು ಪಠ್ಯಭಾಗಗಳು ತಾವಾಗಿಯೇ ಮಾಯ ವಾಗುತ್ತವೆ! ಇನ್ನು ಕೆಲವು ಉಳಿದುಕೊಳ್ಳಬಹುದು; ಮತ್ತೆ ಕೆಲವು ಹೊಸದಾಗಿ ರೂಪು ಪಡೆಯಬಹುದು. ವಿಷಯವನ್ನೇ ಪ್ರಾಧಾನ್ಯವಾಗಿಟ್ಟು ಕೊಂಡು ವರ್ಗೀಕರಿಸುವುದರ ಬದಲು ಉದ್ದೇಶಪೂರ್ವಕವಾದ ಹಲವು ಉದ್ಯಮಗಳನ್ನು ಕೇಂದ್ರವಾಗಿಟ್ಟುಕೊಂಡು ಜ್ಞಾನವನ್ನು ವರ್ಗೀಕರಿಸ ಬಹುದು. ಆಗ ಮಕ್ಕಳಿಗೆ ಅವು ಕೃತಕವಾದುವೆಂದು ತೋರುವುದಿಲ್ಲ.

೫. ಇಷ್ಟೊಂದು ಎಚ್ಚರಿಕೆ ತೆಗೆದುಕೊಂಡು ಒಮ್ಮೆ ಪಠ್ಯವಸ್ತುವನ್ನು ನಿರ್ಮಿಸಿದರೂ, ಅದು ಎಲ್ಲ ಕಾಲಕ್ಕೂ ಯೋಗ್ಯವಾದ್ದೆಂದು ಭಾವಿಸಬಾರದು: ಜೀವನದ ನಿಜಸ್ವರೂಪ ಪಠ್ಯವಸ್ತುವಿನಲ್ಲಿ ಪ್ರತಿಬಿಂಬಿಸಬೇಕಾಗಿರುವುದ ರಿಂದಲೂ, ಜೀವನ ದಿನದಿನಕ್ಕೂ ಪ್ರಗತಿಗೇರುತ್ತಿರುವುದರಿಂದಲೂ ಆ ಪಠ್ಯವಸ್ತುವನ್ನು ಅಂದಂದು ಪುನರ್ವಿಮರ್ಶಿಸುವುದೂ ಅಗತ್ಯ. ಜೊತೆಗೆ,

ಶಿಕ್ಷಣರಂಗದಲ್ಲೂ ಹೊಸ ಹೊಸ ಶೋಧನೆಗಳು ನಡೆದು, ಹೊಸ ಬೆಳಕು ಗೋಚರಿಸುವುದರಿಂದ ಆ ದೃಷ್ಟಿಯಿಂದಲೂ ಅದು ಮಾರ್ಪಡಬೇಕಾಗುತ್ತದೆ. ನೂತನವಾಗಿ ಮಾನವನು ಸಾಧಿಸುವ ಜ್ಞಾನದ ಅಂಶಗಳನ್ನೂ ಸೇರಿಸಬೇಕು. ಇವೆಲ್ಲ ಕಾರ್ಯಗಳನ್ನೂ ಒಬ್ಬನೇ ನಿರ್ವಹಿಸುವುದು ಅಸಾಧ್ಯ. ಆದ್ದರಿಂದ ಪಠ್ಯವಸ್ತುವಿನ ರಚನೆಗೆಂದು ಒಂದು ಶಾಶ್ವತವಾದ ಸಮಿತಿಯನ್ನೇ ಏರ್ಪಡಿಸಬೇಕು. ಅದರಲ್ಲಿ ಮನಶ್ಶಾಸ್ತ್ರಜ್ಞರೂ, ಸಮಾಜ ವಿಜ್ಞಾನಿಗಳೂ, ಶಿಕ್ಷಣ ತತ್ತ್ವಚಿಂತಕರೂ ಬೇರೆ ಬೇರೆ ವಿಷಯಗಳಲ್ಲಿ ಪಾಂಡಿತ್ಯ ಪಡೆದವರೂ ಇರಬೇಕು. ಒಟ್ಟಿನಲ್ಲಿ ಅಂದಂದು ಪ್ರಕಾಶನಕ್ಕೆ ಬರಲು ಯತ್ನಿಸುವ ಮಕ್ಕಳ ಅಭಿರುಚಿ ಆಸಕ್ತಿಗಳು, ಹುಟ್ಟುಗುಣಗಳು ಮತ್ತು ಶಕ್ತಿ ಸಾಮರ್ಥ್ಯಗಳು ವ್ಯರ್ಥವಾಗದಂತೆ, ಅನುಚಿತವಾದ ವಿಷಯಗಳಿಗೆ ಕಾಲ ವ್ಯಯವಾಗದಂತೆ, ಶೀಘ್ರವೂ ಸಮಗ್ರವೂ ಆದ ಶಿಕ್ಷಣ ಸಾಧನೆಯಾಗುವಂತೆ ಪಠ್ಯವಸ್ತು ರೂಪು ಗೊಳ್ಳಬೇಕು. ಜೊತೆಗೆ, ನೂತನ ಕ್ರಮದಲ್ಲಿ ಬೋಧಿಸಲು ಅನುಕೂಲಿಸುವಂತೆಯೂ ಇರಬೇಕು.

೬. ಅಂಥ ನೂತನ ಪಠ್ಯವಸ್ತುವನ್ನೊಳಗೊಂಡ ಶಾಲೆಗಳಿಂದ ಹೊರ ಬೀಳುವ ವಿದ್ಯಾರ್ಥಿಗಳ ಪರೀಕ್ಷೆಗೆ ಉಚಿತವೆನಿಸುವ ಪರೀಕ್ಷಾಕ್ರಮಗಳೂ ಏರ್ಪಡಬೇಕು. ಪಠ್ಯವಿಷಯ ಯಾವ ಗುರಿಗಾಗಿ ಏರ್ಪಟ್ಟಿದೆಯೋ ಆ ಗುರಿ ಈಡೇರಿವೆಯೇ ಎಂಬುದನ್ನು ಪರೀಕ್ಷಿಸುವಂಥ ಪ್ರಶ್ನೆಗಳನ್ನು ಕೊಡಬೇಕು. ಅಂಥ ಪರೀಕ್ಷಾಕ್ರಮಗಳನ್ನು ಬೇರೊಂದು ಅಧ್ಯಾಯದಲ್ಲಿ ವಿವರಿಸಲಾಗಿದೆ.

೭. ನೂತನ ಪಠ್ಯವಸ್ತುವನ್ನು ಬೋಧಿಸಲು ಉಚಿತ ರೀತಿಯ ಶಿಕ್ಷಣ ಪಡೆದ ಶಿಕ್ಷಕರೂ ಅಗತ್ಯ. ಅಂಥ ನೂತನ ರೀತಿಯ ಶಿಕ್ಷಣವನ್ನು ಉಪಾಧ್ಯಾಯರಿಗೆ ಕೊಡಲು ಶಿಕ್ಷಣ ಕೇಂದ್ರಗಳೂ ಹೆಚ್ಚಬೇಕು. ಆ ಮೂಲಕ ಉತ್ಸಾಹಶಾಲಿಗಳಾದ ಶಿಕ್ಷಕರು ನೂತನವೂ ಫಲದಾಯಕವೂ ಆದ ರೀತಿಯಲ್ಲಿ ಶಿಕ್ಷಣ ಕೊಡಲು ಅನುಕೂಲವಾಗುತ್ತದೆ.

೮. ದೇಶಾದ್ಯಂತವೂ ಏಕರೀತಿಯ ಪಠ್ಯವಿಷಯವಿರುವುದು ಉಚಿತವಲ್ಲ; ಗ್ರಾಮಾಂತರದ ಶಾಲೆಗಳಲ್ಲಿ ಅಲ್ಲಿನ ಜೀವನ ಸಮಸ್ಯೆಗಳೂ, ಕಾರ್ಯ ಕೇಂದ್ರಗಳೂ, ಉದ್ಯಮಗಳೂ, ಇತರ ಚಟುವಟಿಕೆಯ ಸನ್ನಿವೇಶಗಳೂ ಪ್ರತಿಬಿಂಬಿತವಾಗಿರುವ ಪಠ್ಯವಸ್ತುವಿರಬೇಕು. ನಗರದ ಶಾಲೆಗಳಲ್ಲಿ ಅಲ್ಲಿನ

ಜೀವನಕ್ಕೊಪ್ಪುವಂತಿರಬೇಕು. ಹಾಗೆಯೇ, ಬಾಲಕ ಬಾಲಕಿಯರ ಶಾಲೆಗಳಿಗೂ ಅವರವರ ಭಿನ್ನ ಅಭಿರುಚಿ, ಆಸಕ್ತಿ ಮತ್ತು ಆವಶ್ಯಕತೆಗಳನ್ನನುಸರಿಸಿ ಪಠ್ಯವಸ್ತು ರೂಪುಗೊಳ್ಳಬೇಕು; ದೇಶದ ಬೇರೆ ಬೇರೆ ಭಾಗಗಳ ಶಾಲೆಗಳಲ್ಲೂ ಅಲ್ಲಿನ ಕೈಗಾರಿಕೆ, ಆವಶ್ಯಕತೆ, ಜೀವನರೀತಿಯ ಭಿನ್ನತೆ, ಅಲ್ಲಿರುವ ಅನುಕೂಲ—ಇವನ್ನನುಸರಿಸಿ ವೈವಿಧ್ಯತೆಯನ್ನು ಪಡೆದಿರಬೇಕು. ಒಟ್ಟಿನಲ್ಲಿ ಪಠ್ಯವಸ್ತುವನ್ನು ಆಯಾ ಸಮಾಜ ಜೀವನ ರೂಪಿಸಿ, ಅದರ ಪುರೋಭಿವೃದ್ಧಿಗೆ ನೆರವಾಗುವಂತೆ ಏರ್ಪಟ್ಟಿರಬೇಕು.

ಪಠ್ಯವಸ್ತುವಿನ ಮೇಲಣ ವೈವಿಧ್ಯತೆಯ ಆವಶ್ಯಕತೆಯನ್ನು ಪ್ರತಿಪಾದಿಸಿರುವುದರಿಂದ ಹಳ್ಳಿಯವರು ಬೇಸಾಯಗಾರರೇ ಆಗಬೇಕೆಂದಾಗಲಿ, ಪಟ್ಟಣದವರು ಅದರ ಗಂಧವನ್ನೇ ಕಾಣದ ಉದ್ಯೋಗಕುಶಲರಾಗಬೇಕೆಂದಾಗಲಿ ಯಾರೂ ಆಲೋಚಿಸಬಾರದು. ಹಳ್ಳಿಯವರಿಗೆ ನಗರ ಜೀವನದ ಪರಿಚಯವೂ, ನಾಗರಿಕರಿಗೆ ಗ್ರಾಮಜೀವನದ ಪರಿಚಯವೂ ಅನಿವಾರ್ಯ. ಅದಕ್ಕೆ ತಕ್ಕ ಅವಕಾಶ ಪಠ್ಯವಸ್ತುವಿನಲ್ಲಿ ಇರಲೇಬೇಕು. ಆದರೆ, ಈ ವೈವಿಧ್ಯಕಲ್ಪನೆಯ ಮೂಲ ಉದ್ದೇಶ ಗ್ರಾಮಾಂತರದ ಶಾಲೆಗಳಲ್ಲಿ ಶಿಕ್ಷಣ ಹೆಚ್ಚು ಸ್ವಾಭಾವಿಕವೂ, ಆಕರ್ಷಣೀಯವೂ, ಪರಿಣಾಮಕಾರಿಯೂ ಆಗುವಂತೆ ಮಾಡುವುದೇ ಆಗಿದೆ. ಆಗ ಮಾತ್ರ ನಮ್ಮ ಗ್ರಾಮಾಂತರ ಪ್ರದೇಶದಲ್ಲಿ ಕೋಟ್ಯಂತರ ಜನರಿಗೆ ಶಿಕ್ಷಣದಲ್ಲಿ ಆಸಕ್ತಿ ಹುಟ್ಟಿ, ನಿರಕ್ಷರತೆ ನಿರ್ಮೂಲವಾದೀತು. ಅವರಜ್ಞಾನವೂ ಹೆಚ್ಚಿ, ಜೀವನದ ಮಟ್ಟ ಉತ್ತಮಗೊಂಡೀತು.

ಪಠ್ಯವಸ್ತುವಿನ ನಿರ್ಮಾಪಕರು ಮೇಲಿನ ಅಂಶಗಳನ್ನು ಗಮನಿಸುವುದರ ಜೊತೆಗೆ ಕಲಿವು, ಬೋಧನವಿಷಯ ಮತ್ತು ಪಠ್ಯವಸ್ತು—ಇವುಗಳಿಗೆ ನೂತನವಾಗಿ ಶಿಕ್ಷಣರಂಗದಲ್ಲಿ ಬಂದಿರುವ ಅರ್ಥವಿವರಣೆಯನ್ನೂ ಅರಿತುಕೊಂಡಿರುವುದು ಆವಶ್ಯಕ. ಪಠ್ಯವಸ್ತುವನ್ನು ಬೇರೆ ಬೇರೆ ಭಾಗಗಳಾಗಿ ವಿಂಗಡಿಸಿ, ಅದನ್ನು ಪುನಃ ಉಪಭಾಗಗಳನ್ನಾಗಿ ವಿಭಾಗಿಸಿ, ಜೋಡಿಸಿ, ಪಟ್ಟಿಯಂತೆ ರೂಪಿಸಿ ಆ ಕ್ರಮದಲ್ಲೇ ಅಭ್ಯಾಸಮಾಡುವುದು ಕಲಿಯುವವರ ದೃಷ್ಟಿಯಿಂದ ಲಾಭದಾಯಕವಲ್ಲ. ಮಕ್ಕಳು ಜಡರಾಗಿ ಕುಳಿತಿರುವಾಗ ಉಪಾಧ್ಯಾಯರು ಪಾಠ ಹೇಳುವುದಾಗಲಿ, ಮಾಡಿ ಅರಿಯಬೇಕಾದ್ದನ್ನು ಕೇಳಿ ತಿಳಿ

ಜುಲು ಯುಕ್ತಿಸುವುದಾಗಲಿ ಅಷ್ಟು ಅನುಕೂಲವಲ್ಲ. ಯಾವುದನ್ನು ಕಲಿಯುಬೇಕಾದರೂ ಮಕ್ಕಳು ಆವಶ್ಯಕವೆನಿಸುವ ಕಾರ್ಯ ಚಟುವಟಿಕೆಯಿಂದಿದ್ದೇ ಕಲಿಯಬೇಕು. ಅಂಥ ಚಟುವಟಿಕೆಗಳಿಂದ ವಿಷಯಗ್ರಹಣದ ಜೊತೆಗೆ ಅವರ ಆಚಾರ, ನಡೆ ನುಡಿ, ವ್ಯವಹಾರ ಎಲ್ಲವೂ ಸಂಸ್ಕರಣಗೊಳ್ಳುವಂತಾಗುತ್ತವೆ. ಒಂದು ಪಾಠವನ್ನೋ ಪದ್ಯವನ್ನೋ ಇತರರು ಓದುವುದನ್ನು ಜಡರಂತೆ ಕುಳಿತು ಕೇಳುವುದಕ್ಕಿಂತ ತಾನೂ ಅದನ್ನು ಉಚ್ಚರಿಸಿಕೊಂಡು ಓದಿ ಕಲಿಯುವುದು ಹೆಚ್ಚು ಫಲದಾಯಕವಾದದ್ದು; ಸಹಕಾರ ತತ್ತ್ವಗಳನ್ನು ಪುಸ್ತಕದಲ್ಲಿ ಓದಿ ಅರಿಯುವುದಕ್ಕಿಂತ ಒಂದು ಸಹಕಾರ ಸಂಘವನ್ನೇ ಆರಂಭಿಸಿ ಆಚರಿಸಿ ಕಲಿಯುವುದು ಹೆಚ್ಚು ಯಶಸ್ವಿಯಾಗುತ್ತದೆ. ಚಟುವಟಿಕೆಯಿಂದಿದ್ದು ಕಾರ್ಯಾಚರಣೆ ಮಾಡುವಾಗ ಆಗುವ ಅನುಭವ ಮಕ್ಕಳ ನರವ್ಯೂಹದಲ್ಲಿ ತನ್ನ ಮುದ್ರೆಯನ್ನೊತ್ತುತ್ತದೆ. ಒಮ್ಮೆ ಕಾರ್ಯಮುಖರಾಗಿದ್ದು ಆಚರಿಸಿ ಅನುಭವಿಸಿದ ಆ ಸಂಸ್ಕರಣ ಮತ್ತೊಂದು ಅವೇ ರೀತಿಯ ಸನ್ನಿವೇಶ ಒದಗಿದಾಗ ಸರಾಗವಾಗಿಯೂ ಚೆನ್ನಾಗಿಯೂ ಪುನರಾವೃತ್ತಿಯಾಗುತ್ತದೆ. ಎಂದರೆ, ನೂತನ ಸನ್ನಿವೇಶ ಬಂದಾಗ ಉಚಿತವಾಗಿ ವರ್ತಿಸುವ ಶಕ್ತಿ ಬರುತ್ತದೆ. ಅಂದು ಮಾತ್ರ ಮಕ್ಕಳು ನಿಜವಾಗಿ ಆ ವಿಷಯದಲ್ಲಿ ಶಿಕ್ಷಣ ಪಡೆದರೆನ್ನಬಹುದು; ಉಪಾಧ್ಯಾಯರೂ ಬೋಧಿಸಿದರೆನ್ನಬಹುದು. ನಿಜವಾದ ಕಲಿವು ಮಕ್ಕಳಿಗೆ ಹೊಸ ಹೊಸ ಸನ್ನಿವೇಶಗಳಲ್ಲಿ ಉಚಿತ ರೀತಿಯಲ್ಲಿ ವರ್ತಿಸುವ ಶಕ್ತಿಯನ್ನು ತಂದುಕೊಡಬೇಕು; ಎದುರು ಬರುವ ನೂತನ ಸಮಸ್ಯೆಗಳನ್ನು ವಿಮರ್ಶಿಸಿ, ಆಲೋಚಿಸಿ ಉಚಿತ ರೀತಿಯಲ್ಲಿ ನಡೆದುಕೊಳ್ಳುವ ಶಕ್ತಿಯೂ ಬಂದಿರಬೇಕು. ನೂತನ ಸನ್ನಿವೇಶದಲ್ಲಿ ಉಚಿತ ರೀತಿಯಲ್ಲಿ ನಡೆದುಕೊಳ್ಳುವುದನ್ನು ಪರಿಶೀಲಿಸಿ ಅವರು ಕಲಿತಿರುವರೇ ಇಲ್ಲವೇ ಎಂಬಂಶವನ್ನು ನಿರ್ಧರಿಸುವ ಪರೀಕ್ಷಾಕ್ರಮಗಳೂ ಏರ್ಪಡಬೇಕು.

ಕಲಿವಿಗೆ ಈ ಅರ್ಥ ಬಂದ ಮೇಲೆ ಬೋಧಿಸುವ ವಿಷಯಕ್ಕೂ ನೂತನ ಅರ್ಥ ಕೊಡಬೇಕಾಗುತ್ತದೆ. ಅದು ಕಂಠಪಾಠ ಮಾಡಬೇಕಾಗಿರುವ ಅಂಕಿ ಅಂಶಗಳೆಂದಾಗಲಿ, ತತ್ತ್ವಗಳೋ ವಿಷಯ ಮಾಲಿಕೆಯೋ ಎಂದಾಗಲಿ, ಅರ್ಥವಾಗುವುದಿಲ್ಲ : ಬಾಳಿಕೆಯ ಫಲವಾಗಿ ಸಮಾಜ ಸಾಧಿಸಿರುವ ಅನುಭವಶ್ರೇಣಿಯೆಂದು ಅರ್ಥವಾಗುತ್ತದೆ. ಶಿಕ್ಷಣದನಂತರ ಮಕ್ಕಳ ನಡೆ, ನುಡಿ, ವರ್ತನೆ

ಮುಂತಾದವುಗಳಲ್ಲಿ ಕಂಡುಬರುವ ಪರಿವರ್ತನೆಯೇ ಕಲಿತ ವಿಷಯವೆಂದು ಅರ್ಥ ಹೇಳಬೇಕಾಗುತ್ತದೆ. ಎಂದರೆ, ಮಕ್ಕಳ ಜೀವನದಲ್ಲಿ ಪರಿವರ್ತನೆ ಆದ ಹೊರತು ವಿದ್ಯಾರ್ಥಿಗಳು ಕಲಿತಂತಾಗಲಿಲ್ಲ; ಉಪಾಧ್ಯಾಯರು ಬೋಧಿಸಿದಂತಾಗಲಿಲ್ಲ.

ಹಾಗೆಯೇ ಪಠ್ಯವಸ್ತುವಿಗೂ ನೂತನ ಅರ್ಥವನ್ನು ಕಲ್ಪಿಸಬಹುದು. ಅದು ಜೀವನದಲ್ಲಿ ಕಂಡುಬರುವ ಅನುಭವ ಮತ್ತು ಉದ್ಯಮಗಳ ಸಮೂಹವೆಂದು ಅರ್ಥ ಕೊಡುತ್ತದೆ. ಆದ್ದರಿಂದ ಪಠ್ಯವಸ್ತು ರಚಿಸುವಾಗ ಜೀವನದಲ್ಲಿ ಕಂಡುಬರುವ ಸನ್ನಿವೇಶ ಸಮಸ್ಯೆಗಳನ್ನು ಶಾಲೆಯಲ್ಲೂ ತಂದೊಡ್ಡಿ ಜನಜೀವನದಲ್ಲಿ ಅವನ್ನು ಬಿಡಿಸುವ ರೀತಿಯಲ್ಲಿ ಮಕ್ಕಳೂ ಅವನ್ನಲ್ಲಿ ಬಿಡಿಸಲನುಕೂಲಿಸುವ ಅವಕಾಶವನ್ನು ಕಲ್ಪಿಸಿರಬೇಕು. ಶಾಲೆಯೂ ನಿಜವಾದ ಜೀವನಕ್ಕೆ ಸಂಬಂಧಿಸಿದ್ದೇ ಎಂದು ಮಕ್ಕಳು ಆಗ ಆಸಕ್ತಿಯಿಂದ ಕಾರ್ಯೋನ್ಮುಖರಾಗಿ, ಸ್ವಪ್ರಯತ್ನದಿಂದ ಸನ್ನಿವೇಶಗಳನ್ನು ಎದುರಿಸಿ, ಸಮಸ್ಯೆಗಳನ್ನು ಬಿಡಿಸಿ ಅನುಭವ ಪಡೆಯುವ ಅವಕಾಶ ಅದರಲ್ಲಿರಬೇಕು. ಜೊತೆಗೆ ಶಾಲಾಜೀವನದಲ್ಲಿರುವಾಗ ತಮತಮಗೊಪ್ಪುವ ಜೀವನಮಾರ್ಗವನ್ನೂ ಅವರವರು ಕಂಡುಕೊಳ್ಳುವ ಅವಕಾಶವೂ ಇರಬೇಕು. (ಐಚ್ಛಿಕ ವಿಷಯ).

ಎಲ್ಲ ಮಕ್ಕಳಲ್ಲೂ ಅಭಿರುಚಿ ಆಸಕ್ತಿಗಳೂ ಶಕ್ತಿಸಾಮರ್ಥ್ಯಗಳೂ ಸೂಕ್ಷ್ಮವಾಗಿ ಅಡಗಿವೆ. ಅವು ವಯೋಗುಣಕ್ಕನುಸಾರವಾಗಿ ಪ್ರಕಾಶಗೊಳ್ಳಲು ಕಾತರಿಸುತ್ತಿರುತ್ತವೆ. ಆ ಕಾರ್ಯಕ್ಕೆ ಚಟುವಟಿಕೆಗಳು ಆವಶ್ಯಕ. ಅದಕ್ಕೇ ಮಕ್ಕಳಿಗೆ ಚಟುವಟಿಕೆಯಿಂದಿರಲು ತುಂಬ ಆಸೆ. ಅವರ ಆಸಕ್ತಿಯ ಪ್ರವಾಹ ಸಾಮಾನ್ಯವಾಗಿ ಆಟ, ಸಮಾಜ ಜೀವನ, ರಚನೆ, ಶೋಧನೆ, ಕಲಾಕೌಶಲ—ಈ ಐದು ಮಾರ್ಗಗಳಲ್ಲಿ ಹರಿಯುತ್ತದೆ. ಈ ಆಸಕ್ತಿಗೆ ತಕ್ಕ ಚಟುವಟಿಕೆಗಳನ್ನು ಒದಗಿಸುವಂತೆ ಪಠ್ಯವಿಷಯ ರೂಪುಗೊಳ್ಳಬೇಕು. ಅವರ ಎಲ್ಲ ಅಭಿರುಚಿ ಆಸಕ್ತಿಗಳನ್ನೂ ಸಮರಸವಾಗಿ ಪ್ರಕಾಶನಕ್ಕೆ ತರುವಂಥ ಚಟುವಟಿಕೆಗಳನ್ನು ಪಠ್ಯವಸ್ತುವಿನಲ್ಲಿ ಜೋಡಿಸುವ ಕೆಲಸ ಶಿಕ್ಷಣ ಚತುರರ ಕಲಾಕೌಶಲವನ್ನೇ ಅವಲಂಬಿಸಿದೆ. ಆ ಚಟುವಟಿಕೆಗಳಿಂದ ಮಕ್ಕಳ ಅಭಿರುಚಿ ಆಸಕ್ತಿಗಳು ಪ್ರಕಾಶನಕ್ಕೆ ಬರುವುದರ ಜೊತೆಗೆ ಅವರ

ಆರೋಗ್ಯವೂ ಕಾರ್ಯನಿರ್ವಹಣ ಶಕ್ತಿಯೂ, ಕಲಾಕೌಶಲವೂ ಬೆಳೆಯ ಬೇಕು.

ಹೀಗೆ ಪುನರ್ವ್ಯವಸ್ಥೆಗೊಂಡ ಪಠ್ಯವಸ್ತು ಅನೇಕ ಉದ್ಯಮಗಳನ್ನೊಳ ಗೊಂಡಿರುತ್ತದೆ. ಅದು ಮಕ್ಕಳ ಶಾಲಾಜೀವನಕ್ಕೂ, ಮುಂದಿನ ಜೀವನಕ್ಕೂ ನೆರವಾಗುತ್ತದೆ. ಆ ಉದ್ಯಮಗಳಲ್ಲಿ ಮಕ್ಕಳಿಗೆ ಆಸಕ್ತಿ ಹುಟ್ಟಿಸಿ, ಅದನ್ನು ಆಚರಿಸಲು ಸನ್ನಿವೇಶಗಳನ್ನು ರಚಿಸಿಕೊಡಬೇಕು. ಆಗ ಮಕ್ಕಳು ನೂತನ ಅನುಭಗಳನ್ನು ಪಡೆಯುವಂತೆ ಮಾಡಬೇಕು.

ಇಂಥ ಉದ್ಯಮ ಪಠ್ಯವಸ್ತುವಿನಿಂದ ಓದುಬರಹ ಲೆಕ್ಕಾಚಾರಗಳನ್ನು ಮಕ್ಕಳು ಕಲಿಯುವರೆ? ಅದರಿಂದ ಮಕ್ಕಳ ಜ್ಞಾನ ಸಂಪತ್ತು ಹೆಚ್ಚೀತೆ? ಎಂದು ಹಲವರು ಪ್ರಶ್ನಿಸಬಹುದು. ಹೊರನೋಟಕ್ಕೆ ಅದು ಸಾಧ್ಯವಿಲ್ಲ ವೆಂದೂ ತೋರಬಹುದು. ಆದರೆ, ಸಮಸ್ಯೆಗಳನ್ನು ಬಿಡಿಸುವಾಗ, ಸನ್ನಿವೇಶ ಗಳನ್ನು ಎದುರಿಸುವಾಗ ಮಕ್ಕಳಿಗೆ ಓದುಬರಹ, ಲೆಕ್ಕಾಚಾರದ ಅರಿವಿನ ಆವಶ್ಯಕತೆ ಕಂಡುಬಂದು ಆಸಕ್ತಿಯಿಂದ ಅವನ್ನು ಕಲಿಯುವಂತೆ ಉಪಾ ಧ್ಯಾಯರು ಅವಕಾಶ ಮಾಡಿಕೊಳ್ಳಬಹುದು; ಆರ್ಷೇಯ ಪದ್ಧತಿಗಿಂತಲೂ ಹೆಚ್ಚು ಯಶಸ್ವಿಯಾಗಿ ಅವನ್ನು ಮಕ್ಕಳು ಕಲಿತಾರು. ಜೊತೆಗೆ, ಅವು ಗಳನ್ನು ನಿಜವಾದ ಅನುಭವಗಳಿಂದ ಪರಿಚಯಮಾಡಿಕೊಂಡು ಸ್ವತಂತ್ರ ವಾಗಿ ಜ್ಞಾನಾರ್ಜನೆಯನ್ನು ಮಾಡಿದಂತಾಗುತ್ತದೆ. ಜೀವನಕ್ಕೆ ಆವಶ್ಯಕವಾದ ವಿಧವಿಧವಾದ ಅನುಭವಗಳು, ಆರೋಗ್ಯಸಾಧನೆ, ಸಹಕಾರ, ಸದ್ಭಾವನೆ, ವ್ಯವಹಾರ ಚತುರತೆ, ಸಾಮಾಜಿಕ ನಡೆನುಡಿಗಳು—ಎಲ್ಲವೂ ಸಿದ್ಧಿಸುವುವು.

ಹಿಂದೆ ವಿವರಿಸಿರುವಂತೆ ಚಟುವಟಿಕೆಯಾಗಿರುವುದು ಮಕ್ಕಳ ಸ್ವಭಾವ. ಅದೇ ಅವರ ಜೀವನ ಕ್ರಮ. ಹೊರಗಡೆ ಅಂಥ ಜೀವನವನ್ನು ಅವರು ಬಾಳುವುದರ ಜೊತೆಗೆ ಶಾಲೆಯಲ್ಲೂ ಆ ರೀತಿಯ ಜೀವನವನ್ನೇ ನಡಸು ವುವುದಾದರೆ ಅದೂ ಜೀವನದ ಒಂದು ಮುಖವೇ ಎಂಬ ಆಸಕ್ತಿ ಅವರಿಗೆ ಹುಟ್ಟುತ್ತದೆ. ಸಾಂಪ್ರದಾಯಿಕ ರೀತಿಯ ಪಠ್ಯವಸ್ತುವಿನಿಂದ ಆ ಕಾರ್ಯ ಸಾಧನೆಯಾಗಲಾರದು. ಅದು ಮಕ್ಕಳಿಗೆ ಕೃತಕ ಜೀವನದಂತೆ ತೋರಿ ಜಿಗುಪ್ಸೆ ಹುಟ್ಟಿಸುತ್ತದೆ. ಮಕ್ಕಳು ಶಾಲೆಯಲ್ಲಿ ಅನುಭವಪೂರ್ಣವಾದ ಶಿಕ್ಷಣ ಪಡೆಯುವುದರಿಂದ ಶಾಲೆಯೂ ಜೀವನದಂತೆಯೇ ಭಾಸವಾಗಿ

ಎರಡು ಜೀವನಕ್ಕೂ ಸಮರಸ ಕಲ್ಪನೆಯಾಗುತ್ತದೆ. ಮೇಲಾಗಿ, ಬಾಲ್ಯ ಸಹಜವಾದ ಚಟುವಟಿಕೆಗಳಲ್ಲಿ ಮಕ್ಕಳು ನಿರತರಾಗಲು ಅವಕಾಶವೂ ಇದ್ದು ಜೀವನ ಶಿಕ್ಷಣದ ಕಾಲದಲ್ಲಿಯೂ ಹೊರಗಡೆಯಿರುವಾಗಲೂ ಒಂದೇ ಮುಂಬಿನಂತಿದ್ದು ನಿರರ್ಗಳವಾಗಿ ಅನುಭವಗಳನ್ನು ಪಡೆಯಲು ಅವಕಾಶ ವಾಗುತ್ತದೆ.

ಇಂಥ ನೂತನ ಪಠ್ಯ ವಿಷಯ ಅನೇಕ ಉದ್ಯಮಗಳನ್ನುಳ್ಳದಾಗಿರು ತ್ತದೆ. ಒಂದೊಂದು ಉದ್ಯಮವನ್ನು ಮಾಡುವಾಗಲೂ ಅನೇಕ ಇತರ ಉಪ ಉದ್ಯಮಗಳನ್ನೂ ಮಾಡಬೇಕಾಗುತ್ತದೆ; ಅಡ್ಡಬರುವ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಆವಶ್ಯಕತೆಗಳನ್ನು ಪೂರೈಸಿಕೊಳ್ಳಬೇಕಾಗುತ್ತದೆ. ತೋಟದ ಕೆಲಸದ ಉದ್ಯಮವನ್ನು ಮಾಡುವಾಗ ವ್ಯವಹಾರಗಳಿಗಾಗಿ ಲೆಕ್ಕಾಚಾರ, ಓದುಬರಹಗಳನ್ನೂ ಕಲಿಯಬೇಕಾಗುತ್ತದೆ. ಸಸ್ಯಶಾಸ್ತ್ರದ ಜ್ಞಾನವೂ ಕೈಕೆಲಸವೂ ಹೆಚ್ಚುತ್ತದೆ; ಚಿತ್ರಕಲೆಯಲ್ಲೂ ಅಭಿವೃದ್ಧಿ ಹೊಂದ ಬಹುದು. ಅನಂತರ, ಬೆಳೆದ ಪದಾರ್ಥಗಳ ಮಾರಾಟದ ವಿಚಾರವನ್ನೂ ಪರಿಚಯಮಾಡಿಕೊಳ್ಳಬಹುದು. ಈ ಅಂಶಗಳನ್ನು ಮಕ್ಕಳಿಗೆ ಬಲವಂತ ದಿಂದ ಕಲಿಸಬೇಕಾಗಿಲ್ಲ; ಮೂಲ ಉದ್ಯಮವನ್ನು ಮುಂದುವರಿಸಲು ಅವರಿ ಗಿರುವ ಕಾತರ ಅವುಗಳನ್ನು ಕಲಿತುಕೊಳ್ಳಲು ಪ್ರೋತ್ಸಾಹಿಸುತ್ತದೆ. ಹೀಗೆ ಉದ್ಯಮ ಪಠ್ಯ ವಸ್ತುವಿನಿಂದಲೂ ಓದುವುದು, ಬರೆಯುವುದು, ಚರಿತ್ರೆ, ಭೂಗೋಳ, ಆರೋಗ್ಯ, ಚಿತ್ರ ಮುಂತಾದ ಪಠ್ಯ ಭಾಗಗಳ ಜ್ಞಾನವನ್ನು ಆವಶ್ಯಕತೆ ತೋರಿದಂತೆಲ್ಲ ಮಕ್ಕಳು ಸ್ವತಃ ಆಸಕ್ತಿಯಿಂದ ಕಲಿತುಕೊಳ್ಳುವರು.

ನಮ್ಮ ಶಾಲೆಗಳಲ್ಲಿ ಇಂಥ ಉದ್ಯಮ ಪಠ್ಯವಸ್ತುವನ್ನು ಆರಂಭಿಸಿದಾಗ ಹಲವು ಬದಲಾವಣೆಗಳು ಕಂಡುಬರುತ್ತವೆ. ಎಲ್ಲವನ್ನೂ ಮಕ್ಕಳಿಗೆ ಉಪಾ ಧ್ಯಾಯರೇ ತುಂಬುವುದರ ಬದಲು ಸ್ವತಃ ಮಕ್ಕಳೇ ಚಟುವಟಿಕೆಯಿಂದಿದ್ದು ಶಿಕ್ಷಣ ಪಡೆಯುವಂತಾಗುತ್ತದೆ. ಶಾಲೆಯೂ ಸಮಾಜದ ಒಂದು ಅಂಗದಂತಿದ್ದು ಮಕ್ಕಳು ನಿಜವಾದ ಜೀವನವನ್ನೇ ನಡೆಸುತ್ತಾರೆ. ಮಕ್ಕಳ ಆಶೆಆಕಾಂಕ್ಷೆಗಳನ್ನೂ ಆಸಕ್ತಿಗಳನ್ನೂ ಅನುಸರಿಸಿ ಅವರಿಗೆ ಉದ್ಯಮಗಳನ್ನು ಕೊಡಬೇಕು; ಅನಂತರ ಅದು ಮುಗಿದ ಮೇಲೆ ಇನ್ನೂ

ಹೆಚ್ಚಿನ ಅನುಭವ ಬರುವಂಥ ಬೇರೆ ಉದ್ಯಮಗಳನ್ನು ಹಂಚಬೇಕು. ನಿರಂತರವೂ ಬಾಲಕರಿಗೆ ಎದುರುಬರುವ ಸಮಸ್ಯೆಗಳನ್ನು ಬಿಡಿಸಿಕೊಳ್ಳಲು ಹೊಸ ಜ್ಞಾನವನ್ನು ದೊರಕಿಸಿಕೊಡಲು—ಉಪಾಧ್ಯಾಯರು ಎಚ್ಚರದಿಂದ ಕಾದಿದ್ದು, ಪರಿಶೀಲಿಸುತ್ತಿದ್ದು ಆವಶ್ಯಕವಾದ ಸಹಾಯ ನೀಡಬೇಕು. ಒಟ್ಟಿನಲ್ಲಿ ಶಿಕ್ಷಣ ಮುಂದುವರಿದಂತೆ ಮಕ್ಕಳಿಗೆ ಸಮಾಜದ ಸ್ವರೂಪವೂ ಜೀವನಕ್ಕೆ ಆವಶ್ಯಕವಾದ ಬಗೆಬಗೆಯ ಅನುಭವಗಳೂ ಹೆಚ್ಚುವಂತಾಗ ಬೇಕು. ಅಲ್ಲಿನ ಸಂಘಸಂಸ್ಥೆಗಳನ್ನು ಉಪಯೋಗಿಸಿಕೊಳ್ಳುವ ಜ್ಞಾನವೂ ಬರಬೇಕು. ಜೊತೆಗೆ ಸಂಸ್ಕೃತಿಸಾಹಿತ್ಯಗಳು ಕ್ರಮವಾಗಿ ಪರಿಚಯಕ್ಕೆ ಬಂದು ಸಮಾಜದಲ್ಲಿರಬಹುದಾದ ನ್ಯೂನತೆಗಳನ್ನು ಸರಿಪಡಿಸಬೇಕೆಂಬ ಮನೋಭಾವವೂ ಮೂಡಬೇಕು. ಇವೆಲ್ಲವೂ ಮಕ್ಕಳ ಆಶೆ ಆಕಾಂಕ್ಷೆ ಗಳನ್ನನುಸರಿಸಿ ಆವಶ್ಯಕತೆ ಬಂದಾಗ ಅವರೇ ಕಲಿಯುವಂತಾಗಬೇಕು.

ನಿಯಮಿತ ರೀತಿಯ ಪಠ್ಯವಸ್ತು ಉದ್ಯಮ ಶಿಕ್ಷಣದ ಶಾಲೆಗಳಿಗೆ ಅನಾವಶ್ಯಕವೆಂದು ಕೆಲವರು ಹೇಳುವರು. ಏಕೆಂದರೆ, ಮಕ್ಕಳು ಯಾವುದ ರಲ್ಲಿ ಆಸಕ್ತಿ ತೋರುವರೋ ಅದನ್ನು ಆಚರಿಸಬೇಕಾಗುತ್ತದೆ. ಮಕ್ಕಳ ಆಸೆಆಕಾಂಕ್ಷೆಗಳಂತೆ ಉದ್ಯಮವನ್ನು ಆರಂಭಿಸುವುದು ಉಚಿತವಾದರೂ ಉಪಾಧ್ಯಾಯರು, ಆಚರಿಸಬೇಕಾದ ಉದ್ಯಮದಲ್ಲಿ ಆಸಕ್ತಿ ಹುಟ್ಟುವಂಥ ಸನ್ನಿವೇಶಗಳನ್ನೂ ತರಬೇಕು. ಮಕ್ಕಳು ನಡೆದಂತೆಯೇ ಬಿಡಬಾರದು. ಅವರ ಆಸೆಗಳನ್ನು ಮೊಟಕುಮಾಡದಂತೆ ಉದ್ಯಮಗಳನ್ನು ಹಂಚಬೇಕಾ ದರೂ, ಆ ಶಾಲಾವರ್ಷದಲ್ಲಿ ಸಾಧಿಸಬೇಕಾಗಿರುವ ಅನುಭವಗಳೆಲ್ಲವೂ ಸಿದ್ಧಿ ಸಿಯೇ ತೀರಬೇಕು. ಉಪಾಧ್ಯಾಯರು ಅದನ್ನು ಸಾಧಿಸಲು ಮಕ್ಕಳಿಗೆ ಅಂದಂದು ಹೊಸ ಉದ್ಯಮಗಳಲ್ಲಿ ಆಸಕ್ತಿ ಹುಟ್ಟಿಸಿ ಆರಂಭಿಸುವಂತೆಯೂ ಪ್ರೋತ್ಸಾಹಿಸಬೇಕು. ಬಗೆಬಗೆಯ ಅನುಭವಗಳೂ, ವಿವಿಧ ಪಠ್ಯಭಾಗಗಳ ಪರಿಚಯವೂ ಆಗುವಂತೆ ಅವಕಾಶ ಕಲ್ಪಿಸಿರುವ ಪಠ್ಯವಸ್ತು ಉದ್ಯಮ ಶಿಕ್ಷಣಕ್ಕೂ ಆವಶ್ಯಕ.

**ಉದ್ಯಮ ಪಠ್ಯವಸ್ತುವಿನ ನಿರ್ಮಾಣ:** ಪಠ್ಯವಸ್ತುವಿನಲ್ಲಿ ಸೇರ ಲಿರುವ ಯಾವ ಉದ್ಯಮವೇ ಆಗಲಿ ಅದು ಜೀವನದಿಂದ ಆರಿಸಿದ್ದಿರಬೇಕು; ಮಕ್ಕಳಿಗೆ ಅದರಲ್ಲಿ ಆಸಕ್ತಿಯಿದ್ದು ಅವರ ಚಟುವಟಿಕೆಗಳಿಗೆ ಅವಕಾಶ

ಕೊಡುವಂತಿರಬೇಕು; ಮಕ್ಕಳ ಅಭಿರುಚಿಆಸಕ್ತಿಗಳೂ, ಸ್ವಭಾವಾದಿ ಗುಣಗಳೂ, ಮಾನಸ ಶಕ್ತಿಗಳೂ ಸಂಸ್ಕರಣಗೊಳ್ಳುವಂತಿರಬೇಕು; ಒಂದೊಂದು ಉದ್ಯಮವೂ ಮುಂದಿನ ಇನ್ನೊಂದು ಉದ್ಯಮಕ್ಕೆ ಸಂಬಂಧಿಸುವಂತಿರಬೇಕು; ಆ ಉದ್ಯಮಗಳನ್ನು ಆಚರಿಸುವಾಗ ಓದುವುದು, ಬರೆಯುವುದು, ಲೆಕ್ಕ, ಆರೋಗ್ಯ, ಚರಿತ್ರೆ, ಭೂವಿವರಣೆ ಮುಂತಾದ ಪಾಠಗಳನ್ನೂ ಕಲಿಸಲು ಅವಕಾಶವಿರಬೇಕು; ಮಕ್ಕಳಲ್ಲಿ ಒಳ್ಳೆಯ ಅಭ್ಯಾಸಗಳನ್ನೂ ಭಾವನೆಗಳನ್ನೂ ಮೂಡಿಸುವಂತಿರಬೇಕು. ಒಟ್ಟಿನಲ್ಲಿ ಅವರ ಜೀವನ ಉತ್ತಮಗೊಂಡು ಸಮಾಜದಲ್ಲಿ ಯಶಸ್ವಿಯಾಗಿ ಬಾಳಿ ತಮ್ಮ ವೈಶಿಷ್ಟ್ಯದ ಕಾಣಿಕೆಯನ್ನು ಅದಕ್ಕೆ ಸಲ್ಲಿಸುವ ಶಕ್ತಿ ಬರುವಂತಿರಬೇಕು.

ಹೀಗೆ ಅನುಗೊಳಿಸಿದ ಉದ್ಯಮ ಪಠ್ಯವಸ್ತುವನ್ನು ಉಪಾಧ್ಯಾಯರು ಕುರುಡರಂತೆ ಅವಲಂಬಿಸುವುದೂ ಸಾಧ್ಯವಿಲ್ಲ. ಮಕ್ಕಳನ್ನು ಉದ್ಯಮಕ್ಕೆ ಕೈಹಚ್ಚಿಸಿ ತಾವು ಸುಮ್ಮನಾಗುವಂತಿಲ್ಲ; ಅಥವಾ, ತಾವೇ ಎಲ್ಲವನ್ನೂ ಮಾಡಿ ತೋರಿಸಿಬಿಡುವುದೂ ಅಲ್ಲ. ಮೊದಲು ಉಚಿತವೆನಿಸಿದ ಉದ್ದೇಶಿಸಿದ ಉದ್ಯಮವೊಂದರಲ್ಲಿ ಮಕ್ಕಳ ಸಹಜವಾದ ಆಸಕ್ತಿ ಮೂಡುವಂತೆ ಮಾಡಬೇಕು. ಅನಂತರ ಅದನ್ನು ಅವರು ಆಚರಿಸುವಂತೆ ಪ್ರೋತ್ಸಾಹಿಸಿ ಉಚಿತ ಸನ್ನಿವೇಶಗಳನ್ನು ಅಣಿಗೊಳಿಸಿಕೊಡಬೇಕು. ಅವರು ಆಚರಿಸುತ್ತಿರುವಾಗ ಎಚ್ಚರಿಕೆಯಿಂದ ಪರಿಶೀಲಿಸುತ್ತಿದ್ದು, ಎಂದೆಂದು ಅವರಿಗೆ ಯಾವ ಯಾವ ಅರ್ಥವಿವರಣೆ, ತತ್ವ, ವಿಷಯಜ್ಞಾನ ಮತ್ತು ಇತರ ಸಲಹೆಸಹಕಾರ—ಇವುಗಳನ್ನು ನೀಡುತ್ತ ಮಾರ್ಗದರ್ಶನಕ್ಕಾಗಿ ಸಿದ್ಧವಾಗಿರಬೇಕು.

ಗ್ರಾಮಾಂತರ ಶಾಲೆಗಳಲ್ಲಿ ಸೇರಿಸಬಹುದಾದ ತೋಟದ ಕೆಲಸದ ಉದ್ಯಮವನ್ನು ಇಲ್ಲಿ ಉದಹರಿಸಬಹುದು: ತರಕಾರಿ ತಿನ್ನುವ, ಹಣ್ಣು ತಿನ್ನುವ ಆಶೆಆವಶ್ಯಕತೆಗಳನ್ನು ಮಕ್ಕಳಿಗೆ ಹುಟ್ಟಿಸಿ ಅದನ್ನು ಶಾಲೆಯಲ್ಲೇ ಬೆಳೆಯುವ ಉದ್ಯಮವನ್ನು ಆಚರಿಸಬೇಕೆಂದರೆ ಮಕ್ಕಳಿಗೆ ಆಸಕ್ತಿ ಹುಟ್ಟುತ್ತದೆ. ಆ ಕಾರ್ಯವನ್ನು ಆರಂಭಿಸಿ ಪೂರ್ತಿ ನಡೆಸಿಕೊಂಡು ಬರುವಾಗ ವಿವಿಧವಾದ ಪಠ್ಯ ವಿಷಯವನ್ನು (ಓದುವುದು, ಬರೆಯುವುದು, ಲೆಕ್ಕ, ಇತ್ಯಾದಿ) ಪರಿಚಯಮಾಡಿಕೊಳ್ಳುವುದು ಮಕ್ಕಳಿಗೆ ಆವಶ್ಯಕವಾಗಿ ತೋರುತ್ತದೆ. ಆಗ ಅವನ್ನು ಬೋಧಿಸಬೇಕು. ಈ ಮೂಲ ಉದ್ಯಮದ ಅಂಗವಾಗಿ ಗೊಬ್ಬರ

ಮಾಡುವುದು, ಹಗ್ಗ ಹೆಣೆಯುವುದು, ಕಸ ತೆಗೆಯುವುದು, ಭಾವಿ ತೋಡುವುದು, ಟಪಾಲು ಪೆಟ್ಟಿ, ಬುಟ್ಟಿ, ಚಾಪೆ—ಇವನ್ನು ಮಾಡುವುದು, ಮೊದಲಾದ ಉಪಉದ್ಯಮಗಳನ್ನೂ ಮಾಡಬೇಕಾಗುತ್ತದೆ. ಅವನ್ನಾಚರಿಸುವಾಗಲೂ ಮಕ್ಕಳು ಚಟುವಟಿಕೆಯಿಂದಿದ್ದು ಅವರ ಅಭಿರುಚಿ ಆಸಕ್ತಿಗಳು ಬೆಳಕಿಗೆ ಬಂದು ಕೌಶಲ್ಯ ಬೆಳೆಯುತ್ತದೆ. ಕಾರ್ಯಮುಖರಾಗಿರುವುದರಿಂದ ಆರೋಗ್ಯ ಸಾಧನೆಯೂ ಆಗುತ್ತದೆ. ಪ್ರಾಸಂಗಿಕವಾಗಿ ಜ್ಞಾನಾರ್ಜನೆಯೂ ಆಗುತ್ತದೆ.

ಹೀಗೆಯೇ ಸಹಕಾರಸಂಘ, ಶಾಲೆಯ ವಾರ್ಷಿಕೋತ್ಸವ, ನಾಟಕಾಭಿನಯ, ಅಂಚೆ ಕಛೇರಿ, ಅಂಗಡಿ, ಪ್ರವಾಸ—ಮುಂತಾದ ವಿಧವಿಧವಾದ ಜೀವನಕ್ಕೆ ಸಂಬಂಧಿಸಿದ, ಆಯಾ ವಯೋಗುಣಕ್ಕೆ ಒಪ್ಪುವಂಥ ಉದ್ಯಮಗಳನ್ನು ಸೇರಿಸಿ ಪಠ್ಯವಸ್ತುವನ್ನು ನಿರ್ಮಿಸಬೇಕು. ಪಟ್ಟಣಗಳ ಶಾಲೆಗಳಲ್ಲೂ ಅಲ್ಲಿನ ಜನಜೀವನದಿಂದ ಆರಿಸಿದ, ಉಚಿತವೆನಿಸಿದ ಉದ್ಯಮಗಳನ್ನು ಆಚರಿಸುವಂತೆ ಪಠ್ಯವಸ್ತುವನ್ನು ರೂಪಿಸಬೇಕು. ಹೆಣ್ಣುಮಕ್ಕಳ ಶಾಲೆಯಲ್ಲಿ ಗೃಹಕಾರ್ಯಗಳ ಉದ್ಯಮಗಳನ್ನೇ ಹೆಚ್ಚಾಗಿ ಸೇರಿಸಿಕೊಳ್ಳಬಹುದು.

ಈ ನೂತನ ರೀತಿಯ ಪಠ್ಯವಸ್ತುವಿಗೂ ಹಿಂದಿನ ಸಾಂಪ್ರದಾಯಿಕ ಪಠ್ಯವಿಷಯಕ್ಕೂ ಅಜಗಜಾಂತರ ವ್ಯತ್ಯಾಸ. ಹಲವರು ಉದ್ಯಮಗಳನ್ನೊಳಗೊಂಡ ಪಠ್ಯವಸ್ತು ಪಠ್ಯವಸ್ತುವೇ ಅಲ್ಲವೆಂದೂ ಹೇಳುವರು. ಈ ರೀತಿಯ ಪಠ್ಯವಸ್ತುವಿಗೆ ಜನ್ಮಸ್ಥಾನವೆನಿಸಿದ ಅಮೆರಿಕದಲ್ಲೇ ಇದನ್ನು ಅನುಚಿತವಾದ್ದೆಂದು ತಿರಸ್ಕರಿಸುವವರೂ ಹೇರಳವಾಗಿದ್ದಾರೆ. ಆದರೂ ಸರ್ಕಾರದವರು ಅಲ್ಲಿ, ಅದೂ ಒಂದು ಶಿಕ್ಷಣಮಾರ್ಗವೆಂದು ಪುರಸ್ಕಾರ ನೀಡಿರುವರು. ಆ ದೇಶದ ಅನೇಕ ಪ್ರಾಥಮಿಕ ಶಾಲೆಗಳಲ್ಲಿ ಇಂದು ಉದ್ಯಮಪಠ್ಯವಸ್ತು ಪ್ರಚಾರದಲ್ಲಿದೆ; ಹಲವು ಸೆಕೆಂಡರೀ ಶಾಲೆಗಳಲ್ಲೂ ಅಲ್ಪಸ್ವಲ್ಪ ಮಾರ್ಪಾಡುಗಳೊಡನೆ ಬೇರೆಬೇರೆ ಹೆಸರುಗಳಿಂದ ಆಚರಣೆಯಲ್ಲಿದೆ. ಜಗತ್ತಿನ ಇತರ ದೇಶಗಳಲ್ಲೂ ಪ್ರಾಯೋಗಿಕವಾಗಿ ಆಚರಣೆಗೆ ಬರುತ್ತಿದೆ. ಭಾರತದ ಹಲವು ಪ್ರಾಂತ್ಯಗಳಲ್ಲೂ ಅಲ್ಲಲ್ಲಿ ಕಂಡುಬರುತ್ತಿದೆ; ಪಂಜಾಬಿನ ಮೋಗಾಂನಲ್ಲಿ ಯಶಸ್ವಿಯಾಗಿಯೇ ಪ್ರಚಾರಕ್ಕೆ ತರಲಾಗಿದೆ. ಮೈಸೂರಿನ ಬಳಿ ಕಡಕೊಳದಲ್ಲೂ ಪ್ರಾಯೋಗಿಕವಾಗಿ ಪ್ರಾಥಮಿಕ ಶಾಲೆಯೊಂದರಲ್ಲಿ ನಡೆಸಿ, ಫಲಪ್ರದವಾಗಬಲ್ಲದೆಂದು

ತಿಳಿದುಬಂದಿದೆ. ಗಾಂಧಿಜಿಯವರ ನೇತೃತ್ವದಲ್ಲಿ ರೂಪುಗೊಂಡ ವಾರ್ಧಾ ಶಿಕ್ಷಣಯೋಜನೆಯೂ ಈ ಉದ್ಯಮ ಪಠ್ಯವಸ್ತುವನ್ನೇ ಅನುಸರಿಸಿದೆ; ಮೂಲ ಶಿಕ್ಷಣ ಪದ್ಧತಿಯೆಂಬ ಹೆಸರಿನಿಂದ ಭಾರತದ ಅನೇಕ ಕಡೆಗಳಲ್ಲಿ ಅದು ಆಚರಣೆಗೆ ಬರುತ್ತಿದೆ. ಆದರೂ ಉದ್ಯಮ ಪಠ್ಯವಸ್ತುವನ್ನು ಅನುಸರಿಸಿ ಶಿಕ್ಷಣಾಭಿವೃದ್ಧಿ ಸಾಧಿಸುವುದು ಸರ್ವಸಮ್ಮತವಾಗಿ ಇನ್ನೂ ಅಂಗೀಕಾರ ವಾಗಿಲ್ಲ. ಇದಕ್ಕೆ ಹಲವು ಕಾರಣಗಳನ್ನು ಕೊಡಬಹುದು:

ಜನತೆಯಲ್ಲಿರುವ ವಿಷಯಗ್ರಹಣವೇ ನಿಜವಾದ ಶಿಕ್ಷಣವೆಂಬ ನಂಬಿಕೆಯೂ ಉದ್ಯಮ ಪಠ್ಯವಸ್ತು ಮಕ್ಕಳಲ್ಲಿ ಆಳವಾದ ಜ್ಞಾನಾರ್ಜನೆಗೆ ಅವಕಾಶ ಕೊಡಲಾರದೆಂಬ ಭೀತಿಯೂ ಈ ನೂತನ ಪಠ್ಯವಸ್ತುವನ್ನು ಸ್ವಾಗತಿಸುಲು ಅಡ್ಡಿಯಾಗಿವೆ.

ಇಂದಿನ ಪರೀಕ್ಷೆಗಳು ಕೇವಲ ಕಂಠಪಾಠಮಾಡಿದ ವಿಷಯವನ್ನು ಮಾತ್ರ ಬಯಸುವುದರಿಂದಲೂ, ಆ ಪರೀಕ್ಷೆಗಳನ್ನು ಕಡೆಹಾಯಿಸುವುದೇ ಶಾಲೆಗಳ ಕೆಲಸವೆಂದು ಅನೇಕರು ನಂಬಿರುವುದರಿಂದಲೂ ಈ ನೂತನ ಪಠ್ಯವಸ್ತುವನ್ನು ಜನತೆ ಸಂಶಯಭಾವದಿಂದ ಕಾಣುತ್ತಿದೆ.

ಉದ್ಯಮ ಪಠ್ಯವಸ್ತುವನ್ನು ಬೋಧಿಸಲು ಉಚಿತವಾದ ಪಠ್ಯಪುಸ್ತಕ ಗಳೂ ರೂಪುಗೊಂಡಿಲ್ಲ. ಅದರಿಂದ ಬೋಧಿಸುವವರಿಗೂ ಕಷ್ಟವಾಗಿ ತೋರುತ್ತಿದೆ. ಅದನ್ನು ಶಾಲೆಯಲ್ಲಿ ಯಶಸ್ವಿಯಾಗುವಂತೆ ಬೋಧಿಸುವ ನೂತನ ಕ್ರಮದಲ್ಲಿ ಶಿಕ್ಷಣ ಪಡೆದ ಉಪಾಧ್ಯಾಯರು ದೊರೆಯುವುದು ದುರ್ಲಭವಾಗಿದ್ದು ಅದೂ ಯಶಸ್ವಿಯಾಗಬಲ್ಲದೆಂದು ಸಾರ್ವಜನಿಕರಿಗೆ ತೋರಿಸಿಕೊಡುವ ಅವಕಾಶ ಕಡಮೆಯಾಗಿದೆ.

ಎಲ್ಲ ಉದ್ಯಮಗಳನ್ನೂ ಯಶಸ್ವಿಯಾಗಿ ಆಚರಿಸಲು ಅನುಕೂಲಿಸು ವಂಥ ಉಪಕರಣಗಳನ್ನು ಶಾಲೆಗೆ ಒದಗಿಸುವುದು ಆರ್ಥಿಕ ದೃಷ್ಟಿಯಿಂದ ಅನೇಕ ದೇಶಗಳಲ್ಲಿ ಸಾಧ್ಯವಿಲ್ಲವಾಗಿದೆ.

ಮೇಲಿನ ಕಾರಣಗಳಲ್ಲಿ ಹಲವು ಸರಿಯಿಲ್ಲ; ಮತ್ತೆ ಕೆಲವನ್ನು ಪರಿಶೀಲಿಸಿ ಎಡರುತೊಡರುಗಳನ್ನು ಪರಿಹರಿಸಬೇಕಾಗಿದೆ. ಜೊತೆಗೆ, ಶಿಕ್ಷಣದ ಗುರಿಯೂ ಪರೀಕ್ಷೆಯ ಕ್ರಮವೂ ಮಾರ್ಪಡಬೇಕು. ಅಂದು ಮಾತ್ರ ಈ ಉದ್ಯಮ ಶಿಕ್ಷಣ ಯಶಸ್ವಿಯಾಗಿ ಆಚರಣೆಗೆ ಬರಲು ಅವಕಾಶವಾದೀತು.

ಆದರೆ ಕೆಲವು ನ್ಯೂನತೆಗಳನ್ನು ಮಾತ್ರ ನಿವಾರಿಸಲು ಸಾಧ್ಯವಿಲ್ಲ. ಪರೀಕ್ಷೆಗಳು ಯಾವ ಶಿಕ್ಷಣದ ಅಂತಸ್ತಿನಲ್ಲಿ ಪ್ರಾಧಾನವಾಗಿರುವುವೋ, ಎಲ್ಲಿ ವಿಶಿಷ್ಟ ಮಾರ್ಗದಲ್ಲಿ ಮಕ್ಕಳ ಅಭಿರುಚಿಗಳು ಕವಲೊಡೆಯಬೇಕೋ ಆ ಅಂತಸ್ತಿನ ಶಾಲೆಗಳಲ್ಲಿ ಈ ಪಠ್ಯವಸ್ತುವನ್ನು ಇಡುವುದು ಬಲುಕಷ್ಟ. ಜೊತೆಗೆ, ಆಳವಾದ ಪಾಂಡಿತ್ಯ ಸಾಧನೆಯೂ ಅಸಾಧ್ಯವಾಗಬಹುದು. ಈ ಎಲ್ಲ ಕಾರಣಗಳಿಂದಲೂ, ನಮ್ಮ ಭರತಖಂಡದ ಸದ್ಯದ ಸ್ಥಿತಿಗತಿಗಳ ಅವಲೋಕನದಿಂದಲೂ ಈ ಉದ್ಯಮಪಠ್ಯವಸ್ತುವನ್ನು ಪ್ರಾಥಮಿಕದೆಶೆಯಲ್ಲಾದರೂ ಆಚರಣೆಗೆ ತರಬಹುದು. ಹಾಗೂ ನಮ್ಮ ಗ್ರಾಮಾಂತರ ಪಾಠಶಾಲೆಗಳಿಗೆ ಅದು ಅತ್ಯಂತ ಸೂಕ್ತವಾದದ್ದು. ಗ್ರಾಮಜೀವನದಲ್ಲಿ ಮಕ್ಕಳಿಗೆ ಸಹಜವಾದ ಆಸಕ್ತಿಯನ್ನು ಹುಟ್ಟಿಸಿ, ಉದ್ಯಮಗಳಲ್ಲಿ ನಿರತರಾಗಿರುವಾಗ ಓದುವುದು, ಬರೆಯುವುದು, ಲೆಕ್ಕ ಮುಂತಾದವನ್ನೆಲ್ಲ ಕಲಿಸಬಹುದು. ಆಸಕ್ತಿಯ ಆ ಉದ್ಯಮಗಳನ್ನು ಮಾಡಬೇಕಾಗಿರುವುದರಿಂದ ಅದಕ್ಕನುಕೂಲಿಸುವ ಈ ಜ್ಞಾನಾರ್ಜನೆಗೆ ಅವಧಾನವನ್ನೂ ಸಾಮರ್ಥ್ಯವನ್ನೂ ಕೇಂದ್ರೀಕರಿಸುವುದರಿಂದ ಮಕ್ಕಳ ಶಿಕ್ಷಣ ನಿಜವಾಗಿಯೂ ಯಶಸ್ವಿಯಾಗುತ್ತದೆ. ಕಥೆ, ಸಂಗೀತ, ಸಮಾಜ ಜೀವನ, ಆಟ ಇವುಗಳಲ್ಲಿ ಭಾಗವಹಿಸುವಾಗ ಅವರವರ ಅಭಿರುಚಿಗಳೂ ಬೆಳೆದು ಪ್ರಕಾಶನಕ್ಕೆ ಬರುತ್ತವೆ.

ಮೇಲೆ ಹೇಳಿದ ಕಾರಣಗಳಿಂದ ಉದ್ಯಮ ಪಠ್ಯವಸ್ತು ನಮ್ಮ ನಾಡಿನ ಪ್ರಾಥಮಿಕ ಶಾಲೆಗಳಿಗೆ ಉಚಿತವಾಗಿದೆ. ಅದನ್ನು ಅಲ್ಲಲ್ಲಿ ಈಗ ಪ್ರಯೋಗಾರ್ಥವಾಗಿಯೂ, ಫಲಪ್ರದವಾಗಿಯೂ ಆರಂಭಿಸಿರುತ್ತದೆ. ಆದರೆ ಅಂಥ ಉದ್ಯಮ ಶಿಕ್ಷಣವನ್ನು ನಮ್ಮ ಸೆಕೆಂಡರೀ ಶಾಲೆಗಳಲ್ಲಿ ಆರಂಭಿಸುವುದು ಸುಲಭವಲ್ಲ. ಆ ಕಾಲದಲ್ಲಿ ಮಕ್ಕಳು ಒಂದೊಂದು ವಿಷಯದಲ್ಲೂ ಆಳವಾದ ಪಾಂಡಿತ್ಯ ಸಂಪಾದನೆಮಾಡಿ ಪರೀಕ್ಷೆಗೆ ಕೂಡಬೇಗಿದೆ; ಆ ಕಾರ್ಯ ಉದ್ಯಮ ಶಿಕ್ಷಣದಿಂದ ಸಾಧಿಸುವುದು ಕಷ್ಟವಾಗುತ್ತದೆ; ಮೇಲಾಗಿ ಎಲ್ಲ ವಿಷಯಗಳನ್ನೂ ಬೋಧಿಸಲನುಕೂಲವಾದ ಉದ್ಯಮಗಳನ್ನು ಜೋಡಿಸುವುದು ಸಾಧ್ಯವೂ ಇಲ್ಲ. ಹಾಗೂ ಉದ್ಯಮ ಶಿಕ್ಷಣವನ್ನು ಆರಂಭಿಸಿದರೂ ಅದಕ್ಕೆ ಬೇಕಾಗುವ ಉಪಕರಣಗಳನ್ನೂ ಸಾಮಗ್ರಿಗಳನ್ನೂ ಒದಗಿಸಿಕೊಳ್ಳಲು ಬೇಕಾದ ಹಣ ಅತ್ಯಗಾಧವಾದೀತು. ಅಮೆರಿಕದಲ್ಲಿ ಡಾಲ್ಟನ್

ಶಿಕ್ಷಣ ಪದ್ಧತಿಯಲ್ಲಿ ಈ ಉದ್ಯಮ ಪಠ್ಯವಸ್ತುವನ್ನು ಸ್ವಲ್ಪ ಮಾರ್ಪಡಿಸಿ ಸೆಕೆಂಡರೀ ಶಾಲೆಗಳಲ್ಲೂ ಆಚರಣೆಗೆ ತರುತ್ತಿದ್ದರೂ, ಸಾರ್ವತ್ರಿಕವಾಗಿ ಎಲ್ಲೂ ಬಳಕೆಗೆ ಬಂದಿಲ್ಲ. ಹಾಗೆಂದಮೇಲೆ, ಇಂದಿನ ಪಠ್ಯವಸ್ತುವನ್ನೇ ಅನುಸರಿಸಿಕೊಂಡು ಹೋಗಬೇಕೆಂದಲ್ಲ; ಅದರಲ್ಲೂ ಹಿಂದೆ ವಿವರಿಸಿದ ನ್ಯೂನತೆಗಳೆಲ್ಲ ಇವೆ. ಆ ನ್ಯೂನತೆಗಳನ್ನು ಸರಿಪಡಿಸಿಕೊಂಡು ಅದಷ್ಟು ಉಪಯುಕ್ತಮಾಡಿಕೊಳ್ಳುವುದೇ ನಮಗಿರುವ ಮಾರ್ಗ.

ಪ್ರಾಥಮಿಕ ಶಾಲೆಗಳ ಪಠ್ಯವಸ್ತುವನ್ನು ನಿರ್ಮಿಸುವಾಗ ಮಕ್ಕಳಿಗೇ ಪ್ರಾಧಾನ್ಯತೆಯನ್ನು ಕೊಟ್ಟು, ಮಿಕ್ಕೆಲ್ಲವೂ ಅದಕ್ಕೆ ಅಧೀನವೆಂದು ಭಾವಿಸಿದೆ; ಸೆಕೆಂಡರೀ ಶಾಲೆಗಳಲ್ಲಿ ಮಗುವು ಕೇವಲ ಶಾಲೆಯ ಜೀವನದಲ್ಲೇ ಅಲ್ಲದೆ ಸಮಾಜ ಜೀವನದಲ್ಲೂ ಹೆಚ್ಚುಹೆಚ್ಚು ಸಂಪರ್ಕ ಹೊಂದಿ, ಅದರಿಂದ ತನ್ನ ಜೀವನ ಪೋಷಿತವಾಗುವಂತೆಯೂ ತನ್ನ ಕೈವಾಡದಿಂದ ಅದೂ ಮಾರ್ಪಡು ವಂತೆಯೂ ಬಾಳಲಾರಂಭಿಸುತ್ತಾನೆ. ಆಗ ಅವನಿಗ ಹೆಚ್ಚಿನ ಜವಾಬ್ದಾ ರಿಯೂ, ಆಳವಾದ ಪಾಂಡಿತ್ಯವೂ, ಆಲೋಚನೆ, ವಿಮರ್ಶೆ, ಸಂಶೋಧನೆ ಮುಂತಾದವೂ ಅನಿವಾರ್ಯವೆನಿಸುತ್ತವೆ; ತನ್ನ ವೈಯಕ್ತಿಕ ಶಕ್ತಿಸಾಮರ್ಥ್ಯ ಗಳೂ ಅಭಿರುಚಿಆಸಕ್ತಿಗಳೂ ಅಪೂರ್ವವಾದವೆಂಬ ಅಭಿಮಾನವೂ, ತನ್ನ ವೈಶಿಷ್ಟ್ಯಗಳನ್ನು ಸಮಾಜ ಅರಿಯಬೇಕೆಂಬ ಹೆಬ್ಬಯಕೆಯೂ ಇರುವುದ ರಿಂದ ಅಭಿರುಚಿ (ಐಚ್ಛಿಕ) ಶಿಕ್ಷಣವೂ ಅಗತ್ಯವೆನಿಸುತ್ತದೆ; ಆ ಕಾಲದಲ್ಲಿ ಮಾಂಸಖಂಡಗಳು ವೃದ್ಧಿಯಾಗಿ ಬಲಗೊಳ್ಳುವ ಸ್ಥಿತಿಯಲ್ಲಿರುವುದರಿಂದ ದೈಹಿಕ ಶಿಕ್ಷಣವೂ ಆವಶ್ಯಕ. ಬಾಲಕ ಬಾಲಕಿಯರ ಮನೋವ್ಯಾಪಾರ ಗಳಲ್ಲೂ, ಸಂವೇದನೆ, ಅಭಿರುಚಿ, ಆಸಕ್ತಿ ಮತ್ತು ಜೀವನಕ್ರಮಗಳಲ್ಲೂ ಆಗ ಆರಂಭವಾಗುವುದರಿಂದ ಅವುಗಳಿಗೊಪ್ಪುವಂತೆ ಬಾಲಕ ಬಾಲಕಿಯರ ಶಾಲೆ ಭಿನ್ನತೆಗಳಲ್ಲಿ ಭಿನ್ನಸ್ಥಿತಿಯ ಪಠ್ಯವಸ್ತು ಏರ್ಪಡಬೇಕು. ಸೆಕೆಂಡರೀ ಶಿಕ್ಷಣದ ನಂತರ ಅವರಲ್ಲನೇಕರು ಜೀವನವನ್ನು ಆರಂಭಿಸುವುದರಿಂದ ಅದಕ್ಕೆ ನೆರ ವಾಗುವಂಥ ವೃತ್ತಿಶಿಕ್ಷಣವನ್ನೂ ಕೊಡಬೇಕು. ಅಲ್ಲದೆ, ಮುಂದೆ ಜೀವನದಲ್ಲಿ ದೊರಕಬಹುದಾದ ವಿರಾಮಕಾಲವನ್ನು ಸದುಪಯೋಗಪಡಿಸಿಕೊಳ್ಳಲು ನೆರವಾಗುವ, ಮನೋರಂಜನೆಗೆ ನೆರವಾಗುವ ಕಲಾವಿದ್ಯೆಯಲ್ಲೂ ಅವರಿಗೆ ಆಸಕ್ತಿ ಹುಟ್ಟಿಸಬೇಕು. ಜೊತೆಗೆ, ಪ್ರಜಾಸತ್ತಾತ್ಮಕ ಸಮಾಜದಲ್ಲಿ ಬಾಳಲು

ಆವಶ್ಯಕವೆನಿಸುವ ಸಹಕಾರ ಸದ್ಭಾವನೆಗಳೂ ಇತರ ಸತ್ಪ್ರಜಾಗುಣಗಳೂ ಮೂಡುವಂತೆ ಪಠ್ಯವಸ್ತುವಿನಲ್ಲಿ ಅವಕಾಶವಿರಬೇಕು.

ನಮ್ಮ ಸಂಸ್ಥಾನದಲ್ಲಿ ಸೆಕೆಂಡರೀ ಶಿಕ್ಷಣ ಎರಡು ಅಂತಸ್ತುಗಳಾಗಿ ವಿಭಾಗವಾಗಿದೆ: ಮಾಧ್ಯಮಿಕಶಾಲೆ ಮತ್ತು ಪ್ರೌಢಶಾಲೆ. ಇವೆರಡರ ಅವಧಿಯಲ್ಲೂ ಒಂದೊಂದು ಸಾರ್ವತ್ರಿಕ ಪರೀಕ್ಷೆ ನಡೆಯುತ್ತದೆ. ಭಾರತದ ಕೆಲವು ಪ್ರಾಂತ್ಯಗಳಲ್ಲಿ ಇವೆರಡೂ ಏಕೀಕೃತವಾಗಿ ಸೆಕೆಂಡರೀ ಶಾಲೆಗಳಾಗಿವೆ. ಆ ಶಿಕ್ಷಣದ ಕೊನೆಯಲ್ಲಿ ಒಂದು ಸಾರ್ವತ್ರಿಕ ಪರೀಕ್ಷೆ ಮಾತ್ರ ನಡೆಯುತ್ತದೆ. ಅಮೆರಿಕದಲ್ಲಿ ಸೆಕೆಂಡರೀ ಶಿಕ್ಷಣ ಎರಡು ಅಂತಸ್ತಾಗಿ ವಿಭಾಗವಾಗಿದೆ. ಜೂನಿಯರ್ ಹೈಸ್ಕೂಲ್ (೧೨–೧೫), ಸೀನಿಯರ್ ಹೈಸ್ಕೂಲ್ (೧೫–೧೮). ಮಕ್ಕಳ ಅಭಿರುಚಿಗಳು ೧೨–೧೩ ವರ್ಷ ವಯಸ್ಸಿನ ಸುಮಾರಿನಲ್ಲಿ ವಿಶಿಷ್ಟ ಮಾರ್ಗದಲ್ಲಿ ಬೆಳೆಯಲು ಆರಂಭವಾಗುತ್ತವೆ. ಆ ಅಭಿರುಚಿಗಳನ್ನು ನಿಷ್ಕರ್ಷಿಸುವುದೇ ಜೂನಿಯರ್ ಹೈಸ್ಕೂಲುಗಳ ಕೆಲಸ. ಅವುಗಳಿಗೊಪ್ಪುವಂಥ ಐಚ್ಛಿಕ ಶಿಕ್ಷಣವನ್ನು ಕೊಡುವುದು ಸೀನಿಯರ್ ಹೈಸ್ಕೂಲುಗಳಲ್ಲಿ. ಆದರೆ ನಮ್ಮ ಸಂಸ್ಥಾನದಲ್ಲಿ ಪ್ರಾಥಮಿಕ ಶಿಕ್ಷಣ ೯ ನೆಯ ವರ್ಷಕ್ಕೆ ಮುಗಿದು ೧೦ ನೆಯ ವರ್ಷದಿಂದ ಮಾಧ್ಯಮಿಕ ಶಿಕ್ಷಣ ಆರಂಭವಾಗಿ ೧೩ ನೆಯ ವರ್ಷದ ಪೂರ್ತಿ ನಡೆಯುತ್ತಿದೆ. ಅನಂತರ ಮೂರು ವರ್ಷ ಪ್ರೌಢ ಶಿಕ್ಷಣ. ಈ ವಿಭಾಗ ಒಂದು ದೃಷ್ಟಿಯಲ್ಲಿ ಉಚಿತವಲ್ಲ. ಪ್ರಾಥಮಿಕ ಶಿಕ್ಷಣ ೬ ವರ್ಷ ಕಾಲದ್ದಿರಬೇಕು; ಎಂದರೆ, ಅದು ೧೧ ನೆಯ ವರ್ಷಕ್ಕೆ ಮುಗಿದು ೧೨ ರಿಂದ ಸೆಕೆಂಡರೀ ಶಿಕ್ಷಣ ಅರಂಭವಾಗಬೇಕು. ಇಂದಿನ ನಮ್ಮ ಮಾಧ್ಯಮಿಕ ಶಾಲೆಯ ಕೊನೆಯ ಎರಡು ತರಗತಿಗಳನ್ನೂ ಪ್ರೌಢಶಾಲೆಯ ಮೊದಲನೆಯ ತರಗತಿಯನ್ನೂ ಸೇರಿಸಿ ಮಾಧ್ಯಮಿಕ ಶಾಲೆಯನ್ನಾಗಿಯೋ ಜೂನಿಯರ್ ಹೈಸ್ಕೂಲನ್ನಾಗಿಯೋ ಮಾಡುವುದಾದರೆ ಆ ಕಾಲದಲ್ಲಿ ಮಕ್ಕಳ ಅಭಿರುಚಿಯನ್ನು ನಿಷ್ಕರ್ಷಿಸಲು ಸಹಾಯವಾಗುತ್ತದೆ. ಅನಂತರ ನಮ್ಮ ಪ್ರೌಢಶಿಕ್ಷಣದ ಅವಧಿಯನ್ನು ೧೮ ನೆಯ ವರ್ಷದ ವರೆಗೂ ಹೆಚ್ಚಿಸಿ, ೧೫–೧೮ ರ ವರೆಗೂ ಆ ಶಿಕ್ಷಣ ನಡೆಯುವಂತೆ ಏರ್ಪಡಿಸಿ ಆ ಮೂರು ವರ್ಷಗಳ ಅವಧಿಯಲ್ಲಿ ಅವರವರ ಅಭಿರುಚಿಗೊಪ್ಪುವ ವೃತ್ತಿ, ಕಲೆ ಮುಂತಾದ ವಿಶಿಷ್ಟ ಶಿಕ್ಷಣವನ್ನು ಕೊಡಲು ಅನುಕೂಲಿಸಿಕೊಳ್ಳಬಹುದು. ಇದು ಶಾಲೆಗಳ ಅಂತಸ್ತಿನ ಶಾಸ್ತ್ರೀಯ

ರೀತಿಯ ವಿಂಗಡಣೆ. ಸದ್ಯದಲ್ಲಿ ನಮ್ಮ ನಾಡಿನ ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಾಲೆಗಳು ಮೇಲಿನ ದೃಷ್ಟಿಯಲ್ಲಿ ಪುನರ್ವ್ಯವಸ್ಥೆಯಾಗಬೇಕು.

**ಮಾಧ್ಯಮಿಕ ಶಾಲೆಯ ಪಠ್ಯವಿಷಯ:** ಇತ್ತೀಚೆಗೆ ಹೊರಬಿದ್ದಿರುವ ಸಾರ್ಜಂಟರವರ ಯುದ್ಧಾನಂತರದ ಶಿಕ್ಷಣ ಪುರುಜ್ಜೀವನ ಯೋಜನೆಯಲ್ಲೂ ಮೇಲೆ ವಿವರಿಸಿದ ರೀತಿಯಲ್ಲೇ ಶಾಲೆಗಳ ಕಾಲವನ್ನು ಪುನರ್ವ್ಯವಸ್ಥೆಗೊಳಿಸಲು ಸಲಹೆಮಾಡಿದೆ. ಆಗ ಪ್ರಾಥಮಿಕ ಶಿಕ್ಷಣ ೫ ವರ್ಷ; ಸೆಕೆಂಡರೀ ಶಿಕ್ಷಣ ೧೧ನೆಯ ವಯಸ್ಸಿನಿಂದ ಆರಂಭವಾಗಿ ೬ ವರ್ಷ ನಡೆಯುತ್ತದೆ. ಈ ಅವಧಿಯ ಪೂರ್ವಾರ್ಧವೇ ಮಾಧ್ಯಮಿಕ ಶಿಕ್ಷಣದ ಕಾಲ. ಆ ಸುಮಾರಿನಲ್ಲಿ ಮಕ್ಕಳಲ್ಲಿ ಅಗಾಧವಾದ ಮಾನಸಿಕ ಮತ್ತು ದೈಹಿಕ ಬದಲಾವಣೆ ಆರಂಭವಾಗುತ್ತವೆ; ಅಂದಿನ ಮಾನಸಿಕ ಮತ್ತು ದೈಹಿಕ ವ್ಯಾಪಾರಗಳನ್ನು ಅನುಸರಿಸಿ ಉಚಿತವೆನಿಸುವ ಪಠ್ಯ ವಿಷಯವನ್ನು ರೂಪಿಸಬೇಕು.

**೧. ಭಾಷೆ:** ಪ್ರಾಥಮಿಕ ಶಾಲೆಯಲ್ಲಿ ಓದುವುದು, ಬರೆಯುವುದು ಮುಂತಾದ ಭಾಷೆಯ ಮೂಲಪರಿಚಯ ಆಗಿರುತ್ತದೆ. ವಾಕ್ಯಗಳ ರೀತಿ, ಪದಸಂಪತ್ತು ತಕ್ಕಮಟ್ಟಿಗಾಗಿರುತ್ತವೆ. ಇವೆಲ್ಲವನ್ನು ಉಪಯೋಗಿಸಿಕೊಂಡು ಮಾಧ್ಯಮಿಕ ಶಾಲೆಯಲ್ಲಿ ಸಾಹಿತ್ಯದ ಸೊಗಸನ್ನು ಸವಿಯಲವಕಾಶವಾಗುವಂತೆ ಪಠ್ಯವಸ್ತು ರೂಪುಗೊಳ್ಳಬೇಕು. ಸರಳವೂ ಸುಲಭವೂ ಆದ ಪದ್ಯಭಾಗವಿದ್ದು, ಮಕ್ಕಳ ಭಾವನೆ, ಕಲ್ಪನೆ ಮತ್ತು ರಸಾಸ್ವಾದನೆಗಳನ್ನು ಪ್ರಚೋದಿಸುವಂತಿರಬೇಕು. ಕೇವಲ ಪ್ರಾಚೀನಕಾಲದ ಜೀವನಕ್ಕೆ ಸಂಬಂಧಿಸಿದ ಪದ್ಯಗಳನ್ನು ಪಠ್ಯವಿಷಯವಾಗಿ ಇಡುವುದರ ಬದಲು ಇಂದಿನ ಜೀವನವನ್ನು ಪ್ರತಿಬಿಂಬಿಸುವ ಆಧುನಿಕ ಕವಿಗಳ ಕೃತಿಗಳನ್ನೂ ಸೇರಿಸುವುದು ಉತ್ತಮ. ಕೇವಲ ಭಾವಪ್ರಧಾನವಾದ ಕೃತಿಗಳನ್ನೇ ಸೇರಿಸುವುದರ ಬದಲು ವರ್ಣಕ, ಕಥಾನಕಗಳನ್ನೂ ಉಚಿತವರಿತು ಸೇರಿಸಬೇಕು. ಗದ್ಯಪಾಠವೂ ಹಲವು ದೃಷ್ಟಿಗಳಲ್ಲಿ ಈಗಿರುವುದಕ್ಕಿಂತ ಉತ್ತಮಗೊಳ್ಳಬೇಕು. ಹಲವಾರು ಪುರಾಣದ ಕಥೆಗಳನ್ನು ಮಾತ್ರ ಸೇರಿಸುವುದರಿಂದಲೇ ಅದು ತೃಪ್ತಿಯೆನಿಸಲಾರದು; ಮಕ್ಕಳು ಬಾಳುತ್ತಿರುವ ಸಮಾಜದ ಇಂದಿನ ಜೀವನ ಚಿತ್ರಗಳನ್ನೂ ಸಮಸ್ಯೆಗಳನ್ನೂ ಒಳಗೊಂಡ ಪಾಠಗಳು ಸೇರಬೇಕು. ಅಂದು ಮಾತ್ರ ಅವರು ಅಭ್ಯಾಸಿಸುತ್ತಿರುವುದು ನಿಜ

ವಾದ ಜೀವನಕ್ಕೆ ಸಂಬಂಧಿಸಿದ್ದೆಂಬ ಆಸಕ್ತಿ ಹುಟ್ಟುತ್ತದೆ. ಇತಿಹಾದಸ ಪುರುಷರ, ಸಮಾಜಸುಧಾರಕರ, ವಿಜ್ಞಾನಿಗಳ ಮತ್ತು ಇತರ ಆಧುನಿಕ ವ್ಯಕ್ತಿಗಳ ಜೀವನಚರಿತ್ರೆಗಳೂ, ನಾಡಿನ ಸಾಮಾಜಿಕ, ಸಾಂಪತ್ತಿಕ ಮತ್ತು ಔದ್ಯೋಗಿಕ ವಿಷಯಗಳನ್ನು ಕುರಿತ ಪಾಠಗಳೂ ಸೇರಬೇಕು. ವೈಜ್ಞಾನಿಕ ವಿಷಯ ಸಾಹಿತ್ಯಶ್ರೇಣಿಗೆ ಸೇರತಕ್ಕದ್ದಲ್ಲವೆಂದು ನಮ್ಮಲ್ಲಿ ಹಲವರು ಭಾವಿಸುತ್ತಾರೆ. ಅದು ಉಚಿತವಲ್ಲ. ಮಿಕ್ಕ ವಿಷಯಗಳು ಮಾನವನ ಸಂಸ್ಕೃತಿ, ನಾಗರಿಕತೆ ಮತ್ತು ಜ್ಞಾನರಾಶಿಗಳನ್ನು ಬೆಳಸಿರುವಂತೆ ವಿಜ್ಞಾನವೂ ಬೆಳಸಿದೆ, ಬೆಳಸುತ್ತಿದೆ; ಹಾಗೂ ಮಾನವನ ಜೀವನವನ್ನು ನೂತನ ರೀತಿಯಲ್ಲಿ ಪೋಷಿಸಿ, ಅವನ ನಾಗರಿಕತೆಯನ್ನು ಒಂದು ಹೊಸ ಮಾರ್ಗದಲ್ಲಿ ಒಯ್ಯುತ್ತಿದೆ. ಎಂದಮೇಲೆ, ಆ ವಿಷಯಗಳು ಸೇರಿದ ಹೊರತು ಮಕ್ಕಳಿಗೆ ಆಧುನಿಕ ಸಮಾಜದ ನಿಜಸ್ವರೂಪ ಅರಿವಾಗದೆ, ಓದುವುದು ಕೃತಕವಾಗಿ ತೋರಬಹುದು. ಯಾವ ಪಾಠವೇ ಆಗಲಿ ಒಳ್ಳೆಯ ಭಾಷೆ, ಆಕರ್ಷಣೀಯವಾದ ಶೈಲಿ, ಪದಸಂಪತ್ತು, ಪರಿಣಾಮಕಾರಿಯಾದ ವಿಷಯ— ಇವುಗಳನ್ನು ಒಳಗೊಂಡಿದ್ದರೆ ಅದೆಲ್ಲ ಸಾಹಿತ್ಯವೇ. ಆದ್ದರಿಂದ ಗದ್ಯಭಾಗದಲ್ಲಿ ಉದ್ಯೋಗಗಳು, ವಿಜ್ಞಾನಿಗಳ ಜೀವನ ಕಥನ, ಯಂತ್ರಯುಗದ ಇತರ ವೈಭವಗಳು—ಇವನ್ನು ಪ್ರತಿಪಾದಿಸುವ ಪಾಠಗಳನ್ನೂ ಸೇರಿಸಬೇಕು. ಮಕ್ಕಳ ಅಂತಸ್ತಿಗೆ ಅರಿಯದ ಜಟಿಲವೂ ಪಾರಿಭಾಷಿಕವೂ ಆದ ಅಂಶಗಳನ್ನು ಕಡಮೆ ಮಾಡುವುದುತ್ತಮ. ಆದರೆ ಸತ್ಯದೃಷ್ಟಿಯಿಂದ ಕೂಡಿರಬೇಕು. ಕಟ್ಟುಕತೆಯಂತಿರಬಾರದು. ಮಕ್ಕಳು ಇದರಿಂದ ಮುಂದೆ ಮಾತೃಭಾಷೆಯಲ್ಲಿ ವೈಜ್ಞಾನಿಕ, ಔದ್ಯೋಗಿಕ, ರಾಜಕೀಯ, ಆರ್ಥಿಕ ಮುಂತಾದ ವಿಷಯಗಳನ್ನು ಅಭ್ಯಾಸಿಸಲು ಸಹಾಯವಾಗುತ್ತದೆ. ಆ ವಿಷಯದಲ್ಲಿ ಮುಂದೆ ಓದಲೂ ಬರೆಯಲೂ ತೊಡಗುವವರಿಗೆ ಇಂದಿನಿಂದಲೂ ಆವಶ್ಯಕವೆನಿಸುವ ಪಾರಿಭಾಷಿಕ ಪದಸಂಪತ್ತೂ ದೊರಕುತ್ತದೆ. ಒಟ್ಟಿನಲ್ಲಿ ಭಾಷೆಯ ಪಠ್ಯವಸ್ತು ಮಕ್ಕಳಿಗೆ ನಮ್ಮ ಸಂಸ್ಕೃತಿ ಇತಿಹಾಸಗಳಿಂದ ಸ್ಫೂರ್ತಿಗೊಂಡು ಆಧುನಿಕ ಜೀವನಕ್ಕೆ ಅನುಕೂಲಿಸುವಂತೆ, ಪದಸಂಪತ್ತನ್ನು, ಭಾಷಾಶಕ್ತಿಯನ್ನೂ ಹೆಚ್ಚಿಸಿಕೊಳ್ಳುವಂತೆ ಆಯ್ಕೆಯಾಗಬೇಕು. ಸ್ವಲ್ಪ ಮಟ್ಟಿಗೆ ವ್ಯಾಕರಣ ಬೋಧನೆಯೂ ಅಗತ್ಯ. ಅದಕ್ಕೆ ಪ್ರತ್ಯೇಕ ಪಾಠಗಳೇ

ಇರಬಹುದು. ಸೂಕ್ಷ್ಮವಾಗಿ ಪದ್ಯ, ಗದ್ಯ ಪಾಠಗಳಲ್ಲೂ ಪ್ರಾಯೋಗಿಕವಾಗಿ ಅಲ್ಲಿ ಪಡೆದ ಜ್ಞಾನವನ್ನು ಉಪಯೋಗಿಸಲು ಸನ್ನಿವೇಶಗಳನ್ನು ತರಬಹುದು. ಆದರೆ ವ್ಯಾಕರಣ ಬೋಧನೆಯಿಂದ ಗದ್ಯ, ಪದ್ಯ ಪಾಠಗಳು ನೀರಸವಾಗುವಂತೆ ಎಂದೂ ಮಾಡಲು ಯತ್ನಿಸಬಾರದು.

**ರಾಷ್ಟ್ರಭಾಷೆ :** ಈ ಕಾಲದ ಸುಮಾರಿನಲ್ಲಿ ಪರಭಾಷೆಯ ಬೋಧನೆಯನ್ನು ಆರಂಭಿಸಬಹುದು. ಇಂದಿನ ವರೆಗೂ ಇಂಗ್ಲೀಷಿಗೆ ರಾಜಕೀಯ ಕಾರಣಗಳಿಂದ ಒಂದು ಸ್ಥಾನವಿತ್ತು. ಇನ್ನುಮುಂದೆ ಹಿಂದಿಗೆ ಆ ಸ್ಥಾನ ಲಭಿಸಬೇಕಾಗಿದೆ. ಮಾತೃಭಾಷೆಯಲ್ಲಿ ಅಂದಿಗಾಗಲೇ ವಿಷಯವನ್ನು ವಿವರಿಸುವ, ವಾಕ್ಯಗಳನ್ನು ರಚಿಸುವ ಮತ್ತು ವ್ಯಾಕರಣದ ಹಲವು ನಿಯಮಗಳಿಗನುಸಾರವಾಗಿ ಭಾಷೆಯ ರೂಪುರೇಖೆಗಳನ್ನು ಅರಿತುಕೊಳ್ಳುವ ಶಕ್ತಿ ಬಂದಿರುವುದರಿಂದ ಮತ್ತೊಂದು ಭಾಷೆಯನ್ನು ಸುಲಭವಾಗಿ ಅಭ್ಯಾಸಿಸಲು ಸಹಾಯವಾಗುತ್ತದೆ. ಕೇವಲ ಪ್ರಾಥಮಿಕಶಾಲೆಯ ಬಾಲಕರಿಗೆ ಉಚಿತವೆನಿಸುವ ಹಿಂದಿ ಪಠ್ಯಪುಸ್ತಕವನ್ನು ಆಗ ಗೊತ್ತುಮಾಡಬಾರದು. ಆ ವಯಸ್ಸಿನ ನಮ್ಮ ಮಕ್ಕಳು ಆ ಭಾಷೆಗೆ ಹೊಸಬರಾದರೂ ಜೀವನಪರಿಚಯದಲ್ಲೂ ಅನುಭವದಲ್ಲೂ ಮುಂದುವರಿದಿದ್ದಾರೆ. ಅವರ ಆ ವಯೋಗುಣಗಳಿಗೆ ಉಚಿತವೆನಿಸುವ ಪಾಠಗಳನ್ನು ಒಳಗೊಂಡಿರಬೇಕು. ಪರಭಾಷೆಯಾದರೂ ನೇರವಾಗಿ ಬೋಧಿಸಲನುಕೂಲಿಸುವಂತೆ ಚಿತ್ರಗಳೂ ಸೇರಿರಬೇಕು. ಭಾರತದಲ್ಲೆಲ್ಲ ಹಿಂದಿ ಕ್ರಮಕ್ರಮವಾಗಿ ರಾಷ್ಟ್ರಭಾಷೆಯ ಗೌರವವನ್ನು ಗಳಿಸುತ್ತಿರುವುದರಿಂದ ಅಖಂಡಭಾರತದ ಈ ಅಂತಸ್ತಿನ ಶಾಲೆಗಳಲ್ಲೆಲ್ಲ ಅದನ್ನು ಕಡ್ಡಾಯವಾಗಿ ಬೋಧಿಸುವ ಏರ್ಪಾಡು ಮಾಡಬೇಕು.

**ಗಣಿತಪಾಠ :** ಮಾಧ್ಯಮಿಕ ಶಾಲೆಗಳಿಗೆ ಬರುವ ಹೊತ್ತಿಗೆ ಮಕ್ಕಳು ಸಂಕಲನ, ವ್ಯವಕಲನ, ಗುಣಾಕಾರ, ಭಾಗಾಹಾರ ಮುಂತಾದ ಗಣಿತದ ಮೂಲ ಉಪಕರಣಗಳನ್ನು ಸಾಧಿಸಿರುತ್ತಾರೆ. ಅವರ ಆ ಹಿಂದಿನ ಪರಿಜ್ಞಾನವನ್ನು ಉಪಯೋಗಿಸಕೊಂಡು ಜೀವನಕ್ಕೆ ಸಂಬಂಧಿಸಿದ ಉಪಯುಕ್ತವೆನಿಸುವ ಲೆಕ್ಕದ ಸಮಸ್ಯೆಗಳನ್ನು ಪಠ್ಯವಸ್ತುವಿನಲ್ಲಿ ಸೇರಿಸಬೇಕು. ಸುತ್ತಣ ಸನ್ನಿವೇಶಗಳಿಂದ, ಆಸಕ್ತಿ ಹುಟ್ಟಿಸುವ ರೀತಿಯ ವಿಷಯಗಳನ್ನು ಆರಿಸಿ ಲೆಕ್ಕಗಳನ್ನು ಮಾಡಿಸಬೇಕು. ಸ್ವತಂತ್ರವಾಗಿ ಲೆಕ್ಕಗಳನ್ನು ಮಾಡುವ

ಶಕ್ತಿ ಬರುವಂತೆ ಅಭ್ಯಾಸಗಳನ್ನು ಒಳಗೊಂಡ ಪಠ್ಯಪುಸ್ತಕವನ್ನು ಇಡಬೇಕು. ಬೀಜಗಣಿತ ಸಾಂಕೇತಿಕ ರೂಪದ್ದಾದ್ದರಿಂದ ಈ ಶಾಲೆಯಲ್ಲಿ ಅದನ್ನು ಸೇರಿಸಬೇಕಾಗಿಲ್ಲ. ರೇಖಾಗಣಿತಕ್ಕೆ ಸಂಬಂಧಿಸಿದ ಹಲವು ಪಾರಿಭಾಷಿಕ ಶಬ್ದಗಳನ್ನೂ ಮೂಲ ಆಧಾರಗಳನ್ನೂ ಪರಿಚಯಮಾಡಿಕೊಡುವುದು ಆವಶ್ಯಕ; ಬಿಂದು, ಸರಳರೇಖೆ, ವಕ್ರರೇಖೆ, ತ್ರಿಕೋಣ, ಚೌಕ ಮುಂತಾದ ಸುಲಭಾಕೃತಿಗಳನ್ನು ರಚಿಸುವುದೂ ಪಠ್ಯವಸ್ತುವಿನಲ್ಲಿ ಸೇರಿರಬೇಕು.

**೪. ಚರಿತ್ರೆ:** ಚರಿತ್ರೆಯ ಅಭ್ಯಾಸದಿಂದ ಜೀವನ ಪರಿಷ್ಕರಣಗೊಂಡು ಸಮಾಜದ ಆ ಮೂಲಕ ದೇಶದ ಅಭಿವೃದ್ಧಿ ಸಾಧಿಸುವ ಉತ್ಸಾಹ ಮೂಡಬೇಕು. ಪ್ರಾಥಮಿಕ ಶಾಲೆಯು ಆ ಚರಿತ್ರೆಯನ್ನು ಹಲವು ಮಹಾಪುರುಷರ ಕಥೆಗಳ ರೂಪದಲ್ಲಿ ಅಭ್ಯಾಸಿಸಿದ್ದರೆ ಇಲ್ಲಿ ನಾಡಿನ ಪ್ರಗತಿ ಸಾಧನೆಯ ಅಖಂಡಜ್ಞಾನ ದೊರಕುವಂತಿರಬೇಕು. ಭಾರತ ಇಂದಿನ ವರೆಗೂ ಅನ್ಯರ ಪದಾಕ್ರಾಂತವಾಗಿದ್ದು ಅವರ ಆಡಳಿತಕ್ಕನುಕೂಲಿಸುವಂತೆ ಅದು ರೂಪುಗೊಂಡಿತ್ತು. ಈಗ ನಮ್ಮ ಸರ್ವತೋಮುಖವಾದ ಅಭಿವೃದ್ಧಿಗೆ ನೆರವಾಗುವಂತೆ ಅದು ಪುನರ್ರಚಿತವಾಗಬೇಕು. ಕೇವಲ ವ್ಯಕ್ತಿಗಳಿಗೇ ಪ್ರಾಧಾನ್ಯತೆ ಕೊಡುವುದರ ಬದಲು ಅಖಂಡ ಸಮಾಜದ ಪ್ರಗತಿಪ್ರವಾಹದ ಕಡೆ ಹೆಚ್ಚು ಗಮನಕೊಟ್ಟು ಚರಿತ್ರೆಯ ಪಠ್ಯವಿಷಯವನ್ನು ರೂಪಿಸಬೇಕು. ನಮ್ಮ ಹಿಂದಿನವರು ಹೇಗೆ ಆತ್ಮಾರ್ಪಣೆಮಾಡಿ ಅಭಿವೃದ್ಧಿ ಸಾಧಿದಸರೆಂಬ ಅಂಶಗಳ ಕಡೆ ತಕ್ಕಷ್ಟು ಗಮನಕೊಡಬೇಕು. ಹಿಂದಿನವರ ಆ ಅನುಭವಗಳಿಂದ ಮಕ್ಕಳು ಲಾಭ ಪಡೆದು, ಅಂದಿನವರಿಗೆ ಎದುರು ಬಂದ ಕಷ್ಟದುರದೃಷ್ಟಗಳಿಂದ ಎಚ್ಚರಗೊಂಡು, ಇಂದಿನ ಸಮಾಜದ ಪುರೋಭಿವೃದ್ಧಿಗೆ ನೆರವಾಗಲು ಬೆಳಕನ್ನೂ ಆವೇಶವನ್ನೂ ಪಡೆಯುವಂತಿರಬೇಕು. ಜಟಿಲವೂ ಚರ್ಚಾಸ್ಪದವೂ ಆದ ವಿವರಗಳನ್ನು ಸೇರಿಸಬೇಕಾಗಿಲ್ಲ. ಕೇವಲ ಭಾರತೀಯ ಇತಿಹಾಸವನ್ನು ಮಾತ್ರ ಈ ಶಾಲೆಯಲ್ಲಿ ಬೋಧಿಸುವಂತಿರಬೇಕು.

**೫. ಭೂವಿವರಣೆ:** ಪ್ರಾಥಮಿಕ ಶಾಲೆಯಲ್ಲಿ ಭೂವಿವರಣೆಗೆ ಸಂಬಂಧಿಸಿದ ಹಲವು ಮೂಲಸ್ವರೂಪದ ವಿವರಣೆಗಳನ್ನೂ ತಿಳಿವಳಿಕೆಯನ್ನೂ ಪಡೆದಿರುತ್ತಾರೆ; ಈಗ ಅದು ನಿರ್ದಿಷ್ಟ ಕಾರ್ಯಕಾರಣ ಜ್ಞಾನದ ಸ್ವರೂಪವನ್ನು ತಾಳಬೇಕು; ಪ್ರಾಕೃತಿಕ ಲೀಲೆಗಳ ನಿಜಸ್ವರೂಪವನ್ನೂ ಹಲವು

**ಪ್ರಧಾನವಾದ ತತ್ವಸಿದ್ಧಾಂತಗಳನ್ನೂ ಸೇರಿಸಬೇಕು; ಮೊದಲು ಪ್ರಾದೇಶಿಕ, ಆಮೇಲೆ ಭಾರತೀಯ, ಕೊನೆಗೆ ಅಖಂಡ ಪ್ರಪಂಚ—ಇವುಗಳ ಪರಿಚಯ ಮಾಡಿಕೊಡಲು ಪಠ್ಯವಸ್ತು ಯತ್ನಿಸಬೇಕು.** ನಮ್ಮ ನಾಡಿನ ಪ್ರಕೃತಿ ಸಂಪತ್ತು, ಇಲ್ಲಿನ ಆವಶ್ಯಕತೆ, ಅದನ್ನು ಈಡೇರಿಸಲು ಕೈಕೊಂಡಿರುವ, ಕೈಗೊಳ್ಳಬಹುದಾದ ವಿವಿಧ ಉದ್ಯೋಗಗಳು ಮೊದಲಾದ ಸಮಸ್ಯೆಗಳನ್ನೂ ಒಳಗೊಂಡಿರಬೇಕು; ಜಗತ್ತಿನ ಎಲ್ಲ ಜನಾಂಗದವರೂ ಸೋದರರೆಂಬ ಭಾವವೂ, ದೇವರ ಪ್ರೀತಿಯ ಮಕ್ಕಳೆಂಬ ಮಮತೆಯೂ ಬಂದು, ಜನ ಜೀವನದಲ್ಲಿ ಶಾಂತಿ ಸೌಹಾರ್ದ ನೆಲಸುವಂತೆ ಮಾಡಲು ಅನುಕೂಲಿಸುವಂತೆ ಭೂವಿವರಣೆಯ ಪಠ್ಯವಸ್ತು ರೂಪುಗೊಳ್ಳಬೇಕು.

**೬. ಆರೋಗ್ಯ :** ಈಗ ಪ್ರಾಥಮಿಕ ಶಾಲೆಗಳಲ್ಲಿ ಆರೋಗ್ಯ ಐಚ್ಛಿಕ ವಿಷಯವಾಗಿರುವುದನ್ನು ಪರಿಶೀಲಿಸಿದರೆ ಕೆಲವರಿಗೆ ಆರೋಗ್ಯ ಬೇಕು, ಮಿಕ್ಕವರಿಗೆ ಬೇಡವೇ ಎನ್ನಿಸುತ್ತದೆ! ಇದು ನಿಂತು, ಎಲ್ಲರಿಗೂ ಆರೋಗ್ಯ ಕಡ್ಡಾಯವಾದ ಪಠ್ಯವಸ್ತುವಾಗಬೇಕು. ಈಗಿನ ಪಠ್ಯ ವಿಷಯದಲ್ಲಿ ಆರೋಗ್ಯದ ಜ್ಞಾನಕ್ಕೆ ಮಾತ್ರ ಪ್ರಾಧಾನ್ಯ ಕೊಡಲಾಗಿದೆ; ಆರೋಗ್ಯಕರವಾದ ಅಭ್ಯಾಸಗಳಿಗೂ ಅದರಲ್ಲಿ ಅವಕಾಶ ಕಲ್ಪಿಸಬೇಕು. ರೋಗದ ಸೂಚನೆ, ಕಾರಣ, ಅದಕ್ಕೆ ಮದ್ದು—ಇವುಗಳ ಜ್ಞಾನಕ್ಕಿಂತ ಅದು ಬಾರದಂತೆ ತಡೆಯಲು ನೆರವಾಗುವ ಮನಸ್ಥೈರ್ಯದ ಮತ್ತು ಒಳ್ಳೆಯ ಅಭ್ಯಾಸಗಳ ಕಡೆಗೆ ಗಮನಕೊಡುವುದು ಆವಶ್ಯಕವಲ್ಲವೆ? ಆರೋಗ್ಯ ಪಾಠ ಕೇವಲ ಸಾಹಿತ್ಯ ಭಾಗದಂತಿರದೆ, ಆರೋಗ್ಯಕರವಾವ ಅಭ್ಯಾಸಗಳನ್ನು ಮಕ್ಕಳಲ್ಲಿ ಆಚರಣೆಗೆ ತರುವಂತೆ ರೂಪುಗೊಂಡಿರಬೇಕು; ಆಧುನಿಕ ಚಿಕಿತ್ಸಾಲಯಗಳ ಪ್ರಯೋಜನವನ್ನು ಸಕಾಲದಲ್ಲಿ ಪಡೆದುಕೊಳ್ಳುವ ಆವಶ್ಯಕತೆಯನ್ನೂ ಮನೋಭಾವವನ್ನೂ ಮೂಡಿಸುವಂತೆ ಅದು ರೂಪುಗೊಂಡಿರಬೇಕು. ಮಕ್ಕಳು ಪ್ರಥಮ ಚಿಕಿತ್ಸೆ ಮುಂತಾದವನ್ನು ಕಲಿಯಲು ಅಭ್ಯಾಸಗಳನ್ನು ಸೇರಿಸಿರಬೇಕು. ದೃಢಕಾಯರೂ ಆರೋಗ್ಯವಂತರೂ ಆದ ವ್ಯಕ್ತಿಗಳನ್ನೊಳಗೊಂಡ ಜನಾಂಗದ ನಿರ್ಮಾಣ ಮುಖ್ಯವಾದ್ದೆಂಬುದನ್ನು ಮಕ್ಕಳು ಅರಿಯುವಂತಾಗಿ ಅದನ್ನು ಸಾಧಿಸಲು ಆವಶ್ಯಕವಾದ ಜ್ಞಾನ ಮತ್ತು ಅಭ್ಯಾಸ—ಎರಡೂ ಬರುವಂತೆ ಪಠ್ಯವಸ್ತು ರೂಪುಗೊಳ್ಳಬೇಕು.

**೭. ಚಿತ್ರಕಲೆ:** ನಕ್ಷೆ ಮತ್ತು ಚಿತ್ರಗಳ ಅಭ್ಯಾಸ ಈಗ ಪ್ರತ್ಯೇಕ ಪಠ್ಯವಸ್ತುವಾಗಿಲ್ಲ: ಪ್ರಾಸಂಗಿಕವಾಗಿ ಬೋಧನೆಯಾಗುತ್ತಿದೆ. ಇತರ ವಿಷಯಗಳಂತೆ ಇದೂ ಮುಖ್ಯವೇ. ಆದರೆ ಪಠ್ಯವಸ್ತುವಿನಲ್ಲಿ ಸೇರಿಸಿದರೆ ವಿಷಯಗಳ ಸಂಖ್ಯೆ ಅಧಿಕವಾಗುತ್ತದೆ. ಅದರಿಂದ ಎಲ್ಲ ವಿಷಯಗಳನ್ನು ಬೋಧಿಸುವಾಗಲೂ ಈ ಅಂಶಕ್ಕೆ ಹೆಚ್ಚು ಗಮನವನ್ನು ಕೊಡುವುದು ಉಚಿತ ವಾದ ಮಾರ್ಗವೆನಿಸುತ್ತದೆ. ಚರಿತ್ರೆ, ಭೂವಿವರಣೆ, ಆರೋಗ್ಯ, ಪ್ರಕೃತಿ ಪಾಠ ಮುಂತಾದ ಪಾಠಗಳನ್ನು ಬೋಧಿಸುವಾಗ ಒಳ್ಳೆಯ ಚಿತ್ರಗಳನ್ನು ಬರೆ ಯಿಸಲು ಯತ್ನ ನಡೆಯಬೇಕು. ಪಾಠದ ಹಂಚಿಕೆಯಲ್ಲಿ ಈಗಲೂ ಇದಕ್ಕೆ ಒಂದು ಸ್ಥಾನವೇನೋ ಇದೆ. ಮುಂದೆಯೂ ಅದು ಇರಬೇಕು. ಮಕ್ಕ ಳಿಂದ ನೋಡಿದ ವಸ್ತುಗಳ, ಮಾದರಿಗಳ, ಭೂಪಟಗಳ, ಇತರ ಪಾಠಗಳ ಚಿತ್ರಗಳನ್ನೂ ನಕ್ಷೆಗಳನ್ನೂ ಬರಸುವುದರ ಜೊತೆಗೆ ಪ್ರತ್ಯೇಕ ಕಾಲದಲ್ಲಿ ಆ ಕಲೆಗೆ ಸಂಬಂಧಿಸಿದ ವಿಶಿಷ್ಟ ಶಿಕ್ಷಣವನ್ನು ಕೊಟ್ಟು, ನಿರ್ದಿಷ್ಟ ರೀತಿಯ ಚಿತ್ರ ಮತ್ತು ನಕ್ಷೆಗಳ ಅಭ್ಯಾಸ ಮಾಡಿಸುವುದು ಅಗತ್ಯ. ಎಲ್ಲ ಪಾಠಗಳಲ್ಲೂ ನಕ್ಷೆಗಳಿಗೂ ಚಿತ್ರಗಳಿಗೂ ಹೆಚ್ಚಿನ ಸ್ಥಾನ ಕೊಟ್ಟರೆ ಮಕ್ಕಳು ಆಸಕ್ತಿಯಿಂದ ಕಲಿಯುವರು. ಆ ಕಲೆಯಲ್ಲಿ ಅಭಿರುಚಿಯುಳ್ಳವರು ಉಚ್ಚ ಶಿಕ್ಷಣವನ್ನು ಪಡೆಯಲು ಅವರಿಂದ ಸಹಾಯವಾಗುತ್ತದೆ.

**೮. ಸಾಮಾನ್ಯ ವಿಜ್ಞಾನ:** ಪ್ರಕೃತಿಪಾಠವೆಂಬ ಹೆಸರಿನಿಂದ ನಮ್ಮ ಮಾಧ್ಯಮಿಕ ಶಾಲೆಗಳಲ್ಲಿ ಹಲವು ವಿಷಯಗಳನ್ನು ಬೋಧಿಸುವುದುಂಟು; ನದಿ, ವನ, ಹೂ, ಗಿಡ, ಪ್ರಾಣಿ, ಮುಂತಾದ ವಿಷಯಗಳನ್ನು ಕುರಿತು ಪಾಠ ಮಾಡುವುದು ವಾಡಿಕೆಯಲ್ಲಿದೆ. ಇಂಥ ಪ್ರಕೃತಿಪಾಠಗಳು ಪ್ರಾಥಮಿಕ ಶಾಲೆಗಳಿಗೆ ತಕ್ಕವಾದರೂ ಮಾಧ್ಯಮಿಕ ಶಾಲೆಗಳಲ್ಲಿ ಹೆಚ್ಚಿನ ನಿರ್ದಿಷ್ಟತೆ ಯನ್ನು ತಾಳಬೇಕು. ಆ ವಿಷಯಗಳ ಜೊತೆಗೆ ಉದ್ಯೋಗ, ವಿಜ್ಞಾನ, ವಾಹನ, ಅಸನ, ವಸನ, ಗೃಹ ಮುಂತಾದವುಗಳ ವಿಷಯಗಳನ್ನೊಳಗೊಂಡ ಒಂದು ಪ್ರತ್ಯೇಕ ಪಠ್ಯವಸ್ತುವನ್ನು ಗೊತ್ತುಮಾಡಬೇಕು. ವಿಜ್ಞಾನಯುಗದ ಕೈವಾಡ ಮಕ್ಕಳ ಮೇಲೂ ಬೀಳುತ್ತಿರುವುದರಿಂದ ಅದಕ್ಕೆ ಸಂಬಂಧಿಸಿದ ಸಾಧಾರಣ ಜ್ಞಾನವನ್ನು ಅವರು ಈ ಅಂತಸ್ತಿನಲ್ಲಾದರೂ ಪರಿಚಯ ಮಾಡಿ ಕೊಳ್ಳಬೇಕು. ಈ ಶಾಲೆಗಳ ಕೊನೆಯಲ್ಲಿ ಪರೀಕ್ಷೆ ಇರುವುದಾದರೆ ಅದು

ಪರೀಕ್ಷಾವಸ್ತುವೂ ಆಗಬೇಕು. ಜೀವಶಾಸ್ತ್ರ, ರಸಾಯನ ಶಾಸ್ತ್ರ, ಮುಂತಾದ ವಿಭಾಗಗಳನ್ನು ಮಾಡಿ ಅದನ್ನು ಬೋಧಿಸಬೇಕಾಗಿಲ್ಲ: ಸೃಷ್ಟಿಯ ಕೆಲವು ವೈಚಿತ್ರ್ಯಗಳನ್ನೂ, ನಿಯಮಗಳನ್ನೂ, ಸನ್ನಿವೇಶಗಳನ್ನೂ, ಅವನ್ನು ಮಾನವನು ತನ್ನ ಸಮಾಜ ಸೌಖ್ಯಕ್ಕೆ ಲಾಭದಾಯಕವಾಗಿ ಉಪಯೋಗಿಸಿಕೊಳ್ಳುತ್ತಿರುವುದನ್ನೂ, ಉದ್ಯೋಗಗಳ ವೈಭವವನ್ನೂ, ಪ್ರಗತಿಯನ್ನೂ ಸೂಚಿಸತಕ್ಕ ಸುಲಭವೂ ಆಕರ್ಷಣೀಯವೂ ಆದ ಅಂಶಗಳನ್ನೂ ಪಠ್ಯವಸ್ತು ಒಳಗೊಂಡಿರಬೇಕು. ಮಾಧ್ಯಮಿಕ ಅಂತಸ್ತಿಗೇ ಶಿಕ್ಷಣವನ್ನು ಮುಗಿಸಿ ಜೀವನೋಪಾಯದಲ್ಲಿ ತೊಡಗುವವರಿಗೆ ಈ ವಿಜ್ಞಾನಯುಗದ ಪರಿಚಯ ಸ್ವಲ್ಪಮಟ್ಟಿಗಾದರೂ ಆವಶ್ಯಕ. ಅದ್ದರಿಂದ 'ಸಾಮಾನ್ಯ ವಿಜ್ಞಾನ'ಕ್ಕೆ ಪಠ್ಯವಸ್ತುವಿನಲ್ಲಿ ಸ್ಥಾನ ಕೊಡಬೇಕಾಗಿದೆ.

**೯. ಸಂಗೀತ ಮತ್ತು ಇತರ ಲಲಿತ ಕಲೆಗಳು:** ಸಂಗೀತ ಎಲ್ಲರಿಗೂ ಆವಶ್ಯಕ: ಕೇವಲ ಹೆಣ್ಣುಮಕ್ಕಳಿಗೆ ಮಾತ್ರವಲ್ಲ. ವಿರಾಮ ಕಾಲವನ್ನು ಸದ್ವಿನಿಯೋಗಪಡಿಸಿಕೊಳ್ಳುವುದಕ್ಕೂ, ಮನಸ್ಸಿನ ಚಿಂತೆಯಾತನೆಗಳನ್ನು ದೂರ ಮಾಡಿ ಆನಂದದಲ್ಲಿ ವಿಹರಿಸುವುದಕ್ಕೂ ಅದು ಬೇಕೇ ಬೇಕು. ಆದ್ದರಿಂದ ಎಲ್ಲ ಶಿಕ್ಷಣ ಶಾಲೆಗಳಲ್ಲೂ ಒಂದಲ್ಲ ಒಂದು ರೀತಿಯಲ್ಲಿ ಅದನ್ನು ಕಲಿಸುವುದು ಅಗತ್ಯ. ಹೆಣ್ಣುಮಕ್ಕಳ ಮಾಧ್ಯಮಿಕ ಶಾಲೆಯಲ್ಲಿ ಸಂಗೀತದ ಉಪಾಧ್ಯಾಯರಿರುವ ಕಡೆ ಇದನ್ನು ಬೋಧಿಸುವುದುಂಟು. ಆದರೆ ಸಾರ್ವತ್ರಿಕವಾಗಿ ಇದಕ್ಕೆಅವಕಾಶ ಮಾಡಿಲ್ಲ. ಗಂಡುಮಕ್ಕಳ ಶಾಲೆಯಲ್ಲಂತೂ ಇಲ್ಲವೇ ಇಲ್ಲ; ಸಂಗೀತ ಶಿಕ್ಷಣ ಹೆಣ್ಣುಮಕ್ಕಳಿಗೆ ಹೇಗೋ ಹಾಗೆ ಗಂಡುಮಕ್ಕಳಿಗೂ ಈ ಅಂತಸ್ತಿನಲ್ಲಿ ಆವಶ್ಯಕ. ಪದ್ಯವೊಂದನ್ನು ಓದುವಾಗ ಶಾಸ್ತ್ರೀಯವಾಗಲ್ಲದಿದ್ದರೂ ಭಾವಗಳು ಸ್ಫುಟಗೊಳ್ಳುವಂತೆ ರಾಗಮಯವಾಗಿ ಹಾಡುವುದನ್ನು ಕಲಿಸಬೇಕು. ಗಂಡುಮಕ್ಕಳ ಬಾಳು ಕಠಿಣವೂ, ನೀರಸವೂ ಆಗದಂತೆ ಮಾಡಲು ಇದು ಒಂದು ಸಾಧನ; ಅನೇಕರು ಅದನ್ನೇ ಜೀವನೋಪಾಯವನ್ನಾಗಿ ಮಾಡಿಕೊಳ್ಳಲೂಬಹುದು. ಇವೆಲ್ಲ ದೃಷ್ಟಿಯಿಂದ ಎಲ್ಲರಿಗೂ ಸಂಗೀತ ಪಾಠ ಈ ಅಂತಸ್ತಿನಲ್ಲಿ ಆವಶ್ಯಕ. ಪಕ್ಕವಾದ್ಯಗಳೊಡನೆ ಶಾಸ್ತ್ರೀಯ ರೀತಿಯಲ್ಲಿ ಸಂಗೀತ ಹೇಳಿಕೊಡಲಾಗದಿದ್ದರೂ ದೈವಭಕ್ತಿಯ ಹಾಡುಗಳನ್ನೂ ದೇಶಾಭಿಮಾನದ ಹಾಡುಗಳನ್ನೂ ರಾಗವಾಗಿ ಹಾಡುವಷ್ಟು

ಶಿಕ್ಷಣವಾದರೆ ಸಾಕು. ಪಠ್ಯವಸ್ತುವಿನಲ್ಲಿ ಅದಕ್ಕೆ ಉಚಿತ ಸ್ಥಾನಕೊಡ ಬೇಕು. ಆ ಕಾಲದ ಸುಮಾರಿಗೆ ಮಕ್ಕಳ ವಾಕ್ಪಟಲಗಳು ಸ್ಫುಟಗೊಂಡು ದನಿ ಬದಲಾಯಿಸುವುದು. ಅನಂತರ ಸಂಗೀತದ ಅಭ್ಯಾಸ ಕಷ್ಟವಾಗು ವುದು. ಆದರಿಂದ ಆ ಶಿಕ್ಷಣವನ್ನು ಈಗಲೇ ಆರಂಭಿಸುವುದು ಅಗತ್ಯ.

ಹೆಣ್ಣು ಮತ್ತು ಗಂಡುಮಕ್ಕಳ ಸೆಕೆಂಡರೀ ಶಿಕ್ಷಣ ಪ್ರತ್ಯೇಕ ಶಾಲೆಗಳಲ್ಲಿ ನಡೆಯಬೇಕೆಂದು ಹಿಂದೆ ವಾದಿಸಿದೆ. ಮಾಧ್ಯಮಿಕ ಶಿಕ್ಷಣ ಸೆಕೆಂಡರೀ ಶಿಕ್ಷಣದ ಒಂದು ಭಾಗವಾದ್ದರಿಂದ ಇಲ್ಲಿಯೂ ಪ್ರತ್ಯೇಕ ಶಿಕ್ಷಣ ಉತ್ತಮ. ಆಗ ಮಾತ್ರ ಹೆಣ್ಣುಮಕ್ಕಳಿಗೆ ನಿಜವಾಗಿಯೂ ಉಪಯುಕ್ತವೆನಿಸುವ ಪಠ್ಯ ವಸ್ತುವನ್ನು ಏರ್ಪಡಿಸಿಕೊಂಡು ಶಿಕ್ಷಣ ಕೊಡಲು ಸಾಧ್ಯ. ಅವರಲ್ಲನೇಕರು ಮಾಧ್ಯಮಿಕ ಶಿಕ್ಷಣ ಮುಗಿಸಿಕೊಂಡು ಜೀವನವನ್ನು ಆರಂಭಿಸಲಿರುವುದ ರಿಂದ ಈ ಶಿಕ್ಷಣ ಅಂಥವರಿಗೆ ಅಷ್ಟಿಷ್ಟು ನೆರವಾಗುವಂತೆ ಸಂಗೀತ, ಕಸೂತಿ, ಗೃಹಕಾರ್ಯ ನಿರ್ವಹಣ ಮುಂತಾದ ಹಲವು ವಿಷಯಗಳಲ್ಲಿ ಹೆಚ್ಚಿನ ಶಿಕ್ಷಣ ಕೊಡಲು ಅನುಕೂಲವಾಗುತ್ತದೆ.

**೧೦. ನೈತಿಕ ಮತ್ತು ಧಾರ್ಮಿಕ ಶಿಕ್ಷಣ:** ಇದನ್ನು ನಿರ್ದಿಷ್ಟ ರೂಪದಲ್ಲಿ ಪಠ್ಯವಸ್ತುವಿನಲ್ಲಿ ಸೇರಿಸುವ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಅದನ್ನು ಬೋಧಿಸುವಾಗ ತೊಡಕುಗಳು ಹುಟ್ಟುವುವೆಂದೂ ತೊಂದರೆಯ ಕೆಲಸವೆಂದೂ ಅದನ್ನು ತೆಗೆದೇ ಹಾಕುವುದು ಉಚಿತವೆಂದು ಕೆಲವರು ಹೇಳುವರು. ಆದರೆ ಧಾರ್ಮಿಕ ಸಂಸ್ಕೃತಿಯ ತವರೆನಿಸಿದ ಭರತಖಂಡದ ಶಾಲೆಗಳಲ್ಲಿ ನೈತಿಕ ಮತ್ತು ಧಾರ್ಮಿಕ ಜ್ಞಾನವನ್ನು ಬೋಧಿಸದ ಶಿಕ್ಷಣ ಅಪೂರ್ಣವಾದೀತೆಂದು ಮತ್ತೆ ಕೆಲವರು ಹೇಳುವರು. ಎರಡೂ ನಿಜ. ಭಿನ್ನಮತಗಳ ನಮ್ಮ ನಾಡಿನಲ್ಲಿ ಧಾರ್ಮಿಕ ಶಿಕ್ಷಣವನ್ನು ಕೊಡುವುದು ಕಷ್ಟ; ಬೋಧಿಸದಿರುವದಂತು ಅಕ್ಷಮ್ಯ. ಹಾಗೂ ವಿಜ್ಞಾನಯುಗ ಆರಂಭ ವಾಗಿ ಕೇವಲ ಕಾರ್ಯ-ಕಾರಣಗಳೆರಡನ್ನೇ ಪ್ರತ್ಯಕ್ಷ ಪ್ರಮಾಣಗಳೆಂದು ಒಪ್ಪಿ ಮುಂದುವರಿಯುತ್ತಿರುವ ಆಧುನಿಕ ಸಮಾಜದಲ್ಲಿ ನೈತಿಕ ಮತ್ತು ಧಾರ್ಮಿಕ ಬೋಧನೆ ಜನತೆಯಲ್ಲಿ ಶಾಂತಿ, ಸಹಕಾರ, ಸದ್ಭಾವನೆಗಳನ್ನು ಮೂಡಿಸಲು ಸಂಜೀವಿನಿಯಂತಿದೆ. ಆದರೆ ಪಠ್ಯವಸ್ತು ಉಚಿತವಲ್ಲದಿದ್ದರೆ ಅದೇ ಸಂಜೀವಿನಿ ವಿಷವಾಗಿ ಪರಿಣಮಿಸಬಹುದು. ಈ ಎರಡಂಶಗಳನ್ನೂ

ಗಮನದಲ್ಲಿರಿಸಿಕೊಂಡು ಮಾಧ್ಯಮಿಕ ಶಾಲೆಗಳಲ್ಲಿ ನೈತಿಕ ಮತ್ತು ಧಾರ್ಮಿಕ ಪಠ್ಯವಸ್ತುಗಳನ್ನು ರೂಪಿಸಬೇಕು. ಭಾರತೀಯ ಧರ್ಮದ ಕೆನೆಯಂತಿರುವ ಸಂಸ್ಕೃತಿಯನ್ನೂ, ಜಗತ್ತಿನ ಎಲ್ಲ ಧರ್ಮಗಳಿಗೂ ಆಧಾರಭೂತವಾದ ನೀತಿಗಳನ್ನೂ ತಿಳಿಸಬೇಕಾಗಿರುವುದರಿಂದ ಉಪಾಧ್ಯಾಯರ ಹೃದಯ ವೈಶಾಲ್ಯತೆಯೂ ಅವರು ಬೋಧಿಸುವ ರೀತಿಯೂ ಮುಖ್ಯವಾದವು. ಕಥಾ ಸನ್ನಿವೇಶಗಳೇ ಮಕ್ಕಳ ಮನಸ್ಸಿನಲ್ಲಿ ನೀತಿಯ ಮುದ್ರೆಯೊತ್ತುವಂತಿರಬೇಕು. 'ಅದು ಮಾಡು, ಇದು ಮಾಡು' ಎಂದು ತಿದ್ದಿ ಹಾಕುವ ಪ್ರಸಂಗ ಈ ವಯಸ್ಸಿನಲ್ಲಿ ಉಚಿತವಲ್ಲ. ಆದರೆ, ಭಿನ್ನ ಜಾತಿಗಳ ತವರಾದ ನಮ್ಮ ನಾಡಿನಲ್ಲಿ ಇದೂ ಕಷ್ಟ. ಒಂದು ಮತಕ್ಕೆ ಸಂಬಂಧಿಸಿದ ಕಥೆ ಹೇಳಿದರೆ ಇನ್ನೊಂದು ಮತದವರಿಗೆ ಆಗದು! ಆದರೆ ಮಾನವೀಯ ಗುಣಗಳಿಗೇ ಪ್ರಾಧಾನ್ಯತೆ ಕೊಟ್ಟರೆ ಎಲ್ಲ ಮತಗಳ ನೀತಿಯ ಕಥೆಗಳೂ ಒಂದೇ ರೂಪವನ್ನು ತಾಳುತ್ತವೆ. ಹಾಗೂ ಪ್ರಧಾನವಾದ ಎಲ್ಲ ಮತಗಳಿಂದಲೂ ಕೆಲ ಕೆಲವು ಗಥೆಗಳನ್ನು ಆರಿಸಿ ಸೇರಿಸುವುದು ಸೂಕ್ತವೆನಿಸುತ್ತದೆ.

ಇಂದಿನ ಸೆಕೆಂಡರೀ ಶಿಕ್ಷಣದಲ್ಲಿ ತರಗತಿಯ ಪಾಠಗಳೇ ಶಿಕ್ಷಣದ ಸರ್ವಸ್ವವೆಂದು ರೂಢಮೂಲವಾಗಿರುವ ಭಾವನೆ ಹೋಗಬೇಕು. ಇದು ಮಾಧ್ಯಮಿಕ ಶಾಲೆಗಳಲ್ಲಿ ಅಕ್ಷರಶಹ ನಿಜವೆನ್ನುವಷ್ಟು ಮಟ್ಟಿಗೆ ಬಲವಾಗಿದೆ. ತಂದೆತಾಯಿಗಳೂ ಶಿಕ್ಷಕರೂ ಶಾಲೆಯ ಸಾಂಘಿಕ ಜೀವನವೂ ಉತ್ತಮ ಶಿಕ್ಷಣ ಕೊಡಬಲ್ಲದೆಂಬುದನ್ನು ಅರಿತುಕೊಳ್ಳಬೇಕು. ಇದನ್ನು ಪಠ್ಯ ವಿಷಯದಲ್ಲಿ ಸೇರಿಸಲಾಗದಿದ್ದರೂ, ಅವುಗಳಷ್ಟೇ ಪ್ರಾಧಾನ್ಯತೆಯಿರಬೇಕು. ಶಾಲೆಯ ಚರ್ಚಾಸಂಘ, ಕ್ರೀಡಾರಂಗ, ನಾಟಕ, ಉತ್ಸವ ಮತ್ತು ಇತರ ಸಮಾರಂಭಗಳಲ್ಲಿ ಮಕ್ಕಳು ಮಾನಸಿಕ, ದೈಹಿಕ ಮತ್ತು ಸಾಮಾಜಿಕ ಸದ್ಗುಣಗಳನ್ನು ಸಾಧಿಸಿ ಉತ್ತಮ ಶಿಕ್ಷಣವನ್ನೇ ಪಡೆಯಬಲ್ಲರು. ಅಲ್ಲದೆ ಈ ಕಾಲ ಆ ಎಲ್ಲ ರೀತಿಯ ಸಾಮಾಜಿಕ ಜೀವನದ ಆರಂಭಕ್ಕೂ ಉಚಿತವಾದುದು. ಮಕ್ಕಳು ಹಾಗೆ ಸಾಮಾಜಿಕ ಜೀವನದಲ್ಲಿ ತೊಡಗಿರುವಾಗ ಶಿಕ್ಷಕರು ಎಚ್ಚರಿಕೆಯಿಂದಿದ್ದು ಅವರ ಅಭಿರುಚಿ ಆಸಕ್ತಿಗಳನ್ನು ಅರಿತುಕೊಳ್ಳಲೂ ನೆರವಾಗುತ್ತದೆ. ಆದರೆ ಇವು ಪರೀಕ್ಷೆಯ ವಿಷಯದಲ್ಲಿಲ್ಲದಿರುವುದರಿಂದ ಉಪಾಧ್ಯಾಯರೂ ಬಾಲಕರೂ ಪೋಷಕರೂ ಉಪೇಕ್ಷಿಸಿ ಬಿಡುತ್ತಿದ್ದಾರೆ. ಅದು ದೊಡ್ಡ

ನಷ್ಟ. ಪಠ್ಯವಿಷಯದಲ್ಲಿ ಅದನ್ನು ಸೇರಿಸಲಾಗದಿದ್ದರೂ ಶಾಲೆಗಳಲ್ಲಿ ಸಾಧಿಸ ಬೇಕಾದ ಇತರ ಶಿಕ್ಷಣಗಳಲ್ಲಿ ಪರೀಕ್ಷೆ ನಡಸಲು ಬರುವ ಅಧಿಕಾರಿಗಳು ಹೆಚ್ಚಿನ ಆಸಕ್ತಿ ವಹಿಸಿ ವಿಮರ್ಶಿಸುವುದಾದರೂ ಅಗತ್ಯ; ಮತ್ತು ಪರೀಕ್ಷೆಗಳ ಗುರಿಯೂ ಅದೇ ರೀತಿ ಬದಲಾವಣೆ ಹೊಂದಬೇಕು.

೧೧. **ದೈಹಿಕ ಶಿಕ್ಷಣ:** ಈಗ ಇರುವ 'ಡ್ರಿಲ್' ತರಗತಿಗಳು ಯಾರಿಗೂ ಬೇಡವಾಗಿವೆ. ಉಪಾಧ್ಯಾಯರಿಗೆ ಬೇಸರ; ಮಕ್ಕಳಿಗೆ ಬೇಕಾ ಗಿಲ್ಲ; ತಂದೆ ತಾಯಿಗಳಿಗೆ ಆ ಕಡೆ ಗಮನ ಬರುತ್ತಿಲ್ಲ. ಆ ವಯಸ್ಸಿನಲ್ಲಿ ಮಕ್ಕಳ ಮಾಂಸಖಂಡ ಬಲಗೊಳ್ಳಲು ಆರಂಭಿಸುವುದರಿಂದಲೂ, ಮಾನ ಸಿಕ ಸ್ವರೂಪ ತೀವ್ರವಾಗಿ ಬೆಳೆಯುತ್ತಿರುವುದರಿಂದಲೂ, ಅವಕ್ಕೊಪ್ಪುವ ಅಂಗಸಾಧನೆಯೇನೋ ಅಗತ್ಯ. ಆದರೆ ಡ್ರಿಲ್ಲಿನಿಂದ ಉದ್ದೇಶಿಸಿದ ಫಲ ದೊರಕುವುದು ದುರ್ಲಭವಾಗಿದೆ. ಇದಕ್ಕೆ ಹಲವಾರು ಕಾರಣಗಳೂ ಇವೆ. ಪಾಠ ಕಲಿತು ಸಾಕಾಗಿರುವ ಸಂಜೆ ಹೊತ್ತು ಅದನ್ನು ಇಟ್ಟುಕೊಂಡಿರುವುದೂ, ತಕ್ಕಷ್ಟು ಆಹಾರ ಸಲಕರಣೆ ಇಲ್ಲದಿರುವುದೂ ಅವುಗಳಲ್ಲಿ ಪ್ರಧಾನವಾದವು. ಸಮಾಜವೂ ಸರ್ಕಾರದವರೂ ಮಕ್ಕಳ ಆಹಾರದ ವಿಷಯದಲ್ಲಿ ಒಂದು ವ್ಯವಸ್ಥೆ ಮಾಡಬೇಕು. ಈಚೆಗೆ ಈ ಕಾರ್ಯ ಅಲ್ಲಲ್ಲಿ ಆರಂಭವಾಗಿದ್ದರೂ ಸಾರ್ವತ್ರಿಕವಾಗಿಯೂ ಏಕಪ್ರಕಾರವಾಗಿಯೂ ನಡೆಯಬೇಕಾಗಿದೆ. ಜೊತೆಗೆ ಡ್ರಿಲ್ಲಿನ ತರಗತಿಗಳಂತೆ, ಆಟವಾಡುವುದು, ಅಂಗಸಾಧನೆ, ಆರೋಗ್ಯಕರ ವಾದ ಆಸನ, ನೃತ್ಯ, ಅಭಿನಯ ಮುಂತಾದ ಆಕರ್ಷಣೀಯ ರೀತಿಯ ದೈಹಿಕ ಶಿಕ್ಷಣಗಳನ್ನೂ ಪಠ್ಯ ವಸ್ತುವಿನಲ್ಲಿ ಅಳವಡಿಸುವುದೂ ಉತ್ತಮ.

೧೨. **ಅಭಿರುಚಿಗಳ ಅನ್ವೇಷಣೆ:** ಮಾಧ್ಯಮಿಕ ಶಿಕ್ಷಣ ಶಾಲೆ ಮಕ್ಕಳ ಅಭಿರುಚಿ ಆಸಕ್ತಿಗಳನ್ನು ಅರಸಿ ನಿಷ್ಕರ್ಷಿಸುವ ಸ್ಥಳ. ಅವರವರ ವಿಶಿಷ್ಟ ಅಭಿರುಚಿಗಳು ಆ ಕಾಲದ ಕೊನೆಕೊನೆಗೆ ಪ್ರಕಾಶಕ್ಕೆ ಬರಲು ಆರಂಭಿಸುತ್ತವೆ. ಕೆಲವರಿಗೆ ಸಾಹಿತ್ಯ, ಚರಿತ್ರೆ, ಕಲೆ ಮತ್ತು ಇತರ ಸಾಂಸ್ಕೃತಿಕ ಶಿಕ್ಷಣದಲ್ಲಿ ಅಭಿರುಚಿಯಿದ್ದರೆ ಮತ್ತೆ ಕೆಲವರಿಗೆ ವೃತ್ತಿ ಶಿಕ್ಷಣ ದಲ್ಲಿ ಅಭಿರುಚಿಯಿರಬಹುದು. ತರಗತಿಯ ಪಾಠ ಮಾಡುವಾಗಲೂ, ಶಾಲೆಯ ಸಾಂಘಿಕ ಜೀವನದಲ್ಲಿ ಮಕ್ಕಳು ಭಾಗವಹಿಸುವಾಗಲೂ ಉಪಾಧ್ಯಾಯರು ಉದ್ದೇಶ ಪೂರ್ವಕವಾಗಿ ಅವರ ಅಭಿರುಚಿಗಳನ್ನು ಅರಸುತ್ತಿರಬೇಕು.

ಮಾಧ್ಯಮಿಕ ಶಿಕ್ಷಣ ಮುಗಿಯುವ ಹೊತ್ತಿಗೆ ಮಕ್ಕಳು ಮುಂದೆ ಯಾವ ಶಿಕ್ಷಣಕ್ಕೆ ಹೋಗಬೇಕೆಂಬುದು ನಿಷ್ಕರ್ಷೆಯಾಗಬೇಕು. ಆದರೆ ನಮ್ಮ ಮಾಧ್ಯಮಿಕ ಶಾಲೆಗಳು ಆ ಕಾರ್ಯವನ್ನು ನಿರ್ವಹಿಸುತ್ತಿಲ್ಲ. ಆ ಕಾರ್ಯ ಪ್ರೌಢಶಾಲೆಗಳಿಗೆ ಸೇರಿದ್ದೆಂದು ಶಿಕ್ಷಣಾಧಿಕಾರಿಗಳು ಅಲ್ಲಿಯ ಮೊದಲನೆಯ ವರ್ಷದಲ್ಲಿ ಐಚ್ಛಿಕ ವಿಷಯವಾವುದನ್ನೂ ಸೇರಿಸದೆ ಬಿಟ್ಟಿರುವರು. ಎಂದರೆ ಆ ಒಂದು ವರ್ಷದ ಕಾಲದಲ್ಲಿ ಕೇವಲ ಪರೀಕ್ಷೆಯಲ್ಲಿ ಪಡೆದ ಅಂಕಿಗಳನ್ನೇ ಆಧಾರವಾಗಿಟ್ಟುಕೊಂಡು ಉಪಾಧ್ಯಾಯರೂ ಮಕ್ಕಳೂ ಐಚ್ಛಿಕ ವಿಷಯವನ್ನು ಆರಿಸುವರು: ನಿಜವಾದ ಅಭಿರುಚಿ ಹುಡುಕಿ ಅವರಿಗೆ ಕೊಡಬಹುದಾದರೆ ಐಚ್ಛಿಕ ಶಿಕ್ಷಣ ಹೆಚ್ಚು ಯಶಸ್ವಿಯಾಗಬಲ್ಲದು. ಆ ಕಾರ್ಯ ಸಾಧನೆಗಾಗಿಯೇ ಅಮೆರಿಕದಲ್ಲಿ ಜೂನಿಯರ್ ಹೈಸ್ಕೂಲುಗಳಿವೆ. ಸಾರ್ಜಂಟರ ಯೋಜನೆಯಲ್ಲಿ ಈ ಅಂಶಕ್ಕೆ ಗಮನವನ್ನೇ ಕೊಟ್ಟಿಲ್ಲ. ೧೧ ನೆಯ ವರ್ಷದ ವರೆಗೆ ಪ್ರಾಥಮಿಕ ಶಿಕ್ಷಣವಾದೊಡನೆ ೧೮ ನೆಯ ವರ್ಷದ ವರೆಗೆ ಪ್ರೌಢ ಶಿಕ್ಷಣ. ಆದರೆ ಅಭಿರುಚಿಆಸಕ್ತಿಗಳು ವಿಶೇಷ ಮಾರ್ಗದಲ್ಲಿ ಬೆಳೆಯಲಾರಂಭಿಸುವುದು ೧೨-೧೩ ರ ಸುಮಾರಿಗೆ. ಎಂದಮೇಲೆ ಅಷ್ಟು ಮುಂಚಿತವಾಗಿಯೇ ಪ್ರೌಢಶಿಕ್ಷಣಕ್ಕೆ ಆರಿಸಿಕೊಂಡು ಅವರಿಗೆ ವಿಶೇಷ ಶಿಕ್ಷಣವನ್ನು ಕೊಡಲು ಯತ್ನಿಸುವುದು ಉಚಿತವಲ್ಲ. ನಮ್ಮ ಇಂದಿನ ಮಾಧ್ಯಮಿಕ ಶಾಲೆಗಳೇ ಈ ಅಭಿರುಚಿಯನ್ನು ನಿಷ್ಕರ್ಷಿಸಲು ಉಚಿತವಾದ ಅಂತಸ್ತು. ಅದಕ್ಕಾಗಿ ಹಲವಾರು ಕಸಬುಕಲೆಗಳನ್ನು ಪಠ್ಯವಸ್ತುವಿನಲ್ಲಿ ಸೇರಿಸಬಹುದು. ಹಲವು ಕಡೆ ಚಿತ್ರದ ಕೆಲಸ, ಮರಗೆಲಸ, ನೆಯ್ಗೆ, ಸಂಗೀತ, ಮುಂತಾದವು ಈಗ ಇವೆ. ಆದರೆ ಸಾರ್ವತ್ರಿಕವಾಗಿ ಏರ್ಪಟ್ಟಿಲ್ಲ. ಅಲ್ಲಿ ಇವನ್ನು ಐಚ್ಛಿಕ ವಿಷಯವನ್ನಾಗಿ ಬೋಧಿಸುತ್ತಿರುವರು. ಅವು ಪರೀಕ್ಷಿಸತಕ್ಕ ವಿಷಯಗಳೂ ಆಗಿವೆ. ಇದರೆ ವೃತ್ತಿ ಶಿಕ್ಷಣಕ್ಕಾಗಲಿ ವಿಶಿಷ್ಟ ಶಿಕ್ಷಣಕ್ಕಾಗಲಿ ಮಾಧ್ಯಮಿಕ ಶಾಲೆ ಉಚಿತವಲ್ಲ: ಮಕ್ಕಳ ಅಭಿರುಚಿಯನ್ನು ನಿಷ್ಕರ್ಷಿಸುವುದೇ ಅವುಗಳ ಬೋಧನೆಯ ಮೂಲ ಉದ್ದೇಶ. ಅದಕ್ಕಾಗಿ, ಈ ಕಸಬು, ಕೈಗಾರಿಕೆ, ಕಲೆಗಳನ್ನು ಪರೀಕ್ಷೆಯ ವಿಷಯುಗಳನ್ನಾಗಿ ಮಾಡಬೇಕಾಗಿಲ್ಲ. ಅಂದು ಮಾತ್ರ ಮಕ್ಕಳ ಅಭಿರುಚಿಯನ್ನು ಹುಡುಕಲು ಸಹಾಯವಾಗುತ್ತದೆ. ಎಲ್ಲ ಕಸಬುಕಲೆಗಳನ್ನೂ ನಾಡಿನ ಎಲ್ಲ ಮಾಧ್ಯಮಿಕ ಶಾಲೆಗಳಲ್ಲೂ ಏರ್ಪಡಿಸುವುದು

ಸಾಧ್ಯವಿಲ್ಲವೆಂಬುದು ನಿಜ. ಆದರೂ ಆಯಾ ಪ್ರದೇಶದ ಜೀವನಕ್ಕೆ ಆವಶ್ಯ ವೆನಿಸುವ, ಅಲ್ಲಿ ಪ್ರಚಾರದಲ್ಲಿರುವ ಮತ್ತು ಬೋಧಿಸಲು ಅನುಕೂಲವಿರುವ ಕಸಬು ಕಲೆಗಳನ್ನಾದರೂ ಪಠ್ಯವಸ್ತುವಿನಲ್ಲಿ ಸೇರಿಸುವ ಏರ್ಪಾಡಿರಬೇಕು. ಆ ಮೂಲಕ ಮಾಧ್ಯಮಿಕ ಶಾಲೆಯ ಶಿಕ್ಷಣ ಮುಗಿಯುವುದರೊಳಗಾಗಿ ಮಕ್ಕಳ ಅಭಿರುಚಿಯನ್ನು ಸ್ವಲ್ಪಮಟ್ಟಿಗೆ ನಿಷ್ಕರ್ಷಿಸಲು ಸಹಾಯವಾಗುತ್ತದೆ.

**ಪ್ರೌಢಶಾಲೆಗಳಲ್ಲಿ ಪಠ್ಯವಸ್ತು :** ಮಾಧ್ಯಮಿಕ ಶಾಲೆಯಲ್ಲಿ ಸಾಧಿಸಿದ ಜ್ಞಾನ ಪ್ರೌಢಶಾಲೆಯಲ್ಲಿ ಆಳವೂ ವಿಶಾಲವೂ ಆದ ಮಾರ್ಗದಲ್ಲಿ ಮುಂದುವರಿಯಬೇಕು; ಅವರವರ ಅಭಿರುಚಿಆಸಕ್ತಿಗಳಿಗೆ ತಕ್ಕ ಶಿಕ್ಷಣ ದೊರೆತು ಅವು ವೃದ್ಧಿಗೊಳ್ಳಬೇಕು; ಪ್ರೌಢಶಿಕ್ಷಣ ಮುಗಿದೊಡನೆ ಅನೇಕರು ಜೀವನವನ್ನು ಆರಂಭಿಸುವುದರಿಂದ ಅಂಥವರಿಗೆ ಜೀವನದಲ್ಲಿ ಅನುಕೂಲಿಸುವಂಥ ವೃತ್ತಿಶಿಕ್ಷಣವೂ ಆಗಬೇಕು; ಯುವಕರ ದೈಹಿಕ ಬೆಳವಣಿಗೆ ಆಗ ತೀವ್ರವಾಗಿದ್ದು ಮಾನಸಿಕ ಶಕ್ತಿಸಾಮರ್ಥ್ಯಗಳು ಭೋರ್ಗರೆಯುತ್ತಿರುವುದರಿಂದ ಅವರಿಗೆ ಉಚಿತವಾದ ದೈಹಿಕ ಶಿಕ್ಷಣವೂ ಆವಶ್ಯಕ; ಆವರ ಮನೋಭಾವ, ದೃಷ್ಟಿಧ್ಯೇಯ ಮತ್ತು ಸಂವೇದನೆಗಳು ಅತಿ ತೀಕ್ಷ್ಣಗಾಮಿಗಳಾಗಿದ್ದು ವಿಶೇಷ ಮಾರ್ಗದಲ್ಲಿ ಬೆಳೆಯಲು ಹಾತೊರೆಯುತ್ತಿರುವುದರಿಂದ ಅವನ್ನು ಉಚಿತರೀತಿಯಲ್ಲಿ ಪ್ರವಹಿಸುವಂತೆ ಮಾಡಲು ಶಾಲಾ ಸಮಾಜದಲ್ಲಿ ಸನ್ನಿವೇಶಗಳನ್ನು ಕಲ್ಪಿಸಬೇಕು; ಪ್ರಜಾಸತ್ತಾತ್ಮಕ ಜೀವನದಲ್ಲಿ ಭಾಗವಹಿಸಲು ಕಾತರಿಸುತ್ತಿರುವ ಯುವಕರಿಗೆ ಅವಶ್ಯಕವೆನಿಸುವ ಅನುಭವಗಳನ್ನು ಒದಗಿಸಲು ಶಾಲೆಯ ಸಂಘಸಂಸ್ಥೆಗಳು ರೂಪುಗೊಂಡು ಕೆಲಸಮಾಡಬೇಕು; ಆಳವಾಗಿ ವಿಷಯಗಳನ್ನು ಕಲಿತು ನೂತನ ಸಂಶೋಧನೆಗಳನ್ನು ನಡಸಬೇಕೆಂಬ ಆಸೆಯೂ ಯುವಕರಿಗಿರುವುದರಿಂದ ಪ್ರಯೋಗ ಮಂದಿರಗಳನ್ನೂ ಏರ್ಪಡಿಸಬೇಕು. ಇವೆಲ್ಲವನ್ನೂ ಗಮನದಲ್ಲಿರಿಸಿಕೊಂಡೇ ಪ್ರೌಢಶಾಲೆಗಳ ಪಠ್ಯವಸ್ತುವನ್ನು ರೂಪಿಸಬೇಕು.

**೧. ಭಾಷೆ:** ಮಾತೃಭಾಷೆಯಲ್ಲಿ ಹೆಚ್ಚಿನ ಪರಿಜ್ಞಾನವೂ ಪಾಂಡಿತ್ಯವೂ ಬರುವಂತೆ ಪಠ್ಯವಸ್ತು ರೂಪುಗೊಳ್ಳಬೇಕು. ಪ್ರಾಚೀನ ಕಾಲದ ಮಹಾಕವಿಗಳ ಕಾವ್ಯದ ಸೊಗಸು ಅವರವರ ಕೃತಿಗಳಿಂದಲೋ ಕೃತಿಯ ಭಾಗಗಳಿಂದಲೋ ಆಗುವಂತಿರಬೇಕು. ಒಬ್ಬ ಕವಿಯ ಎಲ್ಲ ಕೃತಿಗಳನ್ನೂ ಸೇರಿ

ಸುವುದಕ್ಕಿಂತ ಅನೇಕ ಕವಿಗಳ ಕೆಲಕೆಲವು ಕೃತಿಗಳನ್ನು ಸೇರಿಸುವುದು ಉತ್ತಮ. ಏಕೆಂದರೆ, ಯಾರಿಗೆ ಯಾವ ಕವಿಗಳಲ್ಲಿ ಆಸಕ್ತಿ ಹುಟ್ಟುತ್ತದೋ ಆ ಕವಿಗಳ ಸಮಗ್ರ ಕಾವ್ಯಗಳನ್ನು ಮುಂದೆ ಸ್ವತಂತ್ರವಾಗಿಯೋ ಕಾಲೇಜಿಗೆ ಸೇರಿಯೋ ಅಭ್ಯಾಸಿಸಲು ವಿದ್ಯಾರ್ಥಿಗಳಿಗೆ ಅದರಿಂದ ಸಹಾಯವಾಗುತ್ತದೆ. ಆಧುನಿಕ ಕವಿಗಳ ಕೃತಿಗಳೂ ಕಾವ್ಯಸಂಕನಲದಲ್ಲಿ ಸೇರಿರಬೇಕು. ಕೇವಲ ಕಥಾನಕಗಳೋ ವರ್ಣಕಗಳೋ ಮಾಧ್ಯಮಿಕ ಶಾಲೆಯಲ್ಲಿದ್ದರೆ, ಇಲ್ಲಿ ಭಾವ ಪ್ರಧಾನವಾದ ಕಾವ್ಯಗಳು ಬೋಧನೆಯಾಗಬೇಕು; ಅದರಿಂದ ಮಾತೃ ಭಾಷೆಯಲ್ಲಿ ಆಳವಾದ ಅಭ್ಯಾಸವಾಗಿ ಪಾಂಡಿತ್ಯವೂ ಬರಬೇಕು; ರಸಾಸ್ವಾದನೆಯಲ್ಲಿ ಹೆಚ್ಚಿನ ಅನುಭವವೂ, ಶೈಲಿಯ ಮಾಧುರ್ಯ, ಭಾವಗಳ ವೈಭವ, ಅಲಂಕಾರ ಮತ್ತು ಕಾವ್ಯದ ಇತರ ಸೊಗಸು—ಇವನ್ನೆಲ್ಲ ಅರಿತುಕೊಳ್ಳುವಂತೆಯೂ ಆಗಬೇಕು. ಭಾಷೆಯ ಪ್ರಯೋಗದ ಔಚಿತ್ಯದ ಜ್ಞಾನ ಹೆಚ್ಚಿ ವಿಮರ್ಶನ ಶಕ್ತಿ ಆರಂಭವಾಗಿ ಬೆಳೆಯಬೇಕು. ಕಾವ್ಯವನ್ನು ಅರಿತು, ಅನುಭವಿಸಿ ಆನಂದಿಸುವುದರ ಜೊತೆಗೆ ಶಾಲೆಯನ್ನು ಬಿಡುವ ಹೊತ್ತಿಗೆ ಉತ್ತಮ ಕಾವ್ಯ ಯಾವುದು ಎಂದು ವಿಮರ್ಶಿಸುವ ಶಕ್ತಿಯೂ ಬರಬೇಕು. ನಮ್ಮ ಕಾವ್ಯವಾಹಿನಿ ಆದಿಯಿಂದ ಬೆಳೆದುಕೊಂಡು ಬಂದಿರುವ ಸ್ವರೂಪವನ್ನೂ, ಅದು ಆಧುನಿಕವಾಗಿ ಪ್ರವಹಿಸುತ್ತಿರುವ ದಿಕ್ಪಥವನ್ನೂ ಸ್ಥೂಲವಾಗಿ ತೋರಿಸುವಂತೆ ಕಾವ್ಯಸಂಕಲನ ನಡೆಯಬೇಕು. ಗದ್ಯಪಾಠದಲ್ಲಿ ದೀರ್ಘವಾದ ಕಥೆ, ಕಾದಂಬರಿ, ಪ್ರಬಂಧ, ಜೀವನ ಕಥನ ಮುಂತಾದವನ್ನು ಸೇರಿಸಬೇಕು. ಅದರಿಂದ ಮಕ್ಕಳ ಮಾತನಾಡುವ, ಬರೆಯುವ ಮತ್ತು ವ್ಯಾವಹಾರಿಕ ಭಾಷಾಶಕ್ತಿ ಹೆಚ್ಚುವಂತಾಗಬೇಕು. ಪದಸಂಪತ್ತು ಹೆಚ್ಚುವ, ಜೀವನದ ಬಹುಮುಖವಾದ ಅನುಭವ ದೊರಕುವ, ರೂಕ್ಷಭಾವಗಳನ್ನು ವಿವರಿಸುವ ಶಕ್ತಿಯನ್ನು ನೀಡುವಂಥ ಗದ್ಯಭಾಗಗಳನ್ನೂ ಸೇರಿಸಬೇಕು. ದೀರ್ಘವಾದ ಒಂದು ಕಾದಂಬರಿಯನ್ನೋ, ಕಥೆಯನ್ನೋ, ಪ್ರಬಂಧವನ್ನೋ ಗೊತ್ತುಮಾಡುವಾಗಲೂ ಮೇಲಿನ ಎಲ್ಲ ಆಶಯಗಳೂ ಈಡೇರುವಂತಿರಬೇಕು. ಭಾಷೆಯ ರೂಪುರೇಷೆಯ ಪರಿಚಯವಾಗುವಂತೆ, ಆಳವಾದ ಅಭ್ಯಾಸಕ್ಕೆ ಅನುಕೂಲಿಸುವಂತೆ ವ್ಯಾಕರಣ ಪಠ್ಯವಸ್ತು ರೂಪುಗೊಂಡು ಪ್ರತ್ಯೇಕವಾಗಿ ಬೋಧನೆಯಾಗಬೇಕು. ಯಾವುದಾದರೂ ಕಾವ್ಯದಲ್ಲೋ, ಪ್ರಬಂಧ

ದಲ್ಲೋ ಇರಬಹುದಾದ ವ್ಯಾಕರಣ ದೋಷಗಳನ್ನು ಹುಡುಕಿ ತೆಗೆಯುವಷ್ಟು ಅನುಭವ ಬರಬೇಕು. ಸ್ವತಂತ್ರವಾಗಿ, ವ್ಯಾಕರಣ ಸಮ್ಮತವಾಗಿ ಲೇಖನ ಗಳನ್ನೂ ಪ್ರಬಂಧಗಳನ್ನೂ ಬರೆಯುವ ಶಕ್ತಿ ಮೂಡಬೇಕು. ವ್ಯಾಕರಣ ಜ್ಞಾನ ಭಾಷೆಯ ಮೇಲೆ ಹೆಚ್ಚಿನ ಹಿಡಿತವನ್ನು ದೊರಕಿಸಿಕೊಡಬೇಕು. ಕಾವ್ಯ ಲಕ್ಷಣ ಮತ್ತು ಛಂದಶ್ಶಾಸ್ತ್ರಗಳನ್ನೂ ಪಠ್ಯವಸ್ತುವಿನಲ್ಲಿ ಸ್ವಲ್ಪಮಟ್ಟಿಗೆ ಸೇರಿಸ ಬೇಕು. ಒಟ್ಟಿನಲ್ಲಿ ಯುವಕರು ಪ್ರೌಢಶಾಲೆಯ ಶಿಕ್ಷಣವನ್ನು ಮುಗಿಸುವ ಹೊತ್ತಿಗೆ ಭಾಷೆಯ ಮೇಲೆ ಹಿಡಿತವನ್ನು ಪಡೆದು ಗದ್ಯಪದ್ಯಗಳನ್ನು ಓದಿ ಆನಂದಿಸಿ ಅವುಗಳ ಸತ್ವವನ್ನು ತೂಗಿ ನೋಡುವ ಶಕ್ತಿಬರುವಂತೆಯೂ, ಭಾಷೆಯ ಬೆಳವಣಿಗೆಗೆ ತಮ್ಮ ವೈಯಕ್ತಿಕ ಕಾಣಿಕೆಯನ್ನು ಸಲ್ಲಿಸುವ ಶಕ್ತಿ ಯನ್ನು ಪಡೆಯುವಂತೆಯೂ ಪಠ್ಯವಿಷಯ ರಚನೆಯಾಗಬೇಕು.

ಹಿಂದಿ ಎಂದಿನಂತೆ ದ್ವಿತೀಯ ಭಾಷೆಯಾಗಿ ಮುಂದುವರಿಯಬೇಕು; ಹೆಚ್ಚಿನ ಭಾಷಾನುಭವ ಬರುವಂತೆ ವಿವಿಧ ರೀತಿಯ ಗದ್ಯಪದ್ಯ ಸಾಹಿತ್ಯ ವನ್ನು ನಿಯಮಿಸಬೇಕು. ಓದುವುದರ ಜೊತೆಗೆ ಮಾತಾಡುವುದೂ ಬರೆಯು ವುದೂ ಸಿದ್ಧಿಸಬೇಕು. ಅಖಂಡ ಭಾರತದ ಜನಜೀವನ, ಸಂಸ್ಕೃತಿ ಮತ್ತು ಮನೋಭಾವವನ್ನು ಪರಿಚಯಮಾಡಿಕೊಡುವಂತೆ ಪದ್ಯಸಂಕಲನ ಏರ್ಪಡ ಬೇಕು. ನಾಡಿನ ಅಖಂಡತ್ವವನ್ನೂ ಜನಜೀವನದ ವೈವಿಧ್ಯತೆಯನ್ನೂ ಒಳ ಗೊಂಡ ಗದ್ಯಸಾಹಿತ್ಯವನ್ನು ಗೊತ್ತುಮಾಡಬೇಕು. ರಾಷ್ಟ್ರೀಯ ಐಕ್ಯತೆಗೆ ನೆರವಾಗತಕ್ಕ ಜೀವನ ಕಥನ, ಕಥೆ, ಕಾದಂಬರಿಗಳೂ ಸೇರಿರಬೇಕು. ಮಾತೃಭಾಷೆಯ ಸಾಧಾರಣ ಕೃತಿಗಳನ್ನು ಹಿಂದಿಗೆ ಪರಿವರ್ತಿಸುವ ಅಭ್ಯಾಸ ಗಳನ್ನೂ ಸೇರಿಸಬೇಕು.

ಈ ಶಾಲೆಯಲ್ಲಿ ಮೇಲಿನ ಎರಡು ಭಾಷೆಗಳ ಜೊತೆಗೆ ಒಂದು ಆಧುನಿಕ ವ್ಯಾವಹಾರಿಕ ಪರಭಾಷೆಯನ್ನೂ ಕಲಿಸುವುದು ಅಗತ್ಯ. ನಮ್ಮ ಜನಜೀವನ ದಲ್ಲಿ ಬಲವಾಗಿ ಬೇರೂರಿ, ವಿವಿಧ ಕಾರ್ಯಗಳಿಗೆ ಉಪಯೋಗವಾಗುತ್ತಿರುವ ಇಂಗ್ಲೀಷಿಗೆ ಈ ಸ್ಥಾನ ಕಾದಿರುವುದರಲ್ಲಿ ಅನುಮಾನವೇ ಇಲ್ಲ. ಇದುತನಕ ಅದು ರಾಜಕೀಯ ಭಾಷೆಯಾಗಿದ್ದು ಹತ್ತನೆಯ ವರ್ಷದಲ್ಲೇ ಆರಂಭವಾಗು ತ್ತಿತ್ತು. ಆದರೆ ಆ ಸ್ಥಾನ ಇನ್ನು ಹಿಂದಿಗೆ ಬರಬೇಕೆಂದು ವಾದಿಸಿರುವುದರಿಂದ ಪ್ರೌಢಶಾಲೆಯಲ್ಲಿ ಮೊದಲನೆಯ ವರ್ಷದಲ್ಲಿ ಇಂಗ್ಲೀಷಿನ ಅಭ್ಯಾಸವನ್ನು

ಆರಂಭಿಸಬಹುದು. ಆಗ ಪ್ರೌಢಶಾಲೆಯಲ್ಲಿ ಮೂರು ಭಾಷೆಗಳನ್ನು ಕಲಿಯ ಬೇಕಾಗಿ ಮಕ್ಕಳ ಮಾನಸಿಕ ಶಕ್ತಿಯ ಮತ್ತು ಕಾಲದ ಬಹುಭಾಗ ಭಾಷಾ ಭ್ಯಾಸಕ್ಕೇ ವಿನಿಯೋಗವಾಗುವುದು ಸ್ಪಷ್ಟವಾಗಿ ಕಂಡುಬಂದರೂ ಆ ಸಮಸ್ಯೆ ಯನ್ನು ಇನ್ನಾವ ರೀತಿಯಲ್ಲೂ ಇತ್ಯರ್ಥಪಡಿಸುವುದು ಸಾಧ್ಯವಿಲ್ಲವಾಗಿದೆ. ಕ್ರಮಕ್ರಮವಾಗಿ ನಮ್ಮ ಜನಜೀವನದ ಮೇಲೆ ಇಂಗ್ಲೀಷಿನ ಕೈವಾಡ ಕಡಮೆ ಯಾದಂತೆ ಮಾತೃಭಾಷೆಗಳು ಬೆಳೆದು ವೃದ್ಧಿಯಾಗಿ, ಹಿಂದಿ ರಾಷ್ಟ್ರೀಯ ಸರ್ವವ್ಯಾಪಕತೆಯನ್ನು ಪಡೆದಂತೆ ಈ ಅನಿವಾರ್ಯ ಸ್ವಲ್ಪಮಟ್ಟಿಗೆ ಕಡಮೆ ಯಾಗಬಹುದು. ಆಗಲೂ ಇಂಗ್ಲೀಷಿಗೆ ಅಂತರರಾಷ್ಟ್ರೀಯ ಪ್ರಾಧಾನ್ಯತೆ ಇದ್ದೇ ಇರುವುದೆಂದು ತೋರುವುದು. ಅದಕ್ಕಾಗಿ ಹಲವರಾದರೂ ಅದನ್ನು ಅಭ್ಯಾಸಿಸಲೇ ಬೇಕಾಗುತ್ತದೆ. ಆ ದೃಷ್ಟಿಯಿಂದ ಹತ್ತಾರು ವರ್ಷಗಳನಂತರ ಇಂಗ್ಲೀಷನ್ನು ಐಚ್ಛಿಕ ಭಾಷೆಯಾಗಿ ಬೋಧಿಸಬಹುದಾದ ಸಮಸ್ಯೆಯನ್ನು ಯೋಚಿಸಬಹುದು. ಆದರೆ ಆ ವಿಷಯದಲ್ಲಿ ಈಗಲೇ ಯಾವ ತೀರ್ಮಾನಕ್ಕೂ ಬರಲು ಸಾಧ್ಯವಿಲ್ಲ. ಸದ್ಯದಲ್ಲಿ ವ್ಯವಹಾರಕ್ಕೆ ಅನುಕೂಲಿಸುವ ಭಾಷಾಶಕ್ತಿ ಬರುವಷ್ಟರ ಮಟ್ಟಿನ ಪಠ್ಯವಸ್ತುವನ್ನು ಇಂಗ್ಲೀಷಿನಲ್ಲಿ ನಿರ್ಮಿಸಿದರೆ ಸಾಕು. ಆವಶ್ಯಕವಿದ್ದವರು, ಅಭಿರುಚಿಯಿರುವವರು ಕಾಲೇಜಿನಲ್ಲಿ ಈ ಭಾಷೆಯನ್ನು ಐಚ್ಛಿಕ ವಿಷಯವಾಗಿ ತೆಗೆದುಕೊಂಡು ಹೆಚ್ಚಿನ ಪಾಂಡಿತ್ಯವನ್ನೂ ಅನುಭವ ವನ್ನೂ ಪಡೆಯಬಹುದು. ಹಲವರು, ಹಿಂದಿಯ ಜೊತೆಗೆ ಇಂಗ್ಲೀಷನ್ನೂ ಮಾಧ್ಯಮಿಕ ಶಾಲೆಯಲ್ಲೇ ಆರಂಭಿಸುವುದುತ್ತಮವೆಂದು ವಾದಿಸಬಹುದು: ಆದರೆ ಅದು ಮನಶ್ಶಾಸ್ತ್ರ ದೃಷ್ಟಿಯಿಂದ ಉಚಿತವಲ್ಲ. ಜೊತೆಗೆ, ಮಕ್ಕಳ ಮಾತೃಭಾಷೆಯೊಡನೆ ಆ ವಯಸ್ಸಿನಲ್ಲಿ ಮತ್ತೆರಡು ಭಾಷೆಗಳು ಸ್ಪರ್ಧಿಸುವಂತೆ ಮಾಡುವುದು ತುಂಬ ಅಪಾಯಕರ.

ವ್ಯವಹಾರದಲ್ಲಿಲ್ಲದಿದ್ದರೂ ಭಾರತೀಯ ಸಾಹಿತ್ಯಸಂಸ್ಕೃತಿಗಳನ್ನು ತುಂಬಿಕೊಂಡಿರುವ ಸಂಸ್ಕೃತ ಭಾಷೆಯೂ ತನಗೊಂದು ಸ್ಥಾನವನ್ನು ಈ ಅಂತಸ್ತಿನಲ್ಲಿ ಕೇಳುತ್ತಿದೆ. ಈಗಿರುವಂತೆ ಸಂಸ್ಕೃತ ಪ್ರೌಢಶಾಲೆಗಳಲ್ಲಿ ಒಂದು ಐಚ್ಛಿಕ ವಿಷಯವಾಗಿ ನಿಯಮಿತವಾಗಬಹುದು. ಆ ಭಾಷೆಯ ಸಾಹಿತ್ಯದ ಸೊಗಸನ್ನೂ, ಆ ಮೂಲಕ ಭಾರತೀಯ ಜೀವನದ ಹಿರಿಮೆ ಯನ್ನೂ ಆದರ್ಶವನ್ನೂ, ಪರಿಚಯಮಾಡಿಕೊಡುವಂಥ ಪಠ್ಯವಸ್ತುವನ್ನು ನಿಯಮಿಸಬೇಕು.

**೨. ಚರಿತ್ರೆ ಮತ್ತು ಪ್ರಜಾಧರ್ಮ:** ಈ ವಿಷಯಗಳಲ್ಲಿ ಮಾಧ್ಯಮಿಕ ಶಾಲೆಯಲ್ಲಿ ಬೋಧಿಸುವ ಪಾಠಕ್ಕಿಂತ ವಿಶಾಲವೂ ಆಳವೂ ಆದ ಪಠ್ಯವಸ್ತುವನ್ನು ನಿಯಮಿಸಬೇಕು. ಪ್ರಾಚೀನ ಇತಿಹಾಸದ ಜೊತೆಗೆ ಜಗತ್ತಿನ ಇತರ ಪ್ರಧಾನ ದೇಶಗಳ ಇತಿಹಾಸವೂ ಪರಿಚಯವಾಗಬೇಕು. ಚರಿತ್ರೆಗೂ ಪ್ರಜಾಧರ್ಮಕ್ಕೂ ತುಂಬ ಸಂಬಂಧವಿರುವುದರಿಂದ ಅದನ್ನೂ ಸೇರಿಸಬಹುದು. ಆಧುನಿಕ ಜೀವನರಂಗದಲ್ಲಿ ಪ್ರಜಾಪ್ರಭುತ್ವ ತತ್ತ್ವಗಳಿಗೆ ಇರುವ ಪುರಸ್ಕಾರ, ವ್ಯಕ್ತಿಯ ಮೂಲಭೂತ ಹಕ್ಕುಗಳು, ವ್ಯಕ್ತಿಗೂ ಸಮಾಜಕ್ಕೂ ಇರುವ ಸಂಬಂಧ, ಸತ್ಪ್ರಜಾಜೀವನಕ್ಕೆ ಆವಶ್ಯಕವಾದ ತಿಳಿವಳಿಕೆ ಮತ್ತು ದೃಷ್ಟಿಧ್ಯೇಯ, ರಾಜ್ಯಾಡಳಿತ, ಸರ್ಕಾರ, ಮತ್ತು ಅದರ ಕರ್ತವ್ಯ—ಇವೆಲ್ಲವನ್ನೂ ಸೇರಿಸಬೇಕು; ಪ್ರಜಾಸತ್ತಾತ್ಮಕ ಸಮಾಜದ ಮತ್ತು-ಸರ್ಕಾರದ ರಚನೆಯ ಪರಿಚಯವಾಗುವಂತೆಯೂ, ವ್ಯಕ್ತಿಯ, ಸಮಾಜದ, ಸರ್ಕಾರದ ಕರ್ತವ್ಯ, ಜವಾಬ್ದಾರಿ ಮತ್ತು ಹಕ್ಕುಭಾಧ್ಯತೆ—ಇವೆಲ್ಲ ಅರಿವಾಗುವಂತೆಯೂ ಪಠ್ಯವಿಷಯ ಏರ್ಪಡಬೇಕು.

**೩. ಭೂವಿವರಣೆ:** ಪ್ರಕೃತಿಧರ್ಮಗಳು, ಜನಜೀವನದ ಮೇಲೆ ಅವುಗಳ ಕೈವಾಡ, ಭೂಮಿಯ ರಚನೆ, ವಾಯುಗುಣ, ಬೆಳೆ, ಜೀವನಕ್ರಮ, ವ್ಯಾಪಾರೋದ್ಯಮಗಳು, ಉದ್ಯೋಗ, ಖನಿಜಗಳು, ಪ್ರಕೃತಿಸಂಪತ್ತು, ರಾಜಕೀಯ ಮತ್ತು ಆರ್ಥಿಕ ಸ್ಥಿತಿಗತಿಗಳು—ಈ ಎಲ್ಲ ಅಂಶಗಳಲ್ಲೂ ಆಳವಾದ ತಿಳಿವಳಿಕೆ ಬರುವಂತೆಯೂ ಜಗತ್ತಿನ ಎಲ್ಲ ಭಾಗಗಳಿಗೂ ಅನ್ವಯಿಸುವಂತೆಯೂ ಪಠ್ಯವಸ್ತುವನ್ನು ಗೊತ್ತುಮಾಡಬೇಕು. ತತ್ತ್ವನಿಯಮಗಳ ಪರಿಚಯವೂ ಅವುಗಳ ಆಧಾರದ ಮೇಲೆ ಬಗೆಬಗೆಯ ಭೌಗೋಳಿಕ ಸಮಸ್ಯೆಗಳನ್ನು ಬಿಡಿಸುವ ಶಕ್ತಿಯೂ ಬರಬೇಕು. ನಮ್ಮ ನಾಡಿನ ಜನಬಲ, ಅದಕ್ಕೆ ಬೇಕಾಗಿರುವ ಆಹಾರಾದಿ ಆವಶ್ಯಕತೆಗಳು, ಅದನ್ನೊದಗಿಸಲು ನಮ್ಮ ನಾಡು ಆರಂಭಿಸಿರುವ ಉದ್ಯಮಗಳು, ಪರದೇಶಗಳಿಂದ ಆಮದಾಗುತ್ತಿರುವ ಪದಾರ್ಥಗಳ ಪ್ರಮಾಣ, ನಮ್ಮ ನಾಡಿನ ಪ್ರಕೃತಿಸಂಪತ್ತು, ಅದನ್ನು ಸದುಪಯೋಗಿಸಿಕೊಂಡು ಸ್ವಾವಲಂಬನ ಶಕ್ತಿ ಪಡೆಯಲು ಇರುವ ಅವಕಾಶ—ಈ ಎಲ್ಲ ವಿಷಯಗಳ ಮೇಲೆಯೂ ನಿಖರವಾದ ಜ್ಞಾನ ಬರುವುದು ಆವಶ್ಯಕ. ನಮ್ಮ ಜನಜೀವನದ ಪುರೋಭಿವೃದ್ಧಿಗೂ, ನಾಡಿನ ಔದ್ಯೋಗಿಕ ಪ್ರಗತಿಗೂ

ನೆರವಾಗುವಂತೆ, ಪ್ರಕೃತಿಸಂಪತ್ತನ್ನು ಲಾಭಾದಾಯಕವಾಗಿ ಉಪಯೋಗಿಸಿ ಕೊಳ್ಳಬೇಕೆಂಬ ಉತ್ಸಾಹ ಮೂಡುವಂತೆ, ಮತ್ತು ಆವಶ್ಯಕವಾದ ಆಂಕಿ ಅಂಶಗಳ ಜ್ಞಾನ ಮಕ್ಕಳಿಗೆ ಬರುವಂತೆ ಪಠ್ಯವಸ್ತು ನಿರ್ಮಾಣವಾಗಬೇಕು.

**೪. ಗಣಿತ:** ಗಣಿತದ ತ್ರಿಮುಖಗಳಾದ ಅಂಕಗಣಿತ, ಬೀಜಗಣಿತ, ರೇಖಾಗಣಿತ— ಇವುಗಳೆಲ್ಲ ಪ್ರತ್ಯೇಕವಾಗಿ ಬೋಧನೆಯಾಗಬೇಕು. ಮಾಧ್ಯಮಿಕ ಶಾಲೆಯಲ್ಲಿ ಪರಿಚಯವಾಗಿರುವ ಅಂಕಗಣಿತದ ಬೇರೆ ಬೇರೆ ಕ್ರಮಗಳೂ, ಇನ್ನೂ ಸಂಕೀರ್ಣವಾದ ಮತ್ತು ಹೆಚ್ಚಿನ ವ್ಯಾಪ್ತಿಯುಳ್ಳ ಸಮಸ್ಯೆಗಳೂ ಸೇರಬೇಕು. ಸೂತ್ರಗಳನ್ನೂ ನಿಯಮಗಳನ್ನೂ, ಜಟಿಲ ವಾದ ಲೆಕ್ಕಗಳನ್ನು ಮಾಡಲು ಉಪಯೋಗಿಸಿಕೊಳ್ಳುವ ಅಭ್ಯಾಸವೂ ಸೇರ ಬೇಕು. ಕೇವಲ ನಿತ್ಯಜೀವನಕ್ಕೆ ಸಂಬಂಧಿಸಿದ ಸಮಸ್ಯೆಗಳ ಜೊತೆಗೆ ಉದ್ಯೋಗ, ವಾಣಿಜ್ಯ, ವಿಜ್ಞಾನ, ರಾಷ್ಟ್ರದ ಅಖಂಡ ಜನಜೀವನ—ಇವು ಗಳ ಮೇಲಣ ಲೆಕ್ಕಗಳೂ ಸಮಸ್ಯೆಗಳೂ ಪರಿಚಯವಾಗಬೇಕು. ಸಾಂಕೇ ತಿಕ ರೂಪವಾದ ಬೀಜಗಣಿತವನ್ನು ಆರಂಭಿಸಲೂ ಇದು ಉಚಿತವಾದ ಕಾಲ. ಹಾಗೆಯೇ ರೇಖಾಗಣಿತದಲ್ಲಿ ಹೆಚ್ಚಿನ ಪರಿಜ್ಞಾನವೂ ಅಭ್ಯಾಸವೂ ಆಗುವಂತೆ ಪ್ರಮೇಯಗಳನ್ನೂ ರಚನೆಗಳನ್ನೂ ಸೇರಿಸಬೇಕು. ನಾಡಿನ ಔದ್ಯೋಗಿಕ ಸಮಸ್ಯೆಗಳಿಗೆ ಸಂಬಂಧಿಸಿದ ರಚನೆ, ಯೋಜನೆ ಮುಂತಾ ದವುಗಳೂ ಇರಬೇಕು. ಒಟ್ಟಿನಲ್ಲಿ ಸಂಕೀರ್ಣವೂ, ವಿಶಾಲವೂ, ಭಾವ ಮಯವೂ ಆದ ಅಂಶಗಳು ಗಣಿತದ ಮೂರು ಭಾಗಗಳಲ್ಲೂ ಸೇರುವಂತೆ ಪಠ್ಯವಸ್ತು ರೂಪುಗೊಳ್ಳಬೇಕು.

**೫. ವಿಜ್ಞಾನ:** ಮಾಧ್ಯಮಿಕ ಶಾಲೆಯಲ್ಲಿ 'ಸಾಮಾನ್ಯ ವಿಜ್ಞಾನ' ವೆಂಬ ಹೆಸರಿನಿಂದ ವೈಜ್ಞಾನಿಕ ವಿಷಯಗಳ ಸಾಧಾರಣ ಪರಿಚಯವಾಗು ವಂತೆ ಪಠ್ಯವಸ್ತು ಇರಬೇಕಂದು ಹಿಂದೆ ವಾದಿಸಿರುತ್ತೇವೆ. ಪ್ರೌಢಶಾಲೆ ಯಲ್ಲಿ ವಿಜ್ಞಾನದ ಶಾಖೆಗಳನ್ನು ಸುವ್ಯವಸ್ಥಿತ ರೀತಿಯಲ್ಲಿ ಅಭ್ಯಾಸಿಸುವುದು ಆವಶ್ಯಕ. ನಮ್ಮ ವಿದ್ಯಾರ್ಥಿಗಳಾಗಲಿ, ಪೋಷಕರಾಗಲಿ ವಿಜ್ಞಾನವೆಂದರೆ ಭೌತಶಾಸ್ತ್ರ, ರಸಾಯನಶಾಸ್ತ್ರ—ಇವೆರಡೇ ಎಂದು ಭಾವಿಸುತ್ತಾರೆ. ಈ ಸಂಕು ಚಿತ ದೃಷ್ಟಿಯನ್ನು ನಿವಾರಿಸಲು ಪ್ರೌಢಶಾಲೆಗಳ ವಿಜ್ಞಾನದ ಪಠ್ಯವಸ್ತು

ವಿಜ್ಞಾನದ ವ್ಯಾಪ್ತಿಯನ್ನೂ, ಅದರ ಬೇರೆ ಬೇರೆ ಶಾಖೆಗಳನ್ನೂ ಸ್ಥೂಲವಾಗಿ ಯಾದರೂ ಪರಿಚಯಮಾಡಿಕೊಡುವಂತೆ ಪುನರ್ವಿಮರ್ಶಿತವಾಗಬೇಕು.

ಈ ವಯಸ್ಸಿನಲ್ಲಿ ಯುವಕರು ಕೇವಲ ಕುತೂಹಲಕ್ಕಾಗಿ ಪದಾರ್ಥ ಗಳನ್ನು ಪರಿಶೀಲಿಸುವುದರ ಬದಲು ಕಾರ್ಯಕಾರಣ ಜ್ಞಾನವನ್ನು ಪಡೆ ಯಲು ಯತ್ನಿಸುವರು. ಪ್ರಯೋಗ ನಡಸಿ ತತ್ತ್ವಗಳನ್ನೂ ನಿಯಮಗಳನ್ನೂ ನಿಜವೇ ಎಂದು ಪರಿಶೀಲಿಸುವ ಆಸೆ ಅವರಿಗೆ ತುಂಬ ಇರುತ್ತದೆ. ಯಾವ ವಿಷಯವನ್ನೇ ಆಗಲಿ, ಸಮಸ್ಯೆಯನ್ನೇ ಆಗಲಿ, ಸನ್ನಿವೇಶಗಳನ್ನೇ ಆಗಲಿ ಹಿಂದಿನಂತೆ ಪ್ರತ್ಯೇಕವಾಗಿ ಪರಿಶೀಲಿಸದೆ ಜಗತ್ತಿನ ಇನ್ನಿತರ ವಿಷಯ ಗಳೊಡನೆ ಹೋಲಿಸಿ ನೋಡಿ ಸಂಬಂಧ ಕಲ್ಪಿಸಲು ಯತ್ನಿಸುವರು. ಆದ ರಿಂದ ಅವರ ಈ ಮಾನಸಿಕ ವ್ಯಾಪಾರಗಳಿಗೆ ಅನುಕೂಲಿಸುವಂತೆ ಸುವ್ಯವ ಸ್ಥಿತವೂ ಆಳವೂ ಆದ ಪಠ್ಯವಸ್ತುವನ್ನು ನಿಯಮಿಸಬೇಕು.

ವಿಜ್ಞಾನವೆಂದರೆ ಕಪ್ಪೆ, ಜಿರಲೆಗಳ ಕೈಕಾಲುಗಳನ್ನು ಕೀಳುವುದೋ, ಪ್ರನಾಳದಲ್ಲಿ ದ್ರವಗಳನ್ನು ಸುರಿದು ಬಣ್ಣ ಬರಿಸುವುದೋ, ಇಲ್ಲ ಕಿವಿ ಚಿಟ್ಟೆನ್ನುವಂತೆ ಸ್ಫೋಟಕವನ್ನು ಹಾರಿಸುವುದೋ ಇರಬೇಕೆಂಬ ಭಾವನೆ ಹಲವರಲ್ಲಿ ಬೇರೂರಿಬಿಟ್ಟಿದೆ. ಅದಕ್ಕೆ ವಿಜ್ಞಾನದ ಈ ದಿನದ ಪಠ್ಯವಸ್ತು ವಿನ ಸ್ವರೂಪವೇ ಕಾರಣವೆನ್ನಬೇಕು; ಅಲ್ಲದೆ, ವಿಜ್ಞಾನವೆಂದರೆ ಆರ್ಷೇಯ ವಾಗಿ ಬಂದಿರುವ, ಧಾರ್ಮಿಕ, ನೈತಿಕ ಮತ್ತು ದೈವಿಕ ಭಾವನೆಗಳನ್ನು ಒಪ್ಪದ ನಾಸ್ತಿಕಜ್ಞಾನವೆಂಬ ಭಾವನೆಯೂ ಹುಟ್ಟಿಕೊಂಡಿದೆ. ಇವೆಲ್ಲ ಹೋಗಬೇಕಾದರೆ ನಮ್ಮ ಪಠ್ಯವಿಷಯದಲ್ಲಿ ವಿಜ್ಞಾನದ ಅರ್ಥ, ವಿಜ್ಞಾನದ ದೃಷ್ಟಿ, ಅದರ ಬೆಳವಣಿಗೆ ಮತ್ತು ವಿಜ್ಞಾನಿಗಳ ಜೀವನ ಕಥನ—ಇವನ್ನೆಲ್ಲ ಸೇರಿಸಬೇಕು. ಜೊತೆಗೆ, ವಿಜ್ಞಾನದಿಂದ ಮಾನವನಿಗಾಗುತ್ತಿರುವ ಸಹಾಯ, ವಿಜ್ಞಾನ ಸಂಸ್ಕೃತಿಯ ಆಧ್ಯಾತ್ಮಿಕ ದೃಷ್ಟಿ—ಇವನ್ನೂ ಸ್ಥೂಲವಾಗಿ ಬೋಧಿಸ ಬೇಕು. 'ಮಾನವನ ಪ್ರತಿಭೆಯ ಫಲವಾಗಿ ಬೆಳೆದು, ಜೀವನಕ್ಕೆ ಅನ್ವ ಯಿಸಿ, ಅದನ್ನು ಸುಖಮಯವಾಗಿರಿಸುವ, ಜಗತ್ತಿನಲ್ಲಿ ಸತ್ಯವನ್ನು ನಂಬಿ ಅದನ್ನು ದೈವಸಮಾನವೆಂದು ಆರಾಧಿಸುವ, ಸೃಷ್ಟಿಯ ಸೌಂದರ್ಯವನ್ನು ಹೆಚ್ಚಿಸಿ, ಮಾನವಜನಾಂಗದ ಮಾನಸಿಕ ಸಂಸ್ಕರಣಕ್ಕೂ ಪುರೋಭಿ ವೃದ್ಧಿಗೂ ನೆರವಾಗುತ್ತಿರುವ ನೂತನ ಸಂಸ್ಕೃತಿ ವಿಜ್ಞಾನ' ಎಂಬ ಭಾವನೆ

ಅವರಿಗೆ ಬರಬೇಕು; ವಿಜ್ಞಾನದೃಷ್ಟಿ ಉಪಯುಕ್ತವಾದ ಒಂದು ತತ್ವದೃಷ್ಟಿ ಯೆಂದೂ, ಅದರ ಆಧಾರದ ಮೇಲೆ ವಿವೇಚಿಸಿದಾಗ ನಮ್ಮ ಸಮಾಜದ ಅನೇಕ ಕಲುಷಿತ ಸಂಪ್ರದಾಯಗಳೂ ಮೂಢ ನಂಬಿಕೆಗಳೂ ಮಾಯವಾಗು ವುವೆಂಬುದೂ ಅವರಿಗೆ ಪರಿಚಯವಾಗಬೇಕು; ಸೃಷ್ಟಿಯ ವೈಚಿತ್ರ್ಯವನ್ನು ಸತ್ಯದೃಷ್ಟಿಯಿಂದ ಹುಡುಕಿ ಪರಮಾತ್ಮನ ಕೃತಿಗಳ ಸೊಬಗನ್ನೂ ಅವುಗಳಿ ಗಿರುವ ಸಂಬಂಧವನ್ನೂ ಅರಿತು ಅವನ ಮಹೋನ್ನತ ಕೌಶಲವನ್ನು ದರ್ಶಿ ಸಲು ಅದೂ ಒಂದು ಮಾರ್ಗವೆಂದು ಬಾಲಕರು ತಿಳಿಯಬೇಕು; ಆಧು ನಿಕ ಜೀವನದಲ್ಲಿ ವಿಜ್ಞಾನದ ಕೈವಾಡವೂ, ಮಾನವನ ನಾಗರಿಕತೆಗೆ ಅದು ನೀಡಿರುವ ಪ್ರಚೋದನೆಯೂ, ಹಿಂದೆಂದೂ ಇಲ್ಲದಷ್ಟು ಅನ್ಯೋನ್ಯತೆ ಯಿಂದ ಇಂದು ಮಾನವ ಜನಾಂಗ ಮಿಳಿತು, ರೂಪುಗೊಳ್ಳುತ್ತಿರುವ ನೂತನ ಬಾಂಧವ್ಯವನ್ನೂ ಅವರ ಗಮನಕ್ಕೆ ತರಬೇಕು. ಆ ರೀತಿಯ ಪಠ್ಯವಸ್ತು ರೂಪುಗೊಂಡರೆ ನಮ್ಮ ಜನತೆಯಲ್ಲಿ ವಿಜ್ಞಾನದೃಷ್ಟಿಗೆ ತಕ್ಕಷ್ಟು ಪುರಸ್ಕಾರ ದೊರೆತೀತು. ತರಗತಿಯಲ್ಲಿ ಅರಿತ ವಿಜ್ಞಾನದ ವಿಷಯವೂ, ವಿಜ್ಞಾನದೃಷ್ಟಿಯೂ ನಿತ್ಯಜೀವನದಲ್ಲಿ ಉಪಯೋಗವಾಗಬಲ್ಲವು, ವಿಜ್ಞಾ ನವೂ ಸತ್ಯಶೋಧನೆಯ ಮಾರ್ಗವಾದ್ದರಿಂದ ಅದು ಮಾನವನ ಎಲ್ಲ ಜ್ಞಾನಕ್ಕೂ ಅನ್ವಯಿಸಬಹುದಾದ ಮಹಾಮಂತ್ರ ಎಂಬ ಅರಿವು ಮೂಡು ವಂತೆ ಪಠ್ಯವಸ್ತು ರಚನೆಯಾಗಬೇಕು. ಆ ತಳಹದಿಯ ಮೇಲೆಯೇ ಜೀವ ಶಾಸ್ತ್ರ, ಭೌತಶಾಸ್ತ್ರ, ರಸಾಯನಶಾಸ್ತ್ರಗಳನ್ನು ಅಭ್ಯಾಸಿಸುವ ಅವಕಾಶವಿರ ಬೇಕು.

ಮಿಕ್ಕೆಲ್ಲ ಪ್ರಾಣಿಗಳಂತೆ ಮಾನವನೂ ಒಂದು ಉನ್ನತ ಜೀವಿ ಎಂಬ ದೃಷ್ಟಿಯಿಂದ ಪ್ರಾಣಿಗಳ ವಿಜ್ಞಾನವನ್ನು ಬೋಧಿಸುವಾಗ ಮಕ್ಕಳು ಹೆಚ್ಚಿನ ಆಸಕ್ತಿಯಿಂದ ಅದನ್ನು ಅಭ್ಯಾಸಿಸುವರು; ಸಸ್ಯಗಳೂ ಪ್ರಾಣಿಗಳಂತೆ ಜೀವಿ ಗಳೇ ಎಂಬಂಶ ಅವರ ಗಮನಕ್ಕೆ ಬರುವಂತೆ ಪಠ್ಯವಸ್ತುವನ್ನು ಗುಂಪಿಸಿ ಇಡೀ ಜೀವಲೋಕವೇ ಬಾಂಧವ್ಯವುಳ್ಳದ್ದೆಂಬ ಅಂಶ ಅವರ ಗಮನಕ್ಕೆ ಬರುವಂತೆ ಮಾಡಬೇಕು. ಪ್ರೌಢಶಾಲೆಗಳಲ್ಲಿ ಆರೋಗ್ಯಕ್ಕೆ ಪ್ರತ್ಯೇಕ ಪಠ್ಯವಸ್ತುವಿರಬೇಕಾಗಿಲ್ಲ; ಜೀವಶಾಸ್ತ್ರವನ್ನು ಬೋಧಿಸುವಾಗಲೇ ಆರೋಗ್ಯ ಜೀವನಕ್ಕೆ ಸಂಬಂಧಿಸಿದ ಎಲ್ಲ ಸಮಸ್ಯೆಗಳನ್ನೂ, ಜ್ಞಾನವನ್ನೂ, ಅಭ್ಯಾಸ

ವನ್ನೂ ತಿಳಿಸಲು ಅನುಕೂಲಿಸುವಂತೆ ಪಠ್ಯವಸ್ತು ರೂಪುಗೊಳ್ಳಬೇಕು. ಮಾನವನ ಶಾರೀರಶಾಸ್ತ್ರವನ್ನು ಬೋಧಿಸುವಾಗ ಸೃಷ್ಟಿ ಅಷ್ಟೊಂದು ಕೌಶಲದಿಂದ ರಚಿಸಿರುವ ನಮ್ಮ ಅಂಗಗಳನ್ನು ಉಚಿತವರಿತು ಎಚ್ಚರಿಕೆಯಿಂದ ಬಳಸಬೇಕೆಂಬ ಜ್ಞಾನ ಬರಬೇಕು. ಸೃಷ್ಟಿ ಮಾನವನಂಥ ಮಹೋನ್ನತ ಪ್ರಾಣಿಯನ್ನು ರಚಿಸಿ ಅವನ ಆನಂದ ವಿಹಾರಗಳಿಗಾಗಿ ಇನ್ನಿತರ ಸಚೇತನ ಜಗತ್ತು ಇರುವುದನ್ನು ಸ್ಪಷ್ಟಪಡಿಸಿದರೆ ಯುವಕರಲ್ಲಿ ಪ್ರಾಣಿದಯೆ, ಆದ್ಯಾತ್ಮಿಕದೃಷ್ಟಿ ಮತ್ತು ರಸಜೀವನ ಅಂಕುರಿಸುವುವು. ಪದಾರ್ಥಗಳನ್ನು ಪರೀಕ್ಷಿಸಿ ಸತ್ಯದರ್ಶನ ಮಾಡಿಕೊಳ್ಳುವಾಗ ಅವರ ಪರಿಶೀಲನಶಕ್ತಿ, ಕಲ್ಪನೆ, ವಿವೇಚನೆ, ಕಾರ್ಯಕಾರಣ ಜ್ಞಾನ ಮತ್ತು ಇತರ ಮಾನಸ ಶಕ್ತಿಗಳು ಸ್ಫುಟಗೊಳ್ಳುವುವು; ಪಠ್ಯವಸ್ತುವಿನಲ್ಲಿ ಪ್ರತ್ಯಕ್ಷ ಪರಿಶೀಲನೆಗೂ, ಪ್ರಯೋಗಗಳಿಗೂ ತಕ್ಕಷ್ಟು ಅವಕಾಶ ಕಲ್ಪಿಸಿರಬೇಕು: ಭೌತಶಾಸ್ತ್ರ, ರಸಾಯನಶಾಸ್ತ್ರಗಳ ಪ್ರಯೋಗಗಳನ್ನು ಸೇರಿಸಿರುವಂತೆ ಜೀವಶಾಸ್ತ್ರದ ಪ್ರಯೋಗಗಳಿಗೂ ಅವಕಾಶ ಕಲ್ಪಿಸುವುದು ಆವಶ್ಯಕ. ಸಸ್ಯ ಮತ್ತು ಪ್ರಾಣಿವರ್ಗಗಳನ್ನು ಪ್ರತ್ಯಕ್ಷ ಪರಿಶೀಲಿಸಿ, ತರಗತಿಯಲ್ಲಿ ಕಲಿತ ಜ್ಞಾನವನ್ನು ದೃಢಪಡಿಸಿಕೊಂಡು, ಜೀವಪ್ರಪಂಚದ ವೈಚಿತ್ರ್ಯವನ್ನು ಅನುಭವಿಸಿ ಆನಂದಿಸಿ ಸೌಂದರ್ಯೋಪಾಸಕರಾಗಲು ನೆರವಾಗುವ ಪ್ರವಾಸಗಳಿಗೂ ಅದರಲ್ಲಿ ಸ್ಥಾನಕಲ್ಪನೆಯಾಗಬೇಕು. ಸಸ್ಯಗಳ ಮತ್ತು ಪ್ರಾಣಿಗಳ ಶಾರೀರ ಶಾಸ್ತ್ರದ ಸುವ್ಯವಸ್ಥಿತವಾದ ಅಭ್ಯಾಸ, ಅವುಗಳ ಜೀವನಕ್ರಮ, ಸಂತಾನ ವೃದ್ಧಿ—ಇವನ್ನೆಲ್ಲ ಪ್ರತ್ಯೇಕವಾಗಿ ಅಭ್ಯಾಸಿಸಿದರೂ ಎಲ್ಲ ಜೀವವರ್ಗಗಳೂ ಸಂಬಂಧವುಳ್ಳವೇ ಎಂಬ ಐತಿಹಾಸಿಕ ದೃಷ್ಟಿಯನ್ನೂ ಮಕ್ಕಳ ಮನಸ್ಸಿನಲ್ಲಿ ಸ್ಪಷ್ಟಪಡಿಸಲು ಪಠ್ಯವಿಷಯ ನೆರವಾಗಬೇಕು. ಎಲ್ಲ ಜೀವಿಗಳಿಗೂ ಅಧಾರವಾದ ಹಲವು ತತ್ತ್ವನಿಯಮಗಳ ಪರಿಚಯವನ್ನೂ ಮಾಡಿಕೊಡಲು ಯತ್ನಿಸಬೇಕು. ಆ ಮೂಲಕ ಮಾನವನ ದೈಹಿಕ, ಮಾನಸಿಕ ಮತ್ತು ಆಧ್ಯಾತ್ಮಿಕ ಶಿಕ್ಷಣವಾಗಿ, ಆ ಜ್ಞಾನ ಜನಜೀವನವನ್ನು ಉತ್ತಮಪಡಿಸಲು ಅನುಕೂಲ ಕಲ್ಪನೆಯಾಗಬೇಕು.

ಭೌತಶಾಸ್ತ್ರ, ರಸಾಯನಶಾಸ್ತ್ರಗಳನ್ನು ಪ್ರೌಢಶಾಲೆಯಲ್ಲಿ ಬೋಧಿಸಲಾಗುತ್ತಿದೆ. ಆದರೆ ಯಾಂತ್ರಿಕವಾಗಿ ಕೆಲವು ಪ್ರಯೋಗಗಳನ್ನು ನಡಸು

ವುದು, ಸೂತ್ರನಿಯಮಗಳನ್ನು ಅರಿಯುವುದು ಇವಿಷ್ಟರಲ್ಲೇ ಅದು ಪರ್ಯಾವಸಾನವಾಗುತ್ತಿದೆ. ಅದರಿಂದ ನಿತ್ಯಜೀವನಕ್ಕೂ ಸಮಾಜಾಭಿವೃದ್ಧಿಗೂ ತಕ್ಕಷ್ಟು ಪ್ರಚೋದನೆಯಾಗುತ್ತಿಲ್ಲ. ಇದಕ್ಕೆ ಇಂದಿನ ಪಠ್ಯವಿಷಯದ ಸ್ವರೂಪವೂ ಸ್ವಲ್ಪಮಟ್ಟಿಗೆ ಕಾರಣವೆನ್ನಬೇಕು. ಯಾವ ಪಾಠವನ್ನೇ ಮಾಡಲಿ,ಅದರ ಜ್ಞಾನ ಮತ್ತು ಪರಿಚಯ ನಾಡಿನ ವ್ಯವಸಾಯ,ಉದ್ಯೋಗ, ವ್ಯಾಪಾರಗಳಿಗೆ ಸಂಬಂಧಿಸಿದಂತೆ ಬೋಧಿಸುವುದರಿಂದ ಅದರಲ್ಲಿ ಹೆಚ್ಚಿನ ಆಸಕ್ತಿಯೂ ಆಕರ್ಷಣೆಯೂ ಹುಟ್ಟುತ್ತದೆ. ನಿಯಮಗಳ, ಸೂತ್ರಗಳ, ತತ್ವಸಿದ್ಧಾಂತಗಳ ಪರಿಚಯ ಆವಶ್ಯಕವಾದರೂ ಅವುಗಳ ಬೆಳಕಿನಲ್ಲಿ ಸಾಮಾಜಿಕ, ಔದ್ಯೋಗಿಕ, ವ್ಯವಸಾಯಿಕ ಸಮಸ್ಯೆಗಳನ್ನು ಬಿಡಿಸಲು ಯತ್ನಿಸುವುದು ಅಂತಿಮ ಉದ್ದೇಶ. ಪಠ್ಯವಸ್ತುವನ್ನು ನಿರ್ಮಿಸುವಾಗ ನಮ್ಮ ನಾಡಿನ ಖನಿಜ ಸಂಪತ್ತು, ಜಲಪಾತಗಳ ಶಕ್ತಿ, ಜಲಾಶಯ, ವ್ಯವಸಾಯಕ್ಕೆ ಯೋಗ್ಯವೆನಿಸುವ ಪ್ರದೇಶ ವೈಶಾಲ್ಯ–ಇವುಗಳನ್ನು ಲಾಭದಾಯಕವಾಗಿ ಉಪಯೋಗಿಸಿಕೊಂಡು ಜನಾಂಗದ ಪುರೋಭಿವೃದ್ಧಿಗೆ ಆ ಜ್ಞಾನ ನೆರವಾಗುವಂತೆ ನಿರ್ದಿಷ್ಟರೀತಿಯಲ್ಲಿ ಪಠ್ಯವಿಷಯ ರೂಪುಗೊಳ್ಳಬೇಕು; ಆ ಮೂಲಕ ನಾಡಿನ ಉದ್ಯೋಗ ಕ್ಷೇತ್ರದಲ್ಲಿ ನೆರವಾಗಬೇಕೆಂಬ ಬಯಕೆ ಅವರಲ್ಲಿ ಬೇರೂರಿ ಬೆಳೆಯುವಂತಾಗಬೇಕು; ಯಾವ ವಿಜ್ಞಾನ ಪಾಠ ಕಲಿತರೂ ನೂತನ ಶೋಧನೆಗಳ ಕಡೆಗೂ ಗಮನ ಬರುವಂತೆ ಮಾಡಲು ಹೊಸ ಸಮಸ್ಯೆಗಳನ್ನು ಪಠ್ಯವಸ್ತು ಅವರ ಮುಂದಿಡುವಂತಿರಬೇಕು. ಎಲ್ಲ ವಿಜ್ಞಾನ ಪಾಠಗಳಲ್ಲೂ ನಿತ್ಯಜೀವನಕ್ಕೆ ನೆರವಾಗುವ ಅಂಶ ಸ್ಪಷ್ಟಪಡುವಂತಿದ್ದರೆ, ವಿಜ್ಞಾನಕ್ಕೂ ಜನಜೀವನಕ್ಕೂ ಇರುವ ನಿಕಟ ಸಂಬಂಧ ಅವರ ಮನಸ್ಸಿನಲ್ಲಿ ಕಲ್ಪನೆಯಾಗುತ್ತದೆ; ಜೀವನದ ಪ್ರಗತಿಗಾಗಿ ನೂತನ ಶೋಧನೆಗಳ ಕಡೆಗೂ ಗಮನಕೊಡಲು ಅವಕಾಶವಾಗುತ್ತದೆ.

ಈ ವಯಸ್ಸಿನಲ್ಲಿ ಯುವಕರು ಸ್ವತಂತ್ರವಾಗಿ ವಿಷಯಗಳನ್ನು ಪರಿಶೀಲಿಸಿ ತಿಳಿಯಲಾಶಿಸುವುದರಿಂದ ತರಗತಿಯ ಶೋಧನೆಯಂತೆ ಪ್ರಯೋಗ ಶಿಕ್ಷಣವೂ ಅಗತ್ಯ. ಪ್ರೌಢಶಾಲೆಯ ವಿದ್ಯಾರ್ಥಿಗಳೆಲ್ಲ ನೂತನ ಸಂಶೋಧನೆಗಳನ್ನು ನಡಸುವರೆಂದು ಯಾರೂ ಆಶಿಸುವುದಿಲ್ಲವಾದರೂ, ಕಲಿತದ್ದನ್ನು ದೃಢಪಡಿಸಿಕೊಳ್ಳುವುದೂ ಸಂಶೋಧನೆಯ ಮಾರ್ಗವನ್ನು ಅರಿತುಕೊಳ್ಳು

ವುದೂ ಅದರಿಂದ ಸಾಧ್ಯವಾಗುತ್ತವೆ. ಜೊತೆಗೆ ಸಹನೆ, ಪರಿಶೀಲನೆ, ಹೋಲಿಕೆ, ಯೋಚನೆ, ತತ್ತ್ವನಿರೂಪಣೆ ಮುಂತಾದ ಶಕ್ತಿಗಳು ಸ್ಫುರಿಸುವುವು. ಕಾರ್ಖಾನೆಗಳಿಗೂ ಅವರನ್ನು ಕರೆದುಕೊಂಡು ಹೋಗಿ ವಿಜ್ಞಾನ ಅಲ್ಲಿ ಹೇಗೆ ಮಾನವನ ಅನುಕೂಲತೆಗೆ ನೆರವಾಗುತ್ತಿದೆಯೆಂಬುದನ್ನು ತೋರಿಸಲು ಪಠ್ಯವಸ್ತು ಅವಕಾಶ ಕಲ್ಪಿಸಬೇಕು.

**೬. ನೈತಿಕ ಶಿಕ್ಷಣ :** ಈ ವಿಷಯದಲ್ಲಿ ಮಾಧ್ಯಮಿಕ ಶಾಲೆಯಲ್ಲಿನ ತೊಡಕು ಇಲ್ಲಿಯೂ ಕಂಡುಬರುತ್ತದೆ. ಅಲ್ಲಿ ಸೂಚಿಸಿರುವ ಎಚ್ಚರಿಕೆ ಇಲ್ಲೂ ಆವಶ್ಯಕ. ಆದರೆ ಕೇವಲ ಕಥೆಗಳ ಮೂಲಕ ನೈತಿಕ ಶಿಕ್ಷಣಕ್ಕೆ ತೊಡಗುವುದರ ಬದಲು ಭಾವಪ್ರದವಾದ ಧಾರ್ಮಿಕ ತತ್ತ್ವಗಳ ಮೂಲಕ ಈಗ ಶಿಕ್ಷಣವೀಯಬಹುದು; ಅದಕ್ಕೊಪ್ಪುವಂತೆ ಪಠ್ಯವಸ್ತುವನ್ನು ರೂಪಿಸಬೇಕು. ಮತಧರ್ಮ ಶಿಕ್ಷಣಕ್ಕೂ ಇದು ಉಚಿತವಾದ ಕಾಲ; ಗಹನವಾದ ವಿಷಯಗಳನ್ನು ಗ್ರಹಿಸುವ ಶಕ್ತಿ ಯುವಕರಿಗೆ ಬಂದಿರುತ್ತದೆ. ಜನಾಂಗದ ಪ್ರಧಾನ ಧಾರ್ಮಿಕ ತತ್ತ್ವಗಳನ್ನೂ ದೃಷ್ಟಿಧ್ಯೇಯಗಳನ್ನೂ ಪಠ್ಯವಸ್ತು ಅಳವಡಿಸಿಕೊಂಡಿರಬೇಕು. ಸಮಾಜದ ಮುಂದಾಳುಗಳ, ಧಾರ್ಮಿಕ ಮತ್ತು ಆಧ್ಯಾತ್ಮಿಕ ಮಹಾಪುರುಷರ ಆದರ್ಶದಲ್ಲಿ ಯುವಕರಿಗೆ ಪೂಜ್ಯತೆಯೂ ಆಸಕ್ತಿಯೂ ಇರುವುದರಿಂದ ಅವರ ಜೀವನಕಥನಗಳೂ ತತ್ತ್ವದೃಷ್ಟಿಗಳೂ ಪಠ್ಯವಸ್ತುವಿನಲ್ಲಿ ಅಳವಡಬೇಕು. ಪ್ರತ್ಯೇಕ ತರಗತಿಗಳ ಮೂಲಕ ಈ ಕಾರ್ಯವನ್ನು ಸಾಧಿಸಲಾಗದಿದ್ದರೂ ಅವಕಾಶ ದೊರೆತಾಗೆಲ್ಲ ಆ ಪಠ್ಯವಿಷಯವನ್ನು ಬೋಧಿಸುವಂತಿರಬೇಕು.

**೭. ದೈಹಿಕಶಿಕ್ಷಣ :** ಪ್ರೌಢಶಿಕ್ಷಣದ ಕಾಲ ಮಕ್ಕಳ ದೈಹಿಕ ಸಂಪತ್ತು ಉತ್ತುಂಗ ಶಿಖರವೇರಬೇಕಾದ ಸಮಯವಾದರೂ ಶಾಲೆಗಳಿಂದ ಹೊರಬೀಳುವ ನಮ್ಮ ಯುವಕರನೇಕರು ನಿರ್ವೀರ್ಯರಾಗಿಯೂ ದುರ್ಬಲರಾಗಿಯೂ ಇರುವುದನ್ನು ನೋಡಿದರೆ ಅಲ್ಲಿನ ದೈಹಿಕ ಶಿಕ್ಷಣದ ಅವ್ಯವಸ್ಥೆ ಸ್ಪಷ್ಟಪಡುತ್ತದೆ. ಆಟಗಳು, ಡ್ರಿಲ್–ಇವೆರಡನ್ನು ಬಿಟ್ಟರೆ ಮತ್ತಾವ ದೈಹಿಕ ಶಿಕ್ಷಣವೂ ಕ್ರಮವಾಗಿ ಇಂದು ನಡೆಯುತ್ತಿಲ್ಲ. ಈ ನ್ಯೂನತೆಗೆ ಮಾಧ್ಯಮಿಕ ಶಾಲೆಯಲ್ಲಿ ವಿವರಿಸಿದ ಕಾರಣಗಳನ್ನೇ ಇಲ್ಲೂ ಕೊಡಬಹುದಾದರೂ ಹೆಚ್ಚಿನ ವೈವಿಧ್ಯತೆಯನ್ನು ಕಲ್ಪಿಸುವುದರಿಂದ ಅದು ಫಲಕಾರಿಯಾಗಬಹುದು.

ಕೋಲಾಟ, ನೃತ್ಯ, ಗರಡಿ, ಸಾಮು, ಇತರ ಅಂಗಸಾಧನೆ—ಇವುಗಳ ಶಿಕ್ಷಣ ವನ್ನೂ ಸೇರಿಸಬೇಕು. ಆಟಗಳಿಗೂ ಡ್ರಿಲ್ ತರಗತಿಗೂ ಕಡ್ಡಾಯವಾಗಿ ಎಲ್ಲರೂ ಬರುವಂತೆ ನಿಯಮಗಳನ್ನು ಮಾಡಿ ಆಚರಣೆಗೆ ತರಬೇಕು.

ಭಾರತ ಸ್ವತಂತ್ರವಾದ ಮೇಲೆ ನಾಡಿನ ಯುವಕರಿಗೆ ಸೈನ್ಯ ಶಿಕ್ಷಣ ಕೊಡಬೇಕೆಂಬ ಕೂಗು ಕೇಳಿಬರುತ್ತಿದೆ. ದಕ್ಷಿಣ ಏಷ್ಯದ ಭದ್ರತೆಗೆ ಬಲ ಯುತವಾದ ಭಾರತೀಯ ಸೇನೆ ಆವಶ್ಯಕ. ಆ ಮೂಲಕ ನಾಡಿನ ಮತ್ತು ಜಗತ್ತಿನ ಶಾಂತಿಯನ್ನು ಕಾಪಾಡಿಕೊಂಡು ಬದಬಹುದು; ನೂತನವಾಗಿ ದೊರಕಿರುವ ನಮ್ಮ ಸ್ವಾತಂತ್ರ್ಯವನ್ನೂ ಉಳಿಸಿಕೊಳ್ಳಬಹುದು. ಈ ದೃಷ್ಟಿ ಗಳಲ್ಲಿ ನೋಡುವುದಾದರೆ ಸೈನ್ಯಶಿಕ್ಷಣ ನಮ್ಮ ಯುವಕರಿಗೆ ಅನಿವಾರ್ಯ; ಈಗ ಕಾಲೇಜಿನ ವಿದ್ಯಾರ್ಥಿಗಳಿಗೆ ಸ್ವಲ್ಪಮಟ್ಟಿಗೆ ಈ ಸೌಲಭ್ಯ ಏರ್ಪಟ್ಟಿದೆ. ಪ್ರೌಢಶಾಲೆಯ ಬಾಲಕರಿಗೂ ಅದು ಆವಶ್ಯಕವೆಂಬುದು ನಮ್ಮ ಭಾವನೆ. ಆಗ ಮಕ್ಕಳಿಗೆ ದೈಹಿಕ ಶಿಕ್ಷಣವೂ ಆಗುತ್ತದೆ; ನಾಡಿಗೆ ಸುಶಿಕ್ಷಿತ ಜನ ತೆಯ ಬಾಹುಬಲದ ರಕ್ಷಣೆಯೂ ದೊರಕುತ್ತದೆ.

**೮. ಐಚ್ಛಿಕ ವಿಷಯಗಳು :** ಇದುವರೆಗೂ ವಿವರಿಸಿದ ಪಠ್ಯವಿಷಯ ಎಲ್ಲರೂ ಕಡ್ಡಾಯವಾಗಿ ಅಭ್ಯಾಸ ಮಾಡಬೇಕಾದ ಭಾಗಗಳು. ಇನ್ನು ಮಕ್ಕಳ ವಿವಿಧ ಅಭಿರುಚಿಗಳ, ಆಸಕ್ತಿಗಳ ಮತ್ತು ಶಕ್ತಿ ಸಾಮರ್ಥ್ಯಗಳ ಬೆಳ ವಣಿಗೆಗೆ ನೆರವಾಗತಕ್ಕ ವಿಷಯಗಳನ್ನು ಪರಿಶೀಲಿಸುವ. ಮಾಧ್ಯಮಿಕ ಶಾಲೆ ಯಲ್ಲಿ ಅವರವರ ಅಭಿರುಚಿಗಳು ನಿರ್ಧರವಾಗಬೇಕಾದ್ದು ಸ್ವಾಭಾವಿಕ. ಆದರೆ ಇಂದಿನ ಪ್ರೌಢಶಾಲೆಗಳ ಮೊದಲನೆಯ ವರ್ಷದಲ್ಲಿ ಅದು ನಡೆಯುತ್ತಿದೆ ಯೆಂದು ನಂಬುವುದಾದರೂ ತೃಪ್ತಿಕರವಾಗಿ ನಡೆಯುತ್ತಿದೆಯೆಂದು ಧೈರ್ಯ ವಾಗಿ ಹೇಳುವಂತಿಲ್ಲ. ಹೇಗೇ ಆಗಲಿ, ಅವರವರ ಅಭಿರುಚಿ ಆಸಕ್ತಿಗಳನ್ನೂ ವೈಯಕ್ತಿಕ ಶಕ್ತಿಗಳನ್ನೂ ನಿಷ್ಕರ್ಷಿಸಿದ ಮೇಲೆ ಅವುಗಳ ಬೆಳವಣಿಗೆಗೆ ತಕ್ಕ ಪಠ್ಯವಸ್ತುವನ್ನು ರೂಪಿಸಿಕೊಡಬೇಕು. ಈಗ ಪ್ರೌಢಶಾಲೆಯ ಎರಡನೆಯ ವರ್ಷ ಈ ಶಿಕ್ಷಣ ಆರಂಭವಾಗುತ್ತದೆ. ಈ ಐಚ್ಛಿಕ ಶಿಕ್ಷಣ ಮೊದಲ ವರ್ಷವೇ ಆರಂಭವಾದರೆ ಆಗ ಮೂರು ವರ್ಷಗಳ ತನಕ ಆ ವಿಷಯದಲ್ಲಿ ಸಮರ್ಪಕವಾದ ಶಿಕ್ಷಣ ಕೊಡಲು ನೆರವಾಗುತ್ತದೆ. ಆಗ ಅಭಿರುಚಿಗಳ ನಿಷ್ಕರ್ಷೆ ಮಾಧ್ಯಮಿಕ ಶಾಲೆಯಲ್ಲೇ ನಡೆಯಬೇಕು. ಈ ಅಂಶವನ್ನು

ಗಮನದಲ್ಲಿಟ್ಟುಕೊಂಡು ಮುಂದಿನ ನಮ್ಮ ಶಾಲೆಗಳು ಪುನರ್ವ್ಯವಸ್ಥೆಯಾಗ ಬೇಕಾಗಿದೆ.

ಹಲವರು ಐಚ್ಛಿಕ ವಿಷಯವೆಂದರೆ ವೃತ್ತಿಯೆಂದೂ ಉದ್ಯೋಗವೆಂದೂ ಭಾವಿಸುವರು. ಅಹುದು, ವೃತ್ತಿ ಅವುಗಳಲ್ಲಿ ಒಂದು ಮಾತ್ರ. ಅವುಗಳ ಜೊತೆಗೆ ಸಾಂಸ್ಕೃತಿಕ ಮತ್ತು ಕಲಾ ವಿಷಯಗಳೂ ಇರಬಹುದು. ಕೆಲವರಿಗೆ ಅಭಿರುಚಿ ಗಣಿತಶಾಸ್ತ್ರದ ಉಚ್ಚಶಿಕ್ಷಣದಲ್ಲಿದ್ದರೆ ಇನ್ನು ಕೆಲವರಿಗೆ ಚರಿತ್ರೆ, ಸಾಹಿತ್ಯ, ಮುಂತಾದ ಸಾಂಸ್ಕೃತಿಕ ವಿಷಯಗಳಲ್ಲಿರುತ್ತದೆ; ಮತ್ತೆ ಕೆಲವರಿಗೆ ಸಂಗೀತ, ಚಿತ್ರಕಲೆ, ನೃತ್ಯ ಮುಂತಾದ ಲಲಿತಕಲೆಗಳಲ್ಲಿರಬಹುದು; ಇನ್ನು ಕೆಲವರಿಗೆ ಯಂತ್ರವಿಜ್ಞಾನ, ವಾಣಿಜ್ಯವ್ಯವಹಾರ, ಮುದ್ರಣ, ಮರಗೆಲಸ, ಬೆತ್ತದ ಕೆಲಸ, ಹೊಲಿಗೆಯ ಕೆಲಸ ಮೊದಲಾದ ವೃತ್ತಿಗಳಲ್ಲಿ ಆಸಕ್ತಿಯಿರಬಹುದು. ಹೀಗಿದ್ದರೂ ಎಲ್ಲರಿಗೂ ಒಂದೇ ರೀತಿಯ ವಿಷಯವನ್ನು ಕಲಿಯಲು ಒತ್ತಾಯಪಡಿಸುವುದು ಉಚಿತವಲ್ಲ. ಹಾಗೆ ಮಾಡುವುದರಿಂದ ಪ್ರಜಾಸತ್ತಾತ್ಮಕ ತತ್ತ್ವಕ್ಕೆ ತಿಲಾಂಜಲಿ ಬಿಟ್ಟಂತೆಯೇ. ಏಕೆಂದರೆ, ಅವರವರ ಅಭಿರುಚಿಗೆ ಒಪ್ಪುವಂತೆ ಶಿಕ್ಷಣ ಕೊಟ್ಟರೆ ಮಾತ್ರ ವ್ಯಕ್ತಿಗಳ ಹಕ್ಕನ್ನು ಗೌರವಿಸಿ ಅವರ ಆಶಯವನ್ನು ಈಡೇರಿಸಿದಂತಾಗುತ್ತದೆ; ಇರುವ ಒಂದೆರಡು ವಿಷಯಗಳನ್ನೇ ಎಲ್ಲರೂ ಕಲಿಯಿರೆಂದು ಕಡ್ಡಾಯ ಮಾಡುವುದು ಉಚಿತವಲ್ಲ. ಜೊತೆಗೆ, ಯಾರುಯಾರಲ್ಲಿ ಯಾವ ಯಾವ ಶಕ್ತಿಯಿರುವುವೋ ಅವುಗಳನ್ನು ಬೆಳಸಿದರೆ ತಾನೆ ಆ ಮೂಲಕ ಅವರವರ ವಿಶಿಷ್ಟ ಕಾಣಿಕೆ ಸಲ್ಲುವಂತಾಗಿ ಸಮಾಜ ಪುನೀತವಾಗುವುದು? ಎಂದರೆ, ವ್ಯಕ್ತಿಯ ಮತ್ತು ಸಮಾಜದ ಹಿತದೃಷ್ಟಿಗಳೆರಡರಿಂದಲೂ ಅವರವರ ಅಭಿರುಚಿಗೊಪ್ಪುವಂಥ ಐಚ್ಛಿಕ ವಿಷಯದಲ್ಲಿ ಶಿಕ್ಷಣ ಕೊಡುವುದು ಆವಶ್ಯಕ.

ನೂರಾರು ಬಾಲಕರನ್ನು ಒಳಗೊಂಡ ನಮ್ಮ ಪ್ರೌಢಶಾಲೆಗಳಲ್ಲಿ ಬಗೆಬಗೆಯ ಅಭಿರುಚಿಗಳುಳ್ಳ ವಿದ್ಯಾರ್ಥಿಗಳಿರುತ್ತಾರೆ. ಅಷ್ಟೊಂದು ಬಗೆಯ ಅಭಿರುಚಿಗಳಿಗೂ ಒಪ್ಪುವಂತೆ ಅಧಿಕ ಸಂಖ್ಯೆಯಲ್ಲಿ ಪಠ್ಯವಸ್ತುವನ್ನು ಏರ್ಪಡಿಸಲು ಸಾಧ್ಯವೇ ಅನ್ನಿಸದಿರದು. ವ್ಯಕ್ತಿಗಳ ವಿಶಿಷ್ಟತೆಯನ್ನು ಹೆಚ್ಚಾಗಿ ಗೌರವಿಸುತ್ತಿರುವ ಅಮೆರಿಕದ ಪ್ರಜಾಸತ್ತಾತ್ಮಕ ಸಮಾಜದಲ್ಲಿ ಪ್ರೌಢಶಾಲೆಗಳಲ್ಲಿ ಎಷ್ಟೇ ವ್ಯಯವಾದರೂ ಪರಿಗಣಿಸದೆ ಐಚ್ಛಿಕ ವಿಷಯಗಳನ್ನು ಅಧಿಕ

ಸಂಖ್ಯೆಯಲ್ಲಿ ಏರ್ಪಡಿಸಿ ಅವರವರ ಅಭಿರುಚಿಯಂತೆ ಶಿಕ್ಷಣ ಪಡೆಯಲು ಅವಕಾಶ ಕಲ್ಪಿಸಿರುತ್ತಾರೆ. ಬಡತನದ ತವರಾದ ನಮ್ಮ ನಾಡಿನಲ್ಲಿ ಅದು ಸಾಧುವೇ ಎಂಬ ಸಮಸ್ಯೆ ಬರುವುದಾದರೂ, ಆದಷ್ಟು ಹೆಚ್ಚಿನ ಸಂಖ್ಯೆಯಲ್ಲಿ ಐಚ್ಛಿಕ ವಿಷಯಗಳ ಶಿಕ್ಷಣಕ್ಕೆ ಅವಕಾಶ ಕಲ್ಪಿಸುವುದು ಎಲ್ಲ ದೃಷ್ಟಿಗಳಿಂದಲೂ ಆವಶ್ಯಕ.

ಸಾಂಸ್ಕೃತಿಕ ರಂಗದ ಐಚ್ಛಿಕ ವಿಷಯಗಳು ನಮ್ಮ ಶಾಲೆಗಳಲ್ಲಿ ಈಗ ತಕ್ಕಷ್ಟಿವೆ; ಕೈಗಾರಿಕೆ, ಕಲೆ, ಉದ್ಯೋಗ—ಇವುಗಳಿಗೆ ಸಂಬಂಧಿಸಿದ ಐಚ್ಛಿಕ ವಿಷಯಗಳ ಸಂಖ್ಯೆ ಹೆಚ್ಚಬೇಕಾಗಿದೆ. ಒಂದೇ ಶಾಲೆಯಲ್ಲಿ ಅವನ್ನೆಲ್ಲ ಬೋಧಿಸಲಾಗದಿದ್ದರೂ ಹತ್ತಿರದ ಕಾರ್ಖಾನೆಗೋ, ವೃತ್ತಿಶಿಕ್ಷಣಾಲಯಕ್ಕೋ, ಇತರ ಶಿಕ್ಷಣ ಸಂಸ್ಥೆಗಳಿಗೋ ಆ ಕಾಲದಲ್ಲಿ ವಿದ್ಯಾರ್ಥಿಗಳನ್ನು ಶಿಕ್ಷಣಕ್ಕೆ ಕಳಿಸುವ ಏರ್ಪಾಡು ಮಾಡಬಹುದು. ಈಚೆಗೆ ಹಲವು ಬಗೆಯ ಕೈಕೆಲಸ, ಕಲೆ, ವೃತ್ತಿ—ಇವನ್ನು ಐಚ್ಛಿಕ ವಿಷಯವಾಗಿ ಮಾಡಲು ಯತ್ನವೇನೋ ನಡೆದಿದೆ. ನೆಯ್ಗೆ, ಮುದ್ರಣ, ಯಂತ್ರವಿಜ್ಞಾನ, ವಿದ್ಯುಚ್ಛಕ್ತಿಯನ್ನು ಅಳವಡಿಸುವುದು, ಹೊಲಿಗೆ, ಬಡಗಿ ಕೆಲಸ, ಚಿತ್ರದ ಕೆಲಸ—ಮುಂತಾದವು ಅಲ್ಲಲ್ಲಿ ಇರುವುವಾದರೂ ಸಾರ್ವತ್ರಿಕವಾಗಿ ಅಗತ್ಯವಿರುವ ಎಲ್ಲ ಶಾಲೆಗಳಲ್ಲೂ ಬಳಕೆಗೆ ಬಂದಿಲ್ಲ. ಅಧಿಕ ಧನವ್ಯಯವಾದೀತೆಂದು ಈ ಕಾರ್ಯ ಸಾಧಿಸಲು ಹಿಂಜರಿಯುವುದಾದರೆ ನಾಡಿನ ಮೇಧಾ ಶಕ್ತಿ ಉಚಿತ ಮಾರ್ಗದಲ್ಲಿ ಪ್ರವಹಿಸಲಾರದೆ ಬಹುವಾಗಿ ಅಡ್ಡದಾರಿ ಹಿಡಿದು ವ್ಯರ್ಥವಾದೀತು! ಈ ಅಂಶವನ್ನು ಪರಿಗಣಿಸಿದರೆ, ಯುದ್ಧಕಾಲದಲ್ಲಿ ಗೌರೀಶಂಕರದೆತ್ತರಕ್ಕೆ ಹಣ ಚೆಲ್ಲುವ ನಮ್ಮ ರಾಜಕಾರಣಿಗಳು ಶಾಂತಿಸಮಯದ ಈ ರಚನಾತ್ಮಕ ಕಾರ್ಯಕ್ಕೆ ಒಂದಿಷ್ಟು ಹೆಚ್ಚು ಹಣ ಒದಗಿಸಿಕೊಡಲಾರರೆಂದರೆ ಶೋಚನೀಯವೆನ್ನಬೇಕು.

ಹಿಂದೆ ವಿವರಿಸಿರುವಂತೆ ಹೆಣ್ಣುಮಕ್ಕಳ ಅಭಿರುಚಿ ಆಸಕ್ತಿಗಳೂ, ಶಕ್ತಿಸಾಮರ್ಥ್ಯಗಳೂ ಜೀವನಕ್ರಮಗಳೂ ಗಂಡು ಮಕ್ಕಳಿಗಿಂತ ಭಿನ್ನವಾದವು. ಆದ್ದರಿಂದ ಅವರಿಗೆ ಪ್ರತ್ಯೇಕ ಶಾಲೆಗಳ ಆವಶ್ಯಕತೆಯನ್ನು ವಾದಿಸಿದೆ. ಆಗ ಅವರಿಗೊಪ್ಪುವ ರೀತಿಯ ಐಚ್ಛಿಕ ವಿಷಯಗಳನ್ನು ಬೋಧಿಸುವುದರ ಜೊತೆಗೆ ಕಸೂತಿ, ಸಂಗೀತ, ಗೃಹವಿಜ್ಞಾನ, ಶಿಶುಪಾಲನೆ, ಆಹಾರ

ವಿಜ್ಞಾನ, ಪಾಕಶಾಸ್ತ್ರ, ಬಟ್ಟೆ ಒಗೆಯುವುದು, ಮುಂತಾದವನ್ನೂ ಬೋಧಿಸಲು ಅವಕಾಶ ಕಲ್ಪಿಸಬಹುದು. ಈಚೆಗೆ ಹೆಣ್ಣು ಮಕ್ಕಳ ಶಿಕ್ಷಣವನ್ನು ಈ ಮಾರ್ಗದಲ್ಲಿ ನಡಸಬೇಕೆಂದು ಸಮಾಜವೂ ಒತ್ತಾಯ ಹಾಕುತ್ತಿದೆ. ಹೆಣ್ಣು ಮಕ್ಕಳಿಗೆ ಪ್ರತ್ಯೇಕ ಶಾಲೆಗಳಿದ್ದರೆ ಈ ವಿಷಯಗಳ ಬೋಧನೆ ಸುಲಭವೂ ಯಶಸ್ವಿಯೂ ಆಗಬಹುದು.

ಮೇಲೆ ವಿವರಿಸಿದ ಬಗೆಬಗೆಯ ಐಚ್ಛಿಕ ವಿಷಯಗಳಿಗೆಲ್ಲ ಪ್ರತ್ಯೇಕವಾಗಿ ಪಠ್ಯವಿಷಯದ ಸ್ವರೂಪವನ್ನು ವಿವರಿಸುವುದು ಇಲ್ಲಿ ಸಾಧ್ಯವಾಗದ ಕೆಲಸ; ಅದು ನಮ್ಮ ಉದ್ದೇಶವೂ ಅಲ್ಲ. ಆದರೆ ಸ್ಥೂಲವಾದ ಕೆಲವು ಹೆಗ್ಗುರುತುಗಳನ್ನು ಮಾತ್ರ ಇಲ್ಲಿ ಸೂಚಿಸಬಹುದು. ಪ್ರೌಢಶಾಲೆಯಲ್ಲಿ ಕಲೆಯಾಗಲಿ, ವೃತ್ತಿಯಾಗಲಿ, ಉದ್ಯೋಗವಾಗಲಿ ಐಚ್ಛಿಕ ವಿಷಯವಾಗಿ ಬೋಧಿಸುವರೆಂದರೆ ವಿದ್ಯಾರ್ಥಿಗಳನ್ನು ಆ ವೃತ್ತಿಯಲ್ಲಿ ಪ್ರವೀಣರನ್ನಾಗಿ ಮಾಡಿ ಆ ಮೂಲಕ ಜೀವನೋಪಾಯಕ್ಕೆ ತಕ್ಷಣ ಸಿದ್ಧಪಡಿಸುವುದೆಂದು ಹಲವರು ಭಾವಿಸಿರಬಹುದು. ಅದು ತಪ್ಪು. ಅಲ್ಲಿ ಕೈಗಾರಿಕೆ ಮತ್ತು ಕಲೆಗಳ ಶಾಸ್ತ್ರೀಯ ಜ್ಞಾನದ ತಳಹದಿಯನ್ನು ಹಾಕಿ, ಮೂಲ ರೂಪದ ತತ್ತ್ವಪರಿಚಯವನ್ನು ಮಾಡಿಕೊಟ್ಟು, ಅಷ್ಟಿಷ್ಟು ಪ್ರಾಯೋಗಿಕವಾಗಿ ಕೃತಿಯಲ್ಲಿ ರೂಪಿಸುವಂತೆ ಮಾಡುವುದು ಮಾತ್ರ ಸಾಧ್ಯ. ಆದರೆ ಆ ಶಿಕ್ಷಣ ಮುಗಿದೊಡನೆ ವೃತ್ತಿನಿರತರಾಗಲೆಂದಲ್ಲ. ಆ ಕೈಗಾರಿಕೆ, ಕಲೆಗಳನ್ನು ಮುಂದೆ ಅವರು ಆರಂಭಿಸಲು ಈ ಆಚ್ಛಿಕಶಿಕ್ಷಣ ನೆರವಾಗಲೆಂಬ ಉದ್ದೇಶದಿಂದ ಮಾತ್ರ ಪಠ್ಯವಿಷಯವನ್ನು ಒಂದೊಂದು ವಿಷಯಕ್ಕೂ ರೂಪಿಸಬೇಕು. ಮುಂದೆ ಆ ಕಲೆ, ಕೈಗಾರಿಕೆ, ಉದ್ಯೋಗಗಳನ್ನು ನಿಪುಣರಾದವರ ಬಳಿಯಲ್ಲೋ, ಶಿಕ್ಷಣ ಶಾಲೆಯಲ್ಲೋ, ಅಥವಾ ಮನೆಯಲ್ಲೋ, ಕಾರ್ಖಾನೆಗಳಲ್ಲೋ ಹೆಚ್ಚಿನ ಪ್ರಾವೀಣ್ಯತೆ ಪಡೆಯಲು ಬೇಕಾಗುವ ಎಲ್ಲ ಅನುಕೂಲ್ಯಗಳೂ ಈ ಶಾಲೆಯ ಶಿಕ್ಷಣದಿಂದ ಅವರಿಗೆ ಬಂದಿದ್ದರೆ ಸಾಕು. ಆದರೆ ಶಿಕ್ಷಣ ಮುಗಿದ ಕೂಡಲೇ ವೃತ್ತಿನಿರತರಾಗಲೆಂದು ಆಶಿಸಲಾಗದು. ಸಾಧ್ಯವಾದಷ್ಟು, ವೃತ್ತಿಶಿಕ್ಷಣಗಳಲ್ಲಿ ಪ್ರಯೋಗ ಶಿಕ್ಷಣಕ್ಕೆ ಹೆಚ್ಚಿನ ಗಮನ ಕೊಟ್ಟು ಹೆಚ್ಚು ಹೆಚ್ಚು ಅಭ್ಯಾಸಗಳನ್ನು ನಡಸಲು ಪಠ್ಯವಸ್ತು ಅವಕಾಶ ಕಲ್ಪಿಸಬೇಕು.

ಆಯಾ ವೃತ್ತಿಗಳಲ್ಲಿ ಪೂರ್ಣವೂ ಪಕ್ವವೂ ಆದ ಶಿಕ್ಷಣ ಕೊಡಲು ವೃತ್ತಿಶಿಕ್ಷಣ ಶಾಲೆಗಳಿವೆ. ಪ್ರೌಢಶಾಲೆಯನಂತರ ಅಲ್ಲಿಗೆ ಸೇರಿ ಪಕ್ಕಾ ವೃತ್ತಿಗಳನ್ನು ಕಲಿತು ಉದ್ಯೋಗನಿರತರಾಗಬಹುದು. ಅಂಥ ಶಾಲೆಗಳ ಪಠ್ಯವಸ್ತು ಪರಿಪೂರ್ಣವೂ ಪ್ರೌಢವೂ ಆಗಿದ್ದು ಆ ವೃತ್ತಿಯಲ್ಲಿ ಪೂರ್ಣ ಶಿಕ್ಷಣವೀಯುವಂತೆ ರೂಪುಗೊಂಡಿರಬೇಕು.

ಭರತಖಂಡದಲ್ಲಿ ಸಾರ್ವತ್ರಿಕ ಶಿಕ್ಷಣ ಭರದಿಂದ ಸಾಗಿ, ನಿರಕ್ಷರತೆ ನಿರ್ಮೂಲವಾಗಬೇಕಾಗಿದೆ. ರಾಜಕೀಯ ಸ್ವಾತಂತ್ರ್ಯ ಜನತೆಗೆ ದೊರಕಿರುವಂತೆ ನಿರಕ್ಷರತೆಯೂ ತೊಲಗಬೇಕು. ಈ ಕಾರ್ಯಕ್ಕೆ ಲಕ್ಷಾಂತರ ಸುಶಿಕ್ಷಿತ ಉಪಾಧ್ಯಾಯರು ಬೇಕು. ಆದರೆ ಉಪಾಧ್ಯಾಯರ ವೃತ್ತಿಶಿಕ್ಷಣ ಸಂಸ್ಥೆಗಳು ಕಡಮೆ. ಅದರಿಂದ ಪ್ರೌಢಶಾಲೆಗಳಲ್ಲಿ 'ಶಿಕ್ಷಣ'ವನ್ನು ಒಂದು ಐಚ್ಛಿಕ ವಿಷಯವಾಗಿ ಇಡುವುದು ಆವಶ್ಯಕವೆಂದು ನಮಗೆ ತೋರುತ್ತದೆ. ಯುದ್ಧ ಪೂರ್ವದ ಫ್ರಾನ್ಸಿನ ಶಿಕ್ಷಣ ವ್ಯವಸ್ಥೆಯಲ್ಲೂ ಈ ಸೌಲಭ್ಯವಿತ್ತು. ಅಂಥವರು ಕಾಲೇಜಿಗೆ ಮುಂದೆ ಸೇರಲೂ ಅವಕಾಶ ಕಲ್ಪಿಸಬಹುದು. ಶಿಕ್ಷಣವನ್ನು ಅಲ್ಲಿಗೇ ನಿಲ್ಲಿಸುವವರು ಉಪಾಧ್ಯಾಯರ ವೃತ್ತಿಯನ್ನವಲಂಬಿಸುವುದಾದರೆ ಶಿಕ್ಷಣ ರಂಗಕ್ಕೆ ತಕ್ಕಷ್ಟು ಮಂದಿ ಶಿಕ್ಷಣ ಪಡೆದ ಉಪಾಧ್ಯಾಯರು ದೊರಕುವರು; ರಾಷ್ಟ್ರಕ್ಕೆ ಅಧಿಕ ವ್ಯಯವೂ ತಪ್ಪುವುದು.

ನಮ್ಮ ನಾಡಿನಲ್ಲಿ ಕೆಲವು ವರ್ಷಗಳ ಹಿಂದೆ ವೃತ್ತಿಶಿಕ್ಷಣಕ್ಕೆ ಸಾಂಸ್ಕೃತಿಕ ಶಿಕ್ಷಣದಷ್ಟು ಗೌರವವಿರಲಿಲ್ಲ: ಅಭಿರುಚಿಯಿರಲಿ, ಇಲ್ಲದಿರಲಿ ಎಲ್ಲರೂ ಸಾಂಸ್ಕೃತಿಕ ಶಿಕ್ಷಣಕ್ಕೇ ಹಾತೊರೆದು ಧುಮುಕುತ್ತಿದ್ದರು. ಇದು ಶಿಕ್ಷಣ ದೃಷ್ಟಿಯಿಂದ ಅನರ್ಥಕಾರಿಯಾದ್ದು; ಅದರಿಂದ ನಾಡಿಗೆ ಬಹುಮುಖವಾದ ನಷ್ಟವೂ ಆಗುವುದು. ಆದರೆ, ದ್ವಿತೀಯ ಮಹಾ ಯುದ್ಧದಿಂದೀಚೆಗೆ ಈ ಮನೋಭಾವ ಕಡಮೆಯಾಗುತ್ತಿದೆ. ನಾಡಿನ ಔದ್ಯೋಗಿಕ ಪ್ರಗತಿಯ ಕಡೆ ಗಮನಕೊಟ್ಟಂತೆಲ್ಲ ವೃತ್ತಿಶಿಕ್ಷಣಕ್ಕೆ ಹೆಚ್ಚಿನ ಗೌರವ ಕೊಡಲಾರಂಭಿಸಿದ್ದಾರೆ; ಅಧಿಕ ಸಂಖ್ಯೆಯಲ್ಲಿ ವಿದ್ಯಾರ್ಥಿಗಳೂ ಆ ಶಿಕ್ಷಣಕ್ಕೆ ಬರುತ್ತಿದ್ದಾರೆ. ಯಾರಿಗೆ ಯಾವ ಮಾರ್ಗದಲ್ಲಿ ಅಭಿರುಚಿಯಿಲ್ಲವೋ ಆ ರೀತಿಯ ಶಿಕ್ಷಣವನ್ನು ಪಡೆಯಲು ಯತ್ನಿಸುವವರನ್ನು ರಾಷ್ಟ್ರ ತಡೆಗಟ್ಟಬೇಕೆಂಬುದು ಇದರಿಂದ ವಿಹಿತವಾಗಿ ಕಾಣುತ್ತದೆ; ಹಾಗೆಯೇ ವೃತ್ತಿಶಿಕ್ಷಣದಲ್ಲಿ ಅಭಿರುಚಿ

ಯಿರುವವರನ್ನೆಲ್ಲ ಆ ಶಿಕ್ಷಣದಿಂದ ಫಲ ಪಡೆದುಕೊಳ್ಳುವಂತೆ ಮಾಡಿ ಆ ಮೂಲಕ ನಾಡಿನ ಔದ್ಯೋಗಿಕ ಪ್ರಗತಿಯಾಗುವಂತೆ ಮಾಡುವುದು ಎಲ್ಲರ ಕರ್ತವ್ಯ.

ವೃತ್ತಿಕೌಶಲ್ಯ ಸಾಂಸ್ಕೃತಿಕ ಕೌಶಲ್ಯಕ್ಕಿಂತ ಕೀಳ್ಮಟ್ಟದ್ದಲ್ಲವೆಂಬ ತತ್ವ ಜನತೆಯಲ್ಲಿ ಪ್ರಚಾರವಾದಂತೆ, ಜೀವನೋಪಾಯಕ್ಕೆ ಹೊಸಹೊಸ ಮಾರ್ಗಗಳು ಹುಟ್ಟಿಕೊಂಡಂತೆ, ನಾಡಿನಲ್ಲಿ ವೃತ್ತಿ ಶಿಕ್ಷಣಕ್ಕೆ ಹೆಚ್ಚಿನ ಗೌರವಪುರಸ್ಕಾರಗಳು ದೊರಕುತ್ತಿವೆ; ಯಾವ ವೃತ್ತಿಗಾಗಲಿ ಸಮಾನ ಗೌರವವುಂಟೆಂಬ ಭಾವವೂ ನೆಲಸುತ್ತಿದೆ. ಸಾಂಸ್ಕೃತಿಕ ಶಿಕ್ಷಣದಿಂದಾಗುವ ಮಾನಸ ಸಂಸ್ಕರಣ ಇದರಿಂದಲೂ ಆಗಬಲ್ಲದು; ಜೊತೆಗೆ, ಶ್ರಮಜೀವನ ವನ್ನು ಗೌರವಿಸುವ ಮನೋಭಾವವೂ, ದೈಹಿಕ ಶಿಕ್ಷಣವೂ ಅದರಿಂದ ಸಿದ್ಧಿಸುತ್ತವೆ; ಶಾಂತಿ, ಸಹನೆ, ಸಹಕಾರ, ಕಷ್ಟಸಹಿಷ್ಣುತೆ ಮುಂತಾದ ಮಾನಸಿಕ ಮತ್ತು ನೈತಿಕ ಗುಣಗಳೂ ವರ್ಧಿಸುತ್ತವೆ. ಅದಕ್ಕೆ ಸಂಬಂಧಿಸಿದ ಕಲಾಕೌಶಲವೂ, ಅಬಿರುಚಿಯೂ ಬೆಳೆಯುತ್ತವೆ.

**೮. ಶಾಲೆಯ ಇನ್ನಿತರ ಶಿಕ್ಷಣ:** ಪ್ರೌಢಶಾಲೆಯಲ್ಲಿ ಪಾಠೇತರ ಶಿಕ್ಷಣ ಪಠ್ಯವಸ್ತುವಿನ ಶಿಕ್ಷಣದಷ್ಟೇ ಮುಖ್ಯವೆಂಬುದನ್ನು ನಮ್ಮವರು ಈಚೆಗೆ ಅರಿತುಕೊಳ್ಳುತ್ತಿದ್ದಾರೆ. ಮಕ್ಕಳು ಈ ಕಾಲದಲ್ಲಿ ತಮ್ಮ ಸಂಗೀತ, ನೃತ್ಯ, ಚಿತ್ರಕಲೆ, ಅಭಿನಯ, ಕ್ರೀಡಾಕೌಶಲ, ವಾಕ್‌ಶಕ್ತಿ, ಲೇಖನ ಕಲೆ, ಕಾರ್ಯನಿರ್ವಹಣ ಶಕ್ತಿ, ಮುಂದಾಳತ್ವ, ಗುಣಶೀಲ ಮುಂತಾದ ವೈಶಿಷ್ಟ್ಯಗಳನ್ನು ಸಮಾಜದ ಮುಂದೆ ಪ್ರದರ್ಶಿಸಿ ಮೆಚ್ಚಿಗೆ ಪಡೆಯಲು ಬಲು ಕುತೂಹಲ. ಅದಕ್ಕನುಕೂಲಿಸುವಂತೆ ಸಂಘಸಂಸ್ಥೆಗಳನ್ನೂ, ಆಟ ಪಾಠಗಳನ್ನೂ, ಉತ್ಸವಸಮಾರಂಭಗಳನ್ನೂ, ಅಭಿನಯಪ್ರದರ್ಶನಾದಿ ಗಳನ್ನೂ ಏರ್ಪಡಿಸಿಕೊಡುವುದು ಆವಶ್ಯಕ. ಇವುಗಳಿಗೆ ಪ್ರತ್ಯೇಕ ಪಠ್ಯ ವಿಷಯ ಕೊಡಲಾಗದಿದ್ದರೂ ಶಾಲೆಯ ಸಾಂಘಿಕ ಜೀವನದ ರೂಪುರೇಖೆ ಯನ್ನು ಸ್ಥೂಲವಾಗಿಯಾದರೂ ಚಿತ್ರಿಸುವ ಒಂದು ಯೋಜನೆಯನ್ನು ಪಠ್ಯ ವಸ್ತು ಅಳವಡಿಸಿಕೊಂಡಿರಬೇಕು. ಅದರಿಂದ ಮಕ್ಕಳ ಗುಣಶೀಲಗಳೆಲ್ಲ ವೃದ್ಧಿಹೊಂದಿ, ಸಮಾಜದೊಡನೆ ಅನ್ವಯಿಸಿಕೊಂಡು ಸತ್ಪ್ರಜೆಯಾಗಿ ಬಾಳುವ ಶಕ್ತಿಯೂ, ವಿಶಾಲ ಹೃದಯವೂ, ದೇಶಾಭಿಮಾನವೂ ಬೆಳೆಯು ವಂತಾಗಿ ಅದೂ ಉತ್ತಮ ಶಿಕ್ಷಣವೇ ಆಗಬಲ್ಲದು

ನಮ್ಮ ಯಾವ ಶಾಲೆಯ ಪಠ್ಯವಸ್ತುವೇ ಆಗಲಿ ಆ ಶಾಲೆಯ ಶಿಕ್ಷಣ ಮುಗಿಯುವುದರೊಳಗಾಗಿ ಶಿಕ್ಷಣದ ಪರಿಪೂರ್ಣತೆಯನ್ನು ಕೊಡಲಾರದಾಗಿದೆ ಎಂಬ ಟೀಕೆ ಕೇಳಿಬರುತ್ತಿದೆ. ಇದರಲ್ಲಿ ಸತ್ಯಾಂಶವೇನೋ ಇದೆ. ನಮ್ಮ ಪ್ರಾಥಮಿಕ ಶಾಲೆಗಳು ಪರಿಪೂರ್ಣತೆಗೆ ಮಾಧ್ಯಮಿಕ ಶಾಲೆಯ ಕಡೆಗೂ, ಮಾಧ್ಯಮಿಕ ಶಾಲೆಗಳು ಪ್ರೌಢಶಾಲೆಗಳ ಕಡೆಗೂ, ಪ್ರೌಢ ಶಾಲೆಗಳು ಕಾಲೇಜಿನ ಕಡೆಗೂ ಕೈ ತೋರಿಸುತ್ತಿವೆ; ಕಾಲೇಜಿನಲ್ಲಿ ಆ ಪರಿಪೂರ್ಣತೆ ದೊರಕುವುದೇ ಎಂಬುದೂ ಸಂಶಯಾಸ್ಪದವೇ ಆಗಿದೆ! ಈ ನ್ಯೂನತೆಯನ್ನು ತೊಲಗಿಸಲು ನಮ್ಮ ಶಾಲೆಗಳ ಪಠ್ಯವಿಷಯವನ್ನು ನಿರೂಪಿಸುವ ರೀತಿ ಅಷ್ಟಿಷ್ಟು ನೆರವಾಗಬಹುದು. ಪ್ರಾಥಮಿಕ ಶಿಕ್ಷಣದಿಂದ ಪರಿಪೂರ್ಣತೆಯನ್ನು ಆಶಿಸುವಂತಿಲ್ಲ. ಹಾಗೆ ಅಲ್ಲಿಗೇ ಶಿಕ್ಷಣವನ್ನು ಮುಗಿಸುವವರಿಗೆ ಸಂಸ್ಕೃತಿ, ವೃತ್ತಿ, ಕಲೆ ಮುಂತಾದವುಗಳ ಶಿಕ್ಷಣ ಕೊಟ್ಟು ಒಂದು ರೀತಿಯ ಪರಿಪೂರ್ಣತೆಯನ್ನು ಸಾಧಿಸಲು ಪ್ರತ್ಯೇಕ ಶಾಲೆಗಳನ್ನು ಆರಂಭಿಸಬಹುದು (ಇದಕ್ಕಾಗಿ ಸಾರ್ಜಂಟ್ ವರದಿಯಲ್ಲಿ ಪೋಸ್ಟ್ ಬೇಸಿಕ್ ಶಾಲೆಗಳ ಸ್ಥಾಪನೆಯನ್ನು ವಾದಿಸಿರುವದು). ಮಾಧ್ಯಮಿಕ ಶಾಲೆ ಸೆಕೆಂಡರೀ ಶಿಕ್ಷಣದ ಒಂದು ಅಂಗ ಮಾತ್ರವಾದ್ದರಿಂದ ಅದು ಪ್ರೌಢಶಾಲೆಯ ಕಡೆ ಕೈತೋರಿಸಲೇ ಬೇಕು. ಆದರೆ ಪ್ರೌಢಶಾಲೆಗಳೂ ಹಾಗೇ ಕಾಲೇಜಿನ ಕಡೆಗೆ ತೋರಿಸುವುದನ್ನು ಯಾರೂ ಒಪ್ಪುವುದಿಲ್ಲ. ನಮ್ಮ ಯುವಕ ಯುವತಿಯರಲ್ಲಿ ಬಹುಮಂದಿ ಅಲ್ಲಿಗೇ ಶಿಕ್ಷಣವನ್ನು ಮುಗಿಸುವುದರಿಂದ ಅವರಿಗೆ ಸಂಸ್ಕೃತಿ, ಕೈಗಾರಿಕೆ, ಕಲೆಗಳಲ್ಲಿ ಒಂದು ವಿಧವಾದ ಪರಿಪೂರ್ಣತೆಯನ್ನು ಕೊಡುವುದು ಅಗತ್ಯ. ಪ್ರೌಢಶಾಲೆಗಳ ಪಠ್ಯವಸ್ತು ಆ ಶಾಲೆಯನಂತರ ಜೀವನದಲ್ಲಿ ನಿರತರಾಗುವವರಿಗೆ ಸಹಾಯವಾಗಲೆಂಬ ಉದ್ದೇಶದಿಂದ ಪರಿಪೂರ್ಣತೆ ಕೊಡುವಂತೆ ರೂಪುಗೊಳ್ಳಬೇಕು. ಅಂದು ಮಾತ್ರ ಪ್ರೌಢ ಶಾಲೆಗಳಿಂದ ಹೊರಬೀಳುವ ನಮ್ಮ ಯುವಕ ಯುವತಿಯರಿಂದ ನಾಡಿಗೆ ನಿಜವಾದ ಸೇವೆ ಸಲ್ಲಲು ಅವಕಾಶವಾಗುತ್ತದೆ; ಅವರ ಜೀವನವೂ ಸುಖಮಯವಾಗುತ್ತದೆ. ಬೇಕಾದವರು ಕಾಲೇಜಿನಲ್ಲೋ ಕೈಗಾರಿಕೆ, ಕಲೆ, ವೃತ್ತಿ, ಉದ್ಯೋಗ ಮೊದಲಾವುಗಳ ಪೌಢ ಶಿಕ್ಷಣ ಸಂಸ್ಥೆಗಳಲ್ಲೋ ಸೇರಿ ಓದಲೂ ಅವಕಾಶ ಇದ್ದೇ ಇದೆ.

# ೯. ಶಿಕ್ಷಣ ಶಾಲೆಗಳು - ಅವುಗಳ ಅಂತಸ್ತು ಮತ್ತು ವೈವಿಧ್ಯ

ಮಕ್ಕಳ ಮಾನಸಿಕ, ದೈಹಿಕ, ನೈತಿಕ ಮತ್ತು ಸಾಮಾಜಿಕ ಬೆಳವಣಿಗೆ ಕ್ರಮಕ್ರಮವಾಗಿ ರೂಪುಗೊಳ್ಳುವುವಷ್ಟೆ. ಅವರು ಬೆಳವಣಿಗೆಯ ಬೇರೆ ಬೇರೆ ಅಂತಸ್ತುಗಳಲ್ಲಿ ಭಿನ್ನವಯೋಗುಣಗಳನ್ನು ತಾಳುವುದನ್ನೂ, ಅವುಗಳನ್ನನುಸರಿಸಿ ಬೆಳವಣಿಗೆಗೆ ಸಹಜವೂ ಸಹಾಯಕವೂ ಆಗುವಂಥ ಪಠ್ಯವಸ್ತುವನ್ನು ನಿಯಮಿಸುವ ಆವಶ್ಯಕತೆಯನ್ನೂ ಹಿಂದಿನ ಅಧ್ಯಾಯಗಳಲ್ಲಿ ವಿವರಿಸಲಾಗಿದೆ. ಈ ಎಲ್ಲ ವಿಷಯಗಳನ್ನೂ ಗಣನೆಗೆ ತೆಗೆದುಕೊಂಡು ಆಯಾ ಕಾಲದ ವಯೋಗುಣಗಳಿಗೊಪ್ಪುವ ಶಿಕ್ಷಣ ಕೊಡಲು ಪಾಠಶಾಲೆಗಳು ಅಂತಸ್ತುಗಳಾಗಿ ರೂಪುಗೊಂಡಿವೆ. ಕೆಲವರಿಗೆ ಸಾಂಸ್ಕೃತಿಕ ಶಿಕ್ಷಣದಲ್ಲಿ ಅಭಿರುಚಿ ಆಸಕ್ತಿಗಳಿದ್ದರೆ ಇನ್ನು ಕೆಲವರಿಗೆ ವೃತ್ತಿಶಿಕ್ಷಣದಲ್ಲಿರುತ್ತದೆ; ಒಬ್ಬರಿಗೆ ಒಂದು ವೃತ್ತಿಯಲ್ಲೋ, ಕಲೆಯಲ್ಲೋ ಇದ್ದರೆ ಮತ್ತೊಬ್ಬರಿಗೆ ಇನ್ನೊಂದರಲ್ಲಿರುತ್ತದೆ. ಉತ್ತಮ ಮನಶ್ಶಕ್ತಿಯುಳ್ಳವರಿಗೆ ಸಾಮಾನ್ಯ ಶಾಲೆಯ ಶಿಕ್ಷಣ ಫಲಪ್ರದವಾಗಬಹುದಾದರೆ ದಡ್ಡರಿಗೆ ವಿಶೇಷ ರೀತಿಯ ಶಿಕ್ಷಣ ಅನಿವಾರ್ಯವೆನಿಸುತ್ತದೆ. ಸೆಕೆಂಡರೀ ಅಂತಸ್ತಿನಲ್ಲಿ ಹೆಣ್ಣುಮಕ್ಕಳಿಗೊಪ್ಪುವ ಶಿಕ್ಷಣ ಗಂಡುಮಕ್ಕಳಿಗೆ ಕೊಡತಕ್ಕ ಶಿಕ್ಷಣಕ್ಕಿಂತ ಭಿನ್ನವಾಗಿರುತ್ತದೆ. ಈ ಎಲ್ಲ ದೃಷ್ಟಿಗಳನ್ನೂ ಪರಿಗಣಿಸಿ ವಿಧವಿಧವಾದ ಶಿಕ್ಷಣವನ್ನು ಕೊಡತಕ್ಕ ಶಾಲೆಗಳು ಅಸ್ತಿತ್ವಕ್ಕೆ ಬಂದಿವೆ, ಬರುತ್ತಿವೆ. ಎಂದಮೇಲೆ ಶಾಲೆಯ ಅಂತಸ್ತಿನಲ್ಲೂ, ಅಲ್ಲಿ ಕೊಡುತ್ತಿರುವ ಶಿಕ್ಷಣದ ಸ್ವರೂಪ, ಕ್ರಮ ಮತ್ತು ರೀತಿ ನೀತಿಗಳಲ್ಲೂ ವೈವಿಧ್ಯತೆ ಕಂಡು ಬರುತ್ತದೆ.

**೧. ಶಿಶುವಿಹಾರ:** ಎಲ್ಲ ದೇಶಗಳಲ್ಲೂ ಮಕ್ಕಳಿಗೆ ಕುಟುಂಬವೇ ಮೊದಲ ಶಾಲೆ. ಐದುವರ್ಷ ತುಂಬುವವರೆಗೂ ಮನೆಯಲ್ಲಿ ತಂದೆತಾಯಿಯರೊಡನೆ, ಅಕ್ಕಅಣ್ಣಂದಿರೊಡನೆ ಇದ್ದುಕೊಂಡು, ಅವರ ಲಾಲನೆಪಾಲನೆಗಳಲ್ಲಿ, ಪ್ರೇಮಾಸಕ್ತಿಗಳಲ್ಲಿ ಬಾಳಿಕೊಂಡು, ಅವರ ನಡೆನುಡಿಗಳನ್ನು ಅನುಕರಿ

ಸುವುದೇ ಆಗ ಉತ್ತಮ ಶಿಕ್ಷಣವಾಗಿ ಪರಿಣಮಿಸುತ್ತದೆ. ಈಚೆಗೆ ತಂದೆ ತಾಯಿಗಳು ಜೀವನೋಪಾಯಕ್ಕಾಗಿ ಹೊರಗೆ ದುಡಿಯಬೇಕಾಗಿರುವುದರಿಂದ ೩ ವರ್ಷಗಳಿಂದ ೫ ವರ್ಷಗಳತನಕ ಮಕ್ಕಳಿಗೆ ಅನುಕೂಲಿಸುವಂತೆ ಶಿಶು ವಿಹಾರಗಳೆಂಬ ನೂತನ ಶಿಕ್ಷಣಸಂಸ್ಥೆಗಳು ಪ್ರಚಾರಕ್ಕೆ ಬರುತ್ತಿವೆ. ಮೊದಲು ಇವು ಕೂಲಿಗಾರರ ಮಕ್ಕಳ ಪೋಷಣೆಗೆಂದು ಆರಂಭವಾದರೂ ಎಲ್ಲ ಅಂತಸ್ತಿನ ಜನತೆಯ ಮಕ್ಕಳಿಗೂ ಆ ಕಾಲದ ಶಿಕ್ಷಣ ಅಗತ್ಯವೆಂಬ ಭಾವ ಜನತೆಯಲ್ಲಿ ಬೆಳೆದು ಸಾರ್ವತ್ರಿಕವಾಗಿ ಪ್ರಚಾರಕ್ಕೆ ಬರುತ್ತಿವೆ. ಆಗ ಮಕ್ಕಳ ಮಾನಸಿಕ ಗುಣಗಳೂ, ಶಕ್ತಿಸಾಮರ್ಥ್ಯಗಳೂ ದೈಹಿಕಗುಣಗಳೂ ನಿರ್ದಿಷ್ಟ ರೂಪದಲ್ಲಿ ವಿಕಸನಗೊಳ್ಳಲು ಆರಂಭವಾಗುವುದರಿಂದಲೂ, ಮುಂದಿನ ಅವರ ವ್ಯಕ್ತಿತ್ವದ ಸ್ವರೂಪ ಆಕಾಲದಲ್ಲಾಗಬಹುದಾದ ಶಿಕ್ಷಣವನ್ನು ಬಹುಮಟ್ಟಿಗೆ ಅನುಸರಿಸುವುದರಿಂದಲೂ ಆ ಕಾಲದಲ್ಲಿ ಎಚ್ಚರಿಕೆಯಿಂದ ಮಕ್ಕಳ ಪೋಷಣೆ ಮತ್ತು ಶಿಕ್ಷಣಕಾರ್ಯಗಳನ್ನು ನೋಡಿಕೊಳ್ಳುವುದು ಅನಿವಾರ್ಯವೆಂಬ ಅಂಶವನ್ನು ಶಿಕ್ಷಣ ಚತುರರು ಪ್ರತಿಪಾದಿಸಿದಂತೆಲ್ಲ ಪೋಷಕರಲ್ಲೂ ಆಬಗ್ಗೆ ಆಸಕ್ತಿ ಹೆಚ್ಚುತ್ತಿದೆ. ಆ ಕಾಲದಲ್ಲಿ ಓದುಬರಹ ಲೆಕ್ಕಾಚಾರಗಳನ್ನು ಕಲಿಸದಿದ್ದರೂ ಮುಂದೆ ಅವುಗಳನ್ನು ಕಲಿಸಲು ಅನುಕೂಲಿಸುವ ತಳಹದಿಯ ರೂಪದ ಮಾನಸಿಕ, ದೈಹಿಕ, ನೈತಿಕ ಮತ್ತು ಸಾಮಾಜಿಕ ಗುಣಧರ್ಮಗಳನ್ನು ಉಚಿತಮಾರ್ಗದಲ್ಲಿ ರೂಪಿಸಬೇಕಾಗಿದೆ. ಅದಕ್ಕಾಗಿ ಮನೆಯಲ್ಲಿ ಕಂಡುಬರುವ ಸನ್ನಿವೇಶಗಳನ್ನೇ ಶಿಶುವಿಹಾರಗಳಲ್ಲೂ ನಿರ್ಮಿಸಬೇಕಾಗುತ್ತದೆ. ಅಲ್ಲಿನ ಶಿಕ್ಷಕಿಯರು ಮಕ್ಕಳಿಗೆ ತಾಯಿಯರಂತೆ; ಉಳಿದ ಬಾಲಕ ಬಾಲಕಿಯರು ಸೋದರಸೋದರಿಯರಂತೆ. ಅಲ್ಲಿ ಅವರ ಆಹಾರ, ನಿದ್ರೆ, ವಸನ, ವಿಹಾರ ಮತ್ತು ಇನ್ನಿತರ ಆವಶ್ಯಕತೆಗಳಿಗೆ ಮನೆಗಳಲ್ಲಿ ಹೇಗೋ ಹಾಗೆ ಗಮನಕೊಡಬೇಕು. ಅನೇಕ ಮನೆಗಳು ಒಳ್ಳೆಯ ಆರೋಗ್ಯಕರವಾದ ಪ್ರದೇಶಗಳಲ್ಲಿಲ್ಲದಿರುವುದರಿಂದಲೂ, ತಂದೆತಾಯಿಗಳು ಆ ಕಡೆ ತಕ್ಕಂತೆ ಗಮನಕೊಡಲು ಶಕ್ತಿಯಿಲ್ಲದಿರುವುದರಿಂದಲೂ, ಮೇಲಾಗಿ, ಅವರಿಗೆ ಶಿಕ್ಷಣಕಾರ್ಯದ ಶಾಸ್ತ್ರೀಯ ತಿಳಿವಳಿಕೆ ಇಲ್ಲದಿರುವುದರಿಂದಲೂ ಶಿಶು ವಿಹಾರಗಳು ಇನ್ನೂ ಹೆಚ್ಚಿನ ಆವಶ್ಯಕತೆಯಿನಿಸುತ್ತವೆ. ಮಕ್ಕಳಿಗೆ ಒಳ್ಳೆಯ ಅಭ್ಯಾಸಗಳನ್ನು ಕಲಿಸುವುದು, ಇಂದ್ರಿಯಗಳ ಪಟುತ್ವವನ್ನು ಬೆಳಸುವುದು,

ಮಾತನಾಡುವ ಶಕ್ತಿಯನ್ನು ವೃದ್ಧಿಪಡಿಸುವುದು, ದೇಹಾರೋಗ್ಯದ ಕಡೆ ಗಮನಕೊಡುವುದು, ಸಾಮಾಜಿಕ ಸದ್ಗುಣಗಳನ್ನು ಮೂಡಿಸುವುದು ಮತ್ತು ಹಲವು ಹುಟ್ಟುಗುಣಗಳನ್ನೂ ಸಂವೇದನೆಗಳನ್ನೂ ಉಚಿತರೀತಿಯಲ್ಲಿ ತಿದ್ದುವುದು—ಇವೇ ಅಲ್ಲಿ ಕಲಿಸತಕ್ಕ ಮುಖ್ಯ ವಿಷಯಗಳು. ಒಟ್ಟಿನಲ್ಲಿ ಅಂಥ ಮಾರ್ದವ ಕಾಲದ ಮಕ್ಕಳ ಎಲ್ಲ ಗುಣಗಳೂ ಪ್ರಕಾಶಕ್ಕೆ ಬರುವಂತೆಯೂ ಉಚಿತವಾದ ಮಾರ್ಗದಲ್ಲಿ ಬೆಳೆಯಲು ಅನುಕೂಲವಾಗುವಂತೆಯೂ ಅಲ್ಲಿ ತಳಹದಿ ಹಾಕಲಾಗುವುದು. ಮಕ್ಕಳು ಹರ್ಷವೂ ಆಕರ್ಷಣೀಯವೂ ಆದ ಆಟಗಳನ್ನು ಆಡುತ್ತಲೂ, ಬಗೆಬಗೆಯ ಬಣ್ಣಬಣ್ಣಗಳ ಆಟೋಪಕರಣಗಳೊಡನೆ ನಲಿಯುತ್ತಲೂ ಮರಳುಗುಪ್ಪೆ, ಜಾರುಬಂಡೆ, ಓಡುವುದು, ಕುಣಿಯುವುದು, ಗೀತೆಯೊಡನೆ ಅಭಿನಯಿಸುವುದು ಮುಂತಾದವುಗಳಿಂದ ದೈಹಿಕ ವೃದ್ಧಿಯನ್ನು ಪಡೆಯುತ್ತಲೂ ಜೀವಿಸುವಂಥ ಸನ್ನಿವೇಶಗಳು ಅಲ್ಲಿರುತ್ತವೆ. ಪಠ್ಯವಸ್ತುವಾಗಲಿ ವೇಳಾಪತ್ರಿಕೆಯಾಗಲಿ ಅಲ್ಲಿಗೆ ಅನಾವಶ್ಯಕ.

**೨. ಪ್ರಾಥಮಿಕ ಶಾಲೆ:** ಮಕ್ಕಳ ಶಿಕ್ಷಣ ಸಾಂಪ್ರದಾಯಿಕವಾಗಿ ಆರಂಭವಾಗುವುದು ಪ್ರಾಥಮಿಕ ಶಾಲೆಯಲ್ಲಿ. ನಮ್ಮ ಸಂಸ್ಥಾನದಲ್ಲಿ ಈ ಶಿಕ್ಷಣದ ಆರಂಭ ೬ನೆಯ ವರ್ಷದಿಂದ ಆಗುತ್ತಿದೆ. ಅದರ ಅವಧಿ ನಾಲ್ಕು ವರ್ಷಗಳ ಪರ್ಯಂತ. ಭಾರತದ ಇನ್ನು ಕೆಲವು ಕಡೆ ೫ ವರ್ಷಗಳ ಅವಧಿಯೂ ಮತ್ತೆ ಕೆಲವು ಕಡೆ ೬ ವರ್ಷಗಳ ಅವಧಿಯೂ ಇರುವುದು ಕಂಡುಬರುತ್ತಿದೆ. ಈಚೆಗೆ ಯುದ್ಧಾನಂತರದ ಪುನರ್ವ್ಯವಸ್ಥೆಗೆಂದು ಆರಂಭವಾಗಿರುವ ಸಾರ್ಜಂಟರ ಯೋಜನೆಯಲ್ಲಿ ೬ ರಿಂದ ೧೧ ವರ್ಷಗಳವರೆಗೆ ೫ ವರ್ಷಗಳ ಅವಧಿಯನ್ನು ಸೂಚಿಸಲಾಗಿದೆ. ವಾರ್ಧಾ ಶಿಕ್ಷಣ ಯೋಜನೆಯಲ್ಲೂ ಮೂಲ ಶಿಕ್ಷಣದ ಅವಧಿಯನ್ನು ಏಳು ವರ್ಷವೆಂದು ನಿಗದಿ ಮಾಡಿದೆ.

ನಾಡಿನ ಸರ್ವತೋಮುಖವಾದ ಪ್ರಗತಿಗೆ ಜನತೆಯ ಶಿಕ್ಷಣ ಅನಿವಾರ್ಯ. ಹಾಗೂ ಎಲ್ಲರೂ ಪ್ರಾಥಮಿಕ ಶಿಕ್ಷಣವನ್ನು ಪಡೆಯುವಂತಾದರೆ ಅವರು ಮುಂದೆ ತಮ್ಮ ಅಭಿರುಚಿ ಆಸಕ್ತಿಗಳನ್ನು ಬೆಳಸಿಕೊಂಡು ಸಮಾಜಕ್ಕೆ ತಮ್ಮ ವಿಶಿಷ್ಟ ಕಾಣಿಕೆಯನ್ನು ಸಲ್ಲಿಸಲು ಅವಕಾಶವಾಗುತ್ತದೆ. ಆ ಮೂಲಕ

ನಾಡುನುಡಿಗಳು ವರ್ಧಿಸಿ ಸಮಾಜ ಪುಷ್ಟಿಗೊಳ್ಳುತ್ತದೆ. ಜನಾಂಗವೂ ಆರ್ಥಿಕ, ಸಾಮಾಜಿಕ ಮತ್ತು ಔದ್ಯೋಗಿಕವಾಗಿ ಬಲಗೊಂಡು ರಾಷ್ಟ್ರದ ತೇಜಸ್ಸೂ, ಓಜಸ್ಸೂ ಪ್ರಕಾಶಿಸಿ ಬಲಯುತವೆನಿಸಿದ ಆಧುನಿಕ ಜನಾಂಗಗಳೊಡನೆ ಸಮಾನ ಗೌರವಗಳಿಂದ ಬಾಳಲವಕಾಶವಾಗುತ್ತದೆ. ಪ್ರಾಥಮಿಕ ಶಿಕ್ಷಣ ಸಾರ್ವತ್ರಿಕವಾಗಿ ಕೊಡಲಾರದ ದೇಶದ ಜನತೆ ಶಿಕ್ಷಣದ ಪ್ರಸಾದನವಿಲ್ಲದೆ ತಮ್ಮ ವಿಶಿಷ್ಟ ಕಾಣಿಕೆಯನ್ನು ಸಮಾಜಕ್ಕೆ ಸಲ್ಲಿಸಲಾರದೆ ಕ್ರಮಕ್ರಮವಾಗಿ ರಾಷ್ಟ್ರ ದುರ್ಬಲವಾಗುತ್ತದೆ. ಈ ಸಮಾಜ ಪರಿಜ್ಞಾನವನ್ನು ಅರಿತುಕೊಂಡ ಪಾಶ್ಚಾತ್ಯ ದೇಶಗಳು ೨೦ ನೆಯ ಶತಮಾನದ ಆದಿಯಿಂದಲೂ ತಮ್ಮ ತಮ್ಮ ರಾಷ್ಟ್ರಗಳಲ್ಲಿ ಸಾರ್ವತ್ರಿಕ ಒತ್ತಾಯ ಪ್ರಾಥಮಿಕ ಶಿಕ್ಷಣವನ್ನು ಜಾರಿಗೆ ತಂದಿವೆ. ಅದರಿಂದಲೇ ಅವು ಆಧುನಿಕವೂ ಬಲಯುತವೂ ಆದ ರಾಷ್ಟ್ರಗಳಾಗಲು ಶಕ್ತಿ ಬಂದಿತು. ಆದರೆ ಭಾರತದಲ್ಲಿ ಮಾತ್ರ ಇನ್ನೂ ಎಲ್ಲೂ ಸಾರ್ವತ್ರಿಕವಾಗಿ ಒತ್ತಾಯ ಶಿಕ್ಷಣ ಬಳಕೆಗೆ ಬಂದಿಲ್ಲ. ಅಲ್ಲಷ್ಟು ಇಲ್ಲಿಷ್ಟು ಪ್ರಾಯೋಗಿಕವಾಗಿ ಆ ಕಾರ್ಯವೇನೋ ಆರಂಭವಾಗಿದೆ. ನಮ್ಮ ಸಂಸ್ಥಾನ ದಲ್ಲಿ ಕ್ರಮ ಕ್ರಮವಾಗಿ ಅದನ್ನು ಜಾರಿಗೆ ತರುವ ಯೋಜನೆ ಆರಂಭವಾಗಿ ಕಾರ್ಯರೂಪಕ್ಕೆ ಬರುತ್ತಿದೆ. ಶೇ. ೮೫ಕ್ಕಿಂತ ಹೆಚ್ಚಿನ ನಿರಕ್ಷರಸ್ಥರಿರುವ ನಮ್ಮ ಭಾರತದಲ್ಲಿ ತ್ವರಿತವಾಗಿ ಒತ್ತಾಯ ಶಿಕ್ಷಣವನ್ನು ಜಾರಿಗೆ ತರುವ ಆವಶ್ಯಕತೆ ತಾನಾಗಿಯೇ ಸ್ಪಷ್ಟಪಡುತ್ತದೆ. ಆ ಕಾರ್ಯ ಸಾಧನೆ ಆದ ಹೊರತು ನಾಡಿನ ಬಹುಮುಖವಾದ ಪ್ರಗತಿಗೆ ಅಡ್ಡಿಯೆನ್ನದೆ ವಿಧಿಯಿಲ್ಲ.

ಹಾಗೆ ಒತ್ತಾಯ ಶಿಕ್ಷಣ ಜಾರಿಗೆ ಬಂದರೂ ಪ್ರಾಥಮಿಕ ಶಿಕ್ಷಣ ಮುಗಿ ದೊಡನೆ ಬಹುಮಂದಿ ಶಿಕ್ಷಣವನ್ನು ಮುಗಿಸತಕ್ಕವರು. ಅವರು ಆ ಕಾಲ ದಲ್ಲಿ ಪಡೆದ ಶಿಕ್ಷಣ ಸ್ಥಿರವಾಗಿ ನಿಂತು ಅವರ ಜೀವನಕ್ಕೂ, ಆ ಮೂಲಕ ರಾಷ್ಟ್ರದ ಪ್ರಗತಿಗೂ ನೆರವಾಗಬೇಕಾದರೆ ಕೇವಲ ನಾಲ್ಕು ವರ್ಷದ ಶಿಕ್ಷಣ ಸಾಲದು. ಶಾಲೆಯನ್ನು ಬಿಟ್ಟ ಕೆಲವು ಕಾಲದಲ್ಲೇ ಅದೆಲ್ಲ ಮರೆತೇ ಹೋಗಬಹುದು. ಈ ಸತ್ಯಾಂಶವನ್ನು ಗಣನಗೆ ತೆಗೆದುಕೊಂಡು ಇಂಗ್ಲೆಂಡು ಜರ್ಮನಿ ಮುಂತಾದ ದೇಶಗಳಲ್ಲಿ ಕನಿಷ್ಠಪಕ್ಷ ೧೪ ನೆಯ ವಯಸ್ಸಿನ ವರೆಗೂ ಶಿಕ್ಷಣ ಒತ್ತಾಯವಾಗಬೇಕೆಂದು ಆಚರಣೆಗೆ ತಂದಿರುವರು. ನಮ್ಮ ನಾಡಿನಲ್ಲೂ ಇಲ್ಲಿನ ಸ್ಥಿತಿಗಳನ್ನೂ ಆರ್ಥಿಕ ಶಕ್ತಿಯನ್ನೂ ಗಣನೆಗೆ

ತೆಗೆದುಕೊಂಡರೆ ಕೊನೆಯ ಪಕ್ಷ ೬ ವರ್ಷಗಳ (೬–೧೧) ಅವಧಿಗಾದರೂ ಪ್ರಾಥಮಿಕ ಒತ್ತಾಯ ಶಿಕ್ಷಣವನ್ನು ಹೆಚ್ಚಿಸಬೇಕು. ಆಗ ಮಾತ್ರ ಕಲಿತದ್ದು ಮರಳಿ ನಿರಕ್ಷರತೆಗೆ ಬೀಳಲಾರದೆಂದು ಹೇಳಬಹುದು. ಜೊತೆಗೆ, ಈಗ ಕೊಡುತ್ತಿರುವ ನಾಲ್ಕು ವರ್ಷದ ಶಿಕ್ಷಣದಿಂದ ವಿವಿಧ ವಿಷಯಗಳಲ್ಲಿ ಜೀವನಕ್ಕೆ ತಕ್ಕಷ್ಟು ಪರಿಜ್ಞಾನವಾಗಲಿ, ಮುಂದೆ ಸ್ವತಂತ್ರವಾಗಿ ಜ್ಞಾನಾರ್ಜನೆ ಮಾಡುವ ಶಕ್ತಿಯಾಗಲಿ, ಅಭಿರುಚಿ ಆಸಕ್ತಿಗಳನ್ನು ಬೆಳಸಿಕೊಂಡು ಉಚಿತ ಕಾಣಿಕೆಯನ್ನು ಸಮಾಜಕ್ಕೆ ಸಲ್ಲಿಸುವುದಾಗಲಿ ಸಾಧ್ಯವಿಲ್ಲವೆಂದೇ ನಮ್ಮ ಭಾವನೆ. ಈ ದೃಷ್ಟಿಯಿಂದ ಭಾರತದ ಆದ್ಯಂತವೂ ಒತ್ತಾಯ ಪ್ರಾಥಮಿಕ ಶಿಕ್ಷಣ ೬ನೆಯ ವಯಸ್ಸಿನಿಂದ ೧೨ನೆಯ ವಯಸ್ಸಿನವರೆಗೂ, ಕೊನೆಯ ಪಕ್ಷ ೧೧ನೆಯ ವರ್ಷದವರೆಗೂ ಆಚರಣೆಗೆ ತರುವುದು ಆವಶ್ಯಕ.

**೩. ಮಾಧ್ಯಮಿಕ ಶಾಲೆ:** ಎಲ್ಲ ದೇಶಗಳಲ್ಲೂ ಪ್ರಾಥಮಿಕ ಶಿಕ್ಷಣ ಮುಗಿದೊಡನೆ ಸೆಕೆಂಡರೀ ಶಿಕ್ಷಣ ಆರಂಭವಾಗುತ್ತದೆ. ಭಾರತದ ಅನೇಕ ಭಾಗಗಳಲ್ಲೂ ಇದೇ ಪದ್ಧತಿಯಿದೆ. ಆದರೆ ಮೈಸೂರಿನಲ್ಲಿ ಈ ಸೆಕೆಂಡರೀ ಶಿಕ್ಷಣ ಎರಡು ಅಂತಸ್ತುಗಳ ಶಾಲೆಯಲ್ಲಿ ನಡೆಯುತ್ತಿದೆ. ಇವುಗಳಲ್ಲಿ ಮೊದಲನೆಯದೇ ಮಾಧ್ಯಮಿಕ ಶಾಲೆ. ಈಗ ಪ್ರಾಥಮಿಕ ಶಿಕ್ಷಣದಕಾಲ ನಾಲ್ಕು ವರ್ಷಗಳ ಅವಧಿಯದು ಮಾತ್ರವಿರುವುದರಿಂದ ಮಾಧ್ಯಮಿಕ ಶಿಕ್ಷಣ ಹತ್ತನೆಯ ವರ್ಷದಿಂದ ಆರಂಭವಾಗಿ ನಾಲ್ಕು ವರ್ಷ ನಡೆಯುತ್ತಿದೆ. ಶಿಕ್ಷಣ ತತ್ವಗಳ ದೃಷ್ಟಿಯಿಂದ ನೋಡುವುದಾದರೆ ಸೆಕೆಂಡರೀ ಶಿಕ್ಷಣ ಆರಂಭವಾಗಬೇಕಾದ್ದು ೧೨ನೆಯ ವರ್ಷದಿಂದ; ೬ ವರ್ಷಗಳ ಪರ್ಯಂತರ ಅದು ನಡೆಯಬೇಕು. ಎಂದಮೇಲೆ, ನಮ್ಮ ಮಾಧ್ಯಮಿಕ ಶಾಲೆಗಳ ನಿರ್ಮಾಣ ಸಹಜವಲ್ಲದ ಕೃತಕರೀತಿಯದಾಗಿದೆ. ಇಂದಿನ ಪ್ರಾಥಮಿಕ ಶಿಕ್ಷಣದ ಕಾಲಾವಧಿಯನ್ನು ೬ ವರ್ಷಗಳ ಕಾಲಕ್ಕೆ ಅಥವಾ ೫ ವರ್ಷಗಳ ಕಾಲಕ್ಕೆ ಹೆಚ್ಚಿಸಿದರೆ ಇಂದಿನ ಮಾಧ್ಯಮಿಕ ಶಾಲೆಯ ೧, ೨ನೆಯ ತರಗತಿಗಳು, ಅಥವಾ ೧ನೇ ತರಗತಿ ಮಾತ್ರ ಪ್ರಾಥಮಿಕ ಶಾಲೆಗೇ ಸೇರಿ ಹೋಗುತ್ತವೆ. ಎಂದರೆ ೧೨ ವರ್ಷಗಳು ಅಥವಾ ೧೧ ವರ್ಷಗಳು ಪೂರ್ತಿಯಾದ ಮೇಲೆ ಸೆಕೆಂಡರೀ ಶಿಕ್ಷಣ ಆರಂಭವಾಗುತ್ತದೆ. ಅದು ಉಚಿತವಾದ ಕಾಲ. ೧೨ರಿಂದ

೧೮ ರ ವರೆಗಿನ ೬ ವರ್ಷಗಳ ಕಾಲಕ್ಕೆ ಶಿಕ್ಷಣವನ್ನು ಎರಡು ಅಂತಸ್ತುಗಳಲ್ಲಿ ಕೊಡಬಹುದು. ಅಮೆರಿಕದಲ್ಲಿ ಈ (೬+೩+೩) ರೀತಿಯ ಶಿಕ್ಷಣ ಜಾರಿಯುಲ್ಲಿದೆ. ಸೆಕೆಂಡರೀ ಶಿಕ್ಷಣ ಜೂನಿಯರ್ ಹೈಸ್ಕೂಲಿನಲ್ಲೂ, (೧೨-೧೫) ಅನಂತರ ಸೀನಿಯರ್ ಹೈಸ್ಕೂಲಿನಲ್ಲೂ (೧೫-೧೮) ನಡೆಯುತ್ತದೆ. ಮೇಲಿನ ರೀತಿಯಲ್ಲಿ ನಮ್ಮ ಮಾಧ್ಯಮಿಕ ಶಾಲೆಗಳೂ ರೂಪುಗೊಳ್ಳುವುದು ಅನೇಕ ದೃಷ್ಟಿಯಿಂದ ಅನಿವಾರ್ಯವಾಗಿದೆ. ಆ ರೀತಿಯಲ್ಲಿ ಮಾರ್ಪಡಿಸಲು ಯತ್ನಗಳೂ ನಡೆಯುತ್ತಿವೆ. ಆಗ ಸೆಕೆಂಡರೀ ಶಿಕ್ಷಣದ ಪ್ರಥಮ ಹಂತವನ್ನು ಜೂನಿಯರ್ ಹೈಸ್ಕೂಲ್ ಎಂದಾಗಲಿ ಮಾಧ್ಯಮಿಕ ಶಾಲೆಯೆಂದೇ ಆಗಲಿ ಕರೆಯಬಹುದು.

ಪ್ರಾಥಮಿಕ ಶಾಲೆಯಲ್ಲಿ ಎಲ್ಲರಿಗೂ ಆವಶ್ಯಕವಾದ ಭಾಷೆ, ಗಣಿತ, ಚರಿತ್ರೆ, ಭೂವಿವರಣೆ, ಪ್ರಜಾಧರ್ಮ, ಆರೋಗ್ಯ, ಹಸ್ತಕೌಶಲ, ಚಿತ್ರಕಲೆ ವಿಜ್ಞಾನ, ಮುಂತಾದ ಭಾಗಗಳಲ್ಲಿ ಶಿಕ್ಷಣ ಕೊಡುವುದು ಆವಶ್ಯಕ. ಆ ಕಾಲದಲ್ಲಿ ವೃತ್ತಿ ಶಿಕ್ಷಣದ ವಾಸನೆ ತರಬಾರದು; ಉದ್ಯಮ ಶಿಕ್ಷಣವನ್ನು ವಾದಿಸುವುದು ವೃತ್ತಿಶಿಕ್ಷಣಕ್ಕಾಗಿಯಲ್ಲ. ಜೀವನದ ನಿಜಸ್ವರೂಪವನ್ನು ಶಾಲೆಯಲ್ಲಿ ಪ್ರತಿಬಿಂಬಿಸಲು ಮಾತ್ರ. ಮಾಧ್ಯಮಿಕ ಶಾಲೆಯಲ್ಲಿ (೧೧-೧೪ ಅಥವಾ ೧೨-೧೫) ಆ ಎಲ್ಲ ವಿಷಯಗಳಲ್ಲೂ ಹೆಚ್ಚಿನ ಜ್ಞಾನವನ್ನು ಒದಗಿಸಿ ಕೊಡುವುದರ ಜೊತೆಗೆ ಅಭಿರುಚಿಗಳ ಅನ್ವೇಷಣೆಯ ಕಾರ್ಯವನ್ನೂ ಸಾಧಿಸಬೇಕು. ಆ ಶಿಕ್ಷಣ ಆರಂಭವಾಗುವುದು ಮಕ್ಕಳ ನವತಾರುಣ್ಯದ ಅರುಣೋದಯ ಕಾಲದಲ್ಲಿ; ಆಶ್ಚರ್ಯ ಹುಟ್ಟಿಸುವಷ್ಟು ತೀಕ್ಷ್ಣವೂ ಶೀಘ್ರವೂ ಆದ ರೀತಿಯಲ್ಲಿ ದೇಹವೂ ಮನಸ್ಸೂ ಸ್ಫುಟಗೊಳ್ಳುವ ಕಾಲದಲ್ಲಿ; ತಮ್ಮ ಅಭಿರುಚಿ ಆಸಕ್ತಿಗಳಿಗೊಪ್ಪುವ ಶಿಕ್ಷಣದಲ್ಲಿ ಹೆಜ್ಜೆಯಿಡಲು ಆಗ ಅವರ ಶಕ್ತಿ ಸಾಮರ್ಥ್ಯಗಳು ಹಾತೊರೆಯುತ್ತಿರುತ್ತವೆ. ಜೊತೆಗೆ, ಆಳವಾದ ಜ್ಞಾನಾರ್ಜನೆಯಲ್ಲಿ ತೊಡಗಿ, ಪಾಂಡಿತ್ಯ ಗಳಿಸುವ ಮನೋಭಾವವೂ ಬಂದಿರುತ್ತದೆ. ಇವೆಲ್ಲ ದೃಷ್ಟಿಗಳನ್ನೂ ಗಣನೆಗೆ ತೆಗೆದುಕೊಂಡರೆ ಈ ಅಂತಸ್ತಿನ ಶಿಕ್ಷಣದ ಪ್ರಾಧಾನ್ಯತೆ ಸ್ಪಷ್ಟಪಡುತ್ತದೆ. ಪ್ರಾಥಮಿಕ ಶಾಲೆಯಲ್ಲಿ ಕಲಿತ ವಿದ್ಯೆಯನ್ನು ಇಲ್ಲಿ ಮುಂದುವರಿಸುವುದಲ್ಲದೆ ಅವರವರ ಅಭಿರುಚಿಆಸಕ್ತಿಗಳನ್ನೂ ಅರಿತುಕೊಳ್ಳಲು ಹಲವು ಬಗೆಯ ಕಲೆ, ಕಸಬು ಮತ್ತು ವೃತ್ತಿಗಳನ್ನು

ಆರಂಭಿಸಬಹುದು. ಆದರೆ ಅದು ಪ್ರೌಢಶಾಲೆಗಳಲ್ಲಿ ಕೊಡುವ ವೃತ್ತಿ ಶಿಕ್ಷಣದಂತಿರಬಾರದು. ವೃತ್ತಿ ಶಿಕ್ಷಣಕ್ಕೆ ಪ್ರೌಢಶಾಲೆಯೇ ತಕ್ಕ ಅಂತಸ್ತು. ಆದರೆ, ಕೇವಲ ಅವರವರ ಅಭಿರುಚಿ ಯಾವ ಯಾವ ಮಾರ್ಗದಲ್ಲಿದೆ ಎಂಬುದನ್ನು ನಿಷ್ಕರ್ಷಿಸಲೋಸ್ಕರವೇ ಈ ವ್ಯವಸ್ಥೆಯನ್ನು ಮಾಡಬೇಕಾಗಿರುವುದು.

ನಮ್ಮ ಸಂಸ್ಥಾನದಲ್ಲಿ ಮಾಧ್ಯಮಿಕ ಶಿಕ್ಷಣದನಂತರ ಬಹುಮಂದಿ ಶಾಲೆಯನ್ನು ಬಿಟ್ಟುಬಿಡುವುದರಿಂದಲೂ, ಪ್ರಾಥಮಿಕ ಶಾಲೆಯ ಉಪಾಧ್ಯಾಯ ವೃತ್ತಿಗೆ ಕನಿಷ್ಠಪಾಂಡಿತ್ಯ ಮಾಧ್ಯಮಿಕ ಶಿಕ್ಷಣವಾಗಿರುವುದರಿಂದಲೂ ಈಗ ಮಾಧ್ಯಮಿಕ ಶಾಲೆಯ ಕೊನೆಯಲ್ಲಿ ಗಂಡುಮಕ್ಕಳಿಗೆ ಸಾರ್ವತ್ರಿಕ ಪರೀಕ್ಷೆಯಿದೆ. ಹೆಣ್ಣುಮಕ್ಕಳಿಗೆ ಈಚೆಗೆ ಹೆಚ್ಚಿನ ಶಿಕ್ಷಣಕ್ಕೆ ಪ್ರೋತ್ಸಾಹ ಕೊಡುವ ಉದ್ದೇಶದಿಂದ ಈ ಸಾರ್ವತ್ರಿಕ ಪರೀಕ್ಷೆಗೆ ಕೂಡುವ ಆವಶ್ಯಕತೆಯನ್ನು ನಿವಾರಿಸಲಾಗಿದೆ. ಮುಂದೆ ಮಾರ್ಪಟ್ಟ ಮಾಧ್ಯಮಿಕ ಶಿಕ್ಷಣದ ಕೊನೆಯಲ್ಲೂ ಇಂಥ ಸಾರ್ವತ್ರಿಕ ಪರೀಕ್ಷೆಯೊಂದು ಇನ್ನೂ ಹಲವಾರು ವರ್ಷಕಾಲ ಅನಿವಾರ್ಯವೆನಿಸಬಹುದು. ಆದರೂ ಈ ವಯಸ್ಸಿನ ಮಕ್ಕಳ ಸರ್ವತೋಮುಖವಾದ ಬೆಳವಣಿಗೆಯ ದೃಷ್ಟಿಯಿಂದ ಇಂದಿನ ಪರೀಕ್ಷಾ ಕ್ರಮವನ್ನೇ ಮಾರ್ಪಡಿಸಬೇಕಾದುದು ಅತ್ಯಾವಶ್ಯಕ.

**೪. ಪ್ರೌಢಶಾಲೆ:** ಮೇಲೆ ವಿವರಿಸಿದ ಪುನರ್ವ್ಯವಸ್ಥಿತ ಮಾಧ್ಯಮಿಕ ಶಾಲೆ ಸೆಕೆಂಡರೀ ಶಿಕ್ಷಣದ ಪೂರ್ವಾರ್ಧದಂತಿದ್ದರೆ, ಪ್ರೌಢಶಾಲೆ ಉತ್ತರಾರ್ಧದಂತಿದೆ. ಅಲ್ಲಿ ನಡೆದಿರುವ ಜ್ಞಾನಾರ್ಜನೆ ಇಲ್ಲಿ ಇನ್ನೂ ಆಳವಾಗಿ ಪ್ರೌಢತೆಗೆ ಏರುವುದಲ್ಲದೆ ವೈಶಾಲ್ಯವನ್ನೂ ಮುಟ್ಟುತ್ತದೆ. ನೂತನ ವಿಷಯಗಳ ಬೋಧನೆಯೂ ಅಲ್ಲಿ ಆವಶ್ಯಕ. ಜೊತೆಗೆ, ಅವರವರ ಅಭಿರುಚಿಗಳನ್ನನುಸರಿಸಿ ಸಾಂಸ್ಕೃತಿಕ, ಮತ್ತು ಔದ್ಯೋಗಿಕ ಶಿಕ್ಷಣವನ್ನೂ ಕೊಡುವ ಏರ್ಪಾಡೂ ಇರುತ್ತದೆ. ಇಂದಿನ ಪ್ರೌಢಶಾಲೆಯ ಪಠ್ಯವಿಷಯ ಮತ್ತು ಪರೀಕ್ಷೆಗಳ ಮೇಲೆ ವಿಶ್ವವಿದ್ಯಾನಿಲಯದವರ ಅಧಿಕಾರ ತುಂಬ ಕಂಡುಬರುತ್ತದೆ. ಆದರಿಂದ ಪ್ರೌಢಶಾಲೆಯ ಶಿಕ್ಷಣ ಕಾಲೇಜಿನ ಪ್ರವೇಶದ ಆವಶ್ಯಕತೆಗಳ ಕಡೆ ಹೆಚ್ಚು ಗಮನ ಕೊಡುತ್ತಿದೆಯೇ ಹೊರತು ಅಲ್ಲಿಗೇ ಶಿಕ್ಷಣವನ್ನು ಮುಗಿಸುವವರ ಹಿತವನ್ನು ಲಕ್ಷಿಸುತ್ತಿಲ್ಲ. ಮುಂದೆ ಪ್ರೌಢಶಾಲೆಯ

ಶಿಕ್ಷಣ ತನ್ನದೇ ಆದ ಪರಿಪೂರ್ಣತೆಯನ್ನು ಪಡೆದುಕೊಳ್ಳುವಂತೆ ವಿಶ್ವ ವಿದ್ಯಾನಿಲಯದವರ ಹಿಡಿತ ಸಡಿಲವಾಗಿ ಪಠ್ಯವಸ್ತು ಎಲ್ಲರಿಗೂ ಉಚಿತ ವಾಗುವಂತೆ ರೂಪುಗೊಳ್ಳಬೇಕು.

ನಮ್ಮ ದೇಶದಲ್ಲಿ ಬಾಲಕರ ಬಾಲಕಿಯರ ಭಿನ್ನರುಚಿಯನ್ನುಅನುಸರಿಸಿ ಪ್ರತ್ಯೇಕ ಪ್ರೌಢಶಾಲೆಗಳನ್ನು ಆರಂಭಿಸುವ ಆವಶ್ಯಕತೆ ಹೆಚ್ಚಾಗಿದೆ. ಈಗ ಅಲ್ಲಲ್ಲಿ ಪ್ರತ್ಯೇಕ ಹೆಣ್ಣುಮಕ್ಕಳ ಪ್ರೌಢಶಾಲೆಗಳಿದ್ದರೂ ಅನೇಕ ಕಡೆ ಹೆಣ್ಣುಮಕ್ಕಳು ಬಾಲಕರ ಶಾಲೆಗಳಿಗೇ ಬರುತ್ತಿದುವರು. ಈ ಅಂತಸ್ತಿನಲ್ಲಿ ಹಲವಾರು ಕಾರಣಗಳಿಂದ ಪ್ರತ್ಯೇಕ ಶಿಕ್ಷಣ ಉಚಿತವೆಂದು ಹಿಂದೆಯೇ ವಾದಿಸಿರುತ್ತೇವೆ. ಮಾಧ್ಯಮಿಕ ಶಿಕ್ಷಣದ ಅಂತಸ್ತಿನಲ್ಲೂ ಅಷ್ಟೆ. ಆದರೆ ಇಂದಿನ ಬಾಲಕರ, ಬಾಲಕಿಯರ ಪ್ರೌಢಶಾಲೆಗಳ ಪಠ್ಯವಸ್ತು, ವೇಳಾ ಪತ್ರಿಕೆ, ಶಿಕ್ಷಣ ಯೋಜನೆ, ಶಿಸ್ತಿನ ಕ್ರಮ ಇವಾವುಗಳಲ್ಲೂ ಸ್ವಲ್ಪವಾದರೂ ಭಿನ್ನತೆ ತೋರಿಬರುವುದಿಲ್ಲ. ಇದು ಹೆಣ್ಣುಮಕ್ಕಳಿಗೆ ಒಪ್ಪದ ಶಿಕ್ಷಣವಾಗು ತ್ತಿದೆ. ಆದ್ದರಿಂದ ಹೆಣ್ಣುಮಕ್ಕಳ ಪ್ರೌಢಶಾಲೆಗಳು ಮೇಲಿನ ದೃಷ್ಟಿಯಲ್ಲಿ ಉಚಿತರೀತಿಯಲ್ಲಿ ಮಾರ್ಪಟ್ಟು ಶಿಕ್ಷಣ ಕೊಡುವಂತಾಗಬೇಕು.

ಮೇಲೆ ವಿವರಿಸಿದ ಮೂರು ಅಂತಸ್ತಿನ ಶಿಕ್ಷಣ ಶಾಲೆಗಳನ್ನೂ ಕೆಳಗಿನ ನಕ್ಷೆಯ ಮೂಲಕ ವಿವರಿಸಬಹುದು :

## (೬+೩+೩)ರ ಯೋಜನೆ

ಶಿಶು ವಿಹಾರ (೩–೬)

ಪ್ರಾಥಮಿಕ ಶಾಲೆ (೬–೧೨) ಅಥವಾ (೬–೧೧)

ಮಾಧ್ಯಾಮಿಕ ಶಾಲೆ (೧೨–೧೫) ಅಥವಾ (೧೧–೧೪)

ಪ್ರೌಢ ಶಾಲೆ (೧೫–೧೮) ಅಥವಾ (೧೪–೧೭)

ಈ ರೀತಿಯಲ್ಲಿ ನಮ್ಮ ಶಿಕ್ಷಣ ಶಾಲೆಗಳು ಪುನರ್ವ್ಯವಸ್ಥೆಗೊಂಡಾಗ ಅದು ಬಹುಮಟ್ಟಿಗೆ ಅಮೆರಿಕದ ಶಿಕ್ಷಣ ಶಾಲೆಗಳ ಕ್ರಮದಂತಿರುತ್ತದೆ.

ಸಾರ್ಜೆಂಟ್ ವರದಿಯಲ್ಲಿ ಸೆಕೆಂಡರೀ ಶಿಕ್ಷಣ ಆರಂಭವಾಗುವುದು ೧೧ ನೆಯ ವಯಸ್ಸಿನಲ್ಲಿ. ಹನ್ನೆರಡರಲ್ಲಲ್ಲ. ಅದಕ್ಕೆ ಕಾರಣ ಅವರು ಪ್ರಾಥಮಿಕ

ಶಿಕ್ಷಣವನ್ನು ಐದು ವರ್ಷದ ಅವಧಿಗಿಳಿಸಿರುವರು; ಆ ಸೆಕೆಂಡರೀ ಶಿಕ್ಷಣ ವನ್ನು ಎರಡು ಭಾಗಗಳಾಗಿ ವಿಂಗಡಿಸಿಲ್ಲ. ಎಂದರೆ ಆರು ವರ್ಷಗಳ ತನಕ (೧೧-೧೭) ಒಂದೇ ಶಾಲೆ. ಅದನ್ನೇ ಅವರು ಪ್ರೌಢಶಾಲೆಯೆಂದು ಕರೆದಿರು ವರು. ಅವರ ಯೋಜನೆಯಲ್ಲಿ ಎರಡು ವಿಧದ ಪ್ರೌಢಶಾಲೆಗಳನ್ನು ವಾದಿ ಸಿರುವರು. ಒಂದು ಸಾಂಸ್ಕೃತಿಕ ಶಿಕ್ಷಣಕ್ಕೆ; ಇನ್ನೊಂದು ವೃತ್ತಿಶಿಕ್ಷಣಕ್ಕೆ. ಹನ್ನೊಂದನೆಯ ವರ್ಷದಲ್ಲಿ ಒಂದು ಪ್ರವೇಶ ಪರೀಕ್ಷೆಯನ್ನು ನಡಸಿ ಆ ಪರೀಕ್ಷೆಯಲ್ಲಿ ನಿಷ್ಕರ್ಷಿತವಾದ ಮೇಲೆ ಅವರನ್ನು ವೃತ್ತಿಶಿಕ್ಷಣಕ್ಕೋ ಸಾಂಸ್ಕೃತಿಕ ಶಿಕ್ಷಣಕ್ಕೋ ಕಳುಹಿಸಬೇಕೆಂಬುದು ಅವರ ಸಲಹೆ. ಈ ಯೋಜನೆಯಲ್ಲಿ ಒಂದು ನ್ಯೂನತೆಯುಂಟು. ಕೇವಲ ೧೧ನೆಯ ವಯಸ್ಸಿ ನಲ್ಲೇ ಅವರ ಅಭಿರುಚಿಯನ್ನು ನಿಷ್ಕರ್ಷಿಸಿ ಅವರಿಗೆ ವಿಶಿಷ್ಟಶಿಕ್ಷಣ ಕೊಡಲು ಯತ್ನಿಸುವುದು ಉಚಿತವಲ್ಲ. ಅವರಿಗೆ ವಿಶಿಷ್ಟಶಿಕ್ಷಣ ಕೊಡುವ ಕಾರ್ಯ ಕನಿಷ್ಟಪಕ್ಷ ೧೩ನೆಯ ವರ್ಷದನಂತರ ಆರಂಭವಾಗಬೇಕು. ಅಲ್ಲಿನವರೆಗೂ ಅವರ ಅಭಿರುಚಿಯ ನಿಷ್ಕರ್ಷೆಯ ಕಾರ್ಯ ನಡೆಯಬೇಕು. ಆದುದರಿಂದ ಮೇಲಿನ ನಮ್ಮ ಯೋಜನೆಯಲ್ಲಿ ಸೆಕೆಂಡರೀ ಶಿಕ್ಷಣವನ್ನು ಎರಡು ಅಂತಸ್ತು ಗಳಾಗಿ ಮಾಡಿ ಆಯಾ ಅಂತಸ್ತಿನ ವಯೋಗುಣಗಳನ್ನನುಸರಿಸಿ ಆ ಶಾಲೆ ಗಳ ಕಾರ್ಯವನ್ನು ನಿಷ್ಕರ್ಷಿಸಿರುವುದು.

**೫. ವೃತ್ತಿ ಶಿಕ್ಷಣ ಶಾಲೆಗಳು:** ಶಾಲೆಗಳಲ್ಲಿ ವೃತ್ತಿ ಶಿಕ್ಷಣ ಆಧು ನಿಕವಾಗಿ ಬಳಕೆಗೆ ಬರುತ್ತಿರುವ ವಿಷಯ. ಇಂಗ್ಲೆಂಡು ಅನೇಕ ಶತಮಾನ ಗಳಿಂದಲೂ ಔದ್ಯೋಗಿಕ ರಾಷ್ಟ್ರವಾಗಿದ್ದರೂ ಅಲ್ಲಿನ ಶಾಲೆಗಳಲ್ಲಿ ವೃತ್ತಿಶಿಕ್ಷಣ ವಿರಲಿಲ್ಲ. ತನ್ನ ಹಳೆಯ ಪದ್ಧತಿಯಂತೆ ಕಾರ್ಖಾನೆಗಳು ದುಡಿಯುತ್ತ ಉದ್ಯೋಗ ರಾಷ್ಟ್ರವಾಗಿದ್ದರೂ ಕಳೆದ ಶತಮಾನದ ಕೊನೆಯವರೆಗೆ ಅದ ಕ್ಕೋಸ್ಕರ ಪ್ರತ್ಯೇಕ ಶಾಲೆಗಳನ್ನು ಆರಂಭಿಸುವ ಯತ್ನ ಮಾಡಿರಲಿಲ್ಲ. ಆದರೆ ಒಂದು ಕಾರ್ಖಾನೆಯ ಸಾಮಾನುಗಳು ಒಳ್ಳೆಯವೂ, ಅಗ್ಗವಾದವೂ ಆಗಿರಬೇಕಾದರೆ ಅಲ್ಲಿನ ಕೆಲಸಗಾರರು ಆ ವೃತ್ತಿಯಲ್ಲಿ ಶಾಸ್ತ್ರೀಯ ಶಿಕ್ಷಣ ಪಡೆದ ಕುಶಲರಾಗಿರಬೇಕು. ಆ ಸುಮಾರಿನಲ್ಲಿ ಜರ್ಮನಿ ತನ್ನ ಕಾರ್ಖಾನೆ ಗಳಿಗೆ ಅಂಥ ನುರಿತ, ವೃತ್ತಿಗಳಲ್ಲಿ ಶಿಕ್ಷಣ ಪಡೆದ ಚತುರರನ್ನು ನಿಯಮಿಸಿ ಕೊಂಡು ನೂತನ ಯುಗವೊಂದನ್ನು ಆರಂಭಿಸಿಬಿಟ್ಟಿತು. ಒಂದೆರಡು ವರ್ಷ

ಗಳಲ್ಲೇ ಅಮೆರಿಕವೂ ಅದನ್ನು ಅನುಕರಿಸಿತು. ತಾನೆಲ್ಲಿ ಹಿಂದೆ ಬೀಳಬೇಕಾದೀತೋ ಎಂದು ಇಂಗ್ಲೆಂಡೂ ಆ ಕಡೆ ಆಗ ಗಮನ ಕೊಡಬೇಕಾಯಿತು. ಕ್ರಮ ಕ್ರಮವಾಗಿ ಪ್ರತ್ಯೇಕ ವೃತ್ತಿಶಿಕ್ಷಣದ ಶಾಲೆಗಳೂ ಆರಂಭವಾದುವು. ಅಷ್ಟರಲ್ಲಿ, ಸೆಕೆಂಡರೀ ಶಿಕ್ಷಣದನಂತರ ಜೀವನವನ್ನು ಆರಂಭಿಸತಕ್ಕವರಿಗೆ ಅಷ್ಟಿಷ್ಟು ನೆರವಾಗಲೆಂದು ಪ್ರೌಢಶಾಲೆಯಲ್ಲಿ ಹಲವಾರು ವೃತ್ತಿಗಳನ್ನು ಐಚ್ಛಿಕ ವಿಷಯವಾಗಿ ಕಲಿಸಬೇಕೆಂದು ಜನಜೀವನದಲ್ಲಿ ಒತ್ತಾಯ ಆರಂಭವಾಯಿತು. ಜೊತೆಗೆ, ಮನಶ್ಶಾಸ್ತ್ರ ಚತುರರು ಪ್ರೌಢಶಾಲೆಯ ಆರಂಭಕಾಲದಲ್ಲಿ ಮಕ್ಕಳ ವೃತ್ತಿ ಶಿಕ್ಷಣದ ಅಭಿರುಚಿ ವಿಶಿಷ್ಟ ಮಾರ್ಗದಲ್ಲಿ ರೂಪುಗೊಂಡು ಬೆಳೆಯಬೇಕಾಗಿರುವುದರಿಂದ ವೃತ್ತಿಗಳನ್ನು ಐಚ್ಛಿಕವಾಗಿ ಸೇರಿಸುವುದುತ್ತಮವೆಂದು ಸಲಹೆ ಮಾಡಿದರು. ಅದರಿಂದ ಅಲ್ಲಿನ ಸೆಕೆಂಡರೀ ಶಾಲೆಗಳಲ್ಲಿ ವೃತ್ತಿಶಿಕ್ಷಣಗಳನ್ನು ಐಚ್ಛಿಕವಾಗಿ ಕೊಡಲಾರಂಭಿಸಿದರು. ಕೇವಲ ಪ್ರಾಥಮಿಕ ಶಿಕ್ಷಣವನ್ನು ಮಾತ್ರ ಪಡೆದಿರುವವರಿಗೆ ಅನುಕೂಲಿಸುವಂಥ ಸಾಧಾರಣ ವೃತ್ತಿಶಿಕ್ಷಣ ಶಾಲೆಗಳೂ, ವೃತ್ತಿಯ ಜೊತೆಗೆ ಸ್ವಲ್ಪ ಸಾಂಸ್ಕೃತಿಕ ವಿಷಯಗಳನ್ನೂ ಹೇಳಿಕೊಡುವ ಅರ್ಧ ವೃತ್ತಿಶಿಕ್ಷಣ ಶಾಲೆಗಳೂ ಆರಂಭವಾದುವು ; ೧೫ ನೆಯ ವಯಸ್ಸಿನ ಸುಮಾರಿನಲ್ಲಿ ಶಿಕ್ಷಣ ಮುಗಿಸತಕ್ಕವರಿಗೂ ಉಚಿತವೆನಿಸವ ವೃತ್ತಿಶಿಕ್ಷಣ ಶಾಲೆಗಳೂ, ಪ್ರೌಢಶಿಕ್ಷಣ ಮುಗಿಸಿದವರಿಗೆ ಉಚಿತವೆನಿಸುವ ವೃತ್ತಿಶಿಕ್ಷಣ ಸಂಸ್ಥೆಗಳೂ ಆರಂಭವಾದುವು. ಕಾಲೇಜಿನ ಅಂತಸ್ಥಿನ ವೃತ್ತಿಶಿಕ್ಷಣಾಲಯಗಳೂ ಸ್ಥಾಪನೆಯಾದುವು.

ಭಾರತದಲ್ಲಿ ಇಂಗ್ಲೆಂಡು ತನ್ನ ಶಿಕ್ಷಣ ಪದ್ಧತಿಯನ್ನು ನಾಟಿಹಾಕಿದಾಗ ವೃತ್ತಿಶಿಕ್ಷಣ ಶಾಲೆಗಳು ಅಲ್ಲೊಂದು ಇಲ್ಲೊಂದು ಹೆಸರಿಗೆ ಆರಂಭವಾದುವು. ಪ್ರೌಢಶಾಲೆಗಳಲ್ಲೂ ಹೆಸರಿಗೆ ವೃತ್ತಿಶಿಕ್ಷಣ ಐಚ್ಛಿಕ ವಿಷಯಗಳ ಪಟ್ಟಿಯಲ್ಲಿ ಸೇರಿದ್ದರೂ ಅಷ್ಟಾಗಿ ಆಕರ್ಷಣೆ ಪಡೆಯಲಿಲ್ಲ. ಈ ಶತಮಾನದ ಆದಿಯಿಂದ ವೃತ್ತಿಶಿಕ್ಷಣ ಶಾಲೆಗಳೂ ಕಾಲೇಜುಗಳೂ ಹೆಚ್ಚಿನ ಸಂಖ್ಯೆಯಲ್ಲಿ ಆರಂಭವಾಗುತ್ತಿವೆ. ಆದರೆ ಈಚಿನವರೆಗೂ ಜನತೆಯಲ್ಲಿ ವೃತ್ತಿಯೂ ಒಂದು ಶಿಕ್ಷಣವೆಂದು ಒಪ್ಪುವ ಮನೋಭಾವವಿಲ್ಲದೆ ಸಾಂಸ್ಕೃತಿಕ ಶಿಕ್ಷಣಕ್ಕೇ ಹೆಚ್ಚಿನ ಪುರಸ್ಕಾರವಿತ್ತು. ಆದರೆ, ದ್ವಿತೀಯ ಮಹಾಯುದ್ಧದಲ್ಲಿ ಇಲ್ಲಿನ ವೃತ್ತಿಶಿಕ್ಷಣ ಪಡೆದವರಿಗೆಲ್ಲ ತುಂಬ ಪುರಸ್ಕಾರ ದೊರಕಿತು. ಆಗ ಜನತೆಯ ಕಣ್ಣು ಆ

ಕಡೆ ತೆರೆಯಿತು. ವೃತ್ತಿಶಿಕ್ಷಣಕ್ಕಾಗಿ ಈಗ ಜನತೆಯಲ್ಲಿ ಹೆಚ್ಚಿನ ಕಾತರತೆ ಕಂಡುಬರುತ್ತಿದೆ. ಅದಕ್ಕಾಗಿ ವೃತ್ತಿಶಿಕ್ಷಣ ಶಾಲೆಗಳೂ ಕಾಲೇಜುಗಳೂ ಹೊಸ ಹೊಸದಾಗಿ ಆರಂಭವಾಗುತ್ತಿವೆ.

ರಾಜಕೀಯವಾಗಿ ಸ್ವಾತಂತ್ರ್ಯ ಪಡೆದ ಭಾರತ ಔದ್ಯೋಗಿಕ ವಾಗಿಯೂ ಸ್ವಾವಲಂಬನಶಕ್ತಿಯನ್ನು ಪಡೆಯಬೇಕು. ಇಂದು ನಮಗೆ ಬೇಕಾದ ಬಹುವಿಧವಾದ ಪದಾರ್ಥಗಳು ಪಾಶ್ಚಿಮಾತ್ಯ ದೇಶಗಳಿಂದಲೋ ಜಪಾನಿನಿಂದಲೋ ಬರಬೇಕಾಗಿವೆ. ಆದರೆ, ನಮ್ಮಲ್ಲೂ ಬೇಕಾದಹಾಗೆ ಪ್ರಕೃತಿ ಸಂಪತ್ತಿದೆ; ಜನ ಬಲವಿವೆ; ಬಂಡವಾಳಗಾರರಿದ್ದಾರೆ. ವಿವಿಧ ಉದ್ಯಮಗಳನ್ನು ಉತ್ತೇಜನಕೊಟ್ಟು ಬೆಳಸಲು ರಾಷ್ಟ್ರೀಯ ಸರ್ಕಾರವಿದೆ; ಇವೆಲ್ಲವುಗಳ ಜೊತೆಗೆ ಶಾಸ್ತ್ರೀಯವಾಗಿ ವಿವಿಧ ವೃತ್ತಿಗಳಲ್ಲಿ ಶಿಕ್ಷಣಪಡೆದ ಕೆಲಸಗಾರರು ಆವಶ್ಯಕ. ಈ ಆವಶ್ಯಕತೆಯನ್ನು ಶಿಕ್ಷಣರಂಗ ಪೂರೈಸಿ ಕೊಡಬೇಕಾಗಿದೆ.

ಯಾವ ಕಾರ್ಖಾನೆಗಳಿಗಾಗಲಿ ಮೂರು ಮಟ್ಟದ ಕೆಲಸಗಾರರು ಬೇಕು. ಉದ್ಯೋಗಗಳ ಯೋಜನೆ ತಯಾರಿಸಿ, ಪದಾರ್ಥಗಳ ರಚನಾದಿ ವೈಶಿಷ್ಟ್ಯಗಳನ್ನು ರೂಪಿಸುವಂಥ ರೀತಿಯಲ್ಲಿ ಯಂತ್ರಗಳನ್ನೂ, ಕಚ್ಚಾ ವಸ್ತುಗಳನ್ನೂ ನಿಯಂತ್ರಣಗೊಳಿಸಿ, ಸಿದ್ಧ ಪಡಿಸಿಕೊಡುವ, ನೂತನ ಸಂಶೋಧನೆಗಳ ಪ್ರತಿಫಲಗಳನ್ನು ಪದಾರ್ಥ ತಯಾರಿಕೆಯ ಗುಣದಲ್ಲೂ ಪ್ರಮಾಣ ದಲ್ಲೂ ಹೆಚ್ಚು ಲಾಭಪ್ರದವಾಗುವಂತೆ ನಿರ್ದೇಶಿಸುವ ಎಂಜಿನಿಯರು ಬೇಕು. ಇವರಿಗೆ ಆ ವೃತ್ತಿಯಲ್ಲಿ ಅತ್ಯಂತ ಹೆಚ್ಚಿನ ಶಿಕ್ಷಣ ದೊರೆತಿರಬೇಕು. ಕಾರ್ಖಾನೆ ನಡೆಯುತ್ತಿರುವಾಗ, ಮೇಲ್ವಿಚಾರಣೆ ನೋಡಿಕೊಂಡು, ಯಂತ್ರ ಕೆಟ್ಟರೆ ಸರಿಪಡಿಸಿಕೊಳ್ಳುತ್ತಾ, ಕಚ್ಚಾ ಪದಾರ್ಥಗಳನ್ನು ಹದವರಿತು ಉಪ ಯೋಗಿಸಿಕೊಳ್ಳಲು ನಿರ್ದೇಶಿಸಲು, ಎಲ್ಲ ಯಂತ್ರಗಳಲ್ಲೂ ತಯಾರಿಕೆಕ್ರಮ ವಾಗಿ ಆಗುತ್ತಿರುವಂತೆ ಮಾಡಲು ಆ ವೃತ್ತಿಯಲ್ಲಿ ಸಾಧಾರಣ ಶಿಕ್ಷಣ ಪಡೆದ, ಯಂತ್ರ ವಿಜ್ಞಾನವನ್ನು ಬಲ್ಲ ಓವರ್‌ಸಿಯರುಗಳೂ ಬೇಕು; ಕೊನೆಯದಾಗಿ, ಯಂತ್ರದ ಮುಂದೆ ನಿಂತು ಕಚ್ಚಾವಸ್ತುವನ್ನು ಒದಗಿಸಿಕೊಳ್ಳುವುದೇ ಮೊದ ಲಾದ ಎಲ್ಲ ಕಾರ್ಯಗಳನ್ನೂ ಮಾಡಬಲ್ಲ ಕುಶಲರಾದ ಕೆಲಸಗಾರರೂ ಬೇಕು. ನಮ್ಮ ಶಿಕ್ಷಣ ಸಂಸ್ಥೆಗಳು ಈ ಮೂರು ಮಟ್ಟದ ವೃತ್ತಿಶಿಕ್ಷಣವನ್ನು ಕೊಡುವುದು ಅಗತ್ಯ.

ಕಾಲೇಜಿನ ಅಂತಸ್ತಿನ ವೃತ್ತಿಶಿಕ್ಷಣಾಲಯದಲ್ಲಿ ಮೊದಲನೆಯ ರೀತಿಯ ಕೆಲಸಗಾರರಿಗೂ, ಪ್ರೌಢ ಶಿಕ್ಷಣಾನಂತರದ ವೃತ್ತಿಶಿಕ್ಷಣ ಶಾಲೆಗಳಲ್ಲಿ ಎರಡನೆಯ ರೀತಿಯ ಕಲಸಗಾರರಿಗೂ, ಇನ್ನಿತರ ಸಾಧಾರಣ ವೃತ್ತಿಶಿಕ್ಷಣ ಕೇಂದ್ರಗಳು ಕೊನೆಯ ರೀತಿಯ ಕೆಲಸಗಾರರಿಗೂ ಶಿಕ್ಷಣ ಕೊಡಲು ಸಾಧ್ಯವಾಗುತ್ತದೆ. ಈ ದೃಷ್ಟಿಯನ್ನನುಸರಿಸಿ ವೃತ್ತಿಶಿಕ್ಷಣ ಶಾಲೆಗಳು ಏರ್ಪಡಬೇಕು.

ವಿಶ್ವವಿದ್ಯಾನಿಲಯದ ಅಂತಸ್ತಿನ ವೃತ್ತಿಶಿಕ್ಷಣದ ಕಾಲೇಜುಗಳು ಭಾರತದ ಅನೇಕ ಕಡೆ ಸರ್ಕಾರದ ಮತ್ತು ಸಾರ್ವಜನಿಕರ ನೇತೃತ್ವದಲ್ಲಿ ಆರಂಭವಾಗಿ ಕೆಲಸ ಮಾಡುತ್ತಿವೆ. ಈಚೆಗೆ ಅವುಗಳ ಸಂಖ್ಯೆಯೂ ಹೆಚ್ಚುತ್ತಿದೆ. ಅದಕ್ಕೆ ಕಾರಣ ವಿದ್ಯಾರ್ಥಿಗಳು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಆ ಶಿಕ್ಷಣಕ್ಕಾಗಿ ಬರುತ್ತಿದ್ದಾರೆ. ಎಂಜಿನಿಯರಿಂಗ್, ವೈದ್ಯ ಶಿಕ್ಷಣ, ವ್ಯವಸಾಯೋದ್ಯಮ, ವಾಣಿಜ್ಯ ವ್ಯವಹಾರ, ಮುಂತಾದ ವಿಷಯಗಳಲ್ಲಿ ವೃತ್ತಿಶಿಕ್ಷಣ ಕೊಡುವ ಕಾಲೇಜುಗಳು ಆರಂಭವಾಗಿವೆ. ಅವುಗಳ ಸಂಖ್ಯೆಯೂ, ಕೊಡುತ್ತಿರುವ ಶಿಕ್ಷಣದ ವೈವಿಧ್ಯವೂ ಹೆಚ್ಚಬೇಕಾಗಿದೆ. ಮೇಲಿನ ಎಲ್ಲ ವೃತ್ತಿಗಳಲ್ಲೂ ಕೇವಲ ಪ್ರೌಢ ಶಿಕ್ಷಣ ಮಾತ್ರ ಪಡೆದವರಿಗೂ ಶಿಕ್ಷಣ ಕೊಡುವಂಥ ಕೆಳದರ್ಜೆಯ ವೃತ್ತಿಶಿಕ್ಷಣ ಶಾಲೆಗಳೂ ಆರಂಭವಾಗಿವೆ. ಆದರೆ ಅಲ್ಲಿಗೆ ಸೇರಲು ಸಾವಿರಾರು ಮಂದಿ ಪ್ರಯತ್ನಪಟ್ಟರೆ ಅವು ಕೇವಲ ೪೦–೫೦ ಮಂದಿಗೆ ಮಾತ್ರ ಅವಕಾಶ ಕಲ್ಪಿಸಬಹುದಾದ ಅಲ್ಪ ಸಂಖ್ಯೆಯಲ್ಲಿವೆ. ಆದ್ದರಿಂದ ಈ ಅಂತಸ್ತಿನ ವೃತ್ತಿಶಿಕ್ಷಣ ಶಾಲೆಗಳು ದೇಶದ ಬೇರೆ ಬೇರೆ ಭಾಗಗಳಲ್ಲಿ ಅಲ್ಲಿರುವ ಆವಶ್ಯಕತೆಯನ್ನನುಸರಿಸಿ ಹೆಚ್ಚಬೇಕು. ಹಾಗೆಯೇ ಇನ್ನೂ ಇತರ ವೃತ್ತಿಗಳ ಶಾಲೆಗಳೂ ಆರಂಭವಾಗಬೇಕು. ಇಂಗ್ಲೆಂಡಿನಲ್ಲಿ ಪಾಲಿಟೆಕ್ನಿಕ್ ಎಂಬ ಬಹುವೃತ್ತಿಗಳಲ್ಲಿ ಶಿಕ್ಷಣ ಕೊಡುವ ಶಾಲೆಗಳಿವೆ. ಅಲ್ಲಿ ಎಲ್ಲ ಅಂತಸ್ತಿನ ವೃತ್ತಿಶಿಕ್ಷಣವನ್ನೂ ಕೊಡುವುದಲ್ಲದೆ, ಬಗೆಬಗೆಯ ವೃತ್ತಿಯಲ್ಲೂ ಶಿಕ್ಷಣ ದೊರಕುತ್ತದೆ. ಇಂಥವು ಭಾರತದಲ್ಲಿ ಬಹು ಅಲ್ಪ ಸಂಖ್ಯೆಯಲ್ಲಿವೆ.

ಮೂರನೆಯ ವರ್ಗದ ಕೆಲಸಗಾರರು ಕಾರ್ಖಾನೆಗಳ ಬೆನ್ನುಮೂಳೆಯಿದ್ದಂತೆ. ಅವರು ಅತ್ಯಧಿಕ ಸಂಖ್ಯೆಯಲ್ಲಿ ಹೊರಬಿದ್ದ ಹೊರತು ನಾಡಿನ

ಔದ್ಯೋಗಿಕ ಪ್ರಗತಿ ಆಗಲಾರದು. ಆದರೆ ನಮ್ಮ ನಾಡಿನಲ್ಲಿ ಅಂಥ ಶಾಲೆಗಳು ತೀರ ಕಡಮೆ. ಇರುವ ಹಲವಾರು ಶಾಲೆಗಳು ಸಮರ್ಪಕವಾದ ಶಿಕ್ಷಣ ಕೊಡುತ್ತಿಲ್ಲ. ಆದರಿಂದ ಕಾರ್ಖಾನೆಗಳಲ್ಲಿ ಕೆಲಸಕ್ಕೆ ಸೇರುವ ಈ ವರ್ಗದ ಕೆಲಸಗಾರರು ಆ ವೃತ್ತಿಯ ಗಂಧವನ್ನೇ ತಿಳಿಯದವರು, ಅಲ್ಲಿ ಕಲಿತುಕೊಂಡು ಕೆಲಸಮಾಡಲೆಳಸುವವರು. ಈ ದೃಷ್ಟಿಯಿಂದ ನಮ್ಮ ನಾಡಿನ ಔದ್ಯೋಗಿಕಪ್ರಗತಿ ಬಹುವಾಗಿ ಕುಂಠಿತವಾಗಿದೆ. ಆದ್ದರಿಂದ ನಮ್ಮ ಮುಂದಿನ ಶಿಕ್ಷಣದ ಯೋಜನೆಯಲ್ಲಿ ಈ ಕೆಳವರ್ಗದ ಕೆಲಸಗಾರರ ಶಿಕ್ಷಣಕ್ಕಾಗಿ ಅಧಿಕ ಸಂಖ್ಯೆಯ ವೃತ್ತಿಶಿಕ್ಷಣ ಕೇಂದ್ರಗಳನ್ನು ತೆರೆಯಲು ಗಮನ ಕೊಡಬೇಕಾಗಿದೆ.

ಪಾಶ್ಚಿಮಾತ್ಯರಲ್ಲಿ ಒತ್ತಾಯ ಶಿಕ್ಷಣ ೧೫ ನೆಯ ವರ್ಷದ ವರೆಗೆ. ಅದು ವೃತ್ತಿಶಿಕ್ಷಣಕ್ಕೆ ಉಚಿತವಾದ ಕಾಲ. ಆದರೆ ನಮ್ಮ ದೇಶದಲ್ಲಿ ಒತ್ತಾಯ ಶಿಕ್ಷಣವನ್ನು ೧೨ ನೆಯ ವರ್ಷದ ವರೆಗೆ ಮಾಡುವುದೂ ಕಷ್ಟವಾಗಿ ತೋರುತ್ತಿದೆ. ಎಂದರೆ ೧೨ ನೆಯ ವಯಸ್ಸಿಗೆ ಬಹುಮಂದಿ ಶಿಕ್ಷಣವನ್ನು ಮುಗಿಸಿಬಿಡುತ್ತಾರೆ. ಆದರೆ ಜೀವನೋಪಾಯಕ್ಕಾಗುವ ವೃತ್ತಿಶಿಕ್ಷಣ ಕೊಡಲು ಅದು ಒಪ್ಪದ, ಎಳೆಯ ವಯಸ್ಸು. ಅವರು ೧೫ನೆಯ ವಯಸ್ಸಿನವರೆಗೂ ಕಾಯಬೇಕು. ಪಾಶ್ಚಿಮಾತ್ಯರಲ್ಲಿ ಎಲ್ಲರೂ ೧೫ ನೆಯ ವಯಸ್ಸಿನ ವರೆಗೆ ಕಡ್ಡಾಯವಾಗಿ ಶಿಕ್ಷಣ ಪಡೆಯುವುದರಿಂದ ಈ ಸಮಸ್ಯೆಯೇ ಅಲ್ಲಿ ಏಳುವುದಿಲ್ಲ. ಅಲ್ಲೂ ೧೨ನೆಯ ವಯಸ್ಸಿನನಂತರ ಯುವಕರ ಅಭಿರುಚಿಆಸಕ್ತಿಗಳು ಪ್ರಕಾಶಕ್ಕೆ ಬರಲು ಆರಂಭಿಸುವುದರಿಂದ ಸೆಂಟ್ರಲ್ ಸ್ಕೂಲ್ ಎಂಬ ಸಂಸ್ಥೆಗಳಲ್ಲಿ ಸಾಂಸ್ಕೃತಿಕ ಶಿಕ್ಷಣದ ಜೊತೆಗೆ ಸಾಧಾರಣ ಮಟ್ಟಿಗೆ ವೃತ್ತಿಶಿಕ್ಷಣವನ್ನೂ ಕೊಡಲು ಏರ್ಪಾಟು ಮಾಡಿರುತ್ತಾರೆ. ನಮ್ಮ ನಾಡಿನಲ್ಲೂ ಅದನ್ನನುಸರಿಸಿ ಒಂದು ರೀತಿಯ ವೃತ್ತಿಶಿಕ್ಷಣ ಶಾಲೆಗಳನ್ನು ಆರಂಭಿಸಿ ಪ್ರಾಥಮಿಕ ಶಿಕ್ಷಣ ಮುಗಿಸಿಕೊಂಡು ಬಂದವರಿಗೆ ಸಾಂಸ್ಕೃತಿಕ ಶಿಕ್ಷಣದ ಜೊತೆಗೆ ಸ್ವಲ್ಪಮಟ್ಟಿಗೆ ವೃತ್ತಿಶಿಕ್ಷಣವನ್ನು ಕೊಡುವಂತೆ ಏರ್ಪಾಟು ಮಾಡಬಹುದು. ಎಲ್ಲೆಲ್ಲಿ ಸಾಧ್ಯವಿದೆಯೋ, ಎಲ್ಲೆಲ್ಲಿ ಅವಕಾಶವಾದೀತೋ ಅಲ್ಲೆಲ್ಲ ನೂಲುವುದು, ನೆಯ್ಗೆ, ಚಾಪೆ, ಬೆತ್ತ, ಬಾಚಣಿಗೆ—ಇವುಗಳ ಕೆಲಸ, ಲೋಹದ ಕೆಲಸ, ಹೊಲಿಗೆ, ಚರ್ಮದ ಕೆಲಸ ಮುಂತಾದವುಗಳಲ್ಲಿ ಶಿಕ್ಷಣ

ಕೊಡುವ ಏರ್ಪಾಡು ಮಾಡಬೇಕು. ಆ ಅಂತಸ್ತಿನಲ್ಲಿ ವ್ಯವಸಾಯ ಶಿಕ್ಷಣ ಕೊಡತಕ್ಕ ಶಾಲೆಗಳೂ ಅಗತ್ಯ. ಮಾಧ್ಯಮಿಕ ಶಿಕ್ಷಣ ಮುಗಿಸಿದವರಿಗೂ ಅನುಕೂಲಿಸುವಂತೆ ಪೂರ್ಣವಾಗಿ ವೃತ್ತಿಶಿಕ್ಷಣವನ್ನೇ ಕೊಡತಕ್ಕ ವೃತ್ತಿ ಶಿಕ್ಷಣ ಶಾಲೆಗಳನ್ನೂ ಆರಂಭಿಸಬೇಕು.

ಇದುವರೆಗೂ ವಿವರಿಸಿದ ವೃತ್ತಿಶಿಕ್ಷಣ ವಿದ್ಯಾರ್ಥಿಗಳಿಗಾಗಿ. ಹಾಗೆಯೇ ಕೆಲಸಕ್ಕೆ ಸೇರಿರುವ ೧೪ ಅಥವಾ ೧೫ ವರ್ಷದ ಮೇಲ್ಪಟ್ಟವರಿಗೂ ವೃತ್ತಿ ಶಿಕ್ಷಣ ಅಗತ್ಯ. ಯಾವುದಾದರೂ ಒಂದು ವೃತ್ತಿಯಲ್ಲಿ ನಿರತರಾಗಿರುವವರು ಆ ವೃತ್ತಿಯಲ್ಲಿ ಹೆಚ್ಚಿನ ಶಿಕ್ಷಣ ಪಡೆಯಲನುಕೂಲಿಸುವಂತೆ ಅವರಿಗೆ ವಿರಾಮ ಕಾಲದಲ್ಲಿ ಶಿಕ್ಷಣವೀಯುವ ಪ್ರತ್ಯೇಕ ಸಂಸ್ಥೆಗಳೂ ಸ್ಥಾಪನೆಯಾಗಬೇಕು. ಅದೇ ಮಾದರಿಯಲ್ಲಿ, ಒಂದು ವೃತ್ತಿಯಲ್ಲಿ ನಿರತರಾಗಿರುವವರು ಮತ್ತೊಂದು ವೃತ್ತಿಯಲ್ಲೂ ಶಿಕ್ಷಣ ಪಡೆಯಲಪೇಕ್ಷಿಸಿದರೆ, ಅವರಿಗೂ ಅನುಕೂಲಿಸುವಂಥ ಶಾಲೆಗಳು ಆವಶ್ಯಕ. ಕೇವಲ ಯಾವ ಕೆಲಸಕ್ಕೂ ಸೇರದೆ ಹೊಸದಾಗಿ ವೃತ್ತಿಯನ್ನು ಕಲಿಯಲಿಚ್ಛಿಸುವವರಿಗೆ ಅನುಕೂಲವಾಗಲೆಂದು ಅವರಿಗೂ ಅಲ್ಲಿಗೆ ಸೇರುವ ಅವಕಾಶವಿರಬೇಕು. ಅಥವಾ ಅಂಥವರ ಉಪಯೋಗಕ್ಕಾಗಿ ಪೂರ್ತಿಕಾಲ ಕೆಲಸಮಾಡತಕ್ಕ ಪ್ರತ್ಯೇಕ ಸಂಸ್ಥೆಗಳನ್ನಾದರೂ ಸ್ಥಾಪಿಸಬಹುದು. ಪಾಶ್ಚಿಮಾತ್ಯ ದೇಶಗಳಲ್ಲಿ ಮೇಲಿನ ಮೂರು ಮಾದರಿಯ ವೃತ್ತಿಶಿಕ್ಷಣ ಶಾಲೆಗಳೂ ಪ್ರಚಾರದಲ್ಲಿವೆ.

ಪ್ರೌಢಶಾಲೆಗಳಲ್ಲಿ ಐಚ್ಛಿಕವಾಗಿ ಕೊಡುವ ವೃತ್ತಿಶಿಕ್ಷಣಕ್ಕಿಂತ ಹೆಚ್ಚಿನ ಶಿಣಕ್ಷವೃತ್ತಿಶಿಕ್ಷಣ ಶಾಲೆಗಳಲ್ಲಿ ಕೊಡಲಾಗುತ್ತದೆ. ಏಕೆಂದರೆ, ಅಲ್ಲಿ ಕೇವಲ ತತ್ವಜ್ಞಾನಕ್ಕೇ ಪ್ರಧಾನ್ಯವಿರದೆ ಪ್ರಾಯೋಗಿಕವಾಗಿ ಆಚರಿಸುವುದರ ಕಡೆಗೂ ಗಮನ ಕೊಡಲಾಗುವುದು. ಹಾಗಿದ್ದರೂ ವೃತ್ತಿಶಿಕ್ಷಣ ಶಾಲೆಯಿಂದ ಹೊರಬಿದ್ದವರೆಲ್ಲರೂ ತಕ್ಷಣ ಕಾರ್ಯ ಆರಂಭಿಸುವಷ್ಟು ತರಪೇತಾಗಿರುವುದಿಲ್ಲ. ಅವರ ಅನುಭವ ನಿಜವಾದ ಕಾರ್ಖಾನೆಗಳಲ್ಲಿ ಕೆಲಸಮಾಡಿದಂತೆ ಹೆಚ್ಚಬೇಕು. ಅದಕ್ಕಾಗಿಯೇ ಎಂಜಿನಿಯರ, ವೈದ್ಯರ ಪರೀಕ್ಷೆ ಮುಗಿದ ಮೇಲೆ ಕೆಲವುಕಾಲ ಪ್ರತ್ಯೇಕ ಕಾರ್ಖಾನೆಯಲ್ಲಿ, ಚಿಕಿತ್ಸಾಲಯದಲ್ಲಿ ಕೆಲಸಮಾಡಿ ಅನುಭವ ಪಡೆಯುವುದನ್ನು ಕಡ್ಡಾಯ ಮಾಡಿರುವುದು. ಈ ಪ್ರಾಯೋಗಿಕ ಶಿಕ್ಷಣ ಯಶಸ್ವಿಯಾಗಬೇಕಾದರೆ ಸರ್ಕಾರದ ಮತ್ತು ಖಾಸಗಿಯವರ

ಕಾರ್ಖಾನೆಗಳು ಶಿಕ್ಷಣ ಶಾಲೆಗಳೊಡನೆ ಮನಃಪೂರ್ವಕವಾಗಿ ಸಹಕರಿಸ ಬೇಕು. ಆ ಬಗ್ಗೆ ಆವಶ್ಯಕವೆನಿಸಿದರೆ ಶಾಸನವನ್ನೂ ಮಾಡುವುದು ಉಚಿತ ವೆನಿಸುತ್ತದೆ.

ಉಪಾಧ್ಯಾಯರ ಶಿಕ್ಷಣಶಾಲೆಗಳೂ ಒಂದು ವಿಧದ ವೃತ್ತಿ ಶಿಕ್ಷಣಶಾಲೆ ಗಳೇ. ಮಾಧ್ಯಮಿಕಶಿಕ್ಷಣ ಮುಗಿದಿರುವವರಿಗೊಪ್ಪುವಂಥ ಶಿಕ್ಷಣಶಾಲೆಗಳೂ ಪ್ರೌಢ ಶಿಕ್ಷಣವಾದವರಿಗೊಪ್ಪುವಂಥ ಮತ್ತೊಂದು ದರ್ಜೆಯ ಶಿಕ್ಷಣಶಾಲೆ ಗಳೂ, ವಿಶ್ವವಿದ್ಯಾನಿಲಯದ ಅಂತಸ್ತಿನಲ್ಲಿ ಪದವೀಧರ ಶಿಕ್ಷಕರ ಶಿಕ್ಷಣ ಕ್ಕಾಗಿ ಕಾಲೇಜುಗಳೂ ಅಗತ್ಯ. ನಮ್ಮ ನಾಡಿನಲ್ಲಿ ಈಗ ಈ ಮೂರು ರೀತಿಯವೂ ಇವೆ. ಇವುಗಳಲ್ಲಿ ಮೊದಲನೆಯ ಸಂಸ್ಥೆಯಲ್ಲಿ ಮೂರು ವರ್ಷ ಕಾಲವಿದ್ದು, ಮೊದಲೆರಡು ವರ್ಷಗಳಲ್ಲಿ ಸಾಂಸ್ಕೃತಿಕ ವಿಷಯಗಳನ್ನೂ ಕೊನೆಯ ವರ್ಷ ಶಿಕ್ಷಣ ವೃತ್ತಿ ಶಿಕ್ಷಣವನ್ನೂ ಕೊಡಲಾಗುತ್ತಿದೆ. ನಮ್ಮ ಹೊಸ ಯೋಜನೆಯಲ್ಲಿರುವಂತೆ ಮಾಧ್ಯಮಿಕಶಿಕ್ಷಣ ೧೫ವರ್ಷದ ಪರ್ಯಂತ ವಾದಾಗ ಈ ಶಿಕ್ಷಣ ಕೇವಲ ಒಂದು ಅಥವಾ ಎರಡು ವರ್ಷಗಳಲ್ಲೇ ಮುಗಿಯ ಬಹುದು. ಎರಡನೆಯ ಮತ್ತು ಮೂರನೆಯ ದರ್ಜೆಯ ಉಪಾಧ್ಯಾಯರ ಶಿಕ್ಷಣ ಸಂಸ್ಥೆಗಳಲ್ಲಿ ಕೇವಲ ಉಪಾಧ್ಯಾಯ ವೃತ್ತಿಯ ಶಿಕ್ಷಣವನ್ನು ಮಾತ್ರ ಕೊಡಲಾಗುವುದು. ಅಲ್ಲಿನ ಶಿಕ್ಷಣ ಒಂದು ವರ್ಷ ಮಾತ್ರ. ಉಪಾ ಧ್ಯಾಯರ ಶಿಕ್ಷಣಕಾರ್ಯ ಸಮರ್ಪಕವಾಗಿಲ್ಲವೆಂದು ಕೂಗು ಕೇಳಿಬರು ತ್ತಿದೆ. ಇದನ್ನು ನಿವಾರಿಸಬೇಕಾದರೆ ನಾಡಿನಲ್ಲಿ ಶಿಕ್ಷಣಕೇಂದ್ರಗಳನ್ನು ಎಲ್ಲ ಜಿಲ್ಲೆಯಲ್ಲೂ ಸ್ಥಾಪಿಸಬೇಕು; ಈಗಿರುವುದಕ್ಕಿಂತ ಹೆಚ್ಚಿನ ರೀತಿಯಲ್ಲಿ ಪ್ರಾಯೋಗಿಕವಾಗಿ ಶಿಕ್ಷಣವನ್ನು ಕೊಡುವ ಏರ್ಪಾಡೂ ನಡೆಯಬೇಕು.

ಸೈನಿಕ, ವೈಮಾನಿಕ, ನೌಕಾ ವೃತ್ತಿಯಲ್ಲಿ ಶಿಕ್ಷಣ ಕೊಡಲು ಸಾಮಾನ್ಯ ವಾಗಿ ಸೈನ್ಯ ಶಾಖೆಯವರ ಪ್ರತ್ಯಕ್ಷ ಮೇಲ್ವಿಚಾರಣೆಯಲ್ಲೇ ಶಿಕ್ಷಣಶಾಲೆಗಳು ಏರ್ಪಡುವುದರಿಂದಲೂ, ಅವು ಶಿಕ್ಷಣಶಾಖೆಯ ಆಡಳಿತಕ್ಕೆ ಒಳಪಡದವಾ ದ್ದರಿಂದಲೂ ಅವನ್ನಿಲ್ಲಿ ವಿವರಿಸಿಲ್ಲ.

ಮೇಲೆ ವಿವರಿಸಿದಂತೆ ಭಾರತದ ಶಿಕ್ಷಣಸಂಸ್ಥೆಗಳು ಅಂತಸ್ತಿನಲ್ಲೂ, ವೈವಿಧ್ಯತೆಯಲ್ಲೂ ಅಧಿಕ ಸಂಖ್ಯೆಯಲ್ಲಿ ರೂಪುಗೊಳ್ಳುವುದು ಅತ್ಯಾವಶ್ಯಕ.

ಇಂದಿನವರೆಗೂ ನಾಡಿನಲ್ಲಿ ಆಚರಣೆಯಲ್ಲಿದ್ದ ಕ್ರಮವನ್ನೂ, ಅದರಲ್ಲಿದ್ದ ನ್ಯೂನತೆಗಳನ್ನೂ, ಈಚೆಗೆ ದೇಶದ ಮುಂದೆ ಇಡಲಾಗಿರುವ ಸಾರ್ಜೆಂಟ್ ಯೋಜನೆಯನ್ನೂ, ನಾಡಿನ ಆವಶ್ಯಕತೆ ಮತ್ತು ಸ್ಥಿತಿಗತಿಗಳನ್ನೂ ಪರಿಗಣಿಸಿಯೇ ಮೇಲಿನ ಯೋಜನೆಯನ್ನು ಈಗ ರೂಪಿಸಲಾಗಿದೆ. ಅದನ್ನು ಇಲ್ಲಿ ನಕ್ಷೆಯ ರೂಪದಲ್ಲಿ ಕೊಡಲಾಗಿದೆ.




**ನಮ್ಮ ಶಿಕ್ಷಣ ಸಂಸ್ಥೆಗಳ ಪುನರ್ವ್ಯವಸ್ಥೆಗೆ ಒಂದು ಯೋಜನೆ**

**ವಯಸ್ಕರ ಶಾಲೆಗಳು :** ಶಾಲೆಗಳಲ್ಲಿ ತಕ್ಕಮಟ್ಟಿನ ಶಿಕ್ಷಣ ಪಡೆದು ವೃತ್ತಿನಿರತರಾದ ವಯಸ್ಕರಿಗೆ ಪ್ರಾಪಂಚಿಕ ಜ್ಞಾನವನ್ನು ಇನ್ನೂ ಹೆಚ್ಚಾಗಿ ದೊರಕಿಸುವ ದೃಷ್ಟಿಯಿಂದ ಪಾಶ್ಚಿಮಾತ್ಯ ದೇಶಗಳಲ್ಲಿ ವಿವಿಧ ಸಂಸ್ಥೆಗಳು ದುಡಿಯುತ್ತಿವೆ. ಇವುಗಳನ್ನು ಅವರು ವಯಸ್ಕರ ಶಾಲೆಗಳೆಂದು ಕರೆಯುವರು. ಅಲ್ಲಿ ಒತ್ತಾಯ ಶಿಕ್ಷಣ ಜಾರಿಯಲ್ಲಿರುವುದರಿಂದ ಎಲ್ಲರೂ ತಕ್ಕ ಮಟ್ಟಿಗೆ ವಿದ್ಯಾವಂತರಾಗಿರುತ್ತಾರೆ. ಅವರಿಗೆ ಸಾಹಿತ್ಯ, ಸಂಸ್ಕೃತಿ, ಕಲೆ, ಉದ್ಯೋಗ, ವಾಣಿಜ್ಯ ಮುಂತಾದ ವಿಷಯಗಳ ಮೇಲೆ ಹೆಚ್ಚಿನ ಜ್ಞಾನ ಬರುವಂತೆ ಅವರ ವಿರಾಮ ಕಾಲದಲ್ಲಿ ಶಿಕ್ಷಣ ಕೊಡಲಾಗುತ್ತಿದೆ. ಆದರೆ ನಮ್ಮ ಭರತಖಂಡದಲ್ಲಿ ಒತ್ತಾಯ ಶಿಕ್ಷಣ ಜಾರಿಯಲ್ಲಿಲ್ಲ. ಇಲ್ಲಿ ಅತ್ಯಧಿಕ ಸಂಖ್ಯೆಯಲ್ಲಿ ನಿರಕ್ಷರಸ್ಥರಾದ ವಯಸ್ಕರಿದ್ದಾರೆ. ಅವರಿಗೆ ಅಕ್ಷರಜ್ಞಾನವಾಗಬೇಕು. ಆದ್ದರಿಂದ ನಮ್ಮ ನಾಡಿನಲ್ಲಿ ವಯಸ್ಕರ ಶಿಕ್ಷಣ ಇವೆರಡು ಕಾರ್ಯಗಳನ್ನೂ ಒಳಗೊಂಡಿದೆ. ಇತ್ತೀಚಿನವರೆಗೂ ರಾತ್ರಿ ಶಾಲೆಗಳು ವಯಸ್ಕರಲ್ಲಿ ಅಕ್ಷರ ಪ್ರಚಾರಕ್ಕಾಗಿ ಸರ್ಕಾರದ ಆಡಳಿತದಲ್ಲಿ ನಡೆಯುತ್ತಿದ್ದುವು. ಅಲ್ಲಿ ಓದುವುದು, ಬರೆಯುವುದು ಮತ್ತು ಲೆಕ್ಕಾಚಾರಗಳನ್ನು ತಕ್ಕಮಟ್ಟಿಗೆ ಕಲಿಸುವ ಏರ್ಪಾಡಿತ್ತು. ಆದರೆ ಅದರಿಂದ ನಿರಕ್ಷರತೆಯು ನಿರ್ಮೂಲ ಯಶಸ್ವಿಯಾಗಿಯೂ ಜಾಗ್ರತೆಯಾಗಿಯೂ ಆಗದದ್ದನ್ನು ಕಂಡು ಅಲ್ಲಲ್ಲಿ ಆ ಕಾರ್ಯವನ್ನು ಸಾರ್ವಜನಿಕ ಸಂಸ್ಥೆಗಳಿಗೆ ವಹಿಸಿರುವುದು ಕಂಡುಬರುತ್ತದೆ. ಪ್ರಚಾರವೂ ಪ್ರಯತ್ನವೂ ಆ ಮಾರ್ಗದಲ್ಲಿ ತಕ್ಕಮಟ್ಟಿಗೆ ನಡೆಯುತ್ತಿದೆ. ಅದಕ್ಕಾಗಿ ಅಧಿಕ ಧನವ್ಯಯವೂ ಆಗುತ್ತಿದೆ. ಆದರೆ ಶ್ರಮಕ್ಕೆ ತಕ್ಕ ಪ್ರತಿಫಲ ದೊರಕಿರುವಂತೆ ತೋರುವುದಿಲ್ಲ. ನಿರಕ್ಷರತೆ ನಿರ್ಮೂಲವಾಗಬೇಕಾದರೆ ಸಾರ್ವತ್ರಿಕ ಒತ್ತಾಯ ಶಿಕ್ಷಣವೇ ರಾಜಮಾರ್ಗವಾದರೂ ಇರುವ ನಿರಕ್ಷರಸ್ಥರನ್ನೆಲ್ಲ ತಕ್ಕಮಟ್ಟಿಗೆ ಅಕ್ಷರಸ್ಥರನ್ನಾಗಿ ಮಾಡುವ ಕಾರ್ಯವೂ ಜೊತೆಯಲ್ಲೇ ಸಾಗಬೇಕಾಗಿದೆ. ಅಲ್ಲದೆ ಆ ಕಾರ್ಯಕ್ಕೆ ಸಹಾಯವಾಗುವಂತೆ, ಜನಸಾಮಾನ್ಯಕ್ಕೆ (ಅಕ್ಷರಸ್ಥರಿಗೂ, ಅನಕ್ಷರಸ್ಥರಿಗೂ) ಅನುಕೂಲಿಸುವಂತೆ ಸಾಹಿತ್ಯ, ಕಲೆ, ಉದ್ಯೋಗ, ಆರೋಗ್ಯ, ವಾಣಿಜ್ಯ, ಧರ್ಮ, ನೀತಿ ಮುಂತಾದವುಗಳಮೇಲೆ ನಾಟಕ, ಚಲನಚಿತ್ರ ಮೊದಲಾದವನ್ನು ಏರ್ಪಡಿಸಬೇಕು. ಆ ವಿಷಯಗಳನ್ನು ಸುವ್ಯವಸ್ಥಿತವಾಗಿ

ಬೋಧಿಸಲು ಅವಕಾಶವೂ ಆವಶ್ಯಕವೂ ಇದ್ದಂತೆ ವಯಸ್ಕರ ಶಾಲೆಗಳನ್ನೂ ಆರಂಭಿಸಬಹುದು. ಹೀಗೆ ವಯಸ್ಕರ ಶಿಕ್ಷಣಕಾರ್ಯ ನಮ್ಮ ನಾಡಿನಲ್ಲಿ ದ್ವಿಮುಖ ರೂಪವನ್ನು ತಾಳಿದೆ. ಒಂದು ಕಡೆ ಅಕ್ಷರತೆಯೂ ಪ್ರಚಾರವಾಗಬೇಕು; ಇನ್ನೊಂದು ಕಡೆ ಅಷ್ಟಿಷ್ಟು ಶಿಕ್ಷಣ ಪಡೆದವರಿಗೆ ಹೆಚ್ಚಿನ ಶಿಕ್ಷಣವೂ ಆಗಬೇಕು. ಅದಕ್ಕೊಪ್ಪುವಂತೆ ಶಾಲೆಗಳನ್ನೂ ಸಂಸ್ಥೆಗಳನ್ನೂ ಇನ್ನು ಮೇಲೆ ಆರಂಭಿಸಬೇಕಾಗಿದೆ.

# ೧೦. ಬೋಧನೆ ಮತ್ತು ಕಲಿವು

ಮಕ್ಕಳ ವಯೋಗುಣಗಳನ್ನೂ, ಅಲ್ಲಿ ಕೊಡುವ ಶಿಕ್ಷಣವನ್ನೂ ಅನುಸರಿಸಿ ಶಿಕ್ಷಣ ಸಂಸ್ಥೆಗಳು ಅಂತಸ್ತಿನಲ್ಲೂ ವೈವಿಧ್ಯತೆಯಲ್ಲೂ ಹೇಗೆ ವ್ಯವಸ್ಥೆಗೊಳ್ಳಬೇಕೆಂಬುದನ್ನು ಹಿಂದಿನ ಅಧ್ಯಾಯದಲ್ಲಿ ವಿವರಿಸಿರುತ್ತೇವೆ. ಹಾಗೆ ಏರ್ಪಟ್ಟ ಶಿಕ್ಷಣ ಯಶಸ್ವಿಯಾಗಬೇಕಾದರೆ ಬೋಧನಕ್ರಮವೂ ಉಚಿತವಾಗಿರಬೇಕು; ಮಾನವನ ಇತಿಹಾಸದ ಶೈಶವಕಾಲದಲ್ಲಿ ಅವನಿಗಿದ್ದ ಶಿಕ್ಷಣಶಾಲೆಯೆಂದರೆ ಕುಟುಂಬ ಜೀವನ ಮಾತ್ರ. ದೊಡ್ಡವರು ಆಡುವುದನ್ನೂ ಮಾಡುವುದನ್ನೂ ನೋಡಿ ಅನುಕರಿಸುವುದೊಂದೇ ಆ ದಿನದ ಶಿಕ್ಷಣ ಕ್ರಮ. ಅನಂತರ ಅವನ ಅನುಭವ ಹೆಚ್ಚಿ, ಸಂಸ್ಕೃತಿ ಬೆಳೆದು, ಅವುಗಳ ಪರಿಚಯಕ್ಕಾಗಿ ಶಾಲೆಗಳು ರೂಪುಗೊಂಡಮೇಲೆ ಗ್ರಂಥಗಳನ್ನು ಕಂಠಪಾಠ ಮಾಡಿಸುವುದರ ಕ್ರಮ ಆರಂಭವಾಗಿ ಇತ್ತೀಚಿನವರೆಗೂ, ಏಕೆ, ಇಂದಿಗೂ ಪ್ರಧಾನವಾದ ಬೋಧನಕ್ರಮವಾಗಿ ಪರಿಗಣಿಸಲಾಗಿದೆ. ಆಧುನಿಕ ಸಂಶೋಧನೆಗಳಿಂದ ಈ ಕ್ರಮ ಅಷ್ಟು ಉಚಿತವಲ್ಲವೆಂಬುದು ಸಿದ್ಧವಾಗಿದ್ದರೂ ಶಿಕ್ಷಣ ಶಾಲೆಗಳಿಂದ ಇದಿನ್ನೂ ದೂರವಾಗಿಲ್ಲ. ಪರೀಕ್ಷೆಗಳನ್ನು ಕಡೆ ಹಾಯಿಸುವುದೇ ಪ್ರಥಮ ಉದ್ದೇಶವೆಂದು ಪರಿಗಣಿಸುವ ನಮ್ಮ ನಾಡಿನಲ್ಲಂತೂ ಈ ಕ್ರಮ ಬಲವಾಗಿ ಬೇರೂರಿದೆ. ಇದರಿಂದ ಮಕ್ಕಳ ಯೋಚನಾ ಶಕ್ತಿಯಾಗಲಿ, ಒಳ್ಳೆಯ ಅಭ್ಯಾಸವಾಗಲಿ, ದೃಷ್ಟಿಧ್ಯೇಯಗಳಾಗಲಿ, ಸಮಸ್ಯೆಗಳನ್ನು ವಿವೇಚಿಸಿ ಬಿಡಿಸಿಕೊಳ್ಳುವ ಚಾತುರ್ಯವಾಗಲಿ, ನಿತ್ಯ ಕಾರ್ಯಗಳಲ್ಲಿ ಕೌಶಲ್ಯವಾಗಲಿ ಮೂಡುವಂತಿಲ್ಲ. ಈಚೆಗೆ ಪಾಶ್ಚಾತ್ಯ ಶಿಕ್ಷಣರಂಗದಲ್ಲಿ ಸಂಶೋಧನೆಯ ಹೊಂಬೆಳಕು ಬಿದ್ದು, ಅಲ್ಲಿನ ಬೋಧನಕ್ರಮ ಬಹುವಾಗಿ ಉತ್ತಮಗೊಂಡಿದೆ. ಆದರೆ ಭಾರತದಲ್ಲಿ ಪಾಶ್ಚಿಮಾತ್ಯರ ಹಿಂದಿನ ಶಿಕ್ಷಣ ಪದ್ಧತಿಯನ್ನು ತಂದು ನಾಟಿ ಹಾಕಿರುವುದರಿಂದ, ಅದರೊಡನೆ ಆಗ ಬಂದ, ಉಚಿತವಲ್ಲದ ಬೋಧನಕ್ರಮ ಇನ್ನೂ ನಡೆದುಕೊಂಡೇ ಬರುತ್ತಿದೆ. ಈಚೆಗೆ ನೂತನ ಸಂಶೋಧನೆಗಳನ್ನು ಉಪಯೋಗಿಸಿಕೊಂಡು ಬೋಧನಕ್ರಮವನ್ನು ಉತ್ತಮಪಡಿಸಲು ಯತ್ನ ನಡೆಯುತ್ತಿದ್ದರೂ ತಕ್ಕಷ್ಟು ಫಲಪ್ರದ

ವಾಗಿಲ್ಲ. ಇದಕ್ಕೆ ಕಾರಣಗಳೂ ಇವೆ: ಮೊದಲನೆಯದಾಗಿ, ಶಿಕ್ಷಣ ಕರಣಿಕರ ಅಥವಾ ಇನ್ನಿತರ ಸರ್ಕಾರದ ಕೆಲಸಗಳನ್ನು ದೊರಕಿಸುವುದಕ್ಕಾಗಿಯೇ ಎಂಬ ಭಾವನೆ ಜನತೆಯಲ್ಲಿ ಮೆಕಾಲೆಯುವರ ಕಾಲದಿಂದಲೂ ಬೇರೂರಿದೆ. ಅಂದು ಸರ್ಕಾರದ ಉದ್ಯೋಗ ಓದಿದವರೆಲ್ಲರಿಗೂ ದೊರಕುವಂತಿದ್ದರೂ ಈಗ ಆ ಯೋಗ ಇಲ್ಲವಾಗಿದೆ. ಆದರೂ ಆ ಮನೋಭಾವ ಮಾತ್ರ ಇನ್ನೂ ಬೆಳೆದು ಕೊಂಡೇ ಬರುತ್ತಿದೆ. ಆ ಕೆಲಸಗಳಿಗೆ ಒಪ್ಪತಕ್ಕ ಪಾಂಡಿತ್ಯ ಪರೀಕ್ಷೆ ಗಳಿಂದ ನಿರ್ಧರಪಡಬೇಕಾಗಿರುವುದರಿಂದ ಅದನ್ನು ಕಡೆಹಾಯಲು ಕಂಠ ಪಾಠವೇ ಸೂಕ್ತಮಾರ್ಗವಾಗಿ ಪರಿಗಣಿಸಲಾಗಿದೆ. ನಮ್ಮ ಶಿಕ್ಷಣದ ಈ ಗುರಿ ಮಾರ್ಪಟ್ಟು, ಪರೀಕ್ಷೆಗಳಿಗಿರುವ ಇಂದಿನ ಅನುಚಿತ ಪ್ರಾಧಾನ್ಯತೆ ಕೊನೆ ಯಾದರೆ ಮಾತ್ರ ಬೋಧನಕ್ರಮವೂ ಉತ್ತಮಗೊಂಡೀತು.

ಅತ್ಯಲ್ಪ ಕಾಲದಲ್ಲಿ, ಅತ್ಯಲ್ಪ ಶ್ರಮದಲ್ಲಿ ನಮ್ಮ ಶಿಕ್ಷಣದ ಗುರಿ ಈಡೇರು ವಂತೆ ಮಾಡುವುದೇ ಉತ್ತಮ ಬೋಧನಕ್ರಮ. ಅಂಥ ಕ್ರಮವಾವುದೆಂದು ದರ್ಶಿಸಬೇಕಾದರೆ ಶಿಕ್ಷಕರಿಗೆ ಮಕ್ಕಳ ಮಾನಸಿಕ ವ್ಯಾಪಾರದ ಪರಿಚಯ ಅಗತ್ಯ. ಜೊತೆಗೆ, ಬೋಧಿಸತಕ್ಕ ವಿಷಯದಲ್ಲಿ ಪಾಂಡಿತ್ಯವೂ, ಅದರಿಂದ ಮೂಡಬೇಕಾದ ಪ್ರತಿಫಲದ ಅರಿವೂ ಅವರಿಗಿರಬೇಕು. ಯಾವ ವಿಷಯ ವನ್ನೇ ಬೋಧಿಸುತ್ತಿರಲಿ, ಮಕ್ಕಳು ಆ ವಿಷಯವನ್ನು ಕಲಿಯುವುದರ ಜೊತೆಗೆ ಪ್ರಾಸಂಗಿಕವಾಗಿ ಅವರ ಮನಸ್ಸೂ, ನಡೆನುಡಿಗಳೂ ಪರಿಷ್ಕರಣ ಗೊಂಡು ಬಹುಮುಖವಾದ ಶಿಕ್ಷಣವಾಗಬೇಕೆಂಬ ಪರಿಜ್ಞಾನವೂ ಅವರ ಮನಸ್ಸಿನಲ್ಲಿರಬೇಕು. ಅಂಥ ಬೋಧನಕ್ರಮ ವಿಶಾಲ ದೃಷ್ಟಿಯದು.

ಶಿಕ್ಷಣ ಒಂದು ಕಲೆಯೆಂದು ಕೆಲವರೂ, ಒಂದು ವಿಜ್ಞಾನವೆಂದು ಇನ್ನು ಕೆಲವರೂ, ಆತ್ಮೀಯ ಪ್ರಸಾದನ ಕಾರ್ಯವೆಂದು ಮತ್ತೆ ಕೆಲವರೂ, ಕರೆ ಯುವುದುಂಟು. ಈ ಅಭಿಪ್ರಾಯವೊಂದೊಂದರಲ್ಲೂ ಅಷ್ಟಿಷ್ಟು ಸತ್ಯಾಂಶ ವಿದ್ದರೂ ಶಿಕ್ಷಣ ಒಂದು ಕಲೆಯೂ ಅಹುದು, ವಿಜ್ಞಾನವೂ ಅಹುದು, ಆತ್ಮೀಯ ಪ್ರಸಾಧನವೂ ಅಹುದು. ಉಪಾಧ್ಯಾಯರನ್ನು ಇಟ್ಟಿಗೆ–ಗಾರೆ ಕೆಲಸದವರಿಗೆ ಹೋಲಿಸುವುದುಂಟು. ಇಟ್ಟಿಗೆ ಕಟ್ಟುವವರಿಗೆ ಕೌಶಲವೇನೋ ಬೇಕು. ಆದರೆ ಯಾರೋ ಹಾಕಿಕೊಟ್ಟ ಯೋಜನೆಯಂತೆ ಅವರು ಕಟ್ಟಿ ಮುಗಿಸು ತ್ತಾರೆ. ಉಪಾಧ್ಯಾಯರಿಗಾದರೆ ಸ್ವತಂತ್ರ ಯೋಜನೆಯೂ ಬೇಕು.

ಹಾಗೆಯೇ ಅವರನ್ನು ಯಂತ್ರ ವಿಜ್ಞಾನಿಗಳೊಡನೆಯೂ ಹೋಲಿಸುವರು. ಆ ಕಾರ್ಯದಲ್ಲಿ ಒಂದೇ ರೀತಿಯಲ್ಲಿ ಯಂತ್ರ ನಡಸುವುದೂ, ಒಂದೇ ರೀತಿಯ ಪದಾರ್ಥಗಳನ್ನು ರೂಪಿಸುವುದೂ, ಯಾಂತ್ರಿಕವಾಗಿ ನಿಯಮವನ್ನು ಪಾಲಿಸುವುದೂ ಕಂಡುಬರುತ್ತವೆ. ಅವರದು ಒಂದೇ ಗುರಿ—ಅದಕ್ಕೆ ಯಾಂತ್ರಿಕವಾದ ಒಂದೇ ಮಾರ್ಗ. ಹೆಚ್ಚು ಕಡಮೆ ಆಗುವಂತೆಯೇ ಇಲ್ಲ. ಆದರೆ, ಉಪಾಧ್ಯಾಯರು ಜೀವಂತ ವಸ್ತುಗಳನ್ನು ಸಂಸ್ಕರಿಸಿ ಅವರವರ ಶಕ್ತಿಸಾಮರ್ಥ್ಯಗಳನ್ನನುಸರಿಸಿ ಭಿನ್ನವ್ಯಕ್ತಿಗಳನ್ನು ಮೂಡಿಸಬೇಕಾಗಿದೆ. ಆ ಕಾರ್ಯದಲ್ಲಿ ಆವಶ್ಯಕವಾದ ವಿಜ್ಞಾನದೃಷ್ಟಿ ಅವರಿಗಿರಬೇಕಾದರೂ ಸನ್ನಿವೇಶಕ್ಕೆ, ಭಿನ್ನ ವ್ಯಕ್ತಿಗಳಿಗೆ ತಕ್ಕಂತೆ ತನ್ನ ಬೋಧನಕ್ರಮವನ್ನು ಬದಲಾಯಿಸಕೊಳ್ಳಬೇಕಾಗುತ್ತದೆ. ಶಿಕ್ಷಣ ಒಂದು ಉಪಾಸನಾ ಕಾರ್ಯವೆಂದೂ ಹೇಳುವರು. ಕಲೆಗಾರ ತನ್ನ ಮನಸ್ಸಿನಲ್ಲಿ ಅನುಭವಿಸಿದ ಭಾವನೆಗಳನ್ನು ಕೃತಿಯಲ್ಲಿ ಮೂಡಿಸಿ, ನೋಡಿದವರ, ಕೇಳಿದವರ ಮೇಲೆ ಪರಿಣಾಮ ಕಾರಿಯಾಗಿಸಲು ಯತ್ನಿಸುತ್ತಾನೆ. ಉಪಾಧ್ಯಾಯರೂ ತಮ್ಮ ಅನುಭವ ಮತ್ತು ದೃಷ್ಟಿ ಧ್ಯೇಯಗಳನ್ನು ಮಕ್ಕಳ ಮಾನಸರಂಗದಲ್ಲಿ ಮೂಡಿಸಲು ಪ್ರಯತ್ನಿಸುವರಾದರೂ ಸಮಾಜದ ಸ್ವರೂಪವನ್ನೂ ಅರಿತವರಾಗಿದ್ದು, ಅಲ್ಲಿನ ಜೀವನಕ್ಕೆ ಮಕ್ಕಳು ಹೊಂದಿಕೊಳ್ಳುವಂತೆ ಮಾಡಲೂ ಪ್ರಯತ್ನಿಸುತ್ತಿರ ಬೇಕು. ಹೀಗೆ ಮೇಲಣ ಮೂವರು ವ್ಯಕ್ತಿಗಳಲ್ಲಿರುವ ಶಕ್ತಿಗಳೂ ಉಪಾಧ್ಯಾಯರಿಗೆ ಆವಶ್ಯಕ. ಜೊತೆಗೆ ಅವರೆಲ್ಲರಿಗಿಂತ ಹಲವು ಹೆಚ್ಚಿನ ಸಾಮರ್ಥ್ಯಗಳೂ ಬೇಕು. ಆದ್ದರಿಂದ ಉಪಾಧ್ಯಾಯ ವೃತ್ತಿ ಅತ್ಯಂತ ಕುಶಲವೃತ್ತಿಗಳಲ್ಲಿ ಒಂದೆನ್ನಬಹುದು.

ಹಿಂದೆ ಬೋಧನಕಾರ್ಯದಲ್ಲಿ ಪ್ರಾಧಾನ್ಯತೆಯಿದ್ದುದು ಪಠ್ಯವಸ್ತುವಿಗೆ. ಬಹುಮಟ್ಟಿಗೆ ಅದು ಉಚಿತವಲ್ಲದ ಪಠ್ಯವಸ್ತುವಾಗಿರುತ್ತಿತ್ತು. ಮಕ್ಕಳ ಕಡೆ ಗಮನವೇ ಇರುತ್ತಿರಲಿಲ್ಲ. ಅವರಿಗೆ ಇಷ್ಟವಿರಲಿ, ಇಲ್ಲದಿರಲಿ, ಕಲಿಯಲು ಅಭಿರುಚಿಆಸಕ್ತಿ ಇರಲಿ ಇಲ್ಲದಿರಲಿ ಉಪಾಧ್ಯಾಯರು ಉರು ಹಾಕಿಸಿ ಕಟುಬಲುಮೆಯಲ್ಲಿ ಆ ಕಾರ್ಯ ಸಾಧಿಸುವುದೇ ಶಿಕ್ಷಣಕ್ರಮವಾಗಿತ್ತು. ಇಷ್ಟರಿಂದ ಇಷ್ಟು ಪುಟಗಳವರೆಗೆ ಎಂದು ಉಪಾಧ್ಯಾಯರು ಕೈತೋರಿಸಿದರೆ ಅಷ್ಟನ್ನು ಹೃದ್ಗತಮಾಡಿ ಮಕ್ಕಳು ಒಪ್ಪಿಸಬೇಕಾಗಿತ್ತು.

ಆಸಕ್ತಿಯಿಲ್ಲದೆ ಅವರು ಕಲಿಯಲು ವಿಮುಖರಾದರೆ ದಂಡನೆ ಕಾದೇ ಇರುತ್ತಿತ್ತು! ಆದರೆ ಈಗ ಪ್ರಾಧಾನ್ಯತೆ ಪಠ್ಯವಸ್ತುವಿಗಲ್ಲ—ಮಗುವಿಗೆ. ಮಗುವಿನ ಬೆಳವಣಿಗೆಗಾಗಿ ಮಾತ್ರ ಪಠ್ಯವಸ್ತುವಿರುವುದು! ೧೮ನೆಯ ಶತಮಾನದ ಆದಿಯಲ್ಲಿದ್ದ ರೂಸೋ ಮಕ್ಕಳನ್ನು ಈ ದಬ್ಬಾಳಿಕೆಗೆ ಗುರಿಮಾಡುವುದನ್ನು ಖಂಡಿಸಿ ಅವರನ್ನು ಪ್ರೇಮಾದರಗಳಿಂದ ಕಂಡು ಶಿಕ್ಷಣಾಭಿವೃದ್ಧಿಯನ್ನು ಸಾಧಿಸಬೇಕೆಂದು ವಾದಿಸಿದನು. ಆತನ ವಾದದ ತಳಹದಿಯ ಮೇಲೇ ಆಧುನಿಕ ಕಾಲದ ಶಾಸ್ತ್ರೀಯ ರೀತಿಯ ಬೋಧನಕ್ರಮ ಬೆಳೆದು ರೂಪುಗೊಂಡಿತೆನ್ನಬಹುದು. ರೂಸೋವಿನನಂತರ ಮಕ್ಕಳಿಗೆ ಶಿಕ್ಷಣರಂಗದಲ್ಲಿ ಪ್ರಥಮಸ್ಥಾನ ದೊರಕುತ್ತಾ ಬಂತು ಶಿಶುವೇ ಶಿಕ್ಷಣದ ಕೇಂದ್ರವಸ್ತುವಾಯಿತು. ಆಗ ಉಪಾಧ್ಯಾಯರು ಹಿಂದೆ ತಳೆದಿದ್ದ ದೃಷ್ಟಿಧ್ಯೇಯವೂ ಬದಲಾಯಿತು; ದಂಡಿಸುವುದರ ಬದಲು ಮಕ್ಕಳ ಮನೋಗತವನ್ನು ಅರಿತು ಅವರಿಗೆ ಸರಿಯಾಗಿ ತಿಳಿಯುವಂತೆ ತನ್ನ ಬೋಧನಕ್ರಮವನ್ನು ರೂಪಿಸಿಕೊಳ್ಳುವುದೂ ಆರಂಭವಾಯಿತು. ಜೊತೆಗೆ ಪರೀಕ್ಷಾಕ್ರಮಗಳೂ ಹೊಸ ಮಾರ್ಗದಲ್ಲಿ ರೂಪುಗೊಳ್ಳಲಾರಂಭಿಸಿವೆ. ಕೈಯಲ್ಲಿ ದಂಡ ಹಿಡಿದು ಉರು ಹಾಕಿಸುವ ಕ್ರಮ ಮಾಯವಾಗಿ ಮಾತಾಡುತ್ತಾ, ಕಪ್ಪುಹಲಗೆಯ ಮೇಲೆ ಬರೆದು ವಿವರಿಸಿಕೊಂಡು ಪಾಠಮಾಡುವ ಅಭ್ಯಾಸ ಆರಂಭವಾಯಿತು. ಹಿಂದೆ ಮಕ್ಕಳು ಕಲಿತುಕೊಂಡು ಬಂದು ಉಪಾಧ್ಯಾಯರ ಮುಂದೆ ಒಪ್ಪಿಸಬೇಕಾಗಿತ್ತು; ಈಗ ಉಪಾಧ್ಯಾಯರು ಮನೆಯಲ್ಲಿ ಸಿದ್ಧವಾಗಿ ಬಂದು ಮಕ್ಕಳ ಮನಸ್ಸು ಸಂಸ್ಕರಣಗೊಳ್ಳುವಂತೆ ಪಾಠ ಮಾಡಬೇಕಾಗಿ ಬಂದಿದೆ. ಇದೇ ಆಧುನಿಕ ಬೋಧನಕ್ರಮದಲ್ಲಿ ಕಂಡುಬರುವ ದೊಡ್ಡ ಬದಲಾವಣೆ.

ಹೊಸದಾಗಿ ಕೆಲಸಕ್ಕೆ ಸೇರಿದ ತರುಣ ಉಪಾಧ್ಯಾಯರು ಮನೆಯಲ್ಲಿ ಚೆನ್ನಾಗಿ ಸಿದ್ಧವಾಗಿ ಬಂದು ತರಗತಿಯ ಮುಂದೆ ಉತ್ಸಾಹದಿಂದ ಸ್ಫೂರ್ತಿದಾಯಕವಾಗಿ ಭಾಷಣ ಮಾಡಿಬಿಡುತ್ತಾರೆ; ಕಾಲೇಜಿನ ತರಗತಿಗಳಿಗೆ ಈ ಬೋಧನಕ್ರಮ ಉಚಿತವೆನಿಸಬಹುದು. ಆದರೆ ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢ ಪಾಠಶಾಲೆಗಳ ಮಕ್ಕಳು ಈ ಉಪನ್ಯಾಸ ಪಾಠದಿಂದ ನಿರೀಕ್ಷಿಸುವಷ್ಟು ಪ್ರಯೋಜನವನ್ನು ಪಡೆಯಲಾರರು. ವಿಷಯಕ್ಕೆ ಸಂಬಂಧಿಸಿದ ಕಾರ್ಯಕಾರಣಗಳನ್ನಾಗಲಿ, ಒಂದಕ್ಕೊಂದಕ್ಕಿರುವ ಸಂಬಂಧ

ವನ್ನಾಗಲಿ ಭಾಷಣ ಮಾಡುವಾಗ ಅರಿತುಕೊಳ್ಳುವುದು ಅವರಿಗೆ ಕಷ್ಟವಾಗುತ್ತದೆ. ತನ್ನ ಪಾಠ ಎಷ್ಟೊಂದು ಸ್ಫೂರ್ತಿದಾಯಕವಾಗಿತ್ತೆಂದು ಉಪಾಧ್ಯಾಯರು ಹೆಮ್ಮೆ ಪಟ್ಟುಕೊಳ್ಳಬಹುದು. ಆದರೆ, ಮಕ್ಕಳು ಅಷ್ಟುಹೊತ್ತೂ ಮಂಕರಂತೆ ಕುಳಿತಿದ್ದು ಬೋಧನೆ ವ್ಯರ್ಥವಾಯಿತೆಂಬುದನ್ನು ಅವರು ಮನಗಾಣಬೇಕು. ಒಮ್ಮೆ ಹೊಸದಾಗಿ ಕೆಲಸಕ್ಕೆ ಸೇರಿದ ನಮ್ಮ ಮಿತ್ರರೊಬ್ಬರು 'ಆಮ್ಲಜನಕದ ಗುಣಗಳು' ಎಂಬ ಪಾಠವನ್ನು ಮಾಡುತ್ತಾ ತುಂಬ ಉತ್ಸಾಹದಿಂದ ಭಾಷಣ ಮಾಡಿಕೊಂಡು ಹೋದರು. ಮಧ್ಯೆ ಮಧ್ಯೆ ಆ ಗುಣಗಳನ್ನು ತೋರಿಸಲು ಹಲವು ಪ್ರಯೋಗಗಳನ್ನೂ ನಡಸಿದರು. ತರಗತಿ ಮುಗಿದ ಮೇಲೆ ಪಾಠ ಹೇಗಿತ್ತೆಂದು ಆ ಹುಡುಗರನ್ನು ಕೇಳಿದಾಗ 'ದೀಪಾವಳಿ ಮತಾಪು!' ಎಂದುತ್ತರ ಬಂತು. ಅವರು ತಿಳಿದುಕೊಂಡದ್ದು ಆ ಪ್ರಯೋಗಗಳನ್ನು ಮಾತ್ರ. ಉಪನ್ಯಾಸ ಮಾಡಿದ ಮಿಕ್ಕ ವಿಷಯ ಅವರ ಗಮನಕ್ಕೇ ಹಿಡಿಸದಾಯಿತು. ಆ ಹೊಸ ಉಪಾಧ್ಯಾಯರ ಉತ್ಸಾಹದ ಉಪನ್ಯಾಸ ಆಕಾಶಪುರಾಣವಾಗಿಹೋಯಿತು! ತರಗತಿಯಲ್ಲಿ ಉಪಾಧ್ಯಾಯರ ಪಾಂಡಿತ್ಯ, ಉತ್ಸಾಹ, ವಾಕ್ಶಕ್ತಿಗಳನ್ನು ಪ್ರದರ್ಶಿಸುವುದರಿಂದಲೇ ಶಿಕ್ಷಣ ಸಾಧನೆಯಾಗಲಾರದು. ಆ ಉತ್ಸಾಹ ಮಕ್ಕಳಲ್ಲಿ ಮೂಡುವಂತೆ ತಮ್ಮ ಬೋಧನಕ್ರಮ ಮಾರ್ಪಡಬೇಕು. ಒಂದೇ ಸಮನೆ ಉಪನ್ಯಾಸ ಮಾಡಿಕೊಂಡು ಹೋಗುತ್ತಿರುವ ಉಪಾಧ್ಯಾಯರು ಮಕ್ಕಳ ಕಡೆ ತಿರುಗಿನೋಡಿದರೆ, ಅವರಲ್ಲಿ ಕೆಲವರಾದರೂ ವಿಷಯ ತಿಳಿಯದೆ ಕಣ್ಣುಕಣ್ಣು ಬಿಡುವುದೂ, ಬೇರೆ ಕಡೆ ಗಮನಕೊಟ್ಟು ಕಾಲಕಳೆಯುವುದೂ ಕಂಡುಬರುತ್ತದೆ. ಎಂದಮೇಲೆ, ಉಪಾಧ್ಯಾಯರ ಭಾಷಣದ ಉತ್ಸಾಹಕ್ಕೂ ಒಂದು ಮಿತಿಯಿರಬೇಕು. ಮಕ್ಕಳ ಕಡೆ ಗಮನ ಕೊಡುತ್ತಿರಬೇಕು. ಹಿಂದೆ ಮಕ್ಕಳಿಂದಲೇ ಕಂಠಪಾಠ ಮಾಡಿಸಿದ್ದನ್ನು ಹೇಳಿಸುತ್ತಿದ್ದುದು ಒಂದು ವೈಪರೀತ್ಯವಾಗಿದ್ದರೆ, ತಾವೇ ಎಲ್ಲವನ್ನೂ ಉಪನ್ಯಾಸಮಾಡಲು ಯತ್ನಿಸುವುದು ಇನ್ನೊಂದು ವೈಪರೀತ್ಯವಾದೀತು. ಬೋಧನೆಯೆಂದರೆ ಉಪಾಧ್ಯಾಯರೂ ಎಚ್ಚರದಿಂದಿರಬೇಕು; ಮಕ್ಕಳೂ ಚಟುವಟಿಕೆಯಿಂದಿರಬೇಕು. ಮಕ್ಕಳಿಗೆ ಪಾಠ ಮಾಡುವಾಗ ಪ್ರಶ್ನೆಗಳನ್ನು ಹಾಕುತ್ತಾ ಅವರ ಸಹಕಾರವನ್ನು ತೆಗೆದುಕೊಳ್ಳಬೇಕು. ಉತ್ತರ ಹೇಳಿಸುತ್ತಾ ಒಂದು ಮೆಟ್ಟಿಲಿನಿಂದ

ಇನ್ನೊಂದು ಮೆಟ್ಟಲಿಗೆ ಅವರನ್ನು ನಡಸಿ, ತಿಳಿಯದ್ದನ್ನು ವಿವರಿಸಿ ಹೇಳಿ, ಅವರ ಪ್ರಯತ್ನದಿಂದಲೇ ವಿಷಯ ಚೆನ್ನಾಗಿ ಅವರಿಗೆ ಸ್ಪಷ್ಟಪಡುವಂತೆ ಮಾಡಬೇಕು. ಯಾವುದನ್ನು ಕಲಿಯಬೇಕಾದರೂ ಮಕ್ಕಳು ಚಟುವಟಿಕೆಯಿಂದಿರಬೇಕು. ಅವರನ್ನು ಮೂಕರಂತೆ ಕೂರಿಸಿ ಉಪಾಧ್ಯಾಯರೇ ಎಲ್ಲವನ್ನೂ ಹೇಳಿಬಿಟ್ಟರೆ ಆ ಕಾರ್ಯ ಸಾಧನೆಯಾಗಲಾರದು. ಪಾಠ ಮಾಡುವಾಗ ಮಕ್ಕಳು, ಆಲೋಚಿಸುವ, ಮಧ್ಯೆಬರುವ ಸಮಸ್ಯೆಗಳನ್ನು ಬಿಡಿಸಲು ಯತ್ನಿಸುವ, ಅರಿಯದ್ದನ್ನು ಪ್ರಶ್ನಿಸಿ ತಿಳಿಯುವ ಸನ್ನಿವೇಶಗಳನ್ನು ರಚಿಸಿಕೊಂಡು ಬೋಧನೆಯನ್ನು ಮುಂದುವರಿಸಬೇಕು. ಅಂದು ಮಾತ್ರ ಅವರು ಬೋಧಿಸಿದ ವಿಷಯವನ್ನು ಗ್ರಹಿಸಿಯಾರು. ಜೊತೆಗೆ, ಅವರ ಆಲೋಚನೆ ವಿಮರ್ಶೆ, ಸಮಸ್ಯೆ ಬಿಡಿಸುವ ಶಕ್ತಿ—ಮುಂತಾದವು ವಿಕಸಿಸಿ, ಬೆಳೆದಾವು. ವಿಷಯವನ್ನು ಮಕ್ಕಳು ಸ್ವಪ್ರಯತ್ನದಿಂದ ಅರಿಯಲು ಅನುಕೂಲಿಸುವಂತೆ ಅದನ್ನು ಪ್ರದರ್ಶಿಸಿ, ಆವಶ್ಯಕವೆನಿಸುವ ಸನ್ನಿವೇಶಗಳನ್ನು ರಚಿಸಬೇಕು. ಹಾಗೆ ಮಕ್ಕಳೇ ವಿಷಯವನ್ನು ಪ್ರಯತ್ನಪಟ್ಟು ಕಲಿಯಬೇಕೆಂದರೆ ಉಪಾಧ್ಯಾಯರ ಕೆಲಸ ಕಡಮೆಯಾಯಿತೆಂದು ಯಾರೂ ಭಾವಿಸಬಾರದು; ನಿರಂತರವೂ ಎಚ್ಚರಿಕೆಯಿಂದಿರಬೇಕು. ಮಕ್ಕಳ ಕಡೆ ಗಮನವಿಟ್ಟು ಯಾರು ಅರಿತರು, ಯಾರು ಇಲ್ಲ ಎಂಬುದನ್ನು ಅಳೆಯುತ್ತಿರಬೇಕು. ವಿಷಯ ಸರಿಯಾಗಿ ತಿಳಿಯುವಂತೆ ಮಾಡಲು ಹೇಗೆ ಅದನ್ನು ಪ್ರದರ್ಶಿಸಬೇಕು, ಯಾವ ಯಾವ ಪ್ರಶ್ನೆಗಳ ಮೂಲಕ ಅವರು ಅರಿಯಲು ಸಹಾಯ ಮಾಡಬೇಕು—ಇವೆಲ್ಲ ಕಡೆಯೂ ಗಮನ ಕೊಡುತ್ತಿರಬೇಕು. ಜೊತೆಗೆ, ಆಗ ಮಕ್ಕಳಲ್ಲಿ ಒಳ್ಳೆಯ ಗುಣಶೀಲಗಳೂ, ದೃಷ್ಟಿಧ್ಯೇಯಗಳೂ, ಅಭ್ಯಾಸಗಳೂ ಮೂಡುವಂತೆಯೂ ಮಾಡಬೇಕು. ಎಂದಮೇಲೆ, ಉಪಾಧ್ಯಾಯರ ಕೆಲಸ ಬರೀ ಭಾಷಣ ಮಾಡುವುದಕ್ಕಿಂತ ಎಷ್ಟೋ ಹೆಚ್ಚಾಗಿಹೋಯಿತು. ಆದರಿಂದಲೇ ಈ ನೂತನ ಶಿಕ್ಷಣದಲ್ಲಿ ಮಕ್ಕಳೇ ಸ್ವಪ್ರಯತ್ನದಿಂದ ಕಲಿಯಬೇಕೆಂದು ವಾದಿಸುವಾಗ, ಉಪಾಧ್ಯಾಯರ ಕೆಲಸ ಒಂದು ದೃಷ್ಟಿಯಿಂದ ಕಡಮೆಯಾದಂತೆ ತೋರಿದರೂ ಮತ್ತೊಂದು ದೃಷ್ಟಿಯಲ್ಲಿ ಹೆಚ್ಚಾಯಿತೆಂಬುದೂ ಸ್ಪಷ್ಟಪಡುತ್ತದೆ.

ಹಿಂದೆ ಶಿಕ್ಷಣ ಮಂದಿರದಲ್ಲಿ ಉಪಾಧ್ಯಾಯರಿಗೆ ಪ್ರಾಧಾನ್ಯತೆಯಿದ್ದು, ಮಕ್ಕಳು ಅವರ ವ್ಯಕ್ತಿತ್ವವನ್ನೇ ಪಡೆಯಬೇಕೆಂಬ ನಂಬಿಕೆಯಿತ್ತು. ಮಕ್ಕ

ಳಿಗೆ ಪ್ರಾಧಾನ್ಯತೆ ಹೆಚ್ಚಿದಂತೆ 'ಮಕ್ಕಳು ಆಗಬೇಕಾಗಿರುವುದು ಉಪಾಧ್ಯಾಯರಂತಲ್ಲ! ಸಮಾಜದಂತೆ' ಎಂಬ ಭಾವನೆ ಬೆಳೆಯುತ್ತಿದೆ. ಎಂದ ಮೇಲೆ, ಉಪಾಧ್ಯಾಯರು ಮಕ್ಕಳ ಮನಸ್ಸಿನ ಪರಿಚಯ ಮಾಡಿಕೊಂಡು ಸಮಾಜದ ಆವಶ್ಯಕತೆಯನ್ನರಿತು ಅದಕ್ಕನುಗುಣವಾಗಿ ಅವರ ಬೆಳವಣಿಗೆಯನ್ನು ಸಾಧಿಸಬೇಕು. ಶಿಕ್ಷಣಕಾರ್ಯದಲ್ಲಿ ಒಂದು ಕಡೆ ಮಗು; ಇನ್ನೊಂದು ಕಡೆ ಸಮಾಜ ಜೀವನಕ್ಕೆ ಆವಶ್ಯಕವಾದ ವಿಷಯ (ಪಠ್ಯವಸ್ತು). ಹಾಗಾದರೆ ಉಪಾಧ್ಯಾಯರಿಗೆ ಸ್ಥಾನವೇ ಇಲ್ಲವೇ ಎಂಬ ಪ್ರಶ್ನೆ ತಾನಾಗಿಯೇ ಏಳುತ್ತದೆ.

ಉಪಾಧ್ಯಾಯರು ತಮ್ಮ ವಿಶಾಲ ಪ್ರಪಂಚಾನುಭವದಿಂದಲೂ, ಪ್ರಬುದ್ಧ ವ್ಯಕ್ತಿತ್ವದಿಂದಿಲೂ, ಇನ್ನಿತರ ಆದರ್ಶಗಳಿಂದಲೂ ಮಕ್ಕಳ ಎಳೆಯ ಮನಸ್ಸಿನ ಮೇಲೆ ಮುದ್ರೆಯೊತ್ತಿ ಅವರ ಬೆಳವಣಿಗೆಯನ್ನು ಸಾಧಿಸಬೇಕೆನ್ನುವ ಜಾನ್ ಆಡಂರವರ ಅನುಯಾಯಿಗಳು ಮಕ್ಕಳು ಉಪಾಧ್ಯಾಯರ ವ್ಯಕ್ತಿತ್ವವನ್ನೇ ಸಾಧಿಸಬೇಕೆಂದು ವಾದಿಸುವರು. ಉಪಾಧ್ಯಾಯರು ಎಲ್ಲ ದೃಷ್ಟಿಗಳಿಂದಲೂ ಆದರ್ಶವಾಗಿದ್ದರೆ ಇದೇನೋ ಸೂಕ್ತವೆನಿಸಬಹುದು. ಆದರೂ ಅವರ ವ್ಯಕ್ತಿತ್ವದ ಅನುಕರಣದಿಂದ ಸಾಮಾನ್ಯವಾಗಿ ಅನುಕೂಲವಾಗಬಹುದಾದರೂ ಬಹುವೇಳೆ ಅನಾನುಕೂಲವೂ ಆಗಬಹುದು. ಅಲ್ಲದೆ ಹೀಗೆ ಹೇಳುವರು ಶಿಕ್ಷಣ ದ್ವಿಮುಖವಾದ ಕ್ರಿಯೆಯೆಂದು ವಾದಿಸುವರು. ದೋಷಮಯವೆನ್ನಬಹುದಾದ ಈ ದ್ವಿಮುಖ ವಾದವನ್ನು ಆಡಂಸನ್ ಎಂಬುವರು ಖಂಡಿಸಿ, ಶಿಕ್ಷಣ ತ್ರಿಮುಖವಾದ ಕಾರ್ಯವೆಂದೂ, ಅವುಗಳಲ್ಲಿ ವಿದ್ಯಾರ್ಥಿ ಒಂದು ಮುಖವಾದರೆ ಪಠ್ಯವಸ್ತು ಮತ್ತೊಂದು ಮುಖವೆಂದೂ, ಉಪಾಧ್ಯಾಯರೇ ಮೂರನೆಯ ಮುಖವೆಂದೂ ವಾದಿಸಿದರು. ಆಸಕ್ತಿಯಿಂದ ಚಟುವಟಿಕೆಯಾಗಿದ್ದು ಕಲಿತುಕೊಳ್ಳುವ ಮೊದಲನೆಯ ಮುಖವೆನ್ನಬಹುದಾದ ಮಕ್ಕಳಿಗೇ ಈ ವಾದದಲ್ಲಿ ಪ್ರಧಾನಸ್ಥಾನ. ವಿಷಯ, ಗುಣ, ತತ್ತ್ವ ಸಂಬಂಧ ಮತ್ತು ಇನ್ನಿತರ ಜ್ಞಾನಗಳನ್ನೊಳಗೊಂಡ ಪಠ್ಯವಸ್ತುವೇ ಎರಡನೆಯ ಮುಖ. ಆದ್ದರಿಂದ ನಿಜವಾದ ಸಂಬಂಧ ಇರಬೇಕಾದ್ದು ಇವೆರಡಕ್ಕೆ. ಉಪಾಧ್ಯಾಯರು ಕೇವಲ ಉಚಿತವಾದ ಮಾರ್ಗದರ್ಶಿಯಾಗಿ ಕೆಲಸಮಾಡುವ ಗೌಣಮುಖವಾದಹಾಗಾಯಿತು.

ಈ ತ್ರಿಮುಖ ವಾದದ ಪ್ರಕಾರ ಮಗುವಿನ ಗಮನ ವಿಷಯದ ಕಡೆ ಇರಬೇಕು. ಉಪಾಧ್ಯಾಯರು ಗೌಣವಾಗಿದ್ದುಕೊಂಡು ವಿಷಯ ಅವರಿಗೆ ಚೆನ್ನಾಗಿ ತಿಳಿಯುವಂತೆ ಮಾಡಬೇಕು. ಸ್ವಪ್ರಯತ್ನದಿಂದ ಕಲಿಯಲು ಪ್ರಯತ್ನಿಸುತ್ತಿರುವ ಮಕ್ಕಳಿಗೆ ಎಲ್ಲಿ ಕಷ್ಟವಾಗುವುದೆಂಬುದನ್ನು ನೋಡು ತ್ತಿದ್ದು, ಅದು ಸುಲಭವಾಗಿ ತಿಳಿಯುವಂತೆ ವಿವರಿಸಿ, ವಿಭಜಿಸಿ, ವಿಷಯವನ್ನು ಸೂಕ್ತರೀತಿಯಲ್ಲಿ ಪ್ರದರ್ಶಿಸಬೇಕು. ಆದರೆ, ಯಾವ ಕಾರಣದಿಂದಲೇ ಆಗಲಿ ಉಪಾಧ್ಯಾಯರು ತಾವೇ ಪ್ರಧಾನರಂತೆ ಮಗುವಿನ ಗಮನವನ್ನು ತಮ್ಮ ಕಡೆ ಸೆಳೆಯಲು ಯತ್ನಿಸಬಾರದು. ತಮ್ಮ ಈ ತ್ರಿಮುಖ ವಾದ ವನ್ನು ವಿವರಿಸಲು ಅವರೊಂದು ಉದಾಹರಣೆಯನ್ನು ಕೊಟ್ಟಿರುವರು. ಆಗ ತಾನೇ ಗುಣಮುಖವಾಗುತ್ತಿರುವ ರೋಗಿಯೊಬ್ಬನು ಒಂದು ಕಡೆ ಕುಳಿ ತಿರುವನು. ಹತ್ತಿರದ ಗಿಡವೊಂದರ ಮೇಲೆ ಒಂದು ಚಿಟ್ಟೆ ಕುಳಿತಿದೆ; ಆಗ ಸಂಜೆಯ ಸಮಯ. ರೋಗಿ ಚಿಟ್ಟೆಯಾವುದು ಹೂವಾವುದು ಎಂದು ಗುರುತಿಸ ಲಾರ! ಆಗ ದಾದಿ ಆ ಹೂವನ್ನು ಸೂರ್ಯನ ಬೆಳಕಿಗೆ ತಿರುಗಿಸುತ್ತಾಳೆ. ರೋಗಿ ಚಿಟ್ಟೆಯಾವುದು, ಹೂವಾವುದು ಎಂದು ತಿಳಿದುಕೊಳ್ಳುತ್ತಾನೆ. ಆದರೆ ದಾದಿಯೇ ಇದು ಚಿಟ್ಟೆ, ಇದು ಹೂ ಎಂದು ತಿಳಿಸುವುದಿಲ್ಲ. ಉಪಾಧ್ಯಾಯರೂ ಶಾಲೆಯಲ್ಲಿ ತಾವು ಹಿನ್ನೆಲೆಯಲ್ಲಿದ್ದುಕೊಂಡು ಮಕ್ಕಳು ವಿಷಯವನ್ನು ಸುಲಭ ವಾಗಿ ಗ್ರಹಿಸುವಂತೆ ಸನ್ನಿವೇಶ ರಚಿಸಬೇಕು. ಮಕ್ಕಳು ತಮ್ಮ ಯತ್ನ ದಿಂದಲೇ ಆಲೋಚಿಸಿ ಅರಿತುಕೊಳ್ಳುವಂತೆ ಮಾಡಬೇಕು. ಆ ಮೂಲಕ, ಅವರಿಗೆ ಸ್ವಸಾಮರ್ಥ್ಯದಿಂದ ಜ್ಞಾನಾರ್ಜನೆ ಮಾಡುವ ಶಕ್ತಿ ಬರಬೇಕೆಂದು ಆಡಂಸನ್ನರು ವಾದಿಸಿದರು.

ಮೇಲೆ ಹೇಳಿದ ತ್ರಿಮುಖ ವಾದ ಜ್ಞಾನಾರ್ಜನೆಗೆ ಒಪ್ಪುವಂತಿದ್ದರೂ ಮಕ್ಕಳ ನೈತಿಕ ಶಿಕ್ಷಣಕ್ಕೆ ದ್ವಿಮುಖ ವಾದವೇ ಸೂಕ್ತವಾದದ್ದೆಂದು ಹಲ ವರು ವಾದಿಸಬಹುದು. ಮಕ್ಕಳ ದೃಷ್ಟಿಧ್ಯೇಯಗಳನ್ನೂ ಗುಣಶೀಲಗಳನ್ನೂ ರೂಪಿಸುವಾಗ ಉಪಾಧ್ಯಾಯರು ತಮ್ಮ ವ್ಯಕ್ತಿತ್ವವನ್ನು ಅವರ ಮೇಲೆ ಬೀರ ಬೇಕಾಗುತ್ತದೆಯೆಂಬುದನ್ನು ಆಡಂಸನ್ನರು ಒಪ್ಪದೆ ಅಲ್ಲಿಯೂ ತ್ರಿಮುಖ ವಾದವೇ ಉಚಿತವಾದ್ದೆಂದು ವಾದಿಸುವರು; ಉಪಾಧ್ಯಾಯರೇ ಮಕ್ಕಳಿಗೆ ಸರ್ವಾದರ್ಶವಲ್ಲವೆಂದೂ, ವಿಶಾಲ ಜಗತ್ತು ಅವರ ಆದರ್ಶವಾಗಬೇಕೆಂದೂ

ಪ್ರತಿಪಾದಿಸಿ, ಆ ಜಗತ್ತನ್ನು ಕಂಡು ಮಕ್ಕಳು ತಮ್ಮ ನೈತಿಕ ದೃಷ್ಟಿಯನ್ನು ರೂಪಿಸಿಕೊಳ್ಳಬೇಕೆಂದೂ, ಉಪಾಧ್ಯಾಯರು ಆಗಲೂ ಮೂರನೆಯ ಗೌಣ ವ್ಯಕ್ತಿಗಳಾಗಿದ್ದುಕೊಂಡು ಸ್ವಪ್ರಯತ್ನದಿಂದ ಮಕ್ಕಳು ನೈತಿಕ ಸಾಧನೆಯನ್ನು ಮಾಡಲು ನೆರವಾಗಬೇಕೆಂದು ವಾದಿಸಿರುವರು. ನೈತಿಕ ಶಿಕ್ಷಣ ಕೊಡುವಾಗ ಮಕ್ಕಳ ಗಮನ ಸತ್ಯದ ಕಡೆ, ಗುಣ ಶೀಲಗಳ ಕಡೆ, ಸನ್ಮಾರ್ಗದ ಕಡೆ ಬೀಳಬೇಕೇ ಹೊರತು ಉಪಾಧ್ಯಾಯರ ಕಡೆಯಲ್ಲವೆಂದೂ ಹೇಳಿರುವರು. ಒಟ್ಟಿನಲ್ಲಿ ಆಡಂಸನ್ನರ ತ್ರಿಮುಖ ವಾದ ಸಾಮಾಜಿಕ, ಆರ್ಥಿಕ ಮತ್ತು ಇನ್ನಿತರ ಜ್ಞಾನಸಾಧನೆಗೆ ಅನುಕೂಲವೆನ್ನಬಹುದಾದರೂ ನೈತಿಕ ಶಿಕ್ಷಣದಲ್ಲಿ ದ್ವಿಮುಖ ವಾದ ಉಚಿತವಲ್ಲವೆನ್ನುವಂತಿಲ್ಲ. ಮಕ್ಕಳ ಎಳೆಯತನದ ಕಾಲದಲ್ಲಿ ಉಪಾಧ್ಯಾಯರ ನಡೆ, ನುಡಿ, ದೃಷ್ಟಿಧ್ಯೇಯ, ಆಚಾರ ವ್ಯವಹಾರ ಮುಂತಾದವು ಅವರ ಮನಸ್ಸಿನ ಮೇಲೆ ಹುಟ್ಟಿಸಬಹುದಾದ ಪರಿಣಾಮವನ್ನು ಯಾರು ತಪ್ಪಿಸಲು ಸಾಧ್ಯ? ಆದರೂ ಉದ್ದೇಶಪೂರ್ವಕವಾಗಿ ಉಚಿತವಲ್ಲದ ತಮ್ಮ ವ್ಯಕ್ತಿವೈಶಿಷ್ಟ್ಯಗಳನ್ನು ಮಾತ್ರ ಮಕ್ಕಳ ಮೇಲೆ ಹೇರಲು ಅವರು ಎಂದೂ ಹೋಗಬಾರದು. ತಮ್ಮ ಸನ್ಮಾರ್ಗಗಳು ಮಕ್ಕಳಿಗೆ ಮೊದಮೊದಲು ಆದರ್ಶವಾಗಬಹುದಾದರೂ ಕ್ರಮ ಕ್ರಮವಾಗಿ ಮಕ್ಕಳಿಗೆ ಸತ್ಯ, ನೀತಿ, ಧರ್ಮಗಳ ಆಗರವೆನಿಸುವ ವಿಶಾಲ ವಿಶ್ವದ ಕಡೆ ಗಮನ ಬೀಳುವಂತೆ ಮಾಡಬೇಕು. ಆ ಮೂಲಕ ಅವರು ತಮ್ಮ ನೈತಿಕ ದೃಷ್ಟಿಯನ್ನು ಪುಷ್ಟಿಗೊಳಿಸಿಕೊಂಡು ವಿಶಾಲ ಆದರ್ಶವನ್ನು ಸ್ಥಾಪಿಸಿಕೊಳ್ಳಲು ಉಪಾಧ್ಯಾಯರು ನೆರವಾಗಬೇಕು.

ಆಡಂಸನ್ನರ ತ್ರಿಮುಖ ವಾದ ಒಂದು ವೈಪರೀತ್ಯವನ್ನು ಮುಟ್ಟಿರುವಂತೆ ತೋರಿದರೂ ಉತ್ತಮ ಬೋಧನಕ್ರಮವನ್ನು ಅರಿತುಕೊಳ್ಳಲು ಅದು ಬಹುವಾಗಿ ಸಹಾಯ ಮಾಡುತ್ತದೆ. ಉಪಾಧ್ಯಾಯರು ಬೋಧಿಸುವಾಗ ಎಲ್ಲ ವಿಷಯಗಳನ್ನೂ ತಾವೇ ಹೇಳಿಬಿಟ್ಟು ತಮ್ಮ ಪ್ರಭಾವವನ್ನೂ ಅಭಿವ್ಯಕ್ತಿತ್ವವನ್ನೂ ಅವರ ಮೇಲೆ ಬೀರಲು ಯತ್ನಿಸುವುದರ ಬದಲು ಮಕ್ಕಳಲ್ಲಿರುವ ಅಭಿರುಚಿಆಸಕ್ತಿಗಳನ್ನೂ ಅವರ ವೈಯುಕ್ತಿಕ ಭಿನ್ನತೆಗಳನ್ನೂ ಅರಿತುಕೊಂಡು, ಅವರ ಪ್ರಯತ್ನದಿಂದಲೇ ಅವರವರ ಅಭಿರುಚಿ ಆಸಕ್ತಿಗಳು ಬೆಳೆಯುವಂತೆಯೂ, ಮನಸ್ಸು ಸಂಸ್ಕರಣಗೊಂಡು ವಿಕಸಿಸು

ವಂತೆಯೂ ಮಾಡಬೇಕು. ಅಂಥ ಬೋಧನಕ್ರಮ ನಿಜವಾಗಿಯೂ ಫಲ ಪ್ರದವಾದುದು. ತಮ್ಮ ತಮ್ಮ ಪ್ರಯತ್ನದಿಂದ, ಚಟುವಟಿಕೆಯಾಗಿದ್ದು ಕೊಂಡು ಮಕ್ಕಳು ಶಿಕ್ಷಣ ಪಡೆಯುವುದರಿಂದ ಮುಂದೆ ಆಲೋಚನಾ ಪರರೂ, ಸನ್ನಿವೇಶಗಳಿಗೆ ತಕ್ಕಂತೆ ವರ್ತಿಸುವವರೂ, ಸಮಸ್ಯೆಗಳನ್ನು ಬಿಡಿಸಿ ಇತ್ಯರ್ಥ ಪಡಿಸುವ ಶಕ್ತಿಯುಳ್ಳವರೂ ಆಗುವರು.

ಉಪಾಧ್ಯಾಯರಿಗೆ ಅನಿವಾರ್ಯವೆನಿಸುವ ಮಕ್ಕಳ ಮನಸ್ಸಿನ ಪರಿಚಯ, ವಿಷಯಜ್ಞಾನ ಮತ್ತು ಬೋಧನ ಸಲಕರಣೆ—ಇವುಗಳಲ್ಲಿ ಹಿಂದೆ ಉಪಾಧ್ಯಾಯರು ಪಠ್ಯವಸ್ತುವಿನ ಪರಿಚಯಕ್ಕೂ ಇತರ ಉಪಕರಣಾದಿಗಳಿಗೂ ಗಮನ ಕೊಡುತ್ತಾ ಮಗುವನ್ನು ಮರತೇಬಿಟ್ಟಿದ್ದರು. ಆದರೆ ಮಗುವೇ ಶಿಕ್ಷಣದ ಕೇಂದ್ರವೆಂಬಂಶವನ್ನು ಉಪಾಧ್ಯಾಯರು ಅರಿತಂತೆ ಅವರ ಗಮನ ಮಕ್ಕಳ ಅಭಿರುಚಿಆಸಕ್ತಿಗಳನ್ನೂ, ಅವರ ಮನಸ್ಸಿನ ವ್ಯಾಪ್ಯಾರದ ಪರಿಚಯವನ್ನೂ, ಆ ವಯಸ್ಸಿನ ಗುಣಶೀಲಗಳ ಸಂಸ್ಕರಣಕ್ಕೆ ಆವಶ್ಯಕವೆನಿಸುವ ಚಟುವಟಿಕೆಗಳನ್ನೂ ಅರಿತುಕೊಳ್ಳಲು ಮೀಸಲಾಗುತ್ತಿದೆ. ಶಿಕ್ಷಣ ಮಂದಿರದಲ್ಲಿ ಮಕ್ಕಳೇ ಪ್ರಧಾನವಸ್ತುಗಳಾಗುತ್ತಿದ್ದಾರೆ. ಈ ದೃಷ್ಟಿಯನ್ನನುಸರಿಸಿಯೇ ಆಧುನಿಕ ಶಿಕ್ಷಣ ಪದ್ಧತಿಗಳೆಲ್ಲ ತಮ್ಮ ತಮ್ಮ ಯೋಜನೆಗಳನ್ನು ರೂಪಿಸಿಕೊಂಡಿವೆ, ರೂಪಿಸಿಕೊಳ್ಳುತ್ತಿವೆ.

**ಕಲಿವಿನ ನಿಯಮಗಳು :** ಮನಶ್ಶಾಸ್ತ್ರದ ಜ್ಞಾನ ಬೆಳೆದಂತೆ ಮಕ್ಕಳ ಕಲಿವಿನ ಸ್ವರೂಪವೂ ಚೆನ್ನಾಗಿ ಅರಿವಾಗುತ್ತಿದೆ; ಶಿಕ್ಷಣ ಹೇಗೆ ಸಾಧನೆಯಾಗುವುದೆಂಬುದೂ ಬೆಳಕಿಗೆ ಬರುತ್ತಿದೆ. ನಮ್ಮ ಮೆದುಳೂ ಅದಕ್ಕೆ ಸಂಬಂಧಿಸಿದ ನರವ್ಯೂಹಗಳೂ ಮನೋರಾಜ್ಯಕ್ಕೆ ಸಂಬಂಧಿಸಿದ ಅಂಗಗಳೆನ್ನಬಹುದು. ಇವು ದೇಹದ ಇತರ ಅಂಗಗಳಿಂದ ಬೇರೆಯಾಗಿದ್ದರೂ ದೇಹವೂ ಮನಸ್ಸೂ ಒಂದರೊಡನೊಂದು ಸಂಬಂಧಪಟ್ಟುಕೊಂಡೇ ಕೆಲಸ ಮಾಡುತ್ತವೆ. ಮೆದುಳಿನ ಮತ್ತು ನರಗಳ ಒಳಗೆ ಮೃದುವಾದ ನರವಸ್ತುವಿದೆ. ನಮ್ಮ ನಡೆ, ನುಡಿ, ಯೋಚನೆ, ಭಾವನೆ, ಸಂವೇದನೆ, ಅನುಕಂಪ–ಇವೇ ಮುಂತಾದ ಯಾವ ಕ್ರಿಯೆ ನಡೆದರೂ ಆ ನರವಸ್ತುವಿನಲ್ಲಿ ತನ್ನ ಗುರುತನ್ನು ನಿರ್ಮಿಸಿ ಅದರಲ್ಲಿ ನೂತನ ರೂಪೊಂದನ್ನು ಸ್ಥಾಪಿಸುತ್ತದೆ. ಆ ರೀತಿಯ ಸನ್ನಿವೇಶ ಮತ್ತೊಮ್ಮೆ ಒದಗಿದರೆ ನಾವು ಹಿಂದೆ ಮಾಡಿದ್ದ

ಕ್ರಿಯೆಯನ್ನೇ ಮಾಡುತ್ತೇವೆ. ಎಂದರೆ, ಒಮ್ಮೆ ಮಾಡಿದ್ದ ಕ್ರಿಯೆ ಪುನಃ ಪಠನವಾದಂತಾಯಿತು. ಹೆಚ್ಚು ಹೆಚ್ಚು ಪಠನವಾದಂತೆ ಆ ಮಾರ್ಗ ನಮ್ಮ ನರವಸ್ತುವಿನಲ್ಲಿ ಸ್ಥಿರವಾಗಿ ರೂಪುಗೊಂಡು, ನಮಗೆ ಆ ರೀತಿಯ ವರ್ತನೆ ಸುಲಭವಾಗಿ ಆಚರಿಸುವ ಶಕ್ತಿ ಬರುತ್ತದೆ. ಆಗ ಆ ಕೆಲಸವನ್ನು ನಾವು ಕಲಿತಂತಾಯಿತು. ಈ ಕಲಿವಿಗೆ ಸಂಬಂಧಿಸಿದ ಕೆಲವು ನಿಯಮಗಳನ್ನು ತಿಳಿದುಕೊಳ್ಳುವುದು ಬೋಧನಕಾರ್ಯಕ್ಕೆ ನೆರವಾಗುತ್ತದೆ.

೧. **ನಾವು ಯಾವುದನ್ನು ಅಭ್ಯಾಸಿಸುತ್ತೇವೆಯೋ ಅದನ್ನು ಕಲಿಯುತ್ತೇವೆ:** ಮೇಲೆ ವಿವರಿಸಿದಂತೆ ಒಂದು ಸಲ ಒಂದು ಕಾರ್ಯವನ್ನು ಆಚರಿಸಿದರೆ ಅದರ ಗುರುತು ನಮ್ಮ ನರವಸ್ತುವಿನಲ್ಲಿ ನಿಲ್ಲುತ್ತದೆ. ಪುನಃ ಪುನಃ ಅದನ್ನೇ ಆಚರಿಸಿದಂತೆ ಆ ಗುರುತು ಬಲಗೊಳ್ಳುತ್ತಾಬಂದು ಮರಳಿ ಅದೇ ರೀತಿಯ ಸನ್ನಿವೇಶವೊದಗಿದಾಗ ಹಾಗೆಯೇ ಆಚರಿಸುವುದು ಬಂದುಬಿಡುತ್ತದೆ. ಇದರಿಂದ ನಾವು ಆಚರಿಸಿದ್ದನ್ನು ಕಲಿಯುತ್ತೇವೆ. ಹಾಗೆಯೇ ನಾವು ಅಭ್ಯಾಸಿಸದೆ ಇರುವುದನ್ನು ಕಲಿಯಲಾರೆವು. ಈ ದೃಷ್ಟಿಯಲ್ಲಿ ನೋಡಿದಾಗ, ಉಪಾಧ್ಯಾಯರು ಹಲವು ನೈತಿಕ ನಿಯಮಗಳನ್ನು ಮಕ್ಕಳಿಗೆ ಹೇಳುವುದರಿಂದ ಅವರು ನೀತಿಯನ್ನು ಕಲಿತಂತಾಗಲಿಲ್ಲ. ಆ ನಿಯಮಗಳನ್ನು ಬಾಯಲ್ಲಿ ಹೇಳುವುದನ್ನು ಕಲಿಯಬಹುದು; ಆದರೆ ನೀತಿವಂತರಾದಹಾಗಾಗಲಾರರು. ಆ ನೀತಿಯನ್ನು ಆಚರಿಸುವುದರಿಂದ ನಾವು ಅದನ್ನು ನಿಜವಾಗಿಯೂ ಕಲಿತಂತಾಗುತ್ತದೆ. ಒಮ್ಮೆ ಒಂದು ಕೆಲಸವನ್ನು ಆಚರಿಸಿದರೆ, ಮತ್ತೆ ಅದೇ ರೀತಿಯ ಸನ್ನಿವೇಶ ಬಂದಾಗ ಅದೇರೀತಿ ಆಚರಿಸುವೆವು. ಶಾಲೆಯಲ್ಲಿ ಮಕ್ಕಳು ನೀತಿಯ ಕ್ರಿಯೆಗಳನ್ನು ಅಭ್ಯಾಸಿಸಿದ್ದರೆ ಅವರು ಮುಂದೆಯೂ ಅದೇ ರೀತಿಯಲ್ಲಿ ವರ್ತಿಸುವರು. ಆಗ ಅವರು ನೀತಿವಂತರಾದಂತಾಗುತ್ತದೆ. ಹೀಗೆಯೇ ಇನ್ನಿತರ ಬೋಧನ ವಿಷಯಗಳಲ್ಲೂ ಕೂಡ. ಒಂದು ಹಾಡನ್ನು ಹಾಡಿ ಹಾಡಿ ಕಲಿಯಬೇಕು; ಕಲೆಯ ಕೆಲಸಗಳನ್ನು ಮಾಡಿ ಮಾಡಿ ಕಲಿಯಬೇಕು; ಆಲೋಚನೆಯ ಶಕ್ತಿಯನ್ನು ಆಲೋಚಿಸುವ ಕಾರ್ಯದಿಂದಲೇ ಕಲಿಯಬೇಕು. ಸಮಸ್ಯೆಗಳನ್ನು ಬಿಡಿಸುವ ಶಕ್ತಿ ಅವನ್ನು ಬಿಡಿಸುವುದರಿಂದಲೇ ಬರಬೇಕು. ಒಳ್ಳೆಯ ಭಾವನೆ ಮತ್ತು ದೃಷ್ಟಿ ಧ್ಯೇಯ—ಇವೆಲ್ಲ ಶಾಲೆಯಲ್ಲಿ ಆಚರಿಸುವುದರಿಂದಲೇ ಅಭ್ಯಾ

ಸಕ್ಕೆ ಬರಬೇಕು. ಆದ್ದರಿಂದ ಬರಿಯ ಬೋಧನೆಯಿಂದ ಮಕ್ಕಳು ಕಲಿತಂತಾಗಲಾರದು; ಮಕ್ಕಳೇ ಅವನ್ನು ಪ್ರಯತ್ನಪೂರ್ವಕವಾಗಿ ಕಲಿಯಲು ಯತ್ನಿಸಿ ಚಟುವಟಿಕೆಯಿಂದಿದ್ದು ಆಚರಿಸಿ ಆ ಅಭ್ಯಾಸವನ್ನು ಮಾಡಬೇಕು. ಆಗ ಅವರು ಕಾರ್ಯಮುಖರಾಗುವುದರಿಂದ ಆ ಕಾರ್ಯವನ್ನು ಅವರು ಕಲಿಯಬಲ್ಲರು.

ವಂಶಗತವಾಗಿ ಕೆಲವು ಹುಟ್ಟುಗುಣಗಳೂ ಸಂವೇದನೆಗಳೂ ಅಭಿರುಚಿ ಆಸಕ್ತಿಗಳೂ ಇನ್ನಿತರ ಮನಶ್ಶಕ್ತಿಗಳೂ ಮಕ್ಕಳಿಗೆ ಬರುತ್ತವೆ. ಆದರೆ ಅವು ಅಸಂಸ್ಕೃತ ವಸ್ತುಗಳು. ಆದರೂ ಅವುಗಳ ಆಧಾರದಮೇಲೇ ಎಲ್ಲ ಶಿಕ್ಷಣವನ್ನೂ ಸಾಧಿಸಬೇಕಾಗಿದೆ. ಉಚಿತವಾದ ಮಾರ್ಗದಲ್ಲಿ ಆ ಗುಣಗಳು ಕಾರ್ಯಪ್ರವರ್ತವಾಗುವಂತೆ ಮಾಡಬೇಕು. ಮಕ್ಕಳು ಚಟುವಟಿಕೆಯಿಂದಿರುವಾಗ ಆ ಮಾನಸಿಕ ಗುಣಗಳು ಕಾರ್ಯಮುಖವಾಗುವುವು; ಜೊತೆಗೆ ನರವ್ಯೂಹದಲ್ಲಿ ಆ ಕಾರ್ಯಾಚರಣೆಯ ಗುರುತೂ ಮೂಡುವುದು. ಮತ್ತೆ ಮತ್ತೆ ಆ ಕಾರ್ಯವನ್ನು ಆಚರಿಸುವ ಚಟುವಟಿಕೆಗಳಲ್ಲಿ ಮಕ್ಕಳು ಉದ್ಯುಕ್ತರಾದಂತೆ ಆ ಗುರುತು ಬಲಿತು ಆ ಕಾರ್ಯ ಅಭ್ಯಾಸಕ್ಕೆ ಬರುತ್ತದೆ. ಅದನ್ನೇ ನಾವು ಕಲಿಯುವುದೆಂದು ಹೇಳಿರುವುದು. ಆ ಮೂಲಕ ಸಂಬಂಧಿಸಿದ ಮಾನಸಿಕ ಗುಣಗಳೆಲ್ಲವೂ ಸಂಸ್ಕರಣವಾಗುತ್ತವೆ.

ಮಾನವನ ನರವ್ಯೂಹದ ಮಾರ್ದವತೆ ವಯಸ್ಸಾದಂತೆ ಕಡಮೆಯಾಗುತ್ತದೆ. ಎಳೆಯ ಕಾಲದಲ್ಲಿ ಆರಂಭವಾದ ಗುರುತುಗಳು ಅದರಲ್ಲಿ ಭದ್ರವಾಗಿ ತಳವೂರುತ್ತವೆ. ಆದ್ದರಿಂದ ಚಿಕ್ಕಂದಿನಲ್ಲಿ ಒಳ್ಳೆಯ ಅಭ್ಯಾಸಗಳು ಎಂದರೆ ಒಳ್ಳೆಯ ಯೋಚನೆ, ಭಾವನೆ, ನಡೆನುಡಿ ಮತ್ತು ಇನ್ನಿತರ ಕ್ರಿಯೆಗಳು ರೂಢಿಸಿದರೆ ಮುಂದೆ ಅವೇ ಬಲಿತು, ಭದ್ರವಾಗುತ್ತವೆ. ವ್ಯಕ್ತಿಯೂ ಸಂಸ್ಕೃತನಾಗುತ್ತಾನೆ. ಈ ಸಂಸ್ಕರಣವನ್ನೇ ನಾವು ಶಿಕ್ಷಣವೆನ್ನುವುದು. ಆದ್ದರಿಂದ ಯಾವುದನ್ನು ಕಲಿಯಬೇಕಾದರೂ ಮಕ್ಕಳು ಚಟುವಟಿಕೆಯಿಂದಿದ್ದೇ ಕಲಿಯಬೇಕು. ಆ ಚಟುವಟಿಕೆ ಯೋಚನೆ, ಭಾವನೆ, ಸಂವೇದನೆ, ಸಂಬಂಧಕಲ್ಪನೆ ಮುಂತಾದ ಮಾನಸಿಕ ಸ್ವರೂಪದ್ದಾದರೂ ಇರಬಹುದು; ದೈಹಿಕವಾದ್ದೂ ಆಗಿರಬಹುದು.

**೨. ಯಾವುದು ನಮಗೆ ಸಂತೋಷವನ್ನು ತರುವುದೋ ಅದನ್ನು ನಾವು ಕಲಿಯುತ್ತೇವೆ; ಯಾವುದರಿಂದ ಜಯವಾ**

**ಗುತ್ತೇವೆ ಅದನ್ನೂ ಕಲಿಯುತ್ತೇವೆ; ಆದರೆ ಯಾವುದರಿಂದ ನೋವಾಗುವುದೋ, ಯಾವುದರಿಂದ ಪರಾಜಯವಾಗುವುದೋ ಅವನ್ನು ಕಲಿಯುವುದಿಲ್ಲ:** ಯಾವುದಾದರೂ ಒಂದು ಕೆಲಸವನ್ನು ಆಚರಿಸಿದಾಗ ಸಂತೋಷವಾದರೆ, ಜಯ ಲಭಿಸಿದರೆ ಆ ಕಾರ್ಯವನ್ನು ಪುನರಾವರ್ತಿಸುವ ಮನೋಭಾವ ಹುಟ್ಟುತ್ತದೆ. ಹಾಗೆ ಅದನ್ನು ಅಭ್ಯಾಸಿಸುವುದರಿಂದ ಅದನ್ನು ಕಲಿಯುತ್ತೇವೆ. ಹಾಗೆಯೇ ಯಾವುದರಿಂದ ನಮಗೆ ಅತೃಪ್ತಿಯಾಗುವುದೋ, ಯಾವುದು ಜಯ ತರುವುದಿಲ್ಲವೋ ಅದನ್ನು ತಿರುಗಿ ಆಚರಿಸುವುದಕ್ಕೆ ಮನಸ್ಸು ಇರುವುದಿಲ್ಲ. ಅದರಿಂದ ಆ ಕಾರ್ಯದ ಅಭ್ಯಾಸವಾಗುವುದಿಲ್ಲ. ಕಲಿವೂ ಸಿದ್ಧಿಸುವುದಿಲ್ಲ. ಈ ತತ್ವವನ್ನು ಉಪಾಧ್ಯಾಯರು ಗಮನದಲ್ಲಿಟ್ಟು ತಮ್ಮ ಬೋಧನಕಾರ್ಯದಲ್ಲಿ ಉಚಿತವೆನಿಸುವ ಸನ್ನಿವೇಶಗಳನ್ನು ರಚಿಸಿಕೊಳ್ಳುವುದು ಆವಶ್ಯಕ.

ವ್ಯಕ್ತಿಯ ಮತ್ತು ಸಮಾಜದ ಹಿತಗಳಿಗೆ ನೆರವಾಗತಕ್ಕ ಎಲ್ಲ ನಡೆನುಡಿ, ಭಾವನೆ ಮತ್ತು ವರ್ತನೆಗಳನ್ನು ಮಕ್ಕಳು ಕಲಿಯಬೇಕು. ಅಂಥವು ಯಾವೆಂಬುದು ಉಪಾಧ್ಯಾಯರಿಗೆ ಚೆನ್ನಾಗಿ ಅರಿವಿರಬೇಕು. ಉಚಿತವಾದ ಆ ಕಾರ್ಯಗಳನ್ನು ಆಚರಿಸಿದಾಗ ಮಕ್ಕಳಿಗೆ ಸಂತೋಷವಾಗುವಂತೆ ಫಲವನ್ನು ತೋರಿಸಬೇಕು. ಆ ಸಂತೋಷ ಅದೇ ಕಾರ್ಯವನ್ನು ಮತ್ತೆ ಆಚರಿಸುವಂತೆ ಅವರಿಗೆ ಪ್ರೋತ್ಸಾಹಿಸುತ್ತದೆ. ಈ ಅಭ್ಯಾಸದಿಂದ ಆ ಕಲಿವು ಸಿದ್ಧಿಸುತ್ತದೆ. ಹೊಗಳುವುದು, ಬಹುಮಾನ ಕೊಡುವುದು, ತರಗತಿಯಲ್ಲಿ ಪ್ರಥಮ ಸ್ಥಾನ ಕೊಡುವುದು ಮೊದಲಾದ ಮಾರ್ಗಗಳಿಂದ ಈ ಕಾರ್ಯವನ್ನು ಶಾಲೆಗಳಲ್ಲಿ ಆಚರಿಸಬಹುದು. ಆಗ ಅವರಿಗೆ ಕಲಿವಿನಲ್ಲಿ ಆಸಕ್ತಿಯೂ ಕಲಿತದ್ದನ್ನು ದೃಢಪಡಿಸಿಕೊಳ್ಳುವ ಆಸೆಯೂ ಹುಟ್ಟಿ ಶಿಕ್ಷಣ ಯಶಸ್ವಿಯಾಗುತ್ತದೆ. ಹೀಗೆಯೇ ಅಹಿತವಾದ್ದನ್ನು ಆಚರಿಸಿದಾಗ ಅವರಿಗೆ ಅಸಂತೋಷವಾಗುವಂತೆ ಫಲವನ್ನು ತೋರಿಸಬೇಕು. ಅಂಥ ಕೆಟ್ಟ ಕೃತಿಯನ್ನು ಒಮ್ಮೆ ಆಚರಿಸಿದರೂ ಅದರ ಪ್ರತಿಫಲವಾಗಿ ಹುಟ್ಟಿದ ನೋವಿನ ಅಥವಾ ಅಸಂತೋಷದ ವಿಫಲತೆಯಿಂದ ಮರಳಿ ಆ ಕೆಲಸವನ್ನು ಆಚರಿಸುವುದಿಲ್ಲ. ಅದರಿಂದ ಆ ಕೆಲಸ ಅಭ್ಯಾಸವಾಗಲಾರದು. ಆ ಮೂಲಕ ಅಹಿತವಾದ ಮಾರ್ಗದಿಂದ ತಪ್ಪಿಸಿದಂತಾಗುತ್ತದೆ. ಹೀಗೆ ಅಹಿತ ಮಾರ್ಗ

ದಿಂದ ತಪ್ಪಿಸುವುದೂ ಒಂದುರೀತಿಯ ಕಲಿವೇ ಆಗಿದೆ! ಹಾಗೆ ಅನುಚಿತ ಕಾರ್ಯದಲ್ಲಿ ತೊಡಗಿದಾಗ ಸೂಕ್ಷ್ಮವಾಗಿ ಎಚ್ಚರಿಸುವುದು, ಅಂಜಿಕೆ ಹುಟ್ಟಿಸುವುದು, ತರಗತಿಯಲ್ಲಿ ಉತ್ತಮಸ್ಥಾನ ಕಳೆದುಕೊಳ್ಳುವ ಸಂಭವದ ಕಡೆ ಗಮನ ಸೆಳೆಯುವುದು, ತೀರ ಆವಶ್ಯಕವಾದಾಗ ದಂಡನೆ-ಮುಂತಾದವು ಗಳಿಂದ ಅವರು ಅಹಿತವಾದ್ದನ್ನು ಕಲಿವುದನ್ನು ನಿಲ್ಲಿಸಲು ಯತ್ನಿಸಬೇಕು. ಆದರೆ ಅಷ್ಟಕ್ಕೇ ತೃಪ್ತಿಪಟ್ಟುಕೊಳ್ಳುವಂತಿಲ್ಲ: ಆ ಅಹಿತಕಾರ್ಯವನ್ನು ತಡೆದಂತೆ, ಉಚಿತವಾದ ಕಲಿವಿನ ಕಡೆಗೆ ಅವರನ್ನು ಪ್ರೋತ್ಸಾಹಿಸಲೂ ಬೇಕು. ತರಗತಿಯ ಬೋಧನೆಯಲ್ಲಾಗಲಿ, ಶಾಲೆಯಲ್ಲಿ ಶಿಸ್ತು ನೆಲಸು ವಂತೆ ಮಾಡುವಾಗಲೇ ಆಗಲಿ ಅಹಿತಕಾರ್ಯ ಕಲಿಯುವಾಗ ಅತೃಪ್ತಿ ಅಸಂತೋಷಗಳ ಪ್ರತಿಫಲವನ್ನು ತೋರಿ, ಆ ಕಾರ್ಯದಿಂದ ಅವರನು ಉಚಿತಮಾರ್ಗದ ಕಡೆ ಹೆಜ್ಜೆಯಿಡುವಂತೆ ಮಾಡಬೇಕು.

**೩. ನಾವು ಸಿದ್ಧವಾಗಿರುವಾಗ ಕಲಿಯುತ್ತೇವೆ; ಸಜ್ಜಾಗಿಲ್ಲದಿರುವಾಗ ಕಲಿಯಲಾರೆವು:** ಯಾವುದಾದರೂ ಕಾರ್ಯ ಮಾಡಲು ನಮ್ಮ ಮನಸ್ಸು ಸಜ್ಜಾಗಿದ್ದರೆ ಆ ಕಾರ್ಯ ಮಾಡುವುದರಿಂದ ಸಂತೋಷ ವಾಗುತ್ತದೆ. ಆದ್ದರಿಂದ ಅಂದು ಮಾಡಿದ ಕಾರ್ಯವನ್ನು ನಾವು ಕಲಿಯು ತ್ತೇವೆ. ನಮ್ಮ ಮನಸ್ಸು ಅನುವಾಗಿಲ್ಲದಿರುವಾಗ ಕಾರ್ಯವೊಂದನ್ನು ಮಾಡಲು ಹೊರಿಸಿದರೆ ಅದರಿಂದ ಜಿಗುಪ್ಸೆ ಬಂದು ಅದನ್ನು ಪುನರಾವರ್ತಿ ಸಲು ಮನಸ್ಸಿಲ್ಲದೆ ಅದನ್ನು ಅಭ್ಯಾಸಮಾಡುವುದಿಲ್ಲ. ಎಂದರೆ, ಅದನ್ನು ನಾವು ಕಲಿಯಲಾರೆವು. ಹಸಿದಿರುವಾಗ ತಾನೆ ಅನ್ನ ರುಚಿಸುವುದು? ಇಲ್ಲ ದಿದ್ದಾಗ ಅಮೃತವಾದರೂ ವಿಷವಾಗಿ ಕಂಡೀತು!

ಈ ಸಿದ್ಧತೆಯ ನಿಯಮವನ್ನು ಉಪಾಧ್ಯಾಯರು ಪಾಠ ಬೋಧನೆ ಯಲ್ಲಿ ಉಪಯೋಗಿಸಿಕೊಳ್ಳಬಹುದು. ಪಾಠ ಆರಂಭಿಸುವ ಮುನ್ನ ಮಕ್ಕಳ ಮನಸ್ಸನ್ನು ಅದಕ್ಕೆ ಸಿದ್ಧಪಡಿಸುವುದು ಅಗತ್ಯ. ಅದಿಲ್ಲದೆ ಬೋಧನೆಗೆ ತೊಡಗಿದರೆ ಅವರಿಗೆ ಆಸಕ್ತಿಯಿಲ್ಲದೆ ತಕ್ಕಷ್ಟು ಫಲಪ್ರದವಾಗುವಂತಿಲ್ಲ. ಕಟುಬಲುಮೆಯ ಮೇಲೆ ವಿಷಯವನ್ನು ಅವರ ಮೇಲೆ ಹೇರಿದಂತಾಗಿ ಅವರಿಗೆ ಜಿಗುಪ್ಸೆ ಹುಟ್ಟುತ್ತದೆ. ಕಲಿವು ದುರ್ಲಭವಾಗುತ್ತದೆ. ಅವರನ್ನು ಪಾಠಕ್ಕೆ ಸಿದ್ಧಪಡಿಸಿದ್ದರೆ ತಮ್ಮ ಪೂರ್ಣ ಅವಧಾನವನ್ನು ಆ ಕಡೆ ಕೊಡು

ವುದಲ್ಲದೆ ಆಸಕ್ತಿಯಿಂದಿದ್ದು ಚಟುವಟಿಕೆಯಿಂದಲೂ ಸಂತೋಷದಿಂದಲೂ ಕಲಿಯಲು ಯತ್ನಿಸುವರು. ಆಗ ಕಲಿವು ಯಶಸ್ವಿಯಾಗಬಲ್ಲದು. ಬೋಧನೆಯೂ ಸಾರ್ಥಕವೆನಿಸುತ್ತದೆ. ಹಾಗೆ ಅವರು ಸಿದ್ಧರಿಲ್ಲದಿರುವಾಗ ಕಟುಬಲುಮೆಯಿಂದ ಅವರ ಮೇಲೆ ಹೊರಿಸಲು ಬೋಧನೆಗೆ ತೊಡಗಿದರೆ ಅದನ್ನವರು ಕಲಿಯದಿರುವುದರ ಜೊತೆಗೆ ಮುಂದೆ ಆ ವಿಷಯವನ್ನೇ ದ್ವೇಷಿಸುವಂತಾಗಬಹುದು.

**೪. ಉದ್ದೇಶಪೂರ್ವಕವಾದದ್ದನ್ನು ಚೆನ್ನಾಗಿ ಕಲಿಯುತ್ತಾರೆ; ಉದ್ದೇಶವಿರಹಿತವಾಗಿದ್ದರೆ ಕಲಿವು ಯಶಸ್ವಿಯಾಗಲಾರದು:** ಪಾಠವನ್ನು ಬೋಧಿಸುವಾಗ ಮೊದಲು ಒಂದು ಗುರಿಯನ್ನು ಮಕ್ಕಳ ಮನಸ್ಸಿನಲ್ಲಿ ಮೂಡಿಸಬೇಕು ಆಗ ತಮ್ಮ ಪೂರ್ಣ ಅವಧಾನವನ್ನು ಆ ಕಡೆ ಕೊಟ್ಟು ಉದ್ದೇಶಿಸಿದ ಗುರಿಯನ್ನು ಮುಟ್ಟಲು ಆಸಕ್ತಿಯಿಂದ ಕಲಿಯುತಾರೆ. ಅದನ್ನು ಪೂರೈಸುವುದು ಅವರಿಗೆ ಹಿತಕರವೆನಿಸುವುದರಿಂದ ಆ ಕಾರ್ಯ ಮಾಡಲು ಹೆಚ್ಚಿನ ಉತ್ಸಾಹವೂ ಅವರನ್ನು ಕಲಿಯಲು ಪ್ರೋತ್ಸಾಹಿಸುತ್ತಿರುತ್ತದೆ.

ಉದ್ದೇಶವಿರಹಿತ ಬೋಧನೆ ಬರಿಯ ಕಾಲವ್ಯಯ. ಉಪಾಧ್ಯಾಯರಿಗೆ ಶ್ರಮವಾದರೂ ಮಕ್ಕಳಿಗೆ ಫಲವಾಗದು. ತರಗತಿಯಲ್ಲಿ ಪಾಠ ಬೋಧನೆ ಆರಂಭವಾಗುವ ಮುನ್ನ ಆ ಪಾಠ ನಿತ್ಯ ಸಮಸ್ಯೆಗೆ ಸಂಬಂಧಿಸಿದ್ದೆಂಬ ಮನೋಭಾವವನ್ನು ಮಕ್ಕಳ ಮನಸ್ಸಿನಲ್ಲಿ ಮೂಡಿಸಬೇಕು. ಆ ಗುರಿಯನ್ನು ಅವರ ಮುಂದಿಟ್ಟರೆ ಮಕ್ಕಳು ಪಾಠದ ಆದ್ಯಂತವೂ ಗಮನವನ್ನು ಆ ಕಡೆ ಕೊಟ್ಟು ಕಾರ್ಯಸಾಧಿಸಲು ಚಟುವಟಿಕೆಯಿಂದಿದ್ದು ವಿಷಯವನ್ನು ಕಲಿಯುವರು. ಆ ಉದ್ದೇಶವನ್ನು ಸಾಧಿಸುವುದಕ್ಕಾಗಿ ಹೊರಟಾಗ ಕಲಿವೂ ಸುಲಭವಾಗುತ್ತದೆ. ಏಕೆಂದರೆ ಕಲಿಯಬೇಕೆಂಬ ಹೆಬ್ಬಯಕೆ ಅವರ ಮನಸ್ಸನ್ನು ಪ್ರೋತ್ಸಾಹಿಸುತ್ತಿರುತ್ತದೆ. ಆದರಿಂದಲೇ ಮಕ್ಕಳಿಗೆ ಅತ್ಯಾಸಕ್ತಿಯಿರುವ ಉದ್ಯಮವೊಂದನ್ನು ಮಾಡುತ್ತಿರುವಾಗ ಅನಿವಾರ್ಯವೆನಿಸಿದ ಓದುವುದು, ಬರೆಯುವುದು, ಲೆಕ್ಕ, ಚರಿತ್ರೆ, ಭೂಗೋಳ, ಆರೋಗ್ಯ, ಪ್ರಕೃತಿಪಾಠ, ಚಿತ್ರ, ಸಂಗೀತ ಮುಂತಾದವನ್ನು ಹೆಚ್ಚು ಯಶಸ್ವಿಯಾಗಿ ಬೋಧಿಸಬಹುದೆಂದು ಹಿಂದೆ ಉದ್ಯಮಪಠ್ಯವಸ್ತುವಿನಲ್ಲಿ

ಪಾದಿಸಿರುವುದು. ಹೀಗೆ ಎಲ್ಲ ಪಾಠ ಮಾಡುವಾಗಲೂ ಮಕ್ಕಳ ಮುಂದೆ ಒಂದು ಉದ್ದೇಶವನ್ನೂ ಇಡುವುದರಿಂದ ಬಹುವಾಗಿ ವ್ಯರ್ಥವಾಗುತ್ತಿರುವ ನಮ್ಮ ತರಗತಿಯ ಬೋಧನೆ ಫಲಪ್ರದವಾಗಿ ಮಾರ್ಪಟ್ಟೀತು.

**೫. ನಾವು ಒಂದು ವಿಷಯವನ್ನು ಬೋಧಿಸುತ್ತಿರುವಾಗ ಅಗೋಚರವಾಗಿಯಾದರೂ ಮಕ್ಕಳು ಇತರ ವಿಷಯಕವಾದ ಕಲಿವನ್ನೂ ಸಾಧಿಸುವರು :** ಇದನ್ನು ವಿವರಿಸಲು ಒಂದು ಉದಾಹರಣೆ ಕೊಡಬಹುದು: ಮಗ್ಗಿ ಬೋಧಿಸುತ್ತಿರುವಾಗ ಮಕ್ಕಳು ಮಗ್ಗಿಯನ್ನು ಕಲಿಯುವುದರ ಜೊತೆಗೆ ಉಪಾಧ್ಯಾಯರ ಉಚ್ಚಾರಣೆ, ನಡೆನುಡಿ, ಅವರಲ್ಲಿ ವಿಧೇಯತೆ, ಸ್ನೇಹಿತರಲ್ಲಿ ವಿಶ್ವಾಸ ಮುಂತಾದ ಹಲವು ವೈಯಕ್ತಿಕ ಗುಣಗಳನ್ನೂ ಕಲಿಯುವರು. ಹಾಗೆಯೇ ಅಶೋಕನ ಚರಿತ್ರೆ ಹೇಳುತ್ತಿರುವಾಗ ಚರಿತ್ರೆಯ ಅಂಶವನ್ನು ಕಲಿಯುವುದರ ಜೊತೆಗೆ ಉಪಾಧ್ಯಾಯರು ಅವನ ವಿಷಯದಲ್ಲಿ ತಳೆದಿರಬಹುದಾದ ವೈಯಕ್ತಿಕ ಭಾವನೆಗಳನ್ನೂ, ಸಾಹಸ, ಸದ್ಭಾವನೆ, ಮತಸಹಿಷ್ಣುತೆ ಮುಂತಾದ ಅಶೋಕನ ಭಾವನೆಗಳನ್ನೂ ಕಲಿಯುವರು.

ಆದ್ದರಿಂದ ಯಾವ ಪಾಠವನ್ನೇ ಬೋಧಿಸುತ್ತಿರಲಿ, ಮಕ್ಕಳ ನಡೆನುಡಿ, ಭಾವನೆ, ಆಲೋಚನೆ, ವಿಮರ್ಶೆ ಮುಂತಾದವೂ ಉತ್ತಮಗೊಳ್ಳುವಂತೆ ಮಾಡಲು ಉಪಾಧ್ಯಾಯರು ಗಮನ ಕೊಡಬೇಕು. ತರಗತಿಯಲ್ಲಿ ಪಾಠದ ಕಡೆ ಆಸಕ್ತಿಯಿಂದಿರುವಂತೆ ನಟಿಸುವುದು, ಸುಳ್ಳು ಹೇಳಲು ಯತ್ನಿಸುವುದು, ಪ್ರಶ್ನೆಗೆ 'ಉಡಾಫೆ' ಉತ್ತರ ಹೇಳಲು ತೊಡಗುವುದು, ಮೊದಲಾದ ದುರಭ್ಯಾಸಗಳನ್ನು ಅವರು ಮಾಡದಂತೆಯೂ ಗಮನ ಕೊಡಬೇಕು. ಉಪಾಧ್ಯಾಯರ ಧ್ವನಿ, ಉಚ್ಚಾರಣೆ, ನಡೆ ನುಡಿ—ಇವು ದೋಷಪೂರಿತವಾಗಿದ್ದರೆ ಆ ಕೆಟ್ಟ ಪ್ರಭಾವ ಮಕ್ಕಳ ಮೇಲೂ ಬಿದ್ದು ಅವನ್ನೇ ಅನುಕರಿಸಿಯಾರು. ಮುಖ್ಯ ವಿಷಯ ಬೋಧನೆಯ ಕಡೆ ಗಮನ ಕೊಡುವಂತೆ ಈ ಪ್ರಾಸಂಗಿಕ ವಿಷಯಗಳ ಕಡೆಗೂ ಗಮನ ಕೊಟ್ಟರೆ ಮಕ್ಕಳ ಶಿಕ್ಷಣ ವಿಶಾಲ ದೃಷ್ಟಿಯಲ್ಲಿ ನಡೆದಂತಾಗುತ್ತದೆ.

**ಈ ನಿಯಮಗಳ ಉಪಯುಕ್ತತೆ :** ಮೇಲಿನ ಕಲಿವಿನ ನಿಯಮಗಳ ಪರಿಚಯದಿಂದ ಉಪಾಧ್ಯಾಯರು ತಮ್ಮ ಬೋಧನೆಯನ್ನು ಪುಷ್ಟಿಗೊಳಿಸಿಕೊಳ್ಳಬಹುದು. ೧. ಕೇವಲ ತಾವೇ ಪಾಠಗಳನ್ನೆಲ್ಲ ಉಪನ್ಯಾಸ ಮಾಡಿ

ಬಿಡದೆ ಮಕ್ಕಳ ಮನಸ್ಸನ್ನು ಪ್ರಚೋದಿಸಿ ಬೋಧನ ವಿಷಯದ ಕಡೆಗೆ ಆಸಕ್ತಿ ಬರಿಸಿ, ತಮ್ಮ ಚಟುವಟಿಕೆಯಿಂದ ಕಲಿಯುವಂತೆ ಮಾಡುತ್ತ ತಾವು ಮಾರ್ಗದರ್ಶಕರಾಗಿರಬೇಕು. ಸ್ವಪ್ರಯತ್ನದಿಂದಲೇ ಮಕ್ಕಳು ಚಟುವಟಿಕೆಯಾಗಿರುವಾಗ ಅವರ ಅಭಿರುಚಿ ಆಸಕ್ತಿಗಳೂ ಶಕ್ತಿ ಸಾಮರ್ಥ್ಯಗಳೂ ಪ್ರಕಾಶನಕ್ಕೆ ಬರುವಂತೆ ಮಾಡುವುದು ಉತ್ತಮ ಬೋಧನೆ. ೨. ಯಾವ ಪಾಠವನ್ನೇ ಮಾಡುತ್ತಿರಲಿ ಅದು ನಿತ್ಯ ಜೀವನಕ್ಕೆ ಸಂಬಂಧಿಸಿದ ತಮ್ಮ ಸಮಸ್ಯೆಯೇ ಎಂಬ ಭಾವ ಮಕ್ಕಳ ಮನಸ್ಸಿನಲ್ಲಿ ಹುಟ್ಟುವಂತೆ ಆಸಕ್ತಿ ಮೂಡಿಸಬೇಕು. ತಮ್ಮ ಮೇಲೆ ಉಪಾಧ್ಯಾಯರು ಹೊರಿಸಿದ ಪಾಠವೆಂಬ ಭಾವನೆ ಅವರ ಮನಸ್ಸಿನಲ್ಲಿದ್ದರೆ ಇಡೀ ಪಾಠಕ್ಕೆ ಪಡುವ ಶ್ರಮವೆಲ್ಲ ವ್ಯರ್ಥ. ೩. ಪಠ್ಯ ವಿಷಯವನ್ನೂ ಶಾಲೆಯ ಆಡಳಿತ ವ್ಯವಸ್ಥೆ ಮತ್ತು ಸಂವಿಧಾನಗಳನ್ನೂ ರೂಪಿಸುವಾಗ ಪ್ರಾಸಂಗಿಕವಾಗಿ ಆಗುವ ಶಿಕ್ಷಣದ ಕಡೆಗೂ ಗಮನ ಕೊಟ್ಟು ಆ ಮೂಲಕ ಮಕ್ಕಳ ಬಹುಮುಖವಾದ ಶಿಕ್ಷಣ ಸಾಧನೆಯಾಗುವಂತೆ ಏರ್ಪಡಿಸಿಕೊಳ್ಳಬೇಕು. ೪. ಒಂದೊಂದು ಹೊಸ ವಿಷಯವನ್ನು ಮಕ್ಕಳು ಕಲಿತಾಗಲೂ ಅವರಿಗೆ ತೃಪ್ತಿ ಸಂತೋಷಗಳು ಬರುವಂತೆ ಪ್ರೋತ್ಸಾಹಿಸಿ ಆ ವಿಷಯದಲ್ಲಿ ಆಳವಾದ ಅಭ್ಯಾಸ ಮಾಡುವಂತೆ ಉತ್ತೇಜನ ಕೊಡಬೇಕು. ಜೊತೆಗೆ ಮತ್ತೊಂದು ಹೊಸ ವಿಷಯದಲ್ಲೂ ಆಸಕ್ತಿ ತೋರಿ ಅಭ್ಯಾಸ ಮಾಡುವಂತೆ ಮಾರ್ಗದರ್ಶನ ಮಾಡಬೇಕು. ೫. ಬೋಧಿಸುತ್ತಿರುವಾಗ ಮಕ್ಕಳು ನಿಷ್ಪಕ್ಷಪಾತದಿಂದ ಆಲೋಚಿಸಿ ತೀರ್ಮಾನಗಳಿಗೆ ಬರುವಂಥ ಸನ್ನಿವೇಶಗಳನ್ನು ತರಬೇಕು. ಆ ಮೂಲಕ ಅವರ ಆಲೋಚನೆ, ವಿಮರ್ಶೆ ಮತ್ತು ವಿಷಯದ ತೀರ್ಮಾನದ ಈ ಶಕ್ತಿಗಳು ಪಳಗಿ ಬೆಳಗುವಂತಾಗಬೇಕು. ೬. ಯಾರಿಗೆ ಯಾವ ಯಾವ ಶಿಕ್ಷಣದಿಂದ ತೃಪ್ತಿ ಸಂತೋಷ ಬರುವುವೋ, ಯಾವುದರಲ್ಲಿ ಅಭಿರುಚಿ ಆಸಕ್ತಿಯಿರುವುವೋ ಅವನ್ನೆಲ್ಲ ಅರಿತುಕೊಳ್ಳಲೂ, ಆ ಕಾಲದಲ್ಲಿ ಸೂಕ್ತ ಸನ್ನಿವೇಶಗಳನ್ನು ರಚಿಸಿಕೊಳ್ಳಲೂ ಯತ್ನಿಸಬೇಕು. ೭. ತರಗತಿಯಲ್ಲಿ ಮಕ್ಕಳು ಪುಸ್ತಕಗಳಲ್ಲಿರುವ ಪಾಠವನ್ನು ಮನನ ಮಾಡುವುದರ ಜೊತೆಗೆ, ಇತರ ಪುಸ್ತಕಗಳನ್ನೂ ಪರಿಶೀಲಿಸುವ, ಉಪಕರಣಗಳನ್ನು ಉಪಯೋಗಿಸುವ, ಮತ್ತು ಇನ್ನಿತರ ಪ್ರಾಯೋಗಿಕ ಕಾರ್ಯಗಳನ್ನೂ ನಡಸುವ ಶಕ್ತಿ ಬರುವಂತೆ ಮಾಡಬೇಕು.

**ಬೋಧನ ನಿಯಮಗಳು :** ಮಕ್ಕಳು ಕಲಿಯುವ ಕಾರ್ಯಕ್ಕೆ ಸಂಬಂಧಿಸಿದ ನಿಯಮಗಳಂತೆ ಬೋಧಿಸುವ ಕಾರ್ಯಕ್ಕೂ ಸಂಬಂಧಿಸಿದಂತೆ ಮನಶ್ಶಾಸ್ತ್ರಜ್ಞರು ಹಲವು ನಿಯಮಗಳನ್ನು ರೂಪಿಸಿರುವರು. ಉಪಾಧ್ಯಾಯರಿಗೆ ಅವುಗಳ ಪರಿಚಯವೂ ಅನಿವಾರ್ಯವೆನಿಸಿರುವುದರಿಂದ ಅವನ್ನೂ ಇಲ್ಲಿ ವಿವರಿಸುವುದು ಉಚಿತವೆನಿಸುತ್ತದೆ :—

**೧. ಪರಿಚಿತ ವಿಷಯದಿಂದ ಅಪರಿಚಿತ ವಿಷಯವನ್ನು ಬೋಧಿಸುವುದು :** ಹಿಂದಿನ ಅನುಭವಕ್ಕೆ ಹೊಸ ಅನುಭವ ಸೇರಿ ಜ್ಞಾನಾರ್ಜನೆ ಆಗಬೇಕು. ಹಳೆಯ ಅನುಭವದೊಡನೆ ಹೊಸದು ಸೇರಿ ಸಮನ್ವಯವಾಗಿ ವ್ಯಕ್ತಿಯ ಜ್ಞಾನರಾಶಿ ಬೆಳೆಯಬೇಕು. ಎತ್ತಿನ ಗಾಡಿ ನೋಡಿರುವ ಮಕ್ಕಳಿಗೆ ಕುದುರೆ ಗಾಡಿಯನ್ನು ತಿಳಿಸುವುದು ಸುಲಭ. ಇಂಗಾಲಾಮ್ಲದ ಗುಣಗಳನ್ನು ಅಭ್ಯಾಸಿಸಿ, ಗಂಧಕದ ಡೈ ಆಕ್ಸೈಡಿನ ಗುಣಗಳನ್ನು ಕಲಿತುಕೊಳ್ಳುವುದು ಸುಲಭವಾಗುತ್ತದೆ. ಈ ರೀತಿಯಲ್ಲಿ ನಾವು ನಮ್ಮ ಬೋಧನ ಕ್ರಮವನ್ನು ಸಜ್ಜುಗೊಳಿಸಿಕೊಂಡರೆ ಮಕ್ಕಳು ಸುಲಭವಾಗಿ ಪಾಠವನ್ನು ಗ್ರಹಿಸಬಲ್ಲರು. ಆದರೆ, ಕೆಲವು ಪಾಠಗಳಲ್ಲಿ ಹೊಸ ವಿಷಯವನ್ನು ಕಲಿಯುವುದರ ಬದಲು ಹಿಂದಿನದನ್ನೇ ವಿಮರ್ಶಿಸುವ ಅಥವಾ ಆಲೋಚಿಸುವ ಕಾರ್ಯ ಮಾಡಬೇಕಾಗಿರುವಾಗ ಈ ನಿಯಮ ಅಷ್ಟು ಪ್ರಯೋಜನವಲ್ಲ. ಪಾಠಾರಂಭದಲ್ಲಿ ಈ ನಿಯಮದ ಸಲಹೆಯಂತೆ ಒಂದು ಪೀಠಿಕೆಯನ್ನು ಹಾಕಿಕೊಂಡು ಮಕ್ಕಳ ಹಿಂದಿನ ಜ್ಞಾನವನ್ನು ಪ್ರಚೋದಿಸಿ ಈ ದಿನದ ಪಾಠಕ್ಕೆ ಸಿದ್ಧಪಡಿಸಿಕೊಳ್ಳುವುದು ಬೋಧನೆಗೆ ತುಂಬ ನೆರವಾಗುತ್ತದೆ.

**೨. ಸುಲಭವಾದ ವಿಷಯದಿಂದ ಕಷ್ಟವಾದ ವಿಷಯಕ್ಕೆ :** ಸಾಮಾನ್ಯವಾಗಿ ಸುಲಭವಾದ ವಿಷಯವನ್ನು ಬೋಧಿಸಿ ಅನಂತರ ಕಷ್ಟವಾದ ವಿಷಯವನ್ನು ಬೋಧಿಸಲು ಈ ನಿಯಮ ಮಾರ್ಗದರ್ಶಿಯಾಗಿದೆ. ಮೊದಲು ಒಂದಂಕಿಯ ಗುಣಾಕಾರ ಮಾಡಿಸಿ, ಅನಂತರ ಎರಡಂಕಿಯ ಗುಣಾಕಾರ ಆರಂಭಿಸಿದರೆ ಮಕ್ಕಳು ಸುಲಭವಾಗಿ ತಿಳಿದುಕೊಳ್ಳುವರು. ಆದರೂ ಹಲವು ವೇಳೆ ಈ ನಿಯಮ ಬಲು ತೊಡಕಾಗಿ ಪರಿಣಮಿಸಬಹುದು. ನಮಗೆ ಸುಲಭವೆಂದು ಎಣಿಕೆಯಿರುವುದು ಮಕ್ಕಳಿಗೆ ಇಲ್ಲದಿರಬಹುದು. ಅಥವಾ ನಿಜವಾಗಿಯೂ ಕಷ್ಟವಾಗಿರುವ ವಿಷಯ ಮಕ್ಕಳಿಗೆ ಸುಲಭ

ವಾದ್ದೆಂದು ಕಾಣಬಹುದು. ಅವರ ದೃಷ್ಟಿಯಿಂದ ಸುಲಭವಾದ್ದಾವುದು ಎಂದು ನಿರ್ಧರಿಸುವುದು ಕಷ್ಟ. ಆಕಾಶದಲ್ಲಿ ಸರಾಗವಾಗಿ ಹರಿದುಹೋಗುತ್ತಿರುವ ವಿಮಾನ ರೈಲು ಎಂಜನ್ನಿಗಿಂತ ಸುಲಭವಿರುವಂತೆ ಮಕ್ಕಳಿಗೆ ಕಾಣಬಹುದು. ಎಂದರೆ, ಕಷ್ಟವಾದ್ದಾವುದು, ಸುಲಭವಾದ್ದಾವುದು ಎಂಬುದನ್ನು ಮಕ್ಕಳ ದೃಷ್ಟಿಯಿಂದ ಪರಿಶೀಲಿಸಿದರೆ ಈ ನಿಯಮ ಹಲವು ಸಂದರ್ಭಗಳಲ್ಲಿ ಬೋಧನ ಕಾರ್ಯಕ್ಕೆ ನೆರವಾಗುತ್ತದೆ.

**೩. ಉದಾಹರಣೆಗಳ ಮೂಲಕ ಸೂತ್ರದ ಬೋಧನೆ:** ಭಾವಪ್ರದವಾಗಿ ಕಾಣುವ ಸೂತ್ರಗಳನ್ನೂ ನಿಯಮಗಳನ್ನೂ ಮಕ್ಕಳು ಗ್ರಹಿಸುವುದು ಕಷ್ಟ. ಆದ್ದರಿಂದ ಆ ನಿಯಮಗಳನ್ನು ಅಥವಾ ಸೂತ್ರಗಳ ಕೆಲವು ಉದಾಹರಣೆಗಳನ್ನು ಕೊಟ್ಟು ಅವುಗಳ ಸ್ವರೂಪವನ್ನು ತಿಳಿದುಕೊಂಡ ಮೇಲೆ ಎಲ್ಲ ಉದಾಹರಣೆಗಳಿಗೂ ಆಧಾರವೆನಿಸುವ ನಿಯಮವನ್ನು ದರ್ಶಿಸುವಂತೆ ಮಾಡಿದರೆ ಅದನ್ನು ಅವರು ಸುಲಭವಾಗಿ ಗ್ರಹಿಸಬಲ್ಲರು. ಆದರೆ, ಸೂತ್ರಗಳನ್ನು ಮುಂದಿಟ್ಟುಕೊಂಡು ಉದಾಹರಣೆಗಳನ್ನು ಹುಡುಕುವ ಪಾಠಕ್ಕೆ ಈ ನಿಯಮ ಸಹಾಯ ಮಾಡುವಂತಿಲ್ಲ. ಆದರೂ ಇದರ ಪರಿಚಯದಿಂದ ಯಾವ ಪಾಠದಲ್ಲಿ ಸೂತ್ರಗಳನ್ನು ಬೋಧಿಸಬೇಕಾಗಿದೆಯೋ ಅಲ್ಲಿ ಹೆಚ್ಚು ಉದಾಹರಣೆಗಳನ್ನು ಮಕ್ಕಳ ಮುಂದಿಟ್ಟು ಆ ಮೂಲಕ ಭಾವಮಯವಾದ ಸೂತ್ರಗಳನ್ನು ಪರಿಚಯ ಮಾಡಿಕೊಡಬಹುದು.

**೪. ಸಾಂಪ್ರದಾಯಿಕ ನಂಬಿಕೆಯಿಂದ ವಿವೇಚನೆಯ ಕಡೆಗೆ:** ಇದರಂತೆ ನಾವು ಆರಂಭ ಮಾಡುವಾಗ ವಿಷಯದ ಸ್ವರೂಪ ಸ್ಥೂಲವಾಗಿ ಕಂಡುಬರುತ್ತದೆ. ಆದರೆ ಅದಕ್ಕೆ ಆಧಾರಭೂತವಾದ ಕಾರ್ಯಕಾರಣಗಳನ್ನು ಕಂಡುಕೊಳ್ಳುವಂತಿಲ್ಲ. ಸಾಮಾನ್ಯವಾಗಿ ಜನಸಾಮಾನ್ಯದಲ್ಲಿ ನಂಬಿಕೆ ಇರುವ ಸ್ಥಿತಿಯಿಂದ ಆರಂಭಿಸಿ, ಕೊನೆಗೆ ಅದರ ವಿವೇಚನಾ ಯುಕ್ತವಾದ ಪರಿಚಯ ಪಡೆಯಬೇಕೆಂಬುದೇ ಈ ನಿಯಮದ ಸೂಚನೆ. ಇದು ವಿಷಯದ ಪರಿಚಯ ಮಾಡಿಕೊಳ್ಳಲು ಒಂದು ರೀತಿಯ ಪೀಠಿಕೆಯಂತಿದ್ದರೂ ಎಲ್ಲ ಸಮಯಗಳಲ್ಲೂ ನಾವು ಮೌಢ್ಯದ, ಮಬ್ಬು ಜ್ಞಾನದ ತಳಹದಿಯಿಂದಲೇ ಪಾಠ ಬೋಧನೆ ಆರಂಭಿಸುವುದು ಉಚಿತವೆನಿಸಲಾರದು. ನನ್ನ ಕಿವಿಗೆ ಬಿದ್ದಿರುವ ಹಲವು ಜನಜನಿತವಾದ ನಂಬಿಕೆಗಳನ್ನು ಬೆದಕಿ,

ವಿಚಾರ ಸಮ್ಮತವಾದ ತಿಳಿವಳಿಕೆ ಪಡೆಯಬೇಕೆಂಬುದು ಹಲವು ವೇಳೆ ನಮ್ಮ ಪಾಠಕ್ಕೆ ಸಹಾಯವೇನೋ ಆಗುತ್ತದೆ.

೫. **ಸಾಧಾರಣದಿಂದ ಸಂಕೀರ್ಣತೆಗೆ:** ವಿಷಯದ ಮೂಲ ಸ್ವರೂಪದಿಂದ ಮುಂದುವರಿದ ಸ್ವರೂಪವನ್ನು ಬೋಧಿಸುವುದಕ್ಕೆ ಈ ನಿಯಮದ ಬೆಂಬಲವಿದೆ. ಸಾಮಾನ್ಯವಾಗಿ ಸಣ್ಣ ರೂಪದಿಂದ ಸಂಕೀರ್ಣ ರೂಪವನ್ನು ವಿವರಿಸುವುದರಿಂದ ಮಕ್ಕಳಿಗೆ ಸುಲಭವಾಗಿ ಗೊತ್ತಾಗುತ್ತದೆ. ಆದರೆ ಈ ನಿಯಮವನ್ನು ತಳಹದಿಯಾಗಿಟ್ಟುಕೊಂಡಿರುವುದರಿಂದ ಶಿಕ್ಷಣ ರಂಗದಲ್ಲಿ ಹಲವು ದುಷ್ಪರಿಣಾಮಗಳು ಹುಟ್ಟಿಕೊಂಡಿವೆ. ಮಕ್ಕಳು ಅಕ್ಷರ ಕಲಿತ ಮೇಲೆ ಪದಗಳು, ಆಮೇಲೆ ವಾಕ್ಯ, ಕೊನೆಗೆ ಪಾಠ—ಈ ಕ್ರಮದಲ್ಲಿ ನಡೆಯುತ್ತಿರುವ ಬೋಧನೆಗೆ ಈ ಸೂತ್ರವೇ ಆಧಾರ! ಆದರೆ ಇದು ಉಚಿತ ವಾದ ಮಾರ್ಗವಲ್ಲ. ಮಕ್ಕಳ ಕಣ್ಣು ಬೀಳುವುದು ಒಂದು ಅಕ್ಷರದ ಮೇಲಲ್ಲ—ಒಟ್ಟು ಪದದ ಮೇಲೆ. ಅಕ್ಷರ ಬೋಧನೆ ಮಕ್ಕಳಿಗೆ ಅರ್ಥವಿಲ್ಲದ ಕೆಲಸದಂತೆ ತೋರುತ್ತದೆ. ಆದ್ದರಿಂದ ಈ ತತ್ವದ ಆಧಾರದ ಮೇಲೆ ಇಂಥ ಅನುಚಿತ ಬೋಧನಕ್ರಮ ರೂಪುಗೊಂಡಿದೆ. ಹೀಗೆಯೇ ವ್ಯಾಕರಣ ಜ್ಞಾನ ದಲ್ಲಿ ಪಾಂಡಿತ್ಯ ಬಂದಮೇಲೆ ಮಾತಾಡುವುದಕ್ಕೆ ಯತ್ನಿಸುವ ಕ್ರಮವೂ ಈ ನಿಯಮದ ಆಧಾರದ ಮೇಲೇ ಬಳಕೆಗೆ ಬಂದಂತೆ ತೋರುತ್ತದೆ. ಆದರೆ ಮಾತಾಡುವುದು ಮುಂದುವರಿದಂತೆ ಭಾಷೆಯ ಪರಿಜ್ಞಾನ ತಾನಾಗಿಯೇ ಆಗುತ್ತ ಬಂದು, ವ್ಯಾಕರಣದ ಪರಿಚಯವಾಗುತ್ತದೆಂದು ಇಂದಿನವರು ವಾದಿಸುತ್ತಾರೆ. ಹೇಗೇ ಆಗಲಿ, ಸಾಮಾನ್ಯ ಪಾಠಬೋಧನೆಗೆ ಇದೂ ಒಂದು ಮಾರ್ಗದರ್ಶಕವಾದ ನಿಯಮವಾಗಿದೆ.

೬. **ಅನಿರ್ದಿಷ್ಟದಿಂದ ನಿರ್ದಿಷ್ಟಕ್ಕೆ :** ನಮಗೆ ಖಚಿತವಾಗಿ ಗೊತ್ತಿರದ ವಿಷಯವನ್ನು ಮೊದಲು ಮಬ್ಬು ಜ್ಞಾನದಿಂದ ಆರಂಭಿಸಿ ಕೊನೆಗೆ ಅದರ ನಿರ್ದಿಷ್ಟ ಜ್ಞಾನವನ್ನು ಬೋಧಿಸುವುದು ಉತ್ತಮವೆಂದು ಈ ನಿಯಮ ತಿಳಿಸುತ್ತದೆ. ಯಾವ ವಿಷಯದಲ್ಲಾಗಲಿ ಪಾಠ ಆರಂಭಿಸುವ ಮುನ್ನ ಮಕ್ಕಳಿಗೆ ನಿರ್ದಿಷ್ಟವಾದ ಜ್ಞಾನ ಇರುವುದಿಲ್ಲ. ಪಾಠ ಮುಗಿದ ಮೇಲೆ ಅವರಿಗೆ ಅದರ ನಿರ್ದಿಷ್ಟ ಸ್ವರೂಪ ಪರಿಚಯವಾಗುತ್ತದೆ. ಎಂದರೆ, ಮಕ್ಕಳ ಮನಸ್ಸಿನಲ್ಲಿ ಜ್ಞಾನೋದಯವಾಗುವ ಸ್ವರೂಪವನ್ನು ಈ ನಿಯಮ ತಿಳಿಸು

ತ್ತದೆ; ಆದರೆ ಆರಂಭದಲ್ಲಿ ಮಬ್ಬು ಜ್ಞಾನವನ್ನು ತಳಹದಿ ಮಾಡಿಕೊಳ್ಳು ವುದು ಉಚಿತವೇ ಎಂದು ಹಲವರು ಪ್ರಶ್ನಿಸಬಹುದು. ಉಪಾಧ್ಯಾಯರು ಆ ಪಾಠದ ನಿರ್ದಿಷ್ಟ ಜ್ಞಾನವೇ ಇಲ್ಲದೆ ಬೋಧನೆಗೆ ಆರಂಭಿಸುವುದು ಮಾತ್ರ ಎಂದೆಂದಿಗೂ ಅಕ್ಷಮ್ಯವಾದೀತು!

**೭. ಸ್ಥೂಲವಾದ ವಿಷಯದಿಂದ ಸೂಕ್ಷ್ಮವಾದ ವಿಷಯವನ್ನು ಬೋಧಿಸುವುದು:** ವಿಶಾಲವಾದ ದೃಷ್ಟಿಯಿಂದ ಮೊದಲು ವಿಷಯವನ್ನು ಸಾಮಾನ್ಯವಾಗಿ ಪರಿಚಯಮಾಡಿಕೊಂಡು, ಅನಂತರ ಒಂದು ನಿರ್ದಿಷ್ಟ ಅಂಶಕ್ಕೆ ಒಪ್ಪುವಂತೆ ಸೂಕ್ಷ್ಮವಾಗಿ ಬೋಧಿಸುವುದು ಉಚಿತವೆಂದು ಈ ನಿಯಮ ಸೂಚಿಸುತ್ತದೆ. ಪ್ರಪಂಚಕ್ಕೆ ಸಂಬಂಧಿಸಿದಂತೆ ಮೊದಲು ವಾಯುಗುಣ, ಮಳೆ, ಗಾಳಿ, ಪರ್ವತ ಪಂಕ್ತಿ—ಇತ್ಯಾದಿಗಳನ್ನು ಪರಿ ಚಯಮಾಡಿಕೊಂಡು ಅನಂತರ ಒಂದೊಂದು ದೇಶಕ್ಕೂ ಅನ್ವಯಿಸುವಂತೆ ಬೋಧಿಸುವುದುತ್ತಮವೆಂದು ಇದರಿಂದ ಗೊತ್ತಾಗುತ್ತದೆ. ಆದರೆ ಮೊದಲು ಪ್ರಾದೇಶಿಕ ಭೂವಿವರಣೆಯನ್ನು ಆರಂಭಿಸಿ, ಆ ಮೂಲಕ ಜಗತ್ತಿನ ಭೂವಿ ವರಣೆಯನ್ನು ಪರಿಚಯಮಾಡಿಕೊಳ್ಳುವುದು ಉತ್ತಮವೆಂಬುದು ಈಚಿನವರ ಮತ. ಆದ್ದರಿಂದ ಈ ನಿಯಮದಂತೆ ಬೋಧನಕ್ರಮವನ್ನು ಅನುಸರಿಸುವ ಉಪಾಧ್ಯಾಯರು ತುಂಬ ಎಚ್ಚರಿಕೆಯಿಂದಿರಬೇಕು.

ಉಪಾಧ್ಯಾಯರ ಬೋಧನೆಗೆ ಮೇಲಿನ ನಿಯಮಗಳಲ್ಲಿ ಹಲವು ಸ್ಥೂಲವಾಗಿ ಸಹಾಯವೆನಿಸುತ್ತವೆ. ಇನ್ನು ಕೆಲವು ಎಷ್ಟು ಉಚಿತವೆನಿಸು ತ್ತವೋ ಅಷ್ಟೂ ಅನುಚಿತವೆಂಬಂತೆ ತೋರುತ್ತವೆ. ಅವುಗಳನ್ನು ಅತ್ಯಂತ ಎಚ್ಚರಿಕೆಯಿಂದ ಉಪಯೋಗಿಸಿಕೊಂಡು ತಮ್ಮ ಬೋಧನಮಾರ್ಗವನ್ನು ರೂಪಿಸಿಕೊಳ್ಳಬೇಕು. ನಿಯಮಗಳೆಂಬ ದೃಷ್ಟಿಯಿಂದ ಕಣ್ಮುಚ್ಚಿಕೊಂಡು ಅವನ್ನು ಅನುಸರಿಸಿದಾಗ ಆಗುವ ಫಲದಂತೆ ಅನರ್ಥವೂ ಸಂಭವಿಸಬಹುದು ಎಂಬಂಶವನ್ನು ನಿರಂತರವೂ ಗಮನದಲ್ಲಿಡಬೇಕು.

# ೧೧. ಬೋಧನಕ್ರಮ

ಬೋಧನೆಯ ಮತ್ತು ಕಲಿವಿನ ಸ್ವರೂಪವನ್ನೂ ಅವುಗಳಿಗೆ ಸಂಬಂಧಿಸಿದ ನಿಯಮಗಳನ್ನೂ ಪರಿಚಯ ಮಾಡಿಕೊಂಡಿರುತ್ತೇವೆ. ಅವುಗಳ ಆಧಾರದಮೇಲೆ ಉಪಾಧ್ಯಾಯರು ತಮ್ಮ ಬೋಧನಕ್ರಮವನ್ನು ರೂಪಿಸಿಕೊಳ್ಳಬೇಕು ; ಸ್ವಭಾವತಃ ಚತುರರಾಗಿದ್ದರೂ ಈ ನಿಯಮಗಳನ್ನು ಅನುಸರಿಸುವುದರಿಂದ ಅವರ ಬೋಧನೆ ಶಾಸ್ತ್ರೀಯವೂ ಯಶಸ್ವಿಯೂ ಆಗಬಲ್ಲದು. ಉತ್ತಮ ಪಠ್ಯವಸ್ತುವಿದ್ದರೂ ಉಚಿತವಾದ ಬೋಧನಕ್ರಮವನ್ನು ಅನುಸರಿಸದಿದ್ದರೆ ಪಠ್ಯವಸ್ತು ನಿರ್ಮಾಪಕರು ಉದ್ದೇಶಿಸಿದ ಆಶಯಗಳು ಈಡೇರುವುದು ಕಷ್ಟ. ಹಾಗೆ ಯಶಸ್ವಿಯಾಗಿ ಶಿಕ್ಷಣವೀಯಬಲ್ಲ ಉಚಿತವಾದ ಬೋಧನಕ್ರಮವನ್ನು ಪರಿಚಯ ಮಾಡಿಕೊಳ್ಳುವುದು ಎಲ್ಲ ಉಪಾಧ್ಯಾಯರಿಗೂ ಆವಶ್ಯಕವಾಗಿದೆ.

ತರಗತಿಗೆ ನಿಯಮಿತವಾಗಿರುವ ಪಠ್ಯವಸ್ತುವನ್ನು ತಿಂಗಳುವಾರು ಹಂಚಿಕೊಂಡು, ಅದರಲ್ಲಿ ಒಂದೊಂದು ಪಾಠಕ್ಕೂ ಆಗುವಷ್ಟನ್ನು ಆರಿಸಿಕೊಂಡು ಪಾಠಮಾಡುವುದು ಸಂಪ್ರದಾಯವಾಗಿ ಬಂದಿದೆ. ಬೋಧನೆಗೆ ಅನುಕೂಲಿಸುವಂತೆ ಒಂದೊಂದು ಪಾಠದ ವಸ್ತುವನ್ನು ಹಲವು ವಿಭಾಗ ಬೋಧನೆಯಗಳಾಗಿ ವಿಂಗಡಿಸಿಕೊಳ್ಳುವುದು ಆವಶ್ಯಕ. ಕಲಿವಿನ ಮತ್ತು ಬೋಧನೆಯ ನಿಯಮಗಳನ್ನು ಅನುಸರಿಸಿ ಪಾಠವನ್ನು ಐದು ಘಟ್ಟಗಳಾಗಿ ವಿಭಾಗಿಸಿರುವರು. ಪೀಠಿಕೆ, ವಿಷಯ ಪ್ರದರ್ಶನ, ಹೋಲಿಕೆ, ನಿಯಮ ನಿರೂಪಣೆ ಮತ್ತು ಪ್ರಯೋಗ—ಇವುಗಳೇ ಆ ಐದು ಸೋಪಾನಗಳು.

ಸಾಮಾನ್ಯವಾಗಿ ಮೇಲೆ ಹೇಳಿದ ಕ್ರಮದಲ್ಲಿ ಪಾಠಮಾಡಬೇಕೆಂದು ಹೇಳಿದರೂ ಎಲ್ಲ ಪಾಠಗಳೂ ಆ ರೀತಿಯಲ್ಲೇ ಬೋಧಿಸುವಂತಿರದಿರಬಹುದು. ವಿಜ್ಞಾನದ ಒಂದೊಂದು ಶಾಖೆಯ ಸಂಶೋಧನೆಗೂ ಒಂದೊಂದು ವಿಶಿಷ್ಟ ಮಾರ್ಗವಿದೆ; ಒಂದರ ಸಂಶೋಧನಮಾರ್ಗ ಇನ್ನೊಂದಕ್ಕೆ ಪೂರ್ಣವಾಗಿ ಒಪ್ಪದಿರಬಹುದು. ಆದರೂ ಎಲ್ಲ ಸಂಶೋಧನೆಗಳಿಗೂ ಸಾಮಾನ್ಯವೆನ್ನುವಂತೆ ಸ್ಥೂಲವಾದ ಒಂದು ಮಾರ್ಗ ಇದ್ದೇ ಇದೆ. ಯಾವ ಶಾಖೆಯ

ಸಂಶೋಧನೆಯಾದರೂ ಆ ಮಾರ್ಗದಲ್ಲೇ ಸಾಗಬೇಕು. ಹಾಗೆಯೇ ಮೇಲೆ ವಿವರಿಸಿದ ಪಂಚ ಸೋಪಾನಗಳು ಎಲ್ಲ ರೀತಿಯ ಪಾಠಬೋಧನೆಗೂ ಸಾಮಾನ್ಯ ಕ್ರಮ. ಕೆಲವು ಪಾಠಗಳಲ್ಲಿ ಎಲ್ಲ ಸೋಪಾನಗಳನ್ನೂ ಅನುಸರಿಸುವ ಅವಶ್ಯಕತೆಯಿದ್ದರೆ, ಇನ್ನು ಕೆಲವು ಪಾಠಗಳಲ್ಲಿ ಹಲವು ಸೋಪಾನಗಳು ಅನಾವಶ್ಯಕವೆನಿಸಬಹುದು. ಆದರೂ ಮೇಲೆ ಉಲ್ಲೇಖಿಸಿದ ಕ್ರಮದಲ್ಲಿ ಮಾತ್ರ ಬೋಧನಕಾರ್ಯವನ್ನು ಮಾಡಬೇಕಾಗುತ್ತದೆ. ಆಯಾ ಪಾಠಗಳ ಆವಶ್ಯಕತೆಗೆ ಅನುಸಾರವಾಗಿ ಅದನ್ನು ಅನ್ವಯಿಸಿಕೊಳ್ಳುವುದು ಉಪಾಧ್ಯಾಯರ ಕೌಶಲ್ಯವನ್ನೇ ಅನುಸರಿಸಿದೆ.

ಹಿಂದೆ ವಿವರಿಸಿರುವಂತೆ ದಂಡಪ್ರಯೋಗದಿಂದ ಹೃದ್ಗತಮಾಡಿಸಿ ಮಕ್ಕಳಿಂದ ಪಾಠವನ್ನು ಹೇಳಿಸುವುದೇ ಬಹುಕಾಲ ಶಿಕ್ಷಣರಂಗದಲ್ಲಿ ಪ್ರಧಾನವಾಗಿದ್ದ ಬೋಧನಕ್ರಮ. 'ಆಗ ಇಲ್ಲಿಂದ ಇಲ್ಲಿಯವರೆಗೆ' ಎಂದು ತೋರಿಸಿಬಿಡುವುದೊಂದೇ ಅವರ ಕೆಲಸವಾಗಿತ್ತು. ಆ ಭಾಗವನ್ನು ಅರ್ಥವನ್ನನುಸರಿಸಿಯೋ, ಮಕ್ಕಳು ಕಲಿಯುವ ರೀತಿಯನ್ನನುಸರಿಸಿಯೋ ವಿಭಾಗಮಾಡಿಯೂ ಕೊಡುವಂತಿರಲಿಲ್ಲ. ಆದ್ದರಿಂದ ಅಂಥ ಬೋಧನೆಯಿಂದ ಮಕ್ಕಳ ಆಲೋಚನೆ, ವಿವೇಚನೆ, ತೀರ್ಮಾನ ಮುಂತಾದ ಮನಶ್ಶಕ್ತಿಗಳು ವಿಕಸಿಸಲು ಅವಕಾಶವಾಗುತ್ತಿರಲಿಲ್ಲ. ೧೮ನೆಯ ಶತಮಾನದಲ್ಲಿ ಜರ್ಮನ್ ವಿಶ್ವವಿದ್ಯಾನಿಲಯದ ತರ್ಕಶಾಸ್ತ್ರ ಪಂಡಿತನಾಗಿದ್ದ ಹರ್ಬಾರ್ಟ್ ಎಂಬುವನು ಪಾಠಬೋಧನೆಯಲ್ಲಿ ಒಂದು ನಿರ್ದಿಷ್ಟ ಕ್ರಮವನ್ನು ಅನುಸರಿಸಬೇಕೆಂದರಿತುಕೊಂಡು ಮೇಲಿನ ಸೋಪಾನಗಳನ್ನು ಪ್ರಚಾರಮಾಡಿದನು. ಅವನ ಅನುಯಾಯಿಗಳು ಬೇರೆ ಬೇರೆ ಪಾಠಗಳಿಗೆ ಹೇಗೆ ಆ ಕ್ರಮ ಅನ್ವಯವಾಗಬೇಕೆಂಬುದನ್ನು ತೋರಿಸಿ ಶಾಲೆಗಳಲ್ಲಿ ಬಳಕೆಗೆ ತಂದರು. ಈಗ ಶಿಕ್ಷಣರಂಗದಲ್ಲಿ ಅತ್ಯಂತ ಪ್ರಧಾನವಾಗಿರುವ ಬೋಧನಕ್ರಮವೆಂದರೆ ಹರ್ಬಾರ್ಟನ ಈ ಪಂಚ ಸೋಪಾನಗಳ ಬೋಧನಕ್ರಮವೇ. ಮೊದಲು ಸೆಕೆಂಡರಿ ಶಾಲೆಗಳ ಪಾಠಬೋಧನೆಗೆಂದು ಈ ಕ್ರಮ ಆರಂಭವಾದರೂ ಕ್ರಮ ಕ್ರಮವಾಗಿ ಇನ್ನೂ ಕೆಳದರ್ಜೆಯ ಶಿಕ್ಷಣರಂಗದಲ್ಲೂ ಪ್ರಚಾರಕ್ಕೆ ಬಂದುಬಿಟ್ಟಿದೆ. ಈ ಸೋಪಾನಗಳ ಅಂತರಾಳದಲ್ಲಿರುವ ಮನಶ್ಶಾಸ್ತ್ರ ತತ್ತ್ವದೃಷ್ಟಿಯನ್ನೂ, ಅವುಗಳ ಅನುಸರಣೆಯಿಂದ ಮಕ್ಕಳ ಮನಸ್ಸು ಹೇಗೆ

ಸುಸ್ಕರಣಗೊಳ್ಳುವುದೆಂಬ ಅಂಶವನ್ನೂ ಪರಿಶೀಲಿಸುವ ಮುನ್ನ ಆ ಐದು ಸೋಪಾನಗಳನ್ನೂ ಇಲ್ಲಿ ಕ್ರಮವಾಗಿ ವಿವರಿಸಲಾಗಿದೆ.

೧. **ಪೂರ್ವ ಸಿದ್ಧತೆ:** ಹರ್ಬಾರ್ಟನು ಮೊದಲು ರೂಪಿಸಿದಾಗ ಪೂರ್ವ ಸಿದ್ಧತೆಯೆಂಬ ಒಂದು ಸೋಪಾನವಿತ್ತು. ಅನಂತರ ಅವನ ಅನುಯಾಯಿಗಳು ಅದನ್ನೆರಡು ಉಪಸೋಪಾನಗಳನ್ನಾಗಿ ವಿಭಾಗಿಸಿದರು—ಗುರಿ ಮತ್ತು ಪೀಠಿಕೆ ಎಂದು. ಉಪಾಧ್ಯಾಯರು (ತಮಗಾಗಿ) ಆ ಪಾಠದ ಗುರಿಯನ್ನು ಪೂರ್ವಭಾವಿಯಾಗಿ ರೂಪಿಸಿಕೊಂಡಿರಬೇಕು. ಅದರಿಂದ ತಾವು ಸಾಧಿಸಬೇಕಾದ ಕಾರ್ಯ ಮುಂಚಿತವಾಗಿಯೇ ಅವರ ಮನಸ್ಸಿನಲ್ಲಿದ್ದು ಕಾರ್ಯಸಾಧನೆಗೆ ನಿರ್ದೇಶಿಕತ್ವವನ್ನು ನೀಡುವಂತಾಗುತ್ತದೆ. ಸಾಮಾನ್ಯವಾಗಿ ಎಲ್ಲ ಪಾಠಗಳಿಗೂ ಸಾಮಾನ್ಯ ಗುರಿಯೊಂದೂ ವಿಶೇಷ ಗುರಿಯೊಂದೂ ಇರುತ್ತವೆ. ಗದ್ಯ ಪಾಠವೊಂದನ್ನು ಮಾಡುವಾಗ ಆ ಪಾಠದ ವಸ್ತುವನ್ನು ಬಾಲಕರು ತಿಳಿಯುವಂತೆ ಸಹಾಯ ಮಾಡುವುದು ಒಂದು; ಮಕ್ಕಳ ಭಾಷಾಶಕ್ತಿಯನ್ನು ಹೆಚ್ಚಿಸಿಕೊಳ್ಳಲು ನೆರವಾಗುವುದು ಇನ್ನೊಂದು. ಹೀಗೆಯೇ ಇತರ ಪಾಠಗಳಿಗೂ. ಈ ಗುರಿಯಲ್ಲಿ ಮೊದಲನೆಯದನ್ನು ಮಕ್ಕಳ ಮುಂದೆಯೂ ಸ್ಪಷ್ಟಪಡಿಸಬೇಕು. ಅದರಿಂದ ಗಮನವಿಟ್ಟು ಪಾಠವನ್ನು ಕಲಿಯಲು ಅವರ ಅವಧಾನವನ್ನು ದೊರಕಿಸಿಕೊಂಡಂತಾಗುತ್ತದೆ. ಮೊದಲು ಮಕ್ಕಳ ಪೂರ್ವ ಜ್ಞಾನವನ್ನು ಪ್ರಚೋದಿಸಿ ಅದರ ಆಧಾರದ ಮೇಲೆ ಹೊಸ ಜ್ಞಾನವನ್ನು ಕಟ್ಟಲು ಪ್ರಯತ್ನಪಡಬೇಕು. ಇದನ್ನು ಪೀಠಿಕೆಯೆಂದು ಕರೆಯುತ್ತೇವೆ. ಹೊಸ ಪಾಠಕ್ಕೆ ಅನ್ವಯಿಸುವಂಥ ಮಕ್ಕಳ ಪರಿಚಿತ ಜ್ಞಾನವನ್ನು ಸ್ಮರಣೆಗೆ ತರಬೇಕು. ಈ ಪೀಠಿಕೆಯನ್ನು ಹಾಕುವಾಗ ಉಪಾಧ್ಯಾಯರ ಕೌಶಲ ಬಹುಮಟ್ಟಿಗೆ ಗೊತ್ತಾಗಿ ಹೋಗುತ್ತದೆ. 'ಒಳ್ಳೆಯ ಪೀಠಿಕೆಯಿಂದ ಅರ್ಧ ಪಾಠವೇ ಯಶಸ್ವಿಯಾದಂತೆ' ಎಂದು ಹಲವರು ಭಾವಿಸುವರು. ಎಂದರೆ ಪೀಠಿಕೆ ಯಶಸ್ವಿಯಾದರೆ ಪಾಠಕ್ಕೆ ತುಂಬ ನೆರವಾಗುತ್ತದೆ. ಹೊಸ ಪಾಠವೊಂದನ್ನು ಆರಂಭಿಸುವಾಗ ಆ ವಿಷಯಕ್ಕೆ ಸಂಬಂಧಿಸುವಂತೆ ಮಕ್ಕಳ ಪೂರ್ವ ಪರಿಚಯವನ್ನು ಪ್ರಶ್ನೆಗಳ ಮೂಲಕ, ವಿವರಣೆ, ಸಂಭಾಷಣೆಗಳ ಮೂಲಕ ಅವರ ಸ್ಮೃತಿಗೆ ಬರುವಂತೆ ಮಾಡಿದರೆ ಆ ಪಾಠಕ್ಕೆ ಅದೇ ಪೀಠಿಕೆಯಾಗುತ್ತದೆ. ಅದು ಮುಂದುವರಿದ

ಪಾಠವಾದರೆ ಹಿಂದಿನ ಪಾಠದಲ್ಲಿ ಮಾಡಿದ ವಿಷಯವನ್ನೇ ಪ್ರಶ್ನೆಗಳ ಮೂಲಕ ಪುನರಾವರ್ತನೆ ಮಾಡಿದರೆ ಅದೇ ಪೀಠಿಕೆಯಾಗುತ್ತದೆ. ಕೆಲವು ಸಂದರ್ಭಗಳಲ್ಲಿ ಆ ದಿನದ ಪಾಠವಸ್ತುವನ್ನೇ ಅವಲಂಬಿಸಿದಂತೆ ಸೂಕ್ಷ್ಮವಾಗಿ ಕೆಲವು ವಿವರಗಳನ್ನು ತೆಗೆದುಕೊಂಡು ಅದನ್ನೇ ಪೀಠಿಕೆಯಾಗಿಸಿಕೊಳ್ಳುವ ಅಭ್ಯಾಸವೂ ಉಂಟು.

ಕೆಲವರು ಪೀಠಿಕೆಗಾಗಿ ತುಂಬ ಕಾಲ ವ್ಯಯಮಾಡುವರು; ಮತ್ತೆ ಕೆಲವರು ಅತಿ ಶೀಘ್ರದಲ್ಲೇ ಮುಗಿಸಿಬಿಡುವರು; ಎರಡೂ ವೈಪರೀತ್ಯಗಳೇ. ಒಂದು ಪಾಠಕ್ಕೆ ಸಾಮಾನ್ಯವಾಗಿ ೮–೧೦ ನಿಮಿಷಗಳ ಪೀಠಿಕೆ ಉಚಿತವಾದ್ದು. ಯೋಜನೆಯಂತೆ ಪೀಠಿಕೆ ಮುಗಿಸುವುದೇ ಮುಖ್ಯವಲ್ಲ: ಬರುವ ಪಾಠಬೋಧನೆಗೆ ಮಕ್ಕಳು ಸಿದ್ಧರಾಗುವಂತೆ ಅದು ನಡೆಯಬೇಕು. ಹಲವು ಉಪಾಧ್ಯಾಯರು ಟಿಪ್ಪಣಿ ಹಾಕಿಕೊಳ್ಳುವಾಗ ತಾವು ಉದ್ದೇಶಿಸಿದ ರೀತಿಯಲ್ಲಿ ಪ್ರಶ್ನೆಗಳಿಗೆ ಉತ್ತರ ಬರದೆ ಸುತ್ತಿ ಸುತ್ತಿ ಕಾಲ ವ್ಯಯಮಾಡುವರ ; ಇನ್ನು ಕೆಲವರು ಅನಾವಶ್ಯಕವಾದ ವಿಷಯಗಳ ಮೇಲೆಲ್ಲ ಪ್ರಶ್ನೆ ಹಾಕಿಕೊಂಡು ಕೊನೆಗೆ ಉದ್ದೇಶಿಸಿದ ವಿಷಯಕ್ಕೆ ಬರುವರು; ಮತ್ತೆ ಕೆಲವರು ಪೀಠಿಕೆಯ ಸೋಪಾನವನ್ನು ಅನುಗೊಳಿಸಲು ಬಹು ಕೃತಕವಾದ ಪೀಠಿಕೆ ಹಾಕಲು ಯತ್ನಿಸುವರು. ಇವುಗಳಿಂದ ನಿಜವಾದ ಪೂರ್ವ ಸಿದ್ಧತೆ ಆದಂತಾಗದು. ನಿಜವಾದ ಪೀಠಿಕೆ ಸ್ವಾಭಾವಿಕವಾಗಿಯೂ ಬಾಲಕರ ಪೂರ್ವಜ್ಞಾನವನ್ನು ಯಶಸ್ವಿಯಾಗಿ ಸ್ಮರಣೆಗೆ ತರುವಂತೆಯೂ ಇರಬೇಕು. ಕೃತಕವಾಗಿ ಪೀಠಿಕೆ ಹಾಕುವುದರಿಂದ ನಿಜವಾದ ಉದ್ದೇಶ ಸಾಧನೆ ಆಗಲಾರದು.

ಪೀಠಿಕೆ ಮುಗಿದೊಡನೆಯೇ ಆ ದಿನ ಕಲಿಯಬೇಕಾದ ವಿಷಯವಾವುದೆಂಬುದನ್ನು ಮಕ್ಕಳ ಮುಂದಿಡಬೇಕು. ಹಿಂದಿನ ಜ್ಞಾನದ ಸ್ಮರಣೆಯಾದೊಡನೆಯೇ ಅಂದು ಸಾಧಿಸಬೇಕೆಂದಿರುವ ಗುರಿಯನ್ನು ಅವರ ಮುಂದೆ ಇಡುವುದರಿಂದ ಕಲಿಯಬೇಕಾದ ಪಾಠಕ್ಕೆ ಅವರ ಅವಧಾನವನ್ನು ಕೇಂದ್ರೀಕರಿಸಿದಂತಾಗುತ್ತದೆ. ಆಸಕ್ತಿಯಿಂದ ವಿಷಯ ತಿಳಿಯಲು ಅವರು ಕಾತರಿಸುತ್ತಿರುತ್ತಾರೆ. ವಿಷಯ ಬೋಧನೆಗೆ ಅವು ಉಚಿತವಾದ ಸನ್ನಿವೇಶಗಳು. ಈ ಗುರಿಯನ್ನು ಆದಷ್ಟು ಸುಲಭ ರೂಪದಲ್ಲಿ ಅವರ ಮುಂದಿಡಬೇಕು. ಅವರಿಗೆ ಕಲಿಯಬೇಕಾದ ವಿಷಯದಲ್ಲಿ ನಿರ್ದಿಷ್ಟವಾದ ಸಂಕಲ್ಪ ಮೂಡುವಂತಾಗಬೇಕು.

**೨. ಪ್ರದರ್ಶನ—ಸ್ಫುಟೀಕರಣ:** ಪೀಠಿಕೆ ಮತ್ತು ಗುರಿಗಳನ್ನೊಳಗೊಂಡ ಪೂರ್ವ ಸಿದ್ಧತೆ ಮುಗಿದೊಡನೆಯೇ ಉಪಾಧ್ಯಾಯರು ಕಾಲಹರಣಮಾಡದೆ ಪಾಠದ ವಿಷಯವನ್ನು ಮಕ್ಕಳ ಮುಂದಿಡಬೇಕು. ನಿಧಾನ ಮಾಡುವುದರಿಂದ ಅದುತನಕ ಅವರ ಮನಸ್ಸನ್ನು ಹೊಸ ಪಾಠಕ್ಕೆ ಸಿದ್ಧಪಡಿಸಿ, ಅವಧಾನವನ್ನು ಸೆಳೆದು ಆಸಕ್ತಿ ಹುಟ್ಟುವಂತೆ ಮಾಡಿದ್ದೆಲ್ಲ ವ್ಯರ್ಥವಾದೀತು! ಒಂದು ಪದ್ಯಪಾಠ ಮಾಡಬೇಕಾಗಿದೆಯೆಂದಿಟ್ಟುಕೊಳ್ಳುವ: ಆ ದಿನ ಬೋಧಿಸಬೇಕೆಂದಿರುವ ಇಡೀ ಭಾಗವನ್ನೇ ಮಕ್ಕಳ ಮುಂದೆ ತರಬೇಕು. ಇದರಿಂದ ಮಕ್ಕಳಿಗೆ ಬೋಧಿಸತಕ್ಕ ಪ್ರಥಮ ಪರಿಚಯವಾಗುತ್ತದೆ; ಸ್ಫುಟವಾಗಿ, ತಪ್ಪಿಲ್ಲದೆ, ಭಾವನೆಗಳು ಪ್ರಕಾಶಗೊಳ್ಳುವಂತೆ ಓದುವುದನ್ನೂ ಮಾದರಿಯಾಗಿ ತೋರಿಸಿದಂತಾಗುತ್ತದೆ. ಗದ್ಯ ಪಾಠದಲ್ಲೂ ಅಷ್ಟೆ. ಇನ್ನಿತರ ಪಾಠಗಳಲ್ಲಿ ಆ ದಿನ ಅರಿಯಬೇಕಾದ ವಿಷಯವನ್ನೋ, ಬಿಡಿಸಬೇಕಾದ ಸಮಸ್ಯೆಯನ್ನೋ ಪೂರ್ಣವಾಗಿ ಮಕ್ಕಳ ಮುಂದಿಡಬೇಕು. ಯಾವ ವಿಷಯವನ್ನೇ ಆಗಲಿ ಅರ್ಥವನ್ನು ಅನುಸರಿಸಿ ಹಲವು ಉಪಭಾಗಗಳನ್ನಾಗಿ ವಿಂಗಡಿಸಿಕೊಳ್ಳಬಹುದು. ಆ ಒಂದೊಂದು ಭಾಗವನ್ನೂ ಕ್ರಮವಾಗಿ ಮಕ್ಕಳ ಮುಂದಿಟ್ಟು, ಪ್ರಶ್ನೋತ್ತರಗಳ ಮೂಲಕ, ಸಲಹೆ ಮತ್ತು ವಿವರಣೆಗಳ ಮೂಲಕ ಅವರು ಆ ವಿಷಯವನ್ನು ಅರಿತುಕೊಳ್ಳುವಂತೆ ಸ್ಫುಟಗೊಳಿಸಬೇಕು. ಆ ಕಾರ್ಯಕ್ಕೆ ಅವಶ್ಯಕವೆನಿಸುವ ಪಾಠೋಪಕರಣಗಳನ್ನೂ ಅನುಗೊಳಿಸಿ ಉಪಯೋಗಿಸಿಕೊಳ್ಳಬೇಕು. ಉಚಿತವೆನಿಸುವ ಪ್ರಯೋಗಗಳನ್ನು ಮಾಡಿತೋರಿಸಬೇಕು. ಚಿತ್ರಗಳ ಮೂಲಕ, ನಿದರ್ಶನಗಳ ಮೂಲಕ ವಿಷಯ ಚೆನ್ನಾಗಿ ತಿಳಿಯುವಂತೆಯೂ ಯತ್ನಿಸಬೇಕು. ಆ ಭಾಗ ಮುಗಿದೊಡನೆ ಒಂದೆರಡು ಪ್ರಶ್ನೆಗಳ ಮೂಲಕ ಮಕ್ಕಳು ಅರಿತುಕೊಂಡ ವಿಷಯವನ್ನು ಹೇಳಿಸಿ ಅದನ್ನೇ ಕಪ್ಪುಹಲಗೆಯ ಒಂದು ಕಡೆ ಸಾರಾಂಶವನ್ನಾಗಿ ಬರೆಯಬೇಕು. ಅನಂತರ ಆ ಭಾಗವನ್ನು ಮುಂದಿನ ಭಾಗಕ್ಕೆ ಹೊಂದಿಸಿಕೊಳ್ಳುವಂತೆ ಸಣ್ಣದೊಂದು ಉಪಪೀಠಿಕೆ ಹಾಕಿಕೊಂಡು ಮುಂದಿನ ಭಾಗವನ್ನೂ ಮೇಲೆ ವಿವರಿಸಿದಂತೆಯೇ ಮಕ್ಕಳ ಮುಂದಿಟ್ಟು ಸ್ಫುಟೀಕರಿಸಬೇಕು. ಇಡೀ ಪಾಠವನ್ನು ಹೀಗೆ ವಿಭಾಗಮಾಡಿರುವುದು ಮಕ್ಕಳಿಗೆ ಕಲಿಸಲು ಅನುಕೂಲವಾಗಲೆಂಬ ಉದ್ದೇಶದಿಂದ ಮಾತ್ರ. ಅದು

ನಿಜವಾಗಿಯೂ ಒಂದೇ ವಿಷಯ. ಆದ್ದರಿಂದ ಎಲ್ಲ ಭಾಗಗಳೂ ಮುಗಿದ ಮೇಲೆ ಅವರಿಗೆ ಇಡೀ ಪಾಠದ ಸಮಗ್ರ ಪರಿಚಯವಾಗಬೇಕು. ಅವಕ್ಕಾಗಿಯೇ ಹಾಗೆ ವಿಭಾಗ ಮಾಡಿಕೊಂಡಿರುವ ಒಂದೊಂದು ಭಾಗ ಮುಗಿದೊಡನೆಯೇ ಇನ್ನೊಂದು ಭಾಗ ಆರಂಭಿಸುವಾಗ್ಗೆ ಎರಡನ್ನೂ ಕೂಡಿಸುವಂಥ ಸಣ್ಣ ಟಿಪ್ಪಣಿಯ ಆವಶ್ಯಕತೆಯನ್ನು ಮೇಲೆ ಒತ್ತಿ ಹೇಳಿರುವುದು. ಎಲ್ಲ ಭಾಗಗಳೂ ಮುಗಿದ ಮೇಲೆಯೂ ಸಮಗ್ರ ಪಾಠಕ್ಕೆ ಸಂಬಂಧಿಸಿದಂತೆ ಹಲವು ಪ್ರಶ್ನೆಗಳನ್ನು ಹಾಕಿ ಮಕ್ಕಳಿಗೆ ಆ ದಿನದ ವಿಷಯದ ಅನ್ಯೋನ್ಯ ಸಂಬಂಧವೂ ಒಟ್ಟು ಪರಿಜ್ಞಾನವೂ ಬರುವಂತೆ ಮಾಡಬೇಕು.

ಒಂದಂಶವನ್ನಿಲ್ಲಿ ಉಪಾಧ್ಯಾಯರು ನೆನಪಿನಲ್ಲಿಡಬೇಕು. ಪಾಠದ ವಿಷಯವನ್ನೋ, ಲೆಕ್ಕವನ್ನೋ, ಇನ್ನಿತರ ಸಮಸ್ಯೆಗಳನ್ನೋ ಉಪಾಧ್ಯಾಯರೇ ಅತ್ಯುತ್ಸಾಹದಿಂದ ಹೇಳುವುದೂ, ಮಾಡುವುದೂ, ಬಿಡಿಸಿ ಕೊಡುವುದೂ ಉಚಿತವಲ್ಲ. ಅದರಿಂದ ಮಕ್ಕಳು ಮೌನವಾಗಿ ಕುಳಿತು ಬಿಡುವರು; ಪಾಠದಲ್ಲಿ ಉತ್ಸಾಹವಿಲ್ಲದವರಾಗಿ ನಿರಾಸಕ್ತಿಯಿಂದಿದ್ದು ಬಿಡುವರು. ಅವರು ಕಾರ್ಯಪ್ರವರ್ತರಾಗಿ ಚಟುವಟಿಕೆಯಿಂದಿದ್ದರೆ ಮಾತ್ರ ಪಾಠವನ್ನು ಸ್ವಪ್ರಯತ್ನದಿಂದ ಕಲಿಯಲು ಅವಕಾಶವಾದೀತು. ಆದ್ದರಿಂದ ಉಚಿತವೆನಿಸುವ ಪ್ರಶ್ನೆಗಳ ಮೂಲಕ ಉಪಾಧ್ಯಾಯರು ಪಾಠವನ್ನು ಸ್ಫುಟಗೊಳಿಸಲು ಯತ್ನಿಸಬೇಕು. ಆಗ ಮಕ್ಕಳು ಆಲೋಚನೆ ಮಾಡಲು ಅವಕಾಶಕೊಟ್ಟಂತಾಗಿ ವಿಷಯದ ಕಾರ್ಯಕಾರಣ ಸಂಬಂಧವನ್ನೋ, ಲೆಕ್ಕ ಮಾಡುವ ರೀತಿಯನ್ನೋ, ಸಮಸ್ಯೆಯನ್ನು ಬಿಡಿಸುವ ಕ್ರಮವನ್ನೋ ಚೆನ್ನಾಗಿ ಅರಿತುಕೊಂಡಾರು. ಅವರಿಗೆ ಅರಿವಾಗದ ವಿಷಯಗಳನ್ನು ಉಪಾಧ್ಯಾಯರು ಹೇಳಬೇಕು; ಆಲೋಚಿಸಿ ವಿಷಯ ತಿಳಿಯುವಂತಿದ್ದರೆ ಪ್ರಶ್ನೆಗಳನ್ನು ಹಾಕಬೇಕು. ಅನಿವಾರ್ಯವೆನಿಸಿದಾಗ ಅವರ ಜ್ಞಾನ ಸ್ಫುಟಗೊಳ್ಳುವಂತೆ, ಆಲೋಚನೆಗೆ ಎಡೆಗೊಡುವಂತೆ ಸಲಹೆಗಳನ್ನೂ ನೀಡಬೇಕು. ಒಟ್ಟಿನಲ್ಲಿ ಮಕ್ಕಳ ಸ್ವಪ್ರಯತ್ನದಿಂದ, ಅವರ ಆಲೋಚನೆಯಿಂದ, ಚಟುವಟಿಕೆಯಿಂದ ವಿಷಯ ಸ್ಫುಟಗೊಳ್ಳುವಂತೆ ಉಪಾಧ್ಯಾಯರು ಉಚಿತ ಸನ್ನಿವೇಶಗಳನ್ನು ರಚಿಸಬೇಕು. ಅಂದು ಮಾತ್ರ ಕಲಿತಿದ್ದು ಯಶಸ್ವಿಯಾದೀತು; ಬಹುಕಾಲ ನಿಂತೀತು; ಅವರ ಮುಂದಿನ ಜೀವನದಲ್ಲೂ

ಪ್ರಯೋಜನವಾದೀತು. ಅಂಥ ಸನ್ನಿವೇಶಗಳನ್ನು ಉಪಾಧ್ಯಾಯರು ಹುಡುಗರ ಮುಂದಿರುವಾಗ ಆಲೋಚಿಸಿ ನಿರ್ಮಿಸಿಕೊಳ್ಳುವುದು ಸಾಧ್ಯವಾಗ ಲಾರದು. ಅದಕ್ಕಾಗಿ ಮನೆಯಲ್ಲಿ ಸಿದ್ಧರಾಗಿ ಬರಬೇಕು. ಉಚಿತವಾದ ಟಿಪ್ಪಣಿ, ಅದನ್ನು ಯಶಸ್ವಿಯಾಗಿಸಲು ಆವಶ್ಯಕವಾದ ಪ್ರಶ್ನೆಗಳು ಪಾಠದ ಬೇರೆ ಬೇರೆ ಭಾಗಗಳನ್ನು ಸ್ಫುಟಗೊಳಿಸಲು ಹಾಕಬೇಕಾದ ಪ್ರಶ್ನೆಗಳು, ನಿದರ್ಶನ ಮತ್ತು ಪ್ರಯೋಗಗಳು—ಇವೆಲ್ಲಕ್ಕೂ ಪೂರ್ವ ಸಿದ್ಧತೆ ಬೇಕು. ಆ ಪೂರ್ವ ಸಿದ್ಧತೆಯನ್ನು ಮುಂದೆ ಪ್ರತ್ಯೇಕ ಅಧ್ಯಾಯವೊಂದರಲ್ಲಿ ವಿವೇಚಿಸ ಲಾಗಿದೆ. ಅಲ್ಲಿ ವಿವರಿಸಿರುವಂತೆ ಈ ಸೋಪಾನದಲ್ಲಿ ಪಾಠವನ್ನು ಸ್ಫುಟ ಗೊಳಿಸಲು ಉಚಿತ ರೀತಿಯ ಪ್ರಶ್ನೆಗಳನ್ನು ಎಚ್ಚರಿಕೆಯಿಂದ ಹಾಕಬೇಕು. ಅನುಚಿತವಾದ ಪ್ರಶ್ನೆಗಳಿಂದ ಪಾಠಬೋಧನೆ ಅನೇಕ ವೇಳೆ ಯಶಸ್ವಿ ಯಾಗದೆ ಮಕ್ಕಳು ಚೆನ್ನಾಗಿ ಕಲಿಯಲಾರರು. ಅದರಿಂದಲೇ ಪ್ರಶ್ನೆ ಹಾಕು ವುದೇ ಒಂದು ಕಲೆಯೆಂದೂ, ಉಪಾಧ್ಯಾಯರ ಕೌಶಲ್ಯವನ್ನು ಅವರ ಪ್ರಶ್ನೆ ಗಳೇ ತೋರಿಸಬಲ್ಲವೆಂದೂ ಹಲವರು ಹೇಳುವರು. ಹಾಗೆಯೇ ನಿದರ್ಶನ ಗಳನ್ನೂ ಪ್ರಯೋಗಗಳನ್ನೂ ಇನ್ನಿತರ ಪಾಠೋಪಕರಣಗಳನ್ನೂ ಔಚಿತ್ಯ ವರಿತು ಎಚ್ಚರಿಕೆಯಿಂದಲೂ ಪರಿಣಾಮಕಾರಿಯಾಗುವಂತೆಯೂ ಉಪ ಯೋಗಿಸಿಕೊಳ್ಳಬೇಕು. ವಿಜ್ಞಾನ, ವ್ಯಾಕರಣ, ಭೂವಿವರಣೆ ಮುಂತಾದ ಪಾಠಗಳಲ್ಲಿ ಅನೇಕ ಭಿನ್ನ ಅಂಶಗಳನ್ನು ಮಕ್ಕಳು ಅರಿತುಕೊಳ್ಳಬೇಕಾಗು ತ್ತದೆ; ಪದಾರ್ಥಗಳನ್ನು ಪರಿಶೀಲಿಸಿ ತಿಳಿದುಕೊಳ್ಳಬೇಕಾಗುತ್ತದೆ. ಅನೇಕ ವೇಳೆ ಉಪಾಧ್ಯಾಯರೂ ಹೊಸ ಅಂಶಗಳನ್ನು ಅವರ ಗಮನಕ್ಕೆ ತರ ಬೇಕಾಗುತ್ತದೆ. ಆಗ ಆ ಅಂಶಗಳಿಗೆ ಇರುವ ಸಂಬಂಧವನ್ನು ಅರಿಯುವಂತೆ ಉಪಾಧ್ಯಾಯರು ಮಕ್ಕಳಿಗೆ ನೆರವಾಗಬೇಕು. ಒಂದೊಂದು ಭಾಗವೂ ಮುಗಿದಂತೆ ಆ ಭಾಗಕ್ಕೆ ಸಂಬಂಧಿಸಿದ ಸಾರಾಂಶವನ್ನು ಕಪ್ಪು ಹಲಗೆಯ ಮೇಲೆ ಪ್ರಶ್ನೆಗಳ ಮೂಲಕ ಹೇಳಿಸಿ ಬರೆದುಕೊಂಡು ಮುಂದುವರಿಯ ಬೇಕು. ಪಾಠ ಮುಗಿದಮೇಲೆ ಎಲ್ಲವನ್ನೂ ಬರೆಯೋಣವೆಂದು ಮುಂದು ಹಾಕಬಾರದು. ಕಠಿಣ ಪದಗಳನ್ನೂ, ಪದಕುಂಜಗಳನ್ನೂ, ಕಂಠಪಾಠ ಮಾಡಿಸಬೇಕಾದ ಸಾಹಿತ್ಯ ಭಾಗವನ್ನೂ ಹಲಗೆಯ ಇನ್ನೊಂದು ಭಾಗದಲ್ಲಿ ಪ್ರಧಾನವಾಗಿ ಬರೆಯಬೇಕು. ಅನೇಕರು ತಪ್ಪುಮಾಡುವ ಪದಗಳನ್ನೂ

(ಸರಿಯಾಗಿ) ಅಲ್ಲಿ ಬರೆದಿರಬೇಕು. ಆ ಮೂಲಕ ಅವನ್ನು ತರಗತಿಯೇ ಗಮನಿಸಿ ಸರಿಯಾಗಿ ಕಲಿಯಲು ಅವಕಾಶವಾಗುತ್ತದೆ. ಹಾಗೆಯೇ ಆವಶ್ಯಕ ವಾದ ಚಿತ್ರಗಳನ್ನೂ ಬರೆಯಬೇಕು. ಹಾಗೆ ಬರೆಯುವಾಗ, ಚಿತ್ರ ಮುಂದು ವರಿದಂತೆ ಅದನ್ನು ವಿವರಿಸಿಕೊಂಡು ಬರೆಯಬೇಕು. ಆಗ ಮಕ್ಕಳು ಸುಲಭವಾಗಿ ಚಿತ್ರವನ್ನು ಅರ್ಥಮಾಡಿಕೊಳ್ಳಲೂ ಬರೆದುಕೊಳ್ಳಲೂ ಸರಾಗ ವಾಗುತ್ತದೆ.

**೩. ಸಂಬಂಧ ಕಲ್ಪನೆ:** ಪಾಠಬೋಧನೆಯ ಮೇಲಿನ ಸೋಪಾನ ದಲ್ಲಿ ವಿಷಯಕ್ಕೆ ಸಂಬಂಧಿಸಿದ ಅನೇಕ ಅಂಶಗಳನ್ನು ಪ್ರದರ್ಶಿಸಿದಮೇಲೆ ಆ ಅಂಶಗಳಿಗಿರುವ ಸಂಬಂಧವನ್ನು ತೋರಿಸಿ ಅವುಗಳೆಲ್ಲಕ್ಕೂ ಆಧಾರ ಭೂತವೆನಿಸುವ ಒಂದು ತತ್ವವನ್ನೋ ನಿಯಮವನ್ನೋ ಅರಿತುಕೊಳ್ಳುವಂತೆ ಮಾಡಲು, ಮಕ್ಕಳಿಗೆ ಆ ತತ್ವದರ್ಶನದ ಕಡೆ ಹೆಜ್ಜೆಯಿಡಲು ಅವಕಾಶ ಮಾಡಿಕೊಡಲು ಈ ಸೋಪಾನ ಅಗತ್ಯ. ಆದರೆ ಇದು ಎಲ್ಲ ವಿಷಯಗಳ ಎಲ್ಲ ಪಾಠಗಳಿಗೂ ಆವಶ್ಯಕವೆನಿಸುವಂತಿಲ್ಲ. ಅಂಥ ಪಾಠಬೋಧನೆಯಲ್ಲಿ ಈ ಸೋಪಾನವನ್ನು ಬಿಟ್ಟುಬಿಡಬಹುದು. ಚರಿತ್ರೆ, ವ್ಯಾಕರಣ, ಭೂಗೋಳ, ವಿಜ್ಞಾನದ ಕೆಲವು ಶಾಖೆಗಳು—ಈ ಪಾಠಗಳನ್ನು ಮಾಡುವಾಗ ವಿಷಯ ಪ್ರಧಾನವಾಗಿದ್ದು, ಆ ಅಂಶಗಳಲ್ಲಿ ಹೋಲಿಕೆ ಸ್ಪಷ್ಟವಾಗಿ ಕಂಡುಬರುತ್ತದೆ. ಬೋಧನೆಯಿಂದ ಸ್ಫುಟಗೊಂಡ ಅಂಶಗಳನ್ನು ಪರಿಶೀಲಿಸಿ ಅವುಗಳಿಗಿರುವ ಸಂಬಂಧವನ್ನು ವಿದ್ಯಾರ್ಥಿಗಳೇ ಕಲ್ಪಿಸಬೇಕು. ಉಪಾಧ್ಯಾಯರು ಹೇಳಿ ಬಿಡಬಾರದು. ಆದರೆ ಆ ಸಂಬಂಧ ದರ್ಶನಕ್ಕೆ ಉಚಿತವೆನಿಸುವ ಸಲಹೆ ಯನ್ನು ನೀಡಬಹುದು; ಪ್ರಶ್ನೆಗಳ ಮೂಲಕ ಆ ಮಾರ್ಗದಲ್ಲಿ ಅವರ ಗಮನ ಹರಿಯುವಂತೆ ಮಾಡಬಹುದು. ಆದರೆ ಅವರು ಅದುವರೆಗೆ ಕಲಿತ ಅಂಶಗಳನ್ನು ಹೋಲಿಸಿ ನೋಡುವುದು ಮಕ್ಕಳ ಕೆಲಸ. ಕಟುಬಲುಮೆ ಯಿಂದ ಉಪಾಧ್ಯಾಯರು ಅಲ್ಲಿನ ಅಂಶಗಳಿಗೆ ಇಲ್ಲದಿರುವ ಸಂಬಂಧವನ್ನು ಕಲ್ಪಿಸಲು ಯತ್ನಿಸಬಾರದು; ಸಂಬಂಧವಿದ್ದರೆ ಅದು ತಾನಾಗಿಯೇ ವಿದ್ಯಾರ್ಥಿ ಗಳಿಗೆ ಗೋಚರಿಸುವಂತಾಗುತ್ತದೆ. ಅಂಥ ಸಾಮ್ಯ ಕಲ್ಪನೆಯಿಂದ ಮಕ್ಕಳು ಅವುಗಳಿಗೆಲ್ಲ ಸಾಮಾನ್ಯವಾದ ಒಂದು ನಿಯಮವನ್ನು ಕಂಡುಕೊಳ್ಳಲು ಸಹಾಯವಾಗುವಂತೆ ಉಪಾಧ್ಯಾಯರು ಉಚಿತವರಿತು ಸಲಹೆ, ಜೋಡಣೆ ಮತ್ತು ವಿವರಣೆಗಳ ಮೂಲಕ ಪ್ರಯತ್ನಿಸಬೇಕು.

**೪. ಸಾಮಾನ್ಯ ನಿಯಮ ಅಥವಾ ತತ್ವದ ನಿರೂಪಣೆ:** ಮೇಲಿನ ಸೋಪಾನದಲ್ಲಿ ಪಾಠದ ಬೇರೆ ಬೇರೆ ಅಂಶಗಳಿಗಿರುವ ಸಂಬಂಧವನ್ನು ಕಂಡುಕೊಂಡಮೇಲೆ ಮಕ್ಕಳು ಕ್ರಮಕ್ರಮವಾಗಿ ನಿಯಮಗಳನ್ನೊ, ತತ್ವಗಳನ್ನೊ ರೂಪಿಸುವಂತೆ ಸಹಾಯಮಾಡಬೇಕು. ಆದರೆ ಉಪಾಧ್ಯಾಯರು ಅವನ್ನು ತಿಳಿಸಿಬಿಡಬಾರದು. ಹಲವು ಬಾಲಕರು ಮನೆಯಲ್ಲಿ ಅವನ್ನು ಓದಿಕೊಂಡುಬಂದಿದ್ದರೆ ಅದನ್ನೇ ಹೇಳಿಸಿಬಿಡಲೂ ಅವಕಾಶಮಾಡಿಕೊಳ್ಳಬಾರದು. ಅದುತನಕ ಅಭ್ಯಾಸಿಸಿದ ಅಂಶಗಳ ಹೋಲಿಕೆಯಿಂದ ತತ್ವನಿಯಮಗಳು ತಾವಾಗಿಯೇ ಮಕ್ಕಳ ಮನಸ್ಸಿನಲ್ಲಿ ಉದಯವಾಗಬೇಕು. ಅತಿ ಆತುರದಿಂದ ಆ ನಿಯಮಗಳನ್ನು ರೂಪಿಸಲು ಮಕ್ಕಳು ಪ್ರಯತ್ನಿಸುತ್ತಾರೆ. ಅದಕ್ಕೆ ಅವಕಾಶಕೊಡದೆ ಮುಂದಿರುವ ಎಲ್ಲ ಅಂಶಗಳ ಪರಿಶೀಲನೆಯಿಂದ, ನಿರ್ದಿಷ್ಟವಾಗಿ ಅರಿಯುವಂತೆ ಮಾಡಬೇಕು. ಮೊದಲು ಆ ನಿಯಮವನ್ನು ಶುದ್ಧ ರೂಪದಲ್ಲಾಗಲಿ, ಸರಿಯಾದ ವಾಕ್ಯಗಳಲ್ಲಾಗಲಿ ಅವರು ಹೇಳದಿರಬಹುದು. ಒಮ್ಮೆ ಆ ನಿಯಮವನ್ನು ಅವರು ದರ್ಶಿಸಿದರೆಂದರೆ ಅವರು ಒರಟೊರಟಾಗಿ ಅವನ್ನು ರೂಪಿಸಬಹುದು. ಅದರ ಪರಿಚಯ ಅವರಿಗೆ ಆಗಿದೆಯೆಂದು ಅರಿತಾಗ ಉಪಾಧ್ಯಾಯರು ಆ ನಿಯಮವನ್ನು ಸ್ಪಷ್ಟವಾಗಿ ತಿದ್ದಿ ತರಗತಿಯ ಮುಂದಿಡಬೇಕು. ಹೀಗೆ ಮಕ್ಕಳು ಪ್ರಯತ್ನಪೂರ್ವಕವಾಗಿ ನಿಯಮಗಳನ್ನೊ ತತ್ವಗಳನ್ನೊ ದರ್ಶಿಸುವಂತೆ ಮಾಡದೆ ಉಪಾಧ್ಯಾಯರು ಪುಸ್ತಕಗಳಲ್ಲಿ ಮುದ್ರಣವಾಗಿರುವ ಭಾಗವನ್ನು ಬರೆಸಿಬಿಟ್ಟರೆ ಗಿಳಿಗಳಂತೆ ಮಕ್ಕಳು ಅರ್ಥ ತಿಳಿಯದೆ ಅವನ್ನು ಕಂಠಪಾಠ ಮಾಡುತ್ತಾರೆ. ಆದರೆ ಅದರ ನಿರೂಪಣೆಯ ಜ್ಞಾನ ಅವರಿಗಾಗುವುದಿಲ್ಲ. ಹಾಗೆಯೇ ತಮ್ಮ ಮುಂದಿರುವ ವಿಷಯಗಳ ಸಂಬಂಧವನ್ನು ಅರಿತು, ಆ ಆಧಾರದಮೇಲೆ ನಿಯಮವನ್ನು ರೂಪಿಸದೆ ಯಾವ ರೀತಿಯಲ್ಲಾದರೂ ಬರಿಯ ಊಹೆಯಿಂದ ಹೇಳುವುದಕ್ಕೆ ಅವಕಾಶ ಕೊಡಬಾರದು. ಹಲವು ವೇಳೆ ಊಹಿಸುವುದೇನೋ ಆವಶ್ಯಕವೆನಿಸಿದರೂ ಆ ಊಹೆಗಳು ಸಂಬಂಧ ಕಲ್ಪನೆಯ ಅಂಕಿ ಅಂಶಗಳ ಆಧಾರದ ಮೇಲೇ ರೂಪುಗೊಳ್ಳಬೇಕೆಂದು ಮಕ್ಕಳಿಗೆ ತಿಳುವು ಹೇಳಬೇಕು. ನಿಯಮವನ್ನು ರೂಪಿಸಿದ ಮೇಲೆ ಅದು ಸರಿಯಾಗಿದೆಯೇ ಎಂಬ ಅನುಮಾನ ಮಕ್ಕಳಲ್ಲಿ ಇದ್ದೇ ಇರಬೇಕು. ಅವ

ಸರಿಯಾಗಿದೆಯೆಂಬುದು ಮುಂದಿನ ಸೋಪಾನದಲ್ಲಿ ದೃಢಪಟ್ಟಮೇಲೆಯೇ ಅದರಲ್ಲಿ ಅವರು ನಂಬಿಗೆಯಿಡುವಂತೆ ತಿಳಿಸಬೇಕು. ಕೆಲವು ಪಾಠಗಳಿಗೆ (ಸಾಹಿತ್ಯ, ಚರಿತ್ರೆ, ಪ್ರಜಾಧರ್ಮ, ಇತ್ಯಾದಿ) ಈ ಸೋಪಾನ ಅನಿವಾರ್ಯ ವಿರದಿರಬಹುದು. ಆಗ ಅದನ್ನು ಬಿಟ್ಟುಬಿಡಬಹುದು.

**೫. ಪ್ರಯೋಗ ಅಥವಾ ಸರಿನೋಡುವಿಕೆ :** ಯಾವ ಪಾಠಗಳಲ್ಲಿ ನಿಯಮವನ್ನೋ ತತ್ತ್ವವನ್ನೋ ರೂಪಿಸುವ ಅವಕಾಶವಿದೆಯೋ ಆ ಪಾಠಗಳಲ್ಲಿ ಈ ಸೋಪಾನ ಆ ನಿರೂಪಣೆ ಸರಿಯೇ ಎಂದು ಪರಿಶೀಲಿಸಲು ಸಹಾಯವಾಗುತ್ತದೆ; ಜೊತೆಗೆ, ಆ ನಿಯಮ ಎಲ್ಲ ಸಂದರ್ಭಗಳಿಗೂ ಅನ್ವಯಿಸುತ್ತದೆಯೇ ಎಂಬುದನ್ನು ಅರಿತುಕೊಳ್ಳುವುದಕ್ಕೂ ಅನುಕೂಲ. ಜೀವನಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಆ ನಿಯಮದ ಆಧಾರದ ಮೇಲೆ ಬಿಡಿಸಲೂ ಪ್ರಯತ್ನಿಸಬಹುದು. ಒಟ್ಟಿನಲ್ಲಿ ಹೊಸದಾಗಿ ರೂಪಿಸಿದ ಆ ನಿಯಮದ ಸತ್ಯಾಂಶವನ್ನೂ, ಸರ್ವ ವ್ಯಾಪಕತೆಯನ್ನೂ ಅರಿತುಕೊಂಡು, ಅದನ್ನು ದೃಢಪಡಿಸಿಕೊಂಡು, ಅದರ ಬೆಳಕಿನಲ್ಲಿ ಜೀವನದ ಸಮಸ್ಯೆಗಳನ್ನು ಬಿಡಿಸಲು ಈ ಸೋಪಾನದಲ್ಲಿ ಯತ್ನಿಸಬೇಕು.

ಯಾವ ಪಾಠಗಳಲ್ಲಿ ನಿಯಮ ನಿರೂಪಣೆಯ ಆವಶ್ಯಕತೆ ಇಲ್ಲವೋ ಆ ಪಾಠದಲ್ಲಿ ಈ ಸೋಪಾನ ಪ್ರಯೋಗದ ರೂಪವನ್ನು ತಾಳುತ್ತದೆ. ಪಾಠದಲ್ಲಿ ಕಲಿತ ವಿಷಯವನ್ನು ಪ್ರಾಯೋಗಿಕವಾಗಿ ಉಪಯೋಗಿಸಲು ಯತ್ನಿಸುವುದೇ ಆ ಕಾರ್ಯ. ಅಶೋಕನ ದಂಡಯಾತ್ರೆಯನ್ನು ಬೋಧಿಸಿದ ಮೇಲೆ ಆ ಜ್ಞಾನವನ್ನು ಉಪಯೋಗಿಸಿಕೊಂಡು ಅಶೋಕನ ರಾಜ್ಯ ವಿಸ್ತೀರ್ಣವನ್ನು ತೋರಿಸುವ ಒಂದು ಭೂಪಟವನ್ನು ಬರಸುವುದು ಪ್ರಯೋಗದ ಭಾಗ ಪಾಠದಲ್ಲಿ ಕಲಿತ ಅಂಶಗಳ ಆಧಾರದ ಮೇಲೇ ಆ ಕಾರ್ಯ ಮಾಡಬೇಕು. ಇದನ್ನು ತರಗತಿಯಲ್ಲಾದರೂ ಮಾಡಿಸಬಹುದು, ಮನೆಯಲ್ಲಾದರೂ ಮಾಡಿಕೊಂಡು ಬರುವಂತೆ ತಿಳಿಸಬಹುದು; ಗದ್ಯಪಾಠವನ್ನು ಮಾಡಿದಮೇಲೆ ಕೊನೆಯಲ್ಲಿ ಆ ಪಾಠವನ್ನು ಮತ್ತೊಮ್ಮೆ ಮಕ್ಕಳಿಂದ ಓದಿಸುವುದರ ಮೂಲಕ ಪ್ರಯೋಗ ನಡೆಸಿದಂತಾಗುತ್ತದೆ. ಅಥವಾ ಆ ಪಾಠದ ಪುನರಾವರ್ತನೆಯ ರೂಪದಲ್ಲಿ ಪ್ರಶ್ನೋತ್ತರಗಳ ಮೂಲಕವಾದರೂ ಮಾಡಬಹುದು. ಗಣಿತದಲ್ಲಾದರೆ, ಒಂದು ನಿಯಮವನ್ನು ಅರಿತುಕೊಂಡನಂತರ

ಆ ನಿಯಮದ ಆಧಾರದಮೇಲೆ ಹಲವು ಹೊಸ ಲೆಕ್ಕಗಳನ್ನು ಕೊಟ್ಟು ಮಾಡಿಸಬಹುದು. ಈ ಪಾಠದಲ್ಲಿ ಪ್ರಯೋಗವೇ ಪ್ರಧಾನವಾದ ಸೋಪಾನ. ಆದರಿಂದ ಅರಿತುಕೊಂಡ ನಿಯಮವನ್ನು ಸರಿನೋಡುವುದಕ್ಕೂ, ಸರಿನೋಡಿದ ಆ ನಿಯಮವನ್ನು ದೃಢವಾಗಿ ತಿಳಿದುಕೊಳ್ಳುವುದಕ್ಕೂ ಸಹಾಯವಾಗುತ್ತದೆ. ವ್ಯಾಕರಣ ಪಾಠಮಾಡಿ ಅರಿತ ನಿಯಮಕ್ಕೋ ಸೂತ್ರಕ್ಕೋ ಒಪ್ಪುವಂಥ ಹೊಸ ಉದಾಹರಣೆಗಳನ್ನು ಹೇಳಿಸಬಹುದು. ಭೌತಿಕ ಶಾಸ್ತ್ರದ ಒಂದು ನಿಯಮವನ್ನು ದರ್ಶಿಸಿದಮೇಲೆ ಅದರ ಆಧಾರದಮೇಲೆ ದಿನಬಳಕೆಯ ಹಲವು ಸನ್ನಿವೇಶಗಳನ್ನೂ ಸಮಸ್ಯೆಗಳನ್ನೂ ಬಿಡಿಸಲು ಯತ್ನಿಸಬಹುದು. ಒಂದು ಕಾವ್ಯವನ್ನು ಬೋಧಿಸಿದ ಮೇಲೆ, ಅದರಂಥ ಇನ್ನಿತರ ಕಾವ್ಯವನ್ನು ಅಭ್ಯಾಸಿಸುವುದು, ವಿಮರ್ಶಿಸುವುದು, ಕೆಲವು ವೇಳೆ ಸ್ವತಃ ರಚನೆ ಮಾಡುವುದು, ಅಥವಾ ಕಂಠಪಾಠ ಮಾಡುವುದು ಪ್ರಯೋಗದ ಕೆಲಸವಾಗುತ್ತದೆ. ಈ ಸೋಪಾನ ಪಾಠದ ಒಂದು ಅಂಗವಾದ್ದರಿಂದಲೂ, ವಿಷಯಗ್ರಹಣದ ಕೊನೆಯದಾದರೂ, ಬಹು ಮುಖ್ಯವಾದ ಹಂತವಾದ್ದರಿಂದಲೂ ಸಾಧ್ಯವಾದ ಮಟ್ಟಿಗೆ ಅದನ್ನು ತರಗತಿಯಲ್ಲೇ ನಡಸಬೇಕು. ಸಾಧ್ಯವಾಗದಿದ್ದರೆ ಮನೆಯಲ್ಲಿ ಮಾಡುವಂತೆ ತಿಳಿಸಬಹುದು.

ಮೇಲಿನ ಸೋಪಾನವೇ ಪಾಠದ ಕೊನೆಯ ಭಾಗವಾದರೂ ಪಾಠದ ಅಂತ್ಯದಲ್ಲಿ ಉಪಾಧ್ಯಾಯರು ಎಚ್ಚರಿಕೆಯಿಂದ ಮುಗಿಸಬೇಕು; ಮೊಟಕಾದಂತೆ ಮುಗಿಸಬಾರದು. ಮುಂದಿನ ದಿನ ಮಾಡಬೇಕೆಂದು ಯೋಚಿಸಿರುವ ಪಾಠದ ಕಡೆಗೆ ಸೂಕ್ಷ್ಮವಾಗಿ ಮಕ್ಕಳ ಗಮನವನ್ನು ಸೆಳೆಯುವಂತೆ ಸೂಚಿಸಬೇಕು. ಎಂದರೆ, ಯಾವ ಪಾಠವೇ ಆಗಲಿ ಹಿಂದಿನ ದಿನ ಮಾಡಿದ ಪಾಠಕ್ಕೂ ಮುಂದಿನ ದಿನ ಮಾಡಬೇಕೆಂದಿರುವ ಪಾಠಕ್ಕೂ ಸಂಬಂಧವನ್ನು ಕಲ್ಪಿಸಿಕೊಂಡಂತಿರುವುದು ಅವಶ್ಯಕ.

**ಈ ರೀತಿಯ ಬೋಧನಕ್ರಮಕ್ಕಿರುವ ಮನಶ್ಶಾಸ್ತ್ರದ ಆಧಾರ:** ಈ ಬೋಧನಕ್ರಮವನ್ನು ರೂಪಿಸಿದ ಹರ್ಬಾರ್ಟ್ ಮನಶ್ಶಾಸ್ತ್ರಜ್ಞನಲ್ಲ: ತರ್ಕಶಾಸ್ತ್ರ ನಿಪುಣ. ಆದರೂ ಹಲವು ವರ್ಷಗಳು ಪ್ರಾಯೋಗಿಕವಾಗಿ ಶಾಲೆಗಳನ್ನು ನಡಸಿ ಅಲ್ಲಿ ಪಡೆದ ಅನುಭವದ ಆಧಾರದಮೇಲೆ ಈ ಕ್ರಮವನ್ನು ರೂಪಿಸಿದ್ದರಿಂದ ಅದು ಬಹುಮಟ್ಟಿಗೆ ಮನಶ್ಶಾಸ್ತ್ರ ಸಮ್ಮತವಾಗಿದೆ. ಈಚೆಗೆ

ಮ್ಯಾಕ್‌ಮೆರಿಯೆಂಬ ಶಿಕ್ಷಣಚತುರರು ಅದನ್ನು ವಿವರವಾಗಿ ಪರಿಚಯ ಮಾಡಿಕೊಟ್ಟಿರುವರು. ಪರಿಚಿತವಾದ ಅನುಭವ ಮತ್ತು ಜ್ಞಾನಗಳ ಮೇಲೆ ಹೊಸ ಅನುಭವ ಮತ್ತು ಜ್ಞಾನವನ್ನು ಕಟ್ಟುವುದೂ, ಹಲವು ಭಿನ್ನ ದೃಷ್ಟಿಯ ಅಂಶಗಳನ್ನು ಸಮನ್ವಯಗೊಳಿಸಿ ಅದೆಲ್ಲಕ್ಕೂ ಆಧಾರವೆನಿಸುವ ಸಾಮಾನ್ಯ ನಿಯಮವನ್ನು ತಿಳಿಯುವುದೂ ನಮ್ಮ ತಿಳಿವಳಿಕೆಯನ್ನು ಹೆಚ್ಚಿಸುವ ಸಮಂಜಸ ಮಾರ್ಗಗಳೇ. ಆದರೆ ಡ್ಯೂಯಿಯವರು ಈ ಪಂಚ ಸೋಪಾನದ ಕ್ರಮವನ್ನು ಟೀಕಿಸುತ್ತ 'ದಿನಬಳಕೆಯಲ್ಲಿ ನಾವು ಜ್ಞಾನ ಮತ್ತು ಅನುಭವವನ್ನು ಆರ್ಜಿಸುವ ರೀತಿಯಲ್ಲೇ ನಮ್ಮ ತರಗತಿಯ ಬೋಧನೆಯೂ ನಡೆಯಬೇಕು. ಆದರೆ ಪಂಚ ಸೋಪಾನಗಳ ಕ್ರಮದಲ್ಲೇ ಎಲ್ಲಿಯೂ ಜ್ಞಾನಾರ್ಜನೆಯಾಗುತ್ತಿಲ್ಲ' ಎಂದು ಹೇಳಿರುವರು. ಇದರಲ್ಲಿ ಅಷ್ಟಿಷ್ಟು ಸತ್ಯಾಂಶವಿದ್ದರೂ ಮೇಲಿನ ಬೋಧನಕ್ರಮ ಯಾಂತ್ರಿಕವಾಗಿ ಯಾದರೂ ನಿಯಮ ನಿರೂಪಣೆಯನ್ನು ಬೋಧಿಸಬೇಕಾದ ಪಾಠಗಳಿಗೆಲ್ಲ ಅನುಕೂಲವಾಗಿಯೇ ಇದೆಯೆಂಬುದನ್ನು ಒಪ್ಪಲೇ ಬೇಕು. ಆ ಕ್ರಮವನ್ನು ಎಲ್ಲ ಪಾಠಬೋಧನೆಗೂ ಅನುಗೊಳಿಸಲು ಯತ್ನ ನಡೆದಿದೆ. ಆದರೆ ಅದು ಅತ್ಯಂತ ಯಶಸ್ವಿಯಾಗಿ ನಿಯಮಗಳನ್ನು ಬೋಧಿಸುವ, ಆ ನಿಯಮ ಗಳನ್ನು ಪ್ರಾಯೋಗಿಕವಾಗಿ ಉಪಯೋಗಿಸುವ ಪಾಠಕ್ಕೆ ಅನುಕೂಲವಾಗಿದೆ.

**ಭಿನ್ನ ರೀತಿಯ ಪಾಠಗಳನ್ನು ಬೋಧಿಸುವಾಗ:** ಈಗ ಪ್ರಚಾರ ದಲ್ಲಿರುವ ಬೋಧನಕ್ರಮಗಳಲ್ಲೆಲ್ಲ ಪಂಚ ಸೋಪಾನಗಳ ಕ್ರಮವೇ ಪ್ರಧಾನ ವಾದುದು. ಮೇಲಿನ ಐದು ಸೋಪಾನಗಳು ಸ್ಥೂಲವಾದ ಮಾರ್ಗವನ್ನು ಸೂಚಿಸುವುವಾದರೂ ಪಾಠದ ಸ್ವರೂಪವನ್ನು ಅನುಸರಿಸಿ ಅವನ್ನು ಮಾರ್ಪ ಡಿಸಿಕೊಳ್ಳುವುದು ಆವಶ್ಯಕ. ಆದ್ದರಿಂದ ಉಪಾಧ್ಯಾಯರು ಆ ಎಲ್ಲ ಸೋಪಾನಗಳನ್ನೂ ಎಲ್ಲ ಪಾಠಗಳಲ್ಲೂ ಯಾಂತ್ರಿಕವಾಗಿ ಹಾದುಹೋಗಲು ಯತ್ನಿಸಬಾರದು—ಆಲೋಚಿಸಿ, ಆವಶ್ಯಕತೆಯರಿತು, ಆ ಒಂದೊಂದು ಸೋಪಾನವನ್ನೂ ಉಪಯೋಗಿಸಿಕೊಳ್ಳಬೇಕು. ಆ ಎಲ್ಲ ಸೋಪಾನ ಗಳನ್ನೂ ಹತ್ತಲೇಬೇಕೆಂಬ ನಿಯಮವಿಲ್ಲದಿದ್ದರೂ ನಿಜವಾಗಿಯೂ ಪರಿ ಣಾಮಕಾರಿಯಾಗಬೇಕಾದ ಯಾವ ಪಾಠಬೋಧನೆಯೇ ಆಗಲಿ ಆ ಕ್ರಮ ದಲ್ಲಿ ಮಾತ್ರ ನಡೆಯಲೇಬೇಕು. ಇಲ್ಲವಾದರೆ ಬೋಧನೆ ನಿರ್ದಿಷ್ಟ ಗುರಿ

ಯನ್ನು ಮುಟ್ಟುವಂತಿಲ್ಲ; ಮಕ್ಕಳಿಗೆ ಸರಿಯಾದ ಕ್ರಮದಲ್ಲಿ ಜ್ಞಾನಾರ್ಜನೆಯೂ ಆಗುವಂತಿಲ್ಲ.

ಗದ್ಯ, ಚರಿತ್ರೆ, ಆರೋಗ್ಯ, ಭೂಗೋಳ — ಈ ಪಾಠ ಬೋಧನೆಯಲ್ಲಿ ಪೀಠಿಕೆ, ಪ್ರದರ್ಶನ, ಹೋಲಿಕೆ, ಪ್ರಯೋಗ—ಈ ಸೋಪಾನಗಳು ಮಾತ್ರ ಬರುತ್ತವೆ. ಹೋಲಿಕೆ ಅಷ್ಟು ನಿರ್ದಿಷ್ಟರೂಪದಲ್ಲಿರುವುದಿಲ್ಲ. ಚಿತ್ರ, ಭೂಪಟ, ಕಂಠಪಾಠ, ಇತ್ಯಾದಿಯ ಕೆಲಸಗಳನ್ನು ಪ್ರಯೋಗವಾಗಿ ಮಾಡಬೇಕಾಗುತ್ತದೆ. ಗಣಿತ, ವ್ಯಾಕರಣ, ಸಾಮಾನ್ಯ ವಿಜ್ಞಾನ—ಈ ಪಾಠಗಳಲ್ಲಿ ಎಲ್ಲ ಸೋಪಾನಗಳೂ ಸಾಮಾನ್ಯವಾಗಿ ಬರುತ್ತವೆ. ಬರವಣಿಗೆ, ಸಂಗೀತ, ಚಿತ್ರಕಲೆ, ಓದುವುದು, ಮಾತನಾಡುವುದು, ಅಂಗಸಾಧನೆ–ಇವೇ ಮೊದಲಾದ ಕೌಶಲ್ಯವನ್ನು ಬೋಧಿಸಬೇಕಾದ ಪಾಠಗಳಲ್ಲಿ ಪೂರ್ವ ಸಿದ್ಧತೆ ಆದಮೇಲೆ ಮಕ್ಕಳ ಮುಂದೆ ಇಡಬೇಕಾದುದು, ಸ್ಫುಟೀಕರಿಸಬೇಕಾದುದು ಜ್ಞಾನವನ್ನಲ್ಲ — ಮಾದರಿಯನ್ನು. ಆ ದಿನ ಅಭ್ಯಾಸಿಸಬೇಕಾದ ಚಿತ್ರ, ಮಾದರಿ, ಬರವಣಿಗೆಯ ಮೇಲ್ಪಂಕ್ತಿ, ಸಂಗೀತ, ಭಾಷಣ ಪಾಠ, ಗರಡಿಯ ವರಸೆ—ಈ ಕೌಶಲಗಳಿಗೆ ಸಂಬಂಧಿಸಿದಂತೆ, ಮಾದರಿಗಳನ್ನು ಮಕ್ಕಳ ಮುಂದೆ ಪ್ರದರ್ಶಿಸಬೇಕು. ಮಕ್ಕಳೂ ಅವನ್ನು ಅನುಕರಿಸಿ ಕಲಿಯಬೇಕು. ಹೊಸ ಪಾಠ ಸ್ಫುಟಗೊಂಡಮೇಲೆ ಆ ಪಾಠಕ್ಕೆ ಸಂಬಂಧಿಸಿದ ನೂತನ ನಿಯಮವನ್ನು ಮಕ್ಕಳು ಅರಿಯುವಂತೆ ಮಾಡಬೇಕು. ಕೆಲವು ಪಾಠಗಳಲ್ಲಿ ನಿರ್ದಿಷ್ಟವಾದ ನಿಯಮಗಳು ಇಲ್ಲದಿರಬಹುದು. ಆಗ ಅದಕ್ಕೆ ಸಂಬಂಧಿಸಿದ ಜ್ಞಾನವನ್ನಾದರೂ ತಿಳಿದುಕೊಳ್ಳುವಂತೆ ಮಾಡಬೇಕಾಗುತ್ತದೆ. ಅನಂತರ ಹಾಗೆ ಪಡೆದ ಜ್ಞಾನದ ಅಥವಾ ಅರಿತುಕೊಂಡ ನಿಯಮದ ಆಧಾರದಮೇಲೆ ನಡಸಬೇಕಾದ ಪ್ರಯೋಗ. ಅದರಿಂದ ಕಲಿತ ಕಲೆಯನ್ನು ಪ್ರಯೋಗಿಸುವ ಅವಕಾಶವಾಗುವುದಲ್ಲದೆ ಅದನ್ನು ದೃಢಪಡಿಸಿ ವೃದ್ಧಿಪಡಿಸಿಕೊಳ್ಳಲೂ ಸಹಾಯವಾಗುತ್ತದೆ. ಹೀಗೆ ಯಾವ ರೀತಿಯ ಪಾಠ ಬೋಧನೆಯಲ್ಲಾದರೂ ಮೇಲಿನ ಅನುಕ್ರಮವನ್ನೇ ಅನುಸರಿಸಬೇಕು. ಏಕೆಂದರೆ, ಕಲಿವಿನ ಸ್ವರೂಪ ಆ ಕ್ರಮದಲ್ಲೇ ಸಾಗಬೇಕಾಗಿದೆ; ನಮ್ಮ ಮನಸ್ಸು ನೂತನ ಜ್ಞಾನವನ್ನು ಸ್ವೀಕರಿಸುವುದೂ ಹೊಸ ಕೌಶಲ್ಯವನ್ನು ಪಡೆಯುವುದೂ ಆ ಕ್ರಮದಲ್ಲೇ.

**೧. ಕೌಶಲ್ಯಪ್ರಧಾನವಾದ ಪಾಠಬೋಧನೆ: ಚಿತ್ರಕಲೆ,** ಸಂಗೀತ, ಕೈಕೆಲಸ ಮತ್ತು ಇನ್ನಿತರ ಕೌಶಲ್ಯದ ಪಾಠಗಳಲ್ಲಿ ಬೋಧಿಸಬೇಕಾದ ಅಂಶ ಜ್ಞಾನಪ್ರಧಾನವಾದ್ದಲ್ಲ, ಕೌಶಲ್ಯಪ್ರಧಾನವಾದ್ದು. ಮುಖ್ಯ ಉದ್ದೇಶ ವಿಷಯಗ್ರಹಣವಲ್ಲ—ಕಲೆಯ ಅಭ್ಯಾಸ. ಅಹುದು, ಅಲ್ಪಸ್ವಲ್ಪ ಜ್ಞಾನವನ್ನೇನೋ ಬೋಧಿಸಲು ಆಗ ಯತ್ನಿಸುತ್ತೇವೆ. ಆದರೆ ಆ ಜ್ಞಾನವೇ ಮುಖ್ಯವಲ್ಲ—ಅಭ್ಯಾಸಕ್ಕೆ ನೆರವಾಗಲೆಂಬ ಉದ್ದೇಶದಿಂದ ಮಾತ್ರ ಅದನ್ನು ಹೇಳುವುದು. ಯಾವ ಕುಶಲಕಲೆಗಳನ್ನೇ ಆಗಲಿ ಕಲಿಯುವುದು ಅದನ್ನು ಕುರಿತ ಜ್ಞಾನದಿಂದಲ್ಲ—ಅದನ್ನೇ ಅಭ್ಯಾಸ ಮಾಡುವುದರಿಂದ. ಆದ್ದರಿಂದಲೇ ಅಂಥ ಪಾಠಗಳಲ್ಲಿ ಮೊದಲಿಂದ ಕೊನೆಯುವರೆಗೂ ಅಭ್ಯಾಸವೇ ಪ್ರಧಾನವಾಗಿರುತ್ತದೆ. ಸಂಗೀತ ಪಾಠದಲ್ಲಿ ಹಿಂದಿನ ದಿನ ಕಲಿತದ್ದನ್ನು ಪೂರ್ವ ಸಿದ್ಧತೆಗಾಗಿ ಪುನರಾವರ್ತಿಸುತ್ತೇವೆ. ಹೊಸ ಪಾಠವನ್ನೂ ಅಭ್ಯಾಸಿಸುತ್ತೇವೆ. ಅದಕ್ಕೆ ಸಂಬಂಧಿಸಿದ ಸ್ವರ, ತಾಳ, ಲಯ ಮುಂತಾದ ವಿಷಯ ಜ್ಞಾನವನ್ನು ತಿಳಿಸುವೆವಾದರೂ ಅದು ಗೌಣವಾದ್ದು. ಕೊನೆಯ ಸೋಪಾನದಲ್ಲಿ ಆ ಜ್ಞಾನವನ್ನು ಪ್ರಯೋಗಿಸಲೋಸ್ಕರ ಒಂದಿಷ್ಟು ಹಾಡುವುದಿಲ್ಲ—ಅಭ್ಯಾಸವೇ ಅಲ್ಲಿ ಪ್ರಧಾನ; ಅಭ್ಯಾಸ ಉತ್ತಮಗೊಳ್ಳಲೆಂದೇ ಆ ವಿಷಯ ಜ್ಞಾನ. ಹೀಗೆ ಸಂಗೀತಪಾಠ ಆರಂಭವಾಗುವುದು ಸಂಗೀತದ ಅಭ್ಯಾಸದಿಂದ; ಪ್ರದರ್ಶನವೂ ಸಂಗೀತದ ಅಭ್ಯಾಸವೇ; ಪ್ರಯೋಗವೂ ಅಭ್ಯಾಸವೇ. ಹೀಗೆಯೇ ಇನ್ನಿತರ ಲಲಿತಕಲಾ ಪಾಠಗಳೂ ಕೂಡ. ಎಲ್ಲ ಸೋಪಾನಗಳಲ್ಲೂ ಅಭ್ಯಾಸ ಪ್ರಧಾನವಾಗಿರುತ್ತದೆ. ಆದರೂ ಆ ಸೋಪಾನಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಮೇಲಿನ ಕ್ರಮದಲ್ಲೇ ಇರುವುದು ಕಂಡುಬರುತ್ತದೆ. ಕೆಲವು ಸೋಪಾನಗಳು ಆವಶ್ಯಕತೆಯಿಲ್ಲದ್ದರಿಂದ ಬಿಟ್ಟು ಹೋಗಬಹುದಾದ ಅಂಶವನ್ನು ಹಿಂದೆಯೇ ಸ್ಪಷ್ಟಪಡಿಸಿದೆ.

ಹೀಗೆಯೇ ಚಿತ್ರಕಲೆಯ ಪಾಠವನ್ನೂ ಮಾಡಬಹುದು. ಒಂದು ಮಾದರಿಯನ್ನು ನೋಡಿಕೊಂಡು ಚಿತ್ರ ಬರಸಬೇಕೆಂದಿಟ್ಟುಕೊಳ್ಳುವ; ಆಗ ಆ ಮಾದರಿಯನ್ನು ಕುರಿತ ವಿವರಗಳನ್ನು ಮಾಡಿ ಅನಂತರ 'ಇದುವರೆಗೆ ಮಾದರಿಯನ್ನು ವಿವರಿಸಿದೆವು; ಅದರಂತೆ ಚಿತ್ರವನ್ನು ಬರೆಯೋಣ' ಎಂದು ಪೀಠಿಕೆ ಹಾಕಿಕೊಳ್ಳಬಹುದು. ಇದೇ ಮೊದಲನೆಯ ಸೋಪಾನ;

ಅನಂತರ ಮಾದರಿಯನ್ನೇ ತರಗತಿಗೆ ಪ್ರದರ್ಶಿಸಬೇಕು. ಅದರಂತೆ ಬರೆಯುವ ಕ್ರಮವನ್ನು ಕ್ರಮಕ್ರಮವಾಗಿ ಸ್ಫುಟಗೊಳಿಸಬೇಕು. ಇದೇ ಎರಡನೆಯ ಸೋಪಾನ. ಹಲವರು ಸರಿಯಾಗಿ ಮಾದರಿಯಂತೆ ಅನುಕರಿಸಿ ಬರೆಯದಿರಬಹುದು. ಸರಿಪಡಿಸಲು ಆವಶ್ಯಕವಾದ ಹಲವು ನಿಯಮಗಳನ್ನೇ ವಿವರಗಳನ್ನೊಳಗೊಂಡ ಜ್ಞಾನವನ್ನೇ ತಿಳಿಸಬಹುದು. ಇದೇ ಮುಂದಿನ ಸೋಪಾನ. ಆ ನಿಯಮಗಳನ್ನನುಸರಿಸಿ ಮಾದರಿಗೆ ಸರಿಹೋಗುವ ಚಿತ್ರ ಬರೆಯುವುದನ್ನು ಅಭ್ಯಾಸ ಮಾಡಿಸುತ್ತಾ ಹೋಗುವುದೇ ಕೊನೆಯ ಸೋಪಾನ, ಅಥವಾ ಪ್ರಯೋಗ.

ಹೀಗೆಯೇ ಇತರ ಕುಶಲಕಲಾ ಪಾಠಗಳ ಬೋಧನೆಯನ್ನೂ ವಿವರಿಸಬಹುದು. ಯಾವ ಪಾಠದಲ್ಲಾಗಲಿ ಮೊದಲನೆಯ ಸೋಪಾನ ಪೂರ್ವಸಿದ್ಧತೆಯೇ. ಅದು ಹಿಂದಿನ ದಿನ ಕಲಿತ ಕಲೆಯ ಪುನರಾವರ್ತನೆಯೇ; ಹೊಸ ಅಭ್ಯಾಸಕ್ಕೆ ಸಹಾಯವಾಗತಕ್ಕ ಅನುಕರಣಶಕ್ತಿಯನ್ನು ಅವರ ಸ್ಮೃತಿಗೆ ತರುವುದೇ ಆಗಿರುತ್ತದೆ. ಎರಡನೆಯ ಸೋಪಾನ ಪ್ರದರ್ಶನ. ಉಪಾಧ್ಯಾಯರು ಮಾದರಿ ಚಿತ್ರವನ್ನೇ, ಮಾದರಿ ಹಾಡನ್ನೇ, ಮಾದರಿ ಬರವಣಿಗೆಯನ್ನೇ ಪ್ರದರ್ಶಿಸಬೇಕು. ಜೊತೆಗೆ ಅದನ್ನು ಮಕ್ಕಳು ಅಭ್ಯಾಸಿಸುವ ರೀತಿಯನ್ನೂ ಸ್ಫುಟೀಕರಿಸಬೇಕು. ಅವರೂ ಅದನ್ನು ಅನುಕರಿಸಲು ಯತ್ನಿಸಬೇಕು. ಮೂರನೆಯ ಸೋಪಾನದಲ್ಲಿ ಆ ಕಲೆಗೆ ಸಂಬಂಧಿಸಿದ ನಿಯಮಗಳನ್ನೇ, ಆವಶ್ಯಕವೆನಿಸುವ ಇತರ ಜ್ಞಾನವನ್ನೇ ಅರಿತುಕೊಳ್ಳುವಂತೆ ಮಾಡಬೇಕು. ನಾಲ್ಕನೆಯ ಸೋಪಾನದಲ್ಲಿ ಪ್ರಾಯೋಗಿಕವಾಗಿ ಕಲೆ ಪರಿಪಕ್ವಗೊಳ್ಳುವವರೆಗೂ ಅಭ್ಯಾಸ ಮಾಡಬೇಕು. ಈ ನಾಲ್ಕು ಸೋಪಾನಗಳನ್ನೂ ಎಲ್ಲ ಕಲಾಶಿಕ್ಷಣದಲ್ಲೂ ಅನುಸರಿಸಬೇಕಾಗುತ್ತದೆ. ಅನಾವಶ್ಯಕವಾದ, ಸಂಬಂಧ ಕಲ್ಪನೆಯ ಸೋಪಾನ ಬಿಟ್ಟುಹೋಗಬಹುದು.

ಹೀಗೆ ಯಾವ ಪಾಠವನ್ನು ಮಾಡಿದರೂ ಉಪಾಧ್ಯಾಯರು ಕ್ರಮವೊಂದನ್ನು ಅನುಸರಿಸಬೇಕಾಗುತ್ತದೆ. ಅನುಸರಣೆಗೆ ಹೊಂದಿಸಿಕೊಂಡು ಪಾಠವನ್ನು ಓದಿ, ಟಿಪ್ಪಣಿಯ ರೂಪದಲ್ಲಿ ಸಿದ್ಧಪಡಿಸಿಕೊಂಡು ಬರಬೇಕಾಗುತ್ತದೆ. ಟಿಪ್ಪಣಿ ಮೇಲಿನ ಐದು ಸೋಪಾನಗಳಲ್ಲಿ ಪಾಠ ಬೋಧನೆ

ಮಾಡುವಂತೆಯೇ ನಿರ್ಮಿತವಾಗಿರಬೇಕು. ಅದರಿಂದ ತಾವು ಮಾಡಬೇಕಾದ ಪಾಠದ ಮುಂದಿನ ಮಾರ್ಗ ತಾನಾಗಿಯೇ ಅನುಸರಿಸಿಕೊಂಡು ಸಾಗುತ್ತದೆ. ಹೊಸ ಉಪಾಧ್ಯಾಯರಿಗೆ ಈ ಟಿಪ್ಪಣಿ ಮಾರ್ಗದರ್ಶಿಯಂತಿರುತ್ತದೆ. ಕ್ರಮ ಕ್ರಮವಾಗಿ ಅದನ್ನು ನೋಡದೆ, ಬರೆಯದೆ ಪಾಠಮಾಡುವುದು ಸಾಧ್ಯ ವಾದರೂ ಆ ಕ್ರಮದಲ್ಲೇ ಮಾತ್ರ ಮಾಡುವ ಅಭ್ಯಾಸವಾಗುತ್ತದೆಂಬುದನ್ನು ಮರೆಯಬಾರದು. ಉಪಾಧ್ಯಾಯರು ಪಾಠದ ಟಿಪ್ಪಣಿಯನ್ನೂ ಆ ಪಂಚ ಸೋಪಾನದ ಅನುಸರಣೆಯನ್ನೂ ಕ್ರಮಕ್ರಮವಾಗಿ, ಪಳಗಿದಂತೆ ಮರೆ ತರೂ, ಆ ಕ್ರಮಾನುಸರಣೆಯ ಪ್ರಭಾವ ಮಾತ್ರ ಅವರ ಬೋಧನ ಕಾರ್ಯಕ್ಕೆ ಉಚಿತವಾದ ಮಾರ್ಗವನ್ನು ಎಂದೆಂದಿಗೂ ತೋರಿಸುತ್ತಿರುತ್ತದೆ.

ಪಂಚ ಸೋಪಾನಗಳ ಬೋಧನಕ್ರಮ ಸ್ಥೂಲವಾದ ಒಂದು ಯೋಜನೆ. ಅದನ್ನು ಆಯಾ ಪಾಠದ ಸ್ವರೂಪವನ್ನರಿತು ಅಳವಡಿಸಿ ಕೊಳ್ಳಬೇಕು. ಮಧ್ಯೆ ಒಂದೊ, ಎರಡೊ, ಸೋಪಾನಗಳನ್ನು ಕೆಲವು ಪಾಠಗಳಲ್ಲಿ ಬಿಡಬೇಕಾದರೂ ಬೋಧನೆಯ ಕಾರ್ಯ ಆ ಕ್ರಮವನ್ನೇ ಅನುಸರಿಸುತ್ತದೆಂದು ಸ್ಥೂಲವಾಗಿ ಹೇಳಬಹುದು. ಉಪಾಧ್ಯಾಯರಿಗೆ ಅದ ರಿಂದ ತಾವು ನಡಸಬೇಕಾದ ಬೋಧನೆಯ ಸ್ವರೂಪ ಗೊತ್ತಾಗಿ ಅಡ್ಡದಾರಿ ಹಿಡಿಯದಂತೆ ಸಹಾಯವಾಗುತ್ತದೆ. ಕೆಲವರು ಈ ಕ್ರಮಾನುಸರಣೆಯಿಂದ ಪಾಠ ಯಾಂತ್ರಿಕವಾಗಿ ಸಾಗುವುದೆಂದು ಆಕ್ಷೇಪಿಸಬಹುದು. ಆ ನಿಯಮ ಗಳನ್ನು ಪರಿಚಯಮಾಡಿಕೊಳ್ಳುವುದರಿಂದ ಯಾವ ಕೇಡೂ ಇಲ್ಲ. ಹೊಸಬ ರಾದರೆ, ಹೇಳಬೇಕಾದ ವಿಷಯವನ್ನು ಒಮ್ಮೆ ಮರೆತುಬಿಟ್ಟು ಮರಳಿ ಹಿಂದಕ್ಕೆ ಬಂದು ಹೇಳುವ ವಿಲಕ್ಷಣ ಪ್ರಸಂಗ ಅದನ್ನು ಅನುಸರಿಸುವುದರಿಂದ ತಪ್ಪುವುದು; ಪ್ರತಿಭಾಶಾಲಿಯೂ ಅನುಭವಿಯೂ ಆದ ಉಪಾಧ್ಯಾಯರ ಕಾರ್ಯಕೌಶಲವನ್ನೆಂದೂ ಈ ನಿಯಮಗಳು ಕುಂಠಿತಮಾಡಲಾರವು; ಸನ್ನಿ ವೇಶಕ್ಕೆ ತಕ್ಕಂತೆ ಅದನ್ನು ಹೊಂದಿಸಿಕೊಂಡು ತನ್ನ ಕೌಶಲ್ಯ ಉತ್ತಮ ಪ್ರತಿಫಲ ಕೊಡುವಂತೆ ಪಾಠ ಬೋಧನೆ ಮಾಡುವ ಅವಕಾಶ ಇದ್ದೇ ಇದೆ. ಕೇವಲ ಕುರುಡರಂತೆ ಯಾಂತ್ರಿಕವಾಗಿ ಈ ಕ್ರಮವನ್ನು ಅನುಸರಿಸಿದರೂ ಅದನ್ನನುಸರಿಸದ ಹೊಸಬರು ಮಾಡುವಷ್ಟು ತಪ್ಪುಗಳನ್ನು ಮಾಡಲಾರರು. ಅನುಭವಿಯೂ ಕುಶಲರೂ ಆದ ಉಪಾಧ್ಯಾಯರು ಈ ನಿಯಮಗಳನ್ನು

ಅನುಸರಿಸಿದಾಗ ಬೋಧನೆ ಯಾಂತ್ರಿಕವಾಗಿರದೆ ಉತ್ತಮ ಕಲಾವಿದನ ಅಚ್ಚುಕಟ್ಟಿನ ಕೃತಿಯಂತಿರುತ್ತದೆ.

'ಈ ಪಂಚ ಸೋಪಾನದ ಬೋಧನಕ್ರಮ ಹಲವು ಪಾಠಗಳಿಗೆ ಅನ್ವಯಿಸುವುದಿಲ್ಲ. ನಿಯಮವೊಂದರ ಆಧಾರದಮೇಲೆ ಸಮಸ್ಯೆಗಳನ್ನು ಬಿಡಿಸುವ, ಲೆಕ್ಕಗಳನ್ನು ಮಾಡುವ ಪಾಠಗಳಿಗೆ ಇದನ್ನು ಬಳಸುವಂತಿಲ್ಲ. ಸಂಬಂಧ ಕಲ್ಪನೆ ಹಲವು ಪಾಠಗಳಲ್ಲಿ ಅನಾವಶ್ಯಕವೆನಿಸುತ್ತದೆ. ಕೃತಕವಾಗಿ ಆ ಸೋಪಾನವನ್ನು ತರಲು ಪ್ರಯತ್ನಿಸಿದರೂ ಫಲವಿರುವುದಿಲ್ಲ. ಪೀಠಿಕೆ, ಪ್ರದರ್ಶನ ಆದನಂತರ ಉಳಿದೆಲ್ಲ ಸೋಪಾನಗಳೂ ವಿದ್ಯಾರ್ಥಿಗಳು ಜ್ಞಾನ ಸಾಧಿಸತಕ್ಕವು—ಅವು ಬೋಧನೆಗಿಂತ ಕಲಿವಿನ ಕ್ರಮಗಳು' ಇವೇ ಮೊದಲಾದ ಟೀಕೆಗಳು ಈ ಕ್ರಮದಮೇಲೆ ಬರುತ್ತಿದ್ದರೂ ಇಂದಿಗೂ ಇದು ಶಿಕ್ಷಣರಂಗದಲ್ಲಿ ಬಹುವಾಗಿ ಉಪಯೋಗದಲ್ಲಿದೆ. ಅದರಲ್ಲಿರಬಹುದಾದ ಅನಾವಶ್ಯಕವಾದ ಮಜಲನ್ನು ಬಿಡಲು ಬೋಧಕರಿಗೆ ಅವಕಾಶವಿರುವುದೆಂದೂ, ಕುಶಲ ಉಪಾಧ್ಯಾಯರ ಕೈಕಟ್ಟುವುದಾಗಲಿ, ಯಾಂತ್ರಿಕವಾಗಿ ಪಾಠ ಸಾಗಲೆಂಬುದಾಗಲಿ ಆ ನಿಯಮ ನಿರೂಪಣೆಯ ಉದ್ದೇಶವಲ್ಲವೆಂದೂ, ಅದನ್ನು ಅನುಸರಿಸದ ಕುಶಲ ಉಪಾಧ್ಯಾಯರೂ ಕೂಡ ಕಂಡೋ ಕಾಣದೆಯೋ ಆ ಕ್ರಮದಲ್ಲೇ ಪಾಠ ನಡಸುವರೆಂದೂ, ಎಲ್ಲಕ್ಕೂ ಮೇಲಾಗಿ ಜ್ಞಾನಾರ್ಜನೆಯ ಮಾರ್ಗ ಆ ಕ್ರಮದಲ್ಲೇ ಸಾಗಬೇಕೆಂದೂ ಇದುವರೆಗೂ ವಿಶದೀಕರಿಸಿರುತ್ತೇವೆ. ಇಷ್ಟೆಲ್ಲ ಅನುಕೂಲಗಳಿರುವುದರಿಂದಲೇ ನ್ಯೂನತೆಗಳು ಕಂಡುಬಂದರೂ ಈ ಕ್ರಮ ಇಂದಿಗೂ ಜೀವಂತವಾಗಿ ಶಿಕ್ಷಣರಂಗದಲ್ಲಿ ಪ್ರಚಾರದಲ್ಲಿರುವುದು.

**೨. ನಿಯಮ ನಿರೂಪಣೆಯ ಕ್ರಮ :** ಮೇಲಿನ ಬೋಧನಕ್ರಮವನ್ನು ನಿಯಮ ನಿರೂಪಣೆಯ ಕ್ರಮ ಅಥವಾ ಸಂಶೋಧನೆಯ ಕ್ರಮ ಎಂದು ಹೇಳುವುದುಂಟು. ಜಗತ್ತಿನ ಮಹಾ ವಿಜ್ಞಾನಿಗಳನೇಕರಿಗೆ ನೂತನ ಸಂಶೋಧನೆಗಳನ್ನು ನಡಸುವಾಗ ಅವ್ಯಕ್ತವಾಗಿಯೋ ವ್ಯಕ್ತವಾಗಿಯೋ ಈ ಮಾರ್ಗ ಸಹಕಾರಿಯಾಗಿದೆ. ಯಾವ ಪಾಠದಲ್ಲಿ ನಿಯಮ ನಿರೂಪಣೆಯನ್ನು ಮಾತ್ರ ಮಾಡಬೇಕಾಗಿದೆಯೋ ಅಲ್ಲಿ ಪೂರ್ಣವಾಗಿ ಬೋಧನಕ್ರಮ ಸಂಶೋಧನೆಯ ಕ್ರಮವನ್ನೇ ಅನುಸರಿಸಿರುತ್ತದೆ. ಆದರೆ

ಕೊನೆಯ ಸೋಪಾನದಲ್ಲಿ ಈ ಸಂಶೋಧನೆಯ ಕ್ರಮಕ್ಕೆ ವಿರುದ್ಧವಾದ ಪ್ರಯೋಗ ಕ್ರಮವನ್ನೂ ಅನುಸರಿಸುತ್ತೇವೆ: ಆಗ ನಮಗೆ ಗೊತ್ತಿರುವ ನಿಯಮದಿಂದಲೇ ಆರಂಭಿಸಿ ಅದರ ಆಧಾರದ ಮೇಲೆ ಹಲವಾರು ಉದಾಹರಣೆ ಹುಡುಕುವುದನ್ನೋ, ಸಮಸ್ಯೆಗಳನ್ನು ಬಿಡಿಸುವುದನ್ನೋ ಬೋಧಿಸಲಾಗುತ್ತದೆ. ಹೀಗೆ ನಿಯಮ ನಿರೂಪಣೆಯ ಮತ್ತು ಪ್ರಯೋಗದ ರೀತಿಗಳ ಎರಡು ಬೋಧನಕ್ರಮಗಳೂ ಒಟ್ಟುಗೂಡಿಯೇ ಪಂಚ ಸೋಪಾನದ ಕ್ರಮ ಏರ್ಪಟ್ಟಿದೆ. ಹಿಂದೆ ಹೇಳಿದಂತೆ ನಿಜವಾದ ಜ್ಞಾನಾರ್ಜನೆಗೆ ಇವೆರಡು ರೀತಿಯ ಬೋಧನೆಯೂ ಆ ಕ್ರಮದಲ್ಲಿ ಸೇರೇ ಇರಬೇಕು. ಚದುರಿರುವ ಅಂಶಗಳನ್ನು ವಿಂಗಡಿಸಿ ಸಮನ್ವಯಗೊಳಿಸಿ ಅವುಗಳಿಗೆಲ್ಲ ಆಧಾರಭೂತವಾದ ತತ್ತ್ವದರ್ಶನ ಒಂದು ರೀತಿಯ ಬೋಧನಕ್ರಮವಾದರೆ, ತತ್ತ್ವದ ಆಧಾರದ ಮೇಲೆ ಸಮಸ್ಯೆಗಳನ್ನು ಬಿಡಿಸುವುದು ಇನ್ನೊಂದು ರೀತಿಯದು. ವಿಜ್ಞಾನ ಸಂಶೋಧನೆಗೆ ಮೊದಲ ರೀತಿಯ ಕ್ರಮವನ್ನು ಅನುಸರಿಸಬೇಕಾಗಿದ್ದರೂ ಆಗ ಕಂಡ ನಿಯಮಗಳನ್ನು ಸರಿಯೋ ತಪ್ಪೋ ಎಂದು ನಿಷ್ಕರ್ಷಿಸಬೇಕಾದರೆ ಎರಡನೆಯ ಕ್ರಮವನ್ನೂ ಉಪಯೋಗಿಸಿಕೊಳ್ಳಬೇಕು. ನಿಯಮ ನಿರೂಪಣೆಯ ಈ ಬೋಧನಕ್ರಮದಿಂದ ವಿವಿಧ ವಿಷಯಗಳನ್ನೆಲ್ಲ ಒಂದು ಸೂತ್ರದಲ್ಲೋ ತತ್ತ್ವದಲ್ಲೋ ನಿಯಮದಲ್ಲೋ ಅಡಗಿಸಿಟ್ಟುಕೊಳ್ಳುವ ಮಾನಸ ಸಂಸ್ಕರಣವಾಗುತ್ತದೆ. ಜೊತೆಗೆ, ಯಾವುದನ್ನೇ ಆಗಲಿ ನಿರ್ಧರಿಸುವಾಗ ಮನಸ್ಸು ಅನುಸರಿಸಬೇಕಾದ ಒಂದು ಕ್ರಮವನ್ನೂ ತೋರಿಸಿಕೊಡುತ್ತದೆ. ಮಕ್ಕಳ ಮುಂದೆ ನಿರ್ದಿಷ್ಟ ಗುರಿಯನ್ನು ಇಡುವುದೂ, ಆ ಗುರಿಯ ಸಾಧನೆಗೆ ಅವರ ಸಂಪೂರ್ಣ ಅವಧಾನ, ಆಸಕ್ತಿ ಮತ್ತು ಸಹಕಾರಗಳನ್ನು ದೊರಕಿಸಿಕೊಳ್ಳುವುದೂ ಶಿಕ್ಷಣಕ್ಕೆ ಬಹು ಅನುಕೂಲ. ಉದ್ಯಮ ರೀತಿಯ ಶಿಕ್ಷಣದಲ್ಲೂ ಮಕ್ಕಳ ಗುರಿಯನ್ನು ಕೇಂದ್ರೀಕರಿಸಿ ಅದರ ಸಾಧನೆಗಾಗಿ ಅವರ ಸಂಪೂರ್ಣ ಉದ್ದೇಶವನ್ನು ಬೋಧನೆಯ ಕಡೆಗೆ ಸೆಳೆಯುವುದೂ ಬೋಧನೆ ಯಶಸ್ವಿಯಾಗಲೆಂದೇ. ಈ ಕ್ರಮವನ್ನು ಮಕ್ಕಳು ಪರಿಚಯಮಾಡಿಕೊಂಡು, ನಿಯಮವನ್ನು ತಿಳಿದುಕೊಂಡಂತೆ ಅದಕ್ಕೆ ಸಂಬಂಧಿಸಿದ ಅಂಶಗಳನ್ನು ಕಂಠಪಾಠ ಮಾಡುವುದೂ ಸರಾಗವಾಗುತ್ತದೆ.

**೩. ನಿಯಮುಗಳಿಂದ ಸಮಸ್ಯೆ ಬಿಡಿಸುವ ಪಾಠಕ್ರಮ :** ಹರ್ಬಾರ್ಟನ ಮೇಲಿನ ಬೋಧನಕ್ರಮ ನಿಯಮ ನಿರೂಪಣೆಯ ಪಾಠಗಳಿಗೆ ಒಪ್ಪುವಂತೆ ಆ ನಿಯಮುಗಳನ್ನೇ ಆಧಾರವಾಗಿಟ್ಟುಕೊಂಡು ಸಮಸ್ಯೆಗಳನ್ನು ಬಿಡಿಸುವ ಪಾಠಗಳಿಗೆ ಹೊಂದುವುದಿಲ್ಲ. ಒಂದು ನಿಯಮವನ್ನು ಪಾಠಾರಂಭದಲ್ಲಿ ಉಪಯೋಗಿಸಿಕೊಂಡು ಹಲವು ಲೆಕ್ಕಗಳನ್ನು ಮಾಡುವಾಗ ಹರ್ಬಾರ್ಟನ ಪಂಚ ಸೋಪಾನ ಕ್ರಮ ಒಪ್ಪುವುದಿಲ್ಲ. ಅಂಥ ಪಾಠಬೋಧನೆಗೆ ಬೇರೊಂದು ಕ್ರಮ ಅನುಸರಿಸಬೇಕು: ಸಮಸ್ಯೆಯ ಪರಿಚಯ; ಅದಕ್ಕೊಪ್ಪುವ ಅಥವಾ ಬಿಡಿಸಲನುಕೂಲಿಸುವ ನಿಯಮದ ಪರಿಚಯ; ಬಿಡಿಸುವ ಕಾರ್ಯ ಮತ್ತು ವಿವರಣೆ; ಅದು ಸರಿಯೇ ತಪ್ಪೇ ಎಂದು ಪರಿಷ್ಕರಿಸುವುದು—ಈ ನಾಲ್ಕು ಸೋಪಾನಗಳಲ್ಲಿ ಅಂಥ ಪಾಠಗಳನ್ನು ಬೋಧಿಸಬೇಕಾಗುತ್ತದೆ. ಈ ಕ್ರಮವನ್ನು ಅನುಸರಿಸುವಾಗ ಹರ್ಬಾರ್ಟನ ಬೋಧನಕ್ರಮದಂತೆಯೇ ಮಕ್ಕಳ ಅವಧಾನವನ್ನೂ ಉತ್ಸಾಹವನ್ನೂ ಪಾಠದ ಕಡೆ ಸೆಳೆಯುವುದು ಅನಿವಾರ್ಯ. ಹಿಂದಿನ ಪಾಠದಲ್ಲಿ ಆ ನಿಯಮ ಅಥವಾ ತತ್ವ ಅರಿತುಕೊಂಡದ್ದಾಗಿದ್ದರೆ ಅದರ ಸೂಕ್ಷ್ಮ ಪರಿಚಯವನ್ನು ಮೊದಲು ಮಾಡಿಕೊಡಬೇಕು. ಅನಂತರ ನಮ್ಮ ಮುಂದಿರುವ ಸಮಸ್ಯೆಯನ್ನು ಬಿಡಿಸುವ, ಲೆಕ್ಕವನ್ನು ಮಾಡುವ, ಅಥವಾ ಒಂದು ವಿಷಯದ ಮೇಲೆ ವಿವರಣೆಯನ್ನು ಕೊಡುವ ಅಂಶವನ್ನು ಮಕ್ಕಳ ಮುಂದಿರಿಸಿ ಅದನ್ನು ಸಾಧಿಸಲು ಆ ಸಮಸ್ಯೆ ತಮ್ಮದೆಂಬ ಮನೋಭಾವವನ್ನು ಮೂಡಿಸಬೇಕು. ಆ ಸಮಸ್ಯೆಯಲ್ಲಿ ಬಿಡಿಸಬೇಕಾದ ಪ್ರಧಾನ ಅಂಶಗಳನ್ನು ಎದ್ದು ಕಾಣುವಂತೆ ಅವರ ಮುಂದೆ ತರಬೇಕು. ಎರಡನೆಯ ಸೋಪಾನದಲ್ಲಿ ಆ ಸಮಸ್ಯೆಯ ಪರಿಹಾರಕ್ಕೆ ಉಚಿತವೆನಿಸುವ ನಿಯಮಕ್ಕೆ ಅದನ್ನು ಅಳವಡಿಸುವಂತೆ ಅವರಿಗೆ ಮಾರ್ಗದರ್ಶನ ನೀಡಬೇಕು. ಸಮಸ್ಯೆಯನ್ನು ಆ ನಿಯಮದ ಬೆಳಕಿನಲ್ಲಿ ಬಿಡಿಸಲು ಮಕ್ಕಳೇ ಪ್ರಯತ್ನಿಸಬೇಕು. ಆ ನಿಯಮ ಹಿಂದಿನ ದಿನ ಕಲಿತದ್ದಾದರೂ ಇರಬಹುದು; ಪುಸ್ತಕದಿಂದ ಅರಿಸಿಕೊಂಡದ್ದಾದರೂ ಇರಬಹುದು. ಸಮಸ್ಯೆಯನ್ನು ಆ ನಿಯಮದಿಂದ ಬಿಡಿಸುವಂತಾದಮೇಲೆ ಅದರ ಮುಖ್ಯಾಂಶಗಳನ್ನು ನಿಯಮದೊಡನೆ ಹೋಲಿಸಿ ಪರಿಶೀಲಿಸಬೇಕು, ಆ ನಿಯಮಕ್ಕೆ ಅದು ಹೊಂದುತ್ತದೆಯೇ

ಎಂದು ಆಲೋಚಿಸಬೇಕು. ಆಮೇಲೆ ಮಕ್ಕಳು ಕೊಟ್ಟ ಸಮಸ್ಯೆಗಳನ್ನು ನಿಯಮದ ಬೆಳಕಿನಲ್ಲಿ ವಿವರಿಸಲು ಶಕ್ತರಾಗಬೇಕು. ಕೊನೆಯ ಅಂತಸ್ತಿನಲ್ಲಿ ಹಾಗೆ ಸಮಸ್ಯೆಯನ್ನು ಬಿಡಿಸಿದ್ದು ಅಥವಾ ವಿಷಯವನ್ನು ವಿವರಿಸಿದ್ದು, ಲೆಕ್ಕವನ್ನು ಮಾಡಿದ್ದು ಸರಿಯಾಗಿದೆಯೋ ಎಂದು ತಾಳೆ ಹಾಕಿ ನೋಡಬೇಕು. ಪುಸ್ತಕದಲ್ಲಿರುವ ಉತ್ತರದೊಡನೆ ಹೋಲಿಸಿ ತೃಪ್ತಿಪಟ್ಟುಕೊಳ್ಳುವ ಮನೋಭಾವ ಹೋಗಬೇಕು. ತಪ್ಪು ಮಾಡಿದ್ದರೆ ಸ್ವತಂತ್ರವಾಗಿ ಅರಿತುಕೊಳ್ಳುವ, ಅದನ್ನು ತಾವೇ ತಿದ್ದಿ ಸರಿಪಡಿಸುವ ಅಭ್ಯಾಸವಾಗಬೇಕು.

ಈ ಕ್ರಮದಲ್ಲಿ ಮಕ್ಕಳೇ, ಸ್ವಪ್ರಯತ್ನದಿಂದ, ಕೊಟ್ಟ ಸಮಸ್ಯೆಯನ್ನು ನಿಯಮದ ಬೆಳಕಿನಲ್ಲಿ ಬಿಡಿಸಲು ಯತ್ನಿಸಬೇಕು. ಆ ವಿಶೇಷ ಸಮಸ್ಯೆಯನ್ನು ನಿಯಮದ ಬೆಳಕಿನಲ್ಲೇ ವಿವರಿಸುವುದು ಹೇಗೆ ಸಾಧ್ಯವೆಂಬ ಅಂಶವನ್ನು ಅವರು ಚೆನ್ನಾಗಿ ಮನದಟ್ಟುಮಾಡಿಕೊಳ್ಳಬೇಕು. ಜೊತೆಗೆ ಸಮಸ್ಯೆ ಬಿಡಿಸಿದ ಮೇಲೂ ಅದು ತಪ್ಪೋ ಸರಿಯೋ ಎಂದು ಪರಿಷ್ಕರಿಸಬೇಕು. ತಪ್ಪಾಗಿದ್ದ ಪಕ್ಷದಲ್ಲಿ ಪುನರಾವರ್ತಿಸಲೂ ಸಿದ್ಧರಾಗಿರಬೇಕು. ಕೊನೆಯ ಸೋಪಾನದಲ್ಲಿ ಮಕ್ಕಳು ತಾವು ಪಡೆದ ಉತ್ತರ ಸರಿಯೋ ಅಲ್ಲವೋ ಎಂಬುದನ್ನು ಅರಿಯದೆ ಹೋದರೆ, ಅಥವಾ ಉಪಾಧ್ಯಾಯರೇ ಅದನ್ನು ತಿಳಿಸಿಬಿಟ್ಟರೆ ಈ ಕ್ರಮದಿಂದ ನಿಜವಾಗಿಯೂ ಮಕ್ಕಳಿಗೆ ಶಿಕ್ಷಣವಾಗಲಾರದು.

ನಿಯಮ ನಿರೂಪಣೆಯ ಮತ್ತು ನಿಯಮ ಪ್ರಯೋಗದ ಬೋಧನ ಕ್ರಮಗಳಲ್ಲಿ ಹಲವು ಪ್ರಧಾನವಾದ ಭಿನ್ನತೆಗಳು ಕಂಡುಬರುತ್ತವೆ. ಅವನ್ನು ಮುಂದಿನ ಪುಟದಲ್ಲಿ ಪರಿಚಯ ಮಾಡಿಕೊಡಲಾಗಿದೆ.

ಹೀಗೆ ಈ ಎರಡು ಬೋಧನಕ್ರಮಗಳೂ ಒಂದಕ್ಕೊಂದಕ್ಕೆ ವ್ಯತಿರಿಕ್ತ ರೀತಿಯವಾದರೂ ನಿಜವಾದ ಬೋಧನೆಗೆ ಅವೆರಡನ್ನೂ ಉಪಯೋಗಿಸಿಕೊಳ್ಳುವುದು ಅಗತ್ಯ. ಮೊದಲನೆಯ ಕ್ರಮದಂತೆ ಒಂದು ತತ್ತ್ವವನ್ನು ನಿರೂಪಿಸಿದರೂ, ಆ ತತ್ತ್ವ ಸರಿಯೇ ಎಂದು ನಿಷ್ಕರ್ಷಿಸಿ ದೃಢಪಡಿಸಿಕೊಳ್ಳಬೇಕಾದರೆ ಎರಡನೆಯ ಕ್ರಮ ಅನಿವಾರ್ಯ. ಹರ್ಬಾರ್ಟನ ಐದನೆಯ ಸೋಪಾನ ಈ ಎರಡನೆಯ ಕ್ರಮವೇ ಆಗಿದೆ. ಆದ್ದರಿಂದ ಮೊದಲನೆಯ ಕ್ರಮಕ್ಕೆ ಎರಡನೆಯ ಕ್ರಮ ಪೂರಕದಂತಿದೆ. ಕೆಳದರ್ಜೆಯ ತರಗತಿಯಲ್ಲಿ ಮೊದಲನೆಯ ಕ್ರಮದಲ್ಲಿ ಪಾಠ ಮಾಡುವುದುತ್ತಮ. ಏಕೆಂದರೆ, ಮಕ್ಕಳು

ಆ ನಿಯಮಗಳನ್ನೂ, ತತ್ವಗಳನ್ನೂ, ಇನ್ನಿತರ ಸತ್ಯಾಂಶಗಳನ್ನೂ ಅವು ರೂಪುಗೊಂಡಿರುವ ರೀತಿಯಲ್ಲೇ ಪರಿಚಯ ಮಾಡಿಕೊಳ್ಳಲು ಅದು ಸಹಾಯವಾಗುತ್ತದೆ; ಜೊತೆಗೆ ಅವರಲ್ಲಿ ಸಂಶೋಧನೆಯ ಮತ್ತು ಸ್ವಾತಂತ್ರ್ಯದ ಮನೋಭಾವವನ್ನೂ ಹೆಚ್ಚಿಸಿದಂತಾಗುತ್ತದೆ; ಕ್ರಮವಾಗಿ ಆಲೋಚಿಸುವ ಶಕ್ತಿಯೂ ಬರುತ್ತದೆ. ಆದರೆ ಇದಕ್ಕಾಗುವ ಕಾಲವ್ಯಯ ಮಾತ್ರ ಹೆಚ್ಚು. ಆದರೂ ಚಿಂತೆಯಿಲ್ಲ. ಮೇಲ್ದರ್ಜೆಯ ಶಿಕ್ಷಣಶಾಲೆಗಳಲ್ಲಿ ಹೆಚ್ಚಾಗಿ ಎರಡನೆಯ ಕ್ರಮವನ್ನು ಅನುಸರಿಸುವುದು ಉತ್ತಮ.

| ನಿಯಮ ನಿರೂಪಣೆಯ ಬೋಧನಕ್ರಮ | ನಿಯಮ ಪ್ರಯೋಗದ ಬೋಧನಕ್ರಮ |
| --- | --- |
| ೧. ಮಾನವ ವರ್ಗ ಈ ಕ್ರಮದಲ್ಲೇ ಜ್ಞಾನವನ್ನು ಸಾಧಿಸಿದ್ದು; | ಒಂದು ಸಂತತಿಯಿಂದ ಮುಂದಣ ಸಂತತಿಗೆ ಈ ಕ್ರಮದಲ್ಲೇ ಜ್ಞಾನ ಹಸ್ತಗತವಾದ್ದು; |
| ೨. ಹೆಚ್ಚು ಕಾಲವೂ ಸಹನೆಯೂ ಇದಕ್ಕೆ ಅವಶ್ಯಕ; | ಬೋಧನಕಾರ್ಯ, ಕಲಿಯುವ ಕಾರ್ಯ ತ್ವರಿತವಾಗಿ ಸಾಗುತ್ತವೆ; |
| ೩. ಈ ಕ್ರಮದ ಬೋಧನೆಯಿಂದ, ಕಲಿವಿನಿಂದ, ಮಕ್ಕಳಲ್ಲಿ ಸ್ವತಂತ್ರವಾಗಿ ಆಲೋಚಿಸುವ ಶಕ್ತಿಯನ್ನು ಹೆಚ್ಚಿಸಬಹುದು; ಸಂಶೋಧನ ಮನೋಭಾವವನ್ನು ಹುಟ್ಟಿಸಬಹುದು | ಇತರರನ್ನು ಅವಲಂಬಿಸುವ ಮನೋಭಾವ ಬೆಳೆಯುತ್ತದೆ; ಇತರರ ಕೃತಿಗಳನ್ನು ಆಧಾರವಾಗಿಟ್ಟುಕೊಳ್ಳುವವರಾಗುತ್ತಾರೆ; |
| ೪. ಚದುರಿದ ಅನೇಕ ಅಂಶಗಳ ಆಧಾರದಮೇಲೆ ತತ್ವ ನಿರೂಪಣೆಯ ಕಡೆಗೆ ಇದು ಸಾಗುತ್ತದೆ. | ತತ್ವಗಳ ಆಧಾರದಿಂದ ವಿಷಯಗಳನ್ನು ವಿವರಿಸುವ ಕಡೆಗೆ, ಸಮಸ್ಯೆ ಬಿಡಿಸುವ ಕಡೆಗೆ ಇದು ಸಾಗುತ್ತದೆ. |

**೪. ಕಲಾಭಿನಂದನೆಯ ಪಾಠಗಳು:** ಕೇವಲ ಹೊಸದಾಗಿ ಜ್ಞಾನವನ್ನು ನೀಡುವುದರ, ದೋಷಗಳನ್ನು ತಿದ್ದುವುದರ ಜೊತೆಗೆ ಶಿಕ್ಷಣ ಒಳ್ಳೆಯ ಅಭ್ಯಾಸಗಳನ್ನೂ, ಕಾರ್ಯಕೌಶಲವನ್ನೂ ಸತ್ಯ ಸೌಂದರ್ಯಗಳ ಅಭಿಮಾನವನ್ನೂ ಮೂಡಿಸಬೇಕು. ಆದರಿಂದ ಜೀವನೋಪಾಯಕ್ಕೆ ಅನುಕೂಲವಾಗುವುದು ಮಾತ್ರ ಸಾಲದು: ಜೀವನವನ್ನು ಆನಂದಿಸಲೂ ಅದು ಸಹಾಯಮಾಡಬೇಕು. ಮನಸ್ಸು ಸಂಸ್ಕರಣಗೊಂಡು ಜೀವನ

ಸುಸಂಸ್ಕೃತವಾಗಬೇಕು. ಮ್ಯಾಥ್ಯೂ ಆರ್ನಾಲ್ಡ್ ರವರು ಹೇಳುವಂತೆ ಮಾನವನು ಸಾಧಿಸಿರುವ ಮಹಾಕೃತಿಗಳನ್ನೂ ಜಗತ್ತಿನ ಇನ್ನಿತರ ಸೃಷ್ಟಿಯ ಸತ್ಯ ಸೌಂದರ್ಯಗಳನ್ನೂ ಪರಿಚಯ ಮಾಡಿಕೊಳ್ಳುವುದು ಜೀವನ ಸಂಸ್ಕರಣಕ್ಕೆ ಆವಶ್ಯಕ. ನಮ್ಮ ವಿರಾಮಕಾಲವನ್ನು ಸದ್ವಿನಿಯೋಗಪಡಿಸಿಕೊಳ್ಳುವುದಕ್ಕೂ ಅದು ಅನಿವಾರ್ಯ. ಇಲ್ಲವಾದರೆ ಇತರ ಅನುಚಿತ ಹವ್ಯಾಸಗಳಲ್ಲಿ ಆ ಕಾಲ ವ್ಯರ್ಥವಾಗಿ ಹೋದೀತು. ಮಕ್ಕಳಲ್ಲಿ ಆ ಕಾರ್ಯಕ್ಕೆ ಆವಶ್ಯಕವಾದ ಮನೋಭಾವವನ್ನೂ ಶಕ್ತಿ ಸಾಮರ್ಥ್ಯಗಳನ್ನೂ ಬೆಳಸುವುದು ಶಾಲೆಗಳ ಕರ್ತವ್ಯಗಳಲ್ಲೊಂದು.

ಸುಂದರವಾದ ಒಂದು ವಸ್ತುವನ್ನು ಕೊಂಡಾಗ, ಸೊಗಸಾದ ಒಂದು ಚಿತ್ರವನ್ನು ನೋಡಿದಾಗ, ರಸವತ್ತಾದ ಒಂದು ಕವಿತೆಯನ್ನು ಓದಿದಾಗ, ಇಂಪಾದ ಒಂದು ಗಾನವನ್ನು ಕೇಳಿದಾಗ, ಆನಂದಿಸುವುದು ಮಾನವನ ಹುಟ್ಟುಗುಣ. ಅದರಿಂದ ಮಾನಸ ಸಂಸ್ಕಾರವಾಗುವುದರ ಜೊತೆಗೆ ನಮ್ಮ ಕಷ್ಟ ಸುಖಗಳನ್ನೆಲ್ಲ ಬದಿಗಿಟ್ಟು ಸ್ವಲ್ಪಕಾಲವಾದರೂ ಸೌಂದರ್ಯದ ಪವಿತ್ರಭಾವದ ಒಂದು ಅತಿಮಾನುಷ ಜಗತ್ತಿನಲ್ಲಿ ವಿಹರಿಸುವಂತಾಗಿ ಜೀವನ ತೃಪ್ತಿ ಸಂತೋಷಗಳಿಂದ ಬಾಳು ಸಾರ್ಥಕವೆನಿಸಿ ರಸಾವಿಷ್ಟಗೊಳ್ಳುತ್ತದೆ. ಹೃದಯ ಆವೇಶದಿಂದ ನಲಿದು ನರ್ತಿಸುತ್ತದೆ. ಸತ್ಯ-ಸೌಂದರ್ಯಗಳಲ್ಲಿ ಅಭಿಮಾನ ಹುಟ್ಟುತ್ತದೆ. ನಮ್ಮ ಕಲೋಪಾಸನೆಯನ್ನು ಪ್ರಚೋದಿಸಿ ಕಲಾವಿದರನ್ನಾಗಿಯೂ ಮಾಡಬಹುದು. ಇಂಥ ಸಾಧನೆಯಿಂದ ವಿರಾಮವನ್ನು ಸದ್ವಿನಿಯೋಗಿಸಿಕೊಳ್ಳುವುದರ ಜೊತೆಗೆ ಹಲವರಿಗೆ ಜೀವನೋಪಾಯವೂ ಸಾಧ್ಯವಾಗುತ್ತದೆ.

ಶಿಕ್ಷಣದಿಂದ ದೊರಕಬೇಕಾದ ಸತ್ಫಲಗಳಲ್ಲಿ ಕ ಲಾ ಭಿ ನಂ ದ ನೆ ಇಷ್ಟೊಂದು ಮುಖ್ಯವಾದರೂ ನಮ್ಮ ಶಾಲೆಗಳು ಅದರ ಕಡೆಗೆ ತಕ್ಕಷ್ಟು ಗಮನ ಕೊಡುತ್ತಿಲ್ಲ. ಅದಕ್ಕೆ ಹಲವು ಕಾರಣಗಳೂ ಇವೆ: ಮೊದಲನೆಯದಾಗಿ, ಅಂಕಿಅಂಶಗಳನ್ನೇ ಪ್ರಧಾನವಾಗಿ ಕೇಳುತ್ತಿರುವ ಇಂದಿನ ಪರೀಕ್ಷೆಗೆ ಮಕ್ಕಳನ್ನು ಸಿದ್ಧಪಡಿಸಬೇಕಾಗಿರುವುದರಿಂದ ಆ ಕಡೆ ತಕ್ಕಷ್ಟು ಗಮನ ಕೊಡಲು ಅಸಾಧ್ಯವಾಗಿದೆ; ಎರಡನೆಯದಾಗಿ, ಕಲಾಭಿನಂದನೆಯನ್ನು ಮಕ್ಕಳಲ್ಲಿ ಮೂಡಿಸುವ ನಿಜವಾದ ಬೋಧನಕ್ರಮವನ್ನು ಬಲ್ಲ

ಉಪಾಧ್ಯಾಯರು ವಿರಳ; ಕೊನೆಯದಾಗಿ ಜೀವನೋಪಾಯಕ್ಕೆ ಅದು ನೆರವಾಗಲಾರದೆಂಬ ಜನಸಾಮಾನ್ಯದ ಔದಾಸೀನ್ಯ. ಮಾನವನು ಇನ್ನಿತರ ಪ್ರಾಣಿವರ್ಗಕ್ಕಿಂತ ಮೇಲ್ತರದವನು. ಸೃಷ್ಟಿಯ ಮಿಕ್ಕೆಲ್ಲ ಸೊಗಸನ್ನೂ ನೋಡಿ ಆನಂದಿಸುವ ಭಾಗ್ಯ ಅವನಿಗಿದೆ. ಅಂಥವನು ಕಲಾಭಿನಂದನೆಗೆ ವಿಮುಖನಾಗುವುದೆಂದರೆ ಮತ್ತೆ ಪಾಶವೀ ಜೀವನಕ್ಕೆ ಹಿಂದಿರುಗಿದಂತೆಯೇ. ಈ ಅಂಶವನ್ನು ನಮ್ಮ ಸಮಾಜ ಅರಿತು ನಮ್ಮ ಮಕ್ಕಳಲ್ಲಿ ಕಲಾಭಿನಂದನೆಯನ್ನು ಮೂಡಿಸಲು ಹೆಚ್ಚಿನ ಆಸಕ್ತಿ ತೋರಬೇಕು. ಭಾಷೆ, ಚಿತ್ರಕಲೆ, ಸಂಗೀತ ಮುಂತಾದವನ್ನು ಪರೀಕ್ಷಿಸುವಾಗ ಪರೀಕ್ಷಕರೂ ಮಕ್ಕಳ ಕಲಾಭಿರುಚಿಯನ್ನು ಅಳೆಯುವುದೇ ಪ್ರಧಾನಕಾರ್ಯವೆಂದು ಅರಿಯಬೇಕು. ನಮ್ಮ ಶಿಕ್ಷಕವರ್ಗದವರೂ ಆ ರೀತಿಯ ಪಾಠಬೋಧನಕ್ರಮವನ್ನು ಅರಿತುಕೊಳ್ಳಬೇಕು.

ಯಾವ ಪಾಠವನ್ನೇ ಬೋಧಿಸುತ್ತಿರಲಿ, ಸತ್ಯ, ಸಾಹಸ, ಸೌಂದರ್ಯ, ಮಾಧುರ್ಯ ಮುಂತಾದ ಆನಂದವೀಯುವ ಸನ್ನಿವೇಶಗಳಲ್ಲಿ ಮಕ್ಕಳಿಗೆ ಅಭಿಮಾನ ಆಸಕ್ತಿಗಳು ಮೂಡುವಂತೆ ಅವಕಾಶ ಮಾಡಿಕೊಳ್ಳಬಹುದು. ಹಾಗೂ ಸಾಹಿತ್ಯ, ಚಿತ್ರಕಲೆ, ಸಂಗೀತ, ಶಿಲ್ಪಶಾಸ್ತ್ರ ಮತ್ತು ಇನ್ನಿತರ ಕುಶಲಕಲೆಗಳನ್ನು ಬೋಧಿಸುವಾಗ ಆ ಕಾರ್ಯವನ್ನು ವಿಶೇಷ ರೀತಿಯಲ್ಲಿ ಸಾಧಿಸಬಹುದು. ಆದರೆ ಉಪಾಧ್ಯಾಯರು ಆ ಪಾಠಬೋಧನೆಯ ಉತ್ತಮ ಕ್ರಮವನ್ನು ಅನುಸರಿಸಿದರೆ ಮಾತ್ರ ಆ ಕಾರ್ಯಸಾಧನೆಯಾಗುವುದು; ಇಲ್ಲದಿದ್ದರೆ, ಪಾಠ ಯಾಂತ್ರಿಕವಾಗಿ ತೋರಿ, ಮಕ್ಕಳಿಗೆ ಬೇಸರ ಹಿಡಿಸೀತು. ಎಂದಮೇಲೆ ಕಲಾಭಿನಂದನೆಯ ಪಾಠಬೋಧನಕ್ರಮ ಎಲ್ಲ ಉಪಾಧ್ಯಾಯರಿಗೂ ಪರಿಚಯವಾಗಬೇಕು.

ಸುಂದರ ಸನ್ನಿವೇಶಗಳು ಆನಂದ ಹುಟ್ಟಿಸಿ ಮನಸ್ಸನ್ನೂ ಜೀವನವನ್ನೂ ಸಂಸ್ಕರಿಸಬಲ್ಲವೆಂದು ಹಿಂದೆ ವಿವರಿಸಿದೆಯಷ್ಟೆ. ಹಲವರು ಆ ಸನ್ನಿವೇಶಗಳಿಂದ ಯಾವ ವಿಧವಾದ ರಸಭಾವವನ್ನೂ ತಾಳುವುದಿಲ್ಲ. ಅದಕ್ಕೆ ಕಾರಣ ಅವರ ಅಭಿರುಚಿ ಆ ಮಾರ್ಗದಲ್ಲಿ ಬೆಳೆಯದಿರುವುದೇ ಆಗಿದೆ. ಸೌಂದರ್ಯ ಪ್ರಸಾದನ ಅವರ ಭಾಗಕ್ಕೆ ಶೂನ್ಯವಾದಂತೆಯೇ. ಅಂಥವರ ಜೀವನ ಪೂರ್ಣವಾದಂತಿಲ್ಲ: ಅದಕ್ಕೆ ಹೊಣೆಗಾರಿಕೆ ಬಹುಮಟ್ಟಿಗೆ ನಮ್ಮ ಶಿಕ್ಷಣ ಸಂಸ್ಥೆಗಳೇ ಎಂದು ಹೇಳದೆ ವಿಧಿಯಿಲ್ಲ.

ನಾವು ಅಗಾಧವಾಗಿ ಜ್ಞಾನಾರ್ಜನೆ ಮಾಡಿದರೂ ಅದರ ಅಂತರಾಳ ದಲ್ಲಿರಬಹುದಾದ ರಸಗಳು ನಮ್ಮ ಮನಸ್ಸು ಮತ್ತು ಜೀವನವನ್ನು ಪ್ರಚೋದಿಸಲಾರದೆ ಹೋದರೆ ಆ ಜ್ಞಾನ ನಮಗೊಂದು ಹೊರೆ ಮಾತ್ರ: ಅದನ್ನು ಅಭಿನಂದಿಸಿದಂತಾಗಲಾರದು. ಅಂಥ ಸುಂದರ ಕೃತಿಗಳ ಮತ್ತು ಸನ್ನಿವೇಶಗಳ ಅಂತರಂಗದಲ್ಲಿರಬಹುದಾದ ಕಲೆಯನ್ನು ಅರಿತು, ಆನಂದಿಸಿ ಅಭಿನಂದಿಸಿ ಬಾಳಬೇಕು. ಕಲೋಪಾಸನೆ ಆರಂಭವಾಗಿ ಕಲಾಜೀವನ ಸಿದ್ಧಿಸಬೇಕು. ನಾವು ಅಭಿನಂದಿಸುವ ಕಲೆಗೆ ಆಧಾರವಾದ ರಸಾನುಭವಗಳು ವ್ಯಕ್ತಿಗಳ ಸಮಾಜ ಜೀವನದಲ್ಲೋ, ರಸಜೀವನದಲ್ಲೋ, ಉದಾತ್ತ ದೃಷ್ಟಿ ಧ್ಯೇಯಗಳಲ್ಲೋ, ಕಾರ್ಯಕೌಶಲ್ಯದಲ್ಲೋ ಇರಬಹುದು.

ಮೇಲಿನ ವಿವೇಚನೆಯಿಂದ ಕಲಾಭಿನಂದನೆಯ ಪಾಠಬೋಧನೆಯ ಉದ್ದೇಶ ಸ್ಥೂಲವಾಗಿ ಸ್ಪಷ್ಟಪಟ್ಟಿದೆ. ಸಾಹಿತ್ಯ ಕಲೆಯೊಂದರ ಅಭ್ಯಾಸವನ್ನು ತೆಗೆದುಕೊಳ್ಳುವ: ಒಂದು ಗದ್ಯವನ್ನೋ ಪದ್ಯವನ್ನೋ ಓದಿ, ಆನಂದಿಸಿ ಅದರ ಬೆಲೆಯನ್ನು ತೂಗಿದ ಮೇಲೆ ಆದರಲ್ಲಿರುವ ಉದಾತ್ತ ಧ್ಯೇಯಗಳನ್ನೂ ಕೌಶಲ್ಯವನ್ನೂ ಅನುಭವಿಸುವ ಶಕ್ತಿಯುಂಟುಮಾಡುವುದು; ಮಾನವನ ಮತ್ತು ಸೃಷ್ಟಿಯ ಇನ್ನಿತರ ಕೃತಿಗಳ ಸ್ವಭಾವವನ್ನು ಅರಿತು ಅವುಗಳ ಚಿತ್ತವೃತ್ತಿಯಲ್ಲಿ ತಮ್ಮ ರಸಜೀವನವನ್ನೂ ಹೊಂದಿಸಿಕೊಂಡು ಬಾಳುವಂತೆ ಅನುಗೊಳಿಸುವುದು; ಅಂಥ ಉಪಾಸನಾ ಜೀವನದಿಂದ ಉದಾತ್ತಗೊಂಡು ಮುಂದೆ ತಾವೂ ಸಾಹಿತ್ಯ ಸೃಷ್ಟಿಗೆ ಕೈಹಾಕಲು ಶಕ್ತಿ ಪಡೆದುಕೊಳ್ಳುವುದು—ಇವೇ ಅಭಿನಂದನಾ ಪಾಠಬೋಧನೆಯ ಉದ್ದೇಶಗಳು. ಇವುಗಳಲ್ಲಿ ಕಲಾಸೃಷ್ಟಿ ಎಲ್ಲರಿಗೂ ಸಾಧ್ಯವಾಗದಿರಬಹುದು. ಆದರೆ ಅದು ಬೋಧಕರ ಮತ್ತು ಉಪಾಸಕರ ಮನಸ್ಸಿನಲ್ಲಿರಬೇಕಾದ ಅಂತಿಮ ಧ್ಯೇಯ.

**ಬೋಧನಕ್ರಮ:** ತರಗತಿಯಲ್ಲಿ ನಿಂತು 'ಇದು ಚೆನ್ನಾಗಿದೆ; ಅದು ಚೆನ್ನಾಗಿದೆ; ಅದನ್ನು ಅಭಿನಂದಿಸಿ' ಎಂದು ಪಾಠವನ್ನು ಮಕ್ಕಳಮೇಲೆ ಹೇರಿದರೆ ಅವರು ಅದನ್ನು ಅಭಿನಂದಿಸಲಾರರು: ಅದಕ್ಕೆ ಬದಲು ಬೇಸರ ಜಿಗುಪ್ಸೆ ಪಡೆದಾರು. ಜೊತೆಗೆ ಉಪಾಧ್ಯಾಯರ ಬೋಧನಶಕ್ತಿಯಲ್ಲೇ ಅವರಿಗೆ ಅನುಮಾನ ಹುಟ್ಟೀತು. ಉಪಾಧ್ಯಾಯರು ತಾವೇ ಸ್ವತಃ ಮನೆ

ಯಲ್ಲಿ ಆ ಪಾಠವನ್ನು ಚೆನ್ನಾಗಿ ಓದಿ ಆನಂದಿಸಿ ಅಭಿನಂದಿಸಿರಬೇಕು. ಅಂದು ಮಾತ್ರ ಅವರು ಉಚಿತವಾದ ರೀತಿಯಲ್ಲಿ ಪಾಠವನ್ನು ಮಾಡಲು ಶಕ್ತಿ ಪಡೆದಾರು; ಪಾಠ ಮೊದಲಿಂದ ಕೊನೆಯವರೆಗೂ ಮಕ್ಕಳಿಗೆ ಲೀಲೆ ಯಂತೆ ಭಾಸವಾಗಬೇಕು. ಇತರರು ತಮ್ಮಮೇಲೆ ಹೊರಿಸಿದ ಹೊರೆ ಯೆಂದುಕೊಂಡರೆ ಅಭಿನಂದನಾ ಪಾಠದ ಉದ್ದೇಶವೇ ಹಾಳಾಗುತ್ತದೆ.

ಕಲಾಭಿನಂದನೆಯ ಯಾವ ಪಾಠವನ್ನೇ ಮಾಡುತ್ತಿರಲಿ, ಅದರಲ್ಲಿರ ಬಹುದಾದ ನ್ಯೂನತೆಗಳನ್ನು ಪರಿಶೀಲಿಸುತ್ತ ಮಕ್ಕಳಿಗೆ ಅದು ಹೇಗೆ ಉತ್ತಮಗೊಳ್ಳಬಹುದಾಗಿತ್ತೆಂದು ಹೇಳುತ್ತ ಹೋದರೆ ಅವರಿಗೆ ಅದರಲ್ಲಿ ಅಭಿಮಾನ ಆಸಕ್ತಿ ತಪ್ಪುತ್ತವೆ. ಈ ರೀತಿಯ ವಿಮರ್ಶೆ ಮೇಲ್ದರ್ಜೆಯ ಶಾಲೆಗಳಲ್ಲಿ ಉಚಿತವೆನಿಸಿದರೂ ಸಣ್ಣ ಮಕ್ಕಳ ತರಗತಿಗಳಲ್ಲಿ ಅನಾವಶ್ಯಕ. ಜೊತೆಗೆ, ಪಾಠಕ್ಕೆ ಸಂಬಂಧಿಸಿದ ಜ್ಞಾನವನ್ನೇ ಪ್ರಧಾನವೆಂದು ಭಾವಿಸಿದರೆ ಅದರಲ್ಲಿರುವ ಸೌಂದರ್ಯವನ್ನು ಮಕ್ಕಳು ಅನುಭವಿಸಲಾರರು. ಆದ್ದ ರಿಂದ ಜ್ಞಾನಾಂಶವನ್ನು ಗೌಣವಾಗಿಯೂ, ರಸಾನುಭವವನ್ನು ಪ್ರಧಾನ ವಾಗಿಯೂ ಅವರ ಮುಂದಿಡಬೇಕು. ಪೀಠಿಕೆ ಹಾಕುವಾಗ ಬಹು ಕಾಲ ಕಳೆಯುವುದಾಗಲಿ, ಅತಿ ವಿವರ ಕೊಡುವುದಾಗಲಿ ಉಚಿತವಲ್ಲ. ಮಕ್ಕಳಿಗೆ ಆಸಕ್ತಿಯಿರುವುದು ಕಲೆಗಾರ ರಚಿಸಿರುವ ಕೃತಿಯಲ್ಲಿ. ಆದ್ದರಿಂದ ತಡ ಮಾಡದೆ ಪದ್ಯವನ್ನೋ ಚಿತ್ರವನ್ನೋ ಸಂಗೀತವನ್ನೋ ಮಕ್ಕಳು ಅನು ಭವಿಸುವಂತೆ ಇಡಬೇಕು. ಒಂದು ಪದ್ಯವನ್ನೇ ಬೋಧಿಸುತ್ತಿದ್ದೇವೆಂದಿ ಟ್ಟುಕೊಳ್ಳುವ: ಆ ಪದ್ಯವನ್ನು ಉಪಾಧ್ಯಾಯರು ಮಾದರಿಯಾಗಿ ಮೊದಲು ಓದಬೇಕು. ಅದರಿಂದ ಪೂರ್ಣ ಅರ್ಥ ಮಕ್ಕಳಿಗೆ ಆಗ ತಿಳಿಯು ದಿದ್ದರೂ ಚಿಂತೆಯಿಲ್ಲ. ಅದರ ಪ್ರಭಾವ ಅವರ ಮಾನಸ ಸರಸಿಯಲ್ಲಿ ರಸದಲೆಗಳನ್ನು ಹುಟ್ಟಿಸುವಂತಾದರೆ, ಅಷ್ಟೇ ಸಾಕು. ಅನಂತರ ನಿಧಾನ ವಾಗಿ ಮತ್ತೊಂದು ಸಲ ಓದಬಹುದು. ಬಾಲಕರಿಂದಲೂ ಓದಿಸಬಹುದು. ಹಾಗೆಯೇ ಸಂಗೀತಪಾಠದಲ್ಲೂ ಅವರ ಮುಂದೆ ಸಂಗೀತವನ್ನು ಹಾಡಬೇಕು. ಅನಂತರ ಅವರನ್ನೂ ಹಾಡಲು ಪ್ರೋತ್ಸಾಹಿಸಬೇಕು. ಆರಂಭದೆಶೆಯಲ್ಲಿ ಪಾಠದ ಮೇಲೆ ಪ್ರಶ್ನೆಗಳ ಸುರಿಮಳೆ ಹಾಕಬಾರದು; ಅಥವಾ ಯಾವುದು 'ಚೆನ್ನಾಗಿದೆ' ಎಂದು ಪ್ರಶ್ನಿಸಲೂ ಬಾರದು. ಅವರಿಗೆ ಆ ಕೃತಿಯನ್ನು

ನೋಡಿ, ಕೇಳಿ ಅನುಭವಿಸಲು ತಕ್ಕಷ್ಟು ಕಾಲ ಬೇಕು. ತಾವಾಗಿಯೇ ಅದರ ಸೊಗಸನ್ನು ಕುರಿತು ಮಾತನಾಡಲು ಬಂದರೆ ಅಗತ್ಯವಾಗಿ ಅವಕಾಶ ಕೊಡಬೇಕು. ಅವರು ಅದನ್ನು ಓದುತ್ತಿರುವಾಗ, ಹಾಡುತ್ತಿರುವಾಗ, ಅಥವಾ ಮೌನವಾಗಿ ಪಠಿಸುತ್ತಿರುವಾಗ, ಅವರ ಮನಸ್ಸಿನಲ್ಲಾಗುವ ರಸಾನುಭವ ವನ್ನು ಉಪಾಧ್ಯಾಯರು ಅವರ ಮುಖಚರ್ಯೆಯಿಂದ ಅರಿತುಕೊಳ್ಳಬೇಕು. ಕ್ರಮಕ್ರಮವಾಗಿ ಪ್ರಶ್ನೆಗಳ ಮೂಲಕ, ಸಲಹೆಗಳ ಮೂಲಕ, ತಮ್ಮ ರಸ ಸ್ಫೂರ್ತಿ ಪ್ರದರ್ಶನದ ಮೂಲಕ, ಆ ಅನುಭವವನ್ನು ತಮ್ಮ ಧ್ವನಿಯಲ್ಲೂ ಮೂಡಿಸುವುದರಿಂದ (ಭಾವಧ್ವನಿಯಿಂದ) ಆ ಪದ್ಯದ ಅರ್ಥವನ್ನೂ ಮಾಧುರ್ಯವನ್ನೂ ಮಕ್ಕಳು ಹೆಚ್ಚು ಹೆಚ್ಚಾಗಿ ಸವಿಯುವಂತೆ ಮಾಡಬೇಕು. ಆ ಕೃತಿಯನ್ನು ಮೊದಲಿಂದ ಕೊನೆಯವರೆಗೆ ಪೂರ್ಣವಾಗಿ ವಿವರಿಸುವುದರ ಬದಲು ಉಪಾಧ್ಯಾಯರು ಮಕ್ಕಳು ಅದರ ಪೂರ್ಣ ಮಾಧುರ್ಯವನ್ನು ಸವಿಯಲು ಅನುಕೂಲಿಸುವ ಸಹಾಯಕರಂತಿರಬೇಕು. ತಾವು ಗೌಣ ವಾಗಿದ್ದುಕೊಂಡು, ತಮ್ಮ ಅಭಿಪ್ರಾಯವನ್ನು ಅವರಮೇಲೆ ಹೇರಲು ಯತ್ನಿ ಸದೆ, ಕ್ಲಿಷ್ಟ ಪದಗಳನ್ನೋ, ಆಳವಾದ ಭಾವನೆಗಳನ್ನೋ, ನೂತನವಾದ ಸನ್ನಿವೇಶವನ್ನೋ, ಇತರ ವೈಶಿಷ್ಟ್ಯಗಳನ್ನೋ, ವಿವರಣೆ, ಸಲಹೆ, ಧ್ವನಿ ಮುಂತಾದುವುಗಳಿಂದ ಪ್ರದರ್ಶಿಸಿ ಮಕ್ಕಳು ಆನಂದಿಸಲು ಅವಕಾಶವಾಗು ವಂತೆ ಅದನ್ನು ಸ್ಫುಟೀಕರಿಸಬೇಕು. ನಮ್ಮ ಪ್ರಾಥಮಿಕ ಶಾಲೆಗಳಲ್ಲಿ ಸುಲಭ ವಾದ ಪದ್ಯಭಾಗಗಳನ್ನು ರಾಗಮಯವಾಗಿಯೂ ಉತ್ಸಾಹದಿಂದಲೂ ರಸೋದ್ರೇಕವಾಗುವಂತೆಯೂ ಮಕ್ಕಳು ಹೇಳುವಂತಾದರೆ ಉಪಾಧ್ಯಾಯರು ಬಹುಮಟ್ಟಿಗೆ ಕೃತಕೃತ್ಯರಾದಂತೆ. ಅದರಲ್ಲಿರಬಹುದಾದ ಅರ್ಥ ಆ ಕೂಡಲೇ ಅರಿವಾಗದಿದ್ದರೂ ಆನಂದ ಹುಟ್ಟಿಸಿರುವ ಅದರ ಅರ್ಥ ತಿಳಿಯಲು ಅವರಿಗೆ ಕಾತರ ಹುಟ್ಟೇ ಹುಟ್ಟುತ್ತದೆ. ಆಗ ಅದರ ಅರ್ಥವನ್ನು ಹೇಳಿಕೊಡಬಹುದು. ಸೆಕೆಂಡರೀ ಶಾಲೆಗಳಲ್ಲಿ ಪದ್ಯವನ್ನು ಓದಿ ಪದ್ಯದ ಪದ ವಿಭಾಗಮಾಡಿ, ಪದಶಃ ಅರ್ಥ ಹೇಳಿ, ವ್ಯಾಕರಣಾಂಶಗಳನ್ನು ತಿಳಿಸಿ, ಕೊನೆಗೆ, ಸಾರಾಂಶ ವನ್ನು ಬರಸಿ, ಕೃತಕೃತ್ಯರಾದೆವೆಂದು ಭಾವಿಸುತ್ತಿರುವ ಉಪಾಧ್ಯಾಯರು ಮಕ್ಕಳಲ್ಲಿ ಕಲಾಭಿನಂದನೆಯನ್ನಾಗಲಿ, ಸೌಂದರ್ಯಾಭಿರುಚಿಯನ್ನಾಗಲಿ ಹುಟ್ಟಿಸಲಾರರೆಂಬ ಅಂಶವನ್ನು ಮರೆಯಬಾರದು. ಅದರ ಬದಲು ರಾಗ

ಮಯವಾಗಿ, ಅರ್ಥಗಳೂ ಭಾವಗಳೂ ಸ್ಫುಟಗೊಳ್ಳುವಂತೆ ಹಲವು ಸಲ ಮಕ್ಕಳ ಮುಂದೆ ಓದಿ, ಅವರಿಂದಲೂ ಅದೇ ರೀತಿಯಲ್ಲಿ ಓದಿಸಿ, ಪದ್ಯದ ಸ್ಥೂಲ ಅರ್ಥವನ್ನೂ ಅರಿಯುವಂತಾದರೆ ಎಷ್ಟೋ ಉತ್ತಮವೆನಿಸುತ್ತದೆ. ವಾಕ್ಯಾರ್ಥ, ಅಲಂಕಾರ, ಶ್ಲೇಷಾರ್ಥ, ಛಂದಸ್ಸು, ಮುಂತಾದ ಪಾರಿಭಾಷಿಕ ಜ್ಞಾನಕ್ಕೆ ಅಭಿನಂದನಾ ಪಾಠದ ತರಗತಿಗಳನ್ನು ಉಪಯೋಗಿಸುವುದು ಮಕ್ಕಳಿಗೆ ಪಾಠದಲ್ಲಿ ನಿರಾಸಕ್ತಿ ಹುಟ್ಟಿಸುತ್ತದೆ. ಹಾಗೆಯೇ ಪದ್ಯದ ಅರ್ಥವನ್ನು ಉಪಾಧ್ಯಾಯರ ಸ್ವಂತ ವಾಕ್ಯದಲ್ಲಿ ಬರಸುವುದೂ ಉಚಿತವಲ್ಲ. ಮಕ್ಕಳು ಅಭಿನಂದಿಸಬೇಕಾಗಿರುವುದು ಕವಿಯ ಶೈಲಿಯನ್ನು— ಉಪಾಧ್ಯಾಯರದನ್ನಲ್ಲ. ವಿವರಿಸಿ ಹೇಳುವಾಗಲೂ ಕವಿಯ ಶೈಲಿಯನ್ನೇ, ಭಾಷೆಯನ್ನೇ, ಉಪಯೋಗಿಸುವುದುತ್ತಮ. ಪಾಠ ಮುಗಿಯುವುದರೊಳಗಾಗಿ ಅಲ್ಲಿರಬಹುದಾದ ಕ್ಲಿಷ್ಟ ಭಾಗಗಳನ್ನೆಲ್ಲ ಪರಿಹರಿಸಿ ಆ ಕೃತಿಯ ಅಂತರಾತ್ಮವನ್ನು ಹೊಕ್ಕು ರಸಾನುಭವ ಮಾಡಿಕೊಳ್ಳಲು ಮಕ್ಕಳಿಗೆ ಸಹಾಯಕವಾಗಬೇಕು.

ಪದ್ಯ ಪಾಠ ಬೋಧಿಸುವಾಗ ಮಕ್ಕಳು ಮೂರು ದೃಷ್ಟಿಯಲ್ಲಿ ಅದರ ಸೊಗಸನ್ನು ಅನುಭವಿಸಿ ಆನಂದಿಸಿ ಅಭಿನಂದಿಸಬೇಕು: ಅದರ ಭಾವನೆಗಳು ರಸೋತ್ಪಾದಕ ಸನ್ನಿವೇಶಗಳು ಮತ್ತು ಶೈಲಿ—ಈ ಅಂಶಗಳನ್ನು ಮಕ್ಕಳು ಆನಂದಿಸಿ ಅಭಿನಂದಿಸಬೇಕು.

ನಮ್ಮ ಶಾಲೆಗಳಲ್ಲಿ ಮೌನವಾಗಿ ಓದಿಕೊಳ್ಳುವ ಅಭ್ಯಾಸ ಕಡಮೆಯಾಗುತ್ತಿದೆ. ಭಾವನೆಗಳನ್ನು ತಿಳಿದುಕೊಳ್ಳಲು ಮೌನವಾಗಿ ಓದುವುದು ಉತ್ತಮ. ಇದರಿಂದ ಪಾಠದಲ್ಲಿರುವ ಭಾವನೆಗಳನ್ನು ಮಕ್ಕಳು ಚೆನ್ನಾಗಿ ಅರಿಯಬಲ್ಲರು. ಉಪಾಧ್ಯಾಯರು ಒಂದೆರಡು ಸಲ ಮಾದರಿಯಾಗಿ ಓದಿದಮೇಲೆ, ಮಕ್ಕಳು ಸರಾಗವಾಗಿ ಓದುವುದನ್ನು ಕಲಿತಮೇಲೆ ೫–೧೦ ನಿಮಿಷಗಳ ಕಾಲ ಎಲ್ಲರೂ ಮೌನವಾಗಿ ಓದಲು ಅವಕಾಶ ಕಲ್ಪಿಸಬೇಕು. ಆಗ ಕಷ್ಟವಾದ ಪದಗಳನ್ನು ಗಣಿಸಬೇಕಾಗಿಲ್ಲ. ಇಡೀ ಪದ್ಯದ ಸಾಧಾರಣ ಭಾವನೆ ಮನಸ್ಸಿಗಾದರೆ ಸಾಕು. ಮಕ್ಕಳು ಕಷ್ಟವಾದ ಪದಗಳ ಅರ್ಥ ಕೇಳಿದರೆ, ಹಲವು ಸನ್ನಿವೇಶಗಳನ್ನು ವಿವರಿಸಲು ತಾವಾಗಿ ಕೇಳಿದರೆ, ಉಪಾಧ್ಯಾಯರು ಸಹಾಯಮಾಡಬಹುದು. ತಮಗೆ ಪದ್ಯದಲ್ಲಿ ಅರ್ಥವಾಗದ

ಭಾಗವನ್ನು ಅವರೇ ಕೇಳುವಂತಾಗಬೇಕು. ಆಗ ಅವರು ನಿಜವಾಗಿಯೂ ಆಸಕ್ತಿಯಿಂದ ಅದನ್ನು ಅರಿತು ಆನಂದಿಸಿ, ಅಭಿನಂದಿಸುವ ಕಾರ್ಯದಲ್ಲಿ ತೊಡಗಿದ್ದಾರೆಂದು ತಿಳಿಯಬಹುದು. ಹಾಗೆಯೇ ಕಾವ್ಯದ ರಸವನ್ನೂ ಅನುಭವಿಸಬೇಕು. ಎರಡನೆಯ ಅಭಿನಂದನಾಂಶ ಪದ್ಯದಲ್ಲಿರುವ ರಸವಿಶೇಷಗಳು: ಎಲ್ಲ ರೀತಿಯ ಅಭಿನಂದನಾ ಪಾಠಗಳೂ ರಸಪ್ರಧಾನವಾದವು. ಅವುಗಳಲ್ಲಿರುವ ರಸೋತ್ಪಾದಕ ಸನ್ನಿವೇಶಗಳನ್ನು ಅರಿತು, ಆ ಸನ್ನಿವೇಶಗಳು ನಮ್ಮ ಮನಸ್ಸಿನಲ್ಲೂ ರಸದಲೆಗಳನ್ನು ಮೂಡಿಸುವಂತಾದರೆ ಆ ಕೃತಿಯ ಕವಿ ತಳೆದಿರಬಹುದಾದ ಮನೋಭಾವ ನಮ್ಮಲ್ಲೂ ಮೂಡಿದಂತಾಗುತ್ತದೆ. ಪದ್ಯದಲ್ಲಿರುವ ರಸಮಯ ಸನ್ನಿವೇಶಗಳು ಮಕ್ಕಳ ಸಂವೇದನೆಗಳನ್ನು ಉಚಿತ ರೀತಿಯಲ್ಲಿ ಸಂಸ್ಕರಿಸುವಂತಾಗಬೇಕು. ಈ ರಸಪೋಷಣೆ ಕವಿಯ ಶೈಲಿಯ ಮಾಧುರ್ಯ, ಗಾಂಭೀರ್ಯ, ಮುಂತಾದ ಲಕ್ಷಣಗಳಿಂದಲೂ, ಆಸಕ್ತಿ ಹುಟ್ಟಿಸುವ ಸನ್ನಿವೇಶ ರಚನೆಯಿಂದಲೂ ಆಗಿರುತ್ತದೆ. ಆ ಅಂಶಗಳನ್ನು ಮಕ್ಕಳು ಅನುಭವಿಸಿ ಆನಂದಿಸಬೇಕು; ಶೈಲಿಯ ಅಭಿನಂದನೆಗೆ ಗಟ್ಟಿಯಾಗಿ ಓದುವುದು ಅಗತ್ಯ. ಉಪಾಧ್ಯಾಯರು ಮಾದರಿಗಾಗಿ ಹಲವು ಸಲ ಓದಬೇಕು. ಚೆನ್ನಾಗಿ ಓದಬಲ್ಲ ಬಾಲಕರಿಂದ ಓದಿಸಬೇಕು. ಆ ಪದ್ಯದ ಹಲವು ಸುಂದರವಾದ ಭಾಗಗಳನ್ನು ಮಕ್ಕಳು ಕಂಠಪಾಠ ಮಾಡುವಂತೆ ಪ್ರೋತ್ಸಾಹಿಸಬೇಕು. ಪದ್ಯದಲ್ಲಿ ಬರತಕ್ಕ ಸನ್ನಿವೇಶಗಳನ್ನು ಮಕ್ಕಳು ಸ್ವಂತವಾಗಿ ಅರಿಯಲಾಗದಿದ್ದರೆ ಪ್ರಶ್ನೆಗಳನ್ನು ಹಾಕಿ ಆ ಸನ್ನಿವೇಶಗಳ ಅರ್ಥ ತಿಳಿಯುವಂತೆ ಮಾಡಬೇಕು. ಅಲ್ಲಿರಬಹುದಾದ ನೈತಿಕ ಮತ್ತು ಸಾಮಾಜಿಕ ಅಂಶಗಳನ್ನು ಕುರಿತು ಉಪಾಧ್ಯಾಯರು ಮಕ್ಕಳಿಗೆ 'ನೀವು ಇವನಂತೆ ಒಳ್ಳೆಯವರಾಗಿರಬೇಕು' ಇತ್ಯಾದಿ ತೀರ್ಮಾನಗಳನ್ನು ಒಂದೊಂದು ವೇಳೆ ಹೇಳುವುದು ಅನುಚಿತವಾಗಲಾರದು. ಆದರೆ ಯಾವಾಗಲೂ ಆ ರೀತಿ ಮಾಡಬಾರದು. ಆಯಾ ವಿಷಯಗಳಮೇಲೆ ಆವಶ್ಯಕವೆನಿಸಿದರೆ ಚರ್ಚಿಸಲು ಅವಕಾಶಕೊಟ್ಟು ಒಳ್ಳೆಯದನ್ನು ಮಕ್ಕಳೇ ನಿರ್ಧರಿಸಲು ಸಹಾಯಮಾಡಬೇಕು. ಕಾವ್ಯದಲ್ಲಿ ಬರಬಹುದಾದ ನಾಯಕರ ಧೈರ್ಯ ಸ್ಥೈರ್ಯಗಳನ್ನೂ, ಮಾನವ ಸಹಜವಾದ ಇನ್ನಿತರ ಗುಣಧರ್ಮಗಳನ್ನೂ, ಮಕ್ಕಳ ಮನಸ್ಸನ್ನು ಉದಾತ್ತಗೊಳಿಸುವಂತೆ ಉಪಾ

ಧ್ಯಾಯರು ಸ್ಫುಟಗೊಳಿಸಬೇಕು. ಆಗ ಅಲ್ಲಿ ಬರುವ ಧಾರ್ಮಿಕ, ನೈತಿಕ ಮತ್ತು ಸಾಮಾಜಿಕ ಸನ್ನಿವೇಶಗಳನ್ನು ಮಕ್ಕಳು ಅರಿತು, ಅವುಗಳ ಔಚಿತ್ಯ ವನ್ನು ತಾವೇ ವಿವೇಚಿಸುವಂತಾಗುತ್ತಾರೆ.

ಕಾವ್ಯದ ರಚನೆ, ಲಕ್ಷಣ, ಅಲಂಕಾರ ಮುಂತಾದವು ಮಕ್ಕಳಿಗೆ ಅರ್ಥವಾಗುವುದಿಲ್ಲ. ಪ್ರೌಢಶಾಲೆಯಲ್ಲೂ ಛಂದಸ್ಸಿಗೆ ಸಂಬಂಧಿಸಿದ ಅಂಶ ತಿಳಿಸುವುದು ಕಷ್ಟ. ಏಕೆಂದರೆ, ಅವರಲ್ಲಿ ಯಾರೂ ಪದ್ಯ ರಚನೆಯ ಕಾರ್ಯದಲ್ಲಿ ತೊಡಗಿರಲಾರರು. ಯಾರಾದರೂ ಆಸಕ್ತಿಯಿಂದ ಅವನ್ನು ಕೇಳಿದರೆ ಉಪಾಧ್ಯಾಯರು ಸಂತೋಷದಿಂದ ಬೋಧಿಸಬಹುದು.

ಪ್ರಾಥಮಿಕ ಶಾಲೆಯ ಮಧ್ಯದ ಅಂತಸ್ತಿನಿಂದಲೂ ಅಭಿನಂದನಾ ಪಾಠ ಗಳನ್ನು ಯಶಸ್ವಿಯಾಗಿ ಬೋಧಿಸಬಹುದಾದ ಅವಕಾಶಗಳಿವೆ. ಪದ್ಯ ವಾಗಲಿ, ಗದ್ಯಪಾಠವಾಗಲಿ, ಇನ್ನಿತರ ಕಲಾ ಪಾಠಗಳನ್ನೇ ಆಗಲಿ ಮಕ್ಕಳಿಗೆ ಆನಂದವಾಗುವಂತೆ, ಅವುಗಳಲ್ಲಿ ಅಭಿಮಾನ ಹುಟ್ಟಿಸುವಂತೆ, ಮಾಡ ಬಹುದು. ಹಾಗೆ ಅಭಿನಂದನಾ ಪಾಠಗಳನ್ನು ಮಾಡುವಾಗ ಬೋಧನ ಕ್ರಮದ ಸೋಪಾನಗಳಿಗೆ ಪ್ರಾಧಾನ್ಯತೆ ಕೊಟ್ಟು ಮಕ್ಕಳು ಅದನ್ನು ಆನಂದಿಸಲಾರದ ಸನ್ನಿವೇಶವನ್ನು ತಂದುಕೊಳ್ಳಬಾರದು. ವ್ಯಾಕರಣಾಂಶ ಗಳಿಗಾಗಲಿ, ಛಂದಸ್ಸಿಗಾಗಲಿ, ಪ್ರಾಧಾನ್ಯತೆ ಕೊಟ್ಟು ಪಾಠ ನೀರಸವಾಗು ವಂತೆಯೂ ಮಾಡಬಾರದು. ಕಾವ್ಯದ ವಸ್ತು, ಭಾವ ಮತ್ತು ಶೈಲಿಯನ್ನು ಪರಿಚಯಮಾಡಿಕೊಟ್ಟು ಮಕ್ಕಳು ಅವನ್ನು ಆನಂದಿಸುವ ಮತ್ತು ಅದರಲ್ಲಿರುವ ರಸಭಾವಗಳಿಂದ ಪುಳುಕಿತರಾಗುವ ರೀತಿಯಲ್ಲಿ ಪಾಠ ಬೋಧಿಸಬೇಕು. ಪದ್ಯದ ಆರಂಭದಲ್ಲೇ ಉಪಾಧ್ಯಾಯರು ಕವಿಯ ಕಾಲ, ಚರಿತ್ರೆ, ಇತ್ಯಾದಿಗಳನ್ನು ವಿವರಿಸುವುದು ಉಚಿತವಲ್ಲ. ಮಕ್ಕಳು ಆ ಕವಿತೆ ಯಲ್ಲಿ ಸೊಗಸನ್ನು ಕಂಡರೆ ತಾವೇ ಕವಿಯ ಹೆಸರನ್ನು ಕೇಳುತ್ತಾರೆ; ಆ ವಿಷಯವನ್ನು ತಿಳಿಸಲು ಅಂದು ಸರಿಯಾದ ಕಾಲ. ಅಭಿನಂದನಾ ಪಾಠದ ಅಂತಿಮ ಉದ್ದೇಶ ಕಲಾಜೀವನ; ಮಕ್ಕಳು ಆ ಗುರಿಗಾಗಿ ಕ್ರಮಕ್ರಮ ವಾಗಿ ಸಾಗಬೇಕು. ಸಾಧ್ಯವಾದವರು ಕೃತಿಗಳನ್ನೂ ರಚಿಸಿ ತಾವೂ ಕಲಾ ರಾಜ್ಯಕ್ಕೆ ತಮ್ಮ ಕಾಣಿಕೆಯನ್ನು ಸಲ್ಲಿಸಬಹುದು. ಇದು ಎಲ್ಲರಿಗೂ ಸಾಧ್ಯ ವಾಗದಿದ್ದರೂ ಇನ್ನಿತರ ಸಾಹಿತ್ಯ ಕೃತಿಗಳನ್ನು ಓದುವ ಅಭಿಲಾಷೆಯನ್ನೂ,

ವಿಮರ್ಶಿಸಿ ನೋಡಿ ಉತ್ತಮ ಸಾಹಿತ್ಯವನ್ನು ನಿಷ್ಕರ್ಷಿಸುವ ಶಕ್ತಿಯನ್ನೂ ಪ್ರೌಢಶಾಲೆ ಬಿಡುವ ಹೊತ್ತಿಗೆ ನಮ್ಮ ಮಕ್ಕಳು ಪಡೆಯುವಂತಾಗಬೇಕು.

೪. **ಅಭ್ಯಾಸದ ಪಾಠಬೋಧನೆ:** ಒಂದು ಕೆಲಸವನ್ನು ಹಲವು ಸಾರಿ ಮಾಡಿದರೆ ಆ ಕೆಲಸವನ್ನು ಜಾಗ್ರತೆಯಾಗಿಯೂ, ಸರಿಯಾಗಿಯೂ ಮಾಡುವುದನ್ನು ಕಲಿಯುತ್ತೇವೆ. ಆಗ ಆ ಕೆಲಸ ಅಭ್ಯಾಸವಾಯಿತೆನ್ನುತ್ತೇವೆ. ಅದರಿಂದ ಆಯಾಸವೂ ಕಡಮೆಯಾಗುತ್ತದೆ. ಹಿಂದೆ ಪಾಠಶಾಲೆಗಳಲ್ಲಿ ಈ ಅಭ್ಯಾಸ ಪಾಠಕ್ಕೆ ತುಂಬ ಪ್ರಾಶಸ್ತ್ಯವಿತ್ತು. ಅದು ಅಹಿತವಾದುದೆಂದು, ಈಚೆಗೆ ಕಡಮೆಯಾಗುತ್ತಿದೆ. ಮನಶ್ಶಾಸ್ತ್ರದ ಪ್ರಕಾರ ಈ ಅಭ್ಯಾಸದ ಪಾಠ ಅಗತ್ಯವೆಂಬುದೂ, ಅದರಿಂದ ವಿವಿಧ ಅನುಕೂಲಗಳಿವೆಯೆಂಬುದೂ ಸ್ಥಿರಪಡುತ್ತಿವೆ. ಯಾವುದಾದರೂ ಒಂದು ಕೆಲಸದಲ್ಲಿ ಕೌಶಲ್ಯ ಬರಬೇಕಾದರೆ ಆ ಕೆಲಸದ ಬೇರೆ ಬೇರೆ ಅಂಗಗಳನ್ನು ಚೆನ್ನಾಗಿ ಅಭ್ಯಾಸಮಾಡಿರಬೇಕು. ಎಂದಮೇಲೆ, ಅಭ್ಯಾಸಗಳೇ ಕಾರ್ಯಕೌಶಲಕ್ಕೆ ನೆರವಾಗತಕ್ಕವು. ಶಾಲೆಗಳು ಮಕ್ಕಳ ಜ್ಞಾನಸಂಪತ್ತನ್ನು ಹೆಚ್ಚಿಸುವಂತೆ ಆವಶ್ಯಕವೆನಿಸುವ ಅಭ್ಯಾಸಗಳಲ್ಲೂ, ಕಾರ್ಯಕೌಶಲ್ಯದಲ್ಲೂ ಶಿಕ್ಷಣವನ್ನು ಕೊಡಬೇಕು.

ದೈಹಿಕ ಕೆಲಸದಲ್ಲಾಗಲಿ, ಮಾನಸಿಕ ಕೆಲಸದಲ್ಲಾಗಲಿ ಕುಶಲತೆ ತೋರಬೇಕಾದರೆ ಅಭ್ಯಾಸ ಅಗತ್ಯ. ಈ ಎರಡು ರೀತಿಯ ಕಾರ್ಯಗಳಲ್ಲೂ ಅಭ್ಯಾಸಬಲದಿಂದ ಕೆಲಸ ಚೆನ್ನಾಗಿಯೂ, ಸರಾಗವಾಗಿಯೂ ಆಗುತ್ತದೆ.

ಶಾಲೆಗಳಲ್ಲಿ ಅಭ್ಯಾಸಿಸಬೇಕಾದ ಕೌಶಲಗಳಲ್ಲಿ ಬರೆಯುವುದು, ಓದುವುದು, ಉಚ್ಚಾರಣೆ, ಕೋಷ್ಟಕಗಳ ಪರಿಚಯ, ವಿಷಯ ಗ್ರಹಣ, ಅಂಗ ಚಲನೆ, ಆಲೋಚನೆ—ಇವು ಮುಖ್ಯವಾದವು. ಬರವಣಿಗೆಯನ್ನೇ ಉದಹರಿಸುವುದಾದರೆ ಒಳ್ಳೆಯ ಮಾದರಿಯನ್ನನುಸರಿಸಿ ಅನೇಕ ಸಾರಿ ಬರೆದು ಅಭ್ಯಾಸಿಸಿದರೆ ಆ ರೀತಿಯಲ್ಲೇ ಬರವಣಿಗೆ ರೂಪುಗೊಂಡು ಸ್ಥಿರಗೊಳ್ಳುತ್ತದೆ; ಬೇಗನೆ ನಿರಾಯಾಸವಾಗಿ ಬರೆಯಲೂ ಸಾಧ್ಯವಾಗುತ್ತದೆ. ನಾವು ಯಾವ ರೀತಿ ಅಭ್ಯಾಸಿಸುತ್ತೇವೆಯೋ ಆ ಅಭ್ಯಾಸ ಮುಂದೆ ಸ್ಥಿರಗೊಳ್ಳುವುದು. ಆದರಿಂದ, ದುರಭ್ಯಾಸಗಳಾದಮೇಲೆ ಬಿಡುವುದು ಸುಲಭವಲ್ಲ; ಮತ್ತು ಅವುಗಳಿಂದ ಅನರ್ಥ ಕಾದೇ ಇದೆ. ಆದ್ದರಿಂದ, ಶಾಲಾ ದಿನಗಳಲ್ಲಿ ಮಕ್ಕಳ ಬೇರೆ ಬೇರೆ ಅಭ್ಯಾಸಗಳನ್ನು ಆರಂಭಿಸುವಾಗ ಉಚಿತವಾದ ರೀತಿ ನೀತಿಗಳನ್ನೂ ಕ್ರಮವನ್ನೂ ಅನುಸರಿಸುವುದು ಅಗತ್ಯ.

ಅಭ್ಯಾಸದಿಂದ ಕಾರ್ಯಕೌಶಲ ಸಿದ್ಧಿಸುತ್ತದೆ. ಈ ಕೌಶಲ ಮೂರು ರೀತಿಯಲ್ಲಿದೆ: ಬರವಣಿಗೆ, ಟೈಪು ಮಾಡುವುದು, ಅಂಗಸಾಧನೆ ಇವು ದೈಹಿಕ ಚಲನೆಗೆ ಸಂಬಂಧಿಸಿದವು; ಪದ್ಯವನ್ನೋ ಗದ್ಯಭಾಗವನ್ನೋ ಕಂಠ ಪಾಠ ಮಾಡುವುದು, ಇಸವಿ, ಸೂತ್ರಗಳನ್ನು ಕಂಠಪಾಠ ಮಾಡುವುದು, ಕೋಷ್ಟಕಗಳನ್ನು ಅಭ್ಯಾಸಿಸುವುದು—ಇವೆಲ್ಲ ಜ್ಞಾಪಕಶಕ್ತಿಯ ಅಭಿವೃದ್ಧಿಗೆ ಸಂಬಂಧಿಸಿದ ಕೌಶಲ್ಯಗಳು; ಓದುವುದು, ವಿವೇಚನೆ, ಕಾರ್ಯಕಾರಣ ದರ್ಶನ, ಸಂಕೇತಗಳಿಂದ ಅರ್ಥಮಾಡುವುದು–ಇವೆಲ್ಲ ಮಾನಸಿಕ ಕೌಶಲ್ಯ.

ಕಲೆಯ ಜ್ಞಾನವನ್ನು ಪ್ರಯೋಗವಾಗಿ ಕಾರ್ಯಮಾಡಲು ಉಪ ಯೋಗಿಸಿದರೆ ಅದನ್ನು ಕೌಶಲ್ಯವೆನ್ನುತ್ತೇವೆ. ಅಭ್ಯಾಸದಿಂದ ಕೌಶಲ್ಯ ಉತ್ತಮಗೊಳ್ಳುತ್ತದೆ. ಒಂದೊಂದು ಕೌಶಲ್ಯದಲ್ಲೂ ಅನೇಕ ಅಭ್ಯಾಸಗಳು ಸೇರಿರುತ್ತವೆ. ಓದುವುದನ್ನೇ ತೆಗೆದುಕೊಂಡರೆ, ಅಕ್ಷರಗಳನ್ನು ಗುರುತಿಸು ವುದು, ಅಕ್ಷರಗಳನ್ನು ಜೋಡಿಸಿ ಪದವನ್ನು ಉಚ್ಚರಿಸಿವುದು, ಭಾವ ಬರು ವಂತೆ ಧ್ವನಿಯನ್ನು ಹೆಚ್ಚು ಕಡಮೆ ಮಾಡುವುದು, ಇವೇ ಮೊದಲಾದ ಅನೇಕ ಅಭ್ಯಾಸಗಳು ಸೇರಿ ಓದುವ ಕೌಶಲ್ಯ ರೂಪುಗೊಂಡಿದೆ. ಹೀಗೆಯೇ ಬರವಣಿಗೆ ಮತ್ತು ಇನ್ನಿತರ ಕೌಶಲ್ಯಗಳು. ಬಾಲ್ಯ ಈ ಕೌಶಲ್ಯಗಳನ್ನು ರೂಢಿಸಲು ಉತ್ತಮ ಕಾಲ. ಆದ್ದರಿಂದ ನಮ್ಮ ಶಾಲೆಗಳಲ್ಲಿ ಅಭ್ಯಾಸ ಪಾಠದ ಕಡೆ ಹೆಚ್ಚಿನ ಗಮನ ಕೊಡಬೇಕಾಗಿದೆ.

ಅಭ್ಯಾಸ ಪ್ರತ್ಯೇಕ ಪಾಠವಾಗಿರಬಹುದು; ಅಥವಾ ಇತರ ಪಾಠಗಳ ಅಂಗವಾಗಿಯಾದರೂ ನಡೆಯಬಹುದು. ಯಾವ ಭಾಗ ಅಭ್ಯಾಸ ಮಾಡ ಬೇಕಾಗಿದೆಯೋ ಅದನ್ನು ನಿರ್ಧರಿಸುವಾಗ ನಿಜವಾಗಿಯೂ ಅದು ಉಪ ಯುಕ್ತವೂ ಆವಶ್ಯಕವೂ ಆದುದೆಂಬುದನ್ನು ನಿರ್ಧರಮಾಡಿಕೊಳ್ಳಬೇಕು. ಬರೀ ಅಭ್ಯಾಸಕ್ಕಾಗಿ ಆ ಪಾಠ ಮಾಡಬಾರದು. ಪ್ರಯೋಜನವಾಗುವು ದನ್ನು ಮಾತ್ರ ಅಭ್ಯಾಸ ಮಾಡಿಸಬೇಕು. ಅಭ್ಯಾಸ ಮಾಡಿಸಬೇಕಾದ ಭಾಗ ವನ್ನು ನಿರ್ದಿಷ್ಟವಾಗಿ ಗುರುತು ಮಾಡಿಕೊಂಡು ಸಿದ್ಧವಾಗಿ ತರಗತಿಗೆ ಬರಬೇಕು. ಅದನ್ನು ಆರಂಭಿಸುವಾಗ 'ಇದನ್ನು ಮಾಡು' ಎಂದು ಮಕ್ಕಳ ಮೇಲೆ ಅರ್ಥವಿಲ್ಲದ ಹೊರೆಯನ್ನು ಹೊರಿಸಲು ಯತ್ನಿಸಬಾರದು. ಅದರಿಂದ ಮಕ್ಕಳು ಉತ್ಸಾಹರಹಿತರಾಗಿ, ಅಭ್ಯಾಸ ಮಾಡುವುದಿಲ್ಲ; ಕಟು

ಬಲುಮೆಯ ಮೇಲೆ ಮಾಡಿದರೂ ಅದರಿಂದ ಪ್ರಯೋಜನವಾಗಲಾರದು. ಆ ಅಭ್ಯಾಸದ ಉದ್ದೇಶವನ್ನು ಮಕ್ಕಳಿಗೆ ಪರಿಚಯಮಾಡಿಕೊಟ್ಟು ಒಂದು ಗುರಿಗಾಗಿ ಅದನ್ನು ಮಾಡಬೇಕೆಂದು ಅವರಿಗೆ ಆಸಕ್ತಿ ಹುಟ್ಟಿಸಬೇಕು. ಆರಂಭಿಸುವಾಗ ಅಭ್ಯಾಸ ಮಾಡಬೇಕಾದ ಕ್ರಮವನ್ನೂ ತಿಳಿಯಹೇಳ ಬೇಕು. ಮೊದಲು ಮಾದರಿ ಹೇಗಿದೆಯೋ ಅದರಂತೆ ಅನೇಕ ಅಭ್ಯಾಸ ಗಳು ನಡೆದು ಕೊನೆಗೆ ಆ ಅಭ್ಯಾಸ ಸ್ಥಿರವಾಗುತ್ತದೆ. ಮಾದರಿ ಉಚಿತ ವಲ್ಲದ್ದಾದರೆ ಅಂಥ ಕೆಟ್ಟ ಅಭ್ಯಾಸವೇ ಸ್ಥಿರಪಟ್ಟು ಅನರ್ಥವಾದೀತು. ಆದ್ದರಿಂದ ಆರಂಭಿಸುವಾಗ ಅಭ್ಯಾಸ ಶುದ್ಧರೂಪದಲ್ಲೂ ಉತ್ತಮ ರೂಪ ದಲ್ಲೂ ಆರಂಭವಾಗಬೇಕು. ಒಮ್ಮೆ ಅಭ್ಯಾಸವೊಂದು ಆರಂಭವಾದ ಮೇಲೆ ಅದನ್ನು ನಿಲ್ಲಿಸದೆ ಸಿದ್ಧಿಸುವವರೆಗೂ ನಡಸಿಕೊಂಡು ಬರಬೇಕು. ಯಾವ ಕಾರಣದಿಂದಲೂ ಆ ಕಾರ್ಯದಲ್ಲಿ ಮಕ್ಕಳ ಅವಧಾನ ಕಡಮೆ ಯಾಗದಂತೆ ನೋಡಿಕೊಳ್ಳಬೇಕು. ಏಕೆಂದರೆ, ಅವಧಾನವಿಲ್ಲದ ಅಭ್ಯಾಸ ದಿಂದ ಫಲವಿಲ್ಲ.

ಅಕ್ಷರವನ್ನು ತಿದ್ದುವುದು, ಕಾಪಿ ಬರೆಯುವುದು, ಮಗ್ಗಿ ಕಂಠಪಾಠ ಮಾಡುವುದು, ಕೋಷ್ಟಕದ ಅಭ್ಯಾಸ ಮಾಡುವುದು–ಇವೇ ಮೊದಲಾದವು ನಮಗೆ ಸಾಮಾನ್ಯವಾಗಿ ಬೇಸರ ಹುಟ್ಟಿಸುವ ಕೆಲಸ; ಸಂತೋಷ ತರ ತಕ್ಕವಲ್ಲ. ಆದ್ದರಿಂದ ಕಲಿವು ಸುಲಭವಾಗುವುದಿಲ್ಲ. ಜೊತೆಗೆ ಜಿಗುಪ್ಸೆ ಯಿಂದ ಮಧ್ಯದಲ್ಲೇ ನಿಲ್ಲಿಸುವಂತಾಗಿ ಅಂದಿನವರೆಗೂ ಪಟ್ಟ ಶ್ರಮವೆಲ್ಲ ವ್ಯರ್ಥವಾಗುತ್ತದೆ. ಅಹಿತವಾದ ಇಂಥ ಪಾಠ ಹಿತವಾಗುವಂತೆ ಮಾಡಿ ಫಲಪ್ರದವಾಗಬೇಕಾದರೆ ಉಪಾಧ್ಯಾಯರು ತಮ್ಮ ಕೌಶಲ್ಯವನ್ನೆಲ್ಲ ಉಪ ಯೋಗಿಸಬೇಕಾಗುತ್ತದೆ. ತಪ್ಪು ಮಾಡಿದ ಒಬ್ಬ ವಿದ್ಯಾರ್ಥಿಯನ್ನು ಶಿಕ್ಷಿಸಲು ಅವನಿಗೆ ಒಂದು ಅಭ್ಯಾಸ ಕಾರ್ಯವನ್ನು ವಹಿಸುವುದು ಸರಿಯಲ್ಲ. ಏಕೆಂದರೆ, ಅದನ್ನು ಮಾಡುವಾಗ ಅವನಿಗೆ ಅವಧಾನ, ಆಸಕ್ತಿ ಮತ್ತು ಸಂತೋಷ ಇರುವುದಿಲ್ಲ. ಅದರಿಂದ ಕಲಿವು ಸಾಧ್ಯವಾಗದು. ಹಾಗೆಯೇ ಬಹುವಾಗಿ ದಣಿದಿರುವ, ದಿನದ ಕೊನೆಯಲ್ಲಿ ಅಭ್ಯಾಸ ಪಾಠವನ್ನು ಇಟ್ಟು ಕೊಳ್ಳಬಾರದು. ಮಕ್ಕಳು ದೃಢ ಮನಸ್ಸಿನಿಂದ ಅಭ್ಯಾಸವನ್ನು ಮುಂದುವರಿಸಲು ಹಲವು ಆಕರ್ಷಣೆಗಳನ್ನು ತೋರಿಸಬಹುದು. ಗುಂಪಾಗಿ

ಅಕ್ಷರ ಬರೆವುದನ್ನು ಅಭ್ಯಾಸಿಸಿದರೆ ಬರವಣಿಗೆ ಮುದ್ದಾಗುತ್ತದೆಂದೋ, ಒಳ್ಳೆಯ ನಡೆ ನುಡಿಗಳನ್ನು ಅಭ್ಯಾಸಿಸಿದರೆ ಜನ ಮೆಚ್ಚುತ್ತಾರೆಂದೋ, ಉಚ್ಚಾರಣೆ ಪಕ್ವವಾದರೆ ಒಳ್ಳೆ ವಾಗ್ಮಿಯಾಗಬಹುದೆಂದೋ, ಲೆಕ್ಕವೊಂದನ್ನು ಮಾಡಲು ಕೋಷ್ಟಕ ಸಹಾಯವಾಗುತ್ತೆಂದೂ, ಭವಿಷ್ಯ ಆಕರ್ಷಣೆಯೊಂದನ್ನು ತೋರಿಸಬಹುದು. ಬಹುಮಾನ, ಸ್ಪರ್ಧೆ, ಮುಂತಾದವನ್ನೂ ಏರ್ಪಡಿಸಬಹುದು. ಒಮ್ಮೆ ಆರಂಭವಾದ ಅಭ್ಯಾಸ ಬೇಸರದಿಂದ ನಿಲ್ಲದಂತೆ ಮಾಡಲು ಅಭ್ಯಾಸದ ಕ್ರಮವನ್ನು ಸ್ವಲ್ಪ ಬದಲಾಯಿಸಬಹುದು. ಶಾಗುಣಿತ ಅಭ್ಯಾಸ ಮಾಡಿಸುವಾಗ ಸ್ವಲ್ಪ ಹೊತ್ತು ಬರೆಯುವುದಾದರೆ ಸ್ವಲ್ಪ ಹೊತ್ತು ಬಾಯಲ್ಲಿ ಹೇಳುವುದನ್ನು ಅಭ್ಯಾಸ ಮಾಡಿಸುವುದರಿಂದ ಬೇಸರ ಕಳೆದು, ಮಧ್ಯೆ ನಿಲ್ಲಿಸದಂತೆ ನೋಡಿಕೊಳ್ಳಬಹುದು. ಅವರು ಅಭ್ಯಾಸ ಮುಗಿಸಬೇಕೆಂದು ತ್ವರಿತಗೊಳಿಸಲು ದೋಷಗಳ ಕಡೆ ಕೆಲವರು ಗಮನ ಕೊಡುವುದಿಲ್ಲ. ಇದರಿಂದ ಬೇಗ ಕಲಿವು ಸಿದ್ಧಿಸಿದರೂ ದುಷ್ಪರಿಣಾಮ ಹುಟ್ಟಿಕೊಳ್ಳುತ್ತದೆ. ಆದ್ದರಿಂದ ತ್ವರಿತವಾಗಿ ಕಲಿಸಲು ಆದರ್ಶವನ್ನೇ ಬಿಡಬಾರದು. ಕಾಲವಿಳಂಬವಾದರೂ ಸರಿಯಾಗಿ ಅಭ್ಯಾಸ ಮಾಡಿಸಬೇಕು. ಹಲವು ಸಲ ಮಕ್ಕಳು ಎತ್ತಲೋ ಮನಸ್ಸನ್ನು ಹರಿಯಬಿಟ್ಟು, ಯಾಂತ್ರಿಕವಾಗಿ, ಅವಧಾನವನ್ನು ಕೇಂದ್ರೀಕರಿಸದೆ ಅಭ್ಯಾಸ ಮಾಡುತ್ತಿರುತ್ತಾರೆ. ಅದರಿಂದ ಬರೀ ಕಾಲ ವ್ಯಯ, ಶಕ್ತಿ ವ್ಯಯ. ಅವರು ಮನಃಪೂರ್ವಕವಾಗಿ ಅವಧಾನವನ್ನು ಕೇಂದ್ರೀಕರಿಸಿ ಉದ್ದೇಶಪೂರ್ವಕವಾಗಿ ಅಭ್ಯಾಸಿಸುವಂತೆ ಪ್ರೋತ್ಸಾಹಿಸಬೇಕು. ಒಮ್ಮೆ ಆಸಕ್ತಿಯಿಂದ ಕಾರ್ಯ ಆರಂಭವಾದಮೇಲೆ ಆ ಆಸಕ್ತಿ ಕುಂದದಂತೆ ನೋಡಿಕೊಳ್ಳಬೇಕು. ಅಭ್ಯಾಸದ ಪಾಠ ಮಾಡುವಾಗ ಈ ಬಗೆಬಗೆಯ ನಿಯಮಗಳನ್ನು ಅನುಸರಿಸಬೇಕಾದ್ದರಿಂದ ಉಪಾಧ್ಯಾಯರು ತುಂಬ ಎಚ್ಚರಿಕೆಯಿಂದ ಕಾದಿರಬೇಕು.

ಅತಿ ಕಠಿನವೆನಿಸುವ ಅಭ್ಯಾಸಗಳನ್ನು ಕೊಡಬಾರದು. ವಿಷಯದ ಗೌಣ ವಿವರಗಳ ಕಡೆ ಗಮನವನ್ನು ಸೆಳೆಯುವುದರಿಂದ ಅವರ ಅವಧಾನ ಛಿದ್ರವಾಗಿ ಒಡೆದುಹೋಗಿ ಪ್ರಧಾನ ವಿಷಯದ ಕಡೆ ತಕ್ಕಷ್ಟು ಗಮನ ಕೊಡಲು ಅಸಾಧ್ಯವಾಗುತ್ತದೆ. ಆದ್ದರಿಂದ ಕೆಲವು ಗೌಣ ವಿಷಯಗಳನ್ನು ಬಿಟ್ಟುಬಿಡಬಹುದು; ಅಭ್ಯಾಸಕ್ಕಾಗಿ ಕೊಡುವ ವಿಷಯ ಮಕ್ಕಳ ವಯೋಗುಣಕ್ಕೆ ತಕ್ಕುದಾಗಿಯೂ ಇರಬೇಕು.

ಆರಂಭಿಸಿದ ಅಭ್ಯಾಸವನ್ನು ಒಂದೇ ಸಮನೆ, ಬಿಡುವಿಲ್ಲದೆ ಮಾಡುವುದಕ್ಕಿಂತ ಮಧ್ಯೆ ಮಧ್ಯೆ ವಿರಾಮಕೊಟ್ಟು ಮಾಡಿಸುವುದು ಹೆಚ್ಚು ಫಲಪ್ರದವಾದ್ದೆಂಬ ಅಂಶ ಸಂಶೋಧನೆಗಳಿಂಧ ಸ್ಥಿರಪಟ್ಟಿದೆ; ಹಾಗೂ ದೀರ್ಘವಾದ ಕವನ ಮುಂತಾದ ದೊಡ್ಡ ಅಭ್ಯಾಸ ಮಾಡಿಸುವುದರಲ್ಲಿ ಇದು ಉಚಿತವೆಂದು ಸ್ಥಿರಪಟ್ಟಿದೆ. ಹಾಗೆ ದೊರೆತ ವಿರಾಮಕಾಲದಲ್ಲಿ ಅಭ್ಯಾಸ ಪಾಠದ ಅರ್ಥ ಚೆನ್ನಾಗಿ ಹೊಳೆಯುವಂತಾಗಿ ಅಭ್ಯಾಸ ಬೇಗ ಪೂರ್ಣವಾಗುತ್ತದೆ. ಈ ವಿರಾಮಕಾಲ ಮೊದಮೊದಲು ಸ್ವಲ್ಪ ಸ್ವಲ್ಪವೂ, ಕ್ರಮೇಣ ದೀರ್ಘವೂ ಆಗಿರಬೇಕು. ಆ ಪಾಠ ಪೂರ್ಣವಾಗಿ ಹೃದ್ಗತವಾಗುವವರೆಗೂ ಅಭ್ಯಾಸಿಸುತ್ತಾ ಹೋಗಬೇಕು. ಅಭ್ಯಾಸವಾದಮೇಲೂ ಅಂದಂದು ಪಠಿಸಬಹುದು.

**ಬೋಧನಕ್ರಮಕ್ಕೆ ಸಂಬಂಧಿಸಿದ ಇತರ ಅಂಶಗಳು:** ಮೇಲೆ ವಿವರಿಸಿದ ಬೋಧನಕ್ರಮವನ್ನು ಆಯಾ ಪಾಠಕ್ಕೊಪ್ಪುವಂತೆ ಉಪಯೋಗಿಸಿಕೊಂಡು ಆ ಪಾಠವನ್ನು ಯಶಸ್ವಿಯಾಗುವಂತೆ ಮಾಡುವುದರ ಜೊತೆಗೆ, ಉಪಾಧ್ಯಾಯರು ಇತರ ಪಾಠಗಳಲ್ಲಿ ನಡೆಯುತ್ತಿರುವ ಬೋಧನೆಯನ್ನೂ ಪರಿಚಯಮಾಡಿಕೊಂಡು ತಮ್ಮ ಪಾಠವನ್ನು ಅದರೊಡನೆ ಅವಶ್ಯಕವಾದಂತೆಲ್ಲ ಹೊಂದಿಸಿಕೊಳ್ಳಬೇಕು. ಹಾಗೆಯೇ ಇತರ ಪಾಠಗಳು ಎಷ್ಟೆಷ್ಟು ಮುಂದುವರಿದಿವೆ ಎಂಬ ಅಂಶವನ್ನೂ ಪರಿಗಣಿಸಿ ಅದಕ್ಕನುಗುಣವಾದ ವೇಗದಲ್ಲಿ ತಮ್ಮ ಪಾಠವನ್ನೂ ನಡಸುತ್ತ ಹೋಗಬೇಕು. ಇವುಗಳಿಂದ ನಮ್ಮ ಬೋಧನಕ್ರಮದಲ್ಲಿ ವ್ಯರ್ಥ ಕಾಲವ್ಯಯ ತಪ್ಪಿ, ಎಲ್ಲ ವಿಷಯಗಳಿಗೂ ಸಂಬಂಧ ಸಮನ್ವಯಗಳು ಹೆಚ್ಚಿ ಶಿಕ್ಷಣ ಯಶಸ್ವಿಯಾಗಬಲ್ಲದು.

**೧. ಬೇರೆ ಬೇರೆ ಪಾಠಗಳ ಸಂಬಂಧ ಕಲ್ಪನೆ:** ಇಂದಿನ ಪ್ರಾಥಮಿಕ ಶಾಲೆಗಳಿಂದ ಹಿಡಿದು ಕಾಲೇಜಿನವರೆಗೂ ಬೋಧಿಸತಕ್ಕ ಪಾಠಗಳನ್ನು ನೋಡಿದರೆ ಒಂದೊಂದು ವಿಷಯವೂ ಒಂದೊಂದು ಪ್ರತ್ಯೇಕ ಪ್ರಪಂಚಕ್ಕೆ ಸೇರಿದವೋ ಎನ್ನುವಂತೆ ಬೋಧನೆಯಾಗುತ್ತಿವೆ. ಭಾಷೆಯ ಪಾಠವೇ ಬೇರೆ, ವ್ಯಾಕರಣ ಪಾಠವೇ ಬೇರೆ; ಅಂಕಗಣಿತವೇ ಬೇರೆ, ಬೀಜಗಣಿತವೇ ಬೇರೆ; ಚರಿತ್ರೆ ಒಂದು ವಿಷಯ, ಭೂವಿವರಣೆಯೇ ಇನ್ನೊಂದು ವಿಷಯ. ಈ ಪ್ರತ್ಯೇಕ ಭಾವನೆಯಿಂದ ಪಾಠಗಳು ಬೋಧನೆಯಾಗುತ್ತಿವೆ; ಮಕ್ಕಳೂ ಅವುಗಳಿಗೆ ಯಾವ ಸಂಬಂಧವೂ ಇಲ್ಲವೆಂದೇ ಕಲಿಯು

ವರು. ನಿಜವಾಗಿ ನೋಡುವುದಾದರೆ ಒಂದು ಇನ್ನೊಂದರೊಡನೆ ಸಂಬಂಧಿಸಿಯೇ ಇರುತ್ತದೆ. ಜೀವನದಲ್ಲಿ ಜ್ಞಾನೋದಯವಾಗಬೇಕಾದರೆ ಅವೆಲ್ಲವೂ ಒಂದನ್ನೊಂದು ಅವಲಂಬಿಸಿಕೊಂಡೇ ಬರುತ್ತವೆ. ವಿಷಯುವನ್ನು ಗ್ರಹಿಸುವಾಗ ಮನಸ್ಸು ಅಂಥ ಪ್ರತ್ಯೇಕ ಭಾವನೆಯಿಲ್ಲದೆ ಆವಶ್ಯಕವೆನಿಸಿದ ಯಾವ ಜ್ಞಾನದಿಂದಲಾದರೂ ಆರಿಸಿಕೊಳ್ಳುತ್ತದೆ. ಈ ಪ್ರತ್ಯೇಕೀಕರಣದಿಂದ ಶಾಲೆಗಳಲ್ಲಿ ವಿಷಯುಗಳ ಸಂಖ್ಯೆ ಬಹುವಾಗಿ, ಅವೆಲ್ಲಕ್ಕೂ ಪ್ರತ್ಯೇಕವಾಗಿ ವೇಳಾಪಟ್ಟಿಯಲ್ಲಿ ಸ್ಥಳ ಕೊಡುವುದು ಕಷ್ಟದ ಕೆಲಸವಾಗುತ್ತಿದೆ. ಮೇಲಾಗಿ, ಜೀವನಕ್ಕೆ ಬೇಕಾಗಿರುವುದು ಆವಶ್ಯಕವಾದ ಎಲ್ಲ ವಿಷಯಗಳನ್ನು ಹೆಣೆದುಕೊಂಡ ಸಮನ್ವಯವೆನಿಸುವ ಜ್ಞಾನ. ಆದ್ದರಿಂದ ವಿಷಯುಗಳನ್ನು ಇಂದಿನಷ್ಟು ನಿಖರವಾಗಿ ಪ್ರತ್ಯೇಕಗೊಳಿಸುತ್ತಿರುವುದು ಕೃತಕವಾದ್ದು. ಒಂದು ಜ್ಞಾನಕ್ಕೆ ಸಂಬಂಧಿಸಿದ ವಿಷಯುಗಳನ್ನೆಲ್ಲ ಒಟ್ಟುಗೂಡಿಸಿ ವಿಷಯುಗಳ ಸಂಖ್ಯೆಯನ್ನು ಕಡಮೆಮಾಡಬೇಕು. ಯಾವ ಪಾಠವನ್ನೇ ಮಾಡುತ್ತಿರಲಿ, ಆವಶ್ಯಕವೆನಿಸುವ ಅಂಶಗಳನ್ನು ಬೇರೆ ವಿಷಯುಗಳಿಂದಲೂ ಧಾರಾಳವಾಗಿ ಆರಿಸಿ ಒದಗಿಸಿಕೊಳ್ಳುವುದೂ ಅಗತ್ಯ.

ಪಾಠ ಪ್ರತ್ಯೇಕೀಕರಣದ ಸಮಸ್ಯೆ ಶಿಕ್ಷಣರಂಗದಲ್ಲಿ ಮೇಲ್ಮಟ್ಟಕ್ಕೆ ಹೋದಂತೆಲ್ಲ ಹೆಚ್ಚುತ್ತಿರುವುದು ಕಂಡುಬರುತ್ತದೆ. ಕಾಲೇಜಿನ ಅಂತಸ್ತಿನಲ್ಲಿ ಇದು ಉಚಿತವೆಂದು ತೋರಿದರೂ ಪ್ರಾಥಮಿಕ ಶಾಲೆಯಲ್ಲಿ ಈ ಪ್ರತ್ಯೇಕೀಕರಣ ಅನುಚಿತ. ಅದರಿಂದಲೇ ಆ ಅಂತಸ್ತಿನಲ್ಲಿ ವಿಷಯುಗಳ ಭಿನ್ನತೆಗೆ ಅವಕಾಶಕೊಡದ ಉದ್ಯಮ ಶಿಕ್ಷಣವನ್ನು ಹಿಂದೆ ಪ್ರತಿಪಾದಿಸಿರುವುದು. ಸೆಕೆಂಡರೀ ಅಂತಸ್ತಿನಲ್ಲಿ ಏಕರೀತಿಯ ವಿಷಯುಗಳನ್ನೆಲ್ಲ ಒಟ್ಟುಗೂಡಿಸಿ ಅವುಗಳ ಸಂಖ್ಯೆಯನ್ನು ಕಡಮೆಮಾಡಬೇಕು. ಜೊತೆಗೆ, ಬೋಧಿಸುವಾಗ ಒಂದು ಪಾಠದೊಡನೆ ಇನ್ನೊಂದು ಪಾಠವನ್ನು ಸಂಬಂಧಿಸಿಕೊಂಡೇ ಪಾಠ ಮಾಡಬೇಕು.

ಈ ಪ್ರತ್ಯೇಕ ಮನೋಭಾವನೆಯಿಂದ ಪಾಠಮಾಡುವುದಕ್ಕೆ ಹಲವು ಕಾರಣಗಳಿವೆ. ಇಂದಿನ ನಮ್ಮ ಪಠ್ಯವಿಷಯುಗಳ ಸಂಖ್ಯಾ ಬಾಹುಳ್ಯವೂ, ವೇಳಾಪತ್ರಿಕೆಯಲ್ಲಿ ಅವೆಲ್ಲಕ್ಕೂ ಒಂದೊಂದು ಕಾಲವನ್ನೂ, ಒಬ್ಬೊಬ್ಬ ಉಪಾಧ್ಯಾಯರನ್ನೂ ಗೊತ್ತುಮಾಡಿರುವುದೂ, ಜೊತೆಗೆ ಪ್ರೌಢಶಾಲೆಗಳಲ್ಲಿ

ವಿಶ್ವವಿದ್ಯಾನಿಲಯದ ಪದವೀಧರರನ್ನು ಬೋಧನೆಗೆ ನಿಯಮಿಸುವುದರಿಂದಲೂ, ಅವರು ಪ್ರತ್ಯೇಕ ವಿಷಯದಲ್ಲೇ ಹೆಚ್ಚಿನ ಶಿಕ್ಷಣ ಪಡೆದವರಾಗಿರುವುದರಿಂದಲೂ, ಈ ಪ್ರತ್ಯೇಕ ರೀತಿಯ ಬೋಧನೆಯ ಮನೋಭಾವಕ್ಕೆ ಉತ್ತೇಜನ ಕೊಟ್ಟಂತಾಗಿದೆ. ಹರ್ಬಾರ್ಟನೂ ಕರ್ನಲ್ ಪಾರ್ಕರ್‌ರವರೂ ಬೋಧನೆಯಲ್ಲಿ ಒಂದು ವಿಷಯವನ್ನು ಕೇಂದ್ರವಾಗಿಟ್ಟುಕೊಂಡು ಜೊತೆಯಲ್ಲಿ ಅವಶ್ಯಕವೆನಿಸುವ ಎಲ್ಲ ವಿಷಯಗಳನ್ನೂ ತಿಳಿಸುವುದು ಒಳ್ಳೆಯದೆಂದು ಪ್ರತಿಪಾದಿಸಿದರು. ಹರ್ಬಾರ್ಟನು ಚರಿತ್ರೆ, ಸಾಹಿತ್ಯ, ಮುಂತಾದ ಮಾನವೀಯ ಅಂಶಗಳ ಆಗರವಾದ ವಿಷಯವನ್ನು ಕೇಂದ್ರವಾಗಿಟ್ಟುಕೊಂಡು, ಪಾಠಮಾಡುತ್ತ, ಅದರ ಅಂಗವಾಗಿ ಅವಶ್ಯಕವೆನಿಸುವ ಇತರ ವಿಷಯಗಳನ್ನು ಉಚಿತವರಿತು ಬೋಧಿಸಬೇಕೆಂದು ವಾದಿಸಿರುವನು; ಕರ್ನಲ್ ಪಾರ್ಕರ್ ಪ್ರಕೃತಿ ಪಾಠವನ್ನು ಕೇಂದ್ರವಾಗಿಟ್ಟುಕೊಂಡು ಅದೇ ಕಾರ್ಯವನ್ನು ಸಾಧನೆ ಮಾಡಬಹುದೆಂದು ಸಲಹೆ ಮಾಡಿದರು. ಇವೆರಡೂ ಉತ್ತಮವಾದ ದೃಷ್ಟಿಯಿಂದ ಪ್ರತಿಪಾದಿತವಾಗಿದ್ದರೂ, ಒಂದು ವಿಷಯಕ್ಕೇ ಪ್ರಾಧಾನ್ಯತೆ ಬರುವಂತಿರುವುದರಿಂದ ಇಂದಿನ ಶಾಲೆಗಳಲ್ಲಿ ಅವು ಅನುಷ್ಠಾನಕ್ಕೆ ಅನುಕೂಲವಲ್ಲ. ಇನ್ನುಳಿದುದೆಂದರೆ ಡ್ಯೂಯಿಯವರು ಹೇಳುವಂತೆ ಯಾವುದಾದರೊಂದು ಸಾಮಾಜಿಕ ವಿಷಯವನ್ನು ಕೇಂದ್ರವಾಗಿಟ್ಟುಕೊಳ್ಳುವುದು. ಈ ದೃಷ್ಟಿಯೇ ಉದ್ಯಮ ಶಿಕ್ಷಣ ಪದ್ಧತಿಗೂ ವಾರ್ಧಾ ಶಿಕ್ಷಣ ಯೋಜನೆಗೂ ಆಧಾರವಾಗಿದೆ.

ಪ್ರಾಥಮಿಕ ಶಾಲೆಗಳಲ್ಲಿ ಯಾವ ವಿಷಯ ಯಾವ ಗುಂಪಿಗೆ, ಯಾವ ಶಾಖೆಗೆ ಸೇರಿದ್ದೆಂದು ಮಕ್ಕಳಿಗೆ ಪರಿಚಯವಿರುವುದಿಲ್ಲ. ಅವಶ್ಯಕವೆನಿಸಿದ ಯಾವ ವಿಷಯಗಳನ್ನೇ ಆಗಲಿ ಅವರಿಗೆ ತಿಳಿಸಬೇಕು. ವ್ಯವಸಾಯದ ಉದ್ಯಮ ಮಾಡುವಾಗ ಬೀಜ ಮೊಳೆಯುವುದು, ನೀರು ಒದಗಿಸುವುದು, ಗೊಬ್ಬರ ಹಾಕುವುದು, ಮಾರಾಟ ಮಾಡುವುದು—ಇವೆಲ್ಲ ಬೇರೆ ಬೇರೆ ವಿಷಯಗಳಾದರೂ ಒಂದೇ ಎಂದು ಬೋಧಿಸಿದರೆ ಮಾತ್ರ ಆ ಉದ್ಯಮದ ಸಮಗ್ರ ಪರಿಚಯವಾಗುವುದು. ಆದ್ದರಿಂದ ಇಲ್ಲಿ ಇನ್ನಿತರ ಶಾಲೆಗಳಿಗಿಂತ ಹೆಚ್ಚಿನ ಸಂಬಂಧ ಕಲ್ಪನೆ ಅನಿವಾರ್ಯ. ಅದಕ್ಕಾಗಿಯೇ ಆ ಅಂತಿಸ್ತ್ರಿನಲ್ಲಿ ಉದ್ಯಮ ಶಿಕ್ಷಣ ಉಚಿತವೆಂದು ವಾದಿಸಿರುವುದು. ಈಗಿನ ಪ್ರಾಥಮಿಕ

ಶಾಲೆಗಳಲ್ಲಿ ಭಿನ್ನ ಪಠ್ಯ ವಿಷಯಗಳೇನೋ ಇವೆ; ಆ ರೀತಿಯ ಪಠ್ಯವಸ್ತು ಇರುವವರೆಗೂ ಧಾರಾಳವಾಗಿ ಬೋಧನಕಾರ್ಯದಲ್ಲಿ ಒಂದಕ್ಕೊಂದಕ್ಕೆ ಸಂಬಂಧ ಕಲ್ಪಿಸಿಕೊಂಡೇ ಪಾಠ ಮಾಡಬೇಕು. ಇದು ಉತ್ತಮವಾದ ಬೋಧನ ನಿಯಮ. ಆದರೆ ನಿಯಮಪಾಲನೆಗೆಂದು ಅನಾವಶ್ಯಕವಾಗಿ ಸಂಬಂಧ ಕಲ್ಪಿಸುವ ಯತ್ನಮಾಡಿದರೆ ಬೋಧನೆ ಕೃತಕವಾಗುತ್ತದೆ; ಪ್ರಯೋಜನವಾಗುವುದಿಲ್ಲ. ಒಂದು ಪಾಠ ಮಾಡುವಾಗ ಅದಕ್ಕೆ ಸಂಬಂಧಿಸಿದ ಬಗೆ ಬಗೆಯ ವಿಷಯಗಳನ್ನು ತಿಳಿಯಲು ಚಿಕ್ಕ ಮಕ್ಕಳಿಗೆ ಕಾತರ. ಅವು ಬೇರೆ ಪಾಠಕ್ಕೆ ಸೇರಿದವೆಂಬ ಭಾವನೆಯಿಂದ ಹೇಳದೇ ಬಿಡುವುದು ಉಚಿತವಲ್ಲ. ಅವರ ಆಸಕ್ತಿಯನ್ನು ಈಡೇರಿಸಿ ಪರಿಪೂರ್ಣವಾದ ಜ್ಞಾನ ಹುಟ್ಟುವಂತೆ ಮಾಡುವುದು ಈ ಪ್ರತ್ಯೇಕೀಕರಣದಿಂದ ತೊಡಕಾಗಿ ಪರಿಣಮಿಸುತ್ತದೆ.

ಮಾಧ್ಯಮಿಕ ಶಾಲೆಯಲ್ಲೂ ಅಷ್ಟೆ. ಭಾಷಾಜ್ಞಾನ ಹೆಚ್ಚಿಸುವುದು ಭಾಷೆಯ ಪಾಠದಲ್ಲೇ ಎಂದು ಮಿಕ್ಕ ಪಾಠಗಳಲ್ಲಿ ಆ ಅಂಶವನ್ನು ಅಸಡ್ಡೆ ಮಾಡಬಾರದು. ಹಾಗೆ ಮಾಡಿದರೆ ಒಂದು ಕಡೆ ಸಾಧಿಸಿರುವ ಅಭಿವೃದ್ಧಿ ಇಲ್ಲಿ ನಷ್ಟವಾದೀತು. ಹಾಗೆಯೇ ಚಿತ್ರ ಬರೆಯುವುದೂ ಕೂಡ. ಅದು ಎಲ್ಲ ಪಾಠಗಳಿಗೂ ಆವಶ್ಯಕ. ಎಲ್ಲ ಪಾಠಗಳನ್ನು ಬೋಧಿಸುವಾಗಲೂ ಆ ಕೌಶಲವನ್ನು ಉತ್ತಮಗೊಳಿಸಲು ಯತ್ನಿಸಬೇಕು. ಸ್ಫುಟವಾದ ಬರವಣಿಗೆ, ಚೊಕ್ಕಟವಾಗಿರುವ ಅಭ್ಯಾಸ, ಒಳ್ಳೆಯ ದೃಷ್ಟಿಧ್ಯೇಯಗಳು, ಸಹಕಾರ ಸದ್ಭಾವನೆ—ಇವು ಎಲ್ಲ ಪಾಠಗಳಲ್ಲೂ ಬೋಧನೆಯಾಗಬೇಕು. ಚರಿತ್ರೆಗೂ ಭೂಗೋಳಕ್ಕೂ, ಚರಿತ್ರೆಗೂ ಪ್ರಜಾಧರ್ಮಕ್ಕೂ, ಅಂಕಗಣಿತಕ್ಕೂ ಇನ್ನುಳಿದ ಗಣಿತದ ಶಾಖೆಗಳಿಗೂ ಸಂಬಂಧ ಕಲ್ಪಿಸಿಕೊಂಡು ಪಾಠ ಮಾಡಬಹುದು. ಗದ್ಯಕ್ಕೂ ವ್ಯಾಕರಣಕ್ಕೂ, ಬರವಣಿಗೆಗೂ ಓದುವುದಕ್ಕೂ, ವ್ಯಾಕರಣಕ್ಕೂ ವಾಕ್ಯರಚನೆಗೂ ಸಂಬಂಧ ಕಲ್ಪಿಸಿಕೊಳ್ಳಬಹುದು. ಪ್ರೌಢ ಶಾಲೆಗಳಲ್ಲಿ ಪ್ರತ್ಯೇಕೀಕರಣ ಇನ್ನೂ ತೀಕ್ಷ್ಣಗೊಂಡಿದೆ. ಆದರೂ ಅಲ್ಲೂ ಮೇಲೆ ವಿವರಿಸಿದ ರೀತಿಯಲ್ಲಿ ಬೋಧನೆಗೆ ಬೇರೆ ಬೇರೆ ಪಾಠಗಳಿಂದ ಸಹಕಾರ ಪಡೆಯಬಹುದು. ಚಿತ್ರಕಲೆಯನ್ನು ವಿಜ್ಞಾನ, ಭೂಗೋಳ, ಚರಿತ್ರೆ, ಮುಂತಾದ ಪಾಠಗಳಿಗೆ ಸಂಬಂಧಿಸಿಕೊಳ್ಳಬಹುದು. ಅಂಕಗಣಿತಕ್ಕೂ,

ಬೀಜಗಣಿತಕ್ಕೂ, ವಿಜ್ಞಾನದ ಮೂರು ಬೇರೆ ಬೇರೆ ಶಾಖೆಗಳಿಗೂ, ಭಾಷೆಯನ್ನು ಮಿಕ್ಕೆಲ್ಲ ಪಾಠಗಳಿಗೂ ಸಂಬಂಧಿಸಿಕೊಂಡು ಬೋಧನೆಯನ್ನು ಸಾಧಿಸಬಹುದು. ಹಾಗೆಯೇ ಮಾತೃಭಾಷೆಯ ವ್ಯಾಕರಣಕ್ಕೂ ಪರಭಾಷೆಯ ಅಭ್ಯಾಸಕ್ಕೂ ಸಂಬಂಧ ಕಲ್ಪಿಸಿಕೊಳ್ಳಬಹುದು.

ಭಿನ್ನ ವಿಷಯಗಳಿಂದ ಯಾವ ಪಾಠದ ಬೋಧನೆಗೇ ಆಗಲಿ, ಅನಿವಾರ್ಯವಾದ ಅಂಶಗಳನ್ನು ಆರಿಸಿಕೊಂಡು ಪಾಠಮಾಡುವುದು, ಮಕ್ಕಳಿಗೆ ಜ್ಞಾನೋದಯವಾಗುವ ಸ್ವರೂಪದ ಪರಿಚಯದಿಂದ ಅನಿವಾರ್ಯವೆನಿಸುತ್ತದೆ. ಆದ್ದರಿಂದ ಪ್ರಾಥಮಿಕ ಶಾಲೆಯ ಉಪಾಧ್ಯಾಯರೂ, ಮಾಧ್ಯಮಿಕ ಶಾಲೆಯ ಉಪಾಧ್ಯಾಯರೂ ಎಲ್ಲ ವಿಷಯಗಳಲ್ಲೂ ಶಿಕ್ಷಣ ಪಡೆದವರಿರಬೇಕೆಂಬುದು ಸ್ಪಷ್ಟಪಡುತ್ತದೆ. ಪ್ರೌಢಶಾಲೆಯಲ್ಲಿ ವಿಷಯ ಕಠಿನವೂ ಪ್ರೌಢವೂ ಆಗಿರುವುದರಿಂದ ಆಯಾ ವಿಷಯಗಳಲ್ಲಿ ಪಾಂಡಿತ್ಯ ಪಡೆದ ಉಪಾಧ್ಯಾಯರ ಆವಶ್ಯಕತೆಯೇನೋ ಇದೆ. ಆದರೂ ಎಲ್ಲ ವಿಷಯಗಳಲ್ಲೂ ಅವರು ತಕ್ಕಷ್ಟು ಪರಿಚಯ ಮಾಡಿಕೊಂಡಿರುವುದು ಬೋಧನೆಗೆ ತುಂಬ ಸಹಾಯವಾಗುತ್ತದೆ. ಹೀಗೆಯೇ ಶಾಲೆಯ ತರಗತಿಯ ಪಾಠಗಳಿಗೂ ಆಟ, ನಾಟಕ, ನೃತ್ಯ, ಉತ್ಸವ, ಚರ್ಚೆ, ಸಂಘ ಜೀವನ ಮುಂತಾದ ಪಾಠೇತರ ಶಿಕ್ಷಣಕ್ಕೂ ಸಂಬಂಧ ಕಲ್ಪಿಸಿಕೊಳ್ಳುವುದೂ ಅಗತ್ಯ.

೨. **ಪಾಠ ಸಮೀಕರಣ:** ಬೋಧಿಸುವಾಗ ಆವಶ್ಯಕವೆನಿಸುವ ಇತರ ಪಾಠಗಳಿಗೆ ಸಂಬಂಧ ಕಲ್ಪಿಸುವುದು ಅನಿವಾರ್ಯವಾಗಿರುವಂತೆ ಎಲ್ಲ ಪಾಠಗಳೂ ಒಂದು ಉಚಿತವಾದ ಮಟ್ಟದಲ್ಲಿ ಮುಂದುವರಿಯುತ್ತಿರುವುದೂ ಆವಶ್ಯಕ. ಬೀಜಗಣಿತ ಬಹುವಾಗಿ ಮುಂದುವರಿದು, ಅದಕ್ಕೆ ನೆರವಾಗತಕ್ಕ ತ್ರಿಜ್ಯಾಮಿತಿಯನ್ನು ಹಿಂದುಳಿಸಿದ್ದರೆ, ಹಲವು ರೀತಿಯ ತೊಡಕುಗಳು ತರಗತಿಯಲ್ಲಿ ಹುಟ್ಟಿಕೊಳ್ಳುವುವು. ಆದ್ದರಿಂದ ಬೀಜಗಣಿತದ ಅಭ್ಯಾಸ ಕಷ್ಟವಾಗುತ್ತದೆ; ಆ ಕಷ್ಟವನ್ನು ಕಳೆಯಲು ಸ್ವಲ್ಪಮಟ್ಟಿಗೆ ತ್ರಿಜ್ಯಾಮಿತಿಯನ್ನು ಬೋಧಿಸಬೇಕಾಗುತ್ತದೆ; ಮರಳಿ ಅದೇ ಅಂಶವನ್ನು ತ್ರಿಜ್ಯಾಮಿತಿ ಪಾಠದಲ್ಲೂ ಮಾಡಿ, ಕಾಲವ್ಯಯ ಆಗುತ್ತದೆ. ಹೀಗೆಯೇ ಇತರ ಪಾಠಗಳಲ್ಲೂ ಉಚಿತವೆನಿಸುವ ಸಮನ್ವಯ ಅಗತ್ಯ. ಭೌತಿಕ ಶಾಸ್ತ್ರಕ್ಕೂ ರಸಾಯನ ಶಾಸ್ತ್ರಕ್ಕೂ ಸಂಬಂಧ ಹೆಚ್ಚಾಗಿರುವುದರಿಂದ ಅವೆರಡೂ ಒಂದು

ಸಮುಮಟ್ಟದಲ್ಲಿ ಸಾಗುತ್ತಿರಬೇಕು. ಎಲ್ಲ ಉಪಾಧ್ಯಾಯರೂ ಆಗಾಗ ಒಟ್ಟಿಗೆ ಸೇರಿ ಯಾವೊಂದು ಪಾಠವೂ ಅತಿಯಾಗಿ ಮುಂದುವರಿಯದಂತೆಯೂ, ಇನ್ನೊಂದು ತೀರ ಹಿಂದುಳಿಯದಂತೆಯೂ ನೋಡಿಕೊಳ್ಳಬೇಕು. ಒಂದು ವಿಷಯದ ಒಂದು ಪಾಠ ನಡೆಯುವಷ್ಟರಲ್ಲಿ ಇತರ ವಿಷಯಗಳಲ್ಲೂ ಅದಕ್ಕೆ ಸಹಾಯವಾಗತಕ್ಕ ಅಂಶಗಳು ಮುಗಿಯುವಂತೆ ಪಾಠದ ಹಂಚಿಕೆ ರೂಪುಗೊಂಡಿರಬೇಕು.

ಹೀಗೆ ಬೋಧನಕಾರ್ಯದಲ್ಲಿ ತೊಡಗಿರುವಾಗ ಆ ಪಾಠಕ್ಕೆ ಪೋಷಕವೆನಿಸುವ ಅಂಶಗಳನ್ನು ಇತರ ವಿಷಯಗಳಿಂದ ಆರಿಸಿಕೊಂಡು, ಚತುರತೆಯಿಂದ ಉಪಯೋಗಿಸಿಕೊಳ್ಳಬೇಕು. ಮಾಡುತ್ತಿರುವ ಪಾಠವನ್ನು ತೀರ ಬಿಟ್ಟು ಇತರ ಕಡೆಗೆ ವಾಲದೆ ಅದರ ಕ್ರಮದಲ್ಲೇ ಮಾಡಬೇಕು. ಎಲ್ಲೆಲ್ಲಿ ಎಷ್ಟೆಷ್ಟು ಇತರ ವಿಷಯ ಆವಶ್ಯಕವೋ ಅಲ್ಲಿ ಮಾತ್ರ ಅವಕ್ಕೆ ಅವಕಾಶ ಕಲ್ಪಿಸಿಕೊಳ್ಳಬೇಕು. ಅಂದು ಮಾತ್ರ ಶಾಲೆಯಲ್ಲಿ ಬೋಧಿಸುವ ವಿಷಯ ನಿಜವಾಗಿಯೂ ಜೀವನದಲ್ಲಿ ಕಾಣುವ ಸ್ವರೂಪದಲ್ಲಿರುವಂತೆ ಮಕ್ಕಳಿಗೆ ತೋರುತ್ತದೆ; ಶಾಲಾ ಜೀವನಕ್ಕೂ ಹೊರ ಜೀವನಕ್ಕೂ ಸಮನ್ವಯ ಕಲ್ಪನೆಯಾಗುತ್ತದೆ.

*

# ೧೨. ಉಪಾಧ್ಯಾಯರ ಪೂರ್ವ ಸಿದ್ಧತೆ ಪಾಠದ ಟಿಪ್ಪಣಿ

ಶಿಕ್ಷಣ ಶಾಖೆ ನಿಯಮಿಸಿರುವ ಪಠ್ಯವಸ್ತುವನ್ನನುಸರಿಸಿ, ಪಠ್ಯಪುಸ್ತಕವನ್ನು ಆಧಾರವಾಗಿಟ್ಟುಕೊಂಡು ಉಪಾಧ್ಯಾಯರು ಬೋಧನಕಾರ್ಯ ಮಾಡಬೇಕಷ್ಟೆ; ಅವರು ತಮ್ಮ ಪ್ರತಿಭೆ, ಕಲ್ಪನಾಶಕ್ತಿ, ಮನಶ್ಶಾಸ್ತ್ರ ಪರಿಚಯ ಮತ್ತು ಕೌಶಲ್ಯ-ಇವುಗಳಿಂದ ಆ ಕಾರ್ಯ ಯಶಸ್ವಿಯಾಗುವಂತೆ ಪ್ರಯತ್ನಿಸಬೇಕು—ಕುರುಡರಂತೆ ಪಠ್ಯವಸ್ತುವನ್ನೂ ಪಠ್ಯಪುಸ್ತಕವನ್ನೂ ಅನುಸರಿಸುವಂತಿಲ್ಲ; ಅದು ಸಾಧ್ಯವೂ ಇಲ್ಲ; ಫಲಪ್ರದವೂ ಅಲ್ಲ. ಪಠ್ಯವಸ್ತುವನ್ನು ಆಧಾರವಾಗಿಟ್ಟುಕೊಂಡರೂ ಚತುರ ಶಿಲ್ಪಿಯಂತೆ ಅದನ್ನು ತಿಂಗಳುವಾರು ಹಂಚಿಕೊಳ್ಳಬೇಕು; ಸಮಾಜದ ಪರಿಚಯದಿಂದ ಅದರಲ್ಲಿ ಯಾವ ಭಾಗಕ್ಕೆ ಎಷ್ಟರಮಟ್ಟಿನ ಪ್ರಾಧಾನ್ಯತೆ ಕೊಡಬೇಕೆಂಬುದನ್ನು ನಿರ್ಧರಿಸಿಕೊಳ್ಳಬೇಕು; ಪಠ್ಯಪುಸ್ತಕವನ್ನು ಅನುಸರಿಸಿದರೂ ಬೋಧನೆಗೆ ಉಚಿತವಾಗುವಂತೆ ಪಾಠಗಳಾಗಿ ವಿಂಗಡಿಸಿಕೊಳ್ಳಬೇಕು. ಎಂದಮೇಲೆ ಪಠ್ಯವಸ್ತು ಮತ್ತು ಪಠ್ಯಪುಸ್ತಕ ಕೇವಲ ಸ್ಥೂಲವಾದ ಮಾರ್ಗದರ್ಶನಕ್ಕೆ ಮಾತ್ರ; ಅವನ್ನು ಬೋಧನಕಾರ್ಯಕ್ಕೆ ಉಪಾಧ್ಯಾಯರು ತುಂಬ ಎಚ್ಚರದಿಂದ ಅನುಗೊಳಿಸಿಕೊಳ್ಳಬೇಕು.

**ಪಠ್ಯವಸ್ತುವಿನ ಹಂಚಿಕೆ:** ಪಠ್ಯಪುಸ್ತಕಗಳು ಸಾಮಾನ್ಯವಾಗಿ ಪಠ್ಯವಸ್ತುವನ್ನು ಅನುಸರಿಸಿಯೇ ಬರೆದಿರುತ್ತವೆ. ತಿಂಗಳುವಾರು ಹಂಚಿಕೆ ಹಾಕಿಕೊಳ್ಳುವಾಗ ಆ ಪಠ್ಯಪುಸ್ತಕವನ್ನು ಮುಂದಿಟ್ಟುಕೊಂಡು ಕೆಲವರು ತಿಂಗಳಿಗಿಷ್ಟು ಪುಟಗಳೆಂದು ಹಂಚಿಕೊಳ್ಳಲು ಯತ್ನಿಸಬಹುದು; ಇದು ಉಚಿತವೆನಿಸದ ಯಾಂತ್ರಿಕ ಹಂಚಿಕೆ. ಸಾಧಾರಣವಾಗಿ ಪುಸ್ತಕದ ವಿಷಯ ದೊಡ್ಡವರಿಗೆ ಸರಿಯೆನಿಸುವ ತಾರ್ಕಿಕ ದೃಷ್ಟಿಯಲ್ಲಿ ಅಡಕವಾಗಿದೆಯೇ ಹೊರತು, ಮಕ್ಕಳು ಕಲಿಯುವ ರೀತಿಯಲ್ಲಿಲ್ಲ. ಉಪಾಧ್ಯಾಯರು ತಮ್ಮ ಮನಶ್ಶಾಸ್ತ್ರ ಜ್ಞಾನದ ಪರಿಚಯದಿಂದ ಮಕ್ಕಳು ಕಲಿಯುವುದಕ್ಕೂ, ಬೋಧಿಸುವುದಕ್ಕೂ ಅನುಕೂಲಿಸುವಂತೆ ಅದನ್ನು ಪುನರ್ವಿಂಗಡಿಸಿ ಹಂಚಿಕೊಳ್ಳ

ಬೇಕು. ಅದರಲ್ಲಿರುವ ಕ್ರಮದಲ್ಲೇ ಹಂಚಿಕೆ ಹಾಕುವುದು ಅನೇಕ ವೇಳೆ ಉಚಿತವೆನಿಸಲಾರದು. ಹಾಗೆ ಪಠ್ಯವಸ್ತುವನ್ನು ತಿಂಗಳುವಾರು ಹಂಚಿಕೊಳ್ಳುವಾಗ ಆ ವರುಷ ಬರಬಹುದಾದ ಸಾಧಾರಣ ರಜಾ ದಿನಗಳನ್ನೂ ಧೀರ್ಘಕಾಲದ ರಜವನ್ನೂ, ಪರೀಕ್ಷೆಗಳಿಗಾಗಿ ವಿನಿಯೋಗವಾಗತಕ್ಕ ಕಾಲವನ್ನೂ ಗಣನೆಗೆ ತೆಗೆದುಕೊಂಡು, ಆ ಕಾಲಗಳಲ್ಲಿ ಪಾಠ ಮಾಡುವಂತಿಲ್ಲವೆಂಬ ಅಂಶವನ್ನು ಗಮನದಲ್ಲಿರಿಸಿಕೊಳ್ಳಬೇಕು. ಹೀಗೆ ಸೂಕ್ತವಾಗಿ ಪಠ್ಯವಸ್ತುವನ್ನು ಹಂಚಿದರೆ ಮಾತ್ರ ಯೋಜನೆಯಂತೆ ಬೋಧನಕಾರ್ಯ ನಡೆಯುತ್ತದೆ. ಇಲ್ಲದಿದ್ದರೆ, ಬಹು ಜಾಗ್ರತೆ ಮುಗಿಸುವುದೋ, ಕೊನೆಯಲ್ಲಿ ಅತಿ ಆತುರದಿಂದ ಓಡಿಸುವುದೋ ತಪ್ಪುವಂತಿಲ್ಲ. ಈ ರೀತಿಯಲ್ಲಿ ಪಠ್ಯವಸ್ತುವನ್ನು ಹಂಚಿಕೊಂಡರೂ ಪಠ್ಯಪುಸ್ತಕದ ಸಮಗ್ರ ಪರಿಚಯವೂ ಉಪಾಧ್ಯಾಯರಿಗೆ ಆವಶ್ಯಕ. ಆದರೆ ಅದರಲ್ಲಿರುವುದನ್ನೆಲ್ಲ ಮರುಮಾತಿಲ್ಲದೆ ಒಪ್ಪಬೇಕೆಂದಲ್ಲ: ಉಚಿತವಲ್ಲದ, ಅನಾವಶ್ಯಕವಾದ ಭಾಗಗಳನ್ನು ಬಿಡಬಹುದು; ಅದರಲ್ಲಿರದ, ಆವಶ್ಯಕವೆನಿಸಿದ ಭಾಗವನ್ನು ಇನ್ನಿತರ ಆಗರಗಳಿಂದ ಆರಿಸಿ ತಂದು ಸೇರಿಸಿಕೊಳ್ಳಬಹುದು. ಅದರಲ್ಲಿ ಕೊಟ್ಟಿರುವ ಉದಾಹರಣೆಗಳನ್ನೂ, ನಿದರ್ಶನಗಳನ್ನೂ, ಪ್ರಯೋಗಗಳನ್ನೂ, ವಿಷಯ ಪ್ರಾಮುಖ್ಯತೆಯನ್ನೂ ಶಾಲೆಯಿರುವ ಪ್ರಾದೇಶಿಕ ಸನ್ನಿವೇಶಗಳಿಗೆ ಅನ್ವಯಿಸುವಂತೆ ಬದಲಾಯಿಸಿಕೊಳ್ಳಬಹುದು.

ಹೀಗೆ ಹಂಚಿಕೊಂಡಮೇಲೆ ಒಂದೊಂದು ತಿಂಗಳ ಪಠ್ಯವಸ್ತುವನ್ನೂ ಹಲವು ಪಾಠಗಳಾಗಿ ವಿಂಗಡಿಸಿಕೊಳ್ಳಬೇಕು. ಆ ಪಾಠಗಳಿಗೆ ಉಚಿತವೆನಿಸುವ ಶಿರೋನಾಮೆಯನ್ನೂ ಕೊಡಬಹುದು. ಮಾಸಿಕ ಹಂಚಿಕೆಯಾಗಲಿ, ದೈನಂದಿನ ಹಂಚಿಕೆಯಾಗಲಿ, ಒಂದೊಂದೂ ಪ್ರತ್ಯೇಕ ವಸ್ತುಗಳಂತಿರಬಾರದು: ಒಂದೊಂದು ಪಾಠವೂ ಹಿಂದಿನ ಪಾಠದಿಂದ ಮುಂದುವರಿದಂತೆಯೂ, ಮುಂದಿನ ಪಾಠಕ್ಕೆ ಸಂಬಂಧಿಸುವಂತೆಯೂ ಇರಬೇಕು; ಹಾಗೆಯೇ ಒಂದೊಂದು ತಿಂಗಳ ಭಾಗವೂ ಹಿಂದಿನ ತಿಂಗಳ ಭಾಗದಿಂದ ಮುಂದುವರಿದಿದ್ದು, ಮುಂದಿನ ತಿಂಗಳ ಹಂಚಿಕೆಯ ಕಡೆ ನಿರ್ದೇಶಿಸುವಂತಿರಬೇಕು. ಆ ಮೂಲಕ ಸಮಗ್ರ ಪಠ್ಯವಸ್ತುವಿನ ಸಂಬಂಧ ಜ್ಞಾನ ಉಪಾಧ್ಯಾಯರಿಗೆ ಬರುತ್ತದೆ; ಮಕ್ಕಳಿಗೆ ಕಲಿವು ಒಂದಕ್ಕೊಂದಕ್ಕೆ

ಸಂಬಂಧಿಸಿರುವುದು ಗೊತ್ತಾಗಿ ಅರ್ಜಿಸುವ ಜ್ಞಾನದಲ್ಲಿ ಸಾಮರಸ್ಯವುಂಟಾಗುತ್ತದೆ. ಜೊತೆಗೆ, ಒಂದೊಂದು ಪಾಠ ಮುಗಿದಂತೆ ನಿಯೋಜಿಸಿದ ಗುರಿಯ ಕಡೆ ಒಂದು ಹೆಜ್ಜೆ ಮುಂದೆ ಸಾಗುತ್ತಿರುವುದೂ ಅರಿವಾಗುತ್ತದೆ.

**ಹಂಚಿಕೆಯ ಆವಶ್ಯಕತೆ:** ಹಂಚಿಕೆಯ ಈ ಯೋಜನೆಯಿಂದ ಉಪಾಧ್ಯಾಯರಿಗೆ ತಾವು ಬೋಧಿಸಬೇಕಾಗಿರುವ ಸಮಗ್ರ ಪಠ್ಯವಸ್ತುವಿನ ಪರಿಚಯವಾಗಿ ನಿರ್ದಿಷ್ಟ ಗುರಿ ಗೊತ್ತಾಗುತ್ತದೆ. ಪಠ್ಯಪುಸ್ತಕದಲ್ಲಿಲ್ಲದ ಯಾವ ಯಾವ ಸಮಸ್ಯೆಗಳನ್ನು, ಯಾವ ಯಾವ ಹೆಚ್ಚಿನ ವಿಷಯವನ್ನು ಬೋಧಿಸಬೇಕೆಂಬುದೂ ಅರಿವಾಗುತ್ತದೆ; ಅದಕ್ಕಾಗಿ ನೋಡಬೇಕಾದ ಇತರ ಪುಸ್ತಕಗಳ ಅಗತ್ಯವೂ ಕಂಡುಬರುತ್ತದೆ. ಪಾಠ ಕಾಲಕ್ಕೆ ಸರಿಯಾಗಿ ಮುಗಿಯುವಂತೆ ಮಿತವ್ಯಯ ದೃಷ್ಟಿಯಿಂದ ಬೋಧನ ಕಾರ್ಯವನ್ನೂ ಸಾಧಿಸಬಹುದು. ಹಂಚಿಕೆಯಿಲ್ಲದಿದ್ದರೆ ಪಠ್ಯವಸ್ತುವಿನ ಅಗಾಧವಾದ ಹೊರೆಯ ಅರಿವೇ ಇಲ್ಲದೆ ಹೇಳಿದ್ದನ್ನೇ ಹೇಳಿಕೊಂಡು ಕಾಲಹರಣಮಾಡಿಬಿಡಬಹುದು; ಅಥವಾ ಎಷ್ಟೊಂದು ಪಾಠವಿದೆಯೆಂದು ಮಧ್ಯೆ ಹಲವು ಭಾಗಗಳನ್ನು ಬಿಟ್ಟುಬಿಡಬಹುದು; ವಿಷಯಕ್ಕೆ ಸಂಬಂಧಿಸದ ಅಂಶಗಳಲ್ಲಿ ಕಾಲಹರಣವಾಗಿ, ಮಾಡಬೇಕಾದ ಮುಖ್ಯ ವಿಷಯ ಉಳಿದೇ ಕೊಳ್ಳಬಹುದು; ಪಠ್ಯವಸ್ತುವಿನ ಹಲವು ಭಾಗಗಳಿಗೆ ಹೆಚ್ಚಿನ ಗಮನವನ್ನೂ ಕಾಲವನ್ನೂ ವಿನಿಯೋಗಿಸಿ ಇತರ ಭಾಗಗಳನ್ನು ತಕ್ಕಷ್ಟು ವಿವರವಾಗಿ ಮಾಡದಂತಾಗಬಹುದು. ಪೂರ್ವಭಾವಿಯಾಗಿ ಹಾಕಿಕೊಳ್ಳುವ ಹಂಚಿಕೆಯಿಂದ ಇಂಥ ಅನೇಕ ತೊಂದರೆಗಳು ತಪ್ಪುತ್ತವೆ. ಮಕ್ಕಳೂ ಸರಿಯಾದ ಕ್ರಮದಲ್ಲಿ ಶಿಕ್ಷಣಾಭಿವೃದ್ಧಿಯನ್ನು ಪಡೆಯುತ್ತಾರೆ.

**ಪಾಠಕ್ಕೆ ಪೂರ್ವ ಸಿದ್ಧತೆ:** ಹಿಂದೆ ಪಠ್ಯಪುಸ್ತಕಗಳು ಅಪರೂಪವಾಗಿದ್ದುವು; ಆಗ ಉಪಾಧ್ಯಾಯರೂ ಪೂರ್ವ ಸಿದ್ಧತೆ ಆವಶ್ಯಕವೆಂದು ಭಾವಿಸಿದ್ದಂತೆ ತೋರುವುದಿಲ್ಲ. ಕೊಟ್ಟ ಪಾಠವನ್ನು ಬಾಲಕರು ಕಂಠಪಾಠ ಮಾಡಿಕೊಂಡು ಬಂದು ಒಪ್ಪಿಸಿಬಿಡುತ್ತಿದ್ದರು. ಉಪಾಧ್ಯಾಯರು ಮುಂದಿನ ದಿನ ಕಂಠಪಾಠ ಮಾಡಬೇಕಾದ ಭಾಗವನ್ನು ತೋರಿಸಿಬಿಡುತ್ತಿದ್ದರು, ಅಥವಾ ಹೇಳಿಕೊಡುತ್ತಿದ್ದರು. ಯಾರಾದರೂ ಕಂಠಪಾಠ ಮಾಡಿಕೊಂಡು ಬರದಿದ್ದರೆ ದಂಡ ಕಾದೇ ಇರುತ್ತಿತ್ತು. ಇಂಥ ಅಂದಿನ ಬೋಧನಕ್ರಮಕ್ಕೆ

ಪೂರ್ವ ಸಿದ್ಧತೆ ಅನಾವಶ್ಯಕವೆನಿಸಿದ್ದೀತು! ಶಿಕ್ಷಣರಂಗದ ಮೇಲೆ ಮನ ಶ್ಶಾಸ್ತ್ರದ ಪ್ರಭಾವ ಹೆಚ್ಚಿದಂತೆಲ್ಲ ಈ ಕ್ರಮ ಉಚಿತವಲ್ಲವೆಂದು ಗೊತ್ತಾಗುತ್ತ ಬಂತು. ಛಡಿಯ ಮುಂದೆ ಕಿರುಚುವ ಬೋಧನಕ್ರಮ ತಪ್ಪಿ, ಉಪಾ ಧ್ಯಾಯರು ಮಾತಾಡಿಕೊಂಡು ಪ್ರಶ್ನೆಗಳ ಮೂಲಕ ವಿಷಯವನ್ನು ಸ್ಫುಟ ಗೊಳಿಸಿಕೊಂಡು ಕಪ್ಪು ಹಲಗೆಯ ಮೇಲೆ ಬರೆದು ವಿವರಿಸುತ್ತ ಪಾಠ ಮಾಡುವ ನೂತನ ಕ್ರಮ ಜಾರಿಗೆ ಬರುತ್ತಿದೆ. ಆದ್ದರಿಂದ ಉಪಾಧ್ಯಾಯರಿಗೆ ಪೂರ್ವ ಸಿದ್ಧತೆ ಅನಿವಾರ್ಯವೆನಿಸಿದೆ.

ಶಿಕ್ಷಣರಂಗದಲ್ಲಿ ಮಕ್ಕಳಿಗೆ ಪ್ರಾಧಾನ್ಯತೆಯನ್ನು ಕೊಟ್ಟು ಮಮತೆ ಯಿಂದಲೂ ಆಸಕ್ತಿಯಿಂದಲೂ ಅವರ ಶಿಕ್ಷಣಕಾರ್ಯವನ್ನು ಸಾಧಿಸ ಬೇಕೆಂದು ಪ್ರತಿಪಾದಿಸಿ, ರೂಸೋ ಆಧುನಿಕ ಬೋಧನಕ್ರಮದ ತಳಹದಿ ಯನ್ನು ಹಾಕಿದನಷ್ಟೆ. ಅನಂತರ ಪೆಸ್ಟಾಲಾಜಿಯೆಂಬ ಮತ್ತೊಬ್ಬ ಫ್ರೆಂಚ್ ಶಿಕ್ಷಣವೇತ್ತನು ರೂಸೋವಿನ ಭಾವನೆಗೆ ಒಂದು ನಿರ್ದಿಷ್ಟ ರೂಪವನ್ನು ಕೊಟ್ಟು ಪ್ರಾಯೋಗಿಕವಾಗಿ ಆಚರಣೆಗೆ ತಂದನು; ಮಕ್ಕಳಿಗೆ ಜ್ಞಾನಾರ್ಜನೆಯಲ್ಲಿ ರುವ ಕಾತರತೆಯನ್ನುಪಯೋಗಿಸಿಕೊಂಡು ಪದಾರ್ಥ (ನಿದರ್ಶನ) ಗಳನ್ನು ಮುಂದಿಟ್ಟುಕೊಂಡು ಮಾತಾಡುತ್ತ, ಪ್ರಶ್ನಿಸುತ್ತ, ಉತ್ತರ ಹೇಳುತ್ತ, ಹೇಳಿಸುತ್ತ ಪಾಠ ಹೇಳುವ ಹೊಸ ಕ್ರಮವನ್ನು ಬಳಕೆಗೆ ತಂದನು. ರೂಸೋ ಆಧುನಿಕ ಬೋಧನಕ್ರಮದ ತತ್ವದ ತಳಹದಿ ಹಾಕಿದಂತೆ ಪೆಸ್ಟ ಲಾಜಿ ಆಧುನಿಕ ಬೋಧನಕ್ರಮಕ್ಕೆ ಪ್ರಾಯೋಗಿಕವಾಗಿ ಒಂದು ನಿರ್ದಿಷ್ಟ ಸ್ವರೂಪವನ್ನು ಕೊಟ್ಟನು. ಅದು ವಸ್ತುಪಾಠವೆಂಬ ಹೆಸರಿನಿಂದ ಜಗತ್ತಿನ ಎಲ್ಲ ಕಡೆಯೂ ಹಬ್ಬುತ್ತ ಬಂತು. ಉಪಾಧ್ಯಾಯರು ಹೆಚ್ಚಾಗಿ ಮಾತಾಡು ವುದೂ ಮಕ್ಕಳು ವಿಷಯವನ್ನು ಗ್ರಹಿಸುವಂತೆ ವಿವರಿಸುವುದೂ ಬಳಕೆಗೆ ಬಂದುವು. ಈ ಹೊಸ ಪಾಠಕ್ರಮ ಜನಪ್ರಿಯವಾದಂತೆ, ಪಾಠಮಾಡಲು ಅನುಕೂಲಿಸುವಂತೆ ಒಂದು ರೀತಿಯ ಮಾದರಿಯ ಟಿಪ್ಪಣಿಗಳೂ ಹುಟ್ಟಿ ಕೊಂಡುವು. ಎಲ್ಲ ವಿಷಯಗಳ ಮೇಲೂ ಸಿದ್ಧವಾದ ಟಿಪ್ಪಣಿ ಮಾರಾಟಕ್ಕೆ ದೊರೆಯುವಂತಾದುವು. ಆದರೆ ಆ ಟಿಪ್ಪಣಿಗಳಲ್ಲಿ ಯಾವ ಕ್ರಮವೂ ಇಲ್ಲದೆ ವಿಷಯದ ವಿವರಣೆ ಮಾತ್ರ ದೊರಕುವಂತಿತ್ತು. ಹತ್ತೊಂಬತ್ತನೆಯ ಶತ ಮಾನದಲ್ಲಿ ಹರ್ಬಾರ್ಟನು ರೂಸೋ ಮತ್ತು ಪೆಸ್ಟಲಾಜಿ—ಇವರಿಬ್ಬರ

ನೂತನ ಕ್ರಮಗಳನ್ನೂ ಅಳವಡಿಸಿಕೊಂಡು ಪಾಠಬೋಧನೆಗೆ ತರ್ಕಶಾಸ್ತ್ರ ಸಮ್ಮತವೆನಿಸುವ ಒಂದು ನೂತನಕ್ರಮವನ್ನು ರೂಢಿಸಿಕೊಟ್ಟನು. ಇದನ್ನೇ ಹಿಂದೆ ಪಂಚ ಸೋಪಾನದ ಬೋಧನಕ್ರಮವೆಂದು ವಿವರವಾಗಿ ಅವಲೋಕಿಸಿರುವುದು. ಈ ಕ್ರಮ ಎಲ್ಲ ದೇಶಗಳಲ್ಲೂ ಬಹು ಜಾಗ್ರತೆ ಬಳಕೆಗೆ ಬಂದುಬಿಟ್ಟಿತು. ಕ್ರಮಕ್ರಮವಾಗಿ, ಆ ಬೋಧನಕ್ರಮ ಮನಶ್ಶಾಸ್ತ್ರ ಸಮ್ಮತವಾದುದೆಂದೂ ಸ್ಥಿರಪಡುತ್ತ ಬಂತು. ಆದರೆ ಈ ಶತಮಾನದ ಆದಿಯಲ್ಲಿ ಜಾನ್ ಡ್ಯೂಯಿ, ಮೊದಲಾದವರು ನಿತ್ಯಜೀವನದಲ್ಲಿ ತಿಳಿವಳಿಕೆಯುಂಟುಮಾಡಲು ಅನುಕೂಲಿಸುವ ಉದ್ಯಮ ಶಿಕ್ಷಣಕ್ರಮವನ್ನು ಪ್ರಚಾರಕ್ಕೆ ತಂದರು. ಈ ನೂತನ ಕ್ರಮವನ್ನು ಅನುಸರಿಸಿ ಇನ್ನೂ ಹಲವು ಬೋಧನಕ್ರಮಗಳು ಬಳಕೆಗೆ ಬಂದಿವೆ. ಆದಗೂ ಹರ್ಬಾರ್ಟನ ಪಂಚ ಸೋಪಾನಗಳಕ್ರಮ ಇನ್ನೂ ಬಳಕೆಯಲ್ಲಿರುವುದಲ್ಲದೆ ಉಪಯುಕ್ತವೂ ಆಗಿದೆ.

ತಿಂಗಳುವಾರು ಹಂಚಿಕೊಂಡಿರುವ ಪಠ್ಯವಸ್ತುವನ್ನು ಹಲವು ಪಾಠಗಳನ್ನಾಗಿ ವಿಂಗಡಿಸಿಕೊಂಡು ಉಪಾಧ್ಯಾಯರು ಆಯಾ ದಿನದ ಪಾಠಕ್ಕೆ ಸಿದ್ಧವಾಗಿ ಬರಬೇಕು. ಈ ಪೂರ್ವ ಸಿದ್ಧತೆ ಅವರ ಮನಸ್ಸಿನಲ್ಲೇ ಆಗಿರಬಹುದು; ಆದರೆ ಅದಕ್ಕಿಂತ ಉತ್ತಮ ಮಾರ್ಗ ಟಿಪ್ಪಣಿಯ ರೂಪದಲ್ಲಿ ಬರೆದುಕೊಂಡು ಬರುವುದು. ಇದೇ ಪಾಠದ ಟಿಪ್ಪಣಿ. ಹಿಂದೆ ಉಲ್ಲೇಖಿಸಿದ ಪಂಚ ಸೋಪಾನದ ಕ್ರಮದಲ್ಲೇ ಅದನ್ನು ಬರೆದುಕೊಂಡು ಬರುವುದು ಈಗ ಸಂಪ್ರದಾಯದಲ್ಲಿದೆ. ಈ ಟಿಪ್ಪಣಿಗಳ ಸಿದ್ಧತೆ ಮೊದಲು ಉಪಾಧ್ಯಾಯರ ಶಿಕ್ಷಣ ಸಂಸ್ಥೆಗಳಲ್ಲೂ, ಆಮೇಲೆ ಪ್ರೌಢಶಾಲೆಗಳಲ್ಲೂ, ಕ್ರಮಕ್ರಮವಾಗಿ ಇತರ ಶಾಲೆಗಳಲ್ಲೂ ಆಚರಣೆಗೆ ಬಂದುಬಿಟ್ಟಿದೆ. ಸಾಮಾನ್ಯ ನಿಯಮ ನಿರೂಪಣೆಯ ಬೋಧನೆಯನ್ನೊಳಗೊಂಡ ಪಾಠಗಳನ್ನುಳಿದು ಮಿಕ್ಕ ಪಾಠಗಳಿಗೆ ಸಾಮಾನ್ಯವಾಗಿ ಪೀಠಿಕೆ ಸ್ಪುಟೀಕರಣ ಮತ್ತು ಪ್ರಯೋಗ ಅಥವಾ ಪುನರ್ವಿಮರ್ಶೆ—ಈ ಮೂರು ಅಂತಸ್ತುಗಳನ್ನು ಮಾತ್ರ ಉಪಯೋಗಿಸಿಕೊಂಡು ಟಿಪ್ಪಣಿಯನ್ನು ಬರೆಯುವುದು ಹೆಚ್ಚು ಪ್ರಚಾರಕ್ಕೆ ಬರುತ್ತಿದೆ.

**ಟಿಪ್ಪಣಿಯ ತಯಾರಿಕೆ:** ಟಿಪ್ಪಣಿ ಉಪಾಧ್ಯಾಯರ ಪೂರ್ವ ಸಿದ್ಧತೆಯ ಒಂದು ಅಂಗ; ಅವರು ತರಗತಿಯಲ್ಲಿ ಸಾಧಿಸಬೇಕೆಂದಿರುವ

ಕಾರ್ಯದ ಯೋಜನೆ; ಬೋಧನ ಕಾರ್ಯಕ್ಕೆ ನೆರವಾಗುವ ಒಂದು ಸಲಕರಣೆ. ಪೂರ್ವಭಾವಿಯಾಗಿ ಅದನ್ನು ತಯಾರಿಸುವಾಗ ಉಪಾಧ್ಯಾಯರು ಪುಸ್ತಕದ ಪುಟವನ್ನು ಗೆರೆಗಳನ್ನು ಹಾಕಿಕೊಂಡು ವಿಭಾಗ ಮಾಡಿಕೊಳ್ಳಬೇಕು. ವಿಷಯ ವಿಂಗಡನೆ, ವಿಷಯ, ಬೋಧನಕ್ರಮ, ಚಿತ್ರ ಪ್ರಯೋಗ ಇತ್ಯಾದಿ, ಎಂಬುದಾಗಿ ನಾಲ್ಕು ಶಿರೋನಾಮೆಗಳನ್ನು ಹಾಕಿಕೊಳ್ಳಬೇಕು. ಪಠ್ಯಪುಸ್ತಕದಲ್ಲಿ ಆ ಪಾಠಕ್ಕೆ ಸಂಬಂಧಿಸಿದ ಭಾಗವನ್ನೂ, ಆವಶ್ಯಕವೆನಿಸುವ ಇತರ ಪುಸ್ತಕಗಳನ್ನೂ ಓದಿ ಬೋಧಿಸಬೇಕಾದ ವಿಷಯದ ಪೂರ್ಣ ಪರಿಚಯ ಮಾಡಿಕೊಳ್ಳಬೇಕು. ಆ ಪಾಠ ಬೋಧನೆಯಿಂದ ಸಾಧಿಸಬೇಕಾದ ಪ್ರಧಾನ ಮತ್ತು ಗೌಣಗುರಿಗಳನ್ನು ಟಿಪ್ಪಣಿಯ ಮೇಲ್ಭಾಗದಲ್ಲಿ ಬರೆಯಬೇಕು. ಇದು ಉಪಾಧ್ಯಾಯರ ಉಪಯೋಗಕ್ಕಾಗಿ; ಅಂದಿನ ವಿಷಯಕ್ಕೆ ಸಂಬಂಧಿಸಿದಂತೆ ಮಕ್ಕಳ ಪೂರ್ವ ಪರಿಚಯವನ್ನು ಸ್ಮರಣೆಗೆ ತರಲು ಉಚಿತವೆನಿಸುವ ಪೀಠಿಕೆಯನ್ನು ಆಲೋಚಿಸಿ, ಬರೆಯಬೇಕು. ಇದು ಕಥೆ, ಗಾದೆ, ಹಿಂದಿನ ಪಾಠದ ಪುನರಾವರ್ತನೆ, ಅಥವಾ ಕೆಲವು ಪರಿಚಯದ ಮಾತುಗಳು—ಈ ಯಾವುದಾದರೂ ಒಂದು ರೂಪದಲ್ಲಿರಬಹುದು. ಬೋಧನಕ್ರಮದ ವಿಭಾಗದಲ್ಲಿ ಅದನ್ನು ಮಕ್ಕಳಿಗೆ ತಿಳಿಸುವುದಕ್ಕೆ ಆವಶ್ಯಕವಾದ ಪ್ರಶ್ನೆಗಳನ್ನು ಹಾಕಿಕೊಳ್ಳಬೇಕು. ಇದು ಟಿಪ್ಪಣಿಯ ತಯಾರಿಕೆಯ ಮೊದಲಿನ ಅಂತಸ್ತು. ಈ ಅಂತಸ್ತಿನ ಕೊನೆಯಲ್ಲಿ ಮಕ್ಕಳು ಆದಿನ ಕಲಿಯಬೇಕಾದ ಪ್ರಶ್ನೆಯನ್ನೋ, ಬಿಡಿಸಬೇಕಾದ ಸಮಸ್ಯೆಯನ್ನೋ, ಮಾಡಬೇಕಾದ ಲೆಕ್ಕದ ವಿಷಯವನ್ನೋ ಅವರ ಮುಂದಿಟ್ಟು ಅವರು ಉದ್ದೇಶಪೂರ್ವಕವಾಗಿ ಆಸಕ್ತಿಯಿಂದ ಪಾಠಕ್ಕೆ ಗಮನ ಕೊಡುವಂತೆ ಮಾಡಲು ಆ ದಿನದ ಉದ್ದೇಶವನ್ನು ಸೂಕ್ಷ್ಮವಾಗಿ ಬರೆದುಕೊಂಡಿರಬೇಕು.

ಎರಡನೆಯ ಸೋಪಾನದಲ್ಲಿ ವಿಷಯ ಪ್ರದರ್ಶನ. ಗದ್ಯವನ್ನೋ ಪದ್ಯವನ್ನೋ ಮಾಡುವುದಿದ್ದರೆ ಆ ಭಾಗವನ್ನು ಮಾದರಿಯಾಗಿ ಉಪಾಧ್ಯಾಯರು ಓದುವುದೆಂದೂ, ಚಿತ್ರ, ಸಂಗೀತ, ನೃತ್ಯ—ಇತ್ಯಾದಿ ಕಲಾ ಪಾಠಗಳಾದರೆ ಅಂದು ಕಲಿಸಬೇಕಾದ್ದನ್ನು ಪ್ರದರ್ಶಿಸಬೇಕೆಂದೂ, ಲೆಕ್ಕಗಳಾದರೆ ಮಾಡಬೇಕಾದ ಲೆಕ್ಕಗಳನ್ನು ಅವರ ಮುಂದಿಡಬೇಕೆಂದೂ ಗುರುತಿಸಬೇಕು. ಯಾವ ಪಾಠವನ್ನಾಗಲಿ ಕಲಿಯುವ ಮತ್ತು ಬೋಧಿಸುವ

ದೃಷ್ಟಿಯಿಂದ ಹಲವು ಭಾಗಗಳನ್ನಾಗಿ ವಿಂಗಡಿಸಬೇಕು. ಆ ಒಂದೊಂದು ಭಾಗಕ್ಕೂ ಒಂದೊಂದು ಹೆಸರನ್ನು ಕೊಡಬಹುದು. ವಿಷಯ ವಿಂಗಡನೆಯ ಶೀರ್ಷಿಕೆಯಲ್ಲಿ ಆ ಹೆಸರನ್ನೂ, ವಿಷಯದ ಶೀರ್ಷಿಕೆಯಲ್ಲಿ ಆಭಾಗದ ಪೂರ್ಣ ವಿವರವನ್ನೂ, ಬೋಧನಕ್ರಮದ ಶೀರ್ಷಿಕೆಯಲ್ಲಿ ಆ ಭಾಗದ ವಿಷಯವನ್ನು ಮಕ್ಕಳಿಗೆ ಬೋಧಿಸಿ, ಸ್ಫುಟೀಕರಿಸಲು ಅನುಸರಿಸತಕ್ಕ ಪ್ರಶ್ನೆಗಳು, ವಿವರಣೆ, ಸಲಹೆ, — ಇತ್ಯಾದಿಯಾದ ಕ್ರಮಗಳನ್ನೂ ಬರೆಯಬೇಕು. ಕೊನೆಯ ಶೀರ್ಷಿಕೆಯಲ್ಲಿ ಆ ಪಾಠಬೋಧನೆಗೆ ಅವಶ್ಯಕವೆನಿಸುವ ಚಿತ್ರ ಗಳು, ಕಪ್ಪು ಹಲಗೆಯ ಮೇಲೆ ಮಾಡಬೇಕಾದ ಇತರ ಕೆಲಸಗಳು, ಮಕ್ಕಳು ಕಲಿಯಬೇಕಾದ ಕ್ಲಿಷ್ಟಪದಗಳು, ಹೃದ್ಗತ ಮಾಡಿಕೊಳ್ಳಬೇಕಾದ ಪದ್ಯಭಾಗ, ನಿಯಮ, ತತ್ತ್ವ—ಇತ್ಯಾದಿಗಳು, ನಡಸಬೇಕಾದ ಪ್ರಯೋಗ ಗಳಿಗೆ ಬೇಕಾದ ಉಪಕರಣಗಳು–ಮುಂತಾದವನ್ನು ಗುರುತಿಸಿಕೊಳ್ಳಬೇಕು. ಒಂದೊಂದು ಭಾಗದ ಬೋಧನೆ ಮುಗಿದೊಡನೆ ಆ ಭಾಗದ ಸಾರಾಂಶವನ್ನು ವಿಷಯದ ಶೀರ್ಷಿಕೆಯಲ್ಲೂ, ಮಕ್ಕಳಿಂದ ಆ ಸಾರಾಂಶವನ್ನು ಹೇಳಿಸಲು ಉಚಿತವಾದ ಪ್ರಶ್ನೆಗಳನ್ನು ಬೋಧನಕ್ರಮದ ಶೀರ್ಷಿಕೆಯಲ್ಲೂ ಬರೆಯ ಬೇಕು. ಆ ಒಂದು ಭಾಗ ಅಲ್ಲಿಗೆ ಮುಗಿಯಿತು. ಮುಂದಿನ ಭಾಗಕ್ಕೂ ಇದೇ ರೀತಿಯಲ್ಲಿಯೇ ಬರೆದುಕೊಳ್ಳಬೇಕು. ಆದರೆ ಮುಂದಿನ ಭಾಗವನ್ನು ಆರಂಭಿಸುವ ಮುನ್ನ ಹಿಂದಿನ ಭಾಗದೊಡನೆ ಅದನ್ನು ಸಂಬಂಧಿಸಿಕೊಳ್ಳಲು ಅನುಕೂಲಿಸುವಂತೆ ಪುಟ್ಟ ಪೀಠಿಕೆಯೊಂದನ್ನು ಹಾಕಿಕೊಳ್ಳಬೇಕು. ಇದೇ ರೀತಿಯಲ್ಲಿ ಎಲ್ಲ ಭಾಗದ ಪ್ರದರ್ಶನವೂ ಸ್ಫುಟೀಕರಣವೂ ಆಗುವಂತೆ ಟಿಪ್ಪಣಿ ತಯಾರಾಗಬೇಕು. ಇದು ಎರಡನೆಯ ಅಂತಸ್ತು.

ಹೋಲಿಕೆಯ ಮತ್ತು ನಿಯಮ ನಿರೂಪಣೆಯ ಆವಶ್ಯಕತೆ ಆ ಪಾಠ ದಲ್ಲಿದ್ದರೆ ಈ ಎರಡು ಅಂತಸ್ತುಗಳನ್ನೂ ಎಚ್ಚರಿಕೆಯಿಂದ ಸಿದ್ಧಪಡಿಸಬೇಕು. ಸ್ಫುಟೀಕರಿಸಿದ ಅಂಶಗಳನ್ನೆಲ್ಲ ಉಚಿತವಾಗಿ ಟಿಪ್ಪಣಿಯಲ್ಲಿ ಬರೆದುಕೊಂಡು ಅವುಗಳಿಗಿರುವ ಸಂಬಂಧವನ್ನು ಮಕ್ಕಳಿಂದ ಹೇಳಿಸಲು ಅನುಕೂಲಿಸುವ ಪ್ರಶ್ನೆಗಳನ್ನೂ ಅಲ್ಲಿ ಬರೆದುಕೊಳ್ಳಬೇಕು. ಹಾಗೆಯೇ ಮಕ್ಕಳನ್ನು ಕ್ರಮ ಕ್ರಮವಾಗಿ ನಿಯಮದ ಕಡೆಗೆ ಸೆಳೆಯುವಂತೆ ಪ್ರಶ್ನೆಗಳನ್ನೂ ಹಾಕಿ ಅವ ರಿಂದ ನಿಯಮದ ಸ್ವರೂಪವನ್ನು ಹೇಳಿಸುವ ಕ್ರಮವನ್ನೂ ತೋರಿಸಬೇಕು.

ಆ ನಿಯಮದ ಸರಿಯಾದ ಸ್ವರೂಪವನ್ನು ವಿಷಯದ ಶೀರ್ಷಿಕೆಯಲ್ಲಿ ಬರೆದುಕೊಳ್ಳಬೇಕು. ಹೋಲಿಕೆ ಮತ್ತು ನಿಯಮ ನಿರೂಪಣೆಯ ಆವಶ್ಯಕತೆಯಿಲ್ಲದ ಪಾಠದಲ್ಲಿ ಈ ಎರಡು ಅಂತಸ್ತುಗಳನ್ನು ಟಿಪ್ಪಣಿಯಲ್ಲಿ ತೋರಿಸುವಂತಿಲ್ಲ. ಕಲಾಬೋಧನೆಯ ಪಾಠಗಳಲ್ಲಿ ಹೊಸ ಪಾಠಕ್ಕೆ ಅನ್ವಯಿಸಿದ ಕೆಲವು ವಿವರಗಳನ್ನೋ, ನಿಯಮಗಳನ್ನೋ ಹೇಳಬೇಕಾದಾಗ ಅವನ್ನು ಗುರುತಿಸಿಕೊಳ್ಳಬೇಕು. ಆ ಅಂಶಗಳನ್ನು ಮಕ್ಕಳು ತಿಳಿದುಕೊಳ್ಳುವಂತೆ ಮಾಡಲು ಉಚಿತವಾದ ಪ್ರಶ್ನೆಗಳನ್ನೂ ಬರೆದುಕೊಳ್ಳಬೇಕು.

ಕೊನೆಯ ಅಂತಸ್ತು ಸಾಮಾನ್ಯವಾಗಿ ಪ್ರಯೋಗವೋ ಪುನರಾವರ್ತನೆಯೋ ಆಗಿರುತ್ತದೆ. ಪದ್ಯ, ಗದ್ಯ ಪಾಠವಾದರೆ ಇಡೀ ಪಾಠದ ನೂತನ ಪರಿಚಯವಾಗುವಂತೆ ಒಂದು ಸಮಗ್ರ ಸಾರಾಂಶ ವಿಷಯದ ಶೀರ್ಷಿಕೆಯಲ್ಲಿ ಬರಬೇಕು. ಅದನ್ನು ಹೇಳಿಸಲು ತಕ್ಕ ಪ್ರಶ್ನಾವಳಿಗಳು ಬೋಧನಕ್ರಮದಲ್ಲಿರಬೇಕು. ಅಥವಾ ಇಡೀ ಸಾಹಿತ್ಯ ಭಾಗವನ್ನೇ ಹಲವಾರು ಮಕ್ಕಳಿಂದ ಪೂರ್ತಿಯಾಗಿ ಓದಿಸಬೇಕೆಂದಾದರೂ ಸೂಚಿಸಬಹುದು. ಗಣಿತಪಾಠದಲ್ಲಾದರೆ ಎರಡನೆಯ ಅಂತಸ್ತಿನಲ್ಲಿ ಮಾಡಿದ ಮಾದರಿಯಲ್ಲಿ ಹೆಚ್ಚು ಲೆಕ್ಕಗಳನ್ನು ಪ್ರಾಯೋಗಿಕವಾಗಿ ಈ ಅಂತಸ್ತಿನಲ್ಲಿ ಮಾಡಿಸಲು, ಹೊಸ ಲೆಕ್ಕಗಳನ್ನು ಬರೆದುಕೊಂಡಿರಬೇಕು. ಅವನ್ನು ಮಾಡಿಸುವ ಕ್ರಮವೂ ಇರಬೇಕು.

ಕೊನೆಯಲ್ಲಿ ಆದಿನದ ಪಾಠಕ್ಕೆ ಸಂಬಂಧಿಸಿದ ಮನೆಯ ಕೆಲಸವನ್ನೋ, ಇತರ ಪುಸ್ತಕಗಳನ್ನು ಪರಿಚಯ ಮಾಡಿಕೊಳ್ಳುವುದನ್ನೋ ತಿಳಿಸಲನುಕೂಲಿಸುವಂತೆ ಅವನ್ನೆಲ್ಲ ಗುರುತು ಮಾಡಿಕೊಳ್ಳಬೇಕು; ಮುಂದಿನ ಪಾಠದ ವಿಷಯವನ್ನು ಸೂಕ್ಷ್ಮವಾಗಿ ಅವರಿಗೆ ತಿಳಿಯುವಂತೆ ಹೇಳಲು ಸೂಚನೆಯನ್ನೂ ಅಲ್ಲಿ ಬರೆದುಕೊಳ್ಳಬೇಕು.

ಒಟ್ಟಿನಲ್ಲಿ ಟಿಪ್ಪಣಿಯಲ್ಲಿ ಉಪಾಧ್ಯಾಯರು ಬೋಧಿಸಬೇಕಾದ ವಿಷಯವೂ, ಅನುಸರಿಸಲಿರುವ ಬೋಧನಕ್ರಮವೂ, ಆ ಕಾರ್ಯಕ್ಕೆ ಆವಶ್ಯಕವೆನಿಸುವ ಉಪಕರಣಗಳೂ ಬರೆದಿರಬೇಕು. ಅವಕ್ಕೆ ವಿವರವಾದ ಪಾಠದ ಟಿಪ್ಪಣಿಯೆಂದು ಹೆಸರು.

ಬೋಧನೆಗೆ ಆವಶ್ಯಕವೆನಿಸುವ ಪಾಠೋಪಕರಣಗಳನ್ನೂ ಟಿಪ್ಪಣಿಯಲ್ಲಿ ಗುರುತಿಸಿಕೊಂಡರೆ ಅವನ್ನು ಸಕಾಲದಲ್ಲಿ ಒದಗಿಸಿಕೊಳ್ಳಲು ಅನು

ಕೂಲವಾಗುತ್ತದೆ. ಟಿಪ್ಪಣಿಯನ್ನು ಪಾಠಮಾಡುವಾಗ ಮೇಜಿನ ಮೇಲೆ ಇರಿಸಿಕೊಂಡಿರಬೇಕು. ಅವಶ್ಯಕವಾದ ಅಂಶಿಅಂಶಗಳನ್ನು ನೋಡಿಕೊಳ್ಳಲು ಅದರಿಂದ ಸಹಾಯವಾಗುತ್ತದೆ. ಕೆಲವರು ಮೊದಲಿಂದ ಕೊನೆಯವರೆಗೂ ಟಿಪ್ಪಣಿಯನ್ನು ನೋಡಿಕೊಳ್ಳುತ್ತಲೇ ಇರುತ್ತಾರೆ. ಅದರಿಂದ ಅವರ ಪೂರ್ವಸಿದ್ಧತೆಯ ಯೋಜನೆ ಸಮರ್ಪಕವಾಗಿ ಅವರ ಮನಸ್ಸಿನಲ್ಲಿಲ್ಲವೆಂದು ವ್ಯಕ್ತವಾಗುತ್ತದೆ. ಮನಸ್ಸಿನಲ್ಲಿ ನೆನಪಿಡಲಾರದ ಅಂಶಗಳನ್ನು ಮಾತ್ರ ನೋಡಿಕೊಳ್ಳುವುದು ಉಚಿತವೆಂದು ತಿಳಿಯಬೇಕು. ಮತ್ತೆ ಕೆಲವರು ಪೂರ್ಣವಾಗಿ ಆ ಕಡೆ ಗಮನವನ್ನೇ ಕೊಡುವುದಿಲ್ಲ. ಕೆಲವು ಅಂಶಿ ಅಂಶಗಳು, ವಿವರಣೆಗಳು, ಚಿತ್ರ, ಕ್ಲಿಷ್ಟಪದಗಳು, ಹೃದ್ಗತ ಮಾಡಿಸಬೇಕಾದ ಭಾಗಗಳು–ಇವನ್ನು ಅದರಿಂದ ನೋಡಿಕೊಳ್ಳಬಹುದು. ಟಿಪ್ಪಣಿಯಲ್ಲಿ ಬರೆದಿರುವುದು ಸ್ಥೂಲವಾದ ಪಾಠಯೋಜನೆಯೇ ಹೊರತು ಚಾಚೂ ತಪ್ಪದಂತೆ ಯಾಂತ್ರಿಕವಾಗಿ ಅದನ್ನು ಅನುಸರಿಸಬೇಕಾಗಿಲ್ಲ: ಅನುಸರಿಸಲು ಸಾಧ್ಯವೂ ಇಲ್ಲ; ಅನುಸರಿಸಲೂ ಬಾರದು. ತರಗತಿಯಲ್ಲಿ ಅವಶ್ಯಕತೆಯನ್ನು ನೋಡಿಕೊಂಡು ಉಚಿತವರಿತು ಅದನ್ನು ಉಪಯೋಗಿಸಿಕೊಳ್ಳಬೇಕು; ನೂತನವಾಗಿ, ಅನಿರೀಕ್ಷಿತವಾಗಿ ಒದಗುವ ಸನ್ನಿವೇಶಗಳಿಗೆ ಒಪ್ಪುವಂತೆ ಬದಲಾಯಿಸಿಕೊಳ್ಳಬೇಕು. ಇಷ್ಟಾದರೂ ಟಿಪ್ಪಣಿಯ ರೂಪದಲ್ಲಿ ಪೂರ್ವಸಿದ್ಧತೆ ಮಾಡಿಕೊಂಡು ಬರುವುದರಿಂದ ತುಂಬ ಅನುಕೂಲ: ಆ ಪಾಠದಲ್ಲಿ ಸಾಧಿಸಬೇಕಾಗಿರುವ ಗುರಿ ನಿರ್ದಿಷ್ಟ ರೂಪದಲ್ಲಿ ಉಪಾಧ್ಯಾಯರ ಮುಂದೆ ಸ್ಪಷ್ಟವಾಗಿ ಗೋಚರಿಸುತ್ತದೆ; ಬೋಧಿಸಬೇಕಾದ ವಿಷಯದಲ್ಲಿ ತಕ್ಕಷ್ಟು ಪರಿಚಯವೂ ಆಗಿರುತ್ತದೆ; ಹಿಂದಿನ ದಿನ ಮಾಡಿರುವ ಪಾಠಕ್ಕೆ ಸಂಬಂಧ ಕಲ್ಪಿಸಿಕೊಳ್ಳಲು ಸಹಾಯ-ವಾಗುತ್ತದೆ; ಆ ಕಾಲಾವದಿಯಲ್ಲಿ ಮಾಡಿ ಮುಗಿಸಬಹುದಾದ ಪಾಠದ ಪರಿಮಾಣವೂ ಪರಿಚಯದಲ್ಲಿರುತ್ತದೆ; ಪಾಠ ಮಾಡುವಾಗ ನೇರವಾದ ಮಾರ್ಗದಲ್ಲಿ ಹೋದು ಗುರಿಯನ್ನು ಸಾಧಿಸದೆ ಅಡ್ಡ ದಾರಿಯಲ್ಲಿ ಕಾಲವ್ಯಯ ಮಾಡುವ ಸಂಭವ ತಪ್ಪುತ್ತದೆ. ಮುಂಚಿತವಾಗಿಯೇ ಪಾಠದಲ್ಲಿ ಯಾವ ಭಾಗ ಮುಖ್ಯ, ಯಾವುದು ಅಲ್ಲ, ಯಾವುದನ್ನು ಕಂಠಪಾಠ ಮಾಡಿಸಬೇಕು—ಇವೇ ಮೊದಲಾದ ಅಂಶಗಳು ಉಪಾಧ್ಯಾಯರ ಮನಸ್ಸಿನಲ್ಲಿ ನಿಷ್ಕರ್ಷಿತವಾಗಿರುತ್ತವೆ. ಆರಂಭಿಸುವಾಗ ಯೋಜನೆಯಲ್ಲಿ ನಿರ್ದಿಷ್ಟ ಕ್ರಮವಿಧು

ವುದರಿಂದ ಶಾಸ್ತ್ರೀಯ ತಳಹದಿಯ ಮೇಲೆ ಬೋಧನೆ ಮೊದಲಾಗಲು ಅವಕಾಶವಿರುತ್ತದೆ. ಪೀಠಿಕೆ, ಸ್ಪುಟೀಕರಣ, ಪುನರಾವರ್ತನೆ—ಈ ಎಲ್ಲ ಅಂತಸ್ತುಗಳಿಗೂ ಉಚಿತವಾದ ಪ್ರಶ್ನೆಗಳು ಸಿದ್ಧವಾಗಿರುವುದರಿಂದ ಉದ್ದೇಶಿಸಿದ ಯೋಜನೆಯಂತೆ ಪಾಠ ಯಶಸ್ವಿಯಾಗಲು ನೆರವಾಗುತ್ತದೆ; ಕಾಲಹರಣ ಆ ಮೂಲಕ ತಪ್ಪುತ್ತದೆ. ಹೊಸ ಪುಸ್ತಕಗಳನ್ನು ಮಕ್ಕಳು ಓದುವಂತೆ ತಿಳಿಸಲೂ, ಸಾರಾಂಶವನ್ನು ಬರಸಲೂ, ಮನೆಯಲ್ಲಿ ಮಾಡಬೇಕಾದ ಅಭ್ಯಾಸವನ್ನು ಕೊಡುವುದಕ್ಕೂ ನೆರವಾಗುತ್ತದೆ. ಮೇಲಾಗಿ, ಸಲ ಸಲಕ್ಕೂ ಪಠ್ಯ ಪುಸ್ತಕವನ್ನು ಓದುವ, ಅಥವಾ ಬಿಚ್ಚಿ ನೋಡಿಕೊಳ್ಳುವ ಅನಿವಾರ್ಯ ತಪ್ಪಿ, ಮಕ್ಕಳ ಮನಸ್ಸಿನಲ್ಲಿ ಉಪಾಧ್ಯಾಯರ ವಿಷಯದಲ್ಲಿ ಗೌರವವೂ ನಂಬಿಗೆಯೂ ಹೆಚ್ಚುತ್ತವೆ; ಉಪಾಧ್ಯಾಯರಿಗೂ ತಮ್ಮ ಕಾರ್ಯದಲ್ಲಿ ಸ್ವಾವಲಂಬನೆಯೂ ಸ್ವಾಭಿಮಾನವೂ ಉಂಟಾಗುತ್ತವೆ. ಒಟ್ಟಿನಲ್ಲಿ ಕಾಲಹರಣವಾಗದಂತೆ ಯಶಸ್ವಿಯಾಗಿ ಶಿಕ್ಷಣ ಸಾಧನೆಯಾಗಲು ಅವಕಾಶವಾಗುತ್ತದೆ.

ಅನೇಕವರ್ಷ ಉಪಾಧ್ಯಾಯರಾಗಿದ್ದು, ತಕ್ಕಷ್ಟು ಅನುಭವ ಪಡೆದ ಹಲವರು ಬೋಧಿಸತಕ್ಕ ವಿಷಯವೂ ಕ್ರಮವೂ ತಿಳಿದಿದೆಯೆಂದು ಪಾಠದ ಟಿಪ್ಪಣಿ ಬರೆಯುವುದು ಅನಾವಶ್ಯಕವೆನ್ನಬಹುದು: ತಾವು ಎಷ್ಟೇ ಅನುಭವ ಪಡೆದಿರಲಿ ಪೂರ್ವಸಿದ್ಧತೆ ಅನಾವಶ್ಯಕವೆಂದು ಒಳ್ಳೆಯ ಉಪಾಧ್ಯಾಯರು ಯಾರೂ ಗಣಿಸುವುದಿಲ್ಲ. ಏಕೆಂದರೆ, ಶೀಘ್ರವಾಗಿ ಮುಂಬುವರಿಯುತ್ತಿರುವ ನಾಗರಿಕತೆಯನ್ನು ಅನುಸರಿಸಿ ಪಠ್ಯವಸ್ತು ಅಂದಂದು ಬದಲಾಗುತ್ತಿರುವುದರಿಂದ ಆ ಹೊಸ ಭಾಗಗಳನ್ನೂ ಅರಿತುಕೊಂಡು ಅವನ್ನೂ ಪಾಠಯೋಜನೆಯಲ್ಲಿ ಅಳವಡಿಸಿಕೊಳ್ಳಬೇಕು; ಪ್ರತಿ ವರ್ಷವೂ ಒಂದೇ ಪಾಠ ಮಾಡುತ್ತಿದ್ದರೂ ಆ ತರಗತಿಗೆ ಹೊಸ ಹೊಸ ವಿದ್ಯಾರ್ಥಿಗಳು ಬರುತ್ತಿರುವುದರಿಂದ, ಒಂದು ವರ್ಷವಿದ್ದ ಬಾಲಕರಂತೆ ಇನ್ನೊಂದು ವರ್ಷದ ಬಾಲಕರು ಇಲ್ಲದಿರುವುದರಿಂದ, ಹೊಸ ಸನ್ನಿವೇಶಗಳನ್ನು ಎದುರಿಸಬೇಕಾಗಿರುವುದರಿಂದ, ಸಿದ್ಧತೆ ಆವಶ್ಯಕ. ಸಮಾಜವೂ ನಿರಂತರವೂ ಬದಲಾವಣೆಯಾಗುತ್ತಿದ್ದು, ಅದರ ಆವಶ್ಯಕತೆ ಮತ್ತು ರೂಪು ರೇಖೆಗಳಲ್ಲೂ ಹೆಚ್ಚು ಕಡಮೆ ಆಗುತ್ತಿವೆ. ಅವುಗಳನ್ನನುಸರಿಸಿ ಬೋಧನೆ ಮಾಡಬೇಕಾದರೆ ಹೊಸ ಸಿದ್ಧತೆ ಅನಿವಾರ್ಯ. ಆದರೆ ಅನುಭವಸ್ಥರು ಕೇವಲ ಹೊಸಬರಂತೆ ಪಾಠದ ಟಿಪ್ಪಣಿಯನ್ನು ವಿವರ

ವಾಗಿ ತಯಾರಿಸಬೇಕಾಗಿಲ್ಲ. ಆದರೂ ಸ್ಥೂಲವಾಗಿ ಪಾಠದ ಯೋಜನೆಯನ್ನು ತಯಾರಿಸುವುದು ಆವಶ್ಯಕ. ಅದರಲ್ಲಿ ವಿಷಯದ ಮತ್ತು ಬೋಧನ ಕ್ರಮದ ಮುಖ್ಯಾಂಶಗಳಿದ್ದರೆ ಸಾಕು. ವಿವರಗಳನ್ನು ಸೇರಿಸಬೇಕಾಗಿಲ್ಲ.

ಶಿಕ್ಷಣ ಪಡೆಯುತ್ತಿರುವ ಉಪಾಧ್ಯಾಯರೂ, ಹೊಸದಾಗಿ ಕೆಲಸಕ್ಕೆ ಸೇರಿರುವವರೂ ವಿವರವಾದ ಟಿಪ್ಪಣಿಯೊಡನೆ ಸಿದ್ಧವಾಗಿ ಪಾಠಕ್ಕೆ ಬರುವುದು ಉತ್ತಮ. ಹಾಗಿಷ್ಟು ಹೀಗಿಷ್ಟು ಬರೆದುಕೊಂಡು ಬರುವುದರಿಂದ ಪ್ರಯೋಜನವಿಲ್ಲ. ಮೇಲೆ ವಿವರಿಸಿರುವ ಸಂಪ್ರದಾಯದಂತೆ ಶೀರ್ಷಿಕೆಗಳನ್ನು ಹಾಕಿಕೊಂಡು, ವಿಭಾಗ ಮಾಡಿಕೊಂಡು, ಪಠ್ಯ ಪುಸ್ತಕಗಳನ್ನೂ ಸಹಾಯಕ ಗ್ರಂಥಗಳನ್ನೂ ಪರಿಶೀಲಿಸಿ ವಿವರವಾದ ಟಿಪ್ಪಣಿಯನ್ನು ಸಿದ್ಧಪಡಿಸಬೇಕು. ಅದರಿಂದ ಬೋಧನೆಗೆ ತಾವೂ ಸಿದ್ಧವಾದಂತಾಗುತ್ತದೆ; ಪಾಠ ಮಾಡುವಾಗ ಆವಶ್ಯಕವೆನಿಸಿದ ಅಂಕಿ ಅಂಶಗಳನ್ನು ನೋಡಿಕೊಳ್ಳಲೂ ಸಹಾಯವಾಗುತ್ತದೆ. ಹಲವಾರು ವರ್ಷಗಳನಂತರ ವಿವರಗಳನ್ನು ಕಡಮೆ ಮಾಡುತ್ತ ಸ್ಥೂಲವಾಗ ಪಾಠ ಯೋಜನೆಯನ್ನು ತಯಾರಿಸಿಕೊಂಡು ಬರಬಹುದು. ಆದರೆ ಪೂರ್ವಸಿದ್ಧತೆಯಿಲ್ಲದೆ ತರಗತಿಗೆ ಬರುವುದು ಯಾರಿಗೂ, ಎಂದಿಗೂ ವಿಹಿತವಲ್ಲ. ಅದರಿಂದ ಪಾಠ ಸಮರ್ಪಕವಾಗಿ ಸಾಗದಂತಾಗಿ ಉಪಾಧ್ಯಾಯರ ವಿಷಯದಲ್ಲಿ ಮಕ್ಕಳಿಗೆ ಗೌರವ ಕಡಮೆಯಾದೀತು. ಅದರ ಫಲವಾಗಿ ತರಗತಿಯಲ್ಲಿ ಶಿಸ್ತು ತಪ್ಪಿ ಅನಾವಶ್ಯಕವಾದ ಶಿಕ್ಷೆಯ ಕ್ರಮ ಕೈಗೊಳ್ಳುವ ಅನಿವಾರ್ಯ ಬರಬಹುದು. ಒಟ್ಟಿನಲ್ಲಿ ಈ ಪೂರ್ವಸಿದ್ಧತೆಯಿಂದ ಉಪಾಧ್ಯಾಯರು ತಮ್ಮ ಸ್ವಂತಕ್ಕೆ ಗೌರವ ಸ್ವಾವಲಂಬನೆ ಸ್ವಾಭಿಮಾನಗಳನ್ನು ಪಡೆಯಬಹುದು; ಬಾಲಕರ ಶಿಕ್ಷಣವೂ ಹೆಚ್ಚು ಫಲಪ್ರದವಾಗುವುದು.

ಟಿಪ್ಪಣಿಯ ರಚನೆಗೆ ಹಲವು ಸಂಪ್ರದಾಯಗಳನ್ನು ನಿರೂಪಿಸಿದ್ದರೂ ಅದು ಕೇವಲ ಯಾಂತ್ರಿಕ ಕ್ರಿಯೆಯೆಂದು ಯಾರೂ ಭಾವಿಸಬಾರದು. ವಿರಾಮ ಮಾಡಿಕೊಂಡು ಮನೆಯಲ್ಲಿ ಕುಳಿತು, ತರಗತಿಯ ಸನ್ನಿವೇಶಗಳನ್ನು ಕಲ್ಪಿಸಿಕೊಂಡು, ಪಾಠದ ಯೋಜನೆಯನ್ನು ತಯಾರಿಸುವುದು ಪ್ರತಿಭಾಪೂರ್ಣವೂ ಕಲ್ಪನಾಮಯವೂ ಆದ ಕಾರ್ಯ. ಮಕ್ಕಳು ಹಿಂದಿನ ಪಾಠದಲ್ಲಿ ಪಡೆದಿರಬಹುದಾದ ಅನುಭವವನ್ನು ಊಹಿಸಿ

ಕೊಂಡು, ಆದರ ಪುನರಾವರ್ತನೆಯಾಗುವಂತೆ, ಹೊಸ ಪಾಠಕ್ಕೆ ಅವರ ಮನಸ್ಸು ಸಿದ್ಧವಾಗುವಂತೆ ಪೀಠಿಕೆಯನ್ನು ಯೋಚಿಸಿ, ಉಚಿತ ರೀತಿಯಲ್ಲಿ ವಿಷಯವನ್ನು ಸ್ಫುಟೀಕರಿಸಿ, ಬರುವ ಅನಿರೀಕ್ಷಿತ ಸನ್ನಿವೇಶಗಳನ್ನು ಮುಂಚಿತವಾಗಿ ಯೋಚಿಸಿ, ಅದನ್ನೆದುರಿಸಲು ತಕ್ಕ ಸಲಕರಣೆಗಳನ್ನೊದಗಿಸಿ ಕೊಂಡು, ಸಾರಾಂಶ, ಪುನರಾವರ್ತನೆ ಮುಂತಾದವುಗಳನ್ನು ಅನುಗೊಳಿಸಲು ಯೋಜನೆಯನ್ನು ತಯಾರಿಸಿಕೊಳ್ಳಬೇಕಾಗುತ್ತದೆ. ತಾವು ಹಾಕಬೇಕೆಂದಿರುವ ಪ್ರಶ್ನೆಗಳನ್ನೂ ಅದಕ್ಕೆ ಬರಬಹುದಾದ ಉತ್ತರಗಳನ್ನೂ ಮುಂಚಿತವಾಗಿಯೇ ಮನಗಾಣಬೇಕಾಗುತ್ತದೆ. ಜೊತೆಗೆ, ಆ ಕಾಲದೊಳಗಾಗಿ ಮಾಡಬಹುದಾದ ಪಾಠದ ಪರಿಮಾಣವನ್ನೂ ನಿಷ್ಕರ್ಷಿಸಿಕೊಳ್ಳಬೇಕಾಗಿದೆ. ಇವೆಲ್ಲವನ್ನೂ ಉಚಿತವಾಗಿ ಮಾಡಿಕೊಳ್ಳುವುದು ಯಾಂತ್ರಿಕ ಕೆಲಸವಲ್ಲ; ಕೌಶಲ್ಯದ ಕಾರ್ಯ!

ಪಾಠದ ಟಿಪ್ಪಣಿಯನ್ನು ಹೇಗೆ ಕೌಶಲ್ಯದಿಂದ ನಿರ್ಮಿಸಬೇಕೋ, ಹಾಗೆಯೇ ಪಾಠ ಮಾಡುವಾಗಲೂ ಉಪಾಧ್ಯಾಯರು ಎಚ್ಚರಿಕೆಯಿಂದಿರಬೇಕು. ಟಿಪ್ಪಣಿಯಿದೆ, ಪೂರ್ವಸಿದ್ಧತೆ ಆಗಿದೆ, ಯೋಜನೆಯಂತೆ ಮುಂದುವರಿದರಾಯಿತು—ಎಂದು ಭಾವಿಸಿದರೆ ಬೋಧನೆ ಯಾಂತ್ರಿಕವಾಗುತ್ತದೆ. ತಮ್ಮ ತಯಾರಿಸಿದ ಯೋಜನೆ ಸ್ಥೂಲವಾಗಿ ನೆರವಾಗುವಂತಿದ್ದರೂ ವಿವರವಾಗಿ ನೆರವಾಗದಿರಬಹುದು; ನಾವು ನಿರೀಕ್ಷಿಸಿದಷ್ಟು ಒಳ್ಳೆಯ ಉತ್ತರ ಬರದಿರಬಹುದು; ನಾವು ಹೋಗಬೇಕೆಂದಿರುವ ಮಾರ್ಗವನ್ನು ಸ್ವಲ್ಪ ಬದಲಾಯಿಸಿಕೊಳ್ಳುವ ಆವಶ್ಯಕತೆ ಬರಬಹುದು; ಪ್ರತ್ಯೇಕ ವಿದ್ಯಾರ್ಥಿಗಳಿಗೆ ಗಮನ ಕೊಡುವಾಗ ವಿಶೇಷ ರೀತಿಯಲ್ಲಿ ಯೋಜನೆಯನ್ನು ಅವರ ಷ್ಟರಮಟ್ಟಿಗಾದರೂ ಮಾರ್ಪಡಿಸಿಕೊಳ್ಳಬೇಕಾಗಬಹುದು. ಅಲ್ಲದೆ ಆ ಯೋಜನೆ ತಯಾರಾಗಿರುವುದು ಯಾವ ಒಬ್ಬ ಬಾಲಕನಿಗಲ್ಲ—ಇಡೀ ತರಗತಿಗೆ; ತರಗತಿಯ ಒಬ್ಬೊಬ್ಬ ಬಾಲಕನೂ ಒಂದೊಂದು ರೀತಿ! ಆದ್ದರಿಂದ ತಯಾರಿಸಿದ ಪಾಠ ಯೋಜನೆ ತರಗತಿಗೆ ಸ್ಥೂಲವಾಗಿದ್ದರೂ ಅದನ್ನು ಒಬ್ಬೊಬ್ಬರಿಗೂ ಅನ್ವಯಿಸುವಾಗ ಹಲವು ಸಣ್ಣ ಪುಟ್ಟ ಬದಲಾವಣೆ ಅನಿವಾರ್ಯ. ಜೊತೆಗೆ, ಸನ್ನಿವೇಶ ಹೆಚ್ಚು ಕಡಮೆಯಾದಂತೆ ಯೋಜನೆಯಲ್ಲಿರುವ ಪ್ರಶ್ನೆಗಳೂ ಅಲ್ಪ ಸ್ವಲ್ಪ ಬದಲಾಗಬೇಕಾಗುತ್ತದೆ;

ಬೋಧನಕ್ರಮವನ್ನೂ ಅನಿರೀಕ್ಷಿತ ಸನ್ನಿವೇಶಗಳಿಗೆ ಅನ್ವಯಿಸಿಕೊಳ್ಳ ಬೇಕಾಗುತ್ತದೆ; ಎಂದಮೇಲೆ ತಯಾರಿಸಿದ ಯೋಜನೆಯನ್ನು ಯಾಂತ್ರಿಕ ವಾಗಿ ಅನುಸರಿಸುವುದು ಸಾಧ್ಯವೂ ಇಲ್ಲ. ಪ್ರಯೋಜನವೂ ಅಲ್ಲ— ಸನ್ನಿವೇಶಗಳಿಗೆ ತಕ್ಕಂತೆ ಅದನ್ನು ಕೌಶಲ್ಯದಿಂದ ಉಪಯೋಗಿಸಿಕೊಳ್ಳ ಬೇಕು. ಆದರೆ ಆ ಕಾರ್ಯಕ್ಕೆ ತಯಾರಿಸಿದ ಪಾಠದ ಟಿಪ್ಪಣಿ ಮೂಲ ಭೂತವಾದ ಆಧಾರದಂತಿರುತ್ತದೆ. ಪದಾರ್ಥಗಳ ಪಟ್ಟಿ, ವಿವರಣೆ, ರಸವ ತ್ತಾದ ಸಾಹಿತ್ಯಭಾಗ, ಮುಖ್ಯವಾದ ಪ್ರಶ್ನೆಗಳು, ಇನ್ನಿತರ ಅಂಕಿಅಂಶ— ಇವನ್ನು ಟಿಪ್ಪಣಿಯಿಂದ ಸುಲಭವಾಗಿ ನೋಡಿಕೊಳ್ಳಬಹುದು.

ಹೀಗೆ ಪೂರ್ವಸಿದ್ಧತೆಯಿಂದ ಉಪಾಧ್ಯಾಯರಿಗೆ ತುಂಬ ಸಹಾಯ ವಾಗುತ್ತದೆ; ತರಗತಿಯಲ್ಲಿ ಎಲ್ಲವನ್ನೂ ಆಲೋಚಿಸಿ ಬೋಧನಕಾರ್ಯ ಮಾಡುವುದು ಎಂಥ ಪ್ರತಿಭಾವಂತರಿಗೂ ತೊಡಕಾಗುವುದು; ಪೂರ್ವ ಸಿದ್ಧತೆಯಿಂದ ಸಾಮಾನ್ಯ ಉಪಾಧ್ಯಾಯರೂ ಸರಿಯಾದ ಮಾರ್ಗದಲ್ಲಿ ಪಾಠ ಆರಂಭಿಸಿ ಮುಗಿಸಬಹುದು. ನಿಯೋಜಿತ ಕ್ರಮದಲ್ಲಿ ಮುಂದುವರಿಯುತ್ತ ವರ್ಷದ ಪಾಠವನ್ನು ಸಕಾಲದಲ್ಲಿ ಮುಗಿಸಲು ಅನುಕೂಲವಾಗುತ್ತದೆ. ಉಪಾಧ್ಯಾಯರೂ ತರಗತಿಯಲ್ಲಿ ವಿಷಯ ಜ್ಞಾನವಿಲ್ಲದೆ, ಅಡ್ಡದಾರಿ ಹಿಡಿ ಯದೆ, ಆತ್ಮ ವಿಶ್ವಾಸದಿಂದ ಪಾಠಮಾಡಿ ಸರಿಯಾದ ಶಿಕ್ಷಣ ಕೊಡಬಲ್ಲರು. ವಿದ್ಯಾರ್ಥಿಗಳಿಗೂ ತಕ್ಕ ರೀತಿಯಲ್ಲಿ ಶಿಕ್ಷಣ ದೊರೆತು, ಸಕಾಲದಲ್ಲಿ ಪಠ್ಯವಸ್ತುವನ್ನು ಮುಗಿಸಲು ಅನುಕೂಲವಾಗುತ್ತದೆ. ವಿದ್ಯಾರ್ಥಿಗಳಿಗೆ ಉಪಾಧ್ಯಾಯರಲ್ಲಿ ಗೌರವಾಭಿಮಾನಗಳು ಹೆಚ್ಚಿ ಮಧುರ ವಾತಾವರಣ ತರಗತಿಯಲ್ಲಿ ಏರ್ಪಟ್ಟು ಶಿಕ್ಷಣವೃತ್ತಿಯ ಮತ್ತು ಪಾಠಶಾಲೆಗಳ ಪ್ರಭಾವ ಹೆಚ್ಚುತ್ತದೆ.

# ೧೩ ಪಾಠೋಪಕರಣಗಳು

ಬೋಧನ ಕಾರ್ಯಕ್ಕೆ ಆವಶ್ಯಕವೆನಿಸುವ ಸಲಕರಣೆಗಳನ್ನು ಮುಂಚಿತವಾಗಿ ಒದಗಿಸಿಕೊಳ್ಳುವುದು ಉಪಾಧ್ಯಾಯರ ಪೂರ್ವಸಿದ್ಧತೆಯ ಒಂದು ಭಾಗ. ತಮ್ಮ ಪಾಠದ ಟಿಪ್ಪಣಿಯಲ್ಲಿ ಆವಶ್ಯಕವಾದ ಹಲವು ಸಲಕರಣೆಗಳ ಹೆಸರನ್ನು ಗುರುತಿಸಿಕೊಳ್ಳಬೇಕು. ಶಿಕ್ಷಣ ಯಶಸ್ವಿಯಾಗಬೇಕಾದರೆ ಉತ್ತಮ ಬೋಧನಕ್ರಮವನ್ನು ಅನುಸರಿಸಬೇಕಷ್ಟೆ; ಆ ಬೋಧನಕ್ರಮವನ್ನು ಹೆಚ್ಚು ಫಲಪ್ರದವಾಗಿಸಲು ಹಲವು ಸಲಕರಣೆಗಳು ನೆರವಾಗುತ್ತವೆ. ಅವನ್ನು ಪಾಠೋಪಕರಣಗಳೆಂದು ಕರೆಯಬಹುದು. ಪಾಠ ಮಾಡುವಾಗ ಹಾಕುವ ಪ್ರಶ್ನೆಗಳು, ಉಪಯೋಗಿಸುವ ಪಠ್ಯಪುಸ್ತಕ, ಪ್ರದರ್ಶಿಸುವ ಚಿತ್ರ, ಮಾದರಿ ವಸ್ತು, ಆಗಾಗ ನಡಸುವ ತರಗತಿಯ ಪರೀಕ್ಷೆಗಳು, ಮಕ್ಕಳ ನೋಟು ಪುಸ್ತಕಗಳು–ಇವೆಲ್ಲ ಬೋಧಿಸಲೂ ಕಲಿಯಲೂ ನೆರವಾಗುತ್ತವೆ; ಹೇಳುವ ವಿಷಯ ಹೆಚ್ಚು ಸ್ಫುಟಗೊಳ್ಳುವಂತೆಯೂ, ಅದನ್ನು ಮಕ್ಕಳು ಚೆನ್ನಾಗಿ ಕಲಿಯುವಂತೆಯೂ ಅನುಕೂಲಿಸುತ್ತವೆ. ಆದ್ದರಿಂದ ಆ ಪಾಠೋಪಕರಣಗಳ ಸ್ವರೂಪ, ಅವುಗಳನ್ನು ಉಪಯೋಗಿಸುವ ರೀತಿ ಮತ್ತು ಔಚಿತ್ಯ ಮೊದಲಾದ ಅಂಶಗಳನ್ನು ಎಲ್ಲ ಉಪಾಧ್ಯಾಯರೂ ಪರಿಚಯ ಮಾಡಿಕೊಂಡಿರಬೇಕು.

೧. **ಪಠ್ಯಪುಸ್ತಕ:** ಬೋಧನ ಕಾರ್ಯದಲ್ಲಿ ಪಠ್ಯಪುಸ್ತಕ ಪ್ರಧಾನ ಸಹಾಯಕ ವಸ್ತು. ಉಪಾಧ್ಯಾಯರ ಬೋಧನೆಯೂ ಮಕ್ಕಳ ಕಲಿವೂ ಅದರ ಆಧಾರದ ಮೇಲೇ ನಡೆಯತಕ್ಕವು. ಬೋಧಿಸುವ ವಿಷಯ ಮತ್ತು ಅದರ ಜೋಡಣೆಯ ಕ್ರಮ ಬಹುಮಟ್ಟಿಗೆ ಅದನ್ನೇ ಅವಲಂಬಿಸಿರುತ್ತವೆ. ಅನೇಕ ಉಪಾಧ್ಯಾಯರು ಅದರಲ್ಲಿ ಕೊಟ್ಟಿರುವ ವಿಷಯವನ್ನು ಆ ಕ್ರಮದಲ್ಲೇ ಬೋಧಿಸುವುದುಂಟು. ವಿಷಯದ ಪರಿಮಾಣ ಮತ್ತು ವ್ಯಾಪ್ತಿ, ವಿಷಯದ ಪ್ರದರ್ಶನದ ಕ್ರಮ, ಶಿಕ್ಷಣಾಭಿವೃದ್ಧಿಯ ಮಟ್ಟ ಮತ್ತು ಬೋಧನ ಕ್ರಮ ಈ ಎಲ್ಲ ಅಂಶಗಳ ಮೇಲೂ ಪಠ್ಯಪುಸ್ತಕ ತನ್ನ ಕೈವಾಡವನ್ನು ತೋರುತ್ತಿದೆ. ಈ ಕೈವಾಡ ಅನೇಕ ಸಂದರ್ಭಗಳಲ್ಲಿ ಅನುಕೂಲವಾಗಿದ್ದರೂ

ಪ್ರತಿಕೂಲವಾಗಿ ಪರಿಣಮಿಸುವುದೂ ಉಂಟು. ಆದ್ದರಿಂದ ಪಠ್ಯಪುಸ್ತಕವನ್ನು ಎಚ್ಚರಿಕೆಯಿಂದಲೂ ಚತುರತೆಯಿಂದಲೂ ಉಪಯೋಗಿಸಿಕೊಳ್ಳಬೇಕು.

ಯಾವ ವಿಷಯದ ಮೇಲಣ ಪಠ್ಯಪುಸ್ತಕವೇ ಆಗಲಿ ಆ ವಿಷಯದಲ್ಲಿ ಪಾಂಡಿತ್ಯ ಪಡೆದವರಿಂದಲೇ ಬರೆದಿರುತ್ತದೆ. ಅವರು ವಿಷಯವನ್ನು ಪ್ರಬುದ್ಧರ ವಿಚಾರ ದೃಷ್ಟಿಯಿಂದ ತರ್ಕ ಸಮ್ಮತವಾಗಿ ಬರೆದಿರುತ್ತಾರೆ. ಆದರೆ ಬೋಧನೆ ನಡೆಯಬೇಕಾಗಿರುವುದು ತರ್ಕ ದೃಷ್ಟಿಯಿಂದಲ್ಲ, ಮನಶ್ಶಾಸ್ತ್ರ ದೃಷ್ಟಿಯಿಂದ. ಇಂದಿನ ಅನೇಕ ಪಠ್ಯಪುಸ್ತಕಗಳು ದೊಡ್ಡವರು ಅರಿತುಕೊಂಡಿರುವ ಕ್ರಮದಲ್ಲಿವೆಯೇ ಹೊರತು ಮಕ್ಕಳಿಗೆ ಬೋಧಿಸಲು ಅನುಕೂಲಿಸುವ ರೀತಿಯಲ್ಲಿಲ್ಲ. ಈ ಹಳೆಯ ರೀತಿಯ ತರ್ಕ ಸಮ್ಮತ ಪಠ್ಯ ಪುಸ್ತಕಗಳ ಬದಲು ಮನಶ್ಶಾಸ್ತ್ರ ರೀತಿಯ ಪುಸ್ತಕಗಳು ನಿರ್ಮಿತವಾಗಬೇಕು. ಹಾಗೆ ನಿರ್ಮಿತವಾಗುವವರೆಗೂ, ಇರುವ ಪುಸ್ತಕಗಳ ತರ್ಕ ಸಮ್ಮತವಾದ ಪಠ್ಯವಸ್ತುವನ್ನು ಮನಶ್ಶಾಸ್ತ್ರ ರೀತಿಯಲ್ಲಿ ಜೋಡಿಸಿಕೊಳ್ಳಬೇಕು. ಟಿಪ್ಪಣಿಯನ್ನು ಬರೆಯುವಾಗ ಪಠ್ಯಪುಸ್ತಕದಲ್ಲಿರುವ ವಿಷಯವನ್ನು ಆ ರೀತಿಯಲ್ಲಿ ಉಪಯೋಗಿಸಿಕೊಳ್ಳುವುದು ಮುಖ್ಯವಾದ ಕೆಲಸ.

**ಪಠ್ಯ ಪುಸ್ತಕಗಳಲ್ಲಿರುವ ನ್ಯೂನತೆಗಳು :** ಗ್ರಾಮಾಂತರದ ನಮ್ಮ ಪಾಠಶಾಲೆಗಳಲ್ಲಿ ಉಪಾಧ್ಯಾಯರಿಗೆ ದೊರೆತಿರುವ ಸಾಂಸ್ಕೃತಿಕ ಶಿಕ್ಷಣ ಸ್ವಲ್ಪ. ಅಲ್ಲಿರುವ ಪುಸ್ತಕಗಳೂ ಎಲ್ಲೋ ಕೆಲವು; ಸಾಂಸ್ಕೃತಿಕ ವಾತಾವರಣವೂ ಕಡಮೆ. ಈ ಕಾರಣಗಳಿಂದ ನಿಯಮಿಸಿರುವ ಪಠ್ಯಪುಸ್ತಕವೇ ಉಪಾಧ್ಯಾಯರಿಗೆ ಪ್ರಧಾನ ಮಾರ್ಗದರ್ಶಕವಾಗಿರುತ್ತದೆ. ಉಪಾಧ್ಯಾಯರೂ ಅದನ್ನು ಯಾಂತ್ರಿಕವಾಗಿ ಉಪಯೋಗಿಸುತ್ತಿರುತ್ತಾರೆ. ಪಠ್ಯಪುಸ್ತಕ ದೋಷರಹಿತವಾಗಿದ್ದರೇನೋ ಅದರ ಪರಿಣಾಮ ಸಹ್ಯವೆನ್ನಬಹುದು. ಇಲ್ಲವಾದರೆ ಅದರಿಂದ ಆಗುವ ಅನರ್ಥವಾದರೂ ಎಷ್ಟು? ಅದರಿಂದ ನಮ್ಮ ಶಿಕ್ಷಣರಂಗದ ಪಠ್ಯಪುಸ್ತಕಗಳಲ್ಲಿರುವ ನ್ಯೂನತೆಗಳನ್ನೂ ಅವುಗಳ ಪರಿಷ್ಕರಣದ ಸ್ವರೂಪವನ್ನೂ ಇಲ್ಲಿ ಸ್ಥೂಲವಾಗಿಯಾದರೂ ವಿವರಿಸಲೇ ಬೇಕಾಗಿದೆ.

೧. ಗ್ರಾಮಾಂತರದ ಶಾಲೆಗಳಲ್ಲಿ ಉಪಯೋಗದಲ್ಲಿರುವ ಪಠ್ಯಪುಸ್ತಕ ಒಂದೊಂದು ವಿಷಯದ ಮೇಲೂ ಒಂದೋ, ಎರಡೋ ಇರುತ್ತವೆ. ಅವುಗಳನ್ನು ಬರೆದವರು ಸಾಮಾನ್ಯವಾಗಿ ಗ್ರಾಮವಾಸದ ಮತ್ತು ಶ್ರಮ

ಜೀವನದ ಪರಿಚಯವಿಲ್ಲದ ಪಂಡಿತರು. ಆ ಪಠ್ಯಪುಸ್ತಕದಲ್ಲಿ ಬಗೆ ಬಗೆಯ ಪ್ರಬುದ್ಧ ವಿಷಯಗಳು ತುಂಬಿವೆ. ಅಲ್ಲಿನ ಉಪಾಧ್ಯಾಯರಿಗೆ ಆಗಿರುವ ಶಿಕ್ಷಣದ ಮಟ್ಟ ಅದನ್ನು ಅರಿತು ವಿಮರ್ಶಿಸುವಷ್ಟರ ಮಟ್ಟದಲ್ಲ. ಆದರಿಂದ ಅವರು ದಿಕ್ಕು ತೋರದೆ, ವಿವೇಚನೆಯಿಲ್ಲದೆ ಅಲ್ಲಿರುವುದನ್ನೇ ನಂಬಿ ಬೋಧನಕಾರ್ಯವನ್ನು ಮಾಡುವರೆಂದರೆ ಆಶ್ಚರ್ಯವಾಗಲಾರದು.

೨. ಅವುಗಳ ಭಾಷೆ ಸಮರ್ಪಕವಾಗಿಲ್ಲ. ಅಪರಿಚಿತವೂ ಕಠಿಣವೂ ಆದ ಪದಗಳು ತುಂಬಿದ್ದು, ಮಕ್ಕಳು ಯಶಸ್ವಿಯಾಗಿ ಆ ಭಾಷೆಯನ್ನು ಉಪಯೋಗಿಸುವಂತೆ ಮಾಡುವುದು ಉಪಾಧ್ಯಾಯರಿಗೆ ಸಾಧ್ಯವಾಗದ ಕೆಲಸವಾಗಿದೆ. ಒಂದು ವೇಳೆ ಕಂಠಪಾಠ ಮಾಡಿಸಿಯಾದರೂ ಆ ಕಾರ್ಯ ಸಾಧಿಸಲು ಯತ್ನಿಸಿದರೆ, ಅದು ಅರ್ಥವಾಗದ್ದರಿಂದ ವ್ಯರ್ಥ ಪ್ರಯತ್ನ ವಾದೀತು. ಹೀಗೆ, ಮಕ್ಕಳ ವಾಕ್ಶಕ್ತಿಯನ್ನೂ ಬರವಣಿಗೆಯ ಶಕ್ತಿಯನ್ನೂ ಹೆಚ್ಚಿಸಲು ಇಂದಿನ ಪಠ್ಯಪುಸ್ತಕಗಳು ಸಹಾಯಕವಾಗಿಲ್ಲ.

೩. ಅಂಕಗಣಿತದ ಪಠ್ಯಪುಸ್ತಕದಲ್ಲೂ ದೋಷಗಳು ಕಂಡುಬರುತ್ತವೆ: ಸ್ವತಂತ್ರವಾಗಿ ಲೆಕ್ಕ ಮಾಡುತ್ತಿರುವಾಗ ಎಲ್ಲಿ ತಪ್ಪಿರುವೆವೆಂಬುದನ್ನು ಮಕ್ಕಳು ಅರಿತುಕೊಳ್ಳಲು ಅವಕಾಶವನ್ನು ಕಲ್ಪಿಸಲು ಗಮನ ಕೊಟ್ಟಿಲ್ಲ. ಗಣಿತ ಪಾಠವನ್ನು ಆಕರ್ಷಣೀಯವಾಗಿ ಬೋಧಿಸುವಂತೆ ಮಾಡಲು ಪ್ರಾದೇಶಿಕ ವಾತಾವರಣದ, ಸನ್ನಿವೇಶಗಳ, ಜೀವನದ ಆವಶ್ಯಕತೆಗಳ ಸ್ವರೂಪವನ್ನು ಪ್ರತಿಬಿಂಬಿಸುವ ರೀತಿಯಲ್ಲಿ ಆ ಸಮಸ್ಯೆಗಳು ಬಂದಿಲ್ಲ.

೪. ಚರಿತ್ರೆಯ ಪಠ್ಯಪುಸ್ತಕಗಳಲ್ಲೂ ಸಾಂಪ್ರದಾಯಿಕ ದೋಷ ಗಳೆಲ್ಲ ಉಳಿದುಕೊಂಡೇ ಬಂದಿವೆ. ಇಂಗ್ಲೀಷರ ಆಡಳಿತ ಭಾರತದಲ್ಲಿದ್ದಾಗ ಬರೆದಿರುವ ಆ ಪುಸ್ತಕಗಳಲ್ಲಿ ಪರಕೀಯ ಆಳಿಕೆಯ ಭದ್ರತೆಗೆ ನೆರವಾಗಬಹು ದಾದರೂ ಇಲ್ಲಿನ ಜನತೆಯ ಪುರೋಭಿವೃದ್ಧಿಗೆ ಕಂಟಕವೆನಿಸಬಹುದಾದ ಅನೇಕ ಅಂಶಗಳು ಸೇರಿಕೊಂಡಿವೆ. ಪ್ರಾಥಮಿಕ ಶಾಲೆಗಳಿಂದ ಹಿಡಿದು ಕಾಲೇಜಿನ ವರೆಗಿನ ಎಲ್ಲ ತರಗತಿಗಳ ಪಠ್ಯಪುಸ್ತಕಗಳಲ್ಲೂ ಈ ದೋಷ ವಿಶೇಷವಾಗಿ ಕಂಡುಬರುತ್ತಿದೆ. ಮಕ್ಕಳ ಎಳೆಯ ಮನಸ್ಸಿನಲ್ಲಿ ಅಂಥ ಚರಿತ್ರೆಯ ಬೋಧನೆಯಿಂದ ಮುಂದಿನ ಜನಾಂಗದ ಮೇಲೆ ಆಗುವ ದುಷ್ಪರಿಣಾಮ ಅಷ್ಟಿಷ್ಟಲ್ಲ. ಯಾವ ವಯಸ್ಸಿನಲ್ಲಿ ಅವರ ಮನಸ್ಸಿನಲ್ಲಿ

ಹೃದಯ ವೈಶಾಲ್ಯತೆಯನ್ನು ಬಿತ್ತಿ ಸಹಕಾರ ಸದ್ಭಾವನೆಗಳನ್ನು ಬೆಳಸ ಬೇಕೋ ಆಗ ಇಂಥ ದುಷ್ಪರಿಣಾಮಗಳನ್ನು ಹುಟ್ಟಿಸುವ ಪಾಠ ಬೋಧನೆ ಯಿಂದ ಜನಾಂಗದ ಶೀಘ್ರೋವಧೆಯಾಗಬಹುದೆಂಬ ಅಂಶವನ್ನು ಅಂದಂದು ನಾಡಿನ ಮುಖಂಡರು ಸಾರುತ್ತಲೇ ಬಂದಿದ್ದಾರೆ. ಜೊತೆಗೆ, ಆಯಾ ತರಗತಿಗಳಿಗನುಗುಣವಾಗಿ ವಿಷಯ ಜೋಡಣೆಯಾಗಿ ರೂಪುಗೊಂಡಿಲ್ಲ; ಕಥೆಯ ರೂಪದಲ್ಲಿ ಬೋಧಿಸಬೇಕಾಗಿರುವ ಪ್ರಾಥಮಿಕ ತರಗತಿಯ ಚರಿತ್ರೆಯ ಪಠ್ಯಪುಸ್ತಕ ಸಂಶೋಧನಾತ್ಮಕ ರೀತಿಯಲ್ಲಿ ಬರೆದಿರುವುದನ್ನು ನೋಡಿದರೆ ಈ ಅಂಶ ಸ್ಪಷ್ಟಪಡುತ್ತದೆ. ಅದರ ಬಹು ಭಾಗ ಕೋಮುವಾರು ದ್ವೇಷವನ್ನು ಹೆಚ್ಚಿಸತಕ್ಕ, ಮಕ್ಕಳ ಕಲ್ಪನಾಶಕ್ತಿಯನ್ನು ಬೆಳೆಯಿಸಲಾರ ದಂಥ ಶುಷ್ಕವಿವರಗಳಾಗಿವೆ. ಅವುಗಳನ್ನು ಬೋಧಿಸುವಾಗ ಉಪಾ ಧ್ಯಾಯರೂ ಯಾಂತ್ರಿಕವಾಗಿ ವರ್ತಿಸಬಹುದು; ಮಕ್ಕಳು ಆಕರ್ಷಣೆಯಿರ ಯದ ಬೊಂಬೆಗಳಂತೆ ಕೂಡಬಹುದು; ಅಥವಾ ಅಷ್ಟಿಷ್ಟು ಉತ್ಸಾಹ ತೋರಿದರೆ, ಅದು ಅವರ ವ್ಯಕ್ತಿತ್ವದ ಬೆಳವಣಿಗೆಗೆ ನೆರವಾಗದ, ಉಚಿತವಲ್ಲದ ಮಾರ್ಗದಲ್ಲಿ ಮಾತ್ರ.

ಮೇಲಿನ ನಮ್ಮ ಟೀಕೆ ಎಲ್ಲ ವಿಷಯಗಳ ಮೇಲಿನ ಪಠ್ಯ ಪುಸ್ತಕ ಗಳಿಗೂ ಸ್ಥೂಲವಾಗಿ ಅನ್ವಯಿಸುತ್ತದೆ. ಅವು ಉಪಾಧ್ಯಾಯರ ಬೋಧನ ಕಾರ್ಯದಲ್ಲಿ ಪ್ರಧಾನಪಾತ್ರ ವಹಿಸತಕ್ಕವಾದ್ದರಿಂದ ಅವುಗಳಲ್ಲಿರುವ ನ್ಯೂನತೆಗಳೂ ದೋಷಗಳೂ ನಿವಾರಣೆಯಾಗಬೇಕು. ಅಂದು ಮಾತ್ರ ಶಿಕ್ಷಣಕಾರ್ಯ ಉದ್ದೇಶಿಸಿದ ಪ್ರತಿಫಲವನ್ನು ನಮ್ಮ ಮಕ್ಕಳಲ್ಲಿ ಮೂಡಿ ಸಲು ಶಕ್ತವಾದೀತು.

ಬೋಧನೆಗೂ ಅಭ್ಯಾಸಕ್ಕೂ ಪಠ್ಯಪುಸ್ತಕ ಸಹಾಯವಾಗಬೇಕಾದರೆ, ಆದರಿಂದ ಉಚಿತವೆನಿಸುವ ಶಿಕ್ಷಣಸಾಧನೆ ಆಗಬೇಕಾದರೆ ಅವುಗಳನ್ನು ಬರೆಯುವವರು ಹಲವು ನಿಯಮಗಳ ಕಡೆ ಗಮನವಿಡಬೇಕು: ಅದರಲ್ಲಿ ಪ್ರತಿಪಾದಿಸಬೇಕಾಗಿರುವ ವಿಷಯ ನಿರ್ದೋಷವಾಗಿಯೂ ನಿರ್ವಿವಾದ ವಾಗಿಯೂ ಇರಬೇಕು. ವಿಷಯ ನಿರೂಪಣೆಯನ್ನು ಮಾಡುವಾಗ ಪ್ರಧಾನ ಅಂಶಗಳು ತಾವಾಗಿಯೇ ಸ್ಪಷ್ಟಪಡುವಂತೆ ಬರೆದಿರಬೇಕು. ಪಠ್ಯಪುಸ್ತಕಗಳಲ್ಲಿ ಯಾವ ಯಾವ ವಿಷಯಗಳಿಗೆ, ಯಾವ ಯಾವ ಅಂಶಗಳಿಗೆ ಪ್ರಾಧಾನ್ಯತೆ

ಕೊಡಬೇಕೆಂಬುದನ್ನು ನಿಷ್ಕರ್ಷಿಸುವಾಗ ಆಯಾ ತರಗತಿಯ ಪಾಠ ಮಾಡ ತಕ್ಕ ಉಪಾಧ್ಯಾಯರ ಸಲಹೆಯನ್ನೂ ಪಡೆಯುವುದು ಅನುಕೂಲ. ಒಂದೊಂದು ಪಾಠವೂ ಮುಗಿಯುವುದರೊಳಗಾಗಿ ಆಯಾ ಪಾಠದ ವಿಷಯದ ಸಮಗ್ರಸ್ವರೂಪವನ್ನು ಮನಸ್ಸಿಗೆ ಮತ್ತೆ ಸ್ಮರಣೆಗೆ ತುರವಂತೆ ಮುಕ್ತಾಯ ಗೊಂಡಿರಬೇಕು. ಗ್ರಂಥದ ಆರಂಭದಲ್ಲಿ ಗ್ರಂಥದ ಇಡೀ ವಿಷಯದ ಸೂಕ್ಷ್ಮ ಪರಿಚಯ ಸೂಚನೆಯಿಂದ ಆಗುವಂತಿರಬೇಕು. ಒಂದೇ ದೀರ್ಘ ವಿಷಯದ ಮೇಲೆ ಬರೆದಿರುವ ಗ್ರಂಥವಾದರೆ, ಒಂದೊಂದು ಭಾಗಕ್ಕೂ, ಹಿಂದಿನ ಮತ್ತು ಮುಂದಿನ ಭಾಗಗಳಿಗೂ ಸಂಬಂಧವಿಟ್ಟುಕೊಂಡು ರಚನೆಯಾಗಿರ ಬೇಕು. ಒಂದಂಶ ಮತ್ತೊಂದನ್ನು ವ್ಯತಿರಿಕ್ತವೆನಿಸುವಂತಿರಬಾರದು. ಒಂದೊಂದು ಅಂಶಕ್ಕೂ ಉಚಿತವೆನಿಸುವ ಶಿರೋನಾಮೆಯಿರಬೇಕು. ಒಟ್ಟು ಗ್ರಂಥವಸ್ತುವಿನಲ್ಲಿ ಒಂದು ಸಾಮರಸ್ಯವಿರಬೇಕು. ಆರಂಭಿಸುವುದು ಒಂದು, ಮಧ್ಯೆ ಪ್ರತಿಪಾದಿಸಿರುವುದು ಮತ್ತೊಂದು, ಸಮಾಪ್ತಿಯಲ್ಲಿ ಬೇರೊಂದು—ಹೀಗಿರುವುದರಿಂದ ಆ ಸಾಮರಸ್ಯಕ್ಕೆ ಕುಂದು ಬರುತ್ತದೆ. ಯಾವೊಂದು ವಿಷಯ:ವಾಗಲಿ ಅತಿಯಾಗಿ ಲಂಬಿಸಿರಬಾರದು. ಅದರಿಂದಲೂ ಸಾಮರಸ್ಯಕ್ಕೆ ಭಂಗಬರುತ್ತದೆ. ವಿಷಯವನ್ನು ಆಕರ್ಷಣೀಯವಾಗಿ ಸ್ಫುಟ ಗೊಳಿಸುವ ಚಿತ್ರಗಳನ್ನೂ ನಕ್ಷೆಗಳನ್ನೂ ಒಳಗೊಂಡು ಅದು ಬೋಧನೆಗೂ ಕಲಿವಿಗೂ ಅನುಕೂಲಿಸುವಂತಿರಬೇಕು. ಭಾಷೆ ಬಳಕೆಯ ಪದಗಳನ್ನೊಳ ಗೊಂಡು ಸರಳವಾಗಿಯೂ, ಮಧುರವಾಗಿಯೂ ದೋಷರಹಿತವಾಗಿಯೂ ಇರಬೇಕು. ನೇರವಾದ ಮತ್ತು ನಿರ್ದುಷ್ಟವಾದ ಅರ್ಥ ಕೊಡುವಂಥ ಪದ ಪ್ರಯೋಗವೂ, ಭಿನ್ನಾರ್ಥಕೊಡದಂಥ ಖಚಿತವಾದ ಶೈಲಿಯೂ ಇರಬೇಕು. ವ್ಯರ್ಥ ಆಡಂಬರದ, ಶುಷ್ಕ ನೀರಸದ ಶೈಲಿ ಮಕ್ಕಳಿಗೆ ಬೇಸರ ಹಿಡಿಸಿ ಬಿಡುತ್ತದೆ.

ಪಠ್ಯಪುಸ್ತಕದ ವಿಷಯ ಹೇಗೆ ಉತ್ತಮಗೊಳ್ಳಬೇಕೋ ಹಾಗೆಯೇ ಅದರ ಅಂಗಸೌಂದರ್ಯವೂ ಹೆಚ್ಚಬೇಕು. ಚಿಕ್ಕ ಮಕ್ಕಳು ಆಕರ್ಷಿಸುವ ವಸ್ತುವಿನ ಕಡೆ ಗಮನ ಕೊಡುವುದು ಸ್ವಭಾವ. ಆದ್ದರಿಂದ ಪಠ್ಯಪುಸ್ತಕ ಗಳ ಒಳಮೈ ಹೊರಮೈ ಸಂತೋಷ ಹುಟ್ಟಿಸುವಂತಿದ್ದು, ಓದಲು ಪ್ರೋತ್ಸಾ ಹಿಸುವಂತಿರಬೇಕು. ಮುಖಪತ್ರ ಮುದ್ದಾಗಿ ಮುದ್ರಣವಾಗಿ ಅವಶ್ಯಕ

ವೆನಿಸಿದರೆ ವರ್ಣಚಿತ್ರಗಳಿಂದ ಅಲಂಕೃತವಾಗಿರಬೇಕು; ಮಕ್ಕಳ ಕಲ್ಪನಾ ಶಕ್ತಿಯೂ ಭಾವನಾಶಕ್ತಿಯೂ ಉಜ್ವಲಗೊಂಡು ಜ್ಞಾನಾರ್ಜನೆಯಲ್ಲಿ ಕಾತರ ಹುಟ್ಟುವಂತಿರಬೇಕು. ಒಳಗೆ ಮೊದಲಿನ ಪುಟದಲ್ಲಿ ಪುಸ್ತಕದ ಹೆಸರು ಅಂದವಾಗಿ ಮುದ್ರಣವಾಗಿ ಮಕ್ಕಳ ಮನಸ್ಸನ್ನು ಆಹ್ವಾನಿಸುವಂತಿರ ಬೇಕು; ವಿಷಯಸೂಚನೆಯಿದ್ದು, ಪುಸ್ತಕದ ವಸ್ತುವಿನ ವಿಹಂಗಮದರ್ಶನ ಮಾಡಿಕೊಡುವಂತಿರಬೇಕು; ಒಂದೊಂದು ಅಧ್ಯಾಯಕ್ಕೂ ಉಚಿತವೂ ಆಕರ್ಷಣೀಯವೂ ಆದ ಶಿರೋನಾಮೆಯಿರಬೇಕು. ಹೇಳತಕ್ಕ ವಿಷಯ ದಲ್ಲಿ ಕ್ರಿಯೆ ಪ್ರಧಾನವಾಗಿದ್ದು ವರ್ಣನೆಗಳೂ ವಿವರಗಳೂ ಹದವರಿತು ಬಂದಿರಬೇಕು. ಸಣ್ಣ ಸಣ್ಣ ವಾಕ್ಯಗಳನ್ನೊಳಗೊಂಡ ಶೈಲಿಯಲ್ಲಿ ವ್ಯಕ್ತಿ ಗಳ ಸ್ವಭಾವವನ್ನು ಅವರವರ ಮಾತುಗಳೇ ಪ್ರದರ್ಶಿಸುವಂತೆ ರಚನೆ ಯಾಗಿರಬೇಕು. ಗಹನವಾದ ವಿಷಯ ಪ್ರತಿಪಾದಿತವಾಗಬೇಕಾಗಿದ್ದರೂ ಸರಳವೂ ಆಕರ್ಷಣೀಯವೂ ಆದ ಶೈಲಿ ಮಕ್ಕಳ ಬೇಸರವನ್ನು ಕಡಮೆ ಮಾಡೀತು. ಮಕ್ಕಳು ಅಂದಿಗಂದಿಗೆ ಅಷ್ಟಷ್ಟು ವಿಷಯಗಳನ್ನು ಕಲಿತು ಕೊಂಡು ತೃಪ್ತಿಪಡಲನುಕೂಲಿಸುವಂತೆ ಒಂದು ಔಚಿತ್ಯವರಿತು ವಿಂಗಡನೆ ಆಗಿರಬೇಕು; ಉಪಾಧ್ಯಾಯರ ಬೋಧನೆಗೆ ನೆರವಾಗುವಂತೆ ಪೀಠಿಕಾ ರೂಪದ ಸಲಹೆಯಿರಬೇಕು. ಆ ವಿಷಯ ನಿರೂಪಣೆಯಲ್ಲಿ ಅನುಸರಿಸಿರುವ, ಶಿಕ್ಷಣ ದೃಷ್ಟಿಯಿಂದ ಆವಶ್ಯಕವೆನಿಸುವ ಮಾರ್ಗಗಳನ್ನು ಅದರಲ್ಲಿ ಸ್ಥೂಲವಾಗಿ ಸೂಚಿಸಬೇಕು. ವಿಷಯ ತನ್ನದೇ ಆದ ವಿನೂತನ ರೀತಿಯಲ್ಲಿ ಪ್ರತಿಪಾದಿತ ವಾಗಿದ್ದರೆ ಆ ಮಾರ್ಗ ಸಾಧುವೆಂದು ತೋರಿಸಲು ಕಾರಣಗಳನ್ನೂ ಕೊಡ ಬೇಕು. ಮಕ್ಕಳು ಪಡೆದ ಶಿಕ್ಷಣಾಭಿವೃದ್ಧಿಯನ್ನು ಪರೀಕ್ಷಿಸಲು ಸಹಾಯ ವಾಗುವಂತೆ ಅಧ್ಯಾಯಗಳ ಕೊನೆಯಲ್ಲಿ ಪ್ರಶ್ನೆಗಳಿರಬೇಕು. ಜೊತೆಗೆ, ಆ ವಿಷಯದಲ್ಲಿ ಇನ್ನೂ ಆಳವಾದ ಅಭ್ಯಾಸಮಾಡಲು ಸಹಾಯವಾಗುವಂತೆ ಸಂಬಂಧಿಸಿದ ಗ್ರಂಥಗಳ ಹೆಸರಿನ ಉಲ್ಲೇಖವೂ ಅಗತ್ಯ.

ಒಂದೊಂದು ಅಧ್ಯಾಯದ ಆದಿಯಲ್ಲೂ ಅದರಲ್ಲಿರುವ ವಿಷಯದ ಸ್ಥೂಲ ಪರಿಚಯವಿದ್ದರೆ ಅನುಕೂಲ. ಅದು ಮಕ್ಕಳ ಕಲ್ಪನೆ ಭಾವನೆ ಗಳನ್ನು ಕಾರ್ಯಮುಖವಾಗುವಂತೆ ಮಾಡಿ ಇಡೀ ಅಧ್ಯಾಯವನ್ನೇ ಓದ ಬೇಕೆಂದು ಆಕರ್ಷಿಸುವಂತೆ ರೂಪುಗೊಂಡಿರಬೇಕು. ಕಲಿತ ವಿಷಯಗಳ

ಮೇಲೆ ಮಕ್ಕಳ ಕಲ್ಪನೆ ಭಾವನೆಯೂ ಮುಂದುವರಿದು ಸ್ಫೂರ್ತಿಗೊಳ್ಳು ವಂಥ ಸೂಚನೆಗಳು ಮಧ್ಯೆ ಮಧ್ಯೆ ಬರಬೇಕು. ಭಾಷಣ, ನಾಟಕ, ಚರ್ಚೆ—ಇವುಗಳಿಗೆ ಹೊಂದಿಕೊಳ್ಳುವಂತೆ ವಿಷಯದಲ್ಲಿ ಭಾವಧ್ವನಿಯಿರ ಬೇಕು. ಟೀಕೆ ಟಿಪ್ಪಣಿಗಳೂ, ಗ್ರಂಥದ ವಿಷಯವನ್ನು ಹುಡುಕಲನು ಕೂಲಿಸುವಂತೆ ಮುಖ್ಯಾಂಶಗಳ ಅಕಾರಾದಿ ಪಟ್ಟಿಯೂ, ಪುಟ ಸಂಖ್ಯೆಯೂ ಕೊನೆಯಲ್ಲಿರಬೇಕು.

ಮುದ್ರಣಕಾರ್ಯವೂ ಶಾಸ್ತ್ರೀಯ ಕ್ರಮವನ್ನು ಅನುಸರಿಸಬೇಕು: ಓದಲು ಅನುಕೂಲಿಸುವಂತೆ, ಕಣ್ಣಿಗೆ ಅಪಾಯವಾಗದಂತೆ ವಿಷಯ ದಪ್ಪಕ್ಷರ ಗಳಲ್ಲಿ ಸುಮಾರು ಹೊಳಪು—ಬಿಳಿಯ ಕಾಗದದ ಮೇಲೆ ಕಪ್ಪು ಮಸಿಯಲ್ಲಿ ಮುದ್ರಣವಾಗಿರಬೇಕು. ಪುಟಗಳ ಉದ್ದ, ಪಂಕ್ತಿಗಳ ಉದ್ದ, ಪದಗಳ ಮಧ್ಯೆ ಇರುವ ಸ್ಥಳ, ಪಂಕ್ತಿಗಳ ನಡುವೆ ಬಿಟ್ಟಿರುವ ಅಗಲ, ಓದಲು ತೊಡಕಾಗದಂತೆಯೂ ಕಣ್ಣಿಗೆ ನೋವಾಗದಂತೆಯೂ ಇರಬೇಕು. ಮೇಲಿನ ಎಲ್ಲ ಅಂಶಗಳೂ ಮಕ್ಕಳ ವಯೋಗುಣವನ್ನೂ ಗಣನೆಗೆ ತೆಗೆದುಕೊಂಡು ಉಚಿತ ರೀತಿಯಲ್ಲಿ ರೂಪುಗೊಂಡಿರಬೇಕು.

ಉಪಾಧ್ಯಾಯರಿಗೆ ಪಠ್ಯಪುಸ್ತಕ ವಿಷಯವನ್ನು ತಪ್ಪಿಲ್ಲದಂತೆ ಪ್ರತಿ ಪಾದಿಸಲು ನೆರವಾಗುವ ಒಂದು ಉಪಕರಣ; ಹೊಸ ವಿಷಯಗಳನ್ನು ತಿಳಿ ಯಲು ಉತ್ಸಾಹ ಹುಟ್ಟಿಸಿ ಮಕ್ಕಳ ಮನಸ್ಸಿದಲ್ಲಿ ಜ್ಞಾನಾರ್ಜನೆಯ ಕಾತರ ಹುಟ್ಟಿಸುವ ಒಂದು ಸಾಧನ. ಆದ್ದರಿಂದ ಅದನ್ನು ರಚಿಸುವಾಗ ಸೂಕ್ತವಾದ ಎಲ್ಲ ಎಚ್ಚರಿಕೆಗಳನ್ನೂ ತೆಗೆದುಕೊಳ್ಳಬೇಕು. ಯಾವ ಪಠ್ಯಪುಸ್ತಕವೇ ಆಗಲಿ ಮನಶ್ಶಾಸ್ತ್ರ ಸಮ್ಮತವಾಗಿಯೇ ಬರೆದಿರಬೇಕು. ಮಕ್ಕಳು ಗ್ರಹಿಸು ವಂತೆ, ಬೋಧನೆ ಫಲಪ್ರದವಾಗುವಂತೆ, ವಿಷಯ ಉಪಯುಕ್ತವೆನಿಸುವಂತೆ ಅದು ರೂಪಗೊಳ್ಳಲು ಎಲ್ಲ ದೃಷ್ಟಿಯಿಂದಲೂ ಗಮನಕೊಡಬೇಕು. ಯಾವು ದಾದರೂ ವಾದಗ್ರಸ್ಥ ವಿಷಯವನ್ನು ಪ್ರತಿಪಾದಿಸುವಾಗ ಲೇಖಕರ ವೈಯ ಕ್ತಿಕ ಅಭಿಪ್ರಾಯಗಳನ್ನೂ, ತೀರ್ಮಾನವನ್ನೂ ಕೊಡುವುದಕ್ಕಿಂತ ಆಧಾರ ಗಳನ್ನು ಕೊಟ್ಟು ವಿಷಯ ತಾನಾಗಿಯೇ ಸ್ಪಷ್ಟಪಡುವಂತೆ ಮಾಡಬೇಕು. ಅಂಥ ವಿಷಯಗಳನ್ನು ಪ್ರತಿಪಾದಿಸುವಾಗ ತನ್ನೊಬ್ಬನ ಅಭಿಪ್ರಾಯಕ್ಕಿಂತ ಹಲವಾರು ತಜ್ಞರ ಅಭಿಪ್ರಾಯವನ್ನು ತಿಳಿದು, ಬರೆಯುವುದು ಉಚಿತವೆನಿ

ಸೀತು. ಅದರಿಂದ ಉಪಾಧ್ಯಾಯರ ಮತ್ತು ಮಕ್ಕಳ ಮನಸ್ಸಿನಲ್ಲಿ ವಿಷಯದ ಬಹುಮುಖವೂ ವಿಶಾಲವೂ ಆದ ಪರಿಚಯ ಪಠ್ಯಪುಸ್ತಕ ಮೂಡಿಸುವಂತಾಗುತ್ತದೆ. ಬರೆದು ಸಿದ್ಧವಾಗಿರುವ ಪಠ್ಯಪುಸ್ತಕದ ಔಚಿತ್ಯವನ್ನು ನಿಷ್ಕರ್ಷಿಸುವಾಗ ವಿಷಯ ಸ್ವಾರಸ್ಯಕ್ಕೆ ಶೇ. ೨೦ ರಂತೆಯೂ ವಿಷಯಗ್ರಹಣ ಸೌಲಭ್ಯಕ್ಕೆ ೨೦ ರಂತೆಯೂ, ವಿಷಯದ ಉಪಯುಕ್ತತೆಗೆ ೨೫ ರಂತೆಯೂ, ಬೋಧನೆಯ ಅನುಕೂಲತೆಗೆ ೨೫ ರಂತೆಯೂ ಮುದ್ರಣದ ಅಂದಚಂದಗಳಿಗೆ ೧೦ ರಂತೆಯೂ ಬೆಲೆ ಕಟ್ಟುವುದು ಉತ್ತಮ. ಒಟ್ಟಿನಲ್ಲಿ ಅದು ಉಪಾಧ್ಯಾಯರಿಗೂ ಮಕ್ಕಳಿಗೂ ಅನುಕೂಲಿಸುವಂತೆ ಇರಬೇಕು. ಉಪಾಧ್ಯಾಯರಿಗೆ ಬೋಧನೆಗನುಕೂಲಿಸುವಂತೆ ಒಂದು ಮುದ್ರಣವನ್ನೂ, ಮಕ್ಕಳಿಗೆ ಕಲಿಯಲು ಅನುಕೂಲಿಸುವಂತೆ ಮತ್ತೊಂದು ಮುಧ್ರಣವನ್ನೂ ಹಾಕಿಸುವುದು ಒಳ್ಳೆಯದು.

ಸಿದ್ಧವಾದ ಪಠ್ಯಪುಸ್ತಕಗಳನ್ನೇ ಆರಿಸಿ ನಿಯಮಿಸುವಾಗ ಆ ಕಾರ್ಯವನ್ನು ಒಂದು ಸಮಿತಿಗೆ ವಹಿಸುವುದು ಮೇಲು. ಅಂಥ ಸಮಿತಿ ಮೇಲಿನ ಎಲ್ಲ ದೃಷ್ಟಿಗಳನ್ನೂ ಗಮನದಲ್ಲಿರಿಸಿಕೊಂಡು ಉಚಿತವೆನಿಸುವ ಪುಸ್ತಕವನ್ನು ಆರಿಸಬೇಕು. ಯಾವುದೇ ಕಾರಣದಿಂದಾಗಲಿ ಸಮಿತಿಯವರು ಒತ್ತಾಯಕ್ಕೆ ತುತ್ತಾಗಿ ಅನುಚಿತ ಪುಸ್ತಕಗಳನ್ನು ಆರಿಸುವುದಾದರೆ ಅದರಿಂದ ಉಪಾಧ್ಯಾಯರಿಗೂ ಅನುಕೂಲವಲ್ಲ; ಮಕ್ಕಳಿಗೂ ಸಹಾಯವಾಗುವಂತಿಲ್ಲ. ಅಗ ಶಿಕ್ಷಣ ಹೇಗೆತಾನೆ ಯಶಸ್ವಿಯಾದೀತು? ಈ ಅನುಚಿತ ಪ್ರಸಂಗಗಳು ತಪ್ಪಬೇಕಾದರೆ ಸಿದ್ಧವಾದ ಪಠ್ಯಪುಸ್ತಕಗಳನ್ನು ನಿಯಮಿಸುವುದಕ್ಕಿಂತ ಸಮಿತಿಯೇ ಅದನ್ನು ರಚಿಸಲು ಯತ್ನಿಸಬೇಕು. ಶಿಕ್ಷಕರೂ ಆ ಸಮಿತಿಯಲ್ಲಿರುವುದರಿಂದ ಮೇಲಿನ ಎಲ್ಲ ಆವಶ್ಯಕತೆಗಳನ್ನೂ ಗಮನದಲ್ಲಿರಿಸಿಕೊಂಡು ಉಚಿತವೆನಿಸುವ ಪಠ್ಯಪುಸ್ತಕವನ್ನು ತಯಾರಿಸಿಕೊಳ್ಳಬಹುದು. ಅಂಥ ಪಠ್ಯಪುಸ್ತಕ ಬೋಧನೆಗೆ ನಿಜವಾದ ಉಪಕರಣವಾದೀತು. ಮಕ್ಕಳ ಅವಧಾನವನ್ನು ಹಿಡಿದು ಕೇಂದ್ರೀಕರಿಸಿ, ಉತ್ಸಾಹವನ್ನೂ ಕುತೂಹಲವನ್ನೂ ಮೂಡಿಸಿ, ಉಚಿತವಾದ ಪ್ರಶ್ನೆಗಳ ಮೂಲಕ ವಿಷಯವನ್ನು ಸ್ಫುಟೀಕರಿಸಿ, ಕುತೂಹಲವನ್ನು ತೃಪ್ತಿಪಡಿಸುವುದಕ್ಕೂ, ಕಲಿತ ಜ್ಞಾನವನ್ನು ದಿನಚರಿಯಲ್ಲಿ ಉಪಯೋಗಿಸಿಕೊಳ್ಳುವುದಕ್ಕೂ, ನೂತನ ಜ್ಞಾನಾರ್ಜನೆಗೆ ಮನಸೆಳೆಯುವುದಕ್ಕೂ ಅನುಕೂಲಿಸುವಂತೆ ಅದನ್ನು ರಚಿಸಲು ಆಗ ಸಾಧ್ಯವಾಗುತ್ತದೆ.

ಪಠ್ಯವಸ್ತುವನ್ನು ನಿರ್ಮಿಸುವ ಕಾರ್ಯದಲ್ಲಿ ಆಸಕ್ತಿ ವಹಿಸಿರುವಂತೆ ಪಠ್ಯಪುಸ್ತಕಗಳ ನಿರ್ಮಾಣದಲ್ಲೂ ಅಮೆರಿಕದವರು ಆಸಕ್ತಿ ವಹಿಸಿರುವರು. ಮಕ್ಕಳಿಗೆ ನೂತನ ವಿಷಯಗಳನ್ನು ಕಲಿಸುವಾಗ ಪಠ್ಯಪುಸ್ತಕ ಉಪಾಧ್ಯಾಯರಂತೆಯೇ ನೆರವಾಗತಕ್ಕದೆಂದು ಅವರು ಭಾವಿಸಿರುವರು; ಆದರಿಂದ ಅವನ್ನು ಸರಿಯಾಗಿ ಬರೆಯಿಸಿ, ಉಚಿತವಾದ ಚಿತ್ರಗಳೊಡನೆ ವರ್ಣಮುದ್ರಣಗಳಲ್ಲಿ ಆಕರ್ಷಣೀಯವಾಗಿ ಮುದ್ರಿಸಿ ಸಿದ್ಧಪಡಿಸುತ್ತಿದ್ದಾರೆ; ಉದ್ದಾಮ ಶಿಕ್ಷಣಧುರೀಣರೂ ಆ ಕಾರ್ಯದಲ್ಲಿ ತೊಡಗಿದ್ದಾರೆ. ಥಾರ್ನ್‌ಡೈಕ್‌ರವರಂಥ ವಿಖ್ಯಾತ ಶಿಕ್ಷಣ ಚತುರರೂ ಅನೇಕ ಪಠ್ಯಪುಸ್ತಕಗಳನ್ನು ರಚಿಸಿರುವರು. ಅವನ್ನು ರಚಿಸುವಾಗ ಉತ್ತಮ ಶಿಕ್ಷಣ ದೃಷ್ಟಿಯೂ, ಅತ್ಯಾಧುನಿಕ ಸಂಶೋಧನೆಗಳಿಂದ ಹೊರಬಿದ್ದ ಜ್ಞಾನವೂ ಇರುವುದಾದರೆ ಬೋಧನೆಗೆ ಅವು ಉತ್ತಮ ಉಪಕರಣಗಳಾಗಿ ಪರಿಣಮಿಸಬಲ್ಲವು. ಜೊತೆಗೆ ಪ್ರಕಾಶಕರೂ ಬರಹಗಾರರೂ ಬೇಕಾದಹಾಗೆ ಇರುವುದರಿಂದ ಪಠ್ಯಪುಸ್ತಕ ನಿರ್ಮಾಣದಲ್ಲಿ ಸ್ಪರ್ಧೆಯಿದ್ದು, ಉತ್ತಮೋತ್ತಮ ಪುಸ್ತಕಗಳ ನಿರ್ಮಾಣವೂ ಸಾಧ್ಯವಾಗುತ್ತಿದೆ.

ಅಮೆರಿಕ, ಇಂಗ್ಲೆಂಡು, ಜರ್ಮನಿ, ರಷ್ಯ, ಜಪಾನ್ ಮುಂತಾದ ಮುಂದುವರಿದ ದೇಶಗಳಲ್ಲಿ ಪ್ರಕಟವಾಗುತ್ತಿರುವ ಭಿನ್ನ ಮಟ್ಟದ ಉತ್ತಮ ಪಠ್ಯಪುಸ್ತಕಗಳನ್ನೊಳಗೊಂಡ ಒಂದು ಪ್ರತ್ಯೇಕ ಪುಸ್ತಕಭಂಡಾರವನ್ನು ನಮ್ಮ ದೇಶದಲ್ಲಿ ಆರಂಭಿಸುವುದು ಅಗತ್ಯವಾಗಿದೆ. ಜೊತೆಗೆ, ಶಿಕ್ಷಣತತ್ತ್ವ, ಮನಶ್ಶಾಸ್ತ್ರಜ್ಞಾನ, ಶಾಲಾ ಸಂವಿಧಾನ ಮುಂತಾದ ವಿಷಯಗಳನ್ನು ಪ್ರಾಯೋಗಿಕವಾಗಿ ಉಪಯೋಗಿಸಿಕೊಳ್ಳುವ ರೀತಿಯನ್ನು ಸೂಚಿಸುವ ಗ್ರಂಥಗಳೂ ಅಲ್ಲಿರಬೇಕು. ಅಂಥ ಭಂಡಾರದ ಸೌಲಭ್ಯವನ್ನು ನಮ್ಮ ಶಿಕ್ಷಕರೂ, ಇನ್‌ಸ್ಪೆಕ್ಟರೂ ಪಡೆಯಲು ಅವಕಾಶವಿರಬೇಕು. ಅಂದು ನಮ್ಮ ನಾಡಿನ ಶಿಕ್ಷಣರಂಗಕ್ಕೊಪ್ಪುವ ಉತ್ತಮ ರೀತಿಯ ಪಠ್ಯಪುಸ್ತಕಗಳನ್ನು ರಚಿಸಲು ಅವರಿಗೆ ಸಹಾಯವಾಗುತ್ತದೆ.

ಈಗ ಬೇರೆ ಬೇರೆ ಶಾಲೆಗಳಲ್ಲಿ ನಿಯಮಿತವಾಗಿರುವ ಪಠ್ಯಪುಸ್ತಕಗಳಲ್ಲಿ ಬಹು ಸಂಖ್ಯೆ ಶಿಕ್ಷಣಶಾಖೆಯಲ್ಲಿಲ್ಲದವರಿಂದ ಅಥವಾ, ಆಯಾ ಪಠ್ಯವಸ್ತುವಿನಲ್ಲಿ ಪರಿಣತರಾದವರಿಂದ ನಿರ್ಮಿತವಾದವು. ಅಂಥವರನೇಕರಿಗೆ ಪಠ್ಯ

ಪುಸ್ತಕದ ರಚನಾನಿಯಮಗಳಾಗಲಿ, ಕಲಿವಿನ ಅಥವಾ ಬೋಧನೆಯ ಸ್ವರೂಪವಾಗಲಿ ಪರಿಚಯವಿಲ್ಲದ್ದರಿಂದ ಅವರು ತಮಗೆ ಗೊತ್ತಿರುವ ವಿಷಯಗಳನ್ನೆಲ್ಲ ಪಟ್ಟಿಯಂತೆ ಹೆಣೆದು ಪುಸ್ತಕವಾಗಿ ರೂಪಿಸಿಬಿಡುತ್ತಾರೆ. ಅಂಥ ಅನುಚಿತ ಪಠ್ಯಪುಸ್ತಕಗಳಿಂದ ಆಗುವ ಲಾಭಕ್ಕಿಂತ ನಷ್ಟವೇ ಹೆಚ್ಚೆಂದು ಹಲವರಾದರೂ ಭಾವಿಸುವರು. ಹಿಂದೆ, ಪ್ರಾಥಮಿಕ ದೆಶೆಯಲ್ಲಿ ಉದ್ಯಮ ಶಿಕ್ಷಣ ಉಚಿತವೆಂದು ನಾವು ವಾದಿಸಿರುತ್ತೇವೆ; ಈಚೆಗೆ ಭಾರತದಲ್ಲೂ ಅದನ್ನು ಬಹು ವಿಧದಲ್ಲಿ ಹೋಲುವ, ಆ ಗುರಿಯನ್ನೇ ಪ್ರತಿಬಿಂಬಿಸುವ ಮೂಲಶಿಕ್ಷಣ ಪದ್ಧತಿಯನ್ನು ದೇಶಾದ್ಯಂತವೂ ಜಾರಿಗೆ ತರಲು ಯತ್ನ ನಡೆಯುತ್ತಿದೆ. ಇಂದಿನ ಪಠ್ಯಪುಸ್ತಕಗಳಾವುವೂ ಅದಕ್ಕೆ ನೆರವಾಗುವಂತಿಲ್ಲ. ಅದಕ್ಕೊಪ್ಪುವ ನೂತನ ಪಠ್ಯಪುಸ್ತಕಗಳನ್ನು ರೂಪಿಸಬೇಕಾಗಿದೆ; ನೆಯ್ಗೆ, ವ್ಯವಸಾಯ, ಬಡಗಿ ಕೆಲಸ, ಚಾಪೆ ಹೆಣೆಯುವುದು, ಅಂಗಡಿ, ಮುಂತಾದ ಉದ್ಯಮಗಳನ್ನ ಕೇಂದ್ರವಾಗಿಟ್ಟುಕೊಂಡು, ಆ ಮುಖ್ಯ ಶಿಕ್ಷಣವನ್ನು ಸಾಧಿಸುವಾಗ ಚರಿತ್ರೆ, ಭೂಗೋಳ, ಲೆಕ್ಕ, ಭಾಷೆ, ಆರೋಗ್ಯ, ಮುಂತಾದ ವಿಷಯಗಳ ಬೋಧನೆಯೂ ಆಗುವಂತೆ ಸನ್ನಿವೇಶಗಳನ್ನು ಜೋಡಿಸಿಕೊಂಡು ಮೂಲಶಿಕ್ಷಣ ಶಾಲೆಗಳಿಗೊಪ್ಪುವಂಥ ಉದ್ಯಮ ಪಠ್ಯಪುಸ್ತಕಗಳನ್ನು ರಚಿಸಬೇಕಾಗಿದೆ. ಹಾಗೆಯೇ ಆ ಮೂಲಶಿಕ್ಷಣ ಪದ್ಧತಿಯನ್ನು ಆಚರಿಸಿ ಯಶಸ್ವಿಯಾಗುವಂತೆ ಮಾಡಲು ಉಪಾಧ್ಯಾಯರ ಬೋಧನೆಗೆ ನೆರವಾಗುವ ಪುಸ್ತಕಗಳೂ ರಚನೆಯಾಗಬೇಕು. ನಮ್ಮ ಶಾಲೆಗಳಲ್ಲಿರುವ ಅನೇಕ ಪಠ್ಯಪುಸ್ತಕಗಳು ಉಚಿತವಲ್ಲವಾಗಿವೆ. ಉಪಾಧ್ಯಾಯರು ಈ ಸಂದರ್ಭದಲ್ಲಿ ಇರುವ ಆ ಪಠ್ಯಪುಸ್ತಕಗಳನ್ನೇ ಆಯಾ ಪ್ರದೇಶಗಳಿಗೆ ಒಪ್ಪುವಂತೆ ಎಚ್ಚರಿಕೆಯಿಂದ ಉಪಯೋಗಿಸಿಕೊಳ್ಳಬೇಕು; ಲೇಖಕರೂ, ಶಿಕ್ಷಕರೂ, ಮೇಲ್ವಿಚಾರಕರೂ ಉತ್ತಮ ಪಠ್ಯಪುಸ್ತಕಗಳ ನಿರ್ಮಾಣದ ಕಡೆ ಪ್ರಯತ್ನಿಸುತ್ತಲೂ ಇರಬೇಕು.

ಪ್ರಾಥಮಿಕ ಶಿಕ್ಷಣದ ಅಂತಸ್ತಿನಲ್ಲಿ ಆರಂಭಿಸಿರುವ ಹಲವು ನೂತನ ಶಿಕ್ಷಣಪದ್ಧತಿಗಳಲ್ಲಿ ನಿರ್ದಿಷ್ಟವಾಗಿ ಪಠ್ಯಪುಸ್ತಕಗಳೇ ನಿಯಮಿತವಾಗಿಲ್ಲ: ಅಲ್ಲಿನ ಪ್ರಾದೇಶಿಕ ಸಮಾಜದ ಸನ್ನಿವೇಶಗಳಿಗೆ ತಕ್ಕಂತೆ ಪಠ್ಯವಸ್ತುವನ್ನು ಏರ್ಪಡಿಸಿಕೊಂಡು ಉಪಾಧ್ಯಾಯರು ಬೋಧನಕಾರ್ಯವನ್ನು ಮಾಡುತ್ತಿರು

ವರು. ಆದರಿಂದ ಯಾವ ರೀತಿಯ ಔಚಿತ್ಯ, ಅನುಕೂಲ್ಯತೆಗಳೇ ಇರಲಿ, ಶಿಕ್ಷಣವೇತ್ತರು ಪಠ್ಯಪುಸ್ತಕದ ಮಾರ್ಗದರ್ಶನವಿಲ್ಲದ ಅಂಥ ಶಿಕ್ಷಣಪದ್ಧತಿಯನ್ನು ಬಲವಾಗಿ ಟೀಕಿಸಿಯೇ ಇರುವರು. ದೇಶಕ್ಕೆಲ್ಲ ಅನ್ವಯಿಸುವಂತೆ ಒಂದು ತರಗತಿಗೆ ಒಂದು ವಿಷಯದಲ್ಲಿ ಒಂದು ಪಠ್ಯಪುಸ್ತಕ ನಿಯಮಿತವಾದರೆ ಎಲ್ಲ ಶಾಲೆಗಳಲ್ಲೂ ಆ ತರಗತಿಯ ವಿದ್ಯಾರ್ಥಿಗಳಿಗೆ ಏಕ ಮಟ್ಟದ ಶಿಕ್ಷಣಾಭಿವೃದ್ಧಿ ಸಾಧನೆಯಾಗಿದ್ದು, ಸಾರ್ವತ್ರಿಕವಾಗಿ ಪರೀಕ್ಷೆ ನಡಸಿ ಅವರ ಯೋಗ್ಯತೆಯನ್ನು ನಿಷ್ಕರ್ಷಿಸಲು ಸಾಧ್ಯವಾಗುತ್ತದೆ; ವಿದ್ಯಾರ್ಥಿಗಳು ಒಂದು ಕಡೆಯಿಂದ ಇನ್ನೊಂದು ಕಡೆಗೆ ವಲಸೆ ಬಂದರೂ ತೊಂದರೆಯಾಗುವುದಿಲ್ಲ. ಆದರೆ ಒಂದೇ ಪಠ್ಯಪುಸ್ತಕ ದೇಶಾದ್ಯಂತವೂ ಇರುವುದರಿಂದ ಲೇಖಕರ ವೈಯಕ್ತಿಕ ಅಭಿಪ್ರಾಯಗಳೂ ಏಕಪಕ್ಷೀಯ ತೀರ್ಮಾನಗಳೂ ವಿದ್ಯಾರ್ಥಿಗಳ ಮೇಲೆ ಪ್ರಭಾವ ಬೀರಿ ಉಚಿತ ರೀತಿಯ ಶಿಕ್ಷಣವಾಗಲು ತೊಂದರೆಯಾಗಬಹುದು; ಅದರಲ್ಲಿರುವ ದೃಷ್ಟಿ ದೋಷಗಳೂ, ಮಕ್ಕಳ ಹೃದಯ ವೈಶಾಲ್ಯತೆಯನ್ನು ಬೆಳಸಲು ಅಡ್ಡಿಯಾಗಿ ಪರಿಣಮಿಸಬಹುದು; ಜೊತೆಗೆ ಪುಸ್ತಕದ ಕರ್ತೃಗಳೇ ಮಕ್ಕಳಿಗೆ ಎಲ್ಲ ವಿಷಯಗಳನ್ನೂ ಅರೆದು ನುಂಗಿಸಲು ಯತ್ನಿಸುವುದರಿಂದ ಮಕ್ಕಳ ಯೋಚನೆಯೂ ವಿಮರ್ಶೆಯೂ ಬೆಳೆದು ವಿಕಸಿಸಲಾರವು; ಪುಸ್ತಕದ ಕೊನೆಯಲ್ಲಿ ಕೊಟ್ಟಿರಬಹುದಾದ ಅಭ್ಯಾಸಗಳು ಯಾಂತ್ರಿಕವಾಗಿದ್ದು, ಯಾವೊಂದು ಪ್ರದೇಶಕ್ಕೂ ಅನ್ವಯಿಸಲಾರದೆ ಆಸಕ್ತಿ ವಿರಹಿತವೆನಿಸಬಹುದು. ಆದರೂ ಅಂಥ ಪಠ್ಯಪುಸ್ತಕ ಉಚಿತ ರೀತಿಯಲ್ಲಿ, ನಿಯಮಗಳನ್ನನುಸರಿಸಿ ಬರೆದದ್ದಾಗಿದ್ದರೆ ರಾಷ್ಟ್ರೀಯ ಐಕ್ಯತೆಗೆ ನೆರವಾಗುವುದರಲ್ಲಿ ಸಂಶಯವಿಲ್ಲ. ಉಪಾಧ್ಯಾಯರು ಚತುರತೆಯಿಂದ ಅದನ್ನು ಉಪಯೋಗಿಸಿಕೊಂಡು ಪ್ರಾದೇಶಿಕ ಅನುಕೂಲತೆಗೆ ತಕ್ಕಂತೆ ಅದರಲ್ಲಿರಬಹುದಾದ ನ್ಯೂನತೆಗಳನ್ನು ಸರಿಪಡಿಸಿಕೊಂಡು ಉಪಯೋಗಿಸಿಕೊಳ್ಳುವುದು ಉತ್ತಮ. ಪಠ್ಯಪುಸ್ತಕವನ್ನೇ ವರ್ಜಿಸುವುದಕ್ಕಿಂತ ಇರುವ ಪುಸ್ತಕವನ್ನು ಕೌಶಲ್ಯದಿಂದ ಉಪಯೋಗಿಸಿಕೊಳ್ಳುವುದು ನಿಜವಾಗಿಯೂ ಒಳ್ಳೆಯದು.

ಅನೇಕ ಸಂದರ್ಭಗಳಲ್ಲಿ ಉಪಾಧ್ಯಾಯರು ಪಠ್ಯಪುಸ್ತಕವನ್ನು ಬಾಚೂ ತಪ್ಪದೆ ಬಳಸುವರು; ಮಕ್ಕಳೂ ಅದನ್ನು ಉರುಹಾಕುವರು.

ಇವೆರಡೂ ನಿಲ್ಲಬೇಕು. ಮೊದಲು ಪಠ್ಯಪುಸ್ತಕವನ್ನು ಓದಿಸಿ ಅಲ್ಲಿರುವ ಮೂಲ ಅರ್ಥವನ್ನು ಮಕ್ಕಳು ಗ್ರಹಿಸುವಂತೆ ಮಾಡಬೇಕು; ಅನಂತರ ಅದರಲ್ಲಿರಬಹುದಾದ ಹಲವು ವಿವಾದಾಸ್ಪದವಾದ ವಿಷಯಗಳ ಮೇಲೆ ಬೇರೆ ಪುಸ್ತಕಗಳಿಂದ ಅಂಕಿ ಅಂಶಗಳನ್ನು ಒದಗಿಸಿಕೊಂಡು ನಿರ್ದಿಷ್ಟವಾದ ಜ್ಞಾನ ಮಕ್ಕಳಿಗಾಗುವಂತೆ ಮಾಡಬೇಕು. ಪಠ್ಯಪುಸ್ತಕದಲ್ಲಿ ಮಕ್ಕಳ ಆಸಕ್ತಿಯನ್ನು ಕೆರಳಿಸುವ ವಿಷಯ ಸೂಕ್ಷ್ಮವಾಗಿ ಬಂದಿದ್ದರೆ ಆ ವಿಷಯಗಳನ್ನು ವಿವರವಾಗಿ ಕೊಟ್ಟಿರುವ ಇತರ ಪುಸ್ತಕಗಳ ಕಡೆ ಅವರ ಗಮನವನ್ನು ಸೆಳೆಯಬೇಕು.

ಸಾಮಾನ್ಯ ಸಂದರ್ಭಗಳಲ್ಲಿ, ಪಠ್ಯಪುಸ್ತಕದಲ್ಲಿರುವ ಮಾರ್ಗದರ್ಶನದಿಂದ ಕಾಲ ವ್ಯಯವಿಲ್ಲದೆ ಬೋಧನೆಯನ್ನು ಮಾಡಬಹುದು; ವಿಷಯ ವಿಂಗಡನೆಯ ಮತ್ತು ವಿಷಯ ವಿಭಾಗದ ಕ್ರಮವನ್ನೂ, ಅವುಗಳಿಗೆ ಕೊಟ್ಟಿರುವ ಪ್ರತ್ಯೇಕ ಶಿರೋನಾಮೆಗಳನ್ನೂ ಉಪಯೋಗಿಸಿಕೊಂಡು ವಿಷಯ ಜ್ಞಾನ ಸುಲಭವಾಗುವಂತೆಯೂ, ಭಿನ್ನ ವಿಷಯಗಳಿಗೆ ಸಂಬಂಧ ಕಾಣುವಂತೆಯೂ ಬೋಧಿಸಬಹುದು. ಅಲ್ಲಿ ಕೊಟ್ಟಿರುವ ವಿಷಯ ಸೂಚಿಕೆ, ಅಧ್ಯಾಯಗಳ ಮತ್ತು ವಿಷಯ ವಿಭಾಗಗಳ ಪುಟ ಸಂಖ್ಯೆ, ಆಕರಗಳನ್ನು ಸೂಚಿಸುವ ಪಟ್ಟಿ—ಇವುಗಳನ್ನೆಲ್ಲ ಮಕ್ಕಳು ಅರಿತುಕೊಂಡು ಉಪಯೋಗಿಸುವಂತೆ ಸೂಚನೆಯನ್ನೂ ಸಲಹೆಯನ್ನೂ ಕೊಡಬಹುದು. ಅದರಲ್ಲಿರುವ ಚಿತ್ರ, ನಕ್ಷೆ, ಅಂಕಿ ಅಂಶಗಳ ಪಟ್ಟಿ ಮೊದಲಾದ ಉಪಯುಕ್ತ ಅಂಶಗಳನ್ನೂ ಅವರ ಗಮನಕ್ಕೆ ತರಬಹುದು. ಮನೆಯಲ್ಲಿ ಪಾಠವನ್ನು ಮಕ್ಕಳು ಪುನರಾವರ್ತಿಸುವುದಕ್ಕೂ ಬೋಧಿಸಿದ ವಿಷಯದ ಜೊತೆಗೆ ಹೆಚ್ಚಿನ ವಿಷಯವನ್ನು ಕಲಿವುದಕ್ಕೂ ಉಪಾಧ್ಯಾಯರು ಪಠ್ಯಪುಸ್ತಕವನ್ನು ಉಪಯೋಗಿಸುವಂತೆ ತಿಳಿಸಬಹುದು. ಅದರಲ್ಲಿ ಇರುವ ಅಭ್ಯಾಸಗಳನ್ನೂ ಮನೆಯಲ್ಲಿ ಮಾಡಿಕೊಂಡು ಬರಲು ಪ್ರೋತ್ಸಾಹಿಸಬೇಕು. ಎಲ್ಲ ವಿಧಗಳಲ್ಲೂ ಪಠ್ಯಪುಸ್ತಕದಿಂದ ಮಕ್ಕಳು ಆದಷ್ಟು ಹೆಚ್ಚಿನ ಪ್ರಯೋಜನವನ್ನು ಪಡೆಯುವಂತೆ ಮಾಡಬೇಕು. ಆದರೆ ಅದನ್ನೇ ನಂಬಿ, ಅಲ್ಲಿರುವ ದೋಷಗಳನ್ನೂ ಪರಿಗಣಿಸದೆ, ಕುರುಡರಂತೆ ಉಪಯೋಗಿಸಲು ಯತ್ನಿಸಬಾರದು.

ಬೋಧನ ಕಾರ್ಯಕ್ಕೆ ಪಠ್ಯಪುಸ್ತಕ ಒಂದು ಚೌಕಟ್ಟು ಮಾತ್ರ. ಆದರೆ ಇನ್ನೂ ಹೆಚ್ಚಿನ ಜ್ಞಾನವನ್ನೂ ವಿದ್ವತ್ತನ್ನೂ ಪಡೆಯಬೇಕಾದರೆ

ಬೇರೆ ಪುಸ್ತಕಗಳ ಕಡೆ ಗಮನಕೊಡಬೇಕು. ವಿಷಯದ ಬೋಧನೆಯನ್ನು ಕುರಿತ ಹಲವು ಪುಸ್ತಕಗಳನ್ನೂ ಓದುತ್ತಿರಬೇಕು; ವಿಷಯದ ಮೇಲೆ ಬರುತ್ತಿರುವ ನೂತನ ಗ್ರಂಥಗಳನ್ನೂ, ಪತ್ರಿಕೆಯ ವರದಿಗಳನ್ನೂ ನೋಡುತ್ತಿರಬೇಕು; ಪಠ್ಯಪುಸ್ತಕದ ಜೊತೆಗೆ ಐಚ್ಛಿಕವಾಗಿ ನಿಯಮಿಸಿರುವ ಇತರ ಗ್ರಂಥಗಳಿಂದಲೂ ಆ ವಿಷಯದ ಮೇಲೆ ಆವಶ್ಯಕವೆನಿಸಿದ ಅಂಶವನ್ನು ಸಂಗ್ರಹಿಸಿಕೊಂಡು ಪಾಠವನ್ನು ಪೂರ್ಣಗೊಳಿಸಬೇಕು. ಪಠ್ಯಪುಸ್ತಕದಲ್ಲಿ ಯಾವುದಾದರೂ ಒಂದು ವಿಷಯ ಚೆನ್ನಾಗಿ ತಿಳಿಯದಿದ್ದರೆ ಅದನ್ನು ಸ್ಪಷ್ಟವಾಗಿ ವಿವರಿಸಿರುವ ಬೇರೊಂದು ಪುಸ್ತಕವನ್ನು ತಂದು ಓದಿ ಹೇಳಬಹುದು. ಇತರ ಪುಸ್ತಕಗಳಲ್ಲಿರಬಹುದಾದ ಚಿತ್ರಗಳನ್ನೂ ತೋರಿಸಬಹುದು. ಅಲ್ಲೀ ಬೇರೆ ರೀತಿಯ ಅಭ್ಯಾಸಗಳಿದ್ದರೆ ವೈವಿಧ್ಯಕ್ಕಾಗಿ ಅವನ್ನೂ ಬಳಸಬಹುದು; ಅಲ್ಲಿ ಬೇರೊಂದು ರೀತಿಯಲ್ಲಿ ವಿಷಯ ಪ್ರತಿಪಾದನೆ, ಬೋಧನ ಮಾರ್ಗ ಇವುಗಳು ಸೂಚಿತವಾಗಿದ್ದರೆ ಉಚಿತವೆನಿಸಿದರೆ, ಅವನ್ನೂ ಉಪಯೋಗಿಸಿಕೊಳ್ಳಬಹುದು. ತರಗತಿಗೆ ನಿಯಮಿತವಾಗಿರುವ ಪಠ್ಯಪುಸ್ತಕಗಳು ಅನೇಕ ವಿಷಯಗಳಲ್ಲಿ ಅಪೂರ್ಣವಾಗಿರಬಹುದು. ಆಗ ಉಪಾಧ್ಯಾಯರು ಬೇರೆ ಪುಸ್ತಕಗಳಿಂದ ಹೆಚ್ಚಿನ ವಿಷಯ ಸಂಗ್ರಹ ಮಾಡಬೇಕು. ಹಲವಾರು ವರ್ಷಗಳ ಹಿಂದೆ ಬರೆದು ಪಠ್ಯಪುಸ್ತಕ ಇನ್ನೂ ಪ್ರಚಾರದಲ್ಲಿದ್ದು, ಈಚೆಗೆ ಹೊಸ ವಿಷಯಗಳು ಬೆಳಕಿಗೆ ಬಂದಂತೆ ಪುನರ್ವಿಮರ್ಶಿತವಾಗದಿರಬಹುದು; ಅಂಥ ನೂತನ ಶೋಧನೆಗಳನ್ನೂ ವಿಷಯಗಳನ್ನೂ ಅರಿತುಕೊಂಡು ಪಾಠಕ್ಕೆ ಒದಗಿಸಿಕೊಳ್ಳಲು ಉಪಾಧ್ಯಾಯರು ಪತ್ರಿಕೆಗಳನ್ನೂ ಇತರ ಪ್ರಕಟನೆಗಳನ್ನೂ ನೋಡುವ ಅಭ್ಯಾಸವಿಟ್ಟಿರಬೇಕು. ಎಂದಮೇಲೆ, ಪಠ್ಯಪುಸ್ತಕ ಬೋಧನಕಾರ್ಯಕ್ಕೆ ಒಂದು ಮೂಲಸಾಧನವಾದರೂ ಅದನ್ನು ಬೇರೆ ಮಾರ್ಗಗಳಿಂದ ಪುಷ್ಟಿಗೊಳಿಸಿಕೊಂಡು, ಆವಶ್ಯಕವಿದ್ದರೆ ಪರಿಷ್ಕರಿಸಿಕೊಂಡು ಉಪಯೋಗಿಸಿಕೊಳ್ಳಬೇಕು

**೨. ಪ್ರಶ್ನೆಗಳು:** ಬೋಧನ ಕಾರ್ಯದಲ್ಲಿ ಮಕ್ಕಳು ಆಲೋಚಿಸಿ ವಿಷಯವನ್ನು ಚಟುವಟಿಕೆಯಿಂದ, ಸ್ವಪ್ರಯತ್ನದಿಂದ, ಕಲಿಯುವಂತೆ ಮಾಡಲು ಪ್ರಶ್ನೆಗಳು ತುಂಬ ಸಹಾಯ ಮಾಡುತ್ತವೆ. ಆದರಿಂದಲೇ ಆಧುನಿಕ ಬೋಧನಕ್ರಮದಲ್ಲಿ ಪ್ರಶ್ನೆಗಳಿಗೆ ಪ್ರಧಾನ ಸ್ಥಾನವಿರುವುದು.

ಆದರೆ ಉಚಿತವಲ್ಲದ ಪ್ರಶ್ನೆಗಳು ಬೋಧನ ಕಾರ್ಯಕ್ಕೆ ಸಹಾಯ ಮಾಡುವುದರ ಬದಲು ತೊಡಕಾಗಿಯೂ ಅನರ್ಥಕಾರಿಯಾಗಿಯೂ ಪರಿಣಮಿಸಬಹುದು. ಎಂದಮೇಲೆ ಪ್ರಶ್ನೆಗಳನ್ನು ಹಾಕುವುದಕ್ಕೆ ಒಂದು ಕೌಶಲ್ಯ ಬೇಕು; ಹಾಗೆ ತಮ್ಮ ಬೋಧನಕಾರ್ಯಕ್ಕೆ ಅವನ್ನು ಉಪಯೋಗಿಸಿಕೊಳ್ಳಬೇಕಾದರೆ ಆ ಕಾರ್ಯಕ್ಕೆ ಸಂಬಂಧಿಸಿದ ಹಲವು ನಿಯಮಗಳನ್ನು ಗಮನಿಸಬೇಕು.

ಪಾಠ ಮಾಡುವಾಗ ಪ್ರಶ್ನೆಗಳನ್ನು ಹಿಂದೆ ವಿವರಿಸಿರುವಂತೆ ಮೂರು ಸೋಪಾನಗಳಲ್ಲಿ ಉಪಯೋಗಿಸಬಹುದು: ಪಾಠದ ಮೊದಲು ಹಾಕುವ ಪರಿಚಯ ಪ್ರಶ್ನೆಗಳಿಂದ ಉಪಾಧ್ಯಾಯರು ಬೋಧಿಸಬೇಕಾಗಿರುವ ವಿಷಯದಲ್ಲಿ ಮಕ್ಕಳ ಪೂರ್ವಜ್ಞಾನವನ್ನು ತಿಳಿದುಕೊಂಡು ಅಲ್ಲಿಂದ ಹೊಸ ಪಾಠವನ್ನು ಆರಂಭಿಸಲು ನೆರವಾಗುತ್ತದೆ; ಸ್ಫುಟೀಕರಣದ ಅಂತಸ್ತಿನಲ್ಲಿ ಹಾಕುವ ಪ್ರಶ್ನೆಗಳಿಂದ ವಿಷಯವನ್ನು ಕ್ರಮ ಕ್ರಮವಾಗಿ ಮಕ್ಕಳು ಆಲೋಚಿಸಿ ತಿಳಿದುಕೊಳ್ಳುವಂತೆ ಮಾಡಬಹುದು; ಪಾಠದ ಕೊನೆಯಲ್ಲಿ ಹಾಕುವ ಪುನರಾವರ್ತನೆಯ ಪ್ರಶ್ನೆಗಳಿಂದ ಮಕ್ಕಳು ಬೋಧಿಸಿದ ವಿಷಯವನ್ನು ಎಷ್ಟರಮಟ್ಟಿಗೆ ತಿಳಿದುಕೊಂಡಿದ್ದಾರೆ, ಅವರಿಗೆ ಯಾವ ಯಾವ ಭಾಗ ತೊಡಕಾಗಿತ್ತು ಮತ್ತು ಯಾರು ಯಾರು ಎಷ್ಟೆಷ್ಟರಮಟ್ಟಿಗೆ ಫಲ ಪಡೆದಿರುವರು —ಈ ಅಂಶಗಳನ್ನು ತಿಳಿಯಲು ಸಹಾಯವಾಗುತ್ತದೆ.

ಪ್ರಬುದ್ಧ ಭಾಷಣಗಳಿಂದ ಮಕ್ಕಳು ವಿಷಯ ಪರಂಪರೆಯನ್ನಾಗಲಿ, ಭಾವಗಳ ಸಂಬಂಧವನ್ನಾಗಲಿ, ಕಾರ್ಯಕಾರಣ ರೀತಿಯನ್ನಾಗಲಿ ಅರಿತುಕೊಳ್ಳಲಾರರು. ಆದರೆ ಅದೇ ವಿಷಯವನ್ನು ಅಂತಸ್ತು ಅಂತಸ್ತುಗಳಾಗಿ ಮಾಡಿಕೊಂಡು, ಪ್ರಶ್ನೆಗಳ ಮೂಲಕ ವಿಶದಪಡಿಸುತ್ತ ಹೋದರೆ ಅವರು ಸುಲಭವಾಗಿ ಗ್ರಹಿಸಿಕೊಳ್ಳಬಲ್ಲರು. ಆದ್ದರಿಂದ ಬೋಧನ ಕಾರ್ಯದಲ್ಲಿ, ಹಾಗೂ ಪ್ರೌಢಶಾಲೆ, ಮಾಧ್ಯಮಿಕ ಮತ್ತು ಪ್ರಾಥಮಿಕ ಶಾಲೆಗಳಲ್ಲಿ ಪ್ರಶ್ನೆ ಉಪಾಧ್ಯಾಯರಿಗೆ ಬಹುಮಟ್ಟಿಗೆ ನೆರವಾಗತಕ್ಕ ಪಾಠೋಪಕರಣಗಳಲ್ಲೊಂದು. ವಿಷಯವನ್ನು ಸ್ಫುಟೀಕರಿಸಲು ಹಾಕುವ ಪ್ರಶ್ನೆಗಳು ಮಕ್ಕಳ ಆಲೋಚನಾಶಕ್ತಿಯನ್ನು ಪ್ರಚೋದಿಸಿ ಮನಸ್ಸು ಚಟುವಟಿಕೆಯಿಂದಿರುವಂತೆ ಮಾಡುತ್ತವೆ. ಹೊಸ ವಿಷಯಗಳನ್ನು ತಿಳಿದಂತೆ ಅವರ ಮನಸ್ಸಿನಲ್ಲೂ

ಬಗೆ ಬಗೆಯ ಪ್ರಶ್ನೆಗಳು ಮೂಡುತ್ತವೆ. ಮಕ್ಕಳ ಮನಸ್ಸಿನ ಈ ಕಾತರವೇ ಜ್ಞಾನಾರ್ಜನೆಯ ಮೂಲ. ಎಂದಮೇಲೆ ಬೋಧಿಸುವಾಗ ಉಪಾಧ್ಯಾಯರು ಮಕ್ಕಳನ್ನು ಪ್ರಶ್ನಿಸುವುದರ ಜೊತೆಗೆ ಅವರೂ ಬಗೆ ಬಗೆಯ ಪ್ರಶ್ನೆಗಳನ್ನು ಕೇಳುವರು. ಅವುಗಳಿಗೆ ಉಪಾಧ್ಯಾಯರೂ ಉತ್ತರ ಹೇಳಬೇಕು. ಪಾಠ ಮಾಡುವಾಗ ಈ ಎರಡೂ ದಿಕ್ಕಿನ ಪ್ರಶ್ನೆಗಳು ಸಹಕರಿಸುವುದರಿಂದಲೇ ಬೋಧನೆ ಯಶಸ್ವಿಯಾಗುವುದು.

ವಿಷಯವನ್ನು ವಿಮರ್ಶಿಸಿ ವಿವರವಾಗಿ ಪರಿಚಯಮಾಡಿಕೊಂಡು, ಅದರ ಬೇರೆ ಬೇರೆ ಅಂಶಗಳಿಗಿರುವ ಸಂಬಂಧವನ್ನು ಕಂಡುಕೊಂಡು, ಅವುಗಳಿಗೆ ಅನ್ವಯಿಸುವಂಥ ತತ್ವವನ್ನೋ ನಿಯಮವನ್ನೋ ಅರಿತುಕೊಳ್ಳುವಾಗ ಮಕ್ಕಳ ಮನಸ್ಸು ಚಟುವಟಿಕೆಯಿಂದ ಕೆಲಸ ನಡಸಬೇಕಾಗುತ್ತದೆ; ತೀವ್ರವಾಗಿ ಆಲೋಚಿಸಬೇಕಾಗುತ್ತದೆ. ಆದರೆ ಯಾವ ದಿಕ್ಪಥದಲ್ಲಿ ಆಲೋಚಿಸಬೇಕೆಂಬುದು ಮಕ್ಕಳಿಗೆ ಗೊತ್ತಿರುವುದಿಲ್ಲ; ಉಪಾಧ್ಯಾಯರು ಸಕಾಲದಲ್ಲಿ ಸರಿಯಾದ ಪ್ರಶ್ನೆಗಳನ್ನು ಹಾಕುತ್ತ ಅವರ ಆಲೋಚನಾಶಕ್ತಿ ಫಲಪ್ರದವಾದ ಮಾರ್ಗದಲ್ಲಿ ನಡೆಯುವಂತೆ ಮಾರ್ಗದರ್ಶನ ಮಾಡಬೇಕು. ಆ ಮೂಲಕ ಅವರು ವಿಷಯವನ್ನೂ ಕ್ರಮ ಕ್ರಮವಾಗಿ ಗ್ರಹಿಸಿಕೊಳ್ಳಲು ಸನ್ನಿವೇಶಗಳನ್ನು ಕಲ್ಪಿಸಿಕೊಡಬೇಕು.

ಉಪಾಧ್ಯಾಯರ ಪ್ರಶ್ನೆಗಳ ಸ್ವರೂಪವೇ ಅವರ ಕೌಶಲವನ್ನು ಸೂಚಿಸಬಲ್ಲದೆಂದು ಹಿಂದೆ ಹೇಳಿದೆ. ಆದ್ದರಿಂದ ಅಂಥ ಒಳ್ಳೆಯ ಪ್ರಶ್ನೆಗಳ ಸ್ವರೂಪವನ್ನು ಪರಿಚಯ ಮಾಡಿಕೊಳ್ಳುವುದು ಎಲ್ಲ ಶಿಕ್ಷಕರಿಗೂ ಅನಿವಾರ್ಯ. ಒಳ್ಳೆಯ ಪ್ರಶ್ನೆಗಳು ಮಕ್ಕಳ ಕುತೂಹಲಭಾವವನ್ನು ಪ್ರಚೋದಿಸಿ, ವಿಷಯದಲ್ಲಿ ಆಸಕ್ತಿ ಹುಟ್ಟಿಸಿ, ಜ್ಞಾನಾರ್ಜನೆಗೆ ಆವಶ್ಯಕವಾದ ಆಲೋಚನಾಶಕ್ತಿ ಕಾರ್ಯಮುಖವಾಗುವಂತೆ ಮಾಡಬೇಕು; ಮಕ್ಕಳ ನಿಜವಾದ ಆಸಕ್ತಿ ಯಾವ ಕಡೆಯಿದೆಯೆಂಬುದನ್ನು ಆ ಮೂಲಕ ಗ್ರಹಿಸಿ, ಬೋಧನೆಗೂ ಕಲಿಯುವಿಕೆಗೂ ಸಂಬಂಧ ಕಲ್ಪಿಸಿಕೊಳ್ಳಲು ಸಹಾಯ ಮಾಡಬೇಕು; ಅವರ ಯೋಚನಾಶಕ್ತಿಯನ್ನು ತೀವ್ರಗೊಳಿಸಿ ಬೋಧನೆಗೆ ಉಚಿತ ಹಿನ್ನೆಲೆಯನ್ನು ಅನುಗೊಳಿಸಬೇಕು; ಬೋಧಿಸಬೇಕಾಗಿರುವ ಪ್ರಧಾನ ಅಂಶಗಳನ್ನು ಗೌಣ ಅಂಶಗಳಿಂದ ಆರಿಸಿಕೊಂಡು ಮಕ್ಕಳ ಆಲೋಚನೆ ಆ ಅಂಶ

ಗಳ ಮೇಲೆ ಕೇಂದ್ರೀಕರಿಸುವಂತೆ ಮಾಡಲು ಸಹಾಯವಾಗಬೇಕು; ಜೊತೆಗೆ ಒಳ್ಳೆಯ ಪ್ರಶ್ನೆಗಳು ಬೇರೆ ವಿಷಯದ ಕಡೆ ಮನಸ್ಸನ್ನು ಹರಿಯಬಿಟ್ಟು ಪಾಠದಲ್ಲಿ ವಿಮುಖರಾಗಿರುವ ಮಕ್ಕಳ ಅವಧಾನವನ್ನು ಬೋಧನೆಯ ಕಡೆಗೆ ಸೆಳೆಯಲು ನೆರವಾಗಬೇಕು; ಭಾಷೆಯ, ಭಾವಗಳ, ಸನ್ನಿವೇಶಗಳ, ರಸ ಸ್ವಾದನೆಯ ಕಡೆಗೂ ಅವರ ಮನಸ್ಸನ್ನು ಆಕರ್ಷಿಸಲು ಸಹಾಯಮಾಡ ಬೇಕು. ಸ್ಫುಟೀಕರಣ ಕಾರ್ಯದಲ್ಲಿ ಏಕಪ್ರಕಾರವಾಗಿ ತಾವೇ ಪ್ರಶ್ನೆಗಳ ಮಳೆಗರೆಯುತ್ತ ಹೋಗುವುದು ಅನೇಕ ಉಪಾಧ್ಯಾಯರ ವಾಡಿಕೆ; ಅದರಿಂದ ಏಕಾಗ್ರಚಿತ್ತದಿಂದ ಮಕ್ಕಳು ವಿಷಯವನ್ನು ಆಲೋಚಿಸುತ್ತ ಗ್ರಹಿಸಿ ಕೊಳ್ಳಲು ನೆರವಾದರೂ, ಅವರಿಗೂ ಅನುಮಾನವಾದಾಗ ಪ್ರಶ್ನೆಗಳನ್ನು ಕೇಳುವ ಅವಕಾಶವಿಲ್ಲದೆ ಹೋಗುತ್ತದೆ. ಉಪಾಧ್ಯಾಯರು ಅವರಿಗೂ ಪ್ರಶ್ನೆ ಕೇಳಲು ಅವಕಾಶ ಕೊಡಬೇಕು.

ಪೀಠಿಕೆಯ ಅಂತಸ್ತಿನಲ್ಲಿ ಹಾಕುವ ಪ್ರಶ್ನೆಗಳು ಸಂಖ್ಯೆಯಲ್ಲಿ ಕಡಮೆ ಯಿದ್ದು, ಮಕ್ಕಳ ಹಿಂದಿನ ಅನುಭವವನ್ನೂ ಜ್ಞಾನವನ್ನೂ ಸ್ಮರಣೆಗೆ ತಂದುಕೊಡುವಂತಿರಬೇಕು; ಮಕ್ಕಳ ಮನಸ್ಸು ಆ ಕಡೆ ಈ ಕಡೆ ಹಂಚಿ ಹೋಗಿ ಕಾಲಹರಣವಾಗದಂತೆಯೂ ತಡೆಯಬೇಕು; ಆದರೆ ಅನೇಕ ಪ್ರಶ್ನೆ ಹಾಕುತ್ತ ಆಗ ಅವರು ಹೇಳುತ್ತಿರುವ ಉತ್ತರಗಳನ್ನು ಅಂದಂದು ಮೊಟಕು ಮಾಡಬಾರದು. ಸ್ಫುಟೀಕರಣದ ಕಾಲದಲ್ಲಿ ಪ್ರಶ್ನೆಗಳೇನೋ ಹೆಚ್ಚಾಗಿಯೇ ಇರುತ್ತವೆ. ಆ ಪ್ರಶ್ನೆಗಳು ಮಕ್ಕಳ ಆಲೋಚನಾಶಕ್ತಿಗೆ ಮಾರ್ಗದರ್ಶಕ ವಾಗಬೇಕಾದ್ದರಿಂದ ಉಪಾಧ್ಯಾಯರು ಅವನ್ನು ಅಲ್ಲಿಯೇ ತರಗತಿಯಲ್ಲಿ ರೂಪಿಸಲು ಯತ್ನಿಸಿದರೆ ನಿರೀಕ್ಷಿಸುವಷ್ಟು ಫಲಪ್ರದವಾಗಲಾರದು. ಪಾಠ ಮಾಡುವಾಗ ಒದಗಬಹುದಾದ ಸನ್ನಿವೇಶಗಳನ್ನು ಆಲೋಚಿಸಿಕೊಂಡು, ಮನೆಯಲ್ಲೇ ಆ ಪ್ರಶ್ನೆಗಳನ್ನು ರೂಪಿಸಿಕೊಂಡು, ಪಾಠದ ಟಿಪ್ಪಣಿಯಲ್ಲಿ ಗುರುತುಮಾಡಿಕೊಂಡು ಬರುವುದು ಉತ್ತಮ. ತರಗತಿಯಲ್ಲಿ, ವಾಸ್ತವಿಕ ರೀತಿಯಲ್ಲಿ ಕಂಡುಬರುವ ಅನಿರೀಕ್ಷಿತ ಸನ್ನಿವೇಶಗಳಿಗೆ ಒಪ್ಪುವಂತೆ ಆ ಪ್ರಶ್ನೆಗಳನ್ನು ಅಲ್ಪ ಸ್ವಲ್ಪ ಮಾರ್ಪಡಿಸಿಕೊಂಡು ಪ್ರಯೋಗಿಸಬಹುದು. ಮಕ್ಕಳ ಮನಸ್ಸನ್ನು ಒಂದು ಅಂಶದಿಂದ ಇನ್ನೊಂದು ಅಂಶಕ್ಕೆ ಕ್ರಮ ಕ್ರಮ ವಾಗಿ ನಡಸಿಕೊಂಡು ಹೋಗುತ್ತ ಕಾರ್ಯಕಾರಣ ಸಂಬಂಧವನ್ನು ಅರಿತು

ಕೊಳ್ಳುವಂತೆ ಮಾಡಬೇಕಾಗಿರುವುದರಿಂದ, ಆ ಕಾಲದಲ್ಲಿ ಉಪಯೋಗಿಸುವ ಪ್ರಶ್ನೆಗಳು ಉಪಾಧ್ಯಾಯರ ಕೌಶಲವನ್ನು ಬಹುಮಟ್ಟಿಗೆ ಪ್ರದರ್ಶಿಸುತ್ತವೆ. ಒಂದು ಪದಾರ್ಥದ ಬೆಲೆ ಕೊಟ್ಟು ಹೆಚ್ಚು ಪದಾರ್ಥದ ಬೆಲೆಯನ್ನು ಕಂಡು ಹಿಡಿಯುವಾಗ, ಅನೇಕ ಅಂಶಗಳನ್ನು ವಿವರಿಸಿದ ಮೇಲೆ ಅವುಗಳಿಗಿರುವ ಸಂಬಂಧವನ್ನು ತೋರಿಸುವಾಗ, ಒಂದು ದೇಶದ ವಾಯುಗುಣದ ಪರಿಚಯದಿಂದ ಆ ದೇಶದ ಬೆಳೆಗಳನ್ನು ಊಹಿಸುವಂತೆ ಪ್ರೋತ್ಸಾಹಿಸುವಾಗ, ಹಲವಾರು ಉದಾಹರಣೆಗಳನ್ನು ತಿಳಿಸಿ ಒಂದು ವ್ಯಾಕರಣದ ನಿಯಮವನ್ನು ರೂಪಿಸುವಂತೆ ನಿರ್ದೇಶಿಸುವಾಗ, ಕೆಲವು ಪ್ರಯೋಗಗಳ ಫಲಿತಾಂಶಗಳನ್ನು ತೋರಿಸಿ ಅವುಗಳ ಆಧಾರದಮೇಲೆ ಸಾಮಾನ್ಯ ತತ್ವವೊಂದನ್ನು ಕಾಣುವಂತೆ ಮಾಡುವಾಗ ಪ್ರಶ್ನೆಗಳು ಬಾಲಕರಿಗೆ ಎಷ್ಟೊಂದು ನೆರವಾಗುತ್ತವೆಂಬುದನ್ನು ಊಹಿಸಿಕೊಳ್ಳಬಹುದು. ಹಾಗೂ ಅವು ಉಚಿತವಾದ ಪ್ರಶ್ನೆಗಳಾಗಿದ್ದರೆ ಬಾಲಕರೂ ಚಟುವಟಿಕೆಯಿಂದಿದ್ದು ಕಲಿಯುವರು; ಉಪಾಧ್ಯಾಯರ ಬೋಧನೆಯೂ ಯಶಸ್ವಿಯಾಗುವುದು. ಸರಿಯಾದ ಉತ್ತರ ಬಾರದಂಥ ಪ್ರಶ್ನೆಗಳಾದರೆ ಮಕ್ಕಳ ಆಲೋಚನೆಗೆ ಅವಕಾಶ ಕಡಮೆಯಾಗಿ, ಪಾಠ ಫಲಪ್ರದವಾಗಲಾರದು.

ಪುನರಾವರ್ತನೆಯ ಅಂತಸ್ತಿನಲ್ಲಿ ಹಾಕತಕ್ಕ ಪ್ರಶ್ನೆಗಳು ಚಿಕ್ಕವಾಗಿದ್ದು, ಅರಿತುಕೊಂಡಿರುವ ವಿಷಯದಲ್ಲಿ ನಿರರ್ಗಳ ಉತ್ತರ ಬರುವಂತಿರಬೇಕು. ಒಂದೆರಡು ಪ್ರಶ್ನೆಗಳಿಂದಲೇ ಇಡೀ ಪಾಠವೇ ಪುನರಾವರ್ತನೆಯಾಗುವಂತಿರಬೇಕು. ಬೋಧಿಸಿದ ಸಮಸ್ತ ವಿಷಯವೂ ಸುವ್ಯವಸ್ಥಿತರೀತಿಯಲ್ಲಿ ಹೊರಬೀಳುವಂತೆಯೂ ಇರಬೇಕು; ನದಿಗಳು, ಪರ್ವತಗಳು, ಖನಿಜಗಳು, ಅರಣ್ಯಸಂಪತ್ತು ಮುಂತಾದ ಬಗೆ ಬಗೆಯ ಅಂಶಗಳನ್ನು ಬೋಧಿಸುವ ಪಾಠವಾದರೆ ಇನ್ನೂ ಕೆಲವು ಹೆಚ್ಚಿಗೆ ಪ್ರಶ್ನೆಗಳಿಂದ ಒಂದಾದಮೇಲೆ ಒಂದರಂತೆ ಎಲ್ಲ ವಿಷಯಗಳೂ ಪುನರಾವರ್ತಿತವಾಗುವಂತೆ ಮಾಡಬಹುದು. ಆದರೆ ಸ್ಪಷ್ಟೀಕರಣ ಮಾಡುವಾಗ ಹಾಕುವ, ವಿವರಗಳನ್ನು ಕೇಳುವ, ಸೂಕ್ಷ್ಮವಾದ ಪ್ರಶ್ನೆಗಳನ್ನು ಆಗ ಹಾಕಬಾರದು; ಪ್ರಶ್ನೆಗಳ ಪ್ರವಾಹವನ್ನೂ ಹರಿಸಬಾರದು; ಮಿತವಾಗಿರಬೇಕು. ಪ್ರಶ್ನೆಗಳಿಗೆ ಪೂರ್ಣ ವಾಕ್ಯದಲ್ಲೇ ಉತ್ತರ ಬರಬೇಕೆಂದು ಹಲವರು ವಾದಿಸುವರು; ಇದು ಉಚಿತವೋ ಅಲ್ಲವೋ, ಸಾಧ್ಯವಾದ ಮಟ್ಟಿಗೆ

ಪೂರ್ಣ ವಾಕ್ಯಗಳಲ್ಲೇ ಉತ್ತರಕೊಡಲು ಪ್ರೋತ್ಸಾಹಿಸುವುದರಿಂದ ಭಾಷೆಯ ಪರಿಜ್ಞಾನವೇನೋ ಹೆಚ್ಚಬಲ್ಲದು; ಆದರೆ ಕೆಲವು ಪ್ರಶ್ನೆಗಳಿಗೆ ಪೂರ್ಣ ವಾಕ್ಯದಲ್ಲೇ ಉತ್ತರ ಬಯಸುವುದು ಅಷ್ಟು ಉಚಿತವೆನಿಸಲಾರದು.

ಸಂಬಂಧಕಲ್ಪನೆಯ ಸೋಪಾನದಲ್ಲಿ ಭಿನ್ನ ಅಂಕಿ ಅಂಶಗಳನ್ನು ಹೋಲಿಸುವಾಗ ಪ್ರಶ್ನೆಗಳು ತುಂಬ ಸಹಾಯವಾಗುತ್ತವೆ. ವಿಷಯವನ್ನು ಸ್ಫುಟೀಕರಿಸುವ ಕಾರ್ಯವೇ ಪ್ರಧಾನ ಬೋಧನ ಭಾಗವಾಗಿರುವ ವಿಜ್ಞಾನ, ಭೂವಿವರಣೆ, ಸಾಹಿತ್ಯ, ಆರೋಗ್ಯ ಮುಂತಾದ ಪಾಠಗಳಿಗೇನೋ ಪ್ರಶ್ನೆಗಳು ಬೋಧನೆಗೆ ನೆರವಾಗುತ್ತವೆ. ಆದರೆ ಕಥಾನಕವೇ ಪ್ರದಾನ ಅಂಶವಾಗಿರುವ ಚರಿತ್ರೆಯ ಪಾಠದಲ್ಲಿ ಪ್ರಶ್ನೆಗಳು ಅಷ್ಟು ಪ್ರಮುಖ ಪಾತ್ರವಹಿಸುವಂತಿಲ್ಲ: ಉಪಾಧ್ಯಾಯರೇ ವಿಷಯವನ್ನು ತಿಳಿಸಬೇಕಾಗುತ್ತದೆ. ಆಲೋಚಿಸುವುದರಿಂದ ಚರಿತ್ರಾಂಶಗಳು ತಿಳಿಯವಾದ್ದರಿಂದ ಪ್ರಶ್ನೆಗಳು ವಿರಳವಾಗಿರಬೇಕು; ವಿವರಣೆ ಹೆಚ್ಚಾಗಿರಬೇಕು. ಆದರೂ ಕಥಾ ಸನ್ನಿವೇಶಗಳಿಂದ ಆಲೋಚಿಸಬಹುದಾದ ಗುಣವಿಮರ್ಶೆ, ನೀತಿ, ಕಾರ್ಯಕಾರಣ ಸಂಬಂಧ, ವ್ಯಕ್ತಿಗಳ ಸಾಮಾಜಿಕ, ನೈತಿಕ, ಆರ್ಥಿಕ ಧೋರಣೆಗಳ ಪ್ರತಿಫಲ ಮುಂತಾದವನ್ನು ಉಪಾಧ್ಯಾಯರೇ ಹೇಳಿಬಿಡದೆ ಪ್ರಶ್ನೆಗಳನ್ನು ಹಾಕಿ, ತಿಳಿಯುವಂತೆ ಮಾಡಬಹುದು. ಎಂದರೆ, ಬೇರೆ ಪಾಠಗಳಲ್ಲಿ ವಿವರಣೆ ಅನಗತ್ಯವೆಂದಲ್ಲ: ಅಲ್ಲೂ ಉಚಿತವರಿತು ಬಂದೇ ಬರಬೇಕು. ಪ್ರಶ್ನೆಗಳಿಂದಲೇ ಬೋಧನಕಾರ್ಯ ಪೂರ್ಣವಾಗುವುದೆಂದು ಯಾರೂ ನಂಬುವಂತಿಲ್ಲ. ಅವು ಆ ಕಾರ್ಯಸಾಧನೆಗೆ ಒಳ್ಳೆಯ ಸಲಕರಣೆಗಳು ಮಾತ್ರ.

ಪ್ರಶ್ನೆಗಳು ಬೋಧನಕಾರ್ಯದಲ್ಲಿ ಇಷ್ಟೊಂದು ಪ್ರಧಾನ ಪಾತ್ರವಹಿಸುವುದರಿಂದ, ಒಳ್ಳೆಯ ಪ್ರಶ್ನೆಗಳ ಲಕ್ಷಣಗಳನ್ನು ಅರಿತುಕೊಳ್ಳಬೇಕು. ಯಾವ ಪ್ರಶ್ನೆಯೇ ಆಗಲಿ, ನಿರ್ದಿಷ್ಟ ಉತ್ತರ ಬಯಸಿ ಮಕ್ಕಳ ಆಲೋಚನಾ ಶಕ್ತಿಯನ್ನು ಪ್ರಚೋದಿಸುವಂತಿರಬೇಕು; ಅನೇಕ ಉತ್ತರ ಬರಬಹುದಾದ ರೀತಿಯಲ್ಲಿ ಪ್ರಶ್ನೆ ಹಾಕಬಾರದು; ಪ್ರಶ್ನೆಗಳ ರಚನೆ ವಯೋಗುಣಕ್ಕೆ ತಕ್ಕಂತಿರಬೇಕು; 'ಇಲ್ಲ, ಉಂಟು, ಅಲ್ಲ, ಆಹುದು' ಮುಂತಾದ ಉತ್ತರ ಬಯಸುವಂತೆ ಪ್ರಶ್ನೆಯನ್ನು ರೂಪಿಸಬಾರದು. ಅದರಿಂದ ಮಕ್ಕಳು ಆಲೋಚಿಸದೆಯೇ ಉತ್ತರ ಹೇಳಲು ಅವಕಾಶಕೊಟ್ಟಂತಾಗುತ್ತದೆ. ಒಂದೇ

ಪ್ರಶ್ನೆಗೆ ಎರಡು ಬೇರೆ ಬೇರೆ ಉತ್ತರ ಬರುವಂತಿರಬಾರದು. ಯಾವ ಪ್ರಶ್ನೆಯಾಗಲಿ ಮಕ್ಕಳ ಸ್ವತಂತ್ರವಾದ ಆಲೋಚನೆಗೆ ಉತ್ತೇಜನಕೊಡುವಂತಿರಬೇಕು. ಪುನರಾವರ್ತನೆಯ ಪ್ರಶ್ನೆಗಳಿಗೆ ಉತ್ತರಗಳನ್ನು ಸ್ಮರಣೆಯಿಂದ ಕಂಡುಕೊಳ್ಳಬಹುದಾದರೂ ಕಲಿತದ್ದನ್ನು ಸುವ್ಯವಸ್ಥಿತ ರೀತಿಯಲ್ಲಿ ಜೋಡಿಸಿ ಹೇಳಬೇಕಾದ್ದರಿಂದ ಆಲೋಚನೆಗೂ ಅವಕಾಶವಾಗುತ್ತದೆ. ಪ್ರಶ್ನಿಸಿದ ಕೂಡಲೇ ಯಾಂತ್ರಿಕವಾಗಿ ಉತ್ತರಬಂದರೆ ಉಪಾಧ್ಯಾಯರು ತೃಪ್ತಿಪಟ್ಟುಕೊಳ್ಳಬಹುದು; ಆದರೆ ಮಕ್ಕಳು ಆಲೋಚಿಸದೆಯೇ ಉತ್ತರಕೊಟ್ಟರೆಂಬುದು ಅದರಿಂದ ಸ್ಪಷ್ಟಪಡುತ್ತದೆ. ಕೇವಲ ಅಂಕಿ ಅಂಶಗಳನ್ನು ಬಯಸುವ, ಇದೋ ಅದೋ ಎಂದು ಕೇಳುವ ಪ್ರಶ್ನೆಗಳನ್ನು ಸಾಧ್ಯವಾದ ಮಟ್ಟಿಗೂ ಬಿಡಬಹುದು. ಎಂದಮೇಲೆ ಉಪಾಧ್ಯಾಯರು ಮನೆಯಲ್ಲಿ ಅವನ್ನು ಚೆನ್ನಾಗಿ ಆಲೋಚಿಸಿಯೇ ರೂಪಿಸಿಕೊಂಡು ಸಿದ್ಧವಾಗಿ ಬರಬೇಕು. ಪೀಠಿಕೆಯ ಅಂತಸ್ತಿನಲ್ಲೂ ಪುನರಾವರ್ತನೆಯ ಅಂತಸ್ತಿನಲ್ಲೂ ಎರಡೋ ಮೂರೋ ಪ್ರಶ್ನೆಗಳು ಸಾಕು. ಸ್ಫುಟೀಕರಣದಲ್ಲಿ ಮಾತ್ರ ಹೆಚ್ಚಿಗೆ ಪ್ರಶ್ನೆ ಅನಿವಾರ್ಯವಾಗುತ್ತವೆ.

ಪ್ರಶ್ನೆಗಳನ್ನು ಎಚ್ಚರಿಕೆಯಿಂದ ರೂಪಿಸಬೇಕಾಗಿರುವಂತೆ ಅವನ್ನು ಕೌಶಲದಿಂದ ತರಗತಿಯಲ್ಲಿ ಪ್ರಯೋಗಿಸಬೇಕು. ಮೊದಲು ಇಡೀ ತರಗತಿಯನ್ನೇ ಉದ್ದೇಶಿಸಿ ಪ್ರಶ್ನಿಸಬೇಕು. ಅನಂತರ ಆಲೋಚಿಸಲು ಎಲ್ಲರಿಗೂ ಅವಕಾಶಕೊಟ್ಟು, ಒಬ್ಬನನ್ನು ಮಾತ್ರ ನಿರ್ದೇಶಿಸಿ ಉತ್ತರ ಕೇಳಬೇಕು. ಅದರಿಂದ ಪ್ರಶ್ನೆ ತನಗಲ್ಲವೆಂದರಿತು ಯಾರೂ ನಿಷ್ಕ್ರಿಯರಾಗಲು ಅವಕಾಶವಿಲ್ಲ! ತೀರ ಹಿಂದುಳಿದವರನ್ನೂ, ತೀರ ಪ್ರತಿಭಾಶಾಲಿಗಳನ್ನೂ ಕೇಳುವುದರ ಜೊತೆಗೆ ಸಾಧಾರಣ ಬಾಲಕರನ್ನೂ ಪ್ರಶ್ನಿಸುವುದು ಉತ್ತಮ. ಸರಿಯಾದ ಉತ್ತರ ಬರದಿದ್ದರೆ ಮತ್ತೊಬ್ಬರಿಗೆ ಅದೇ ಪ್ರಶ್ನೆಯನ್ನು ಪ್ರಯೋಗಿಸಬಹುದು. ಒಬ್ಬನನ್ನೇ ಹಿಡಿದು ಒಂದೇ ಪ್ರಶ್ನೆಗಾಗಿ ಕಾಲವ್ಯಯ ಮಾಡುತ್ತಿರುವುದು ಉಚಿತವಲ್ಲ. ಹಾಗೆಯೇ ಸಲಸಲಕ್ಕೂ ಒಬ್ಬನಿಗೇ ಪ್ರಶ್ನೆ ಹಾಕುವ ಅಭ್ಯಾಸವೂ ಸರಿಯಲ್ಲ. 'ನನಗೆ ಪ್ರಶ್ನೆ ಬರಲೇ ಇಲ್ಲ' ಎಂದು ಯಾವ ವಿದ್ಯಾರ್ಥಿಯೂ ಎನ್ನುವಂತಿರಬಾರದು.

ಪ್ರಶ್ನೆಯ ಭಾಷೆ ಸುಲಭವಾಗಿಯೂ ಸಮರ್ಪಕವಾಗಿಯೂ ಇರಬೇಕು; ಅತಿ ದೀರ್ಘವಾಗಿರದೆ, ನಿಖರವಾದ ಉತ್ತರ ಬಯಸುವಂತೆ ಖಚಿತವಾದ

ಪದಗಳಿಂದ ರೂಪುಗೊಂಡಿರಬೇಕು. ಕೇಳುವಾಗ ಸ್ಫುಟವಾಗಿ ಉಚ್ಚರಿಸ ಬೇಕು; ಕೇಳುವ ದನಿಯೂ ಮಕ್ಕಳಿಗೆ ಹಿತವಾಗಿರುವಂತಿರಬೇಕೆಂದು ಕೆಲವರು ಹೇಳುವರು! ಹೇಗೇ ಆಗಲಿ, ಅವರು ಆಲೋಚನೆ ಮಾಡಲು ಪ್ರೋತ್ಸಾಹಿಸುವ ಎಲ್ಲ ಗುಣಗಳೂ ಆ ಪ್ರಶ್ನೆಗಳಲ್ಲಿರಬೇಕು. ಒಂದು ಪ್ರಶ್ನೆಗೆ ಸರಿಯಾದ ಉತ್ತರ ಬರದಿದ್ದರೆ ಉಪಪ್ರಶ್ನೆಗಳನ್ನು ಹಾಕಿ ಉತ್ತರವನ್ನು ಆಲೋಚಿಸಲು ಸಹಾಯಮಾಡಬಹುದು. ಕೇವಲ ಅನಿವಾರ್ಯವಾದಾಗ ಮಾತ್ರ ಹೀಗೆ ಮಾಡಬೇಕು. ಪ್ರಶ್ನೆಯ ರಚನೆ ತೊಡಕಾಗಿರಬಾರದು; ನಿರ್ದಿಷ್ಟ ಉತ್ತರವನ್ನು ಬಯಸುವಂತಿರಬೇಕು. ಒಮ್ಮೆ ಉಚ್ಚರಿಸಿದ ಪ್ರಶ್ನೆ ಯನ್ನು ಮರಮರಳಿ ಕೇಳಬಾರದು. ಅದರಿಂದ ಮಕ್ಕಳು ಮತ್ತೆ ಪುನಃ ಕೇಳುತ್ತಾರೆ ಎಂದುಕೊಂಡು ಪ್ರಶ್ನೆಗೆ ಗಮನ ಕೊಡದೆ ಆಲೋಚಿಸದೆ ಕೂಡು ತ್ತಾರೆ. ಆದ್ದರಿಂದ ಅವರ ಅವಧಾನ ಏಕಾಗ್ರಗೊಳ್ಳುವಂತೆ, ಒಮ್ಮೆ ಸ್ಪಷ್ಟ ವಾಗಿ ಎಲ್ಲರೂ ಕೇಳುವಂತೆ ಪ್ರಶ್ನೆಯನ್ನು ಉಚ್ಚರಿಸಬೇಕು. ಅನಿವಾರ್ಯ ವಾದಾಗ ಮಾತ್ರ ಮತ್ತೊಮ್ಮೆ ಕೇಳಬಹುದು.

ಪ್ರಶ್ನಿಸುವಾಗ ಎಷ್ಟು ಕೌಶಲದಿಂದಿರಬೇಕೋ ಅಷ್ಟೇ ಚತುರತೆಯಿಂದ ಬಂದ ಉತ್ತರಗಳನ್ನು ಪರಿಶೀಲಿಸಿ ಅದಕ್ಕೊಂದು ರೂಪುಕೊಡುವುದರಲ್ಲೂ ವರ್ತಿಸಬೇಕಾಗುತ್ತದೆ. ಚೆನ್ನಾಗಿ ಉತ್ತರ ಹೇಳಿದವರನ್ನು ಸೂಕ್ಷ್ಮವಾಗಿ ಆಗಾಗ ಅಭಿನಂದಿಸಬಹುದು. ಆದರೆ ಅದು ಅತಿಯಾಗಬಾರದು! ಉತ್ತರ ಹೇಳದವರನ್ನು ಇತರ ಬಾಲಕರ ಮುಂದೆ ಅವಹೇಳನ ಮಾಡಬಾರದು. ಸುಮ್ಮನೆಯೂ ಬಿಡಬಾರದು!—ಸೂಕ್ಷ್ಮವಾಗಿ ಎಚ್ಚರಿಸಬೇಕು. ಸರಿಯಾದ ವಾಕ್ಯದಲ್ಲಿ ಅಥವಾ ಸ್ಪಷ್ಟವಾದ ರೀತಿಯಲ್ಲಿ ಉತ್ತರ ಬರದಿದ್ದರೆ ಅದನ್ನು ಉಪಾಧ್ಯಾಯರು ತಿದ್ದಿ ಸ್ಫುಟವಾಗಿ ತಿಳಿಸಬೇಕು. ಪೂರ್ಣ ತಪ್ಪಾಗಿರುವ ಉತ್ತರಗಳಿಗೆ ಇದು ಅನ್ವಯಿಸುವುದಿಲ್ಲ. ಸ್ವಲ್ಪ ತಪ್ಪಿದ್ದರೆ ಉಪಾಧ್ಯಾಯರು ಅದನ್ನು ಸರಿಪಡಿಸಿ ತರಗತಿಗೆಲ್ಲ ಸ್ಪಷ್ಟೀಕರಿಸಬಹುದು.

**೩. ನಿದರ್ಶನಗಳು:** ಬೋಧಿಸುವ ವಿಷಯ ಸ್ಫುಟಗೊಳ್ಳುವಂತೆ, ಹೆಚ್ಚು ವಾಸ್ತವವಾಗಿ ಪರಿಣಮಿಸುವಂತೆ ಉದಾಹರಣೆ, ವಿವರಣೆ, ನಕ್ಷೆ, ಚಿತ್ರ, ಮಾದರಿ, ನಿಜವಾದ ವಸ್ತು ಮುಂತಾದವನ್ನು ಉಪಯೋಗಿಸಿಕೊಳ್ಳು ವುದುಂಟು. ಇವುಗಳನ್ನು ನಿದರ್ಶನಗಳೆಂದು ಕರೆಯಬಹುದು. ವಿವರಣೆ

ಮತ್ತು ವಿಷಯ ಜ್ಞಾನ ಹೆಚ್ಚು ಸಮಂಜಸವಾಗುವಂತೆ ಮಾಡಿ, ಹೇಳ ತಕ್ಕ ವಿಷಯಕ್ಕೆ ಜೀವಕಳೆ ಕೊಡಲು ಇವು ನೆರವಾಗುತ್ತವೆ. ಯಾವ ನಿದರ್ಶನಗಳು ಮಕ್ಕಳಿಗೆ ಬೋಧನೆ ಹೆಚ್ಚು ವಾಸ್ತವಿಕವಾಗಿರುವಂತೆ ಮಾಡು ವುವೋ, ಕಲ್ಪನಾಶಕ್ತಿಯನ್ನೂ, ಪ್ರತಿಭಾಶಕ್ತಿಯನ್ನೂ ಪ್ರಚೋದಿಸುವುವೋ ಅವು ಉತ್ತಮರೀತಿಯ ನಿದರ್ಶನಗಳು; ಆ ದೃಷ್ಟಿಯಿಂದ ನೋಡುವುದಾದರೆ ಅತ್ಯಂತ ಉತ್ತಮವಾದ ನಿದರ್ಶನವೆಂದರೆ ನಿಜವಾದ ವಸ್ತು. ಮಾವಿನ ಕಾಯಿ ಪಾಠಮಾಡುವಾಗ ಮಾವಿನಕಾಯನ್ನೇ ನಿದರ್ಶನವಾಗಿ ತೆಗೆದು ಕೊಂಡರೆ ಬೋಧನೆ ಹೆಚ್ಚು ವಾಸ್ತವಿಕವಾಗಿದ್ದು, ವರ್ಣನೆ ಹೆಚ್ಚು ಸ್ವಾಭಾ ವಿಕವಾಗುವುದು; ಮಕ್ಕಳ ವಿಚಾರಶಕ್ತಿಯನ್ನೂ ಕಲ್ಪನಾಶಕ್ತಿಯನ್ನೂ ಪ್ರಚೋದಿಸಲು ಸಹಾಯವಾಗುವುದು. ಅದಕ್ಕಿಂತ ಸ್ವಲ್ಪ ಕೆಳ ದರ್ಜೆಯ ನಿದರ್ಶನವೆಂದರೆ ಮಾವಿನಕಾಯಿನ ಮಾದರಿ; ಇನ್ನೂ ಕೆಳದರ್ಜೆಯದು ಅದರ ಚಿತ್ರ; ಎಲ್ಲಕ್ಕೂ ಕಡಮೆ ಉಪಯುಕ್ತವಾದ ನಿದರ್ಶನ ಮಾತಿನಲ್ಲಿ ಅದರ ವರ್ಣನೆ ಮಾಡುವುದು. ಹೀಗೆ ವಾಸ್ತವಿಕ ನಿದರ್ಶನ ಬೋಧನೆಗೆ ಅತ್ಯಂತ ಉಪಯುಕ್ತವಾದದ್ದು. ಮಾದರಿ, ಚಿತ್ರ, ನಕ್ಷೆ ಮುಂತಾದವು ಸಾಧಾ ರಣವಾದವು. ಮಾತಿನಲ್ಲಿ ವರ್ಣಿಸುವುದು ಅಷ್ಟೊಂದು ಉಪಯುಕ್ತವಲ್ಲದ್ದು; ಏಕೆಂದರೆ, ಆಗ ಎಲ್ಲವನ್ನೂ ಮಕ್ಕಳ ಕಲ್ಪನಾಶಕ್ತಿಗೇ ಬಿಟ್ಟುಬಿಡಬೇಕಾಗಿ ಬರುತ್ತದೆ. ಈ ನಿದರ್ಶನಗಳು ಒಳ್ಳೆಯ ಪಾಠೋಪಕರಣಗಳಾದರೂ ಯಾವ ಪಾಠದಲ್ಲಾಗಲಿ ಮುಖ್ಯ ವಿಷಯ ಹಿಂಬದಿಗೆ ಬಿದ್ದು, ನಿದರ್ಶನಗಳೇ ಸರ್ವಸ್ವ ದಂತೆ ಪ್ರಧಾನವಾಗಿ ಹೋಗಬಾರದು: ಅವು ಕೇವಲ ಮುಖ್ಯ ವಿಷಯ ಬೋಧನೆಗೆ ಸಹಾಯವಾಗತಕ್ಕ ಉಪಕರಣ ಮಾತ್ರ.

ಮೇಲೆ ನಿದರ್ಶನಗಳಲ್ಲಿ ಯಾವುದು ಹೆಚ್ಚು ಉಪಯುಕ್ತವಾದು ದೆಂಬುದನ್ನು ಸ್ಥೂಲವಾಗಿ ವಿವೇಚಿಸಿದ್ದರೂ ಒಂದೊಂದು ಪಾಠಕ್ಕೂ ಒಂದೊಂದು ನಿದರ್ಶನ ಹೆಚ್ಚು ಉಪಯುಕ್ತವೆನಿಸಬಹುದು: ವಿಜ್ಞಾನ ಪಾಠದಲ್ಲಿ ಪರಿಶೀಲನೆ ಮತ್ತು ಆಲೋಚನೆ ಸ್ಫುಟಗೊಳ್ಳಬೇಕಾದ್ದರಿಂದ ವಾಸ್ತವಿಕ ನಿದರ್ಶನ ಉತ್ತಮ ನಿದರ್ಶನ. ಯಾವ ವಿಷಯವನ್ನು ಬೋಧಿ ಸುತ್ತಿರುವೆವೋ ಆ ವಿಷಯವನ್ನೇ ಪ್ರದರ್ಶಿಸುವುದು ಲಾಭಪ್ರದವಾದುದು. ಪ್ರಕೃತಿ ಪಾಠದಲ್ಲೂ ಅಷ್ಟೆ. ಭೂವಿವರಣೆಯ ಪಾಠಗಳಲ್ಲೂ ಮಕ್ಕಳನ್ನು

ಹೊರಗೆ ಕರೆದುಕೊಂಡುಹೋಗಿ ನಿಜವಾದ ಸನ್ನಿವೇಶಗಳನ್ನೇ ತೋರಿಸ ಬಹುದು. ಆದರೂ ಭೂಗೋಳದ ಅನೇಕ ಪಾಠಗಳನ್ನು ಮಾಡುವಾಗ ಭೂಪಟ, ಚಿತ್ರ, ನಕ್ಷೆ, ಮಾದರಿ ಮುಂತಾದುವುಗಳನ್ನು ಉಪಯೋಗಿಸ ಬೇಕಾಗುತ್ತದೆ.

ಶಿಶುವಿಹಾರಗಳಲ್ಲೂ ಪ್ರಾಥಮಿಕ ಶಾಲೆಗಳಲ್ಲೂ ಚಿತ್ರಗಳನ್ನೋ ಮಾದ ರಿಯನ್ನೋ ನಿಜವಾದ ವಸ್ತುವನ್ನೋ ನಿದರ್ಶನಗಳನ್ನಾಗಿ ಉಪಯೋಗಿಸು ವುದು ಉತ್ತಮ. ಏಕೆಂದರೆ, ಮಾತಿನಿಂದಲೇ ವರ್ಣಿಸಿ ನಿದರ್ಶನ ಕೊಟ್ಟರೆ ಅದನ್ನು ಕಲ್ಪಿಸಿಕೊಳ್ಳುವಷ್ಟು ಶಕ್ತಿ ಅವರಿಗಿರುವುದಿಲ್ಲ. ಅದರಿಂದಲೇ ಪ್ರಾಥ ಮಿಕಶಾಲೆಯಲ್ಲಿ ಗಣಿತದಂಥ ಭಾವಪ್ರದವಾದ ವಿಷಯವನ್ನು ಬೋಧಿಸು ವಾಗಲೂ ಮಣಿಗಳನ್ನು ನಿದರ್ಶನಕ್ಕಾಗಿ ಉಪಯೋಗಿಸುವುದು. ಆದರೆ ಮೇಲ್ಪಟ್ಟದ ಶಿಕ್ಷಣ ಸಂಸ್ಥೆಗಳಲ್ಲಿ ಈ ಆವಶ್ಯಕತೆ ಕ್ರಮ ಕ್ರಮವಾಗಿ ಕಡಮೆ ಯಾಗುತ್ತ ಬರುತ್ತದೆ. ಮಾಧ್ಯಮಿಕ ಶಾಲೆಗಳಲ್ಲೂ ಚಿತ್ರ, ಮಾದರಿ ವಸ್ತು ಇವುಗಳನ್ನು ನಿದರ್ಶನವಾಗಿ ಉಪಯೋಗಿಸಬಹುದು. ಆದರೆ ಆ ನಿದರ್ಶನ ಇಲ್ಲದಿದ್ದರೂ ಮಕ್ಕಳು ಕಲಿಯುವಂತೆ ಪ್ರೋತ್ಸಾಹಿಸಬೇಕು; ಪ್ರೌಢಶಾಲೆ ಗಳಲ್ಲಿ ಈ ಸಲಕರಣೆಗಳ ಆವಶ್ಯಕತೆ ಕೆಲವು ಪಾಠಗಳಲ್ಲಿ ಕಡಮೆಯಾಗ ಬೇಕು. ಅಲ್ಲದೆ ಅಲ್ಲಿ ಬೋಧಿಸಬೇಕಾದ ವಿಷಯಗಳು ವಿಶೇಷ ರೀತಿಯವಿದ್ದು ವಾಸ್ತವಿಕ ನಿದರ್ಶನಗಳು ದೊರೆಯುವುದೂ ದುರ್ಲಭ. ಪೂರ್ವ ಕಾಲದ ರೋಮನರ ರಾಜ್ಯಾಂಗದ ಇತಿಹಾಸವನ್ನು ಬೋಧಿಸುವಾಗ ವಾಸ್ತವಿಕ ನಿದರ್ಶನಗಳನ್ನು ಜೋಡಿಸುವುದು ಹೇಗೆ? ಹಾಗೆಯೇ ಭಾವಗೀತೆ ಯೊಂದನ್ನು ಬೋಧಿಸುವಾಗ ಆವಶ್ಯಕವೆನಿಸುವ ನಿದರ್ಶನಗಳನ್ನು ಒದಗಿಸು ವುದು ಸಾಧ್ಯವೇ ಇಲ್ಲದ ಕೆಲಸ.

ನಿದರ್ಶನಗಳನ್ನು ಸಾರಸ್ವತ ನಿದರ್ಶನ, ವಾಸ್ತವಿಕ ನಿದರ್ಶನ ಎಂದು ಎರಡು ಗುಂಪುಗಳಾಗಿ ವಿಂಗಡಿಸಬಹುದು. ಬೋಧಿಸುತ್ತಿರುವ ವಿಷಯಕ್ಕೆ ಸಂಬಂಧಿಸಿದಂತೆ ಉದಾಹರಣೆ, ವಿವರಣೆ, ಕಥೆ ಮತ್ತು ಹೋಲಿಕೆಗಳನ್ನು ಕೊಡುವುದು ಸಾರಸ್ವತ ನಿದರ್ಶನಗಳು; ಚಿತ್ರ, ಮಾದರಿ, ವಸ್ತು—ಇವು ಗಳನ್ನು ಪ್ರತ್ಯಕ್ಷವಾಗಿ ಪ್ರದರ್ಶಿಸುವುದು ವಾಸ್ತವಿಕ ನಿದರ್ಶನಗಳು. ಈ ವಾಸ್ತವಿಕ ನಿದರ್ಶನಗಳು ಸಾರಸ್ವತ ನಿದರ್ಶಗಳಿಗಿಂತ ಸಾಮಾನ್ಯವಾಗಿ

ಬೋಧನೆಗೆ ಹೆಚ್ಚು ಸಹಾಯಕವಾದರೂ, ಸಂದರ್ಭಾನುಸಾರ ಅವುಗಳ ಪ್ರಾಮುಖ್ಯತೆ ಹೆಚ್ಚು ಕಡಮೆಯಾಗಬಹುದು. ಜೀವಶಾಸ್ತ್ರ ಮಾಡುವಾಗ ಒಂದು ಹೂವು ಉತ್ತಮ ನಿದರ್ಶನ. 'ಹೂವಿನಂತೆ ಮನಸ್ಸು ಶುದ್ಧವಾಗಿರಬೇಕು' ಎಂದು ನೀತಿಪಾಠ ಮಾಡುವಾಗಲೂ ಆ ವಾಸ್ತವಿಕ ನಿದರ್ಶನವನ್ನು ಉಪಯೋಗಿಸುವುದರಿಂದ ಬೋಧನೆ ಯಶಸ್ವಿಯಾಗುವುದರ ಬದಲು ಕೃತಕವಾಗಿ ಕಂಡುಬಂದೀತು. ಮೇಲಾಗಿ, ಕೇಳುವವರ ಮನಸ್ಸು ಹೂವಿನ ಕಡೆ ಹೋಗುತ್ತದೆಯೇ ಹೊರತು ನೀತಿಯ ಕಡೆಗಲ್ಲ! ವಿಷಯ ಚೆನ್ನಾಗಿ ತಿಳಿವಂತೆ ಮಾಡಲು, ಮಕ್ಕಳ ಕಲ್ಪನಾಶಕ್ತಿಯನ್ನು ಕೆರಳಿಸಲು ಉದಾಹರಣೆ, ಕಥೆ, ವರ್ಣನೆ ಮುಂತಾದವನ್ನು ಬೋಧನ ಕಾರ್ಯದಲ್ಲಿ ಉಪಯೋಗಿಸಿಕೊಳ್ಳಬಹುದು. ಅದರಿಂದ ಮಕ್ಕಳ ಕಲ್ಪನಾಶಕ್ತಿ ಉಜ್ವಲಗೊಂಡು, ಬೋಧಿಸುವ ವಿಷಯವನ್ನು ಚೆನ್ನಾಗಿ ತಿಳಿದುಕೊಳ್ಳುತ್ತಾರೆ. ಬೋಧನೆ ಉತ್ತಮಗೊಳ್ಳಲೆಂದು ಕೊಡುವ ಉದಾಹರಣೆ, ಕಥೆ, ವರ್ಣನೆ ಮುಂತಾದ ಸಾರಸ್ವತ ನಿದರ್ಶನಗಳು ಮಕ್ಕಳಿಗೆ ಪರಿಚಿತವಾಗಿರಬೇಕು. ಆ ಮೂಲಕ ಅವರಿಗೆ ಬೋಧಿಸತಕ್ಕ ವಿಷಯ ಚೆನ್ನಾಗಿ ಗೊತ್ತಾಗುವಂತಾಗುತ್ತದೆ. ನಿದರ್ಶನದ ಭಾಷೆ ಸರಳವಾಗಿದ್ದು ಅರ್ಥ ಸುಲಭವಾಗಿ ಗೊತ್ತಾಗುವಂತಿರಬೇಕು. ಅವು ಎಷ್ಟೇ ಆಕರ್ಷಣೀಯವಾಗಿದ್ದರೂ ಮುಖ್ಯ ವಿಷಯವನ್ನು ಹಿಂಬದಿಗೆ ಬೀಳುವಂತೆ ಮಾಡಬಾರದು. ಅಮೆರಿಕದ ಸ್ವಾಭಾವಿಕ ಭೂಲಕ್ಷಣಗಳನ್ನು ಬೋಧಿಸುತ್ತ ಉಪಾಧ್ಯಾಯರೊಬ್ಬರು ಅದನ್ನು ಕಂಡುಹಿಡಿದ ಕೊಲಂಬಸ್ಸನ ಕಥೆ ಹೇಳಿದರಂತೆ; ಮಕ್ಕಳು ಮತ್ತೊಂದು ಕಥೆ ಕೇಳಲು ಏಬ್ರಹಾಂ ಲಿಂಕನ್ನನದನ್ನೂ ಹೇಳಿದರಂತೆ; ಕಡೆಗೆ ಪಾಠ ಕತೆಯಲ್ಲೇ ಮುಗಿಯಿತಂತೆ; ಭೂಗೋಳದ ಪಾಠ ಆಗಲೇ ಇಲ್ಲ! ಹೀಗೆ ಮುಖ್ಯ ವಿಷಯ ನಿದರ್ಶನಗಳಿಂದ ಹಿಂಬದಿಗೆ ಬೀಳದಂತೆ ಎಚ್ಚರಿಕೆಯಿಂದಿರಬೇಕು. ಕಥೆಗಳಾಗಲಿ, ಉದಾಹರಣೆಗಳಾಗಲಿ, ಇನ್ನಿತರ ಸಾರಸ್ವತ ನಿದರ್ಶನಗಳಾಗಲಿ, ಚಿಕ್ಕವಾಗಿದ್ದು ಹೇಳತಕ್ಕ ವಿಷಯದಮೇಲೆ ಹೊಸ ಬೆಳಕನ್ನು ಬೀರಿ ಚೆನ್ನಾಗಿ ಕಲಿಯಲನುಕೂಲಿಸಬೇಕು. ಅವುಗಳು ಯಶಸ್ವಿಯಾಗುವಂಥವಾಗಬೇಕಾದರೆ ಉಪಾಧ್ಯಾಯರು ಅವನ್ನು ಮನೆಯಲ್ಲಿ ಚೆನ್ನಾಗಿ ಆಲೋಚಿಸಿ ಹುಡುಕಿ ಸಿದ್ಧಪಡಿಸಿಕೊಂಡು ಬಂದಿರಬೇಕು. ಪಾಠ

ಮಾಡುವಾಗ ಮೊದಲಿಂದ ಕೊನೆಯವರೆಗೆ ಒಂದೇ ರೀತಿಯ ನಿದರ್ಶನ ಕೊಡುತ್ತಿದ್ದರೆ ಮಕ್ಕಳಿಗೆ ಬೇಸರವಾಗಬಹುದು. ಅವುಗಳನ್ನು ಬದಲಾಯಿಸುತ್ತಿರುವುದು ಒಳ್ಳೆಯದು.

ಭಾಷಾ ಬೋಧನೆಗೆ ಸಾರಸ್ವತ ನಿದರ್ಶನಗಳೇ ಉತ್ತಮ. ಅದರಿಂದ ಹೇಳುವ ವಿಷಯ ಸ್ಫುಟಗೊಳ್ಳುವುದರ ಜೊತೆಗೆ ಭಾಷಾಜ್ಞಾನವೂ ಸಾಹಿತ್ಯಜ್ಞಾನವೂ ಉತ್ತಮಗೊಳ್ಳುತ್ತವೆ. ಇನ್ನಿತರ ಪಾಠಗಳಲ್ಲಿ ಸಾರಸ್ವತ ನಿದರ್ಶನಗಳಿಗಿಂತ ವಾಸ್ತವಿಕ ನಿದರ್ಶನಗಳೇ ಹೆಚ್ಚು ಉಪಯುಕ್ತವಾದವು. ಜರೀಗಿಡದ ಪಾಠ ಮಾಡುವಾಗ ಬರಿಯ ವರ್ಣನೆಯಿಂದ, ಹೋಲಿಕೆಯಿಂದ, ಉದಾಹರಣೆಗಳಿಂದ, ಚೆನ್ನಾಗಿ ಮಕ್ಕಳು ಪರಿಚಯ ಮಾಡಿಕೊಳ್ಳುವುದು ಕಷ್ಟ. ನಿಜವಾದ ಜರೀಗಿಡ ತೋರಿಸಿದರೆ ವಿಷಯ ಚೆನ್ನಾಗಿ ಗೊತ್ತಾಗುತ್ತದೆ; ಅದಿಲ್ಲದಿದ್ದರೆ, ಮಣ್ಣಿನಲ್ಲಿ ಮಾಡಿ, ಬಣ್ಣ ಕಟ್ಟಿದ ಮಾದರಿ ಜರೀಗಿಡವನ್ನಾದರೂ ತೋರಿಸಬಹುದು. ಅದೂ ಇಲ್ಲದಿದ್ದರೆ ಅದರ ಚಿತ್ರ ಅಥವಾ ನಕ್ಷೆಯನ್ನಾದರೂ ತೋರಿಸಬಹುದು. ಕಡೆಗೆ ಉಪಾಧ್ಯಾಯರೇ ಕಪ್ಪುಹಲಗೆಯ ಮೇಲೆ ಆ ಗಿಡದ ಚಿತ್ರವನ್ನಾದರೂ ಬರೆದು ನಿದರ್ಶನವಾಗಿ ಉಪಯೋಗಿಸಬಹುದು. ವಿಜ್ಞಾನ ಶಾಸ್ತ್ರದ ಬೋಧನೆಗೆ ಶಾಲೆಯಲ್ಲಿ ಎಷ್ಟೊಂದು ವಸ್ತುಗಳು ಸಂಗ್ರಹವಾಗಿರುತ್ತವೆ! ಹೇಳುವ ವಿಷಯ ಚೆನ್ನಾಗಿ ತಿಳಿಯುವಂತೆ ಮಾಡುವುದಕ್ಕಾಗಿಯೇ ಅವು ಇರುವುದು. ಪ್ರಯೋಗಗಳನ್ನು ನಡಸುವುದೂ ಅದಕ್ಕಾಗಿಯೇ. ಗಾಜಿನ ಪಾತ್ರೆಯಲ್ಲಿ ಸತ್ತ ಅಥವಾ ಬದುಕಿರುವ ಪ್ರಾಣಿಗಳನ್ನಿಟ್ಟಿರುವುದೂ ಸಂಬಂಧಿಸಿದ ಪಾಠವನ್ನು ಬೋಧಿಸುವಾಗ ನಿದರ್ಶನಗಳಾಗಿ ಉಪಯೋಗಿಸುವುದಕ್ಕಾಗಿಯೇ. ಸಸ್ಯ ಪಾಠ ಮಾಡುವಾಗ ಸಸ್ಯಗಳನ್ನು ಬೆಳಸಿ ತೋರಿಸುವುದೂ ಇದೇ ಉದ್ದೇಶಕ್ಕಾಗಿಯೇ. ಕಾರ್ಖಾನೆಗಳಿಗೂ, ಕಲಾ ಭವನಗಳಿಗೂ, ವಸ್ತುಪ್ರದರ್ಶನಾಲಯಗಳಿಗೂ ಶಿಕ್ಷಣ ಸಂಸ್ಥೆಗಳಿಗೂ ಹೋಗುವುದು ಇದೇ ಉದ್ದೇಶಕ್ಕಾಗಿಯೇ. ನಾಟಕಗಳನ್ನು ಆಡಿಸುವುದೂ ವಿಷಯವನ್ನು ನಿದರ್ಶನಗಳಿಂದ ತಿಳಿದುಕೊಳ್ಳಲೆಂಬ ಉದ್ದೇಶದಿಂದಲೇ.

ವಾಸ್ತವಿಕ ನಿದರ್ಶನಗಳಿಗಾಗಿ ಸಾಮಾನುಗಳನ್ನು ತರಿಸಿಕೊಳ್ಳುವಾಗ ಅವು ಅಗ್ಗವಾಗಿ ದೊರೆಯತಕ್ಕವೇ, ಅನೇಕ ದಿನಗಳ ಕಾಲ ನಿಲ್ಲತಕ್ಕವೇ,

ಅವುಗಳ ಉಪಯೋಗದಿಂದ ಮಕ್ಕಳು ವಿಷಯವನ್ನು ಚೆನ್ನಾಗಿ ಕಲಿಯ ಬಲ್ಲರೇ ಎಂಬ ಅಂಶಗಳನ್ನು ಗಮನಿಸಬೇಕು. ಎಲ್ಲೆಲ್ಲಿ ವಾಸ್ತವಿಕ ನಿದರ್ಶನ ಗಳನ್ನು ನಾವೇ ತಯಾರಿಸಿ ಒದಗಿಸಿಕೊಳ್ಳಬಹುದೋ ಅಲ್ಲೆಲ್ಲ ಅವುಗಳನ್ನೇ ಉಪಯೋಗಿಸಬೇಕು.

ಹಲವರು ನಿದರ್ಶನಗಳೇ ಪಾಠದ ಸರ್ವಸ್ವವೆಂದು ಭಾವಿಸಿ ಹೇಳತಕ್ಕ ವಿಷಯವನ್ನು ಗೌಣವಾಗಿ ನೋಡುತ್ತಾರೆ. ಉಪಾಧ್ಯಾಯರ ಶಿಕ್ಷಣ ಸಂಸ್ಥೆ ಗಳಲ್ಲಿ ಪ್ರಾಯೋಗಿಕವಾಗಿ ಪಾಠ ಮಾಡುವಾಗ ಈ ನಿದರ್ಶನಗಳಿಗೆ ಅತಿ ಯಾದ ಪ್ರಾಮುಖ್ಯತೆಯನ್ನು ಕೊಡಲು ಯತ್ನಿಸುವುದುಂಟು. ಸಕಾಲದಲ್ಲಿ ಉಚಿತವಾದ ನಿದರ್ಶನಗಳನ್ನೊದಗಿಸಿಕೊಂಡು ಪಾಠಮಾಡಲು ಯತ್ನಿಸು ವುದು ಸ್ತುತ್ಯಾರ್ಹವಾದುದಾದರೂ, ಚಿತ್ರ, ನಕ್ಷೆ, ಮಾದರಿ ಮುಂತಾದವು ಗಳನ್ನು ಅತಿಯಾಗಿ ಅಲಂಕಾರ ಮಾಡುತ್ತ ಕೂಡುವುದು ಉಚಿತವಲ್ಲ. ಆಹಾರದ ಪಾಠ ಮಾಡುವಾಗ ನಿದರ್ಶನಕ್ಕಾಗಿ ಉಪಾಧ್ಯಾಯರೊಬ್ಬರು ಮಸಾಲೆ ದೋಸೆಯನ್ನು ಕಟ್ಟಿಸಿ ತಂದಿದ್ದರಂತೆ!--ಮಕ್ಕಳ ಮನಸ್ಸಿನಲ್ಲಿ ಪಾಠ ತಿಳಿಯುವುದಕ್ಕಿಂತ, ಎಷ್ಟು ಬೇಗ ಹೊರಗೆ ಹೋಗಿ ನಾವೂ ಅದನ್ನು ತಿಂದೇವು ಎಂಬ ಕಾತರದಲ್ಲೇ ಪಾಠ ಮುಗಿದಿರಬೇಕೆಂದರೆ ಆಶ್ಚರ್ಯ ವಾಗದು! ಹಲವು ನಿದರ್ಶನಗಳು ಮಕ್ಕಳ ಮನಸ್ಸನ್ನು ಅತಿಯಾಗಿ ಆಕರ್ಷಿಸು ವುವಾದರೂ ಬೋಧನೆಗೆ ಉಪಯುಕ್ತವಲ್ಲ. ಕೆಲವು ವೇಳೆ ಆ ಕಾರ್ಯಕ್ಕೆ ತೊಡಕಾಗಿಯೂ ಪರಿಣಮಿಸಬಹುದು. ಮಕ್ಕಳ ಮುಂದೆ ಬರೆದು ತೋರಿಸ ಬಹುದಾದ ನಕ್ಷೆ, ಚಿತ್ರ ಮುಂತಾದವು ಸರಳವಾಗಿದ್ದು ವಿಷಯವನ್ನು ಕಲಿ ಯಲು ನೆರವಾದರೆ ಸಾಕು. ಹಾಗೆಯೇ ಸ್ವಂತವಾಗಿ ರಚಿಸಿದ ವಸ್ತುಗಳಿಂದ ತುಂಬ ಉಪಯೋಗ. ಕೈಯಿಂದ ತಯಾರಿಸಿದ ಸಾಧಾರಣ ತಕ್ಕಡಿಯನ್ನು ನಿದರ್ಶನಕ್ಕಾಗಿ ಉಪಯೋಗಿಸಿಕೊಂಡು ಪಾಠ ಮಾಡಿದಾಗ ರಾಸಾಯನಿಕ ಸೂಕ್ಷ್ಮ ತ್ರಾಸೊಂದನ್ನು ತೋರಿಸಿದ್ದಕ್ಕಿಂತ ಚೆನ್ನಾಗಿ ಪಾಠ ಕಲಿಯಬಲ್ಲರು; ಏಕೆಂದರೆ, ಮೊದಲನೆಯ ನಿದರ್ಶನ ಸುಲಭವಾಗಿದ್ದು, ಸ್ವಂತ ತಯಾರಿಸಿದ್ದ ರಿಂದ ಚೆನ್ನಾಗಿ ವಿಷಯವನ್ನು ತಿಳಿಯುವಂತಾಗುತ್ತದೆ. ಕೆಲವರು ಆ ಪಾಠಕ್ಕೆ ಆವಶ್ಯಕವಾದ ಎಲ್ಲ ನಿದರ್ಶನಗಳನ್ನೂ ಉಪಕರಣಗಳನ್ನೂ ಮೇಜಿನಮೇಲೆ ರಾಶಿ ಹಾಕಿಕೊಳ್ಳುವರು. ಮಕ್ಕಳು ಪಾಠದ ಕಡೆಗಿಂತ ಆ ವಸ್ತುಗಳ

ಕಡೆಗೇ ಹೆಚ್ಚು ಗಮನ ಕೊಡುತ್ತಾರೆ. ಅದನ್ನೆಲ್ಲ ಪ್ರತ್ಯೇಕವಾಗಿ ಮರೆಯಲ್ಲಿ ರಿಸಿಕೊಂಡಿದ್ದು, ಆವಶ್ಯಕವಾದಾಗ ಮಾತ್ರ ತಂದು ತೋರಿಸಿ ಮತ್ತೆ ಅವನ್ನಲ್ಲೇ ಇರಿಸಬೇಕು.

ಉಚಿತವಾದ ನಿದರ್ಶನಗಳನ್ನು ಪಾಠಕ್ಕೆ ಒದಗಿಸಿಕೊಳ್ಳುವುದರ ಜೊತೆಗೆ ಅವನ್ನು ಕ್ರಮವಾಗಿ ತರಗತಿಯಲ್ಲಿ ಉಪಯೋಗಿಸಿಕೊಳ್ಳಬೇಕು. ಮೊದಲಿನಿಂದ ಕೊನೆಯವರೆಗೂ ನಿದರ್ಶನಗಳನ್ನು ಕೈಯಲ್ಲಿ ಹಿಡಿದುಕೊಂಡು ಓಡಾಡುವುದು ಒಳ್ಳೆಯದಲ್ಲ. ಆವಶ್ಯಕವಾದಾಗ ಅವನ್ನು ಎತ್ತರವಾದ ಮೇಜಿನಮೇಲೆ ಚೆನ್ನಾಗಿ ಎಲ್ಲರಿಗೂ ಕಾಣುವಂತೆ ಇರಿಸಿ ಪ್ರದರ್ಶಿಸಬೇಕು. ಪಾಠ ಆರಂಭವಾದಂದಿನಿಂದ ಕೊನೆಯವರೆಗೂ ಮಕ್ಕಳ ಮುಂದೆ ಇರಿಸಿ ಕೊಂಡಿರಬಾರದು. ಆವಶ್ಯಕತೆ ಮುಗಿದಮೇಲೆ ತೆಗೆದುಬಿಡಬೇಕು. ಇಲ್ಲ ದಿದ್ದರೆ ಪಾಠಕ್ಕೆ ಬದಲು ಆ ವಸ್ತುಗಳೇ ಮಕ್ಕಳ ಮನಸ್ಸನ್ನು ಆಕರ್ಷಿಸಿ ಚಂಚಲಗೊಳಿಸಿಬಿಡುತ್ತವೆ. ಮಂಗನ ಪಾಠ ಮಾಡುವಾಗ ಮೊದಲಿನಿಂದ ಕೊನೆಯವರೆಗೂ ಮೇಜಿನಮೇಲೆ ಮಂಗನ ಮರಿಯೊಂದನ್ನು ಇರಿಸಿ ಕೊಂಡರೆ ಮಕ್ಕಳು ಹೇಳುವ ಪಾಠದ ಕಡೆ ಗಮನ ಕೊಡುವುದು ಹೇಗೆ ತಾನೆ ಸಾಧ್ಯ! ಹಾಗೆಯೇ ಸಿದ್ಧವಾದ ಚಿತ್ರಗಳನ್ನು ತರಗತಿಯ ಮುಂದೆ ತಗುಲಿಹಾಕಿರುವುದಕ್ಕಿಂತ ಆವಶ್ಯಕವಾದಾಗ ಕಪ್ಪುಹಲಗೆಯ ಮೇಲೆ ಉಪಾಧ್ಯಾಯರು ಬರೆದು ತೋರಿಸುವುದು ಉತ್ತಮ. ಭೂವಿವರಣೆ ಪಾಠ ಮಾಡುವಾಗ ಬಣ್ಣ ಬಣ್ಣದ ಭೂಪಟವನ್ನು ಮುಂದೆ ತಗುಲಿಹಾಕಿದ್ದರೆ ಮಕ್ಕಳ ಮನಸ್ಸು ಎಲ್ಲೆಲ್ಲೋ ಓಡಾಡುತ್ತಿರುತ್ತದೆ. ಅದರ ಬದಲು ಬರೀ ನಕ್ಷೆಯ ಭೂಪಟವನ್ನು ತಗುಲಿಹಾಕಿ, ಪಾಠ ನಡೆದಂತೆ ಅದರಲ್ಲಿ ನದಿ, ಪರ್ವತ, ಪಟ್ಟಣ, ರಾಜಕೀಯ ವಿಭಾಗ ಮೊದಲಾದವನ್ನು ಗುರುತು ಮಾಡಿ ಕೊಂಡು ಹೋದರೆ ಮಕ್ಕಳೂ ವಿಷಯಗಳನ್ನು ಕಲಿತಾರು; ಅವರ ಅವಧಾನ ಸ್ಥಿರವಾಗಿ ಪಾಠದ ಕಡೆ ಕೇಂದ್ರೀಕರಣವಾದೀತು. ಆದ್ದರಿಂದಲೇ ಪಾಠ ಮಾಡುವಾಗ ಸ್ವಂತವಾಗಿ ಚಿತ್ರ ನಕ್ಷೆಗಳನ್ನು ಬರೆಯಲು ಅನುಕೂಲವಾಗ ಲೆಂದು ಉಪಾಧ್ಯಾಯರೆಲ್ಲರೂ ಅಷ್ಟಿಷ್ಟು ಚಿತ್ರಕಲೆಯಲ್ಲಿ ಪ್ರಾವೀಣ್ಯತೆ ಪಡೆದಿರುವುದು ಅಗತ್ಯವೆಂದು ಭಾವಿಸಿರುವುದು.

೪. **ಪರೀಕ್ಷೆಗಳು :** ಅಂದಂದು ತರಗತಿಯಲ್ಲಿ ಉಪಾಧ್ಯಾಯರು ನಡಸುವ ಬಾಯಿಮಾತಿನ, ಬರವಣಿಗೆಯ ಪರೀಕ್ಷೆಗಳೂ ಬೋಧನೆಗೆ

ನೆರವಾಗತಕ್ಕವು. ಅದರಿಂದ ಮಕ್ಕಳ ಶಿಕ್ಷಣಾಭಿವೃದ್ಧಿಯ ಮಟ್ಟವನ್ನು ಉಪಾಧ್ಯಾಯರು ಅರಿತುಕೊಳ್ಳಬಹುದು; ಜೊತೆಗೆ ತಮ್ಮ ಬೋಧನೆ ಎಷ್ಟರಮಟ್ಟಿನ ಫಲ ಕೊಟ್ಟಿದೆ ಎಂಬುದನ್ನೂ ತಿಳಿದುಕೊಳ್ಳಬಹುದು. ಭಯ ಭ್ರಾಂತಿಗಳಿಗೆ ಅವಕಾಶವಿಲ್ಲದೆ, ಅನುಚಿತವಾದ ಸ್ಪರ್ಧೆಗೂ ಎಡೆಗೊಡದಂಥ ಈ ತೆರದ ತರಗತಿಯ ಪರೀಕ್ಷೆಗಳಲ್ಲಿ ಮಕ್ಕಳು ತಮಗೆ ತಿಳಿದದ್ದನ್ನು ಬರೆಯಬಲ್ಲರು. ಪಾಠ ಸ್ವಲ್ಪ ಮಾತ್ರ ನಡೆದಿರುವುದರಿಂದ, ನಡೆದಿರುವ ಎಲ್ಲ ಭಾಗಗಳ ಮೇಲೂ ಪರೀಕ್ಷಿಸಿ, ಯಾವುದು ತಿಳಿದಿದೆ, ಯಾವುದು ಇಲ್ಲ ಎಂಬುದನ್ನು ಅರಿಯಬಹುದು. ಹಾಗೂ ಮುಂಚಿತವಾಗಿ ತಿಳಿಸದೆ, ಪರೀಕ್ಷೆ ನಡಸಿದರೆ ಬಾಲಕರ ಕಲಿವಿನ ಮತ್ತು ಉಪಾಧ್ಯಾಯರ ಬೋಧನೆಯ ಗುಟ್ಟು ಚೆನ್ನಾಗಿ ತಿಳಿಯುತ್ತದೆ.

ಅನೇಕ ವೇಳೆ ಬರವಣಿಗೆಯ ತೊಂದರೆಯಿಂದ ಮನಸ್ಸಿನ ಅಭಿಪ್ರಾಯವನ್ನು ಮಕ್ಕಳು ಪೂರ್ಣವಾಗಿ ವಿವರಿಸಲಾರರು. ಪ್ರಾಥಮಿಕ ಶಾಲೆಗಳಲ್ಲಿ ಬಾಯಿ ಪರೀಕ್ಷೆಯನ್ನು ಮಾತ್ರ ನಡಸಬೇಕು. ಈ ಪರೀಕ್ಷೆ ಉಪಾಧ್ಯಾಯರಿಗೆ ಹಲವು ರೀತಿಯಲ್ಲಿ ನೆರವಾಗುತ್ತದೆ. ತಮ್ಮ ಬೋಧನೆಯಿಂದ ತರಗತಿ ಎಷ್ಟರ ಮಟ್ಟಿಗೆ ಶಿಕ್ಷಣ ಪಡೆದಿದೆಯೆಂಬುದರ ಜೊತೆಗೆ ಒಬ್ಬೊಬ್ಬ ವಿದ್ಯಾರ್ಥಿಯೂ ಎಷ್ಟರಮಟ್ಟಿಗೆ ವಿಷಯವನ್ನು ತಿಳಿದುಕೊಂಡಿರುವನೆಂಬುದೂ ಅರಿವಾಗುತ್ತದೆ; ಯಾವ ಯಾವ ವಿದ್ಯಾರ್ಥಿಗೆ ಯಾವ ಯಾವ ಅಂಶ ತಿಳಿಯಲು ಕಷ್ಟವಾಗಿತ್ತೆಂಬುದೂ ಸ್ಪಷ್ಟಪಡುತ್ತದೆ; ಬೇರೆ ಬೇರೆ ಮಕ್ಕಳಿಗಿರುವ ಭಿನ್ನ ಮಟ್ಟದ ಶಕ್ತಿ ಸಾಮರ್ಥ್ಯಗಳೂ, ಅವರಿಗಾಗಿರುವ ಶಿಕ್ಷಣಾಭಿವೃದ್ಧಿಯೂ ಪರಿಚಯವಾಗಿ ತನ್ನ ಬೋಧನಕ್ರಮವನ್ನು ಉಚಿತವೆನಿಸುವ ರೀತಿಯಲ್ಲಿ ಮಾರ್ಪಡಿಸಿಕೊಳ್ಳಲು ಅವಕಾಶವಾಗುತ್ತದೆ. ಆದ್ದರಿಂದ ತರಗತಿಯ ಪರೀಕ್ಷೆಗಳು ಉಪಾಧ್ಯಾಯರು ತಮ್ಮ ಬೋಧನೆ ಯಶಸ್ವಿಯಾಗುವಂತೆ ಮಾಡಿಕೊಳ್ಳಲು ನೆರವಾಗುವ ಸಾಧನಗಳಾಗಿವೆ.

ತರಗತಿಯಲ್ಲಿ ನಡೆಯತಕ್ಕ ಪರೀಕ್ಷೆಗಳ ಜೊತೆಗೆ ಉಪಾಧ್ಯಾಯರು ಮಕ್ಕಳಿಗೆ ಗಣಿತ, ವ್ಯಾಕರಣ, ಭೂಗೋಳ, ಚರಿತ್ರೆ ಮುಂತಾದವುಗಳಲ್ಲಿ ಮನೆಯಲ್ಲಿ ಮಾಡಿ ತರಲು ಅಭ್ಯಾಸಗಳನ್ನೂ ಕೊಡುವುದುಂಟು. ಹಾಗೆ ಮಾಡಿ ತಂದ ಅಭ್ಯಾಸಗಳನ್ನು ಪರಿಶೀಲಿಸಿ ಉಪಾಧ್ಯಾಯರು ನಂಬರು

(ಅಂಕಿ) ಕೊಡುವ ವಾಡಿಕೆ. ಅಲ್ಲದೆ ಅದರಲ್ಲಿರುವ ತಪ್ಪುಗಳನ್ನೂ ತಿದ್ದುವುದುಂಟು. ಹಾಗೆಯೇ ತರಗತಿಯಲ್ಲೂ ಹಲವು ಅಭ್ಯಾಸಗಳನ್ನು ಮಾಡಿಸಿ ಅವುಗಳನ್ನೂ ತಿದ್ದಿಕೊಡುವುದುಂಟು. ಕೆಲವು ಉಪಾಧ್ಯಾಯರು ತಪ್ಪುಗಳನ್ನು ತಿದ್ದಿ ಕೆಂಪು ಶಾಯಿಯಲ್ಲಿ ಪುಟದ ತುಂಬ ಗುರುತುಮಾಡುವರು. ಮಕ್ಕಳು ಅವನ್ನೆಲ್ಲ ನೋಡಲಾರರು. ಅದರಿಂದ ಉಪಾಧ್ಯಾಯರಿಗೆ ಬರೀ ತೊಂದರೆ! ಪ್ರಧಾನವಾದ ಕೆಲವು ತಪ್ಪುಗಳನ್ನು ಮಾತ್ರ ತಿದ್ದುವುದು ಉತ್ತಮ. ಅನಂತರ ಮುಂದಿನ ಅಭ್ಯಾಸದಲ್ಲಿ ಮತ್ತಷ್ಟನ್ನು ತಿದ್ದಬಹುದು. ಹೀಗೆ ಕೆಲ ಕೆಲವಂಶಗಳನ್ನು ಮಾತ್ರ ಒಂದೊಂದು ಪ್ರಬಂಧದಲ್ಲೂ ತಿದ್ದುವುದರಿಂದ ಕ್ರಮ ಕ್ರಮವಾಗಿ ಅವರ ತಪ್ಪುಗಳನ್ನು ಗಮನಕ್ಕೆ ತರಬಹುದು; ಅವರೂ ನೋಡಿ ಸರಿಪಡಿಸಿಕೊಳ್ಳಲು ಸಹಾಯವಾಗುತ್ತದೆ. ಮತ್ತೆ ಕೆಲವು ಉಪಾಧ್ಯಾಯರು ತರಗತಿಯಲ್ಲಿ ಒಬ್ಬರ ಪುಸ್ತಕವನ್ನು ಇನ್ನೊಬ್ಬರಿಗೆ ಕೊಟ್ಟು ಪರೀಕ್ಷಿಸಲು ಹೇಳುವರು. ಒಬ್ಬರ ತಪ್ಪನ್ನು ಇನ್ನೊಬ್ಬರು ಆಗ ತಿದ್ದಬೇಕಾಗಿ ಬರುತ್ತದೆ. ಇದೂ ಒಂದು ಉತ್ತಮ ರೀತಿಯ ಕ್ರಮ. ಅದರಿಂದ ತರಗತಿಯ ಮಕ್ಕಳೆಲ್ಲರ ತಪ್ಪುಗಳೂ ಸರಿಪಡಲು ಅವಕಾಶವಿರುತ್ತದೆ. ಕೆಲವು ಉಪಾಧ್ಯಾಯರು ಮಕ್ಕಳಿಗೆ ನಂಬರು ಕೊಡುವ ಆಸೆ ಹುಟ್ಟಿಸಿ ಸ್ಪರ್ಧೆ ಹೆಚ್ಚಿಸುತ್ತಾರೆ. ಅದರಿಂದ ಅಭ್ಯಾಸಗಳನ್ನು ಮಾಡುವುದು ನಂಬರಿಗಾಗಿ ಎಂಬ ಮನೋಭಾವ ಬಾಲಕರಲ್ಲಿ ಬಂದುಬಿಡುತ್ತದೆ. ಮಕ್ಕಳಲ್ಲಿ ಆ ಮನೋಭಾವವೂ, ಅನುಚಿತ ಸ್ಪರ್ಧೆಯೂ ಹುಟ್ಟಿಕೊಂಡು ದುಷ್ಪರಿಣಾಮವಾಗದಂತೆ ಮಾತ್ರ ನೋಡಿಕೊಳ್ಳಬೇಕು.

ಮಾಧ್ಯಮಿಕ ಶಾಲೆಯ ಮಕ್ಕಳು ಉಪಾಧ್ಯಾಯರು ಮಾಡಿದ ಪಾಠದ ಮೇಲೆ ವಿವರಣೆಗಳನ್ನೂ, ಟಿಪ್ಪಣಿಗಳನ್ನೂ ತರಗತಿಯಲ್ಲಿ ಬರೆದುಕೊಳ್ಳುವರು. ಹಾಗೆಯೇ ಇನ್ನೂ ಮೇಲ್ದರ್ಜೆಯ ಪಾಠಶಾಲೆಗಳಲ್ಲೂ ಕೂಡ ಮೊದಮೊದಲು ಕೆಳದರ್ಜೆಯ ತರಗತಿಗಳಲ್ಲಿ ಅವರ ಈ ಕಾರ್ಯದಲ್ಲಿ ಉಪಾಧ್ಯಾಯರು ಹೆಚ್ಚು ಹೆಚ್ಚು ಸಹಾಯ ಮಾಡಬೇಕು. ಕಪ್ಪುಹಲಗೆಯ ಮೇಲೆ ಕೆಲವು ವಿವರಣೆಗಳನ್ನೂ, ಹಾಕಿದ ಪ್ರಶ್ನೆಗಳಿಗೆ ಉತ್ತರಗಳನ್ನೂ ತಾವೇ ಬರೆದು ಮಕ್ಕಳು ಅವನ್ನು ನೋಡಿಕೊಂಡು ಸರಿಯಾಗಿ ಬರೆದುಕೊಳ್ಳುವಂತೆ ಅಭ್ಯಾಸ ಮಾಡಿಸಬೇಕು. ಪಾಠದ ಸಾರಾಂಶವನ್ನೂ ಬರೆದು, ಬರೆದುಕೊಳ್ಳುವಂತೆ

ತಿಳಿಸಬೇಕು. ಕಠಿನ ಪದಗಳನ್ನೂ ಹೊಸ ಪದಗಳನ್ನೂ ಹೇಳಿ ಬರೆಯಿಸಬೇಕು. ಕ್ರಮ ಕ್ರಮವಾಗಿ ಉಪಾಧ್ಯಾಯರ ಸಹಾಯ ಕಡಮೆಯಾಗಿ ಮಕ್ಕಳೇ ಸ್ವತಂತ್ರವಾಗಿ, ಮಾಡಿದ ಪಾಠದ ವಿಷಯವನ್ನು ಬರೆದುಕೊಳ್ಳುವ ಶಕ್ತಿ ಬರಬೇಕು. ಆಗಲೂ ಉಪಾಧ್ಯಾಯರು ಮಕ್ಕಳ ಆ ಕಾರ್ಯದ ಕಡೆ ಗಮನವಿಟ್ಟಿರಬೇಕು. ಅವರ ನೋಟು ಪುಸ್ತಕಗಳನ್ನೂ ಪರಿಶೀಲಿಸುತ್ತಿರಬೇಕು. ಕೆಲವರು ಬೋಧನೆಯ ಕಡೆ ಗಮನವನ್ನೇ ಕೊಡದೆ ವಿವರಣೆ ಬರೆದುಕೊಳ್ಳುವುದರಲ್ಲೇ ಕಾಲ ಕಳೆಯುತ್ತಾರೆ. ಮತ್ತೆ ಕೆಲವರು ವಿವರಣೆಯನ್ನು ಬರೆದುಕೊಳ್ಳುವ ಅಭ್ಯಾಸವನ್ನೇ ಇಟ್ಟುಕೊಂಡಿರುವುದಿಲ್ಲ. ಇವೆರಡೂ ವೈಪರೀತ್ಯಗಳೇ! ತರಗತಿಯಲ್ಲಿ ನಡೆದ ಪಾಠದ ಮುಖ್ಯಾಂಶವನ್ನು ಬರೆದುಕೊಂಡರೆ ಮನೆಯಲ್ಲಿ ಆ ಪಾಠವನ್ನು ಓದಲು ಮಕ್ಕಳಿಗೆ ತುಂಬ ಸಹಾಯವಾಗುತ್ತದೆ. ಹಾಗೆ ತರಗತಿಯಲ್ಲಿ ಮಾಡಿದ ಪಾಠವನ್ನು ಮನೆಯಲ್ಲಿ ಸ್ಮರಿಸಿಕೊಳ್ಳಲು ನೆರವಾಗುವ, ಬೋಧಿಸಿದ ಮುಖ್ಯಾಂಶಗಳನ್ನು ಗುರುತಿಸಿಕೊಳ್ಳಲಿರುವ ಈ ಪುಸ್ತಕಗಳೂ ಬೋಧನೆ ಫಲಪ್ರದವಾಗುವಂತೆ ಮಾಡಬಲ್ಲವು. ಉಪಾಧ್ಯಾಯರ ಲಕ್ಷ್ಯ ಅವುಗಳ ಕಡೆಯೂ ಇರಬೇಕು; ಏಕೆಂದರೆ, ಅವುಗಳೂ ಪಾಠೋಪಕರಣಗಳೇ.

**೫. ಪಾಠದ ಟಿಪ್ಪಣಿ:** ತರಗತಿಯಲ್ಲಿ ಪಾಠದ ಟಿಪ್ಪಣಿ ಹೇಗೆ ನೆರವಾಗುತ್ತದೆಂಬುದನ್ನೂ, ಅದನ್ನು ತಯಾರಿಸುವಾಗ ಅನುಸರಿಸಬೇಕಾದ ಎಚ್ಚರಿಕೆಗಳನ್ನೂ ಹಿಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ. ನಿರ್ದೇಶಿಸಿದ ಗುರಿಯನ್ನು ಮುಟ್ಟಲು ಪಾಠದ ಎಲ್ಲ ಸೋಪಾನಗಳನ್ನೂ ದಾಟಲು ಪಾಠದ ಟಿಪ್ಪಣಿ ಹೇಗೆ ನೆರವಾಗುತ್ತದೆಂಬುದನ್ನೂ ವಿವರಿಸಲಾಗಿದೆ. ಆ ಉಪಕರಣದ ಸಹಾಯದಿಂದ ನಿರ್ದಿಷ್ಟ ಗುರಿಯನ್ನು ಮುಟ್ಟುವುದೂ, ಅತ್ಯಲ್ಪ ಕಾಲದಲ್ಲಿ ಉದ್ದೇಶಿಸಿದ ವಿಷಯವನ್ನು ಬೋಧಿಸುವುದೂ, ಮುಖ್ಯ ವಿಷಯಗಳಾವುವನ್ನೂ ಬಿಡದಂತೆ ತಿಳಿಸುವುದೂ ಸಾಧ್ಯವಾಗುವುದರಿಂದ ಅದೂ ಪಾಠಕ್ಕೆ ನೆರವಾಗುವ ಮುಖ್ಯವಾದ ಒಂದು ಉಪಕರಣವೇ.

**ಕಪ್ಪುಹಲಗೆ:** ಬೋಧನೆಯ ಸಲಕರಣೆಗಳ ವಿಷಯದ ಕೊನೆಯಲ್ಲಾದರೂ ಕಪ್ಪುಹಲಗೆಯನ್ನು ಸೇರಿಸದೆ ಬಿಡುವಂತಿಲ್ಲ. ತರಗತಿಯ ಬೋಧನೆ ನಡೆದಂತೆ ಆ ಅಂಶಗಳನ್ನೆಲ್ಲ ಕಪ್ಪುಹಲಗೆಯ ಮೇಲೂ ಬರೆದುಕೊಂಡೇ ಮುಂದುವರಿಯಬೇಕು. ಮಕ್ಕಳಿಗೆ ಬೋಧಿಸಿದ ಮುಖ್ಯಾಂಶಗಳ

ಸಾರಾಂಶವಾಗಿ ಅಲ್ಲಿ ಕಾಣುತ್ತಿರಬೇಕು. ಇದರಿಂದ ಬೋಧಿಸಿದ ಕಠಿನವಾದ ಅಂಶಗಳೆಲ್ಲ ಮಕ್ಕಳ ಮುಂದೆ ಕಾಣುತ್ತಿದ್ದು ಕ್ರಮ ಕ್ರಮವಾಗಿ ಚೆನ್ನಾಗಿ ತಿಳಿಯುವಂತಾಗುತ್ತದೆ. ಜೊತೆಗೆ, ಬೋಧಿಸಿದ ಮುಖ್ಯಾಂಶಗಳನ್ನು ಅವರು ತಮ್ಮ ತಮ್ಮ ಪುಸ್ತಕಗಳಲ್ಲಿ ಬರೆದುಕೊಳ್ಳಲೂ ಸಹಾಯವಾಗುತ್ತದೆ. ಬೋಧಿಸತಕ್ಕ ವಿಷಯವನ್ನು ಚಿತ್ರ, ನಕ್ಷೆ, ಅಂಕಿ ಅಂಶ ಮುಂತಾದವು ಗಳಿಂದ ನಿದರ್ಶಿಸಿ ಚೆನ್ನಾಗಿ ತಿಳಿಸಲೂ ಅನುಕೂಲವಾಗುತ್ತದೆ. ಭಾಷೆಯ ಪಾಠ ಮಾಡುವಾಗ ಕ್ಲಿಷ್ಟ ಪದಗಳನ್ನು ಕಲಿಸಲು, ಪದಗಳ ಕಾಗುಣಿತವನ್ನು ಸರಿಯಾಗಿ ತಿಳಿಸಲು, ಭಾಗಗಳ ಸಾರಾಂಶವನ್ನು ಕೊಡಲು, ಸುಂದರವೂ ರಸಭರಿತವೂ ಆದ ಸಾಹಿತ್ಯ ಭಾಗಗಳನ್ನು ಹೃದ್ಗತ ಮಾಡಿಸಲು ಕಪ್ಪು ಹಲಗೆಯ ಮೇಲೆ ಬರೆಯುವುದು ಆವಶ್ಯಕ. ಪಾಠ ಬೋಧನೆಗೆ ಕಪ್ಪು ಹಲಗೆಯನ್ನು ಉಚಿತವರಿತು ಉಪಯೋಗಿಸುವುದರಿಂದ ಮತ್ತೊಂದು ಅನುಕೂಲವುಂಟು: ಹೇಳುವ ವಿಷಯವನ್ನು ಮಕ್ಕಳು ಕೇಳುವುದರ ಮೂಲಕ ಶಿಕ್ಷಣವಾಗುವುದಲ್ಲದೆ ನೋಟದ ಮೂಲಕವೂ ಶಿಕ್ಷಣ ಸಾಧನೆ ಯಾಗುತ್ತದೆ. ಈ ರೀತಿಯ ದ್ವಿಮುಖ ಮಾರ್ಗದಿಂದ ಮಕ್ಕಳ ಕಲಿವು ಚೆನ್ನಾಗಿಯೂ ಖಚಿತವಾಗಿಯೂ ನೆರವೇರುತ್ತದೆ; ಬೋಧನೆ ಸ್ಫುಟ ಗೊಳ್ಳುತ್ತದೆ. ಚರಿತ್ರೆ, ಭೂವಿವರಣೆ, ಗಣಿತ, ವಿಜ್ಞಾನ—ಈ ಪಾಠಗಳನ್ನು ಬೋಧಿಸುವಾಗ ಮುಖ್ಯಾಂಶಗಳನ್ನೂ, ಚಿತ್ರಗಳನ್ನೂ, ನಕ್ಷೆಗಳನ್ನೂ ಬರೆದು ಕೊಂಡೇ ಪಾಠ ಮಾಡಬೇಕಾಗುತ್ತದೆ. ಪಾಠ ನಡೆದಂತೆ ಆ ಅಂಶಗಳನ್ನು ಬರೆದುಕೊಂಡು ಮುಂದುವರಿಯಬೇಕೇ ಹೊರತು, ಬೋಧನೆಯೆಲ್ಲ ಮುಗಿದ ಮೇಲೆ ಅವನ್ನು ಬರೆದು ತೋರಿಸುವುದು ಉಚಿತವಲ್ಲ. ಹೀಗೆ ಮೊದ ಲಿಂದ ಕ್ರಮವಾಗಿ ಮಾಡಿದ ಪಾಠವನ್ನು ಅಲ್ಲಿ ಬರೆದುಕೊಂಡು ಹೋಗು ವುದರಿಂದ ಹಿಂದುಳಿದ ಮಕ್ಕಳಿಗೂ ಅದನ್ನು ನೋಡಿ ಕಲಿತುಕೊಳ್ಳಲು ಒಂದು ವಿಶೇಷ ಸೌಲಭ್ಯವನ್ನು ಕಪ್ಪು ಹಲಗೆಯಲ್ಲಿರುವ ಅಂಶಗಳು ಕಲ್ಪಿಸಿ ಕೊಡುತ್ತವೆ. ಎಂದಮೇಲೆ ಸ್ವಲ್ಪ ಮಂದ ಪ್ರಕೃತಿಯ ವಿದ್ಯಾರ್ಥಿಗಳಿಗೆ ಇದೊಂದು ನೂತನವೂ ಫಲಪ್ರದವೂ ಆದ ಶಿಕ್ಷಣ ಕ್ರಮವೆಂಬುದನ್ನು ಉಪಾಧ್ಯಾಯರು ಗಣಿಸಬೇಕು. ಕಪ್ಪು ಹಲಗೆಯ ಮೇಲೆ ಮಕ್ಕಳು ತಪ್ಪಿದ ಕಾಗುಣಿತ, ಮಗ್ಗಿ, ಅಂಕಿ ಅಂಶ ಮುಂತಾದವನ್ನು ತಿದ್ದಲು ಬರೆದು ತೋರಿಸು ವಾಗ ಸರಿಯಾದ ಅಂಶಗಳನ್ನು ಮಾತ್ರ ಬರೆಯಬೇಕು. ತಪ್ಪಾದ್ದನ್ನು

ಅದರಮೇಲೆ ಬರೆದಿರಬಾರದು. ಏಕೆಂದರೆ, ಎರಡನ್ನೂ ನೋಡುವಾಗ ಮಕ್ಕಳು ತಪ್ಪು ರೀತಿಯುದನ್ನೇ ಬೇಗ ಕಲಿತುಕೊಂಡಾರು!

ಯಾವ ಪಾಠ ಬೋಧನೆಯಲ್ಲೇ ಆಗಲಿ ಕಪ್ಪುಹಲಗೆಯ ಮೇಲೆ ತಪ್ಪಿಲ್ಲದೆ ಚೊಕ್ಕಟವಾಗಿ ಬರೆದಿರಬೇಕು. ಅಕ್ಷರಗಳು ದಪ್ಪನಾಗಿ, ಸ್ಫುಟವಾಗಿ, ಅಂದವಾಗಿ ಕಾಣುತ್ತಿರಬೇಕು. ಒಳ್ಳೆಯ ಬರವಣಿಗೆಯನ್ನೂ ಚೊಕ್ಕಟವಾಗಿರುವ ಅಭ್ಯಾಸವನ್ನೂ ಕಲಿಸಲು ಇದು ಒಂದು ಒಳ್ಳೆಯ ಮಾರ್ಗ. ಭಾಷೆಯ ಪಾಠದಲ್ಲಿ ಹಲಗೆಯ ಮೇಲೆ ಒಂದು ಗೆರೆ ಹಾಕಿ ಎರಡು ಭಾಗಗಳಾಗಿ ವಿಂಗಡಿಸಿಕೊಳ್ಳಬಹುದು. ಒಂದು ಭಾಗ ದೊಡ್ಡದಾಗಿರಬೇಕು. ಅದರಲ್ಲಿ ಸಾರಾಂಶವನ್ನೂ, ಇನ್ನೊಂದರಲ್ಲಿ ಕ್ಲಿಷ್ಟ ಪದಗಳು, ವ್ಯಾಕರಣಾಂಶ, ಕಂಠಪಾಠ ಮಾಡಬೇಕಾದ ಭಾಗ, ಮುಂತಾದವನ್ನೂ ಬರೆದು ತೋರಿಸಬೇಕು. ಚರಿತ್ರೆಯ ಪಾಠಗಳಲ್ಲಿ ದೊಡ್ಡ ಭಾಗದಲ್ಲಿ ಚಾರಿತ್ರಿಕ ಸಾರಾಂಶವನ್ನೋ ಭೂಪಟಗಳನ್ನೋ ಬರೆದುಕೊಳ್ಳಬಹುದು. ಇನ್ನೊಂದು ಭಾಗದಲ್ಲಿ ಮುಖ್ಯವಾದ ಅಂಶಗಳನ್ನೂ ಘಟನೆಗಳನ್ನೂ ಇಸವಿಗಳನ್ನೂ ಸನ್ನಿವೇಶಗಳನ್ನೂ ಸೂಚಿಸಬಹುದು. ಹೀಗೆಯೇ ಇತರ ಪಾಠಗಳಲ್ಲೂ ಉಚಿತವರಿತು ಕಪ್ಪುಹಲಗೆಯನ್ನು ಉಪಯೋಗಿಸಬಹುದು.

ಈ ಪಾಠೋಪಕರಣ ಪ್ರೌಢಶಾಲೆಗಳ ಪೂರ್ತಿ ಅನಿವಾರ್ಯ; ಬೋಧನೆ ಕೇವಲ ಭಾಷಣಗಳ ರೂಪನ್ನು ತಾಳುವ ಕಾಲೇಜಿನಲ್ಲೂ ಉಪಯೋಗಿಸಲು ಅವಕಾಶವಿರುತ್ತದೆ. ಎಂದಮೇಲೆ ಕಪ್ಪುಹಲಗೆಯೂ ಬೋಧನ ಕಾರ್ಯಕ್ಕೆ ಅನಿವಾರ್ಯವಾದ ಸಲಕರಣೆಯೇ ಆಗಿದೆ.

ಹೀಗೆ ಪಾಠೋಪಕರಣಗಳು ಯಾವ ರೀತಿಯವೆ ಆಗಿರಲಿ, ಅವುಗಳಿಂದ ಬೋಧನೆ ಉತ್ತಮಗೊಳ್ಳಬಹುದು; ಕಲಿವೂ ಯಶಸ್ವಿಯಾಗಬಲ್ಲದು. ಆದರೆ ಅವನ್ನು ಉಪಯೋಗಿಸುವಾಗ ಉಪಾಧ್ಯಾಯರು ಚತುರತೆಯಿಂದ ವರ್ತಿಸಬೇಕು. ಕೇವಲ ಹೆಸರಿಗಾಗಲಿ ಆಡಂಬರಕ್ಕಾಗಲಿ ಎಂದೂ ಅವನ್ನು ತರಗತಿಯಲ್ಲಿ ಪ್ರದರ್ಶಿಸಲಾಶಿಸಬಾರದು. ಅವುಗಳು ಶಿಕ್ಷಣಕಾರ್ಯದಲ್ಲಿ ಇಷ್ಟೊಂದು, ನೆರವಾಗುವುದರಿಂದ ಒಳ್ಳೆಯ ಬೋಧನ ಕ್ರಮಕ್ಕೆ ಎಷ್ಟು ಪ್ರಾಧಾನ್ಯತೆ ಕೊಡುತ್ತೇವೆಯೋ ಅಷ್ಟು ಪ್ರಾಧಾನ್ಯತೆಯನ್ನು ನಿದರ್ಶನಗಳ ಔಚಿತ್ಯಕ್ಕೂ ಕೊಡುವುದು ಆವಶ್ಯಕ.

# ೧೪. ಪರೀಕ್ಷಾ ಕ್ರಮಗಳು

ಶಿಕ್ಷಣದಿಂದಾಗುವ ಮಕ್ಕಳ ಮಾನಸಿಕ, ದೈಹಿಕ, ನೈತಿಕ, ಸಾಮಾಜಿಕ ಮತ್ತು ಇತರ ಅಭಿವೃದ್ಧಿಗಳನ್ನು ಅಳೆಯಲು ಒಂದು ಸಾಧನ ಆವಶ್ಯಕ. ಆ ಅಳೆಯುವ ಸಾಧನ ಪರೀಕ್ಷೆಯೆಂಬ ಹೆಸರಿನಿಂದ ಪ್ರಚಾರದಲ್ಲಿದೆ. ಶಿಕ್ಷಣ ರಂಗದಲ್ಲಿ ಆಸಕ್ತಿಯಿರುವವರೆಲ್ಲರಿಗೂ ಈ ಪರೀಕ್ಷೆಗಳು ಮುಖ್ಯವೆನಿಸಿವೆ; ಹಾಗೂ, ಉಪಾಧ್ಯಾಯರಿಗೆ ತಾವು ಅನುಸರಿಸುತ್ತಿರುವ ಬೋಧನ ಕ್ರಮ ಎಷ್ಟರಮಟ್ಟಿನ ಫಲ ಕೊಟ್ಟಿದೆಯೆಂದು ಆ ಮೂಲಕ ಅರಿವಾಗುವುದರಿಂದ ಅವರಿಗೆ ತುಂಬ ಸಹಾಯವಾಗತಕ್ಕವು; ಸಾರ್ವಜನಿಕರಿಗೂ ಶಿಕ್ಷಣ ಶಾಖೆಗೂ ತಾವು ಮೀಸಲಾಗಿಟ್ಟಿರುವ ಧನವ್ಯಯಕ್ಕೆ ತಕ್ಕ ಪ್ರತಿಫಲ ದೊರೆತಿದೆಯೋ ಎಂಬುದೂ ಅದರಿಂದ ವ್ಯಕ್ತಪಡಬೇಕಾಗಿದೆ; ಕೆಲಸಕ್ಕೆ ನಿಯಮಿಸಿಕೊಳ್ಳುವಾಗಲೂ ಆ ಪರೀಕ್ಷೆಗಳನ್ನೇ ಆಧಾರವಾಗಿಟ್ಟುಕೊಳ್ಳುವುದು ಬಳಕೆಯಲ್ಲಿವೆ. ಎಂದಮೇಲೆ ಯಾವ ಶಿಕ್ಷಣ ಯೋಜನೆಯೇ ಆಗಲಿ ಪರೀಕ್ಷಾ ಕ್ರಮವನ್ನು ಅಳವಡಿಸಿಕೊಂಡೇ ಇರಬೇಕು. ಇಂದಿನ ನಮ್ಮ ಪರೀಕ್ಷೆಗಳು ಶಿಕ್ಷಣದಿಂದಾಗುವ ಎಲ್ಲ ಬೆಳವಣಿಗೆಯನ್ನೂ ಅಳೆಯಲಾರವೆಂಬುದು ನಿಜ. ಮಕ್ಕಳ ಮನೋಭಾವ, ದೃಷ್ಟಿಧ್ಯೇಯ, ಕಾರ್ಯತತ್ಪರತೆ, ಉದ್ಯೋಗಶೀಲತೆ, ಕಷ್ಟ ಸಹಿಷ್ಣುತೆ, ದೇಶಾಭಿಮಾನ, ಸಮಾಜ ಜೀವನ, ನೈತಿಕದೃಷ್ಟಿ ಮುಂತಾದವನ್ನು ಅಳೆಯಲು ಅದರಿಂದ ಸಾಧ್ಯವಿಲ್ಲ. ಆದರೂ ಅವರ ಜ್ಞಾನಾಭಿವೃದ್ಧಿಯನ್ನೂ, ಕಾರ್ಯ ಕೌಶಲ್ಯವನ್ನೂ ತಕ್ಕಮಟ್ಟಿಗೆ ಅಳೆಯಬಹುದು. ಅದರಿಂದಲೇ ಎಲ್ಲ ನಾಡಿನ ಶಿಕ್ಷಣರಂಗದಲ್ಲೂ ಪರೀಕ್ಷೆಗಳು ಇಂದಿಗೂ ಪ್ರಚಾರದಲ್ಲಿ ಉಳಿದುಕೊಂಡಿವೆ.

ಪರೀಕ್ಷೆಗಳು ಬಹು ಹಿಂದಿನಿಂದಲೂ ಪ್ರಚಾರದಲ್ಲಿವೆ. ಪ್ರಾಚೀನ ಚೀಣರ ಆಡಳಿತಕ್ಕೆ ಅಧಿಕಾರಿಗಳನ್ನು ಆರಿಸುವಾಗ ಅವರ ಯೋಗ್ಯತೆಯನ್ನು ಪರೀಕ್ಷೆಗಳಿಂದ ನಿಷ್ಕರ್ಷಿಸುತ್ತಿದ್ದರಂತೆ; ಭಾರತೀಯರಲ್ಲೂ ಗ್ರೀಕರಲ್ಲೂ ಬಿಲ್ಲು ವಿದ್ಯೆ, ಮಲ್ಲವಿದ್ಯೆ, ಸಮಸ್ಯಾ ಪರಿಹಾರ ಮತ್ತು ಇನ್ನಿತರ ಶಕ್ತಿ ಸಾಮರ್ಥ್ಯಗಳನ್ನು ಪರೀಕ್ಷೆಗಳಿಂದ ನಿಷ್ಕರ್ಷಿಸುತ್ತಿದ್ದ ಅಂಶ ಪುರಾಣಗಳಿಂದ ವ್ಯಕ್ತಪಡು

ತ್ತದೆ. ಮಧ್ಯ ಯುಗಗಳಲ್ಲಿ ಇಂಗ್ಲೆಂಡಿನ ವಿಶ್ವವಿದ್ಯಾನಿಲಯಗಳು ವಿದ್ಯಾರ್ಥಿಗಳಿಗೆ ಪದವಿಗಳನ್ನು ನೀಡುವ ಮುನ್ನ ಅವರ ಪಾಂಡಿತ್ಯವನ್ನು ಸಾರ್ವಜನಿಕರ ಮುಂದೆ ಪ್ರದರ್ಶಿಸುವಂತೆ ಕೇಳುತ್ತಿದ್ದರು. ಆದರೆ ಬರವಣಿಗೆಯ ಪರೀಕ್ಷೆಗಳು ಇಂಗ್ಲೆಂಡಿನಲ್ಲಿ ಹತ್ತೊಂಬತ್ತನೆಯ ಶತಮಾನದಲ್ಲಿ ವ್ಯವಸ್ಥೆಗೊಂಡು ಸರ್ವವ್ಯಾಪ್ತಿತ್ವವನ್ನು ಪಡೆದು ಶಿಕ್ಷಣರಂಗದಲ್ಲೂ ಸಮಾಜದಲ್ಲೂ ಪ್ರಾಮುಖ್ಯತೆಗೆ ಬಂದುವು. ಭಾರತಕ್ಕೆ ಇಂಗ್ಲೀಷು ಶಿಕ್ಷಣಪದ್ಧತಿ ಆಗಮಿಸಿದಾಗ ಆ ಪರೀಕ್ಷೆಗಳೂ ಬಂದು ಇಲ್ಲಿ ನೆಲಸಿದುವು. ಅಂದಿನಿಂದಲೂ ದೋಷಮಯವಾದರೂ ನೂತನವೆನ್ನಬಹುದಾದ ಒಂದು ರೀತಿಯ ಆಶೆ ಆಕಾಂಕ್ಷೆಗಳನ್ನು ಜನಜೀವನದಲ್ಲಿ ಹುಟ್ಟಿಸಿ ಅವು ಸಮಾಜದಲ್ಲಿ ಆಧಿಪತ್ಯ ನಡೆಸುತ್ತಲೇ ಬಂದಿವೆ.

**ಪರೀಕ್ಷೆಗಳ ಉದ್ದೇಶ:** ತರಗತಿಯ ಪರೀಕ್ಷೆಗಳಿಂದ ಉಪಾಧ್ಯಾಯರು ತಮ್ಮ ಬೋಧನ ಕ್ರಮದಲ್ಲಿರುವ ಲೋಪದೋಷಗಳನ್ನು ತಿಳಿಯುವುದಕ್ಕೂ ಹಿಂದುಳಿದುಕೊಂಡಿರುವ ಬಾಲಕರನ್ನು ಗುರುತಿಸುವುದಕ್ಕೂ ಹೇಗೆ ಅನುಕೂಲವಾಗುವುದೆಂಬುದನ್ನು ಆಗಲೇ ವಿವರಿಸಿರುತ್ತೇವೆ. ಇನ್ನು ಸಾರ್ವತ್ರಿಕ ಪರೀಕ್ಷೆಗಳ ಉದ್ದೇಶವನ್ನು ಪರಿಶೀಲಿಸುವ:

ವಿದ್ಯಾರ್ಥಿಗಳು ಶಿಕ್ಷಣ ಪಡೆದುದರ ಗುರುತಾಗಿ ಪರೀಕ್ಷೆ ನಡಸಿ ಅವರಿಗೆ ಯೋಗ್ಯತಾ ಪತ್ರಗಳನ್ನು ಕೊಡುವುದರಿಂದ ಅವರು ವಿದ್ಯಾರ್ಥಿದೆಶೆಯಲ್ಲಿ ಯಾವ ಯಾವ ವಿಷಯದಲ್ಲಿ ಎಷ್ಟರಮಟ್ಟಿನ ಅಭಿವೃದ್ಧಿ ಪಡೆದಿರುವರೆಂಬುದು ಜನತೆಗೆ ಅರಿವಾಗುತ್ತದೆ; ನಮ್ಮ ದೇಶದ ಮಾಧ್ಯಮಿಕ ಶಾಲೆಯ ಕೊನೆಯಲ್ಲಿ ಒಂದೂ, ಪ್ರೌಢಶಾಲೆಯ ಕೊನೆಯಲ್ಲಿ ಒಂದೂ ಅಂಥ ಸಾರ್ವತ್ರಿಕ ಪರೀಕ್ಷೆಗಳು ಈಗ ನಡೆಯುತ್ತಿವೆ. ಈ ಪರೀಕ್ಷೆಗಳ ಫಲಿತಾಂಶದ ಆಧಾರದಮೇಲೇ ಮುಂದಿನ ತರಗತಿಗಾಗಲಿ, ವೃತ್ತಿಶಿಕ್ಷಣ ಶಾಲೆಗಳಿಗಾಗಲಿ ಸೇರಲು ಅವಕಾಶವಾಗುತ್ತದೆ; ಅವರು ಬೇರೆ ಬೇರೆ ವಿಷಯುಗಳಲ್ಲಿ ಪಡೆದಿರುವ ಅಂಕಿಗಳ ಆಧಾರದಮೇಲೆ ಸಾಂಸ್ಕೃತಿಕ ಶಿಕ್ಷಣಕ್ಕೋ, ವೃತ್ತಿಶಿಕ್ಷಣಕ್ಕೋ ಆರಿಸಿಕೊಳ್ಳಲೂ ಅನುಕೂಲವಾಗುತ್ತದೆ; ಜೊತೆಗೆ ಸಾರ್ವಜನಿಕ ಹುದ್ದೆಗೆ ಸೇರಿಸಲೂ ಈ ಪರೀಕ್ಷೆಗಳನ್ನು ಆಧಾರವಾಗಿ ಇಟ್ಟುಕೊಳ್ಳುವುದೂ ಪ್ರಚಾರದಲ್ಲಿದೆ; ಉಪಾಧ್ಯಾಯರು ಎಷ್ಟರ

ಮಟ್ಟಿಗೆ ಪಾಠ ಹೇಳಿರುವರೆಂಬುದನ್ನು ಪರೀಕ್ಷಿಸಲೂ ಮೇಲ್ವಿಚಾರಕರಿಗೂ ಅವು ಸಹಾಯ ಮಾಡುತ್ತವೆ. ಎಂದಮೇಲೆ ಈ ಪರೀಕ್ಷೆಗಳು ವಿದ್ಯಾರ್ಥಿಗಳ ಮನಸ್ಸಿನಲ್ಲಿ ಎಷ್ಟು ಕಾತರ ಹುಟ್ಟಿಸುತ್ತವೆಯೋ ಅಷ್ಟೇ ಕಾತರವನ್ನು ಉಪಾಧ್ಯಾಯರಲ್ಲೂ ಹುಟ್ಟಿಸುತ್ತಿವೆ. ವಿದ್ಯಾರ್ಥಿ ವೇತನಗಳನ್ನೂ ಈ ಪರೀಕ್ಷೆಗಳ ಆಧಾರದಮೇಲೆ ಕೊಡುವುದುಂಟು. ನಮ್ಮ ಇಂದಿನ ಎಸ್.ಎಸ್.ಎಲ್.ಸಿ. ಪರೀಕ್ಷೆ ಮೇಲಿನ ಎಲ್ಲ ಉದ್ದೇಶಗಳಿಗೂ ನೆರವಾಗುವಂತೆ ನಡೆಯುತ್ತದೆ. ಸಾಮಾನ್ಯವಾಗಿ ಪರೀಕ್ಷೆಗಳು ಒಂದು ಉದ್ದೇಶವನ್ನು ಸಾಧಿಸುವುದೇ ಕಷ್ಟವೆನ್ನುತ್ತಿರುವಾಗ ಅಷ್ಟೊಂದು ಉದ್ದೇಶಗಳನ್ನು ಅದು ನಿಜವಾಗಿಯೂ ಸಾಧಿಸುತ್ತಿದೆಯೇ ಎಂಬ ಅನುಮಾನ ಮರುಕ್ಷಣದಲ್ಲೇ ಹುಟ್ಟುತ್ತದೆ. ಅಲ್ಲದೆ ಮೇಲಿನ ಪರೀಕ್ಷೆ ಕಾಲೇಜಿಗೆ ವಿದ್ಯಾರ್ಥಿಗಳನ್ನು ಆರಿಸುವ ಉದ್ದೇಶದಿಂದಲೂ ನಡೆಯುತ್ತಿದೆ. ಆದರಿಂದ ವಿಶ್ವವಿದ್ಯಾನಿಲಯದವರು ನಿಯಮಿಸುತ್ತಿರುವ ಪಠ್ಯ ವಿಷಯಕ್ಕೆ ಪ್ರಾಧಾನ್ಯತೆ ಬರುತ್ತಿದೆ; ಆದರೆ ಅಲ್ಲಿಗೇ ಶಿಕ್ಷಣವನ್ನು ಮುಗಿಸತಕ್ಕವರಿಗೆ ಶಿಕ್ಷಣ ಪರಿಪೂರ್ಣವಾಗುವಂತೆ ಮಾಡುವ ಕಡೆ ಗಮನ ಬೀಳುತ್ತಿಲ್ಲ. ಬಹು ಮಂದಿ ಪ್ರೌಢಶಾಲೆಗೇ ಶಿಕ್ಷಣವನ್ನು ಮುಗಿಸುವುದರಿಂದ ಅಂಥವರಿಗೆ ಆವಶ್ಯಕವಾದ ವೃತ್ತಿಶಿಕ್ಷಣ ಕೊಟ್ಟಿರಬೇಕು; ಆಗ ಅವರ ಶಿಕ್ಷಣ ಪೂರ್ಣವಾದಂತಾಗುತ್ತದೆ. ಹಾಗೆ ಶಿಕ್ಷಣವನ್ನು ಅಲ್ಲಿಗೆ ಮುಗಿಸುವವರಿಗೇ ಒಂದು ಪ್ರತ್ಯೇಕ ಪರೀಕ್ಷೆಯನ್ನೂ, ಕಾಲೇಜಿಗೆ ಸೇರತಕ್ಕವರಿಗೇ ಇನ್ನೊಂದು ಪರೀಕ್ಷೆಯನ್ನೂ ನಡಸುವುದು ಆವಶ್ಯಕ. ಈಗ ಈ ಎರಡು ಉದ್ದೇಶಗಳೂ ಒಂದೇ ಪರೀಕ್ಷೆಯಿಂದ ಸಾಧನೆಯಾಗಬೇಕಾಗಿರುವುದರಿಂದ ಯಾವುದೂ ಸಮರ್ಪಕವಾಗಿ ನಿರ್ಧಾರವಾಗಲಾರದು. ಜೊತೆಗೆ ಕಾಲೇಜಿನವರ ಆಧಿಪತ್ಯ ಪ್ರೌಢ ಶಿಕ್ಷಣದಮೇಲೆ ವಿಪರೀತವಾಗಿ, ಅಲ್ಲಿಗೇ ಶಿಕ್ಷಣ ಮುಗಿಸುವವರಿಗೆ ಒಂದು ಪೂರ್ಣತೆಯನ್ನು ಕೊಡಲು ಸಾಧ್ಯವಿಲ್ಲವಾಗಿಯೂ ಪರಿಣಮಿಸಿದೆ.

**ಪರೀಕ್ಷೆಗಳಲ್ಲಿರುವ ದೋಷಗಳು :** ಇಂದಿನ ಪರೀಕ್ಷೆಗಳು ಮೇಲಿನ ಎಲ್ಲ ಉದ್ದೇಶಗಳನ್ನೂ ಸಮರ್ಪಕವಾಗಿ ಸಾಧಿಸಲಾರದ್ದರ ಜೊತೆಗೆ ಅವುಗಳಲ್ಲಿ ಇತರ ನ್ಯೂನತೆಗಳೂ ಇವೆ. ಅವುಗಳಿಂದ ಕೆಟ್ಟ ಪರಿಣಾಮಗಳೂ ಆಗುತ್ತಿವೆ. ಆ ನ್ಯೂನತೆಗಳೂ, ದುಷ್ಪರಿಣಾಮಗಳೂ ಶಿಕ್ಷಣ, ಸಮಾಜ

ಮತ್ತು ಜನತೆಯಮೇಲೆ ತೋರುತ್ತಿರುವ ಕೈವಾಡ ಶಿಕ್ಷಣಚತುರರ ಮತ್ತು ಸಮಾಜದ ಮುಂದಾಳುಗಳ ಗಮನಕ್ಕೆ ಬಂದೇ ಇವೆ. ಬೋಧನಕ್ರಮ, ವೇಳಾಪಟ್ಟಿ, ಪಠ್ಯವಸ್ತು, ಶಿಕ್ಷಣದ ಗುರಿ — ಇವೆಲ್ಲವೂ ಪರೀಕ್ಷೆಗಳಲ್ಲಿ ಬಾಲಕರನ್ನು ತೇರ್ಗಡೆ ಮಾಡಿಸಲೋಸ್ಕರ ರೂಪಗೊಳ್ಳುತ್ತಿವೆಯೇ ಹೊರತು ನಿಜವಾದ ಶಿಕ್ಷಣವಾಗಲೆಂದಲ್ಲ. ಮಕ್ಕಳೂ ಪರೀಕ್ಷೆಗಾಗಿ ಓದುತ್ತಾರೆಯೇ ಹೊರತು ಅದು ಜೀವನಕ್ಕೆ ಆವಶ್ಯಕವೆಂದಲ್ಲ. ಕಾಲೇಜಿಗೆ ಹೋಗುವ ಉದ್ದೇಶದಿಂದ ಸಂಕೀರ್ಣವಾದ ಬೀಜಗಣಿತ, ಇಂಗ್ಲೀಷು ಸಾಹಿತ್ಯದ ಆಳವಾದ ಅಭ್ಯಾಸ, ವಿಜ್ಞಾನದ ನಿಯಮಾವಳಿಗಳು, ಇತಿಹಾಸದ ಸರ ಗಂಟಲ ಕಗ್ಗಗಳು—ಮುಂತಾದುವು ಜೀವನಕ್ಕೆ ಅನಿವಾರ್ಯವಲ್ಲದಿದ್ದರೂ ಆ ಪರೀಕ್ಷೆಯಲ್ಲಿ ತೇರ್ಗಡೆಯಾಗಬೇಕಾದರೆ ಆವಶ್ಯಕ. ಎಂದಮೇಲೆ ಪರೀಕ್ಷೆಗೆ ಬೇಕಾದ್ದೇ ಬೇರೆ, ಜೀವನಕ್ಕೆ ಬೇಕಾದ್ದೇ ಬೇರೆ ಎಂಬ ಭಿನ್ನಭಾವ ಮಕ್ಕಳಲ್ಲೂ ಹುಟ್ಟಿಕೊಳ್ಳುತ್ತದೆ. ಅದರಿಂದ ಆ ಕಾಲದಲ್ಲಿ ಮಕ್ಕಳು ಆವಶ್ಯಕವಾಗಿ ಕಲಿಯಬೇಕೆಂದಿರುವ ಹಲವು ವೃತ್ತಿಗಳನ್ನು ಆ ಉದ್ದೇಶಕ್ಕಾಗಿ ಮರೆತುಬಿಡಬೇಕಾಗುತ್ತದೆ. ಜೊತೆಗೆ ಶಿಕ್ಷಣದಿಂದಾಗುವ ಹಲವು ಉತ್ತಮೋತ್ತಮ ಫಲಗಳನ್ನು ಈ ಪರೀಕ್ಷೆಗಳು ಅಳೆಯಲಾರವು. ಪರೀಕ್ಷೆಯನ್ನೇ ಹೆಗ್ಗುರಿ ಮಾಡಿಕೊಂಡಿರುವ ವಿದ್ಯಾರ್ಥಿಗಳು ಅಂಥ ಉತ್ತಮ ಸಂಸ್ಕಾರಗಳ ಕಡೆ ವಿಮುಖರಾಗುತ್ತಿರುವರು.

ಪರೀಕ್ಷೆಯೆಂದರೆ ವಿದ್ಯಾರ್ಥಿಗಳಿಗೆ ಕಾತರ, ಭೀತಿ. ಅದರಿಂದ ಅವರ ದೇಹ ಮತ್ತು ಮನಸ್ಸುಗಳೆರಡರ ಮೇಲೂ ಅಹಿತವೆನಿಸುವ ಪರಿಣಾಮ ಹುಟ್ಟಿಸುತ್ತದೆ. ಪರೀಕ್ಷೆ ಹತ್ತಿರವಾಯಿತೆಂದು ಹಗಲಿರುಳೂ ಓದಿ ದುರ್ಬಲರಾಗುವ ವಿದ್ಯಾರ್ಥಿಗಳನ್ನು ನೋಡಿರುತ್ತೇವೆ. ಪರೀಕ್ಷೆಯಲ್ಲಿ ಯಾವ ಪ್ರಶ್ನೆಗಳು ಬರುವುವೋ, ಏನಾಗುವುದೋ, ತೇರ್ಗಡೆ ಆಗದಿದ್ದರೆ ಮುಂದೇನು ಗತಿ— ಮುಂತಾದ ಬಗೆ ಬಗೆಯ ಸಮಸ್ಯೆಗಳಿಂದ ಅವರ ಮನಸ್ಸು ಜರ್ಜರಿತವಾಗುತ್ತದೆ. ಹೇಗಾದರೂ ಮಾಡಿ ತೇರ್ಗಡೆಯಾದರೆ ಸಾಕು ಎಂಬ ಯೋಚನೆ ಹತ್ತಿಕೊಂಡು ದುರಭ್ಯಾಸಗಳನ್ನೂ ಆರಂಭಿಸಿ ಅವರ ನೈತಿಕ ಅಧಃಪತನವೂ ಆಗಬಹುದು. ಇಂಥ ವಿವಿಧ ರೀತಿಯ ದುಷ್ಪರಿಣಾಮ ಹುಟ್ಟಿಸತಕ್ಕ ಪರೀಕ್ಷೆಗಳು ಏಕೆ ಹೋಗಬಾರದೆಂದು ಹಲವರಿಗಾದರೂ ಅನ್ನಿಸದಿರದು.

**ಇಂದಿನ ಪರೀಕ್ಷಾ ಕ್ರಮದ ನ್ಯೂನತೆಗಳು :** ಮೇಲೆ ವಿವರಿಸಿದ ದುಷ್ಪರಿಣಾಮಗಳಲ್ಲದೆ, ಇಂದಿನ ಪರೀಕ್ಷೆಗಳು ಮಕ್ಕಳ ಶಿಕ್ಷಣಾಭಿವೃದ್ಧಿಯನ್ನು ಸರಿಯಾಗಿಯೂ ಅಳೆಯಲಾರವು. ಇಂಥ ಅಸಮರ್ಪಕವಾದ ಅಳತೆಯ ಸಾಧನದಿಂದ ನಿಷ್ಕರ್ಷಿಸುವ ಫಲಿತಾಂಶದಿಂದ ಮಕ್ಕಳ ಯೋಗ್ಯತೆಯನ್ನು ನಿರ್ಧರಿಸುವುದು ಉಚಿತವೆನಿಸದು. ಹಾಗೆ ನಿಜಸ್ಥಿತಿಯನ್ನು ಸರಿಯಾಗಿ ಪರೀಕ್ಷೆಗಳು ಏಕೆ ಅಳೆಯಲಾರವೆಂಬ ಪ್ರಶ್ನೆ ತಾನಾಗಿಯೇ ಏಳುತ್ತದೆ.

ಪರೀಕ್ಷೆಗಳಿಗೆ ವಿದ್ಯಾರ್ಥಿಯ ಯಾವ ಶಕ್ತಿ ಸಾಮರ್ಥ್ಯಗಳನ್ನು, ಯಾವ ಯಾವ ಶಿಕ್ಷಣಾಭಿವೃದ್ಧಿಯನ್ನು ಅಳೆಯಬೇಕೆಂಬ ನಿರ್ದಿಷ್ಟ ಗುರಿಯೇ ಇಲ್ಲ. ಒಬ್ಬೊಬ್ಬ ವಿದ್ಯಾರ್ಥಿಯೂ ತನ್ನದೇ ಆದ ಭಿನ್ನ ಅಭಿರುಚಿ ಆಸಕ್ತಿಗಳನ್ನು ಪಡೆದಿರುತ್ತಾನೆ; ಆದರೆ ಇಂದಿನ ಪರೀಕ್ಷೆಗಳು ಆ ಅಂಶವನ್ನೇ ಗಣನೆಗೆ ತೆಗೆದುಕೊಳ್ಳುತ್ತಿಲ್ಲ. ಅನೇಕ ಉದ್ದೇಶಗಳಿಗಾಗಿ ಪರೀಕ್ಷೆ ನಡೆದರೂ ಯಾವ ಉದ್ದೇಶವೂ ನಿರ್ದಿಷ್ಟವಾಗಿ ಈಡೇರುತ್ತಿಲ್ಲ; ಅದರಿಂದ ಯಾವ ಯಾವ ವಿದ್ಯಾರ್ಥಿ ಯಾವ ಯಾವ ಕೆಲಸಕ್ಕೆ ಯೋಗ್ಯನೆಂಬ ಸಲಹೆ ಉದ್ಯೋಗ ಸಂಸ್ಥೆಯವರಿಗೆ ದೊರಕುತ್ತಿಲ್ಲ; ಅವರ ಎಲ್ಲ ಅಭಿವೃದ್ಧಿಯನ್ನೂ ಪರೀಕ್ಷಿಸುವಂತೆ ಪ್ರಶ್ನೆಗಳೂ ಪ್ರಶ್ನಪತ್ರಿಕೆಗಳೂ ಸಿದ್ಧವಾಗುತ್ತಿದ್ದರೂ, ಪರೀಕ್ಷೆಯ ಫಲಿತಾಂಶದಿಂದ ಅವನು ಮುಂದೆ ಯಾವ ಶಿಕ್ಷಣಕ್ಕೆ ಯೋಗ್ಯನೆಂದು ನಿರ್ದಿಷ್ಟವಾಗಿ ಗೊತ್ತಾಗುವಂತಿಲ್ಲ. ಹಾಗೆಯೇ ಬೋಧನ ಕ್ರಮದಲ್ಲಿರುವ ನ್ಯೂನತೆಗಳೇನೆಂಬುದೂ ಅದರಿಂದ ಸ್ಪಷ್ಟಪಡುತ್ತಿಲ್ಲ. ಈ ಎಲ್ಲ ಉದ್ದೇಶಗಳಿಗಾಗಿ ಪರೀಕ್ಷೆ ನಡೆಯುತ್ತಿದ್ದರೂ ಯಾವ ಉದ್ದೇಶವೂ ಸಮರ್ಪಕವಾಗಿ ನಿಷ್ಕರ್ಷಿತವಾಗದಿರುವುದಕ್ಕೆ ಇಂದಿನ ಪರೀಕ್ಷೆಯ ಕ್ರಮದಲ್ಲಿರಬಹುದಾದ ನ್ಯೂನತೆಗಳೇ ಕಾರಣ. ಅಷ್ಟೊಂದು ನ್ಯೂನತೆಗಳಿವೆಯೆಂದು ಈ ಪರೀಕ್ಷೆಗಳನ್ನೇ ರದ್ದುಪಡಿಸೋಣವೆಂದರೆ, ಅವುಗಳಿಲ್ಲದಿದ್ದರೆ ಇನ್ನೂ ಹೆಚ್ಚಿನ ಅನಾನುಕೂಲವಾಗಬಹುದು: ವಿದ್ಯಾರ್ಥಿಗಳು ಯಾವ ಯಾವ ವಿಷಯದಲ್ಲಿ ಎಷ್ಟೆಷ್ಟು ಕಲಿತಿದ್ದಾರೆಂದು ತಿಳಿದುಕೊಂಡು ಅದರ ಆಧಾರದ ಮೇಲೆ ಅವರನ್ನು ವರ್ಗಗಳಾಗಿ ವಿಂಗಡಿಸಿಕೊಳ್ಳಲು ಪರೀಕ್ಷೆ ಆವಶ್ಯಕ; ಮಕ್ಕಳನ್ನು ಶಿಕ್ಷಣ ಸಂಸ್ಥೆಗಳಿಗೆ ಕಳಿಸಿ ಅದಕ್ಕಾಗಿ ಧನವ್ಯಯ ಮಾಡುವ ಪೋಷಕರಿಗೆ ಮಕ್ಕಳು ಶಿಕ್ಷಣದ ಹೆಗ್ಗುರುತಾಗಿ ಪದವಿ ಪ್ರಶಸ್ತಿಗಳನ್ನು ಪಡೆದ ಹೊರತು ತೃಪ್ತಿಯಿಲ್ಲ;

ಉದ್ಯೋಗಸ್ಥರೂ ಕೆಲಸಕ್ಕೆ ಸೇರಿಸಿಕೊಳ್ಳುವ ಮುನ್ನ ' ನಿನಗೆ ಏನು ಪರೀಕ್ಷೆ ಆಗಿದೆ ' ಎಂದು ಪ್ರಶಸ್ತಿಪತ್ರವನ್ನು ಕೇಳುತ್ತಾರೆ; ಸಮಾಜದಲ್ಲಿ ಜವಾಬ್ದಾರಿ ಸ್ಥಾನವನ್ನು ವಹಿಸಿಕೊಡುವಾಗಲೂ ಆ ಪದವಿ ಪ್ರಶಸ್ತಿಗಳು ಗಣನೆಗೆ ಬಂದೇ ಬರುತ್ತವೆ. ಇವೆಲ್ಲಕ್ಕೂ ಪರೀಕ್ಷೆಯ ಫಲಿತಾಂಶವೇ ಆಧಾರವಾಗಿರುವಾಗ ಅದನ್ನು ತೆಗೆದುಬಿಡುವುದೆಂದರೆ ಶಿಕ್ಷಣದ ಪ್ರಭಾವವೇ ಸಮಾಜದಲ್ಲಿ ಮಾಯವಾದಂತಾಗುತ್ತದೆ. ವಿದ್ಯಾರ್ಥಿಗಳ ಜ್ಞಾನಾರ್ಜನೆ, ಮಾನಸಿಕ ಬೆಳವಣಿಗೆ, ಕಾರ್ಯಕೌಶಲ, ಇವನ್ನು ಅಳೆಯಲು ಸದ್ಯದಲ್ಲಿ ಇರುವುದು ಪರೀಕ್ಷೆಯ ಸಾಧನವೊಂದೇ. ಶಿಕ್ಷಣರಂಗಕ್ಕೂ ಅವುಗಳಿಂದಾಗಬೇಕಾಗಿರುವ ಅನುಕೂಲತೆಗಳೂ ಇವೆ; ಪರೀಕ್ಷೆಯಲ್ಲಿ ಉತ್ತೀರ್ಣವಾಗಬೇಕಲ್ಲಾ ಎಂದು ವಿದ್ಯಾರ್ಥಿಗಳಿಗೂ ದೃಢಮನಸ್ಸಿನಿಂದ ಅಭ್ಯಾಸಮಾಡಲು ಉತ್ತೇಜನವಾಗುತ್ತದೆ. ತಾನು ಕಲಿತ ವಿಷಯವನ್ನು ಪ್ರಶ್ನೆಗಳಿಗೊಪ್ಪುವಂತೆ ವ್ಯವಸ್ಥೆಮಾಡಿಕೊಂಡು ಸಮನ್ವಯ ಜ್ಞಾನದಿಂದ ವಿಷಯವನ್ನು ವಿವೇಚಿಸುವ ಶಕ್ತಿಯೂ ಬರುತ್ತದೆ. ಎಂದಮೇಲೆ ಈ ದಿನದ ಪರೀಕ್ಷೆಯಲ್ಲಿ ನ್ಯೂನತೆಗಳೂ, ದೋಷಗಳೂ ಇದ್ದರೂ ಉಪಯೋಗಗಳೂ ಇವೆ. ಆದ್ದರಿಂದ ಅದನ್ನು ಪೂರ್ಣವಾಗಿ ತೆಗೆದುಬಿಡುವುದು ಉಚಿತವಲ್ಲ : ಮಾರ್ಪಡಿಸಿ ಉತ್ತಮಪಡಿಸಿಕೊಳ್ಳಬೇಕು. ಹಾಗಾದರೆ ಅವನ್ನು ಉತ್ತಮಪಡಿಸುವುದು ಹೇಗೆ? ಆ ಕಾರ್ಯಕ್ಕೆ ಇಂದಿನ ಪರೀಕ್ಷೆಗಳ ಮುಖ್ಯವಾದ ಲೋಪದೋಷಗಳನ್ನು ಮೊದಲು ಪರಿಚಯ ಮಾಡಿಕೊಳ್ಳುವುದು ಆವಶ್ಯಕ.

**೧. ಪರೀಕ್ಷಕರು ಕೊಡುವ ಅಂಕಿಗಳಲ್ಲಿ ಭಿನ್ನತೆ :** ಇದು ಇಂದಿನ ಪರೀಕ್ಷೆಗಳ ಪ್ರಧಾನ ನ್ಯೂನತೆ; ಒಂದೇ ಉತ್ತರ ಪತ್ರಿಕೆಗೆ ಬೇರೆ ಬೇರೆ ಪರೀಕ್ಷಕರು ಕೊಡಬಹುದಾದ ಅಂಕಿಗಳು ಆಶ್ಚರ್ಯ ಹುಟ್ಟಿಸುವಷ್ಟು ಹೆಚ್ಚು ಕಡಮೆಯಾಗಿರುತ್ತವೆ. ಹೀಗೆ ಒಬ್ಬೊಬ್ಬರೂ ಒಂದೊಂದು ಅಂಕಿಗಳನ್ನು ಕೊಡುವುದರಿಂದ ವಿದ್ಯಾರ್ಥಿಯ ಯೋಗ್ಯತೆಯನ್ನು ನಿರ್ದಿಷ್ಟವಾಗಿ ಅಳೆಯಲು ಹೇಗೆ ಸಾಧ್ಯ? ಉತ್ತರಗಳಿಗೆ ಬೆಲೆ ಕಟ್ಟುವಾಗ ತಲೆದೋರುವ ಈ ಭಿನ್ನತೆಗಳಿಗೆ ನಾಲ್ಕು ಕಾರಣಗಳನ್ನು ಕೊಡಬಹುದು :

ಮೊದಲನೆಯದಾಗಿ, ಒಂದು ಪಾಠಶಾಲೆಯವರು ನಿರೀಕ್ಷಿಸುವ ಉತ್ತರದ ಮಟ್ಟಕ್ಕೂ ಇನ್ನೊಂದು ಪಾಠಶಾಲೆಯವರು ನಿರೀಕ್ಷಿಸುವುದಕ್ಕೂ

ವ್ಯತ್ಯಾಸವಿದ್ದು ಉತ್ತರಗಳನ್ನು ಪರಿಶೀಲಿಸಿ ಅಂಕಿಗಳನ್ನು ಕೊಡುವಾಗ ಭಿನ್ನತೆ ತಲೆದೋರುತ್ತದೆ. ಎರಡನೆಯದಾಗಿ, ಒಬ್ಬ ಪರೀಕ್ಷಕರು ಅಂಕಿಗಳನ್ನು ಕೊಡುವಾಗ ಹಿಡಿತದಿಂದಿದ್ದರೆ ಮತ್ತೊಬ್ಬರು ಧಾರಾಳವಾಗಿರಬಹುದು; ಅದರಿಂದಲೂ ಭಿನ್ನತೆ ತಲೆದೋರುತ್ತದೆ. ಮೂರನೆಯದಾಗಿ, ಬೇರೆ ಬೇರೆ ಪರೀಕ್ಷಕರು ಉತ್ತರದ ಬೇರೆ ಬೇರೆ ಭಾಗಗಳಿಗೆ ಪ್ರಾಧಾನ್ಯತೆ ಕೊಡುವುದರಿಂದಲೂ, ಬರವಣಿಗೆಯ ಅಂದ ಚಂದಗಳು, ಚಿತ್ರ, ನಕ್ಷೆ ಮುಂತಾದ ಗೌಣ ಅಂಶಗಳಿಗೆ ಕೆಲವರು ಮಾತ್ರ ಗಮನ ಕೊಡುವುದರಿಂದಲೂ ಅಂಕಿಗಳಲ್ಲಿ ಭಿನ್ನತೆ ತಲೆದೋರುತ್ತದೆ. ಕೊನೆಯದಾಗಿ, ಸ್ವಲ್ಪ ಹೆಚ್ಚು ಕಡಮೆ ಒಂದೇ ಮಟ್ಟದ ಉತ್ತರ ಬರದಿದ್ದರೆ ಅವುಗಳಿಗೆ ಅಂಕಿಗಳನ್ನು ಕೊಡುವಾಗ ವ್ಯತ್ಯಾಸ ಕಲ್ಪಿಸುವುದು ಬಹು ಕಷ್ಟ; ಒಬ್ಬನಿಗೆ ೫೦ ಬಂದಿದ್ದರೆ ಇನ್ನೊಬ್ಬನಿಗೆ ೫೫ ಅಥವಾ ೪೫ ಬಂದಿರುವುದುಂಟು; ಅವುಗಳಲ್ಲಿ ನಿಜವಾಗಿಯೂ ಯಾವುದು ಚೆನ್ನಾಗಿದೆಯೆಂದು ನಿರ್ಧರಿಸುವ ಬಗೆ ಮಾತ್ರ ಪರೀಕ್ಷಕರಿಗೇ ಗೊತ್ತಿರುವುದಿಲ್ಲ. ಹೀಗೆ ಅತಿ ಸೂಕ್ಷ್ಮವಾಗಿ ಅಂಕಿಗಳನ್ನು ಕೊಡುವುದು ಮಾನವನ ಬುದ್ಧಿಶಕ್ತಿಗೆ ನಿಲುಕದಾದರೂ, ಕೊಡುವ ಸಂಪ್ರದಾಯ ಮಾತ್ರ ಬಂದುಬಿಟ್ಟಿದೆ. ಹಾಗೆ ಕೊಟ್ಟಿರುವುದು ತಪ್ಪೋ ಸರಿಯೋ ಎಂಬುದು ಅವರಿಗೆ ಗೊತ್ತಾಗಲಾರದಾಗಿ ಆ ಮೂಲಕವೂ ಭಿನ್ನತೆ ತಲೆದೋರುತ್ತದೆ.

ಉತ್ತರಗಳಿಗೆ ಬೆಲೆ ಕಟ್ಟುವಾಗ ತೋರಿಬರುವ ಭಿನ್ನತೆಗೆ ಕೊಟ್ಟಿರುವ ನಾಲ್ಕು ಕಾರಣಗಳಲ್ಲಿ ಮೊದಲ ಎರಡು ಕಾರಣಗಳು ಪ್ರಧಾನವಲ್ಲ. ಅವುಗಳಿಂದ ಆಗತಕ್ಕ ವ್ಯತ್ಯಾಸ ತೀರ ಸ್ವಲ್ಪ. ಮೂರನೆಯದು ಮುಖ್ಯವಾದ್ದು. ವಿಶ್ವವಿದ್ಯಾನಿಲಯದ ಪರೀಕ್ಷೆಗಳ ಪ್ರಶ್ನಪತ್ರಿಕೆಗೆಲ್ಲ ಒಟ್ಟು ಇಷ್ಟು ಅಂಕಿಯೆಂದು ಗೊತ್ತುಮಾಡಿರುವಾಗ ಆ ಒಂದೊಂದು ಪ್ರಶ್ನೆಗೆ ಇಷ್ಟೆಂದು ಗೊತ್ತುಮಾಡುವಾಗ ಬೇರೆ ಬೇರೆ ಪರೀಕ್ಷಕರು ತಮಗೆ ತೋರಿದಹಾಗೆ ಬೇರೆ ಬೇರೆ ಪ್ರಶ್ನೆಗಳಿಗೆ, ಬೇರೆ ಬೇರೆ ಅಂಕಿಗಳನ್ನು ಗೊತ್ತುಮಾಡಿಕೊಳ್ಳುವರು; ಹಾಗೆಯೇ ಒಟ್ಟು ಪ್ರಶ್ನೆಯೊಂದಕ್ಕೆ ಅಂಕಿಗಳನ್ನು ಗೊತ್ತುಮಾಡಿದ್ದು, ಆ ಪ್ರಶ್ನೆಯ ಉಪಭಾಗಗಳಿಗೆ ಅಂಕಿಗಳನ್ನು ಹಂಚುವಾಗ ಒಬ್ಬೊಬ್ಬ ಪರೀಕ್ಷಕರೂ ಒಂದೊಂದು ರೀತಿಯಲ್ಲಿ ಹಂಚಬಹುದು, ಆ

ಮೂಲಕವೂ ಉತ್ತರಗಳನ್ನು ಬೆಲೆ ಕಟ್ಟುವಾಗ ಭಿನ್ನತೆ ತಲೆದೋರುತ್ತದೆ. ಇದು ಪರಿಹಾರವಾಗಬೇಕಾದರೆ ಪ್ರಶ್ನಪತ್ರಿಕೆಯನ್ನು ತಯಾರಿಸುವವರು ಒಂದೊಂದು ಪ್ರಶ್ನೆಗೂ, ಉಪಪ್ರಶ್ನೆಗೂ ಅಂಕಿಗಳನ್ನು ನಿಗದಿ ಮಾಡಬೇಕು. ಮತ್ತೆ ಕೆಲವರು ವ್ಯಾಕರಣಾಂಶ, ಬರವಣಿಗೆ, ಕಾಗುಣಿತ ಮುಂತಾದ ಅಂಶಗಳನ್ನೂ ಆಗ ಗಣನೆಗೆ ತೆಗೆದುಕೊಳ್ಳಬಹುದು; ಮಿಕ್ಕವರು ತೆಗೆದುಕೊಳ್ಳದಿರಬಹುದು. ಅದರಿಂದ ವಿದ್ಯಾರ್ಥಿಗಳ ಯೋಗ್ಯತೆ ನಿಷ್ಕರ್ಷಿಸುವಾಗ ಬೇರೆ ಬೇರೆ ಪರೀಕ್ಷಕರು ಭಿನ್ನ ರೀತಿಯಲ್ಲಿ ತೀರ್ಮಾನಿಸಬೇಕಾಗುತ್ತದೆ. ಈ ಭಿನ್ನತೆಯನ್ನು ಪರಿಹರಿಸಲು ಅವನ್ನು ಗಣನೆಗೆ ತೆಗೆದುಕೊಳ್ಳದಿರುವುದು ಒಳ್ಳೆಯದು. ಒಂದು ಪರೀಕ್ಷೆಯಲ್ಲಿ ಆ ವಿಷಯದಲ್ಲಿ ವಿದ್ಯಾರ್ಥಿ ಪಡೆದಿರುವ ಅಭಿವೃದ್ಧಿಯನ್ನು ಮಾತ್ರ ಅಳೆಯುವುದು ಉತ್ತಮ. ಇತರ ವಿಷಯಗಳಲ್ಲಿ ಪಡೆದ ಅಭಿವೃದ್ಧಿಯನ್ನು ಅಳೆಯಲು ಬೇರೆ ಪರೀಕ್ಷೆ ಇದ್ದೇ ಇವೆ. ಅವುಗಳನ್ನು ಗಣನೆಗೆ ತೆಗೆದುಕೊಳ್ಳಬಾರದೆಂದು ಪರೀಕ್ಷಕರು ಪ್ರಯತ್ನಪಟ್ಟರೂ ಅನೇಕ ವೇಳೆ ಬರವಣಿಗೆಯ ಅಂದಚಂದಗಳೂ, ಸರಿಯಾದ ಕಾಗುಣಿತ ಮತ್ತು ವ್ಯಾಕರಣಾಂಶಗಳೂ ಇದ್ದಾಗ ಅವರು ಮೋಹಗೊಂಡು ಸ್ವಲ್ಪ ಹೆಚ್ಚು ಅಂಕಿಗಳನ್ನು ಕೊಟ್ಟುಬಿಡಬಹುದು; ಆಗ ವಿಷಯವನ್ನು ನಿರ್ದುಷ್ಟವಾಗಿ ಅಳೆದಂತಾಗಲಾರದು. ಒಟ್ಟಿನಲ್ಲಿ, ಎಲ್ಲ ಪರೀಕ್ಷಕರೂ ಒಟ್ಟುಸೇರಿ ಯಾವ ಯಾವ ಪ್ರಶ್ನೆಗಳಿಗೆ, ಉಪಪ್ರಶ್ನೆಗಳಿಗೆ ಎಷ್ಟೆಷ್ಟು ಅಂಕಿ ಕೊಡಬೇಕೆಂಬುದನ್ನೂ, ಇತರ ಯಾವ ಅಂಶಗಳಿಗೆ ಗಮನ ಕೊಡಬೇಕು, ಅಥವಾ ಬೇಡ ಎಂಬುದನ್ನೂ ಮುಂಚಿತವಾಗಿ ತೀರ್ಮಾನಿಸಿಕೊಳ್ಳುವುದು ಉತ್ತಮ. ಅದರಿಂದ ಅಂಕಿಗಳನ್ನು ಕೊಡುವಾಗ ತಕ್ಕಮಟ್ಟಿಗಾದರೂ ಏಕದೃಷ್ಟಿಯಲ್ಲಿ ನಿರ್ದಿಷ್ಟವಾದ ಯೋಗ್ಯತೆಯನ್ನು ನಿರ್ಧರಿಸಲು ಸಾಧ್ಯವಾಗಬಹುದು.

ಅಂಕಿಗಳನ್ನು ಕೊಡುವಾಗ ತಲೆದೋರುವ ಭಿನ್ನತೆಗೆ ಕೊನೆಯ ಕಾರಣ ಪ್ರಧಾನವಾದ್ದು. ಒಬ್ಬ ಪರೀಕ್ಷಕರೇ ಒಂದು ವಿಷಯದ ಅನೇಕ ಉತ್ತರ ಪತ್ರಿಕೆಗಳನ್ನು ಪರಿಶೀಲಿಸುವಾಗ ೧೦೦ಕ್ಕೆ ೫೭, ೫೮, ೫೯, ೬೦, ೬೧, ೬೨, ೬೩, ೬೪................ಇತ್ಯಾದಿಯಾಗಿ ಕೊಡುತ್ತ, ಒಂದಕ್ಕೂ ಇನ್ನೊಂದಕ್ಕೂ ಅತಿ ಸೂಕ್ಷ್ಮವಾದ ವ್ಯತ್ಯಾಸವನ್ನು ಕಲ್ಪಿಸುವುದು ಅನುಕೂಲ

ವಲ್ಲ: ಇಡೀ ವಿದ್ಯಾರ್ಥಿಗಳನ್ನೆ ಮೂರೋ ಐದೋ ಮಟ್ಟದವರನ್ನಾಗಿ ವಿಂಗಡಿಸಿ, ಯಾವ ವಿದ್ಯಾರ್ಥಿ ಆ ಮಟ್ಟಗಳಲ್ಲಿ ಯಾವುದಕ್ಕೆ ಸೇರಲು ಯೋಗ್ಯ ನೆಂಬುದನ್ನು ನಿರ್ಧರಿಸುವುದು ಸುಲಭ. ಆಗ ಭಿನ್ನತೆ ಅಷ್ಟು ಹೆಚ್ಚಾಗಿ ತೋರಿಬರದೆ, ಹೆಚ್ಚು ನಿರ್ದುಷ್ಟವಾದ ಫಲಿತಾಂಶ ಹೊರಬೀಳುತ್ತದೆ.

ಒಂದು ಸಾಧಾರಣವಾದ ತರಗತಿಯಲ್ಲಿ ಅತ್ಯಂತ ಮೇಧಾವಿಗಳೂ ಅತ್ಯಂತ ದಡ್ಡರೂ ಅಲ್ಪ ಸಂಖ್ಯೆಯಲ್ಲೂ, ಮಧ್ಯಮ ವರ್ಗದವರು ಹೆಚ್ಚಾಗಿಯೂ ಇರುತ್ತಾರೆಂಬುದು ಸಂಶೋಧನೆಗಳಿಂದ ಸ್ಥಿರಪಟ್ಟಿದೆ. ಸಾಧಾರಣವಾಗಿ ಯಾವ ಅನುಸರಣೆಯೂ ಇಲ್ಲದೆ ಗುಂಪಿಸಿರುವ ಒಂದು ತರಗತಿಯ




ಒಂದು ಸಾಮಾನ್ಯ ಗುಂಪಿನಲ್ಲಿ ಬೇರೆ ಬೇರೆ ಮಟ್ಟದ ಬುದ್ಧಿಶಕ್ತಿಯ ಬಾಲಕರ ಸಂಖ್ಯೆಯನ್ನು ಸೂಚಿಸುವ ನಕ್ಷೆ

ವಿದ್ಯಾರ್ಥಿಗಳನ್ನು ಬುದ್ಧಿಶಕ್ತಿಯ ಮಟ್ಟವನ್ನನುಸರಿಸಿ ಎ, ಬಿ, ಸಿ, ಡಿ, ಇ ಎಂದು ೫ ಪಂಗಡಗಳಾಗಿ ವಿಂಗಡಿಸಿದೆಯೆನ್ನುವ; ಆಗ ಎ ವರ್ಗದವರು ತೀರ ದಡ್ಡರು; ಇ ವರ್ಗದವರು ತೀರ ಮೇಧಾವಿಗಳು; ಉಳಿದವರು ಮಧ್ಯಮ ವರ್ಗದವರು. ಪ್ರಯೋಗಗಳ ಆಧಾರದಮೇಲೆ, ಎ ಮತ್ತು ಇ ಗುಂಪಿನವರು ಶೇಕಡ ೭-೭ ರಂತೆಯೂ ಬಿ ಮತ್ತು ಡಿ ಗುಂಪಿನವರು ಶೇಕಡ ೨೪-೨೪

ರಂತೆಯೂ, ಸಿ ಗುಂಪಿನವರು ಶೇಕಡ ೩೮ ರಂತೆಯೂ ಇರುವರೆಂಬ ಅಂಶ ಸಂಶೋಧನೆಗಳಿಂದ ಸ್ಥಿರಪಟ್ಟಿದೆ. ಅದೇ ವಿಷಯವನ್ನು ಚಿತ್ರದಲ್ಲೂ ವಿಶದ ಪಡಿಸಿದೆ; ಒಂದು ಅಕ್ಷದಲ್ಲಿ ಐದು ಗುಂಪುಗಳನ್ನೂ ಇನ್ನೊಂದು ಅಕ್ಷದಲ್ಲಿ ಆಯಾ ಗುಂಪಿನಲ್ಲಿರುವ ವಿದ್ಯಾರ್ಥಿಗಳ ಸಂಖ್ಯೆಯನ್ನೂ ಸೂಚಿಸಿದೆ. ಈ ಐದು ಪಂಗಡಗಳಾಗಿ ವಿಂಗಡಿಸಿಕೊಂಡು ಉತ್ತರಗಳನ್ನು ಪರಿಶೀಲಿಸಿ ಅವರ ಯೋಗ್ಯತೆಯನ್ನು ನಿಶ್ಚಯಿಸುವುದರಿಂದ ಹೆಚ್ಚು ನಂಬಲರ್ಹವಾದ ರೀತಿಯ ಫಲಿತಾಂಶ ಹೊರಬೀಳಬಲ್ಲದು. ಮೇಲಿನ ಚಿತ್ರದ ಪರಿಚಯ ಪರೀಕ್ಷಕರಿಗೆ ಆವಶ್ಯಕ. ಅದರ ಸಹಾಯದಿಂದ ತಾವು ಬೇರೆ ರೀತಿಯಲ್ಲಿ ಅಂಕಿಗಳನ್ನು ಕೊಟ್ಟಾಗ ತಮ್ಮ ಪರೀಕ್ಷೆ ನಿರ್ದೋಷವಾಗಿದೆಯೇ ಎಂದು ಪರೀಕ್ಷಿಸಲು ಸಾಧ್ಯವಾಗುತ್ತದೆ. ಒಂದು ಅಕ್ಷದಲ್ಲಿ ವಿದ್ಯಾರ್ಥಿಗಳ ಅಂಕಿಗಳನ್ನೂ ಇನ್ನೊಂದರಲ್ಲಿ ಆ ಅಂಕಿಗಳನ್ನು ಪಡೆದಿರುವ ವಿದ್ಯಾರ್ಥಿಗಳ ಸಂಖ್ಯೆಯನ್ನೂ ಇಟ್ಟುಕೊಂಡು ಗುರುತಿಸಿ, ಆ ಗುರುತುಗಳನ್ನೆಲ್ಲ ಕೂಡಿಸಿ ಚಿತ್ರ ಎಳೆದರೆ ಅದು ಒಂದು ಗಂಟೆಯ ಆಕಾರವನ್ನು ತಳೆದರೆ ಉಪಾಧ್ಯಾಯರು ನಡಸಿರುವ ಪರೀಕ್ಷೆ ನಿರ್ದುಷ್ಟವಾದ್ದೆಂದು ತಿಳಿಯಬಹುದು; ಏಕೆಂದರೆ ಆಗ ಮೇಲೆ ವಿವರಿಸಿದ ಸಾಮಾನ್ಯ ನಿಯಮಕ್ಕೆ ಅನುಗುಣವಾಗಿಯೇ ಅಂಕಿಗಳನ್ನು ಕೊಡುವ ಕಾರ್ಯ ನಡೆದಂತಾಗುತ್ತದೆ. ಚಿತ್ರ ಗಂಟೆಯಂತೆ ಬಾರದಿದ್ದರೆ ಪರೀಕ್ಷೆ ನಿರ್ದೋಷವಲ್ಲವೆಂದು ತಿಳಿಯಬೇಕು. ಆದರೆ ಆ ತರಗತಿಯ ಬಾಲಕರು ವಿಶೇಷ ರೀತಿಯಲ್ಲಿ ಆಯ್ಕೆಯಾಗಿದ್ದರೆ ಅಂಥ ಆಕಾರದ ಚಿತ್ರ ಬಾರದಿರಬಹುದು. ಆಗ ಈ ನಿಯಮ ಅನ್ವಯಿಸುವುದೂ ಇಲ್ಲ. ಉತ್ತರಗಳನ್ನು ಪರಿಶೀಲಿಸುವ ಮೊದಲು ಯಾವ ನಿರ್ದಿಷ್ಟ ತಿಳಿವಳಿಕೆಯೂ ಪರೀಕ್ಷಕರಿಗೆ ಕೊಡದಿದ್ದಲ್ಲಿ ಮೇಲಿನ ಒರೆಗಲ್ಲಿಗೆ ಫಲಿತಾಂಶವನ್ನು ಒರೆ ಹಚ್ಚಿ ನೋಡಿದರೆ ತಾವು ಕೊಟ್ಟಿರುವ ಅಂಕಿಗಳು ಸಮರ್ಪಕವಾಗಿರುವುದೂ ಇಲ್ಲದಿರುವುದೂ ಗೊತ್ತಾಗಿ ಹೋಗುತ್ತದೆ. ಸಮರ್ಪಕವಾಗಿಲ್ಲವೆಂದು ದೃಢಪಟ್ಟರೆ ಮರಳಿ ಪರೀಕ್ಷಿಸಿ ಅಂಕಿಗಳನ್ನು ಕೊಡಬೇಕು.

**೨. ವಿದ್ಯಾರ್ಥಿಗಳ ಪರಿಚಯದ ಪಕ್ಷಪಾತದಿಂದ ಭಿನ್ನತೆ:** ವಿದ್ಯಾರ್ಥಿಗಳನ್ನು ಉಪಾಧ್ಯಾಯರು ಮೊದಲೇ ಬಲ್ಲವರಾಗಿದ್ದರೆ ಅವರ ಉತ್ತರಗಳನ್ನು ಪರಿಶೀಲಿಸುವಾಗ, ಅಂಕಿಗಳನ್ನು ಹಾಕುವಾಗ, ಆ ಪೂರ್ವ ಪರಿಚಯದ ಪಕ್ಷಪಾತ ತನ್ನ ಕೈವಾಡವನ್ನು ಬೀರುತ್ತದೆ. ಆ ಮೂಲಕವೂ

ಕೊಡುವ ಅಂಕಿಗಳು ಭಿನ್ನವಾಗುತ್ತವೆ. ಅಂಥ ಪಕ್ಷಪಾತವನ್ನು ತೋರ ಬಾರದೆಂದು ಅವರು ಭಾವಿಸಿದ್ದರೂ ಹಾಗೆ ಮಾಡಲು ಕಷ್ಟವಾಗುತ್ತದೆ! ಎಂದಮೇಲೆ ವಿದ್ಯಾರ್ಥಿಗಳ ಪರಿಚಯವಿದ್ದೆಡೆಗಳಲ್ಲಿ ಅವರ ಉತ್ತರಗಳನ್ನು ಪರಿಶೀಲಿಸುವಾಗ ನಿಷ್ಪಕ್ಷಪಾತದಿಂದ ವರ್ತಿಸುವುದು ಸಾಧ್ಯವಾಗದ ಕೆಲಸ ವಾಗುತ್ತದೆ. ಅದನ್ನು ನಿವಾರಿಸಲೋಸ್ಕರವೇ ವಿದ್ಯಾರ್ಥಿಗಳ ಹೆಸರನ್ನು ಉತ್ತರ ಪತ್ರಿಕೆಗಳಮೇಲೆ ಬರೆಯುವುದನ್ನು ತಪ್ಪಿಸಿ ಸಂಕೇತಗಳನ್ನು ಮಾತ್ರ ಹಾಕುವ ಏರ್ಪಾಟು ಈಚಿಗೆ ಬಳಕೆಗೆ ಬಂದಿರುವುದು.

**೩. ಪರೀಕ್ಷೆಯ ಅಂಕಿಗಳು ವಿದ್ಯಾರ್ಥಿಗಳ ಶಿಕ್ಷಣಾಭಿವೃದ್ಧಿಯ ಮಟ್ಟವನ್ನು ನಿಷ್ಕರ್ಷಿಸಬೇಕು:** ಎಷ್ಟೇ ನಿರ್ದುಷ್ಟವಾಗಿ ಉತ್ತರಗಳನ್ನು ಪರಿಶೀಲಿಸಿದ್ದರೂ ಶೇಕಡವಾರು ಅಂಕಿಗಳನ್ನು ಕೊಟ್ಟಾಗ, ವಿದ್ಯಾರ್ಥಿಯ ಶಿಕ್ಷಣಾಭಿವೃದ್ಧಿಯ ಮಟ್ಟ ಸರಾಸರಿ ವಿದ್ಯಾರ್ಥಿಗಳ ಮಟ್ಟಕ್ಕೆ ಕಡಮೆಯೋ, ಹೆಚ್ಚೋ ಎಂಬುದು ಸುಲಭವಾಗಿ ವ್ಯಕ್ತವಾಗುವಂತಿಲ್ಲ. ಪರೀಕ್ಷೆಯಲ್ಲಿ ತೇರ್ಗಡೆಯಾಗಬೇಕಾದರೆ ಬೇರೆ ಬೇರೆ ದೇಶಗಳಲ್ಲಿ ಪಡೆಯಬೇಕಾದ ಕನಿಷ್ಠಾಂಶದ ಪ್ರಮಾಣ ಬೇರೆ ಬೇರೆಯಾಗಿರುತ್ತದೆ. ಭಾರತದಲ್ಲಿ ಅದು ೩೫% ಇದ್ದರೆ ಅಮೆರಿಕದಲ್ಲಿ ೭೦% ಇದೆ. ಅಲ್ಲದೆ, ಗಣಿತದಲ್ಲಿ ಬಂದಿರುವ ಅಂಕಿ ಸಾಧಾರಣವಾಗಿದ್ದರೆ, ಅದೇ ಅಂಕಿ ಭಾಷೆಯಲ್ಲಾದರೆ ಅತ್ಯುತ್ತಮ ಮಟ್ಟದ ಶಿಕ್ಷಣಾಭಿವೃದ್ಧಿಯನ್ನು ಸೂಚಿಸಬಲ್ಲದು. ತರಗತಿಯ ಇತರ ವಿದ್ಯಾರ್ಥಿಗಳು ಪಡೆದಿರುವ ಅಂಕಿಗಳನ್ನು ಅರಿತ ಹೊರತು ಒಬ್ಬ ಬಾಲಕನ ಅಂಕಿಗಳಿಂದ ತರಗತಿಯಲ್ಲಿ ಅವನ ಸ್ಥಾನವನ್ನು ನಿಷ್ಕರ್ಷಿಸಲು ಸಾಧ್ಯವೇ ಇಲ್ಲ. ಹೀಗೆ ಶೇಕಡವಾರು ಅಂಕಿ ಹಾಕುವ ಇಂದಿನ ಕ್ರಮ ಉಪಯುಕ್ತ ವಲ್ಲ—ಅದರಿಂದ ವಿದ್ಯಾರ್ಥಿಯ ಯೋಗ್ಯತೆಯನ್ನು ತರಗತಿಯ ಇತರ ರೊಡನೆ ಹೋಲಿಸುವುದಕ್ಕಾಗಲಿ, ಇತರ ವಿಷಯಗಳಲ್ಲಿ ಅವನು ಪಡೆದಿರುವ ಶಿಕ್ಷಣಾಭಿವೃದ್ಧಿಯೊಡನೆ ಹೋಲಿಸುವುದಕ್ಕಾಗಲಿ ಸಾಧ್ಯವಿಲ್ಲ. ಈಗ ಈ ಕ್ರಮ ಆಚರಣೆಯಲ್ಲಿರುವುದರಿಂದ ಪರೀಕ್ಷೆಗಳ ಫಲಿತಾಂಶ ನಂಬಲರ್ಹ ವಾಗಿಲ್ಲ; ಸಹಾಯಕವೂ ಅಲ್ಲ.

**ನೂತನ ಪರೀಕ್ಷಾ ಕ್ರಮಗಳ ವಿಶೇಷ ಗುಣಗಳು:** ಇಂಥ ದುಷ್ಪರಿಣಾಮ ಹುಟ್ಟಿಸುವ, ನ್ಯೂನತೆಗಳನ್ನು ತಳೆದಿರುವ ಇಂದಿನ ಪರೀಕ್ಷಾ ಪದ್ಧತಿ,

ಕೇವಲ ಅಂಕಿಗಳನ್ನು ಕೊಡುವಾಗ ಮೇಲೆ ಸೂಚಿಸಿದ ಎಚ್ಚರಿಕೆಗಳನ್ನು ತೆಗೆದುಕೊಂಡರೂ ಉತ್ತಮವಾಗುವಂತಿಲ್ಲ. ಏಕೆಂದರೆ, ನಾವು ಎಷ್ಟೇ ಎಚ್ಚರಿಕೆಯಿಂದ ಅಂಕಿಗಳನ್ನು ಕೊಟ್ಟರೂ ವ್ಯತ್ಯಾಸ ಸುಳಿಯುಬಹುದು— ಏಕೆಂದರೆ ನಮ್ಮ ವಿವೇಚನೆ ಮತ್ತು ತೀರ್ಮಾನ ಎಲ್ಲಕ್ಕೂ ನಿರ್ದಿಷ್ಟವಾಗಿರುವುದು ಅಪರೂಪ. ಆದ್ದರಿಂದ ಇಂದಿನ ಪರೀಕ್ಷಾಕ್ರಮವನ್ನೇ ಬದಲಾಯಿಸುವುದು ಉತ್ತಮ. ಹಾಗೆ ಮಾಡುವಾಗ ಭಿನ್ನತೆಗೂ ವ್ಯತ್ಯಾಸಕ್ಕೂ ಬಹುಮಟ್ಟಿಗೆ ಕಾರಣವಾಗಿರುವ ಪ್ರಬಂಧ ರೀತಿಯ ಉತ್ತರಗಳನ್ನು ಬಯಸುವ ಪ್ರಶ್ನೆಗಳನ್ನು ತಪ್ಪಿಸಲು ಯತ್ನಿಸಬೇಕು. ಆ ಮೂಲಕ ಅಂಕಿಗಳನ್ನು ಸಿಕ್ಕಿದಹಾಗೆ ಕೊಡುವುದು ತಪ್ಪೀತು. ಇಂದಿನ ಪ್ರಬಂಧ ರೀತಿಯ ಪ್ರಶ್ನೆಗಳನ್ನುಳ್ಳ ಪರೀಕ್ಷೆಗಳಿಂದ ಇನ್ನೂ ಇತರ ವಿಧದ ನ್ಯೂನತೆಗಳೂ ದುಷ್ಪರಿಣಾಮಗಳೂ ಆಗುತ್ತಿವೆ. ಅವನ್ನು ಅರಿತುಕೊಂಡು ವಿದ್ಯಾರ್ಥಿಗಳ ಅಭಿವೃದ್ಧಿಯನ್ನು ಅಳೆದು ಅವರ ಯೋಗ್ಯತೆಯನ್ನು ನಿಷ್ಕರ್ಷಿಸಲು ಅನುಕೂಲಿಸುವ ನೂತನ ಕ್ರಮದಲ್ಲಿರಬೇಕಾದ ಗುಣಗಳನ್ನು ತಿಳಿಯಬೇಕು.

೧. **ನಿರ್ದಿಷ್ಟ ವಿಷಯವನ್ನು ಪರೀಕ್ಷಿಸಬೇಕು :** ಪ್ರಬಂಧ ರೂಪದ ಉತ್ತರ ಬಯಸುವ ಇಂದಿನ ಪ್ರಶ್ನಪತ್ರಿಕೆಗಳನ್ನೊಳಗೊಂಡ ಪರೀಕ್ಷೆಗಳು ಹಿಂದೆ ವಿವರಿಸಿದಂತೆ ಮಕ್ಕಳ ನಿರ್ದಿಷ್ಟ ಜ್ಞಾನವನ್ನು ಅಳೆಯಲಾರವು. ಯಾವ ವಿಷಯದಲ್ಲೇ ಆಗಲಿ ಬರೆದಿರುವ ಉತ್ತರವನ್ನು ಪರಿಶೀಲಿಸುವಾಗ ಬರವಣಿಗೆಯ ಅಂದ ಚಂದಗಳೂ, ಉಕ್ತಲೇಖನ ಮತ್ತು ವ್ಯಾಕರಣಾಂಶಗಳ ಪ್ರಭಾವವೂ ಪರೀಕ್ಷಕರ ತೀರ್ಮಾನವನ್ನು ಮಾರ್ಪಡಿಸಬಲ್ಲವು. ಆದ್ದರಿಂದ ನಿರ್ದಿಷ್ಟವಾದ ಒಂದು ವಿಷಯಜ್ಞಾನವನ್ನು ಅಳೆಯುವುದರ ಬದಲು ಅನೇಕ ವಿಷಯಗಳನ್ನು ಪರೀಕ್ಷಿಸಲು ಯತ್ನ ನಡೆಯುತ್ತದೆ. ಅದು ತಪ್ಪಬೇಕಾದರೆ ಪ್ರಬಂಧ ರೀತಿಯ ಉತ್ತರ ಬಯಸದ ಪ್ರಶ್ನೆಗಳನ್ನು ಕೊಡಬೇಕು; ಅವು ಅನಿವಾರ್ಯವೆನಿಸಿದಾಗಲೂ ಚಿಕ್ಕ ಚಿಕ್ಕ ಪ್ರಬಂಧಗಳ ರೂಪದಲ್ಲಾದರೂ ಇರುವಂತಿರಬೇಕು. ಆಗ ಅಂಕಿಗಳನ್ನು ಕೊಡುವುದರಲ್ಲಿ ಭಿನ್ನತೆಯೂ ವೈಯಕ್ತಿಕ ವ್ಯತ್ಯಾಸಗಳೂ ಕಡಮೆಯಾದಾವು.

೨. **ಬರವಣಿಗೆಯ ವೇಗವನ್ನು ಪರೀಕ್ಷೆಗಳು ಗಣನೆಗೆ ತೆಗೆದುಕೊಳ್ಳಬೇಕು :** ಎಲ್ಲರಿಗೂ ಉತ್ತರ ಬರೆಯಲು ಒಂದೇ ಕಾಲಾವಧಿ

ಯನ್ನು ಕೊಟ್ಟಿರುತ್ತದೆ. ವೇಗವಾಗಿ ಬರೆಯತಕ್ಕವರು ಅರ್ಧಕಾಲದಲ್ಲೇ ಮುಗಿಸುವರು; ಮಂದ ಪ್ರಕೃತಿಯವರು ಕೊಟ್ಟಿರುವ ಒಟ್ಟು ಕಾಲದಲ್ಲಿ ಬರೆದು ಮುಗಿಸುವರು. ಆದರೂ ಇಬ್ಬರಿಗೂ ಬರತಕ್ಕ ಅಂಕಿಗಳು ಸಮ ವಾಗಿರಬಹುದು; ಇನ್ನೂ ಹೆಚ್ಚಿಗೆ ಪ್ರಶ್ನೆಯಿದ್ದರೆ ವೇಗವಾಗಿ ಬರೆಯತಕ್ಕ ವರಿಗೆ ಹೆಚ್ಚು ಅಂಕಿ ಬರುತ್ತಿತ್ತು. ಹಾಗೆಯೇ ವೇಗವಾಗಿ ಬರೆಯಬಲ್ಲ ವರು ಇಡೀ ಕಾಲದಲ್ಲೆಲ್ಲ ಉತ್ತರ ಬರೆದು ಪೂರ್ಣ ಅಂಕಿಗಳನ್ನು ಪಡೆಯು ವಂತಿದ್ದರೆ ಮಂದಗಾಮಿಗಳು ಅರ್ಧ ಮಾತ್ರ ಬರೆಯಬಲ್ಲರು. ಹೀಗೆ ಬರವಣಿಗೆಯ ವೇಗವನ್ನು ಗಣನೆಗೆ ತೆಗೆದುಕೊಳ್ಳದ ಈ ಪರೀಕ್ಷೆಗಳು ಅವರ ಯೋಗ್ಯತೆಯನ್ನು ಪಕ್ವವಾಗಿ ಅಳೆಯಲಾರವು. ಆದ್ದರಿಂದ ನೂತನ ಪರೀಕ್ಷಾಕ್ರಮಗಳು ಬರವಣಿಗೆಯ ವೇಗವನ್ನೂ ಗಣನೆಗೆ ತೆಗೆದುಕೊಳ್ಳು ವಂತೆ ರೂಪುಗೊಳ್ಳಬೇಕು.

**೩. ಮಾಡಿರುವ ಎಲ್ಲ ಪಾಠಗಳಮೇಲೂ ಪ್ರಶ್ನೆಗಳು ಬಂದಿರ ಬೇಕು:** ಇಂದಿನ ಪ್ರಶ್ನೆಗಳು ದೀರ್ಘವಾದ ಪ್ರಬಂಧರೂಪದ ಉತ್ತರ ವನ್ನು ಬಯಸುವುದರಿಂದ ಒಂದೊಂದು ಉತ್ತರ ಬರೆಯುವುದಕ್ಕೂ ತುಂಬ ಕಾಲ ಬೇಕಾಗುತ್ತದೆ. ಆದ್ದರಿಂದ ಇಡೀ ಪ್ರಶ್ನಪತ್ರಿಕೆಯಲ್ಲೆಲ್ಲ ೫-೬ ಪ್ರಶ್ನೆ ಗಳನ್ನು ಮಾತ್ರ ಸೇರಿಸಬಹುದು. ಎಂದರೆ, ಮಾಡಿರುವ ಎಲ್ಲ ಪಾಠ ಭಾಗ ವನ್ನೂ ಪರೀಕ್ಷಿಸಿದಂತಾಗಲಾರದು. ಅನೇಕ ಭಾಗಗಳಮೇಲೆ ಪ್ರಶ್ನೆಗಳೇ ಬಂದಿರುವುದಿಲ್ಲ. ಒಬ್ಬ ಒಳ್ಳೆಯ ವಿದ್ಯಾರ್ಥಿ ಎಲ್ಲ ಪಾಠಗಳನ್ನೂ ಕ್ರಮವಾಗಿ ಅಭ್ಯಾಸಿಸಿದ್ದು, ಸ್ವಲ್ಪ ಮಾತ್ರ ಬಿಟ್ಟದ್ದರೆ, ಹೆಚ್ಚು ಪ್ರಶ್ನೆಗಳು ಆ ಭಾಗದಲ್ಲೇ ಬಂದುಬಿಟ್ಟರೆ ಅವನಿಗೆ ತುಂಬ ಅನ್ಯಾಯ; ಇನ್ನೊಬ್ಬ ವಿದ್ಯಾರ್ಥಿ ಪಾಠ ವನ್ನೇ ಕ್ರಮವಾಗಿ ಓದದೆ ಎಲ್ಲೋ ಪರೀಕ್ಷೆಯ ಸಮಯದಲ್ಲಿ ಸ್ವಲ್ಪ ಓದಿದ್ದು ಆ ಭಾಗದ ಮೇಲೇ ಹೆಚ್ಚು ಪ್ರಶ್ನೆಗಳು ಬಂದುಬಿಟ್ಟಿದ್ದರೆ ಅವನಿಗೆ ತುಂಬ ಅನುಕೂಲ. ಹೀಗೆ ಅದು ಕೇವಲ ಅದೃಷ್ಟ ಪರೀಕ್ಷೆಯಂತಿದೆಯೇ ಹೊರತು ನಿಜವಾದ ಅಭಿವೃದ್ಧಿಯನ್ನು ಅಳೆಯುತ್ತಿಲ್ಲ. ಇದು ನಿಲ್ಲಬೇಕಾದರೆ ಚಿಕ್ಕ ಚಿಕ್ಕ ಉತ್ತರಗಳನ್ನು ಬಯಸುವ ಪ್ರಶ್ನೆಗಳನ್ನು ಅಧಿಕ ಸಂಖ್ಯೆಯಲ್ಲಿ ಕೊಡಬೇಕು. ಆ ಮೂಲಕ, ಮಾಡಿರುವ ಎಲ್ಲ ಪಾಠಗಳನ್ನೂ ಸೇರಿಸಿ ವಿದ್ಯಾರ್ಥಿಯ ಶಿಕ್ಷಣಾಭಿವೃದ್ಧಿಯನ್ನು ಹೆಚ್ಚು ನಂಬಲರ್ಹವಾಗುವಂತೆ ಪರೀಕ್ಷಿಸಲು ಸಹಾಯವಾಗುತ್ತದೆ.

**೪. ಕಂಠಪಾಠಕ್ಕೂ ಊಹೆಗೂ ಉತ್ತೇಜನವಿರಬಾರದು :** ಇಂದಿನ ಪ್ರಶ್ನಪತ್ರಿಕೆಗಳಲ್ಲಿ ೫-೬ ಪ್ರಶ್ನೆಗಳು ಮಾತ್ರವಿರುವುದರಿಂದ ಯಾವುದು ಬರಬಹುದೆಂದು ಮುಂಚಿತವಾಗಿ ಊಹಿಸಿಕೊಂಡು ಅವನ್ನು ಮಾತ್ರ ಕಂಠಪಾಠ ಮಾಡಿಕೊಳ್ಳಲು ವಿದ್ಯಾರ್ಥಿಗಳಿಗೆ ಅವಕಾಶವಿದೆ. ಕೇವಲ ನಾಲ್ಕಾರು ಪ್ರಶ್ನೆಗಳಿಗಾಗುವಷ್ಟನ್ನು ಮಾತ್ರ, ಅದೂ ಪರೀಕ್ಷೆ ಹತ್ತಿರವಾದಾಗ ಉರುಹಾಕಲು ಪ್ರೋತ್ಸಾಹಿಸುವ ಇಂದಿನ ಪರೀಕ್ಷಾಕ್ರಮ ವಿದ್ಯಾರ್ಥಿಯ ಒಟ್ಟು ಶಿಕ್ಷಣಾಭಿವೃದ್ಧಿಯ ಅಳತೆಯಾಗಲಾರದು. ಇದರಿಂದ ವಿದ್ಯಾರ್ಥಿಗಳು ಇಡೀ ವರ್ಷವೆಲ್ಲ ಕಾಲಹರಣಮಾಡಿ, ಕೊನೆಯಲ್ಲಿ ಬರ ಬಹುದೆಂದು ಊಹಿಸಿದ ಪ್ರಶ್ನೆಗಳಿಗೆ ಮಾತ್ರ ಸಿದ್ಧರಾಗಿ ಹೋಗುತ್ತಾರೆ. ಈ ನ್ಯೂನತೆಯನ್ನು ಕಡಮೆ ಮಾಡಲು ಪ್ರಶ್ನೆಗಳ ಸಂಖ್ಯೆಯನ್ನು ಹೆಚ್ಚಿಸ ಬೇಕು. ತೇರ್ಗಡೆಯಾಗಬೇಕಾದರೆ ಎಲ್ಲ ಪಾಠಗಳನ್ನೂ ಓದುವ ಆವಶ್ಯ ಕತೆಯಿರುವಂತೆ ಪ್ರಶ್ನಪತ್ರಿಕೆ ರೂಪುಗೊಳ್ಳಬೇಕು.

**೫. ನಿಸ್ಪೃಹ ವಿದ್ಯಾರ್ಥಿಗಳಿಗೆ ತೊಂದರೆ ಆಗುವಂತಿರಬಾರದು :** ವರ್ಷವೆಲ್ಲ ಕ್ರಮವಾಗಿ, ನಡೆದ ಪಾಠಗಳನ್ನೆಲ್ಲ ಅಭ್ಯಾಸಿಸಿಕೊಂಡಿರುವ ವಿದ್ಯಾರ್ಥಿಗಳಿಗೂ ಇಂದಿನ ಪರೀಕ್ಷೆಗಳು ತೊಂದರೆಯೇ. ಬರುವ ೫-೬ ಪ್ರಶ್ನೆಗಳಲ್ಲಿ ಯಾವುದು ಬರುತ್ತದೋ ಯಾವುದು ಇಲ್ಲವೋ ಎಂಬ ಯೋಚನೆ ಯಲ್ಲಿ ಅವರ ಮನಸ್ಸೂ ಅಲ್ಲೋಲಕಲ್ಲೋಲವಾಗುತ್ತದೆ. ಪುಟ್ಟ ಪುಟ್ಟ ಅನೇಕ ಪ್ರಶ್ನೆಗಳನ್ನು ಕೊಟ್ಟಾಗ ಈ ದುಷ್ಪರಿಣಾಮ ತಪ್ಪುತ್ತದೆ. ಏಕೆಂದರೆ, ಆಗ ಎಲ್ಲ ವಿಷಯಗಳ ಮೇಲೂ ಪ್ರಶ್ನೆಗಳು ಬಂದೇಬರುತ್ತವೆ.

**೬. ನಿರ್ದಿಷ್ಟ ಅಂಶವನ್ನು ಮಾತ್ರ ಪರೀಕ್ಷಿಸಬೇಕು:** ಒಂದೊಂದು ಪ್ರಶ್ನಪತ್ರಿಕೆಯೂ ನಿರ್ದಿಷ್ಟವಾಗಿ ಆ ವಿಷಯವನ್ನು ಮಾತ್ರ ಪರೀಕ್ಷಿಸು ವಂತಿರಬೇಕು. ಅಂಕಿಗಳನ್ನು ಕೊಡುವಾಗಲೂ ಅಷ್ಟೆ. ಭೂಗೋಳದ ಪರೀಕ್ಷೆಯಲ್ಲಿ ಭೂಗೋಳ ಜ್ಞಾನವನ್ನು ಮಾತ್ರ ಪರೀಕ್ಷಿಸಬೇಕು, ಭಾಷೆ ಯನ್ನಲ್ಲ; ಲೆಕ್ಕವನ್ನಲ್ಲ. ಪ್ರಶ್ನೆಗಳು ಮುಖ್ಯ ವಿಷಯಕ್ಕೆ ಮಾತ್ರ ಅನ್ವಯಿ ಸುವಂತೆ ರೂಪುಗೊಂಡಿರಬೇಕು. ಆಗ ನಿರ್ದಿಷ್ಟವಾದ ಒಂದೇ ವಿಷಯವನ್ನು ಪರೀಕ್ಷಿಸಬಹುದು

**೭. ಪ್ರಶ್ನೆಗಳು ನಿರ್ದಿಷ್ಟ ಉತ್ತರ ಬಯಸುವಂತಿರಬೇಕು :** ಉತ್ತರಗಳನ್ನು ಪರೀಕ್ಷಿಸಿ, ಬೆಲೆ ಕಟ್ಟುವಾಗ ಪರೀಕ್ಷಕರ ವೈಯಕ್ತಿಕ

ತೀರ್ಮಾನಗಳು ಸುಳಿದುಕೊಂಡು ಭಿನ್ನತೆ ತಲೆದೋರುವುದು ತಪ್ಪಬೇಕಾದರೆ ಒಂದು ಪ್ರಶ್ನೆಗೆ ಒಂದೇ ಉತ್ತರ ಬರುವಂತಿರಬೇಕು. ಆಗ ಯಾರೇ ಅಂಕಿಗಳನ್ನು ಕೊಟ್ಟರೂ ಅದೇ ಅಂಕಿಯನ್ನು ಯಾಂತ್ರಿಕವಾಗಿ ಕೊಡುವಂತಾಗುತ್ತದೆ. ಆ ಪ್ರಶ್ನೆಯೊಂದೊಂದಕ್ಕೂ ಪೂರ್ವಭಾವಿಯಾಗಿ ನಿರ್ದಿಷ್ಟ ಉತ್ತರವನ್ನೂ, ಅದಕ್ಕೆ ಕೊಡಬೇಕಾದ ಅಂಕಿಯನ್ನೂ ಪರೀಕ್ಷಕರು ತೀರ್ಮಾನಿಸಿಕೊಂಡಿರಬೇಕು. ಆ ಸರಿಯಾದ ಉತ್ತರ ಬಂದಿದ್ದರೆ ಯಾರೇ ಪರೀಕ್ಷಕರಾಗಿರಲಿ ಅದಕ್ಕೆ ನಿಷ್ಕರ್ಷಿಸಿರುವ ಅಂಕಿಯನ್ನು ಕೊಟ್ಟುಬಿಡಬಹುದು. ಎಂದರೆ ಆ ಮೂಲಕ, ನಡೆಯುವ ಪರೀಕ್ಷೆ ಹೆಚ್ಚು ಸಮರ್ಪಕವೆನಿಸುತ್ತದೆ.

**೮. ಸೂಕ್ಷ್ಮ ರೀತಿಯಲ್ಲಿ ಅಂಕಿಯನ್ನು ಕೊಡಲು ಅವಕಾಶವಿರಬೇಕು:** ನಾವು ರೂಪಿಸಬೇಕಾಗಿರುವ ನೂತನ ಪರೀಕ್ಷಾಕ್ರಮಗಳ ರೂಪುರೇಖೆಗಳನ್ನು ಮೇಲೆ ವಿವರಿಸಲಾಗಿದೆ. ಅಂಥ ಪರೀಕ್ಷೆಗಳಿಂದ ಅಂಕಿಗಳನ್ನು ಬಹು ಸೂಕ್ಷ್ಮವಾಗಿ ವಿಂಗಡಿಸಬಹುದು. ಸುಮಾರು ನೂರು ಪ್ರಶ್ನೆಗಳಿರುವುದಾದರೆ ಒಂದೊಂದು ಪ್ರಶ್ನೆಗೂ ಒಂದೊಂದು ಅಂಕಿ ಕೊಡಬಹುದು. ಆ ಮೂಲಕ ಬಹು ಸೂಕ್ಷ್ಮ ರೀತಿಯಲ್ಲಿ ಮಕ್ಕಳ ಯೋಗ್ಯತೆಯನ್ನು ಅಳೆಯಲು ಈ ಕ್ರಮದಲ್ಲಿ ಸಾಧ್ಯವಾಗುತ್ತದೆ.

**೯. ಫಲಿತಾಂಶದ ಪಟ್ಟಿ ತರಗತಿಯ ಸರಾಸರಿಯನ್ನು ಒಳಗೊಂಡಿರಬೇಕು:** ಇಂಥ ನೂತನ ಪರೀಕ್ಷಾಕ್ರಮದಲ್ಲಿ ಪಡೆದ ಫಲಿತಾಂಶಗಳನ್ನು ಪ್ರಕಟಿಸುವಾಗ ತರಗತಿಯ ಸರಾಸರಿಯನ್ನೂ ಜೊತೆಯಲ್ಲೇ ಸೇರಿಸಬೇಕು. ಆಗ ತರಗತಿಯ ಸರಾಸರಿ ಯೋಗ್ಯತೆಯೊಡನೆ ವಿದ್ಯಾರ್ಥಿಯೊಬ್ಬನ ಅಂಕಿಗಳಿಂದ ಅವನ ಶಿಕ್ಷಣಾಭಿವೃದ್ಧಿಯನ್ನು ಹೋಲಿಸಿ, ತೂಗಿ ನೋಡಬಹುದು.

**ನೂತನ ಪರೀಕ್ಷೆಗಳು:** ಸಾಂಪ್ರದಾಯಿಕ ಪರೀಕ್ಷೆಗಳ ನ್ಯೂನತೆಯನ್ನು ಪರಿಹರಿಸಿ ಅವುಗಳಿಂದಾಗುತ್ತಿರುವ ದುಷ್ಪರಿಣಾಮಗಳನ್ನು ನಿವಾರಿಸುವುದಕ್ಕಾಗಿ ಅವು ಮಾರ್ಪಡಬೇಕಾದ ಮಾರ್ಗವನ್ನು ಮೇಲೆ ಸೂಚಿಸಲಾಗಿದೆ. ಆ ಸಲಹೆಗಳನ್ನು ಅಳವಡಿಸಿಕೊಂಡು, ಆಗಲೇ ನೂತನ ರೀತಿಯ ಪರೀಕ್ಷಾಕ್ರಮಗಳು ಅಮೆರಿಕ, ಇಂಗ್ಲೆಂಡು, ಮೊದಲಾದ ದೇಶಗಳಲ್ಲಿ ರೂಪು

ಗೊಂಡು ಪ್ರಚಾರಕ್ಕೆ ಬರುತ್ತಿವೆ. ಶಿಕ್ಷಣಾಭಿವೃದ್ಧಿಯನ್ನು ಅಳೆಯಲು ಬಗೆಬಗೆಯ ಪ್ರಶ್ನಾವಳಿಗಳೂ ರೂಪುಗೊಂಡಿವೆ. ಭಾರತದಲ್ಲೂ ಆ ಮಾರ್ಗದಲ್ಲಿ ಅಷ್ಟಿಷ್ಟು ಯತ್ನ ನಡೆದಿದೆ. ಅಂಥ ನೂತನ ರೀತಿಯ ಪರೀಕ್ಷೆಗಳಲ್ಲಿ ಕೆಲವನ್ನು ಇಲ್ಲಿ ವಿವರಿಸಲಾಗಿದೆ:

## ೧. ಸರಿ—ತಪ್ಪು (ಹೌದು - ಅಲ್ಲ) ಪರೀಕ್ಷೆ:

ಉದಾಹರಣೆ: ಸ : ತ | ೧. ಪುಲಿಕೇಶಿ ಅಶೋಕನನ್ನು ಸೋಲಿಸಿದನು.
ಸ : ತ | ೨. ಪೂರನೆಯ ಮೈಸೂರು ಯುದ್ಧದಲ್ಲಿ ಟೀಪು ಮಡಿದನು.
ಸ : ತ | ೩. ಹುಮಾಯೂನ್ ಬಾಬರನ ಮಗ.
ಸ : ತ | ೪. ಷಹಜಹಾನ್ ತಾಜಮಹಲ್ಲನ್ನು ಕಟ್ಟಿಸಿದನು.
ಸ : ತ | ೫. ........................

ಮೇಲಿನ ನೂತನ ರೀತಿಯ ಪ್ರಶ್ನಪತ್ರಿಕೆ ಚರಿತ್ರೆಗೆ ಸಂಬಂಧಿಸಿದ್ದು. ಅದರಲ್ಲಿ ಅಂಥ ಅನೇಕ ಪ್ರಶ್ನೆಗಳಿರುತ್ತವೆ. ಉತ್ತರವನ್ನು ಪ್ರತ್ಯೇಕವಾಗಿ ಬರೆಯಬೇಕಾಗಿಲ್ಲ: ಪಕ್ಕದಲ್ಲಿ ಸ, ತ, ಎಂಬಕ್ಷರಗಳಿವೆ. ಸರಿಯಾಗಿದ್ದರೆ ಸ ಎಂಬುದರ ಕೆಳಗೂ, ತಪ್ಪಾಗಿದ್ದರೆ ತ ಎಂಬುದರ ಕೆಳಗೂ ಗುರುತು ಮಾಡಿದರೆ ಸಾಕು. ಅಥವಾ ಆ ಅಕ್ಷರವನ್ನು ಗುಂಡು ಸುತ್ತುವುದೂ ಆಗಬಹುದು. ಆ ಮೂಲಕ ಪ್ರಶ್ನೆಗೆ ಉತ್ತರ ಬರೆದಂತಾಯಿತು. ಅಲ್ಲಿ ನೂರಾರು ಪ್ರಶ್ನೆಗಳಿರುವುದರಿಂದ ಕೊಟ್ಟಿರುವ ಕಾಲದಲ್ಲಿ ಎಲ್ಲ ವಿದ್ಯಾರ್ಥಿಗಳೂ ಅವರವರಿಗೆ ಸಾಧ್ಯವಾದಷ್ಟನ್ನು ಉತ್ತರಿಸಬಹುದು. ಇಂಥ ನೂತನ ರೀತಿಯಲ್ಲಿ ಉತ್ತರ ಬರೆಯುವುದು ಪರಿಚಯವಾಗಲೆಂದು ಅದರಲ್ಲಿ ಮಾದರಿ ಪ್ರಶ್ನೆಯೊಂದಕ್ಕೆ ಉತ್ತರ ಬರೆದು ಮುದ್ರಿಸಿರುತ್ತಾರೆ. ಒಂದೊಂದು ಪ್ರಶ್ನೆಗೂ ಒಂದೊಂದು ಅಂಕಿ ಇಡಬಹುದು. ಉತ್ತರ ಸರಿಯಾಗಿದ್ದರೆ ಒಂದಂಕಿ; ಇಲ್ಲದಿದ್ದರೆ ಇಲ್ಲ. ಸ್ವಲ್ಪ ಸರಿ ಎಂದು ಅರ್ಧ, ಮುಕ್ಕಾಲು ಕೊಡುವ ಅನಿವಾರ್ಯವೇ ಇಲ್ಲ. ನಿಖರವೂ ನಿರ್ದಿಷ್ಟವೂ ಆದ ಉತ್ತರಗಳನ್ನು ಬರೆದಿರುವ ಮುದ್ರಣವಾದ ಪತ್ರಿಕೆಯೊಂದನ್ನು ಪ್ರತಿಯೊಬ್ಬ ಪರೀಕ್ಷಕರಿಗೂ ಕೊಡಲಾಗುವುದು. ಅದರ ಸಹಾಯದಿಂದ ವಿದ್ಯಾರ್ಥಿಗಳ ಉತ್ತರ ಪತ್ರಿಕೆಯನ್ನು ಪರಿಶೀಲಿಸಿ ಅಂಕಿಗಳನ್ನು ಕೊಡುವರು. ಆಗ ಪರೀಕ್ಷಕರ ವೈಯಕ್ತಿಕ ಭಿನ್ನತೆಗಳು ಸುಳಿಯುವಂತೆಯೇ ಇಲ್ಲ.

ಇದೇ ರೀತಿಯಲ್ಲಿ ಇತರ ವಿಷಯಗಳಮೇಲೂ ಪ್ರಶ್ನಪತ್ರಿಕೆಯನ್ನು ತಯಾರಿಸಬಹುದು; ಕೊಟ್ಟ ಪ್ರಶ್ನಪತ್ರಿಕೆಯ ಮೇಲೇ ಉತ್ತರ ಬರೆದು ಬಿಡುವಂತಿರುವುದರಿಂದ ಅದೇ ಪತ್ರಿಕೆಯನ್ನು ಹಿಂದಕ್ಕೆ ತೆಗೆದುಕೊಂಡುಬಿಡುತ್ತಾರೆ. ಪ್ರಶ್ನಪತ್ರಿಕೆಯನ್ನು ರಚಿಸುವಾಗ, ಸುಮಾರು ನೂರು ಪ್ರಶ್ನೆಗಳಿದ್ದು, ಐವತ್ತು ಸರಿಯಾದವೂ, ಐವತ್ತು ತಪ್ಪಾದವೂ ಇರಬೇಕು. ಅವನ್ನು ಯಾವ ಕ್ರಮವನ್ನೂ ಅನುಸರಿಸದೆ ಬೆರಸಿ, ಜೋಡಿಸಿರುವುದು ಉತ್ತಮ.

ಈ ಪರೀಕ್ಷಾಕ್ರಮದ ಮೇಲೆ ಬಂದಿರುವ ಮುಖ್ಯವಾದ ಟೀಕೆಯೆಂದರೆ, ಸರಿಯಾದವೂ ತಪ್ಪಾದವೂ ಐವತ್ತೈವತ್ತಿರುವುದರಿಂದ ಏನೂ ತಿಳಿಯದ ಒಬ್ಬ ವಿದ್ಯಾರ್ಥಿ ಎಲ್ಲಕ್ಕೂ ಸರಿಯೆಂದಾಗಲಿ ತಪ್ಪೆಂದಾಗಲಿ ಗುರುತಿಸಿ ಬಿಟ್ಟರೂ ಕೂಡ ೫೦ ಅಂಕಿ ಬಂದೇಬಿಡುತ್ತದೆ ಎಂಬುದು. ನಿಜ. ಈ ನ್ಯೂನತೆಯನ್ನು ಪರಿಹರಿಸಲು ಒಂದು ಉಪಾಯ ಹುಡುಕಿದ್ದಾರೆ. ಮೊದಲು ಸರಿಯಾದ ಎಲ್ಲ ಪ್ರಶ್ನೆಗೂ ಒಂದೊಂದು ಅಂಕಿಯನ್ನು ಕೊಟ್ಟು ಒಟ್ಟಿನಲ್ಲಿ ತಪ್ಪಾಗಿರುವ ಒಂದೊಂದು ಪ್ರಶ್ನೆಗೂ ಒಂದೊಂದು ಅಂಕಿಯನ್ನು ಕಳೆಯುತ್ತ ಹೋಗುವರು. ಆಗ ಇಡೀ ಪತ್ರಿಕೆಯನ್ನೇ ಊಹೆಯಿಂದ ಬರೆದಿದ್ದರೆ ೫೦ ಸರಿಯಾಗಿ, ೫೦ ತಪ್ಪಾಗಿರುತ್ತವೆ. ಆಗ ಅವನಿಗೆ ಬರುವ ಒಟ್ಟು ಅಂಕಿ ಏನೂ ಇಲ್ಲ! ಪ್ರಶ್ನಪತ್ರಿಕೆಯ ಮೊದಲಲ್ಲೇ 'ಊಹಿಸಿ ಬರೆಯಕೂಡದೆಂದು' ಎಚ್ಚರಿಕೆಯೂ ಇರುತ್ತದೆ. ಎಂದರೆ ಒಟ್ಟಿನಲ್ಲಿ ಆ ವಿದ್ಯಾರ್ಥಿ ಚೆನ್ನಾಗಿ ಬಲ್ಲ ಪ್ರಶ್ನೆಗಳನ್ನು ಮಾತ್ರ ಉತ್ತರಿಸುತ್ತಾನೆ. ಆಗ ಅದಕ್ಕೆ ತಕ್ಕಷ್ಟು ಮಾತ್ರ ಅಂಕಿ ಬರುತ್ತದೆ.

## ೨. ಬಹು ಅಂಶಗಳಿಂದ ಆಯ್ಕೆಯ ಪರೀಕ್ಷೆ :

ಉದಾಹರಣೆ : ೧. ಕಾನೂರು ಸುಬ್ಬಮ್ಮ ಹೆಗ್ಗಡಿತಿ............ಮಹಾಕಾವ್ಯ
ಸಣ್ಣ ಕತೆ
ಕಾದಂಬರಿ
ಕವನ ಸಂಗ್ರಹ

೨. ಕನ್ನಡದ ಆದಿ ಕವಿ..........................ಹರಿಹರ
ಕುಮಾರವ್ಯಾಸ
ಪಂಪ
ಷಡಕ್ಷರಾಂಕ

ಹೀಗೆ ಕೊಟ್ಟಿರುವ ಒಂದೊಂದು ವಾಕ್ಯಕ್ಕೂ ಪೂರೈಸಿ ಉತ್ತರ ಬರೆಯಬೇಕು. ಹಾಗೆ ಪೂರೈಸುವಾಗ ಆ ಪಕ್ಕದಲ್ಲಿ ಕೊಟ್ಟಿರುವ ಹಲವಂಶಗಳಿಂದಲೇ ಉತ್ತರವನ್ನು ಆರಿಸಬೇಕು. ಸಂಬಂಧಿಸಿದ ಪದದ ಕೆಳಗೆ ಗೆರೆ ಹಾಕಿದರೆ ಉತ್ತರ ಬರೆದಂತಾಗುತ್ತದೆ. ವಿದ್ಯಾರ್ಥಿಗೆ ವಿಷಯ ಚೆನ್ನಾಗಿ ಗೊತ್ತಿದ್ದರೆ ಮಾತ್ರ ಉತ್ತರ ಸರಿಯಾಗುವುದು. ಉಡಾಫೆ ಹೊಡೆಯುವಂತೆಯೇ ಇಲ್ಲ. ಹಿಂದಿನ ಪರೀಕ್ಷೆಯಂತೆ ಇಲ್ಲೂ, ಯಾರು ಅಂಕಿಗಳನ್ನು ಕೊಟ್ಟರೂ ಭಿನ್ನತೆ ಬರುವಂತಿಲ್ಲ.

## ೩. ಜೋಡಣೆಯ ಪರೀಕ್ಷೆ :

| ಉದಾಹರಣೆ: | (ಎ) | (ಬಿ) |
|---|---|---|
| ··೨·· | ಗದುಗಿನ ಭಾರತ | ೧. ಕಾಳಿದಾಸ |
| ...... | ಗಿರಿಜಾ ಕಲ್ಯಾಣ | ೨. ಕುಮಾರವ್ಯಾಸ |
| ...... | ಶಾಕುಂತಲ | ೩. ಲಕ್ಷ್ಮೀಶ |
| ...... | ಜೈಮಿನಿ ಭಾರತ | ೪. ಹರಿಹರ |

ಮೇಲಿನ ಒಂದು ಪ್ರಶ್ನೆಯಲ್ಲಿ ನಾಲ್ಕು ಗ್ರಂಥಗಳ ಹೆಸರುಗಳು ಒಂದು ಗುಂಪು (ಎ); ಪಕ್ಕದಲ್ಲಿ ಆ ನಾಲ್ಕು ಗ್ರಂಥ ಬರೆದವರ ಹೆಸರು ಇನ್ನೊಂದು ಗುಂಪು (ಬಿ); ಆದರೆ ಆಯಾ ಗ್ರಂಥಕ್ಕೆ ಸರಿಯಾಗಿ ಜೋಡಣೆಯಾಗಿಲ್ಲ. ವಿದ್ಯಾರ್ಥಿಗಳು ಹುಡುಕಿ ಸರಿಯಾದ್ದನ್ನು ಜೋಡಿಸಬೇಕು. ಹಾಗೆ ಉತ್ತರ ಬರೆಯುವಾಗ ಆಯಾ ಸಾಲಿನ ಮೊದಲಲ್ಲಿ ಸ್ಥಳ ಬಿಟ್ಟಿದೆ. (ಎ) ಗುಂಪಿನ ಆ ಸ್ಥಳದಲ್ಲಿ (ಬಿ) ಗುಂಪಿನಲ್ಲಿರುವ ಸರಿಯಾದ ಉತ್ತರಕ್ಕಿರುವ ಅಂಕಿಯನ್ನು ಬರೆದುಬಿಟ್ಟರೆ ಸಾಕು. ಉತ್ತರ ಬರೆಯುವ ಕ್ರಮವನ್ನು ಮೊದಲನೇ ಸಾಲಿನಲ್ಲಿ ತೋರಿಸಿದೆ; ಹಾಗೆಯೇ ಇತರ ಸಾಲುಗಳನ್ನೂ ಪೂರೈಸಬೇಕು. ಈ ರೀತಿಯ ಪ್ರಶ್ನಪತ್ರಿಕೆಗಳನ್ನು ಎಲ್ಲ ವಿಷಯಗಳಮೇಲೂ ತಯಾರಿಸಬಹುದು. ಉತ್ತರಗಳನ್ನು ಪರಿಶೀಲಿಸುವುದು ಹಿಂದಿನ ಪರೀಕ್ಷೆಯಂತೆಯೇ. ಈ ಪರೀಕ್ಷೆಯಲ್ಲೂ ಉತ್ತರ ಪ್ರಶ್ನಪತ್ರಿಕೆಯಲ್ಲೇ ಇರುತ್ತದೆ. ಆದರೆ ಯಾವುದಕ್ಕೆ ಯಾವುದು ಹೊಂದುವುದೆಂಬ ಪರಿಚಯ ಅವರಿಗಿರಬೇಕು. ಆ ಮೂಲಕ ಅವರ ವಿಷಯ ಪರಿಚಯ ಜ್ಞಾನವನ್ನು ಪರೀಕ್ಷಿಸಿದಂತಾಗುತ್ತದೆ.

## ೪. ಪೂರಕ ಪರೀಕ್ಷೆ

ಉದಾಹರಣೆ : ......೧. ಹಿಂದೂಸ್ಥಾನ........ಖಂಡದಲ್ಲಿದೆ.
........೨. ಹಿಮಾಲಯ ಭಾರತದ........ದಿಕ್ಕಿನಲ್ಲಿದೆ.
........೩. ಗಂಗಾ ನದಿ ಸೇರುವ ಸಮುದ್ರದ ಹೆಸರು........

ಮೇಲಿನ ಪ್ರಶ್ನೆಗಳಲ್ಲಿ ಒಂದೊಂದು ಪದ ಬಿಟ್ಟುಹೋಗಿದೆ. ವಿದ್ಯಾರ್ಥಿಗಳು ಅದನ್ನು ಸ್ಮರಣೆಗೆ ತಂದುಕೊಂಡು ಅದನ್ನು ಬಿಟ್ಟಿರುವ ಸ್ಥಳದಲ್ಲಿ ಬರೆದು ಪೂರೈಸಬೇಕು. ಕೆಲವು ವೇಳೆ ಆಯಾ ಪ್ರಶ್ನೆಯ ಪಕ್ಕದಲ್ಲಿ ಬಿಟ್ಟಿರುವ ಸ್ಥಳದಲ್ಲೂ ಉತ್ತರ ಬರೆಯುವ ಏರ್ಪಾಡು ಮಾಡಿರುವುದುಂಟು. ಅಂಕಿಗಳನ್ನು ಕೊಡುವುದು ಹಿಂದಿನ ರೀತಿಯಲ್ಲೇ.

## ೫. ಅನುಕ್ರಮ ಪರೀಕ್ಷೆ :

| | | |
|---|---|---|
| ಉದಾಹರಣೆ : ..೪.. | ಔರಂಗಜೇಬ್ | ೧ |
| ...... | ಹುಮಾಯೂನ್ | ೨ |
| ........ | ಅಕ್ಬರ್ | ೩ |
| ....... | ಬಾಬರ್ | ೪ |

ಮೇಲಿನ ಪ್ರಶ್ನೆಯಲ್ಲಿ ನಾಲ್ವರು ಮೊಗಲ್ ಚಕ್ರವರ್ತಿಗಳ ಹೆಸರುಗಳಿವೆ. ಆದರೆ ಅವರು ಆಳಿದ ಕಾಲಕ್ರಮದಲ್ಲಿ ಕೊಡದಿರಬಹುದು. ವಿದ್ಯಾರ್ಥಿಗಳು ಯಾರು ಮೊದಲು ಆಳಿದರೆಂಬ ಕ್ರಮವನ್ನು ಕಂಡುಹಿಡಿದು ಆ ಕ್ರಮದಲ್ಲಿ ಒಬ್ಬೊಬ್ಬ ಚಕ್ರವರ್ತಿಯ ಪಕ್ಕದಲ್ಲೂ ಬಿಟ್ಟಿರುವ ಸ್ಥಳದಲ್ಲಿ ಅವರು ಎಷ್ಟನೆಯವರೆಂಬುದನ್ನು ಗುರುತಿಸಬೇಕು. ಅವರಂಗಜೇಬ್ ನಾಲ್ಕನೆಯವನಾದುದರಿಂದ ಅವನ ಪಕ್ಕದಲ್ಲಿ '೪' ಎಂದು ಬರೆಯಬೇಕು (ಮಾದರಿಗಾಗಿ ಅದನ್ನು ತೋರಿಸಿದೆ). ಸರಿಯಾಗಿದ್ದರೆ ಅದಕ್ಕೆ ಅಂಕಿ; ಇಲ್ಲವಾದರೆ ಇಲ್ಲ.

## ೬. ಸಂಬಂಧಕಲ್ಪನಾ ಪರೀಕ್ಷೆ :

ಉದಾಹರಣೆ : ೧. ಕಪ್ಪು : ಬಿಳುಪು :: ಕಷ್ಟ : ........(ಸುಲಭ)
೨. ರೇಖೆ : ಬಿಂದು :: ಬಿಂದು ........(ರೇಖೆ)
೩. ಬಡ್ಡಿ : ಬಡ್ಡಿಯ ದರ : : ದೂರ :........(ವೇಗ)

ಮೇಲಿರುವ ಒಂದೊಂದು ಪ್ರಶ್ನೆಯಲ್ಲೂ ವಿಷಯಕ್ಕಿರುವ ಸಂಬಂಧ ಕೊಟ್ಟಿದೆ. ಮತ್ತೊಂದು ಹೊಸ ಪದವನ್ನು ಕೊಟ್ಟಿದೆ. ಹಿಂದಿನ ಪದಗಳ

ಗಿರುವ ಸಂಬಂಧವೇ ಎರಡನೆಯ ಜೋಡಿಯಲ್ಲೂ ಇರುವಂಥ ನಾಲ್ಕನೆಯ ಪದವನ್ನು ಕಂಡುಹಿಡಿಯಬೇಕು; ಸ್ಥಳ ಬಿಟ್ಟಿರುವಲ್ಲಿ ಆ ಹೊಸ ಪದವನ್ನು ಬರೆಯಬೇಕು. ಹಾಗೆ ಉತ್ತರ ಬರೆಯಬೇಕಾದರೆ, ಒಂದು ಜೊತೆ ಪದಗಳಲ್ಲಿರುವ ಸಂಬಂಧವನ್ನು ಆಲೋಚಿಸಬೇಕು; ಅದರ ಆಧಾರದಮೇಲೆ ಮುಂದಿನ ಜೊತೆಯಲ್ಲಿ ಬಿಟ್ಟಿರುವ ಪದವನ್ನು ಕಂಡುಹಿಡಿಯಬೇಕು. ಒಂದರ ಸಂಬಂಧದ ಆಧಾರದಮೇಲೆ ಮತ್ತೊಂದರ ಸಂಬಂಧ ಕಲ್ಪನೆಯ ಜ್ಞಾನ ಅವಶ್ಯಕ. ಮೇಲಣ ಮೂರು ಪ್ರಶ್ನೆಗಳಿಗೂ ಬರಬೇಕಾದ ಉತ್ತರವನ್ನು ಉದಾಹರಣೆಗಾಗಿ ಆವರಣದಲ್ಲಿ ಸೂಚಿಸಿದೆ. ಕೆಲವು ವೇಳೆ ವಿದ್ಯಾರ್ಥಿಗಳು ಒಂದೇ ಅರ್ಥದ ಭಿನ್ನ ಪದಗಳನ್ನು ಬರೆಯಬಹುದು: ಸುಲಭ ಎಂಬುದಕ್ಕೆ ಸರಾಗ ಎಂದು ಬರೆಯಬಹುದು. ಆಗ ಪೂರ್ಣವಾಗಿ ಅಂಕಿಗಳನ್ನು ಕೊಡಬಹುದು.

## ೭. ಹೋಲಿಕೆಯ ಪರೀಕ್ಷೆ:

**ಉದಾಹರಣೆ:** ೧. ಟೋಪಿ, ಜುಬ್ಬ, ಷರಾಯಿ, ಕೈಚೀಲ,
ಕೈ, ಕಾಲು, ಮನೆ, ಜೋಡು, ವನ

೨. ಕೆಂಪು, ಹಳದಿ, ನೀಲಿ
ಕಾಗದ, ಹಸುರು, ಗಾಜು

ಮೇಲೆ ಎರಡು ಪ್ರಶ್ನೆ ಕೊಟ್ಟಿದೆ. ಒಂದೊಂದರಲ್ಲೂ ಎರಡು ಗುಂಪು ವಸ್ತುಗಳಿವೆ. ಮೊದಲನೆಯ ಗುಂಪಿಗೆ ಸೇರಿದ ಒಂದು ವಸ್ತು ಎರಡನೆಯ ಗುಂಪಿನಲ್ಲಿ ಬೆರೆತಿವೆ. ಅದನ್ನು ಆಲೋಚಿಸಿಕೊಂಡು ಹುಡುಕಿ, ಗುರುತಿಸಬೇಕು. ಮೊದಲನೆಯ ಪ್ರಶ್ನೆಯಲ್ಲಿ ಮೊದಲ ಗುಂಪಿಗೆ ಸೇರಬೇಕಾದ 'ಜೋಡು' ಎರಡನೆಯ ಗುಂಪಿನಲ್ಲಿದೆ. ಹಾಗೆಯೇ ಎರಡನೆಯ ಪ್ರಶ್ನೆಯಲ್ಲಿ 'ಹಸುರು' ಎಂಬುದನ್ನು ಗುರುತಿಸಬೇಕು.

## ೮. ವರ್ಗೀಕರಣ ಪರೀಕ್ಷೆ:

**ಉದಾಹರಣೆ:** ೧. ಆಮ್ಲಜನಕ, ಜಲಜನಕ, ಪಾದರಸ, ಕ್ಲೋರೀನ್.

೨. ಚಿನ್ನ, ಬೆಳ್ಳಿ, ತಾಮ್ರ, ಪ್ಲಾಟಿನಂ, ಹಿತ್ತಾಳೆ.

೩. ಗಂಧಕ, ಇಂಗಾಲ, ಫಾಸ್ಫರಸ್, ಸೋಡಿಯಂ.

ಮೇಲೆ ಮೂರು ಪ್ರಶ್ನೆಗಳನ್ನು ಉದಹರಿಸಿದೆ. ರಸಾಯನಶಾಸ್ತ್ರಕ್ಕೆ ಸಂಬಂಧಿಸಿದ ಪ್ರಶ್ನೆಗಳಿವು ಮೊದಲನೆಯದರಲ್ಲಿರುವ ನಾಲ್ಕು ವಸ್ತುಗಳಲ್ಲಿ ಮೂರು ಅನಿಲಗಳು; ಒಂದು ದ್ರವವಸ್ತು. ಆದ್ದರಿಂದ ಪಾದರಸ ಆ ವರ್ಗಕ್ಕೆ ಸೇರಿದ್ದಲ್ಲ. ಆ ಪದದ ಕೆಳಗೆ ಗೆರೆ ಹಾಕುವುದರ ಮೂಲಕ ಅದನ್ನು ತೋರಿಸಬೇಕು. ಎರಡನೆಯದರಲ್ಲಿ ಎಲ್ಲ ಮೂಲವಸ್ತುಗಳು; ಹಿತ್ತಾಳೆ ಮಾತ್ರ ಮಿಶ್ರ ಲೋಹವಾದ್ದರಿಂದ ಆ ವರ್ಗಕ್ಕೆ ಅದು ಸೇರುವಂತಿಲ್ಲ. ಮೂರನೆಯದರಲ್ಲಿ ಎಲ್ಲವೂ ಅಲೋಹಗಳಾಗಿದ್ದು, ಸೋಡಿಯಂ ಮಾತ್ರ ಲೋಹವಾಗಿದೆ. ಅದನ್ನು ಬೇರ್ಪಡಿಸಿ ತೋರಿಸಬೇಕು. ಈ ಪ್ರಶ್ನೆಗಳಿಗೆ ಉತ್ತರ ಬರೆಯಬೇಕಾದರೆ ಆ ವಿಷಯದ ಪೂರ್ವ ಪರಿಚಯವಿರಬೇಕು; ಆಲೋಚಿಸಲೂ ಬೇಕು. ಸರಿಯಾಗಿ ಬರೆದ ಉತ್ತರಕ್ಕೆ ಪೂರ್ಣ ಅಂಕಿಗಳನ್ನು ಕೊಡಲಾಗುವುದು.

**೯. ಸಮಸ್ಯಾ ಪರಿಹಾರ ಪರೀಕ್ಷೆ:** ಕೊಟ್ಟಿರುವ ಕೆಲವು ಅಂಶಗಳನ್ನು ಉಪಯೋಗಿಸಿಕೊಂಡು ಆಲೋಚಿಸಿ ಉತ್ತರವನ್ನು ಕಂಡುಹಿಡಿಯುವಂತೆ ಪ್ರಶ್ನೆಗಳು ರೂಪುಗೊಂಡಿರುತ್ತವೆ. ಗಣಿತ, ಭೌತಶಾಸ್ತ್ರ, ಭೂಗೋಳ ಮುಂತಾದ ವಿಷಯಗಳ ಮೇಲಣ ಅನೇಕ ಪ್ರಶ್ನೆಗಳು ಈ ರೀತಿಯವು. ಇವುಗಳಿಗೆ ಉತ್ತರ ಬರೆಯಲು ವಿಷಯದ ಅಭ್ಯಾಸವೂ ಬೇಕು; ಆಲೋಚನೆ, ವಿವೇಚನೆಗಳೂ ಆವಶ್ಯಕ. ಇಂದಿನ ಸಾಂಪ್ರದಾಯಿಕ ಪರೀಕ್ಷೆಗಳಲ್ಲೂ ಈ ರೀತಿಯ ಪ್ರಶ್ನೆಗಳು ಬರುತ್ತಿವೆ. ಆ ಪ್ರಶ್ನೆಗಳನ್ನು ಸಣ್ಣವನ್ನಾಗಿ ಮಾಡಿ, ನಿರ್ದಿಷ್ಟ ಉತ್ತರ ಬರುವಂತೆ ರೂಪಿಸಿ, ನೂತನ ಪರೀಕ್ಷಾ ಕ್ರಮದಲ್ಲಿ ಸೇರಿಸಿಕೊಳ್ಳುವುದರಿಂದ ಅಂಕಿಗಳನ್ನು ಸರಿಯಾಗಿ ಕೊಡಲು ಸಹಾಯವಾಗುತ್ತದೆ.

ಮೇಲಿನ ೬, ೭, ೮, ೯ ಈ ನಾಲ್ಕು ಪರೀಕ್ಷೆಗಳಲ್ಲಿ ಕೇವಲ ನೆನಪಿನಿಂದಲೇ ಉತ್ತರ ಬರೆಯಲು ಸಾಧ್ಯವಿಲ್ಲ; ವಿಷಯದ ಅಭ್ಯಾಸದಂತೆ, ಸಂಬಂಧ ಜ್ಞಾನವೂ ವಿವೇಚನೆಯೂ ವಿಚಾರದೃಷ್ಟಿಯೂ ಆಲೋಚನೆಯೂ ಅಗತ್ಯ. ಒಂಬತ್ತು ರೀತಿಯ ಪರೀಕ್ಷೆಗಳಲ್ಲಿ ಯಾವುದೊಂದೂ ವಿದ್ಯಾರ್ಥಿಯ ಎಲ್ಲ ಶಕ್ತಿಸಾಮರ್ಥ್ಯಗಳನ್ನೂ ಸಮಗ್ರವಾಗಿ ಅಳೆಯಲಾರದು. ಒಂದೊಂದೂ ಒಂದೊಂದು ಶಕ್ತಿಯನ್ನು ಮಾತ್ರ ಅಳೆಯಬಲ್ಲದು. ವಿದ್ಯಾರ್ಥಿಯ ನಿಜವಾದ ಯೋಗ್ಯತೆ ಗೊತ್ತಾಗಬೇಕಾದರೆ ಅವನ ಎಲ್ಲ ಶಕ್ತಿಸಾಮರ್ಥ್ಯಗಳನ್ನೂ

ಅಳೆಯುವುದು ಆವಶ್ಯಕ. ತಪ್ಪು-ಸರಿ ಮತ್ತು ಆಯ್ಕೆಯ ಪರೀಕ್ಷೆಗಳಲ್ಲಿ ಮಕ್ಕಳ ವಿಷಯದ ಪರಿಚಯ ಜ್ಞಾನವನ್ನೂ, ಜೋಡಣೆ ಮತ್ತು ಪೂರಕ ಪರೀಕ್ಷೆಗಳಲ್ಲಿ ವಿಷಯ ಪರಿಚಯದ ಜೊತೆಗೆ ವಿಷಯವನ್ನು ನೆನಪಿಗೆ ತಂದುಕೊಳ್ಳುವ ಶಕ್ತಿಯನ್ನೂ, ಸಂಬಂಧ ಕಲ್ಪನೆಯ, ಹೋಲಿಕೆಯ, ವರ್ಗೀಕರಣದ ಮತ್ತು ಸಮಸ್ಯಾ ಪರಿಹಾರದ ಪರೀಕ್ಷೆಗಳಲ್ಲಿ ಮೇಲಿನ ಅಂಶಗಳ ಜೊತೆಗೆ ಅವರ ಆಲೋಚನೆ ವಿವೇಚನೆಗಳನ್ನೂ ಅಳೆಯಬಹುದು. ಆದ್ದರಿಂದ ಒಂದೊಂದು ವಿಷಯದ ಮೇಲಣ ಪ್ರಶ್ನಪತ್ರಿಕೆಯಲ್ಲೂ ಪರಿಚಯದ, ಸ್ಮರಣೆಯ, ವಿವೇಚನೆಯ ಪರೀಕ್ಷೆಗಳನ್ನು ಸೇರಿಸುವುದು ಉತ್ತಮ. ಈ ಮೂರು ರೀತಿಯ ಪರೀಕ್ಷೆಗಳೂ ತಕ್ಕಮಟ್ಟಿಗೆ ಬೆರೆತಿರುವಂತೆಯೇ ಪ್ರಶ್ನಪತ್ರಿಕೆಯನ್ನು ರೂಪಿಸಬೇಕು. ಅಂದು ಮಾತ್ರ ಫಲಿತಾಂಶ ವಿದ್ಯಾರ್ಥಿಯ ಯೋಗ್ಯತೆಯ ನಂಬಲರ್ಹವೆನಿಸುವ ಅಳತೆಯಾಗುವುದು. ಜೊತೆಗೆ, ಪ್ರಶ್ನೆಗಳ ರೀತಿಯಲ್ಲೂ ವೈವಿಧ್ಯತೆಯಿದ್ದು ಉತ್ತರ ಬರೆಯಲು ಮಕ್ಕಳೂ ಹೆಚ್ಚಿನ ಆಸಕ್ತಿ ತೋರಿಸುವರು. ಹೀಗೆ ಭಿನ್ನರೀತಿಯ ಪ್ರಶ್ನೆಗಳು ಸೇರಿರುವುದರಿಂದ ವಿದ್ಯಾರ್ಥಿಗಳ ವಿವಿಧ ಶಕ್ತಿಗಳನ್ನು ಅಳೆಯಬಹುದು. ಒಂದು ಶಕ್ತಿಯಲ್ಲಿ ಮಂಕಾಗಿರುವವರು ಮತ್ತೊಂದು ಶಕ್ತಿಯಲ್ಲಿ ಚುರುಕಾಗಿರಬಹುದು. ಪ್ರಶ್ನೆಗಳ ರೀತಿಯಲ್ಲಿ ಈ ರೀತಿಯ ವೈವಿಧ್ಯವಿದ್ದರೆ ಅವರವರಿಗೆ ಸಾಧ್ಯವಾಗುವ ರೀತಿಯ ಪ್ರಶ್ನೆಗಳಿಗೆ ಉತ್ತರ ಬರೆಯಲು ಅವಕಾಶವಾಗುತ್ತದೆ. ಸ್ಮರಣೆ, ಪರಿಚಯ–ಈ ಶಕ್ತಿಗಳು ಕಡಮೆಯಾಗುಳ್ಳವರು ಉತ್ತಮ ವಿವೇಚನಾ ಶಕ್ತಿ ಪಡೆದಿದ್ದರೆ ಅವರಿಗನುಕೂಲಿಸುವಂಥ ಪ್ರಶ್ನೆಗಳಿಗೆ ಉತ್ತರ ಬರೆಯುವರು. ಹಾಗೆಯೇ ವಿವೇಚನಾ ಶಕ್ತಿ ಕಡಮೆಯುಳ್ಳವರು ಸ್ಮರಣೆಯ, ಪರಿಚಯದ ಪ್ರಶ್ನೆಗಳಿಗಾದರೂ ಉತ್ತರ ಬರೆಯುವರು.

ಮೇಲೆ ವಿವರಿಸಿದ ನೂತನ ಪರೀಕ್ಷೆಗಳಲ್ಲಿ ಉತ್ತಮ ಪರೀಕ್ಷಾ ಕ್ರಮದ ಗುಣಗಳೆಲ್ಲವೂ ಇವೆ; ಅಂಕಿಗಳನ್ನು ಕೊಡುವಾಗ ಭಿನ್ನತೆ ತಲೆದೋರುವಂತಿಲ್ಲ; ಆಗ ವೈಯಕ್ತಿಕ ಭಾವನೆಗಳು ಸುಳಿದುಕೊಳ್ಳಲೂ ಅವಕಾಶವಿಲ್ಲ. ಮಾಡಿರುವ ಎಲ್ಲ ಪಾಠಗಳ ಮೇಲೂ ಪ್ರಶ್ನೆಗಳು ಬರುವುದರಿಂದ ಅದೃಷ್ಟ ಪರೀಕ್ಷೆಯಾಗುವುದರ ಬದಲು ವಿದ್ಯಾರ್ಥಿಯ ನಿಜವಾದ ಶಿಕ್ಷಣಾಭಿವೃದ್ಧಿಯನ್ನು ಅಳೆದಂತಾಗುತ್ತದೆ. ಆಸಕ್ತಿ ವಹಿಸಿ ವಿದ್ಯಾರ್ಥಿಗಳನ್ನು

ಉತ್ತರ ಬರೆಯಲು ಪ್ರೋತ್ಸಾಹಿಸುವಂತೆ ಪ್ರಶ್ನೆಗಳು ರೂಪುಗೊಂಡಿರುತ್ತವೆ. ಅಂಕಿಗಳನ್ನು ಕೊಡುವುದೂ ಸುಲಭ. ಕೆಲವು ಜಾತಿಯ ಪ್ರಶ್ನೆಗಳನ್ನು ಉತ್ತರಿಸುವಾಗ ಮಕ್ಕಳಿಗೆ ಒಂದು ರೀತಿಯ ಶಿಕ್ಷಣವೂ ಆಗುತ್ತದೆ। (ತಪ್ಪು-ಸರಿ ರೀತಿಯ ಪರೀಕ್ಷೆ, ಇತ್ಯಾದಿ) ಪ್ರಶ್ನಪತ್ರಿಕೆಗಳನ್ನು ಕೊಡುವ ಮುನ್ನ ಆಯಾ ತರಗತಿಯ ಮಟ್ಟಕ್ಕೆ ಅದು ಉಚಿತವಾದ್ದೇ ಎಂದು ಪರಿಷ್ಕರಿಸಿ ಕೊಡುವುದರಿಂದ ಅತಿ ಕಷ್ಟ, ಬಲು ಸುಲಭ ಎನ್ನುವಂತೆಯೇ ಇಲ್ಲ. ಫಲಿತಾಂಶದೊಡನೆಯೇ ತರಗತಿಯ ಸರಾಸರಿ ಅಂಕಿಯನ್ನೂ ಹಾಕುವುದರಿಂದ ವಿದ್ಯಾರ್ಥಿಯ ನಿಜವಾದ ಯೋಗ್ಯತೆಯನ್ನು ಅರಿಯುವುದರ ಜೊತೆಗೆ ತರಗತಿಯ ಇತರರೊಡನೆ ಹೋಲಿಸಿ ತೂಗಿಯೂ ನೋಡಬಹುದು.

ಇಷ್ಟೆಲ್ಲ ನೂತನ ಪರೀಕ್ಷಾ ಕ್ರಮದ ಉತ್ಕೃಷ್ಟತೆಯಾಯಿತು; ಆದರಲ್ಲಿ ಅಷ್ಟಿಷ್ಟು ಕುಂದು ಕೊರತೆಗಳು ಇಲ್ಲದೇ ಇಲ್ಲ. ಪ್ರಶ್ನಪತ್ರಿಕೆಗಳನ್ನು ಮುದ್ರಿಸುವ ಮುಂಚೆ, ಆ ಪ್ರಶ್ನೆಗಳು ಆ ತರಗತಿಗೆ ತಕ್ಕವೇ ಅಲ್ಲವೇ ಎಂಬುದನ್ನು ಪ್ರಾಯೋಗಿಕವಾಗಿ ಪ್ರಯೋಗಿಸಿ ದೃಢಪಡಿಸಿಕೊಳ್ಳಬೇಕು. ಅನಂತರವೇ ಅವನ್ನು ಮುದ್ರಿಸಿ ಹಂಚಬೇಕು. ಎಂದಮೇಲೆ ಈ ಕಾರ್ಯ ಮಾಡುವಾಗ ತುಂಬ ಎಚ್ಚರಿಕೆಯೂ ಶ್ರಮವೂ ಅನಿವಾರ್ಯ. ಅನೇಕ ವೇಳೆ ಈ ನೂತನ ಕ್ರಮದಲ್ಲಿ ಉತ್ತರಗಳಿಗಿಂತ ಪ್ರಶ್ನೆಗಳೇ ದೊಡ್ಡವಾಗಿರುತ್ತವೆ. ಆದ್ದರಿಂದ ಕಾಗದಕ್ಕೂ ಮುದ್ರಣಕ್ಕೂ ಅತಿಯಾಗಿ ಧನ ವ್ಯಯವಾಗುವುದೆಂದು ಹಲವರು ಆಕ್ಷೇಪಿಸುವರು. ಆದರೆ ಉತ್ತರ ಬರೆಯುವುದಕ್ಕೆ ಬೇಕಾದ ಕಾಗದ ಬಹು ಸ್ವಲ್ಪ. ಆದ್ದರಿಂದ ಪ್ರಶ್ನಪತ್ರಿಕೆಗಳ ಮುದ್ರಣಕ್ಕೆ ತಗಲುವ ಧನವ್ಯಯ ಇಲ್ಲಿ ಸರಿತೂಗುತ್ತದೆ; ಹಾಗೆಯೇ, ಪ್ರಶ್ನಪತ್ರಿಕೆಗಳನ್ನು ತಯಾರಿಸಲು ಶ್ರಮವಾದರೂ ಉತ್ತರಗಳನ್ನು ಪರೀಕ್ಷಿಸುವುದು ಸುಲಭವಾದ್ದರಿಂದ ಪರೀಕ್ಷಕರ ಆಕ್ಷೇಪಣೆ ಅಷ್ಟಾಗಿ ಇರಲಾರದು. ಎಂದಮೇಲೆ ನೂತನ ಪರೀಕ್ಷೆ ಒಂದು ರೀತಿಯಲ್ಲಿ ಕಷ್ಟವಾದರೂ ಮತ್ತೊಂದು ರೀತಿಯಲ್ಲಿ ಸುಲಭವಾಗಿದೆ.

ಆದರೆ ಈ ಹೊಸ ಪರೀಕ್ಷಾ ಕ್ರಮದಲ್ಲಿ ಹಲವು ನ್ಯೂನತೆಗಳೂ ಇವೆ. ಪ್ರಶ್ನೆಗಳು ವಿಷಯದ ಸಮಸ್ತ ಜ್ಞಾನವನ್ನು ಬಯಸುವ ಬದಲು ಒಂದು ಪದವನ್ನೋ ವಾಕ್ಯವನ್ನೋ ಬಯಸುವಂತಿರುವುದರಿಂದ ವಿದ್ಯಾರ್ಥಿಗಳು ಕಲಿತಿದ್ದರಲ್ಲಿ ಅಲ್ಲಿಷ್ಟು ಇಲ್ಲಿಷ್ಟು ಬೆದಕಿ ನೋಡುತ್ತವೆ. ಅವರು ತಮ್ಮ ವಿಶಾಲ

ಪರಿಚಯವನ್ನು ವ್ಯಕ್ತಪಡಿಸುವ ಅವಕಾಶವೇ ಇಲ್ಲ—ಎಂದು ಹಲವರು ಟೀಕಿಸುತ್ತಾರೆ. ಇದು ನಿಜವಾದ ಆಕ್ಷೇಪಣೆಯೇನೋ ಅಹುದು. ನೂತನ ಪರೀಕ್ಷೆಯ ಪ್ರಶ್ನೆಗಳಿಗೆ ಪ್ರಬಂಧರೀತಿಯ ಉತ್ತರ ಬರುವಂತಿಲ್ಲ. ಆದ ರಿಂದ ಅವರ ಉತ್ತರಗಳು ವಿದ್ಯಾರ್ಥಿ ಎಲ್ಲಿ ಎಷ್ಟರಮಟ್ಟಿಗೆ ಆಲೋಚಿಸಿ ಉತ್ತರ ಬರೆದಿರುವನು, ಎಲ್ಲಿ ಕೇವಲ ಊಹಿಸಿ ಬರೆಯಲು ಯತ್ನಿಸಿರುವನು ಎಂಬಂಶಗಳನ್ನು ತೋರಿಸಲಾರವು. ಇದಕ್ಕಿಂತ ಬಲವಾದ ನ್ಯೂನತೆ ಯೆಂದರೆ ಈ ಪರೀಕ್ಷೆಗಳು ಮಕ್ಕಳು ಗೀಟುಗಳಿಂದಲೋ, ಪದಗಳಿಂದಲೋ ಸೂಚಿಸಿ ಉತ್ತರ ಬರೆಯುವಂತಿವೆ; ತಮ್ಮ ವಿಷಯಜ್ಞಾನವನ್ನು ಜೋಡಿಸಿ ಒಳ್ಳೆಯ ಭಾಷೆಯ ಪ್ರಬಂಧ ರೂಪದಲ್ಲಿ ಉತ್ತರಗಳನ್ನು ರೂಪಿಸುವಂತಿಲ್ಲ. ಇದು ಪ್ರಧಾನವಾದ ನ್ಯೂನತೆಯಾದರೂ ನೂತನ ಪರೀಕ್ಷಾಕ್ರಮಗಳನ್ನು ತಳ್ಳಿಬಿಡುವುದು ಉಚಿತವಲ್ಲ. ಇಂಥ ನ್ಯೂನತೆಗಳು ಸಾಂಪ್ರದಾಯಿಕ ಪರೀಕ್ಷೆಗಳಲ್ಲೂ ಇವೆ. ಆದರೆ ನೂತನ ಪರೀಕ್ಷಾಕ್ರಮ ಇನ್ನೂ ಪ್ರಯೋಗಾ ವಸ್ಥೆಯಲ್ಲಿದೆ. ಈ ನ್ಯೂನತೆಯನ್ನು ಕೊನೆಗಾಣಿಸಲು ಯತ್ನ ನಡೆಯುತ್ತಿದೆ. ಅದು ಯಶಸ್ವಿಯಾಗುವವರೆಗಾದರೂ ನೂತನ ರೀತಿಯ ಪ್ರಶ್ನೆಗಳ ಸಮೇತ ಒಂದೆರಡು ಪ್ರಬಂಧ ಬಯಸುವ ಪ್ರಶ್ನೆಗಳನ್ನೂ ಕೊಡಬಹುದು.

**ಪ್ರಾಥಮಿಕ ಶಾಲೆಗಳ ಶಿಕ್ಷಣವನ್ನು ಅಳೆಯಲು ನೂತನ ಪರೀಕ್ಷೆಗಳು :** ಇದುವರೆಗೂ ನೂತನ ಪರೀಕ್ಷಾಕ್ರಮಕ್ಕೆ ಪ್ರಶ್ನಪತ್ರಿಕೆ ಗಳನ್ನು ತಯಾರಿಸುವ ರೀತಿಯನ್ನು ವಿವರಿಸಿದೆ. ಅವುಗಳಲ್ಲಿ ಎಲ್ಲ ಬಗೆಯ ಪ್ರಶ್ನೆಗಳನ್ನೂ ಸೇರಿಸುವುದು ಉತ್ತಮವೆಂದು ಸೂಚಿಸಿದೆ. ಅವು ಮಾಧ್ಯಮಿಕ ಮತ್ತು ಪ್ರೌಢಶಾಲೆಗಳ ಎಲ್ಲ ವಿಷಯಗಳಿಗೂ ಅನ್ವಯ ವಾಗತಕ್ಕವು. ಪ್ರಾಥಮಿಕ ಶಾಲೆಗಳಲ್ಲಿ ಓದುವುದು, ಬರೆಯುವುದು, ವಾಕ್ಯರಚನೆ ಮುಂತಾದವನ್ನು ಪರೀಕ್ಷಿಸಲು ಅನುಕೂಲಿಸುವಂತೆಯೂ ನೂತನ ರೀತಿಯಲ್ಲಿ ಪರೀಕ್ಷಾಕ್ರಮ ಏರ್ಪಟ್ಟಿದೆ. ಅದನ್ನಿಲ್ಲಿ ಸ್ಥೂಲವಾಗಿ ವಿವರಿಸಿದೆ :

೧. **ಓದುಗಾರಿಕೆಯ ಪರೀಕ್ಷೆ :** ವಿದ್ಯಾರ್ಥಿಯೊಬ್ಬನು ಓದಿದಾಗ ಅಂದಾಜಿನಮೇಲೆ ಸಾಮೂಹಿಕವಾಗಿ ಅವನ ಯೋಗ್ಯತೆಯನ್ನು ನಿಷ್ಕರ್ಷಿ ಸುವುದು ಹಳೆಯ ಪದ್ಧತಿ; ಆದರೆ ಓದುಗಾರಿಕೆಯನ್ನು ಪುಷ್ಟಿಗೊಳಿಸುವ

ವಿಷಯಗ್ರಹಣ, ವೇಗ ಮತ್ತು ಉಚ್ಚಾರಣೆ—ಈ ಅಂಶಗಳನ್ನು ಪ್ರತ್ಯೇಕವಾಗಿ ಪರಿಶೀಲಿಸುವುದು ನೂತನ ಕ್ರಮ. ಗಟ್ಟಿಯಾಗಿ ಓದುವುದನ್ನು ಪರೀಕ್ಷಿಸುವಾಗ ಅರ್ಥಗ್ರಹಣಕ್ಕೆ ಪ್ರಾಧಾನ್ಯತೆಯಿಲ್ಲ; ಮನಸ್ಸಿನಲ್ಲೇ ಓದುವುದನ್ನು ಪರೀಕ್ಷಿಸುವಾಗ ಉಚ್ಚಾರಣೆಯನ್ನು ಪರೀಕ್ಷಿಸುವಂತಿಲ್ಲ. ಗಟ್ಟಿಯಾಗಿ ಓದುವುದನ್ನು ಪರೀಕ್ಷಿಸುವಾಗ ಉಪಾಧ್ಯಾಯರು ಆ ತರಗತಿಗೆ ಯೋಗ್ಯವೆಂದು ನಿಷ್ಕರ್ಷಿಸಿರುವ ಪಾಠ ಮುದ್ರಣವಾಗಿರುವ ಪತ್ರಿಕೆಯನ್ನು ಮಕ್ಕಳಿಗೆ ಕೊಡುತ್ತಾರೆ. ತಾವೂ ಒಂದನ್ನು ನೋಡಿಕೊಳ್ಳುತ್ತಿರುತ್ತಾರೆ. ಮಕ್ಕಳು ಗೊತ್ತಾದ ಕಾಲದಲ್ಲಿ ಆರಂಭಿಸಬೇಕು. ಉಪಾಧ್ಯಾಯರು ಮಕ್ಕಳ ಉಚ್ಚಾರಣೆ, ಚಿಹ್ನೆಗಳಿಗನುಸಾರವಾಗಿ ನಿಲ್ಲಿಸುವುದು ಇತ್ಯಾದಿ ತಪ್ಪು ಓದುವುದು—ಈ ನ್ಯೂನತೆಗಳನ್ನೆಲ್ಲ ತಮ್ಮ ಹತ್ತಿರವಿರುವ ಪತ್ರಿಕೆಯ ಮೇಲೆ ಗುರುತು ಮಾಡಿಕೊಳ್ಳುತ್ತಿರುತ್ತಾರೆ. ನಿಯಮಿತ ಕಾಲದೊಳಗೆ ಆ ವಿದ್ಯಾರ್ಥಿ ಎಷ್ಟು ಓದುವನೆಂಬುದನ್ನೂ ಗಣನೆಗೆ ತೆಗೆದುಕೊಳ್ಳಲಾಗುವುದು. ಅನಂತರ ಮುದ್ರಣವಾಗಿರುವ ಒಂದು ಕೋಷ್ಟಕದ ಸಹಾಯದಿಂದ ನ್ಯೂನತೆಗಳಿಗೆಲ್ಲ ತಕ್ಕಷ್ಟು ಅಂಕಿಗಳನ್ನು ಕಳೆದು ವಿದ್ಯಾರ್ಥಿಯ ಓದುವ ಶಕ್ತಿಯನ್ನು ನಿರ್ಧರಿಸುವರು. ಶಬ್ದರಹಿತವಾಗಿ ಮನಸ್ಸಿನಲ್ಲೇ ಓದುವುದನ್ನೂ ನಿರೀಕ್ಷಿಸತಕ್ಕ ಪ್ರಶ್ನಪತ್ರಿಕೆಗಳೂ ರೂಪುಗೊಂಡಿವೆ. ಕರ್ಟಿಸ್, ಬ್ಯಾಲಾರ್ಡ್, ಥಾರ್ನ್‌ಡೈಕ್ ಮುಂತಾದವರು ಉತ್ತಮ ರೀತಿಯ ಪರೀಕ್ಷಾಕ್ರಮಗಳನ್ನೇರ್ಪಡಿಸಿ ಬಳಕೆಗೆ ತಂದಿರುವರು. ಅವುಗಳೆಲ್ಲ ಹಿಂದೆ ವಿವರಿಸಿದ ಯಾವುದಾದರೂ ಒಂದು ನೂತನ ರೀತಿಯ ಪ್ರಶ್ನೆಗಳನ್ನು ಒಳಗೊಂಡಿರುವುವು. ಆ ರೀತಿಯ ಪರೀಕ್ಷೆಯನ್ನು ವಿವರಿಸಲು ಒಂದು ಪ್ರಶ್ನೆಯನ್ನಿಲ್ಲಿ ಕೊಡಲಾಗಿದೆ :

> "ಇಲ್ಲಿ ಎರಡು ಚೌಕಗಳಿವೆ; ದೊಡ್ಡ ಚೌಕದ ಬಲಗಡೆಯ ಕೆಳಮೂಲೆಯಿಂದ ಚಿಕ್ಕ ಚೌಕದ ಎಡಗಡೆಯ ಮೇಲು ಮೂಲೆಗೆ ಒಂದು ಗೆರೆ ಎಳೆ."



ವಿದ್ಯಾರ್ಥಿ ಪ್ರಶ್ನೆಯನ್ನು ಓದಿಕೊಂಡು ಅರ್ಥಮಾಡಿಕೊಳ್ಳಬೇಕು. ಅನಂತರ ಅದರಂತೆ ಗೆರೆ ಎಳೆಯಬೇಕು. ಆದರೆ ಅದನ್ನು ನಿಯಮಿತ ಕಾಲದಲ್ಲೇ ಮಾಡಬೇಕು! ಹಾಗೆ ಸಕಾಲದಲ್ಲಿ ಸರಿಯಾಗಿ ಗೆರೆ ಎಳೆದರೆ ಓದಿ ಅರ್ಥ ಗ್ರಹಿಸಿದನೆಂದು ಗೊತ್ತಾಗುತ್ತದೆ. ಆಗ ಅವನಿಗೆ ಪೂರ್ಣ ಅಂಕಿ ಬರುವುದು. ಇಲ್ಲಿ ಪರೀಕ್ಷಿಸುವುದು ಅವನ ಓದುವ ವೇಗವನ್ನೂ ಅರ್ಥ ಗ್ರಹಣದ ಶಕ್ತಿಯನ್ನೂ ಮಾತ್ರ.

**೨. ವಾಕ್ಯರಚನೆಯ ಪರೀಕ್ಷೆ:** ನೂತನ ಪರೀಕ್ಷಾ ಕ್ರಮದಲ್ಲೂ ಪ್ರಬಂಧವನ್ನು ಉತ್ತರವಾಗಿ ಬಯಸುವ ಒಂದೆರಡು ಪ್ರಶ್ನೆಗಳನ್ನು ಸೇರಿಸುವುದು ಉತ್ತಮವೆಂದು ಹಿಂದೆ ತಿಳಿಸಿದೆ. ಅಂಥ ಪ್ರಬಂಧಗಳನ್ನು ನೂತನ ರೀತಿಯಲ್ಲಿ ಅಳೆಯುವ ಸಾಧನವೂ ರೂಪುಗೊಂಡಿದೆ. ಯಾವ ಪ್ರಬಂಧವೇ ಆಗಲಿ ಕಾಗುಣಿತ ದೋಷವಿಲ್ಲದೆ, ಚಿಹ್ನೆಗಳ ಔಚಿತ್ಯವಿದ್ದು, ವಾಕ್ಯಬೃಂದದ ವಿಂಗಡನೆಯಾಗಿ, ವ್ಯಾಕರಣ ಸಮ್ಮತವಾಗಿ ರಚನೆಗೊಂಡಿದ್ದರೆ ಒಳ್ಳೆಯದೆನ್ನುತ್ತೇವೆ. ಜೊತೆಗೆ ಸಾಹಿತ್ಯದ ವಿಷಯವೂ ಗಮನವನ್ನು ಸೆಳೆಯುತ್ತದೆ. ನಿರ್ದಿಷ್ಟವಾದ ವಿಷಯಜ್ಞಾನ, ಅದರ ಜೋಡಣೆಯ ಔಚಿತ್ಯ, ಶೈಲಿಯ ಸೊಗಸು—ಇವೆಲ್ಲವೂ ಗಣನೆಗೆ ಬರುತ್ತವೆ. ಪ್ರಬಂಧವನ್ನು ಒಟ್ಟಿಗೆ ಪರೀಕ್ಷಿಸಿ ಅಂಕಿಗಳನ್ನು ಕೊಡುವುದರ ಬದಲು ನೂತನ ಪರೀಕ್ಷೆ ಮೇಲಿನ ಎಲ್ಲ ಅಂಶಗಳನ್ನೂ ಬೇರೆ ಬೇರೆಯಾಗಿ ತೂಗಿನೋಡಿ ಅವುಗಳ ಸಂಯುಕ್ತ ಪರಿಶೀಲನೆಯ ಫಲವಾಗಿ ಪ್ರಬಂಧದ ಯೋಗ್ಯತೆಯನ್ನು ನಿಷ್ಕರ್ಷಿಸಲು ಯತ್ನಿಸುತ್ತದೆ. ಮೇಲಿನ ಅಂಶಗಳಲ್ಲಿ ಮುಖ್ಯವಾದ ವ್ಯಾಕರಣಾಂಶ, ಕಾಗುಣಿತ ಜ್ಞಾನ, ವಾಕ್ಯಗಳ ರಚನೆ ಮತ್ತು ಬರವಣಿಗೆ—ಇವುಗಳನ್ನು ಪ್ರತ್ಯೇಕವಾಗಿ ಪರೀಕ್ಷಿಸಲು ಶಾಸ್ತ್ರೀಯ ರೀತಿಯ ಕ್ರಮಗಳು ಏರ್ಪಟ್ಟಿವೆ. ಆದರೆ ಸಾಹಿತ್ಯ ಭಾಗವನ್ನು ಯಾಂತ್ರಿಕವಾಗಿ ಪರೀಕ್ಷೆ ಮಾಡುವುದು ಕಷ್ಟ. ಆದರೂ ಅದನ್ನೂ ಅಳೆಯಲು ಹಲವು ಕ್ರಮಗಳು ಆರಂಭವಾಗಿವೆ. ಪ್ರಬಂಧಕ್ಕೆ ಒಟ್ಟಿನಲ್ಲಿ ಇಷ್ಟು ಅಂಕಿಯೆಂದು ಕೊಡುವುದರ ಬದಲು ಮೇಲಿನ ಬೇರೆ ಬೇರೆ ಅಂಶಗಳಿಗೆ ಇಷ್ಟಿಷ್ಟೆಂದು ಪ್ರತ್ಯೇಕವಾಗಿ ಅಂಕಿಗಳನ್ನು ಕೊಟ್ಟು, ಅವುಗಳ ಸಂಯುಕ್ತ ಪರಿಶೀಲನೆಯ ಆಧಾರದ ಮೇಲೆ ಪ್ರಬಂಧದ ಯೋಗ್ಯತೆಯನ್ನು ನಿಷ್ಕರ್ಷಿಸುವುದು ಹೆಚ್ಚು ಶಾಸ್ತ್ರೀಯವೆಂದು ಹಲವರು ಹೇಳುವರು.

ಆದರೂ ಇಡೀ ಪ್ರಬಂಧವನ್ನೇ ಸಮಗ್ರ ದೃಷ್ಟಿಯಿಂದ ನೋಡುವುದೂ ಅಗತ್ಯ. ಆ ದೃಷ್ಟಿಯಿಂದಲೂ ಪ್ರಬಂಧವನ್ನು ಪರೀಕ್ಷಿಸುವ ಕ್ರಮವೂ ಆರಂಭವಾಗಿದೆ. ಒಂದು ಮಾದರಿ ಪ್ರಬಂಧವನ್ನು ಮುಂದಿಟ್ಟುಕೊಂಡು ನಿಯಮಿತ ಕಾಲದಲ್ಲಿ ಆ ಮಟ್ಟದ ವಿದ್ಯಾರ್ಥಿಗಳು ಬರೆಯುವ ಪ್ರಬಂಧಗಳನ್ನು ಹೋಲಿಸಿ ಪರೀಕ್ಷಿಸಿ ಅವುಗಳ ಬೆಲೆಯನ್ನು ಕಟ್ಟುವ ಕಾರ್ಯ ಸಿರಿಲ್ ಬರ್ಟ್ ಮುಂತಾದವರಿಂದ ಆರಂಭವಾಗಿದೆ. ಆದರೆ ನೂತನ ರೀತಿಯಲ್ಲಿ ಪ್ರಬಂಧವನ್ನು ಪರೀಕ್ಷಿಸುವುದು ಇನ್ನೂ ಪ್ರಯೋಗಾವಸ್ಥೆಯಲ್ಲೇ ಇದೆ.

**ಬುದ್ಧಿಶಕ್ತಿಯ ಪರೀಕ್ಷೆ:** ಇದುವರೆಗೂ ವಿವರಿಸಿದ ಪರೀಕ್ಷೆಗಳು ಮಕ್ಕಳು ಶಾಲೆಯಲ್ಲಿ ಬೇರೆ ಬೇರೆ ವಿಷಯಗಳಲ್ಲಿ ಪಡೆದಿರುವ ಶಿಕ್ಷಣಾಭಿವೃದ್ಧಿಯನ್ನು ಪರೀಕ್ಷಿಸುವುದಕ್ಕಾಗಿ. ಹಾಗೆಯೇ ಅವರ ಬುದ್ಧಿಶಕ್ತಿಯನ್ನು ಅಳೆಯುವುದಕ್ಕೂ ಪರೀಕ್ಷಾ ಕ್ರಮಗಳು ಏರ್ಪಟ್ಟಿರುವುವು. ನಮ್ಮಲ್ಲಿ ಬಲು ಹಿಂದಿನಿಂದಲೂ ಪ್ರಚಾರದಲ್ಲಿರುವ, ಒಗಟೆಯನ್ನು ಒಡೆಸುವ, ಸಮಸ್ಯೆಗಳನ್ನು ಬಿಡಿಸುವ, ಮತ್ತು ಇನ್ನಿತರ ಚತುರತೆಯನ್ನು ಪರೀಕ್ಷಿಸುವ ಸಂದರ್ಭಗಳು ಬುದ್ಧಿಶಕ್ತಿಯ ಪರೀಕ್ಷೆಗಳೇ. ಆದರೆ ಅವು ವೈಜ್ಞಾನಿಕ ರೀತಿಯಲ್ಲಿ ನಡೆಯುತ್ತಿರಲಿಲ್ಲ. ಆ ಒಗಟೆಗಳನ್ನೂ ಸಮಸ್ಯೆಗಳನ್ನೂ ಒಬ್ಬರು ಒಮ್ಮೆ ಬಿಡಿಸಿದರೆಂದರೆ ದಡ್ಡರಾದರೂ ಯಾಂತ್ರಿಕವಾಗಿ ಅನಂತರ ಬಿಡಿಸಿಬಿಡಬಲ್ಲರು. ಆದರೂ ಅವುಗಳ ಮೂಲ ಉದ್ದೇಶ ಬುದ್ಧಿಶಕ್ತಿಯ ಪರೀಕ್ಷೆಯೆಂಬುದರಲ್ಲಿ ಯಾವ ಅನುಮಾನವೂ ಇಲ್ಲ. ಮಾನವನ ಬುದ್ಧಿಶಕ್ತಿಯ ಸ್ವರೂಪವನ್ನು ಅರಿತು, ಅದಕ್ಕೆ ಸಂಬಂಧಿಸಿದ ಶಕ್ತಿ ಸಾಮರ್ಥ್ಯಗಳನ್ನು ಶಾಸ್ತ್ರೀಯವಾಗಿ ಅಳೆಯಬಹುದಾದ ನೂತನ ಪರೀಕ್ಷಾ ಕ್ರಮಗಳು ಕಾಲು ಶತಮಾನದಿಂದೀಚೆಗೆ ರೂಪುಗೊಂಡಿವೆ.

'ಬುದ್ಧಿಶಕ್ತಿ' ಏನೆಂದು ನಿರ್ದಿಷ್ಟವಾಗಿ ಹೇಳುವುದು ಕಷ್ಟ. ಆದರೆ ಕಲಿಯುವ ಶಕ್ತಿಯನ್ನು ಸ್ಥೂಲವಾಗಿ ಬುದ್ಧಿಶಕ್ತಿಯೆಂದು ಇಟ್ಟುಕೊಳ್ಳಬಹುದು. ಈ ಕಲಿವಿನ ಶಕ್ತಿಯನ್ನು ಅಳೆಯಲು ನೆರವಾಗುವ ಸಾಧನವನ್ನೇ ಬುದ್ಧಿಶಕ್ತಿಯ ಪರೀಕ್ಷೆಗಳೆಂದು ಕರೆಯುವುದು. ಈ ಪರೀಕ್ಷೆಗಳು ಯಾವ ಯಾವ ಮನಶ್ಶಕ್ತಿಗಳನ್ನು ಅಳೆಯುವುವೋ ಅವುಗಳ ಪರಿಚಯವನ್ನು ಮಾಡಿಕೊಂಡರೆ ಬುದ್ಧಿಶಕ್ತಿಯ ಸ್ವರೂಪವನ್ನು ಗ್ರಹಿಸಿದಂತಾಗುತ್ತದೆ.

ಕಲಿವು ಕಡಮೆಯಾಗಿದ್ದರೆ ಆ ವ್ಯಕ್ತಿಯ ಬುದ್ಧಿಶಕ್ತಿಯೂ ಕಡಮೆಯೆಂದು ನಮ್ಮ ಹಿಂದಿನವರು ನಂಬಿದ್ದರು. ಆದರೆ ಮಕ್ಕಳ ಕಲಿವು ಅವರ ಬುದ್ಧಿ ಶಕ್ತಿಯನ್ನೇ ಪೂರ್ಣವಾಗಿ ಅವಲಂಬಿಸುವಂತಿಲ್ಲ. ಅವರು ವಾಸಿಸುತ್ತಿರುವ ಮನೆಯ ವಾತಾವರಣ, ಶಾಲೆಯ ಹಾಜರಾತಿ, ಅವನಿಗೆ ಕಲಿವಿನಲ್ಲಿರುವ ಆಸಕ್ತಿ, ಉಪಾಧ್ಯಾಯರ ಬೋಧನಕ್ರಮ—ಈ ಸನ್ನಿವೇಶಗಳೂ ಶಿಕ್ಷಣಾಭಿ ವೃದ್ಧಿಯ ಮಟ್ಟವನ್ನು ನಿರ್ಧರಿಸುತ್ತವೆ. ಎಂದಮೇಲೆ ಶಿಕ್ಷಣಾಭಿವೃದ್ಧಿಯ ಅಳತೆಯೇ ಬುದ್ಧಿಶಕ್ತಿಯ ಸಮರ್ಪಕವಾದ ಅಳತೆಯಾಗಲಾರದು.

ಹಿಂದೆ ವ್ಯಕ್ತಿಯ ಮುಖಚರ್ಯೆಯಿಂದ ಅವನ ಬುದ್ಧಿಶಕ್ತಿಯನ್ನು ಅಳೆಯುತ್ತಿದ್ದರು. ಅನಂತರ ತಲೆಬುರುಡೆಯ ಗಾತ್ರದ ಆಧಾರದ ಮೇಲೆ ಬುದ್ಧಿಶಕ್ತಿಯನ್ನು ನಿಷ್ಕರ್ಷಿಸುತ್ತಿದ್ದರು. 'ಬುರುಡೆ ದಪ್ಪಗಿದ್ದರೆ ಮೆದುಳು ದಪ್ಪಗಿರುತ್ತದೆ; ಮೆದುಳು ದಪ್ಪಗಿದ್ದರೆ ಬುದ್ಧಿಶಕ್ತಿಯೂ ಹೆಚ್ಚಾಗಿರಬೇಕು' ಎಂಬುದೇ ಅವರ ತರ್ಕ. ೧೯ನೆಯ ಶತಮಾನದ ಮಧ್ಯಕಾಲದವರೆಗೂ ಇದು ಬಳಕೆಯಲ್ಲಿತ್ತು. ಆದರೆ ಈ ಶತಮಾನದ ಆದಿಯಲ್ಲಿ ಕಾರ್ಲ್ ಪಿಯರ್ಸನ್ ಎಂಬುವನು ತಲೆಯ ಆಕಾರಕ್ಕೂ ಬುದ್ಧಿಶಕ್ತಿಗೂ ಯಾವ ಸಂಬಂಧವೂ ಇಲ್ಲವೆಂದು ಪ್ರಯೋಗಗಳಿಂದ ತೋರಿಸಿಕೊಟ್ಟನು. ಅಂದಿನಿಂದ ಹೊರ ಗಣ ದೈಹಿಕ ತೋರಿಕೆಯಿಂದ ಬುದ್ಧಿಶಕ್ತಿಯನ್ನು ಅಳೆಯುವ ಸಂಪ್ರದಾಯ ನಿಂತಿದೆ.

ಅನಂತರ ಇಂದ್ರಿಯ ಪಟುತ್ವದ ಆಧಾರದಮೇಲೆ ಬುದ್ಧಿಶಕ್ತಿಯನ್ನು ಅಳೆಯಲು ಆರಂಭಿಸಿದರು. ವಾಸನೆ, ರುಚಿ, ಶ್ರವಣ, ಸ್ಪರ್ಶ, ದರ್ಶನ ಮುಂತಾದ ಜ್ಞಾನಗಳ ಪಟುತ್ವವನ್ನು ಪರಿಶೀಲಿಸಿ ಅದರ ಆಧಾರದಮೇಲೆ ವ್ಯಕ್ತಿಯ ಬುದ್ಧಿಶಕ್ತಿಯನ್ನು ಪರಿಶೀಲಿಸುತ್ತಿದ್ದರು. ಆಮೇಲೆ, ವ್ಯಕ್ತಿ ಯಾವುದಾದರೂ ಒಂದು ಕ್ರಿಯೆಗೆ ಎಷ್ಟು ಜಾಗ್ರತೆಯಾಗಿ ಪ್ರತಿಕ್ರಿಯೆ ನಡಸು ವನೋ ಅಷ್ಟು ಹೆಚ್ಚುಬುದ್ಧಿಶಕ್ತಿ ಇರುವುದೆಂದು ಅರಿತು, ಆ ಮೂಲಕ ಅದನ್ನು ನಿರ್ಧರಿಸುವುದೂ ಆರಂಭವಾಯಿತು. ಪ್ರತಿಕ್ರಿಯಾವೇಗ ಬುದ್ಧಿ ಶಕ್ತಿಯನ್ನು ಸೂಚಿಸುತ್ತದೆಂದುಕೊಂಡು ಅದನ್ನು ಬಗೆಬಗೆಯ ಸಾಧನ ಗಳಿಂದ ಅಳೆಯಲು ಮೊದಲು ಮಾಡಿದರು. ಅವುಗಳಲ್ಲಿ ಮೆಕ್ಡೂಗಲ್‌ರವರ 'ಗುರುತಿಸುವ ಯಂತ್ರ' ಮುಖ್ಯವಾದ್ದು. ವ್ಯಕ್ತಿಯ ಪ್ರತಿಕ್ರಿಯಾವೇಗದ

ಜೊತೆಗೆ ಅವಧಾನ ಶಕ್ತಿಯನ್ನೂ ಗಣನೆಗೆ ತೆಗೆದುಕೊಂಡು ಈ ಯಂತ್ರ ನಿರ್ಮಾಣವಾಗಿದೆ. ಎಂದರೆ, ವ್ಯಕ್ತಿಯ ಕ್ರಿಯೆ ಮತ್ತು ಜ್ಞಾನ—ಇವೆರಡು ಶಕ್ತಿಗಳನ್ನೂ ಆ ಮೂಲಕ ಪರೀಕ್ಷಿಸಲಾಗುತ್ತದೆ. ಆ ಯಂತ್ರದಲ್ಲಿ ಅನೇಕ ಚೌಕಟ್ಟಿನ ಮನೆಗಳಿವೆ; ಅವುಗಳಲ್ಲಿ ಯಾವ ಮನೆಯ ಮೇಲೆ ಬೇಕಾದರೂ ವಿದ್ಯುಚ್ಛಕ್ತಿಯ ಬೆಳಕನ್ನು ಬಿಟ್ಟು ಸೂಚಿಸುವ ಅವಕಾಶ ಇದೆ. ಮೊದಲು ಒಂದು ಮನೆಯ ಮೇಲೆ ಬೆಳಕು ಬೀಳಿಸುವರು; ತಕ್ಷಣ ವ್ಯಕ್ತಿ ಅದನ್ನು ನೋಡಿ ಆ ಮನೆಯ ಮೇಲೆ ಬೆರಳಿಟ್ಟು ಕುಟ್ಟಬೇಕು. ಹೀಗೆ ಬೇರೆ ಬೇರೆ ಮನೆಗಳ ಮೇಲೆ ವೇಗವಾಗಿ ಬೆಳಕನ್ನು ಹಾಯಿಸುವಾಗ ಆ ಮನೆಗಳ ಕಡೆ ಅವಧಾನವನ್ನಿರಿಸಿ, ಗುರುತಿಸಿ, ಹಾಗೆಯೇ ಕುಟ್ಟುತ್ತಾ ಹೋಗಬೇಕು. ಸೂಚನೆಯನ್ನು ನೋಡಿಕೊಂಡು, ಅರಿತು, ಅದರಂತೆ ವರ್ತಿಸಬೇಕಾಗಿರುವುದರಿಂದ ಆಗ ವ್ಯಕ್ತಿಯ ಉನ್ನತ ಮನಶ್ಶಕ್ತಿಗಳು ಕಾರ್ಯರೂಪಕ್ಕೆ ಬರುತ್ತವೆ. ಅವನು ತಪ್ಪಿಲ್ಲದೆ ಎಷ್ಟು ಜಾಗ್ರತೆ ಸೂಚನೆಯಂತೆ ವರ್ತಿಸುವನೋ ಅಷ್ಟೂ ಅವನ ಬುದ್ಧಿಶಕ್ತಿ ಹೆಚ್ಚಿನದು.

ಈ ಸಂಶೋಧನೆಯ ಆಧಾರದಮೇಲೆ ಮನಸ್ಸಿನ ಇತರ ಉನ್ನತ ಶಕ್ತಿಗಳನ್ನು ಅಳೆಯುವುದಕ್ಕೂ ಸಾಧನಗಳು ಏರ್ಪಟ್ಟುವು. ಯಾವುದಾದರೂ ಒಂದು ಪದವನ್ನು ಕೊಟ್ಟು ಅದಕ್ಕೆ ಅಭಿಮುಖವಾದ ಇನ್ನೊಂದು ಪದವನ್ನು ಕೇಳುವುದು (ಅಭಿಮುಖ ಪರೀಕ್ಷೆ) ಆರಂಭವಾಯಿತು; ಹಾಗೆಯೇ ಹೋಲಿಕೆಯ, ವಿವೇಚನೆಯ, ಸಂಬಂಧ ಕಲ್ಪನೆಯ, ಕಾರ್ಯಕಾರಣ ಜ್ಞಾನದ ಪರೀಕ್ಷೆಗಳೂ ಆರಂಭವಾದುವು. ಈ ಪರೀಕ್ಷೆಗಳನ್ನು ನಡಸಿ ಬುದ್ಧಿಶಕ್ತಿಯನ್ನು ಅಳೆಯುತ್ತ ಹೋದಂತೆ, ಬುದ್ಧಿಶಕ್ತಿಯನ್ನು ಅಳೆಯಲು ಅವು ಒಳ್ಳೆಯ ಸಾಧನಗಳೆಂದು ಗೊತ್ತಾಯಿತು. ಅದರಲ್ಲೂ ಕಾರ್ಯ ಕಾರಣ ಪರೀಕ್ಷೆ ಅತ್ಯಂತ ನಿರ್ದಿಷ್ಟವಾಗಿ ವ್ಯಕ್ತಿಯ ಮನಶ್ಶಕ್ತಿಯನ್ನು ಅಳೆಯಬಲ್ಲದೆಂದು ಸ್ಥಿರಪಡುತ್ತ ಬಂತು. ಎಂದರೆ, ಯಾವ ಪರೀಕ್ಷೆಯಲ್ಲಿ ಮೇಲ್ತರದ ಮನಶ್ಶಕ್ತಿಗಳು ಕಾರ್ಯಮುಖವಾಗಿ ವ್ಯಾಪಾರ ನಡಸಬೇಕಾಗುತ್ತದೋ ಅಂಥ ಪರೀಕ್ಷೆಗಳಿಂದ ಬುದ್ಧಿಶಕ್ತಿಯನ್ನು ಅಳೆಯಬೇಕೆಂದು ಅರಿವಾಯಿತು; ಅಂಥ ಬಗೆಬಗೆಯ ಪರೀಕ್ಷೆಗಳಿಂದ ವ್ಯಕ್ತಿಯ ಬುದ್ಧಿಶಕ್ತಿಯನ್ನು ಅಳೆಯುವುದರಿಂದ ಹೆಚ್ಚು ನಂಬಲರ್ಹವಾದ ಫಲಿತಾಂಶ ದೊರಕುವುದೆಂಬುದೂ ಪರಿಶೋಧನೆ ನಡೆದಂತೆ ದೃಢಪಡುತ್ತ ಬಂತು.

**ಬುದ್ಧಿಶಕ್ತಿಯ ಪರೀಕ್ಷೆಗಳ ಜನಕ:** ಆಲ್ಫ್ರೆಡ್ ಬೀನೆ ಎಂಬ ಫ್ರೆಂಚ್ ಶಿಕ್ಷಣಾಧಿಕಾರಿ ತನ್ನ ದೇಶದ ಪ್ರಾಥಮಿಕ ಶಾಲೆಗಳಲ್ಲಿ ದುರ್ಬಲ ಬುದ್ಧಿಶಕ್ತಿಯ ಮಕ್ಕಳನ್ನು ಆರಿಸಲು ಒಂದು ರೀತಿಯ ಪ್ರಶ್ನಾವಳಿಯನ್ನು ಏರ್ಪಡಿಸಿದನು. ಅವು ಮಕ್ಕಳ ಉನ್ನತ ಮನಶ್ಶಕ್ತಿಗಳನ್ನು ಅಳೆಯುವಂತೆ ರೂಪುಗೊಂಡಿದ್ದುವು. ಆದರಿಂದ ಯಾವ ಮಕ್ಕಳ ಬುದ್ಧಿಶಕ್ತಿ ಕಡಮೆಯಿದೆಯೋ ಅವರು ಪಾಠಶಾಲೆಯ ಶಿಕ್ಷಣಾಭಿವೃದ್ಧಿಯಲ್ಲೂ ಹಿಂದುಳಿದಿರುವರೆಂದು ಸ್ಥಿರಪಟ್ಟಿತು. ಅವನ ಈ ಪರೀಕ್ಷೆಗಳ ಪ್ರಥಮ ಉದ್ದೇಶ ಕೇವಲ ಹಿಂದುಳಿದ ಮಕ್ಕಳ ಮನಶ್ಶಕ್ತಿಯನ್ನು ಅಳೆಯುವುದೇ ಆಗಿದ್ದರೂ, ಕ್ರಮ ಕ್ರಮವಾಗಿ ಸಾಧಾರಣ ಮಕ್ಕಳ ಮನಶ್ಶಕ್ತಿಯನ್ನೂ ಅಳೆಯಲು ಅವನ್ನು ಮಾರ್ಪಡಿಸಿಕೊಂಡು ೫ರಿಂದ ೧೪ ವರ್ಷದ ಬಾಲಕರಿಗೆ ಅನುಕೂಲಿಸುವಂತೆ ಪ್ರಶ್ನಾವಳಿಗಳನ್ನು ತಯಾರಿಸಿದನು. ಒಂದೊಂದು ತರಗತಿಗೆ ಗೊತ್ತಾದ ಪ್ರಶ್ನಾವಳಿಯಲ್ಲೂ ೫ ಪ್ರಶ್ನೆಗಳಿದ್ದುವು. ೫ ವರ್ಷದ ಸಾಧಾರಣ ಬಾಲಕನೊಬ್ಬ ಪ್ರಶ್ನಾವಳಿಯ ಆ ೫ ಪ್ರಶ್ನೆಗಳನ್ನೂ ಉತ್ತರಿಸಿದರೆ ಆ ಪ್ರಶ್ನಾವಳಿಯನ್ನು ಆ ವಯಸ್ಸಿನ ಬಾಲಕರಿಗೆಂದು ಗೊತ್ತುಪಡಿಸಿದನು. ಹೀಗೆಯೇ ಇತರ ವಯಸ್ಸಿನವರಿಗೂ ಪ್ರಶ್ನಾವಳಿಯನ್ನು ಸಿದ್ಧಪಡಿಸಿದನು. ೮ ವರ್ಷದ ಬಾಲಕನೊಬ್ಬನು ಆ ತರಗತಿಗೆ ನಿಯಮಿತವಾದ ೫ ಪ್ರಶ್ನೆಗಳನ್ನೂ ಉತ್ತರಿಸಿದರೆ ಆ ಬಾಲಕನ ಮನಶ್ಶಕ್ತಿ ಸಾಧಾರಣವಾದ್ದೆಂದು ನಿಷ್ಕರ್ಷಿಸಿ, ಅವನು ಬುದ್ಧಿಶಕ್ತಿಯಲ್ಲೂ ೮ ವರ್ಷವೆಂದು ಅಳೆಯುವ ಕ್ರಮವನ್ನು ಆರಂಭಿಸಿದನು. ಸಾಧಾರಣ ಬುದ್ಧಿಶಕ್ತಿಯವರಂತೆ ದುರ್ಬಲ ಶಕ್ತಿಯವರೂ ಉನ್ನತ ಶಕ್ತಿಯವರೂ ತರಗತಿಯಲ್ಲಿ ಇರುತ್ತಾರೆ. ಅವರ ಬುದ್ಧಿಶಕ್ತಿಯನ್ನು ಅದೇ ಪ್ರಶ್ನಾವಳಿಯಿಂದ ಅಳೆಯಲೂ ಆ ಮೂಲಕವೆ ದಾರಿ ಕಂಡುಕೊಂಡನು. ಎಂಟು ವರ್ಷದ ಬಾಲಕನೊಬ್ಬ ಆ ವರ್ಷದವರಿಗೆ ಗೊತ್ತಾದ ಪ್ರಶ್ನಾವಳಿಯ ೫ ಪ್ರಶ್ನೆಗಳನ್ನೂ ಉತ್ತರಿಸದಿದ್ದರೆ ಅಂಥವನ ಮನಶ್ಶಕ್ತಿ ೮ ವರ್ಷಕ್ಕಿಂತ ಕಡಮೆ. ಆಗ ೭ ವರ್ಷದವರಿಗೆ ಗೊತ್ತಾದ ಪ್ರಶ್ನಾವಳಿಯನ್ನು ಕೊಡುವುದು; ಅದನ್ನು ಪೂರ್ಣವಾಗಿ ಉತ್ತರಿಸಿದರೆ ಅವನ ಮನಶ್ಶಕ್ತಿ ೭ ವರ್ಷ. ನಿಜವಾಗಿ ಅವನ ವಯಸ್ಸು ಎಂಟಾಗಿದ್ದರೂ ಬುದ್ಧಿಶಕ್ತಿ ಏಳು ವರ್ಷ ಮಾತ್ರ. ಎಂದರೆ, ಅವನ ಬುದ್ಧಿಶಕ್ತಿ ಸಾಧಾರಣ ಮಟ್ಟಕ್ಕಿಂತ

ಕಡಮೆ. ಅದೇ ವಯಸ್ಸಿನ ಇನ್ನೊಬ್ಬನು ಎಂಟು ವರ್ಷದವರಿಗೆ ಗೊತ್ತಾದ ಪ್ರಶ್ನಾವಳಿಯನ್ನೆಲ್ಲ ಉತ್ತರಿಸಿ, ಜೊತೆಗೆ ೯ ವರ್ಷದವರಿಗೆ ಗೊತ್ತಾದವನ್ನೂ ಉತ್ತರಿಸಬಲ್ಲನಾದರೆ ಅವನ ಬುದ್ಧಿಶಕ್ತಿ ಸಾಧಾರಣ ಮಟ್ಟಕ್ಕಿಂತ ಹೆಚ್ಚಿನದು: ಎಂದರೆ ಅವನು ಬುದ್ಧಿಶಕ್ತಿಯಲ್ಲಿ ೯ ವರ್ಷ. ಅವನ ನಿಜವಾದ ವಯಸ್ಸು ಎಂಟೇ ಆದರೂ ಬುದ್ಧಿಶಕ್ತಿ ಒಂಬತ್ತು. ಅವನು ೮ ವರ್ಷದವರಿಗೆ ಗೊತ್ತಾದ ಎಲ್ಲ ಪ್ರಶ್ನೆಯನ್ನೂ ಒಂಬತ್ತು ವರ್ಷದವರಿಗೆ ಗೊತ್ತಾದ ಎರಡು ಪ್ರಶ್ನೆಗಳನ್ನೂ ಉತ್ತರಿಸಿದರೆ ಅವನ ಬುದ್ಧಿಶಕ್ತಿಯ ವಯಸ್ಸು ೮+·೪=೮.೪ ವರ್ಷಗಳು.

ಹೀಗೆ ಎಲ್ಲ ಮಟ್ಟದ ಬುದ್ಧಿಶಕ್ತಿಯನ್ನೂ ಅಳೆಯಲು ಅನುಕೂಲಿಸುವಂಥ ಸಾಧನವೊಂದನ್ನು ಬೀನೆ ಮೊದಲು ಪ್ರಚಾರಕ್ಕೆ ತಂದನು. ಮನಶ್ಶಾಸ್ತ್ರಜ್ಞರು ಮಕ್ಕಳ ಮನಸ್ಸನ್ನು ಅಳೆಯಲು ಅದನ್ನೇ ಉಪಯೋಗಿಸಲಾರಂಭಿಸಿದರು. ಅಮೆರಿಕದಲ್ಲೂ ಇಂಗ್ಲೆಂಡಿನಲ್ಲೂ ಈ ಸಾಧನ ಪ್ರಚಾರಕ್ಕೆ ಬಂತು. ಗಾಡಾರ್ಡ್, ಟರ್ಮನ್ ಮುಂತಾದವರು ಅಮೆರಿಕದಲ್ಲೂ, ಸಿರಿಲ್ ಬರ್ಟ್ ಮೊದಲಾದವರು ಇಂಗ್ಲೆಂಡಿನಲ್ಲೂ ಬೀನೆಯ ಪ್ರಶ್ನಾವಳಿಗಳನ್ನು ತಮ್ಮ ತಮ್ಮ ನಾಡಿನ ಸನ್ನಿವೇಶಗಳಿಗೆ ಮಾರ್ಪಡಿಸಿಕೊಂಡು ಶಾಲೆಯ ಮಕ್ಕಳ ಬುದ್ಧಿಶಕ್ತಿಯನ್ನು ಆ ಮೂಲಕ ಅಳೆಯಲು ಅವಕಾಶ ಮಾಡಿಕೊಟ್ಟರು. ಕಾಲ ಕಳೆದಂತೆ ಅವು ಪರಿಷ್ಕರಣಗೊಳ್ಳುತ್ತ ಬಂದು ಮಕ್ಕಳ ಬುದ್ಧಿಶಕ್ತಿಯನ್ನು ಹೆಚ್ಚು ಸಮರ್ಪಕವಾಗಿ ಅಳೆಯಲನುಕೂಲಿಸುವಂಥ ವಿಜ್ಞಾನರೀತಿಯ ಅಳತೆಯ ಸಾಧನ ರೂಪುಗೊಂಡಿತು.

ಬರ್ಟರ 'ಲಂಡನ್ ಪರಿಷ್ಕೃತ ಪ್ರಶ್ನಾವಳಿ'ಗಳು ೧೬ ವರ್ಷದವರೆಗಿನ ಬಾಲಕರಿಗೂ ಅನ್ವಯಿಸುವಂತೆ ರೂಪುಗೊಂಡಿವೆ. ಒಂದೊಂದು ವರ್ಷದವರಿಗೂ ಐದು ಪ್ರಶ್ನೆಗಳು. ಒಬ್ಬ ಬಾಲಕನು ತನ್ನ ವಯಸ್ಸಿನ ಎಲ್ಲ ಪ್ರಶ್ನೆಗಳನ್ನೂ ಉತ್ತರಿಸಿ, ಮೇಲಿನ ವರ್ಷದ ಕೆಲವನ್ನೂ ಉತ್ತರಿಸಿದರೆ ಅವನ ಬುದ್ಧಿಶಕ್ತಿಯನ್ನು ಬೇಗ ಗುರುತು ಹಚ್ಚಲು ಒಂದು ಕೋಷ್ಟಕವನ್ನು ಕೊಟ್ಟಿರುವರು. ಹಾಗೆಯೇ ಸಾಧಾರಣರಿಗಿಂತ ಕಡಮೆ ಬುದ್ಧಿಯವರನ್ನೂ ಅಳೆಯಲು ಅದು ಸಹಾಯವಾಗುತ್ತದೆ.

**ಮನಶ್ಶಕ್ತಿಯ ಮಟ್ಟ:** ಮೇಲಿನ ಈ ಪರೀಕ್ಷೆಗಳು ವೈಯಕ್ತಿಕ ಪರೀಕ್ಷೆಗಳು; ಒಬ್ಬೊಬ್ಬರನ್ನೂ ಒಂದೊಂದು ಸಲ ಪ್ರತ್ಯೇಕವಾಗಿ ಪರೀಕ್ಷಿಸ

ಬೇಕು. ಒಂದೊಂದು ಪ್ರಶ್ನಾವಳಿಯೂ ಒಂದು ವಯಸ್ಸಿನ ಬಾಲಕರಿಗೆಂದು ನಿರ್ಮಿತವಾಗಿರುವುದರಿಂದ, ಒಬ್ಬ ಬಾಲಕನನ್ನು ಪರೀಕ್ಷಿಸಿ ಅವನ ಬುದ್ಧಿ ಶಕ್ತಿ ಸಾಧಾರಣ ಬಾಲಕನಿಗಿಂತ ಎಷ್ಟು ಹೆಚ್ಚು, ಎಷ್ಟು ಕಡಮೆ ಎಂಬು ದನ್ನು ನಿರ್ಧರಿಸಬಹುದು. ೧೦ ವರ್ಷದ ಒಬ್ಬನನ್ನು ಪರೀಕ್ಷಿಸಿದೆವೆಂದು ಇಟ್ಟುಕೊಳ್ಳುವ. ಆಗ ಅವನ ಬುದ್ಧಿಶಕ್ತಿ ೭.೫ ವರ್ಷವೆಂದು ದೃಢಪಟ್ಟರೆ ಅವನು ಸಾಧಾರಣ ಬಾಲಕನಿಗಿಂತ ಕಡಮೆ ಶಕ್ತಿಯುಳ್ಳವನು. ಆಗ ಅವನ ನಿಜವಾದ ವಯಸ್ಸಿಗೂ ಬುದ್ಧಿಶಕ್ತಿಯ ವಯಸ್ಸಿಗೂ ಇರುವ ಪ್ರಮಾಣ ವನ್ನು ಕಂಡುಹಿಡಿದು ಅದನ್ನು ೧೦೦ರಿಂದ ಗುಣಿಸಿದರೆ ಬರುವ ಗುಣಲಬ್ಧ ವನ್ನು ಆ ಬಾಲಕನ ಬುದ್ಧಿಶಕ್ತಿಯ ಮಟ್ಟವೆಂದು ಕರೆಯುವುದು ವಾಡಿಕೆ ಯಲ್ಲಿದೆ. ಮೇಲಿನ ಉದಾಹರಣೆಯನ್ನೇ ತೆಗೆದುಕೊಂಡರೆ, ಅವನ

ಬುದ್ಧಿಶಕ್ತಿಯ ವಯಸ್ಸು ಅಥವಾ (M.A.) = ೭.೫

ನಿಜವಾದ ವಯಸ್ಸು ಅಥವಾ (C.A.) = ೧೦

$$\therefore \text{ಅವುಗಳ ಪ್ರಮಾಣ} = \frac{೭.೫}{೧೦} = \frac{M.A.}{C.A.}$$

$$\text{೧೦೦ರಿಂದ ಅದನ್ನು ಗುಣಿಸಿದಾಗ, } \frac{೭.೫}{೧೦} \times \frac{೧೦೦}{೧} = \frac{M.A.}{C.A.} \times \frac{೧೦೦}{೧} = 1.Q.$$

$$\therefore \text{ಅವನ ಬುದ್ಧಿಶಕ್ತಿಯ ಮಟ್ಟ} = 1.Q. = ೭೫$$

ಎಂದರೆ ಆ ಬಾಲಕನ ನಿಜವಾದ ವಯಸ್ಸು ೧೦ ವರ್ಷವಾದರೂ ಬುದ್ಧಿಶಕ್ತಿ ೭.೫ ವರ್ಷ ಮಾತ್ರ. ಅದರಿಂದ ಅವನ ಬುದ್ಧಿಶಕ್ತಿಯ ಮಟ್ಟ ೭೫. ಹಾಗೆಯೇ ೧೦ ವರ್ಷದ ಸಾಧಾರಣ ಬಾಲಕನ ಬುದ್ಧಿಶಕ್ತಿಯ ವಯಸ್ಸು ೧೦ ವರ್ಷ ವೆಂದು ನಿರ್ಧರವಾಗುತ್ತದೆ; ಆದ್ದರಿಂದ ಅವನ ಬುದ್ಧಿಶಕ್ತಿಯ ಮಟ್ಟ—

$$1.\ Q = \frac{CA}{MA} \times \frac{೧೦೦}{೧} = \frac{೧೦}{೧೦} \times \frac{೧೦೦}{೧} = ೧೦೦$$

ಹಾಗೆಯೇ ಇನ್ನೊಬ್ಬ ೧೦ ವರ್ಷದ ಬಾಲಕ ಬುದ್ಧಿಶಕ್ತಿಯಲ್ಲಿ ೧೩ ವರ್ಷದವನಾಗಿದ್ದರೆ ಅವನ ಬುದ್ಧಿಶಕ್ತಿಯ ಮಟ್ಟ—

$$1.\ Q. = \frac{C.A.}{M.A.} \times \frac{\text{೧೦೦}}{\text{೧}} = \frac{\text{೧೨}}{\text{೧೦}} \times \frac{\text{೧೦೦}}{\text{೧}} = \text{೧೨೦} \ *$$

ಎಂದರೆ ಅವನು ಸಾಧಾರಣ ಬಾಲಕನಿಗಿಂತ ಹೆಚ್ಚಿನ ಬುದ್ಧಿಶಕ್ತಿಯುಳ್ಳವನು.

**ಬುದ್ಧಿಶಕ್ತಿಯ ಅವಧಿ:** ಹೀಗೆ ಸಾಧಾರಣ ಮಟ್ಟಕ್ಕಿಂತ ಬುದ್ಧಿಶಕ್ತಿ ಭಿನ್ನತೆಯನ್ನು ತೋರುವುದಾದರೆ, ಆ ಮಟ್ಟದ ಪರಮಾವಧಿ ಯಾವುದು, ಕನಿಷ್ಠಾವಧಿ ಯಾವುದು ಎಂಬ ಪ್ರಶ್ನೆ ಕುತೂಹಲ ಹುಟ್ಟಿಸತಕ್ಕದ್ದಾಗಿದೆ. ಈ ವಿಷಯದಲ್ಲಿ ಸಂಶೋಧನೆಗಳು ನಡೆದಿವೆ. ಟರ್ಮನ್ ಮೊದಲಾದವರು ಸಹಸ್ರಾರು ಮಂದಿ ಬಾಲಕರನ್ನು ಪರೀಕ್ಷಿಸಿ ಆ ವಯಸ್ಸಿನ ಬಾಲಕರಲ್ಲಿ ಬುದ್ಧಿಶಕ್ತಿಯ ಪರಮಾವಧಿಯನ್ನೂ ಕನಿಷ್ಠಾವಧಿಯನ್ನೂ ನಿರ್ಧರಿಸಿರುವರು. ಹಾಗೆಯೇ ಬೇರೆ ಬೇರೆ ವಯಸ್ಸಿನ ಬಾಲಕರನ್ನೂ ಪರೀಕ್ಷಿಸಿ ತಮ್ಮ

| ಬುದ್ಧಿಶಕ್ತಿಯ ಮಟ್ಟ | ಶೇಕಡವಾರು ಸಂಖ್ಯೆ | ಅವರ ಸ್ವರೂಪ |
|---|---|---|
| ೧೫೦ ರ ಮೇಲೆ | ·೧ ರಿಂದ ·೨ | ಅತ್ಯುತ್ತಮ ಶಕ್ತಿ |
| ೧೪೦ ರಿಂದ ೧೫೦ ರ ವರೆಗೆ | ೧ ” ೨ | } ಉತ್ತಮ ಶಕ್ತಿ |
| ೧೧೫ ರಿಂದ ೧೪೦ ರ ವರೆಗೆ | ೬ ” ೧೦ | |
| ೧೦೦ ರಿಂದ ೧೧೫ ರ ವರೆಗೆ | ೩೮ ” ೪೦ | } ಸಾಧಾರಣ ಶಕ್ತಿ |
| ೮೫ ರಿಂದ ೧೦೦ ರ ವರೆಗೆ | ೪೫ | |
| ೭೦ ರಿಂದ ೮೦ ರ ವರೆಗೆ | ೬ ” ೧೦ | ದುರ್ಬಲ |
| ೫೦ ರಿಂದ ೭೦ ರ ವರೆಗೆ | ೧ ” ೨ | ದಡ್ಡ |
| ೫೦ ರಿಂದ ಕಡಮೆ | ·೧ ” ·೨ | ಮಡ್ಡ |

ನಿರ್ಧಾರವನ್ನು ಪರಿಷ್ಕರಿಸಿರುವರು. ಅವರ ಸಂಶೋಧನೆಗಳಂತೆ, ಬುದ್ಧಿಶಕ್ತಿಯ ಪರಮಾವಧಿ ೧೫೦ ರ ಸುಮಾರಿಗೂ ಕನಿಷ್ಠಾವಧಿ ೫೦ ರ ಸುಮಾರಿಗೂ ಮುಟ್ಟುವುದೆಂದು ಗೊತ್ತಾಗಿದೆ. ನೂರು ಮಂದಿಯನ್ನು ಪರಿಶೀಲಿಸಿ

* C.A. = Chronological Age.
M.A. = Mental Age.
I.Q. = Intelligence Quotient.

ದಾಗ ಅವರಲ್ಲಿ ಎಷ್ಟೆಷ್ಟು ಮಟ್ಟದ ಬುದ್ಧಿಶಕ್ತಿಯವರು ಯಾವ ಯಾವ ಪ್ರಮಾಣದಲ್ಲಿದ್ದಾರೆಂಬುದನ್ನು ಮೇಲಿನ ಅಂಕಿ ಅಂಶಗಳಿಂದ ಅರಿಯಬಹುದು.

ಅಂಕಿ ಅಂಶಗಳ ಆ ಪಟ್ಟಿಯ ಪರಿಶೀಲನೆಯಿಂದ ಅತ್ಯುತ್ತಮ ಪ್ರತಿಭಾಶಾಲಿಗಳು ಸಾವಿರಕ್ಕೆ ಒಬ್ಬಿಬ್ಬರು ಮಾತ್ರ ಇರುವರೆಂದು ಗೊತ್ತಾಗುತ್ತದೆ. ಹಾಗೆಯೇ ತಮ್ಮ ದೇಹರಕ್ಷಣೆಯನ್ನು ಮಾಡಿಕೊಳ್ಳುವಷ್ಟು ಬುದ್ಧಿಶಕ್ತಿಯಿಲ್ಲದ ಮಡ್ಡರೂ ಅಷ್ಟೇ ಸಂಖ್ಯೆಯಲ್ಲಿದ್ದಾರೆ. ಉತ್ತಮ ಮತ್ತು ದುರ್ಬಲ ಬುದ್ಧಿಶಕ್ತಿಯವರು ನೂರಕ್ಕೆ ೯, ೧೦ ಮಂದಿಯಿಷ್ಟಿರಬಹುದು; ಆದರೆ ಸಾಧಾರಣ ಬುದ್ಧಿಶಕ್ತಿಯವರೇ ಹೆಚ್ಚು. ನೂರರಲ್ಲಿ ೮೦ ಮಂದಿ ಅಂಥವರು. ದುರ್ಬಲ ಬುದ್ಧಿಶಕ್ತಿಯ ಬಾಲಕರಿಗೆ ವೈಯಕ್ತಿಕವಾಗಿ ಗಮನಕೊಡುವುದರಿಂದ ಹೇಳಿದ್ದನ್ನು ಕಲಿಯಬಲ್ಲರು; ದಡ್ಡರು ಸಾಂಸ್ಕೃತಿಕ ಶಿಕ್ಷಣದಿಂದ ಪ್ರಯೋಜನ ಪಡೆಯಲಾರರು; ಹಾಗೂ ಹೀಗೂ ಮಾಡಿ ಒಂದಿಷ್ಟು ವೃತ್ತಿಶಿಕ್ಷಣವನ್ನು ಕಲಿಸಿ ಅವರ ಜೀವನೋಪಾಯಕ್ಕೆ ಸಿದ್ಧಪಡಿಸಬಹುದು; ಮಡ್ಡರಾದರೆ (ಬುದ್ಧಿಹೀನರು) ತಮ್ಮ ಜೀವನೋಪಾಯ ಹಾಗಿರಲಿ, ದೇಹರಕ್ಷಣೆಗೂ ಅವಶ್ಯಕವಾದ ಬುದ್ಧಿಯಿರದೆ, ಇತರರೇ ಅವರನ್ನು ರಕ್ಷಿಸಬೇಕಾಗುತ್ತದೆ.

ಮೇಲಿನ ಪಟ್ಟಿಯ ಪರಿಶೀಲನೆಯಿಂದ ಸಮಾಜದಲ್ಲಿ ಸಾಧಾರಣ ಬುದ್ಧಿಶಕ್ತಿಯವರೇ ಹೆಚ್ಚೆಂದೂ, ಅತಿ ಬುದ್ಧಿವಂತರೂ ಬುದ್ಧಿಹೀನರೂ ಅಲ್ಪವೆಂದೂ, ಮಿಕ್ಕವರು ಮಧ್ಯಮ ಸಂಖ್ಯೆಯಲ್ಲಿರುವರೆಂದೂ ಸ್ಪಷ್ಟಪಡುತ್ತದೆ. ಮೇಲಿನ ಅಂಕಿ ಅಂಶಗಳನ್ನು ಪಯೋಗಿಸಿಕೊಂಡು ಒಂದು ಅಕ್ಷದಲ್ಲಿ ಬುದ್ಧಿಶಕ್ತಿಯ ಮಟ್ಟವನ್ನೂ, ಇನ್ನೊಂದು ಅಕ್ಷದಲ್ಲಿ ಶೇಕಡವಾರು ಸಂಖ್ಯೆಯನ್ನೂ ಇಟ್ಟುಕೊಂಡು ಬಿಂದಗಳನ್ನು ಗುರುತಿಸಿ ಗೆರೆ ಎಳೆದರೆ ಅದು ಗಂಟೆಯಂತಿರುತ್ತದೆ. ಎಂದರೆ 'ಸಾಧಾರಣ ಪ್ರಸರಣ' ನಿಯಮವನ್ನೇ ಬುದ್ಧಿಶಕ್ತಿಯೂ ಅನುಸರಿಸಿರುವುದು ಸ್ಪಷ್ಟಪಡುತ್ತದೆ.

ಮೇಲೆ ವಿವರಿಸಿದ ಬುದ್ಧಿಶಕ್ತಿಯ ಪರೀಕ್ಷೆಗಳು ಶಿಕ್ಷಣ ರಂಗದಲ್ಲಿ ಈಗೀಗ ಪ್ರಚಾರಕ್ಕೆ ಬರುತ್ತಿವೆ. ಹಾಗೆ ಪರೀಕ್ಷೆ ನಡಸಿ ಒಂದೊಂದು ಮಟ್ಟದ ಬುದ್ಧಿಶಕ್ತಿಯ ಬಾಲಕ ಬಾಲಕಿಯರನ್ನು ಆರಿಸಿಕೊಳ್ಳುವುದರಿಂದ

ಅವರವರ ಬುದ್ಧಿಶಕ್ತಿಗೊಪ್ಪುವ ರೀತಿಯಲ್ಲಿ ಉಪಾಧ್ಯಾಯರು ಬೋಧನ ಕ್ರಮವನ್ನು ಮಾರ್ಪಡಿಸಿಕೊಳ್ಳಬಹುದು; ಜೊತೆಗೆ ಸಾಂಸ್ಕೃತಿಕ ಮತ್ತು ಔದ್ಯೋಗಿಕ ಶಿಕ್ಷಣಕ್ಕೆ ಆರಿಸಿಕೊಳ್ಳಲೂ ಅವಕಾಶವಾಗುತ್ತದೆ. ದಡ್ಡರಿಗೂ ಮಡ್ಡರಿಗೂ ಕಣ್ಣುಮುಚ್ಚಿಕೊಂಡು ಉಪಯುಕ್ತವೆನಿಸದ ಸಾಧಾರಣ ಸಾಂಸ್ಕೃತಿಕ ಶಾಲೆಗಳನ್ನು ಸ್ಥಾಪಿಸಲು ವಿನಿಯೋಗಿಸುತ್ತಿರುವ ವ್ಯರ್ಥ ಧನ ವ್ಯಯವೂ ನಿಲ್ಲುತ್ತದೆ; ಹಾಗೆಯೇ ತರಗತಿಯಲ್ಲಿ 'ಎಲ್ಲರಿಗೂ ಒಂದೇ ತುತೂರಿ' ಎಂದು ಸಾಗುತ್ತಿರುವ ಪಾಠಕ್ರಮವೂ ತಪ್ಪಿ ಅವರವರ ಶಕ್ತಿಯನುಸರಿಸಿ, ಅಭಿರುಚಿಯನ್ನನುಸರಿಸಿ ಬೋಧನಕ್ರಮವೂ ರೂಪುಗೊಳ್ಳುತ್ತದೆ. ಎಂದ ಮೇಲೆ ಎಲ್ಲ ಶಿಕ್ಷಕರಿಗೂ ಬುದ್ಧಿಶಕ್ತಿಯ ಪರೀಕ್ಷೆಗಳ ಪರಿಚಯ ಆವಶ್ಯಕ.

**ಸಾಮೂಹಿಕ ಬುದ್ಧಿಶಕ್ತಿಯ ಪರೀಕ್ಷೆಗಳು:** ಇದುವರೆಗೂ ವಿವರಿಸಿದ ಬುದ್ಧಿಶಕ್ತಿಯ ಅಳತೆಯ ಕ್ರಮ ವೈಯಕ್ತಿಕವಾಗಿ ಒಬ್ಬೊಬ್ಬರನ್ನಾಗಿ ಪರೀಕ್ಷಿಸಲು ನೆರವಾಗತಕ್ಕದು. ಆದರೆ ಅನೇಕರನ್ನು ಪರೀಕ್ಷಿಸುವುದು ಬಹು ಕಾಲ ಹಿಡಿಯುತ್ತದೆ. ಸಾಮೂಹಿಕವಾಗಿ ಉಪಯೋಗಕ್ಕೆ ಬರತಕ್ಕ ಕ್ರಮವೊಂದನ್ನು ರೂಪಿಸಲು ಅಮೆರಿಕದಲ್ಲಿ ೧೯೧೦ರಿಂದ ಯತ್ನ ನಡೆದು ೧೯೧೫ರ ಸುಮಾರಿಗೆ ಆ ಪರೀಕ್ಷೆಗಳು ಪಕ್ವಾವಸ್ಥೆಗೆ ಬಂದುವು. ಆದರೆ ಅವು ಪ್ರಾಧಾನ್ಯತೆಗೆ ಬರದೆ ಪ್ರಯೋಗಾವಸ್ಥೆಯಲ್ಲೇ ಉಳಿದಿದ್ದುವು. ೧೯೧೭ರಲ್ಲಿ ಅಮೆರಿಕ ಪ್ರಥಮ ಮಹಾಯುದ್ಧದಲ್ಲಿ ಭಾಗವಹಿಸಲು ನಿರ್ಧರಿಸಿದಾಗ ತನ್ನ ಸೇನೆಗೆ ೨೦ ಲಕ್ಷ ಮಂದಿಗಳನ್ನು ಹೊಸದಾಗಿ ಸೇರಿಸಿಕೊಳ್ಳಲು ಯತ್ನಮಾಡಿತು. ಹಾಗೆ ಮಾಡುವಾಗ ವ್ಯಕ್ತಿಗಳ ಬುದ್ಧಿಶಕ್ತಿಗನುಗುಣವಾಗಿ ಅವರಿಗೆ ಉಚಿತವಾದ ಕೆಲಸವನ್ನು ಕೊಡಲು ಆಲೋಚಿಸಿ ಅವರ ಬುದ್ಧಿಶಕ್ತಿಯನ್ನು ಅಳೆಯುವ ಕೆಲಸವನ್ನು ಅಲ್ಲಿನ ಮನಶ್ಶಾಸ್ತ್ರಜ್ಞರಿಗೆ ವಹಿಸಿದರು. ಅವರು ಎರಡು ರೀತಿಯ ಪ್ರಶ್ನಾವಳಿಗಳನ್ನು ಏರ್ಪಡಿಸಿದರು: ಭಾಷೆ ಬಲ್ಲವರಿಗೆ ಅನುಕೂಲಿಸತಕ್ಕವು ಒಂದು ರೀತಿಯವು; ಭಾಷೆಯಲ್ಲಿ ತಕ್ಕಷ್ಟು ಜ್ಞಾನವಿಲ್ಲದ ಅಥವಾ ಬೇರೆ ಭಾಷೆಯನ್ನಾಡತಕ್ಕ ಇತರರು ಉತ್ತರ ಬರೆಯಲು ಅನುಕೂಲಿಸತಕ್ಕ ಪ್ರಶ್ನಾವಳಿ ಇನ್ನೊಂದು. ಅವನ್ನು ಸಾಮೂಹಿಕವಾಗಿ ಕೊಟ್ಟು ಪರೀಕ್ಷಿಸಿ ಲಕ್ಷಾಂತರ ಜನರ ಬುದ್ಧಿಶಕ್ತಿಯನ್ನು ನಿರ್ಧರಿಸಿದರು. ಅವರ ನಿರ್ಧಾರದ ಆಧಾರದ ಮೇಲೆ ಅವರಿಗೆ ಉಚಿತ ಸ್ಥಾನವನ್ನು ಕೊಟ್ಟರು. ಅತ್ಯುನ್ನತ

ಬುದ್ಧಿಶಕ್ತಿಯುಳ್ಳವರಿಗೆ ಸೇನಾನಾಯಕರ ಮತ್ತು ಮುಂದಾಳುಗಳ ಕೆಲಸವನ್ನೂ, ಸಾಧಾರಣ ಬುದ್ಧಿಶಕ್ತಿಯುಳ್ಳವರಿಗೆ ಸಾಧಾರಣ ಕೆಲಸಗಳನ್ನೂ ಕೊಟ್ಟರು. ಯುದ್ಧಾನಂತರ ಮನಶ್ಶಾಸ್ತ್ರಜ್ಞರು ನಿರ್ಧರಿಸಿದ್ದ ಅವರ ಬುದ್ಧಿಶಕ್ತಿಯನ್ನೂ, ಯುದ್ಧದಲ್ಲಿ ಅವರವರು ತೋರಿಸಿದ ಕಾರ್ಯದಕ್ಷತೆಯನ್ನೂ ಹೋಲಿಸಿ ನೋಡಿದರು. ಮನಶ್ಶಾಸ್ತ್ರಜ್ಞರು ನಡಸಿ ನಿರ್ಧರಿಸಿದ ಬುದ್ಧಿಶಕ್ತಿಯ ಅಳತೆ ಸರಿಯೆಂದು ಸಾಕ್ಷ್ಯಗಳಿಂದ ಸ್ಪಷ್ಟಪಟ್ಟಿತು. ಅಂದಿನಿಂದ ಈ ಸಾಮೂಹಿಕ ಪರೀಕ್ಷೆಗಳು ಅಮೆರಿಕದ ಸಾರ್ವಜನಿಕರಲ್ಲಿ ಹೆಚ್ಚಿನ ಆಸಕ್ತಿಯನ್ನೂ ನಂಬಿಕೆಯನ್ನೂ ಹುಟ್ಟಿಸಿದವು; ಕ್ರಮವಾಗಿ ಅಲ್ಲಿನ ಶಿಕ್ಷಣ ರಂಗದಲ್ಲೂ ಪ್ರಚಾರಕ್ಕೆ ಬಂದುವು.

ಸಾರ್ವಜನಿಕ ಅಧಿಕಾರಸ್ಥಾನಕ್ಕೆ ಆರಿಸುವಾಗ ಅಭ್ಯರ್ಥಿಗಳನ್ನು ಈ ರೀತಿಯ ಪರೀಕ್ಷೆಗಳಿಂದ ಪರೀಕ್ಷಿಸಿ ಅವರ ಬುದ್ಧಿಶಕ್ತಿಯ ಮಟ್ಟವನ್ನು ಕಂಡುಹಿಡಿದು ಪ್ರತಿಭಾವಂತರಿಗೆ ಉನ್ನತ ಸ್ಥಾನಗಳನ್ನು ಕೊಡುವ ವಾಡಿಕೆ ಕೆಲವು ಕಡೆ ಇದೆ; ಸಮಾಜದಲ್ಲೂ ಸರ್ಕಾರದಲ್ಲೂ ಅವು ಹೆಚ್ಚಿನ ಆಸಕ್ತಿ ಹುಟ್ಟಿಸಿರುವಂತೆ ಶಿಕ್ಷಣರಂಗದಲ್ಲೂ ಅವುಗಳಿಂದ ಬಹು ಬಗೆಯ ಉಪಯೋಗಗಳನ್ನು ಪಡೆಯಲಾಗುತ್ತಿದೆ. ಆ ಪರೀಕ್ಷೆಗಳ ಸಹಾಯದಿಂದ ಬುದ್ಧಿಶಕ್ತಿಯ ಮಟ್ಟವನ್ನನುಸರಿಸಿ ಮಕ್ಕಳನ್ನು ಬೇರೆ ಬೇರೆ ವರ್ಗಗಳಾಗಿ ವಿಂಗಡಿಸಿಕೊಳ್ಳುವುದು ಮೊದಲಾಯಿತು; ಅದರ ಆಧಾರದ ಮೇಲೇ ವಿದ್ಯಾರ್ಥಿ ವೇತನಗಳು ದೊರಕುವಂತಾದುವು; ವೃತ್ತಿಶಿಕ್ಷಣಕ್ಕೆ ಯುವಕರನ್ನು ಆರಿಸಿಕೊಳ್ಳುವಾಗಲೂ ಅವು ಬಹುಮಟ್ಟಿಗೆ ನೆರವಾಗುತ್ತಿವೆ; ಕೊನೆಗೆ ಉದ್ಯೋಗಗಳಿಗೆ ಸೇರುವಾಗ ಅಲ್ಲಿ ಅವರಿಗೆ ಯಾವ ರೀತಿಯ ಕೆಲಸ ಕೊಡಬಹುದೆಂದು ಸಲಹೆ ಮಾಡುವುದಕ್ಕೂ ಶಿಕ್ಷಣ ಸಂಸ್ಥೆಗಳು ಈ ಪರೀಕ್ಷೆಗಳ ಫಲಿತಾಂಶವನ್ನೇ ಉಪಯೋಗಿಸಲು ಸಹಾಯವಾಯಿತು. ದಡ್ಡರನ್ನೂ ಮಡ್ಡರನ್ನೂ ಆರಿಸಿ ಅವರಿಗನುಕೂಲವಾಗುವ ಶಿಕ್ಷಣ ಸಂಸ್ಥೆಗಳಲ್ಲಿ ವಿಶೇಷ ರೀತಿಯ ಶಿಕ್ಷಣ ಕೊಡಲು ಏರ್ಪಡಿಸುವುದೂ ಅದರಿಂದ ಸಾಧ್ಯವಾಯಿತು.

ಸಮಾಜದಲ್ಲೂ, ಸರ್ಕಾರದಲ್ಲೂ, ಶಿಕ್ಷಣರಂಗದಲ್ಲೂ ಇಷ್ಟೊಂದು ಆಸಕ್ತಿ ಹುಟ್ಟಿಸಿ ಬಹು ಮುಖವಾದ ಕಾರ್ಯಗಳಿಗೆ ನೆರವಾಗುತ್ತಿರುವ ಈ

ಸಾಮೂಹಿಕ ಪರೀಕ್ಷೆಗಳಲ್ಲಿ ಹಲವನ್ನಾದರೂ ಪರಿಚಯಮಾಡಿಕೊಳ್ಳುವುದು ಅಗತ್ಯ. ಅದಕ್ಕಾಗಿ ಕೆಲವನ್ನಿಲ್ಲಿ ಉಲ್ಲೇಖಿಸಿದೆ.

**೧. ಭಾಷಾ ರೀತಿಯ ಪರೀಕ್ಷೆಗಳು:** ಪ್ರಶ್ನೆಯನ್ನು ತಿಳಿದುಕೊಳ್ಳತಕ್ಕ ಮತ್ತು ಉತ್ತರಗಳನ್ನು ಬರೆಯತಕ್ಕ ಭಾಷಾ ಜ್ಞಾನವಿರುವವರಿಗೆ ಈ ಪರೀಕ್ಷೆಗಳು ಅನುಕೂಲ. ಅಂಥವರು ಈ ಪ್ರಶ್ನೆಗಳನ್ನು ತಿಳಿದುಕೊಂಡು ಉತ್ತರ ಬರೆಯಬಲ್ಲರು. ಅಂಥ ಕೆಲವನ್ನಿಲ್ಲಿ ಕೊಟ್ಟಿದೆ:

೧. ನಮ್ಮ ವರ್ಣಮಾಲೆಯ ಐದನೆಯ ಅಕ್ಷರ ಬರೆಯಿರಿ. (ಉ)

೨. ಕೆಳಗಿನ ಚಿತ್ರದಲ್ಲಿ ಚೌಕಕ್ಕೆ ತಗುಲದ ತ್ರಿಕೋಣದ ಮೂಲೆಯನ್ನು ತ್ರಿಕೋಣವನ್ನು ಮುಟ್ಟದ ಚೌಕದ ಮೂಲೆಯೊಡನೆ ಕೂಡಿಸಿ. (ಪ್ರಶ್ನೆಯ ಅರ್ಥವನ್ನು ತಿಳಿದುಕೊಂಡು ಅದಕ್ಕನುಸಾರವಾಗಿ ಗೆರೆಯನ್ನು ಎಳೆಯಬೇಕು. ಇ ಮತ್ತು ಬಿ ಗಳನ್ನು ಕೂಡಿಸಬೇಕು)




೩. ಸಂಗೀತವನ್ನುಂಟುಮಾಡುವ ಉಪಕರಣಗಳಾವುವು? (ಇಲ್ಲಿ ಮಕ್ಕಳ ವಿಷಯ ಜ್ಞಾನವನ್ನು ಪರೀಕ್ಷಿಸಲಾಗುತ್ತದೆ)

೪. ಪಕ್ಕದ ಚಿತ್ರದಲ್ಲಿ ಇಲ್ಲದಿರುವ ವಸ್ತು ಯಾವುದು? (ಕಿವಿಯಿಲ್ಲದ ಕತ್ತೆಯ ಚಿತ್ರ ಕೊಟ್ಟು ಇಲ್ಲದಿರುವ ಭಾಗವನ್ನು ಮಕ್ಕಳು ತೀಡಿ ಪೂರೈಸುವಂತಿರಬೇಕು.)

೫. ಕೆಳಗೆ ಐದು ಜೊತೆ ಪದಗಳನ್ನು ಕೊಟ್ಟಿದೆ. ಎರಡು ಪದಗಳೂ ಒಂದೇ ಅರ್ಥ ಕೊಟ್ಟರೆ ಪಕ್ಕದಲ್ಲಿರುವ ಸಮ ಎಂಬುದರ ಕೆಳಗೂ, ವ್ಯತಿರಿಕ್ತಾರ್ಥ ಕೊಟ್ಟರೆ ವ್ಯತಿರಿಕ್ತ ಎಂಬ ಪದದ ಕೆಳಗೂ, ಎರಡೂ ರೀತಿಯದಲ್ಲದಿದ್ದರೆ ಗೊತ್ತಿಲ್ಲ ಎಂಬ ಪದದ ಕೆಳಗೂ ಗೆರೆ ಹಾಕಿ. (ಒಂದೊಂದು ಪ್ರಶ್ನೆಯಲ್ಲೂ ಇರುವ ಎರಡು ಪದಗಳನ್ನೂ ಓದಿಕೊಂಡು, ಅರ್ಥ ತಿಳಿದುಕೊಂಡು, ಹೋಲಿಸಿ ನೋಡಿ, ಕೇಳಿರುವ ರೀತಿಯಲ್ಲಿ ಗೆರೆಯನ್ನು ಹಾಕಬೇಕು. ಉತ್ತರ ಬರೆಯುವ ರೀತಿಯನ್ನು ಮೊದಲ ಪ್ರಶ್ನೆಗೆ ತೋರಿಸಿದೆ.)

| | | | | |
|---|---|---|---|---|
| ೧. ಕಮಲ | ತಾವರೆ | <u>ಸಮ</u> | ವ್ಯತಿರಿಕ್ತ | ಗೊತ್ತಿಲ್ಲ |
| ೨. ಉಳಿಸು | ಹಾಳುಮಾಡು | ಸಮ | ವ್ಯತಿರಿಕ್ತ | ಗೊತ್ತಿಲ್ಲ |
| ೩. ಸುಂದರ | ಕುರೂಪಿ | ಸಮ | ವ್ಯತಿರಿಕ್ತ | ಗೊತ್ತಿಲ್ಲ |
| ೪. ನಿಧಾನ | ಬೇಗ | ಸಮ | ವ್ಯತಿರಿಕ್ತ | ಗೊತ್ತಿಲ್ಲ |
| ೫. ಪ್ರೇಮ | ಉಷ್ಣ | ಸಮ | ವ್ಯತಿರಿಕ್ತ | ಗೊತ್ತಿಲ್ಲ |

ಮೇಲಿನ ಪ್ರಶ್ನೆಗಳು ಚಿಕ್ಕವಯಸ್ಸಿನವರಿಗೆ. ಅವನ್ನೇ ಹೆಚ್ಚು ಸಂಕೀರ್ಣಗೊಳಿಸಿ ದೊಡ್ಡವರಿಗೂ ಆಗುವಂತೆ ಮಾಡುವ ಪ್ರಯತ್ನವೂ ನಡೆದಿದೆ. ಉದಾಹರಣೆಗಾಗಿ ಕೆಲವನ್ನಿಲ್ಲಿ ಕೊಟ್ಟಿದೆ:

೬. ರ, ಗ, ಸ, ಗ ಈ–ಅಕ್ಷರಗಳನ್ನು ಉಪಯೋಗಿಸಿಕೊಂಡು ಅರ್ಥಕೊಡುವ ಒಂದು ಪದವನ್ನು ಮಾಡು. (ಕೊಟ್ಟಿರುವ ಅಕ್ಷರಗಳನ್ನು ಹೇಗೆ ಜೋಡಿಸಿದರೆ ಅರ್ಥ ಕೊಡುವ ಪದವಾಗಬಹುದೆಂಬುದನ್ನು ಚೆನ್ನಾಗಿ ಆಲೋಚಿಸಿ ಅವರು ಬರೆಯಬೇಕು.)

೭. 'ಬೊಂಬು ತಯಾರಿಕೆಗೆ ಕಾಗದ ಬೇಕು.' ಈ ಪದಗಳನ್ನು ಸರಿಯಾದ ಅರ್ಥಕೊಡುವ ವಾಕ್ಯವಾಗಿ ಪುನರ್ವಿಂಗಡಿಸಿ. (ಅರ್ಥಜ್ಞಾನವೂ ವ್ಯಾಕರಣ ಜ್ಞಾನವೂ ಇಲ್ಲಿ ಅಗತ್ಯ. ಅವೆರಡೂ ಸರಿಹೋಗುವಂತೆ ವಾಕ್ಯವನ್ನು ಜೋಡಿಸಬೇಕು)

೮. ಕೆಳಗೆ ಬಿಟ್ಟಿರುವುದನ್ನು ಪೂರ್ತಿಮಾಡಿ :

೧೦ : ೧೦ ; ೭ : ೭ ; ೪ : ೪ ; : ;

(ಮೊದಲಿನ ಮೂರು ಜೊತೆಗೂ ಏನು ಸಂಬಂಧವಿದೆಯೋ ಅದನ್ನು ಮೊದಲು ಗ್ರಹಿಸಬೇಕು; ಅನಂತರ ಆ ಮೂರರಲ್ಲಿ ಒಂದೊಂದು ಜೊತೆಯಲ್ಲೂ ಇರುವ ಸಂಬಂಧವನ್ನು ತಿಳಿಯಬೇಕು. ಅದರ ಆಧಾರದ ಮೇಲೆ ಕೊನೆಯ ಜೊತೆ ಸರಿಯಾಗುವಂತೆ ಉತ್ತರ ಬರೆಯಬೇಕು.)

೯. ಶರಾವತಿ : ಜೋಗ :: ಕಾವೇರಿ : ? (ಮೊದಲೆರಡಕ್ಕೂ ಇರುವ ಸಂಬಂಧವನ್ನು ಅರಿತುಕೊಂಡು ಎರಡನೆಯ ಜೊತೆಯ: ಮೊದಲ ಪದವನ್ನು ಪರಿಚಯ ಮಾಡಿಕೊಂಡು ತಮ್ಮ ಪರಿಚಯ ಜ್ಞಾನದಿಂದ ಕೊನೆಯದನ್ನು ಭರ್ತಿಮಾಡಬೇಕು.)

೧೦. ಒಬ್ಬನು ದಕ್ಷಿಣಾಭಿಮುಖವಾಗಿ ತಲೆಕೆಳಕಾಗಿ ನಿಂತಿರುವನು. ಅವನ ಬಲಗೈ ಯಾವ ದಿಕ್ಕಿಗೆ ತಿರುಗಿದೆ ? ಇಲ್ಲಿ ಮೊದಲು ಯೋಜನೆಯನ್ನು ಮನಸ್ಸಿನಲ್ಲಿ ಕಲ್ಪಿಸಿಕೊಂಡು ಆಲೋಚಿಸಿ ತೀರ್ಮಾನಕ್ಕೆ ಬರಬೇಕು.

ಮೇಲಿನ ಪ್ರಶ್ನೆಗಳಂತೆ ಬಗೆಬಗೆಯ ಪ್ರಶ್ನೆಗಳನ್ನು ರೂಪಿಸಿರುವರು. ವ್ಯಕ್ತಿಯ ಬೇರೆ ಬೇರೆ ಮನಶ್ಶಕ್ತಿಗಳನ್ನು ಪರೀಕ್ಷಿಸಿ ಆ ಮೂಲಕ ಅವನ ಬುದ್ಧಿಶಕ್ತಿಯ ಮಟ್ಟವನ್ನು ನಿರ್ಧರಿಸುವುದೇ ಅವುಗಳ ಉದ್ದೇಶ.

**೨. ಕಾರ್ಯ ಪ್ರದರ್ಶನ ಪರೀಕ್ಷೆಗಳು:** ಭಾಷಾ ರೀತಿಯ ಪರೀಕ್ಷೆಗೆ ತಕ್ಕಷ್ಟು ಜ್ಞಾನವುಳ್ಳವರು ಉತ್ತರ ಬರೆಯುಬಹುದು; ಭಾಷಾ ಜ್ಞಾನವಿಲ್ಲದ ಎಳೆಯರಿಗೂ, ಅಭ್ಯಾಸಿಸದ ದೊಡ್ಡವರಿಗೂ, ಪರಭಾಷೆಯವರಿಗೂ ಅವು ಅನುಕೂಲವಲ್ಲ. ಆದುದರಿಂದ ಅಂಥವರೂ ಉತ್ತರ ಕೊಡಬಹುದಾದ ರೀತಿಯ ಪ್ರಶ್ನೆಗಳು ಏರ್ಪಟ್ಟಿವೆ. ಅವುಗಳಿಗೆ ಉತ್ತರ ಬರೆಯುವಾಗ ಭಾಷಾ ಜ್ಞಾನ ಅಷ್ಟಾಗಿ ಆವಶ್ಯಕವಿಲ್ಲ. ಕೆಲವು ಸೂಚನೆಗಳನ್ನು ಕೊಟ್ಟು ಅದರಂತೆ ಕೆಲಸಮಾಡುವಂತೆ ರೂಪುಗೊಂಡಿರುವ ಈ ಪರೀಕ್ಷೆಗಳನ್ನು ಕಾರ್ಯಪ್ರದರ್ಶನ ಪರೀಕ್ಷೆಗಳೆಂದು ಕರೆಯುಬಹುದು. ಆಗಲೂ ವ್ಯಕ್ತಿಗಳ ಮನಸ್ಸಿನ ಬೇರೆ ಬೇರೆ ಶಕ್ತಿಗಳು ಕಾರ್ಯಮುಖವಾಗುವುದರಿಂದ ಅವರ ಬುದ್ಧಿಶಕ್ತಿಯ ಮಟ್ಟವನ್ನು ಅಳೆಯುಬಹುದು.

ಭಾಷಾ ರೀತಿಯ ಪರೀಕ್ಷೆಗಳು ಮನಸ್ಸಿನ ಬೇರೆ ಬೇರೆ ಉನ್ನತ ಶಕ್ತಿಗಳನ್ನು ಪರೀಕ್ಷಿಸಲು ಹೇಗೆ ರೂಪುಗೊಂಡಿವೆಯೊ ಅದೇ ರೀತಿಯಲ್ಲಿ ಪ್ರದರ್ಶನ ಪರೀಕ್ಷೆಗಳೂ ಏರ್ಪಟ್ಟಿವೆ. ಬರವಣಿಗೆಯ ಪರೀಕ್ಷೆಗಳ ಜೊತೆಗೆ ಈ ಪ್ರದರ್ಶನ ಪರೀಕ್ಷೆಗಳಿಂದ ಪಡೆದ ಫಲಿತಾಂಶವನ್ನೂ ಹೋಲಿಸಿಕೊಂಡು ಮಕ್ಕಳ ಬುದ್ಧಿಶಕ್ತಿಯನ್ನು ನಿರ್ಧರಿಸುವುದರಿಂದ ಅಳತೆ ಹೆಚ್ಚು ನಿರ್ದಿಷ್ಟವೂ ಸಮರ್ಪಕವೂ ಆಗಬಲ್ಲದು. ಆದುದರಿಂದ ಭಾಷಾ ರೀತಿಯ ಪರೀಕ್ಷೆ ನಡಸುವೆಡೆಯಲ್ಲಿ ಇವನ್ನೂ ಸೇರಿಸುವುದು ಒಳ್ಳೆಯದು; ಭಾಷಾ ಜ್ಞಾನವೇ ಇಲ್ಲದವರ ಬುದ್ಧಿಶಕ್ತಿಯನ್ನು ನಿಷ್ಕರ್ಷಿಸಲು ಇವು ಇಂದು ಬಹು ಮುಖ್ಯವಾದ ಅಳತೆಯ ಸಾಧನದಂತಿವೆ. ಅವರು ಕಾರ್ಯಮುಖರಾಗಿರುವಾಗ ಅವರ ಬಗೆ ಬಗೆಯ ಮನಶ್ಶಕ್ತಿಗಳು ಕಾರ್ಯರೂಪಕ್ಕೆ ಬರುವುದರಿಂದ ಬುದ್ಧಿಶಕ್ತಿಯ ಮಟ್ಟವನ್ನು ಅಳೆಯುಬಹುದು. ಅವುಗಳಲ್ಲಿ ಪ್ರಧಾನವಾದ ಕೆಲವನ್ನು ಇಲ್ಲಿ ಉಲ್ಲೇಖಿಸಿದೆ.

## ಅಂಕಿ ಮತ್ತು ಸಂಕೇತಗಳ ಪರೀಕ್ಷೆ

**ಉದಾರಣೆ:** ೧=ಗಾ; ೨=ಗ; ೩=ಡಿ; ೪=ರು ಆದರೆ '೧೪೩೨' ಎಂಬುದು ಸೂಚಿಸತಕ್ಕ ಪದವಾವುದು?

ಇಲ್ಲಿ ೧, ೪, ೩, ೨ ಈ ಅಂಕಿಗಳ ಅಕ್ಷರ ಸಂಕೇತಗಳನ್ನು ತಿಳಿದುಕೊಂಡು ಅದರಂತೆ ಅಕ್ಷರಗಳನ್ನು ಜೋಡಿಸಿಕೊಂಡು ಪದವನ್ನು ಹೇಳಬೇಕು.

## ಚಿಹ್ನೆ ಮತ್ತು ಸಂಕೇತ ಪರೀಕ್ಷೆ

**ಉದಾಹರಣೆ :**— * = ಕ ; † = ಲ ; + = ಯು ; × = ಸ ; ● = ಮ ಆದರೆ * ● † × + × ' ಎಂಬ ಚಿಹ್ನಾ ಸಮೂಹ ಸೂಚಿಸುವ ಪದವಾವುದು ? ಇಲ್ಲಿ ಚಿಹ್ನೆಗಳು ಸೂಚಿಸುವ ಲಿಪಿಯನ್ನು ಪರಿಚಯ ಮಾಡಿಕೊಂಡು ಕೊಟ್ಟಿರುವ ಚಿಹ್ನಾ ಸಮೂಹಕ್ಕೆ ಅದನ್ನು ಪರಿವರ್ತಿಸಿ, ರೂಪುಗೊಂಡ ಪದವನ್ನು ಹೇಳಬೇಕು.

## ತೊಡಕು ದಾರಿಯ ಪರೀಕ್ಷೆ

ಒಂದು ದೀರ್ಘವಾದ ಮಾರ್ಗ. ಅದರಲ್ಲಿ ಅನೇಕ ಕವಲು ಮಾರ್ಗಗಳು. ಅವು ಗಳಲ್ಲಿ ಎಲ್ಲ ಮುಚ್ಚಿವೆ. ಒಂದು ಮಾತ್ರ ತೆರೆದಿದೆ. ಇಂಥ ತೊಡಕು ದಾರಿಯನ್ನು ಹೊಕ್ಕು ತೆರೆದಿರುವ ಮಾರ್ಗವನ್ನು ಗುರುತಿಸಬೇಕು.

ಆಗ ಅವನು ಪ್ರವೇಶದಿಂದ ಹೊರಟು ಹುಡುಕಿಕೊಂಡು ಬರುವನು ; ಇರುವ ಒಂದೇ ಮಾರ್ಗವನ್ನು ಗಮನದಲ್ಲಿಟ್ಟುಕೊಂಡು ಹೊರ ಮಾರ್ಗ ವನ್ನು ದರ್ಶಿಸಿ ಸೂಚಿಸಿದರೆ ಪೂರ್ಣ ಅಂಕಿ ಕೊಡಲಾಗುವುದು ; ತಪ್ಪಿದರೆ ಮರಳಿ ಹಿಂದಕ್ಕೆ ತಿರುಗಿಸಿ ಪುನಃ ಪ್ರವೇಶ ಸ್ಥಳದಿಂದ ಹೊರಟು ಹೊರ ಮಾರ್ಗವನ್ನು ಸೂಚಿಸುವಂತೆ ಕೇಳುವರು. ಹಿಂದಿನ ತಪ್ಪನ್ನು ತಿದ್ದಿಕೊಂಡು, ಆ ಅನುಭವದಿಂದ ಲಾಭ ಪಡೆದವನಾದರೆ, ಹೊರ ಮಾರ್ಗವನ್ನು ಈ ಸಲವಾದರೂ ತೋರಿಸಬಲ್ಲ. ಆಗ ಅವನಿಗೆ ಅಂಕಿಗಳನ್ನು ಕೊಡುವರು. ಆಗಲೂ ಅವನು ತಪ್ಪಿದರೆ, ಕಾರ್ಯಾರಂಭದಲ್ಲಿ ಸರಿಯಾಗಿ ಆಲೋಚಿಸದೆ ಕಾರ್ಯಯೋಜನೆಯಿಲ್ಲದೆ ಹೊರಟಂತಾಯಿತೆಂದು ಅಂಕಿ ಕೊಡುವಂತಿಲ್ಲ. ಎಂದರೆ ಒಮ್ಮೆ ಆದ ತಪ್ಪನ್ನು ಆ ಅನುಭವದಿಂದ ತಿದ್ದಿಕೊಳ್ಳುವ, ಕಾರ್ಯಕ್ಕೆ ಆವಶ್ಯಕವಾದ ಯೋಜನೆಯನ್ನು ಮೊದಲೇ ರೂಪಿಸಿಕೊಳ್ಳುವ ಮನಶ್ಶಕ್ತಿ ಗಳನ್ನು ಇಲ್ಲಿ ಪರೀಕ್ಷಿಸಿದಂತಾಗುತ್ತದೆ.

**ಹಲಗೆ ಜೋಡಣೆಯ ಪರೀಕ್ಷೆ :** ಒಂದು ದೊಡ್ಡ ಹಲಗೆಯಿದೆ ; ಅದರಲ್ಲಿ ತ್ರಿಕೋಣ, ಚೌಕ, ಚಕ್ರ, ಆಯ, ಮುಂತಾದ ಆಕೃತಿಯ ಗುಳಿ ಗಳನ್ನು ಕೊರೆದಿದೆ. ಅದೇ ಆಕೃತಿಯ, ಗುಳಿಗಳಿಗೆ ಸರಿಹೋಗುವಂಥ ಬೇರೆ ಬೇರೆ ಬಿಲ್ಲೆಗಳನ್ನು ಮಕ್ಕಳಿಗೆ ಕೊಟ್ಟು ಆಯಾ ಗುಳಿಗಳಿಗೊಪ್ಪು ವಂಥ ಬಿಲ್ಲೆಗಳನ್ನು ಆರಿಸಿ ಜೋಡಿಸಿರೆಂದು ಕೇಳುವರು. ಆಯಾ ಗುಳಿ ಗಳಿಗೊಪ್ಪುವ ಬಿಲ್ಲೆಗಳನ್ನು ಆರಿಸಿಕೊಳ್ಳುವಾಗ ಮಕ್ಕಳು ಗುಳಿಯ ಮತ್ತು

ಬಿಲ್ಲೆಯ ಬಿಂಬ ಕಲ್ಪನೆಯನ್ನು ಮಾಡಿಕೊಂಡು ಅವುಗಳಿಗಿರುವ ಸಂಬಂಧ ವನ್ನು ದೃಢಪಡಿಸಿಕೊಳ್ಳಬೇಕು. ಆ ಮೂಲಕ ಗುಳಿಗೆ ಸರಿಯಾಗುವ ಬಿಲ್ಲೆಯನ್ನು ಆರಿಸಿ ತೆಗೆದುಕೊಂಡು ಜೋಡಿಸಬೇಕು. ಹಿಂದೆ ವಿವರಿಸಿದ ಭಾಷಾ ರೀತಿಯ ಸಂಬಂಧಕಲ್ಪನಾ ಪರೀಕ್ಷೆಗಳಲ್ಲಿ ಸಂಬಂಧವನ್ನು ಮನಸ್ಸಿ ನಲ್ಲಿ ಮಾಡಿಕೊಳ್ಳಬೇಕಾಗಿತ್ತು. ಅದು ಭಾವನೆಗೆ ಸೇರಿದ್ದಾಗಿತ್ತು. ಇಲ್ಲಿ ಆ ಸಂಬಂಧವನ್ನು ಕಣ್ಣಲ್ಲಿ ನೋಡಿ ಕಲ್ಪಿಸಿಕೊಳ್ಳಬೇಕಾಗಿದೆ. ಹೇಗೆ ಸಿದ್ಧಿಸಿದರೂ ಆ ಸಂಬಂಧಕಲ್ಪನಾಶಕ್ತಿ ಉನ್ನತ ಮಾನಸಶಕ್ತಿಗಳಲ್ಲೊಂದು. ಈ ಪರೀಕ್ಷೆ ಕೊಟ್ಟಾಗ ಯಾರು ಒಂದೇ ಸಲಕ್ಕೆ ಬಿಲ್ಲೆಯನ್ನು ಆರಿಸಿ ಜೋಡಿಸು ವರೋ ಅವರಿಗೆ ಪೂರ್ಣ ಅಂಕಿಗಳು. ಇನ್ನು ಕೆಲವರು ಸರಿಯಾಗಿ ಸಂಬಂಧ ಕಲ್ಪಿಸದೆ ತಪ್ಪು ಬಿಲ್ಲೆಗಳನ್ನು ಆರಿಸಿ ಜೋಡಿಸಲು ಯತ್ನಿಸುವರು. ಆದರೆ ಅದು ಜೋಡಣೆಯಾಗುವುದಿಲ್ಲ. ಎಂದರೆ, ಆರಿಸುವ ಮುನ್ನ ಸಂಬಂಧ ಕಲ್ಪನಾ ಯೋಜನೆ ನಡೆದಿರಬೇಕು. ತಪ್ಪಿದರೆ, ಮತ್ತೊಂದು ಸಲ ಹುಡು ಕಲು ಯತ್ನಿಸುವರು. ಒಂದೊಂದು ಸಲ ತಪ್ಪಿದ್ದಕ್ಕೂ ಅಂಕಿಗಳನ್ನು ಕಡಮೆ ಮಾಡುವರು. ಹಲವಾರು ಸಲ ಪ್ರಯತ್ನಿಸಿದರೆ ಪ್ರತಿಯೊಂದು ಗುಳಿಗೂ ಅನುಗುಣವಾದ ಬಿಲ್ಲೆಯನ್ನು ಜೋಡಿಸಬಹುದು; ತಕ್ಕಷ್ಟು ಕಾಲಾವಕಾಶ ಕೊಟ್ಟರೆ ಪ್ರಯತ್ನಗಳನ್ನು ನಡಸಿ ಕೊನೆಗೆ ತಕ್ಕಷ್ಟು ಸಂಬಂಧ ಕಲ್ಪನಾಶಕ್ತಿ ಯಿಲ್ಲದ ದಡ್ಡರೂ ಕೂಡ ಈ ಕಾರ್ಯವನ್ನು ಮಾಡಿಯಾರು. ಆದುದರಿಂದ ಕಾಲವನ್ನು ಇಲ್ಲಿ ಮಿತಿಗೊಳಿಸಲಾಗಿದೆ. ನಿಯಮಿತ ಕಾಲದೊಳಗೆ ಆ ಬಿಲ್ಲೆ ಗಳನ್ನು ಜೋಡಿಸಬೇಕು. ಆ ಮೂಲಕ ಅವನ ಬುದ್ಧಿಶಕ್ತಿಯನ್ನು ಅಳೆ ದಂತಾಗುತ್ತದೆ. ಕೆಲವು ಮಕ್ಕಳು ತಕ್ಕಷ್ಟು ಕಲ್ಪನಾಶಕ್ತಿಯಿಲ್ಲದೆ ಬಿಲ್ಲೆ ಗಳನ್ನು ಗುಳಿಗೇ ತೆಗೆದುಕೊಂಡುಹೋಗಿ ಜೋಡಿಸಿ ನೋಡಿ ಸರಿಯಾಗು ವುದೇ ಎಂದು ಪ್ರಯತ್ನಿಸಿ, ಅನೇಕ ಪ್ರಯತ್ನಗಳನಂತರ ಸರಿಯಾದ್ದನ್ನು ಆರಿಸಿ ಜೋಡಿಸುವರು. ಆದರೆ ಗುಳಿಗೂ ಬಿಲ್ಲೆಗೂ ಮನಸ್ಸಿನಲ್ಲೇ ಸಂಬಂಧ ಕಲ್ಪಿಸಿಕೊಂಡರೆ(ಭಾವನಾ ಮಟ್ಟದ ಸಂಬಂಧ ಕಲ್ಪನೆ) ಬೇಗ ಸರಿಯಾದ್ದನ್ನು ಆರಿಸಿ ಜೋಡಿಸಬಿಡಬಹುದು.

ಈಗ ಬಹುವಾಗಿ ಪ್ರಚಾರದಲ್ಲಿರುವ ಜೋಡಣೆಯ ಪರೀಕ್ಷೆ ಗಡಾರ್ಡರ ನಿರ್ಮಾಣ. ಅದನ್ನನುಸರಿಸಿ ಡಿಯರ್ ಬಾರ್ನ್ ಮುಂತಾದವರು ಹೆಚ್ಚು

ಸಂಕೀರ್ಣವಾಗುವಂತೆ ಗುಳಿಗಳನ್ನೂ ಬಿಲ್ಲೆಗಳನ್ನೂ ಏರ್ಪಡಿಸಿ ಇನ್ನೂ ಕಠಿಣ ವೆನಿಸುವ ಪರೀಕ್ಷೆಯನ್ನು ನಿರ್ಮಿಸಿರುವರು.

**ಚಿತ್ರ ಪರೀಕ್ಷಾ ಕ್ರಮ :** ಭಾಷಾ ಜ್ಞಾನ ತಕ್ಕಮಟ್ಟಿಗೆ ಇಲ್ಲದವರಿಗೆ ಅನುಕೂಲಿಸುವಂತೆ ಏರ್ಪಟ್ಟಿರುವ ಪರೀಕ್ಷಾ ಕ್ರಮಗಳಲ್ಲಿ ಚಿತ್ರ ಪರೀಕ್ಷಾ ಕ್ರಮವೂ ಒಂದು. ಒಂದು ವರ್ಗಕ್ಕೆ ಸೇರಿದ ಚಿತ್ರಗಳನ್ನು ಕೊಟ್ಟು, ಕೊಟ್ಟಿರುವ ಭಿನ್ನವರ್ಗದ ಚಿತ್ರಗಳಿಂದ ಆರಿಸೆಂದು ಕೇಳುವರು. ಕಥೆಯೊಂದನ್ನು ವಿವರಿಸುವ ಬೇರೆ ಬೇರೆ ಚಿತ್ರಗಳನ್ನು ಕ್ರಮ ವಿರಹಿತವಾಗಿ ಕೊಟ್ಟು, ಸರಿಯಾದ ಕ್ರಮದಲ್ಲಿ ಜೋಡಿಸೆಂದು ಹೇಳುವರು. ಆಗ ಬುದ್ಧಿಶಕ್ತಿಯಿಂದ ಕೇಳಿದ್ದನ್ನು ಮಾಡಬೇಕು. ಭಾಷಾಜ್ಞಾನ ತಕ್ಕಷ್ಟು ಇಲ್ಲದವರೂ ಇಂಥ ಪರೀಕ್ಷೆಗಳಿಗೆ ಉತ್ತರ ಕೊಡಬಹುದು. ಅವುಗಳ ಸ್ವರೂಪವನ್ನು ವಿವರಿಸಲು ಒಂದು ರೀತಿಯ ಚಿತ್ರಪರೀಕ್ಷಾಕ್ರಮವನ್ನು ಇಲ್ಲಿ ಕೊಟ್ಟಿದೆ: ಬೆಲ್ಲದ ತಯಾರಿಯನ್ನು ವಿವರಿಸುವ ಕಾರ್ಯಕ್ಕೆ ಸಂಬಂಧಿಸಿದ ಚಿತ್ರಗಳನ್ನು ಈ ಕ್ರಮದಲ್ಲಿ ಕೊಡಬಹುದು :—

೧. ಬೆಲ್ಲ ೨. ಕಬ್ಬಿನ ಬೀಜ ೩. ಕಬ್ಬಿನ ಜಳವೆ ೪. ಆಲೆಯ ಮನೆ —ಇವು ಸರಿಯಾದ ಕ್ರಮದಲ್ಲಿಲ್ಲ. ವಿದ್ಯಾರ್ಥಿಯು ಅದನ್ನು ಆಲೋಚಿಸಿ ಸೂಕ್ತವಾದ ಕ್ರಮದಲ್ಲಿ ಆ ಚಿತ್ರಗಳನ್ನು ಜೋಡಿಸಬೇಕು. ಇದು ಚಿಕ್ಕವರಿಗಾಗಿ. ದೊಡ್ಡವರಿಗೂ ಇದೇ ಮಾದರಿಯ ಸಂಕೀರ್ಣ ಪರೀಕ್ಷೆಗಳನ್ನು ಏರ್ಪಡಿಸಬಹುದು.

ಹೀಗೆ ತಕ್ಕಷ್ಟು ಭಾಷಾ ಜ್ಞಾನವಿಲ್ಲದವರ ಬುದ್ಧಿಶಕ್ತಿಯನ್ನೂ ಪರೀಕ್ಷಿಸಲು ಬೇರೆ ಬೇರೆ ರೀತಿಯ ಪ್ರದರ್ಶನ ಪರೀಕ್ಷೆಗಳು ಏರ್ಪಟ್ಟಿವೆ. ಇವು ಕೇವಲ ಭಾಷಾ ಜ್ಞಾನ ಕಡಮೆಯಿರುವವರಿಗೂ ಪರಭಾಷೆಯವರಿಗೂ ಅನುಕೂಲಿಸಲೆಂದು ನಿರ್ಮಿಸಿದ್ದರೂ ಇತರರಿಗೂ ಉಪಯೋಗವಾಗುತ್ತಿವೆ. ಭಾಷಾ ರೀತಿಯಲ್ಲಿ ಪರೀಕ್ಷಿಸಿ ಪಡೆದ ಫಲಿತಾಂಶದೊಡನೆ ಈ ಪರೀಕ್ಷೆಗಳಿಂದಲೂ ಪಡೆದುದನ್ನು ಹೋಲಿಸಿ ಅವರ ಬುದ್ಧಿಶಕ್ತಿಯನ್ನು ಹೆಚ್ಚು ಸಮರ್ಪಕವಾಗಿ ಅಳೆಯುವುದೂ ವಾಡಿಕೆಯಲ್ಲಿದೆ. ಜೊತೆಗೆ, ಮಕ್ಕಳಿಗೆ ವೃತ್ತಿಶಿಕ್ಷಣದಲ್ಲಿರಬಹುದಾದ ಅಭಿರುಚಿ ಆಸಕ್ತಿಗಳನ್ನು ನಿಷ್ಕರ್ಷಿಸಲೂ ಈ ಪ್ರದರ್ಶನ ಪರೀಕ್ಷೆಗಳು ಸಹಾಯವಾಗುತ್ತವೆ.

ಮೇಲೆ ವಿವರಿಸಿದ ಮಕ್ಕಳ ಬುದ್ಧಿಶಕ್ತಿಯನ್ನು ಅಳೆಯುವ ಈ ಪರೀಕ್ಷಾ ಸಾಧನ ಇನ್ನೂ ಪ್ರಯೋಗಾವಸ್ಥೆಯಲ್ಲಿದೆ. ಕೆಲವು ಪ್ರಶ್ನೆಗಳಿಗೆ ಉತ್ತರ ಬರೆಯುವಾಗ ಕೇವಲ ಬುದ್ಧಿಶಕ್ತಿಯೊಂದೇ ಸಾಲದು; ಶಿಕ್ಷಣವೂ ಆಗಿರಬೇಕು. ಆದರೆ ಹಾಗೆ ಪರಿಚಯವಿರಬೇಕಾದ ವಿಷಯ ಜ್ಞಾನ ಎಲ್ಲರಿಗೂ ತಿಳಿದವೇ ಆಗಿರುತ್ತವೆ. ಈ ರೀತಿಯಲ್ಲಿ ಬುದ್ಧಿಶಕ್ತಿಯನ್ನು ಅಳೆಯುವ ಕ್ರಮ ಎಲ್ಲ ದೇಶಗಳಲ್ಲೂ ಶಿಕ್ಷಣಚತುರರ ಮತ್ತು ಮನಶ್ಶಾಸ್ತ್ರಜ್ಞರ ಗಮನವನ್ನು ಸೆಳೆದಿವೆ. ಭಾರತದಲ್ಲೂ ಅಷ್ಟಿಷ್ಟು ನಡೆದಿವೆ. ಇನ್ನೂ ನಡೆಯಬೇಕಾಗಿದೆ. ಕ್ರಮ ಕ್ರಮವಾಗಿ ಈ ಕಾರ್ಯಸಾಧನೆಯಿಂದ ಶಿಕ್ಷಣರಂಗಕ್ಕೆ ಬಗೆ ಬಗೆಯ ಸಹಾಯಗಳಾಗುತ್ತಿವೆ; ಅವರವರ ಬುದ್ಧಿಗೊಪ್ಪುವಂತೆ ಬೋಧನಕ್ರಮವನ್ನು ಮಾರ್ಪಡಿಸಿಕೊಳ್ಳಬಹುದು; ಅವರ ಮೇಧಾಶಕ್ತಿಗೆ ಮೀರಿದ ವಿಷಯ ವ್ಯಾಸಂಗವನ್ನು ಮಕ್ಕಳಿಗೆ ಬಲವಂತದಿಂದ ಮಾಡಿಸುವಾಗ ಆಗುವ ಕಾಲವ್ಯಯವೂ ಅರ್ಥವ್ಯಯವೂ ನಿಲ್ಲುತ್ತವೆ; ದುರ್ಬಲ ಬುದ್ಧಿಶಕ್ತಿಯುಳ್ಳ ಬಾಲಕನೊಬ್ಬನನ್ನು ಇತರರಂತೆ ಅಭ್ಯಾಸ ಮಾಡೆಂದು ಬಲವಂತ ಮಾಡಿದಾಗ ಅವನು ಆ ಕಾರ್ಯ ಸಾಧಿಸಲಾರದೆ ಹಿಂದುಳಿದು, ಎಲ್ಲರ ಮುಂದೆ ನಗೆಗೀಡಾಗಿ ಆತ್ಮಗೌರವವನ್ನೂ ಸ್ವಾಭಿಮಾನವನ್ನೂ ಕಳೆದುಕೊಳ್ಳುವಂತೆ ಮಾಡಬೇಕಾದ ಪ್ರಸಂಗಗಳೂ ಕಡಮೆಯಾಗುತ್ತವೆ. ಅತ್ಯುನ್ನತ ಪ್ರತಿಭಾವಂತರು ಇತರರೊಡನೆ ನಿಧಾನವಾಗಿ, ಸಾಧಾರಣ ಶಿಕ್ಷಣ ಪಡೆಯಬೇಕಾಗಿರುವುದನ್ನು ತಪ್ಪಿಸಿ, ಅವನಿಗೇ ಹೆಚ್ಚಿನ ಪ್ರತ್ಯೇಕ ಶಿಕ್ಷಣವನ್ನು ಕೊಟ್ಟು ಅವನ ಮನಸ್ಸಿನ ಬೆಳವಣಿಗೆಗೆ ಉಚಿತವಾದ ಸನ್ನಿವೇಶ ಒದಗಿಸಿಕೊಡುವ ಆವಶ್ಯಕತೆಯೂ ಅರಿವಾಗುತ್ತದೆ. ಕಾರ್ಖಾನೆಗಳಲ್ಲೂ, ಸಮಾಜ ಸಂಸ್ಥೆಗಳಲ್ಲೂ, ಸರ್ಕಾರದ ಉದ್ಯೋಗಗಳಲ್ಲೂ ಅವರವರ ಅಭಿರುಚಿ, ಆಸಕ್ತಿ ಮತ್ತು ಮನಶ್ಶಕ್ತಿಗಳ ಮಟ್ಟ—ಇವುಗಳಿಗೊಪ್ಪುವಂತೆ ಕೆಲಸ ಕೊಡುವುದಾದರೆ ಪದಾರ್ಥಗಳ ಉತ್ಪನ್ನ ಹೆಚ್ಚಿ, ಸಮಾಜದಲ್ಲಿ ಕಾರ್ಯದಕ್ಷತೆ ಬೆಳೆದು ರಾಜ್ಯದಲ್ಲಿ ಸುಖಶಾಂತಿಗಳು ನೆಲಸುವುವು.

ದುರ್ಬಲ ಮನಶ್ಶಕ್ತಿಯುಳ್ಳ ಬಾಲಕರ ಶಿಕ್ಷಣಕ್ಕೆ ಬುದ್ಧಿಶಕ್ತಿಯ ಪರೀಕ್ಷೆಗಳು ತುಂಬ ಸಹಾಯಮಾಡುತ್ತಿವೆ. ದುರ್ಬಲ ಬುದ್ಧಿಶಕ್ತಿಯ ಬಾಲಕರಿಗೆ ಪ್ರತ್ಯೇಕ ಗಮನಕೊಟ್ಟು ಪಾಠ ಮಾಡುವುದರಿಂದ ಶಿಕ್ಷಣ

ಯಶಸ್ವಿಯಾಗುವುದೆಂದು ಹಿಂದೆ ವಿವರಿಸಿದೆ; ಸಾಮೂಹಿಕ ಪರೀಕ್ಷೆ ನಡಸಿ ಉಪಾಧ್ಯಾಯರು ಅಂಥ ಬಾಲಕರನ್ನು ಗುರುತುಮಾಡಿಕೊಂಡು ಅವರಿಗೆ ಹೆಚ್ಚಿನ ಗಮನಕೊಟ್ಟು ಪಾಠ ಹೇಳಬೇಕು. ಅದರಿಂದ ಸಾಧಾರಣ ಬಾಲಕರಂತೆ ಅವರೂ ಕಲಿಯಲು ಸಹಾಯವಾಗುತ್ತದೆ. ಮತ್ತು ಪ್ರತಿಭಾವಂತ ವಿದ್ಯಾರ್ಥಿಗಳೂ ಅವರೊಡನೆ ಕುಂಟಿ ಕುಂಟಿ ನಡೆಯಬೇಕಾಗುವುದರಿಂದ ಹುಟ್ಟುವ ಜಿಗುಪ್ಸೆಯೂ ತಪ್ಪುತ್ತದೆ. ಶಾಲೆಯ ಮುಖ್ಯೋಪಾಧ್ಯಾಯರು ತರಗತಿಗಳನ್ನು ಪಂಗಡಗಳನ್ನಾಗಿ ವಿಂಗಡಿಸುವಾಗ ಒಂದು ಮಟ್ಟದ ಬುದ್ಧಿ ಶಕ್ತಿಯವರನ್ನೆಲ್ಲ ಒಂದು ಪಂಗಡದಲ್ಲಿ ಸೇರಿಸಿ ವರ್ಗೀಕರಿಸಲು ಇದರಿಂದ ಸಹಾಯವಾಗುತ್ತದೆ; ಆಗ ಶಿಕ್ಷಣ ಹೆಚ್ಚು ಫಲದಾಯಕವಾಗಬಲ್ಲದು; ಪ್ರತಿಭಾವಂತರಿಗೇ ಹೆಚ್ಚಿನ ಬೇರೆ ಪಠ್ಯವಸ್ತುವನ್ನು ಅಳವಡಿಸಿಕೊಂಡು ಅವರ ಶಿಕ್ಷಣ ವಿಶಾಲವೂ ಆಳವೂ ಆಗುವಂತೆ ಮಾಡಬಹುದು; ಅಥವಾ ಅಂಥ ಪ್ರತಿಭಾವಂತರನ್ನು ಬೇಗ ಮುಂದಿನ ತರಗತಿಗೆ ಹಾಕಲನುಕೂಲಿಸುವಂಥ ಅರ್ಧ ವರ್ಷದ ಪರೀಕ್ಷೆಯನ್ನಾದರೂ ನಡಸಬಹುದು. ಅದಕ್ಕನುಕೂಲಿಸುವಂತೆ ಪಠ್ಯವಸ್ತುವನ್ನು ಹಂಚಿಕೊಳ್ಳಲೂ ಬಹುದು.

ಅಮೆರಿಕದಲ್ಲಿ ಬುದ್ಧಿಶಕ್ತಿಯ ಪರೀಕ್ಷೆಯ ಪ್ರಯೋಜನವನ್ನು ಶಿಕ್ಷಣ ರಂಗದಲ್ಲಿ ವಿವಿಧ ರೂಪದಲ್ಲಿ ಉಪಯೋಗಿಸಿಕೊಳ್ಳುತ್ತಿರುವರು. ಪ್ರಾಥಮಿಕ ಶಾಲೆಯಲ್ಲಿ ಉನ್ನತ ಮನಶ್ಶಕ್ತಿಯ ಬಾಲಕ ಬಾಲಕಿಯರಿಗೆ ಆರು ವರ್ಷದ ಶಿಕ್ಷಣವನ್ನು ನಾಲ್ಕೇ ವರ್ಷದಲ್ಲಿ ಕೊಡಲು ಈಗ ಆರಂಭವಾಗಿದೆ; ಹಾಗೆಯೇ ಹೆಚ್ಚು ಬುದ್ಧಿವಂತರಿಗಾಗಿ ಅಧಿಕ ಪಠ್ಯವಸ್ತುವನ್ನೂ, ಸಾಧಾರಣ ಮಟ್ಟದವರಿಗೆ ಅದಕ್ಕಿಂತ ಕಡಮೆ ಪಠ್ಯವಸ್ತುವನ್ನೂ, ದುರ್ಬಲರಿಗೆ ಮತ್ತೊಂದು ರೀತಿಯ ಪಠ್ಯವಸ್ತುವನ್ನೂ ರೂಪಿಸಿಕೊಳ್ಳಲು ಸಾಧ್ಯವಾಗಿದೆ. ಎಂದಮೇಲೆ ಈ ಪರೀಕ್ಷೆಗಳು ಆಡಳಿತಗಾರರಿಗೆ ಶಾಲೆಯ ಸಂವಿಧಾನದಲ್ಲಿ ವೈಜ್ಞಾನಿಕ ರೀತಿಯ ಫಲಪ್ರದವಾದ ವ್ಯವಸ್ಥೆ ಮಾಡಿಕೊಳ್ಳಲು ನೆರವಾಗುತ್ತದೆ.

ಇಂದಿನ ನಮ್ಮ ಸಾರ್ವತ್ರಿಕ ಪರೀಕ್ಷೆಗಳಲ್ಲಿ ಮಕ್ಕಳು ಕಲಿತದ್ದನ್ನು ಮಾತ್ರ ಪರೀಕ್ಷಿಸುತ್ತೇವೆ: ಮುಂದೆ ಅಭ್ಯಾಸಕ್ಕೆ ಹೋಗತಕ್ಕವರ ಕಲಿವಿನ ಶಕ್ತಿಯನ್ನೂ ಪರೀಕ್ಷಿಸುವುದು ಬಹು ಆವಶ್ಯಕ. ಕಾರಣಾಂತರದಿಂದ ಒಂದು ತರಗತಿಯಲ್ಲಿ ತಕ್ಕಷ್ಟು ಕಲಿಯಲಾಗದಿದ್ದು, ಕಲಿಯುವ ಶಕ್ತಿ

ಇದ್ದರೂ ಅವರನ್ನು ಅದೇ ತರಗತಿಯಲ್ಲಿ ಇರಿಸುವುದು ಉಚಿತವಲ್ಲ. ಆದುದರಿಂದ ಅವರ ಕಲಿಯುವ ಶಕ್ತಿಯನ್ನೂ ಗಣನೆಗೆ ತೆಗೆದುಕೊಂಡು ಫಲಿತಾಂಶವನ್ನು ನಿರ್ಧರಿಸುವುದುತ್ತಮ. ಎಂದಮೇಲೆ ಇಂದಿನ ನಮ್ಮ ಸಾರ್ವತ್ರಿಕ ಪರೀಕ್ಷೆಗಳಲ್ಲಿ ಕೆಲವು ಬುದ್ಧಿಶಕ್ತಿಯ ಪರೀಕ್ಷೆಗಳನ್ನೂ ಸೇರಿಸುವುದು ಲಾಭದಾಯಕವಾದುದು. ಪಾಶ್ಚಾತ್ಯ ದೇಶಗಳ ಪರೀಕ್ಷಾಕ್ರಮದಲ್ಲಿ ಈ ಅಂಶವನ್ನು ಒಪ್ಪಿಕೊಂಡು ಹತ್ತಾರು ವರ್ಷಗಳಿಂದಲೂ ಅವನ್ನು ಆಚರಣೆಗೆ ತರುತ್ತಿದ್ದಾರೆ.

ಶಿಕ್ಷಣಾಭಿವೃದ್ಧಿಯ ಮತ್ತು ಬುದ್ಧಿಶಕ್ತಿಯ ಈ ನೂತನ ಪರೀಕ್ಷಾಕ್ರಮ ಭಾರತದಲ್ಲೂ ಅಷ್ಟಿಷ್ಟು ಆರಂಭವಾಗಿದ್ದರೂ ಇನ್ನೂ ಬಹುವಾಗಿ ಬೆಳೆಯಬೇಕು. ಈ ಭಾಗದಲ್ಲಿ ಹೆಚ್ಚು ಕೆಲಸಮಾಡುತ್ತಿರುವವರು ಮನಶ್ಶಾಸ್ತ್ರಜ್ಞರು. ಶಿಕ್ಷಣವೇತ್ತರೂ, ಶಿಕ್ಷಣ ಸಂಸ್ಥೆಗಳೂ ಆ ಕಡೆ ಹೆಚ್ಚಿನ ಗಮನಕೊಡಬೇಕಾಗಿದೆ. ಶಿಕ್ಷಣ ಶಾಖೆಯವರೂ ಮನಶ್ಶಾಸ್ತ್ರ ಶಾಖೆಯವರೂ ಸಂಪರ್ಕ ವೇರ್ಪಡಿಸಿಕೊಂಡು ನೂತನ ಪರೀಕ್ಷಾಕ್ರಮಗಳನ್ನು ನಮ್ಮ ದೇಶಕ್ಕೊಪ್ಪುವಂತೆ ರೂಪುಗೊಳಿಸಬೇಕಾಗಿದೆ. ಕೆಲವು ತರಗತಿಗಳಿಗೆ ಯೋಗ್ಯವಾಗುವಂಥ ಪ್ರಶ್ನಾವಳಿಗಳು ಈಗ ಆರಂಭವಾಗಿವೆ. ಹಾಗೆಯೇ ಎಲ್ಲ ವರ್ಷದವರಿಗೂ ಅನುಕೂಲಿಸುವ ಪರೀಕ್ಷಾಕ್ರಮ ಆರಂಭವಾಗಿ ಆಯಾ ಮಟ್ಟಗಳಿಗೊಪ್ಪುವಂತೆ ಪರಿಷ್ಕರಣಗೊಂಡು ಪಕ್ವವಾಗಿ ರೂಪುಗೊಳ್ಳಬೇಕು. ಹಾಗೆ ಪ್ರಚಾರಕ್ಕೆ ಬಂದ ನೂತನ ಪರೀಕ್ಷಾಕ್ರಮದ ಫಲವನ್ನು ಉಪಯೋಗಿಸಿಕೊಂಡು, ನಮ್ಮ ಶಿಕ್ಷಣರಂಗದ ಬಗೆ ಬಗೆಯ ಸಮಸ್ಯೆಗಳನ್ನು ಇತ್ಯರ್ಥಪಡಿಸಿಕೊಂಡು ಶಿಕ್ಷಣಕಾರ್ಯ ಸುಗಮವಾಗಿ ಸಾಗುವಂತಾಗಬೇಕು.

**ಬುದ್ಧಿಶಕ್ತಿಯ ಸ್ವರೂಪ :** ಇದುವರೆಗೂ ಬುದ್ಧಿಶಕ್ತಿಯ ಪರೀಕ್ಷೆಗಳ ವಿಷಯವನ್ನು ತಿಳಿದುದಾಯಿತು. ಆದರೆ ಬುದ್ಧಿಶಕ್ತಿಯ ಸ್ವರೂಪವನ್ನು ಪರಿಚಯಮಾಡಿಕೊಡುವುದು ಬಹು ಕಷ್ಟ! ಸಾಮಾನ್ಯವಾಗಿ 'ಬುದ್ಧಿಶಕ್ತಿ ಬುದ್ಧಿಶಕ್ತಿ' ಎಂದು ಎಲ್ಲರೂ ಮಾತಾಡುತ್ತಾರೆ; ಆದರೆ ಅದು ಏನು ಎಂದು ಕೇಳಿದಾಗ ಸಮಂಜಸವಾದ ಉತ್ತರ ಹೇಳಲು ಕಷ್ಟವಾಗುತ್ತದೆ. ಬುದ್ಧಿಶಕ್ತಿಯ ಪರೀಕ್ಷೆ ಯಾವ ಯಾವ ಅಂಶಗಳನ್ನು ಪರೀಕ್ಷಿಸುತ್ತದೆಂಬುದನ್ನು ಗಣನೆಗೆ ತೆಗೆದುಕೊಂಡರೆ ಬುದ್ಧಿಶಕ್ತಿಯ ಸ್ವರೂಪ ಸ್ಥೂಲವಾಗಿ ಗೋಚರ

ವಾಗಬಹುದು. ಇತರರು ಹೇಳುವುದನ್ನು ಗ್ರಹಿಸುವುದು, ಅದರಂತೆ ಆವಶ್ಯಕವಾದರೆ ವರ್ತಿಸುವುದು, ಎದುರು ಬರುವ ಸನ್ನಿವೇಶಗಳನ್ನು ವಿವೇಚಿಸಿ ಅದರಲ್ಲಿರಬಹುದಾದ ದೋಷಗಳನ್ನು ಅರಿತುಕೊಳ್ಳುವುದು, ಒಮ್ಮೆ ತಪ್ಪು ಮಾಡಿದ ಅನುಭವದಿಂದ ಮುಂದೆ ಸರಿಯಾದ ಮಾರ್ಗವನ್ನು ಕಲಿಯುವುದು, ಒಮ್ಮೆ ಪಡೆದ ಅನುಭವಗಳನ್ನು ನೂತನ ಸಂದರ್ಭವೊಂದಕ್ಕೆ ಅನ್ವಯಿಸಿ ಉಪಯೋಗಿಸಿಕೊಳ್ಳುವುದು—ಈ ವರ್ತನೆಗಳಲ್ಲಿ ನಮ್ಮ ಬುದ್ಧಿಶಕ್ತಿ ಪ್ರಕಾಶಗೊಳ್ಳುತ್ತದೆ; ಹಾಗೆಯೇ ಸಂಬಂಧ ಕಲ್ಪನೆ, ಕಾರ್ಯಕಾರಣ ಜ್ಞಾನ, ವಿಷಯ ವಿಮರ್ಶೆ, ಸಮಸ್ಯೆಗಳನ್ನು ಪರಿಶೀಲಿಸಿ ವಿಷಯವನ್ನು ಪುನರ್ವ್ಯವಸ್ಥೆಗೊಳಿಸಿ ಇತ್ಯರ್ಥಪಡಿಸಿಕೊಳ್ಳುವುದು, ಭಾವನೆಯಲ್ಲಿ ಯೋಜನೆಯನ್ನು ರೂಪಿಸಿ ಅದನ್ನು ಕಾರ್ಯದಲ್ಲಿ ಸಾಧಿಸುವುದು, ನೂತನ ಸನ್ನಿವೇಶಗಳನ್ನರಿತು ಅವಕ್ಕನುಕೂಲಿಸುವಂತೆ ತನ್ನ ವರ್ತನೆಯನ್ನು ಬದಲಾಯಿಸಿಕೊಳ್ಳುವುದು—ಇವುಗಳಲ್ಲೂ ಬುದ್ಧಿಶಕ್ತಿ ಪಾತ್ರ ವಹಿಸುತ್ತದೆ. ಈ ಬೇರೆ ಬೇರೆ ಶಕ್ತಿಗಳನ್ನು ಪರೀಕ್ಷಿಸಿ ಆ ಮೂಲಕ ಬುದ್ಧಿಶಕ್ತಿಯ ಮಟ್ಟವನ್ನು ಅಳೆಯುವಂತೆ ಪರೀಕ್ಷೆಗಳು ರೂಪುಗೊಂಡಿವೆ. ಆ ಪರೀಕ್ಷೆಗಳಲ್ಲಿ ವ್ಯಕ್ತಿಗಳ ಶಿಕ್ಷಣದಿಂದ ಪಡೆದ ಜ್ಞಾನ ತನ್ನ ಪ್ರಭಾವವನ್ನು ಬೀರುವುದೇನೋ ನಿಜ: ಅದನ್ನು ತಡೆಯುವುದು ಸಾಧ್ಯವೇ ಇಲ್ಲ. ಜೊತೆಗೆ, ಎಲ್ಲ ವಿಷಯಗಳಲ್ಲೂ ಸಾಮಾನ್ಯ ಜ್ಞಾನ ಎಲ್ಲರಿಗೂ ಆವಶ್ಯಕತಾನೆ? ಆದ್ದರಿಂದ ವಿಷಯಜ್ಞಾನದ ಪ್ರಭಾವವನ್ನು ನಿರ್ಲಕ್ಷಿಸಬಹುದು. ಆದರೂ ಬುದ್ಧಿಶಕ್ತಿಯ ಪರೀಕ್ಷೆ ಆ ಜ್ಞಾನವನ್ನು ಅತಿಯಾಗಿ ಬಯಸಬಾರದು! ಆ ಪರೀಕ್ಷೆಗಳು ಉನ್ನತ ಮನಶ್ಶಕ್ತಿಗಳನ್ನು ಅಳೆಯುವುದರ ಮೂಲಕ ಬುದ್ಧಿಶಕ್ತಿಯ ಮಟ್ಟವನ್ನು ನಿಷ್ಕರ್ಷಿಸುತ್ತವೆ; ಎಂದಮೇಲೆ ಬುದ್ಧಿಶಕ್ತಿಯೆಂಬುದನ್ನು ಒಂದು ಸೂತ್ರದಲ್ಲಿ ಅಡಗಿಸಿ ಹೇಳುವುದು ಸಾಧ್ಯವಿಲ್ಲ. ಅದು ಬಗೆ ಬಗೆಯ ಮನಶ್ಶಕ್ತಿಗಳ ಕಾರ್ಯದ ಸ್ವರೂಪವಾಗಿದೆ.

ಹಾಗಾದರೆ ಬುದ್ಧಿಶಕ್ತಿ ಒಂದು ಶಕ್ತಿಯೆ? ಇಲ್ಲ, ಅನೇಕ ಶಕ್ತಿಗಳ ರೂಪದಲ್ಲಿದೆಯೆ?—ಎಂಬ ಪ್ರಶ್ನೆಗಳು ಸಹಜವಾಗಿಯೇ ಏಳುತ್ತವೆ. ಈ ಪ್ರಶ್ನೆಗಳನ್ನು ಪರಿಶೀಲಿಸುವುದರಿಂದ ಬುದ್ಧಿಶಕ್ತಿಯ ಸ್ವರೂಪ ಸ್ವಲ್ಪ ಮಟ್ಟಿಗಾದರೂ ಪರಿಚಯವಾದೀತು! ಈ ವಿಷಯದಲ್ಲಿರುವ ನಾಲ್ಕು ಭಿನ್ನಾಭಿಪ್ರಾಯಗಳನ್ನು ಕೆಳಗೆ ವಿವರಿಸಿದೆ:

**೧. ಏಕಮುಖ ಸ್ವರೂಪ:** ಸ್ಪಿಯರ್ಮನ್, ಸಿರಿಲ್ ಬರ್ಟ್, ಮೊದಲಾದವರು ಬುದ್ಧಿಶಕ್ತಿ 'ಒಂದು ಶಕ್ತಿಯ ಸ್ವರೂಪದಲ್ಲಿದೆ'ಯೆಂದು ವಾದಿಸಿ ಎಲ್ಲ ಮಾನಸಿಕ ಕ್ರಿಯೆಗಳ ಮೇಲೂ ಅದು ಆಡಳಿತ ನಡಸುವುದೆಂದು ತಿಳಿಸಿರುವರು. 'ಯಾವ ಕ್ರಿಯೆಗಾಗಲಿ ಆ ಒಂದೇ ಶಕ್ತಿ ಜವಾಬ್ದಾರಿಯಾದ್ದು. ಆದ್ದರಿಂದ ಯಾವುದಾದರೂ ಒಂದು ಮನಶ್ಶಕ್ತಿಯನ್ನು ಪರಿಶೀಲಿಸುವುದರಿಂದ ಇಡೀ ಬುದ್ಧಿಶಕ್ತಿಯ ಮಟ್ಟವೇ ಇಷ್ಟೆಂದು ಅನುಮೇಯಿಸಬಹುದು' ಎಂಬುದು ಈ ವಾದದ ತಿರುಳು. ಅದರಿಂದಲೇ ಈ ವಾದದ ಅನುಯಾಯಿಗಳು ಬುದ್ಧಿಶಕ್ತಿಯನ್ನು 'ಜೀವನದಲ್ಲಿ ಅನ್ವಯಿಸಿಕೊಳ್ಳಲು ನೆರವಾಗುವ ಒಂದು ಶಕ್ತಿ, ಎಲ್ಲ ವ್ಯಾಪಾರಕ್ಕೂ ಕಾರಣವಾದ ಒಂದು ದೈವದತ್ತವಾದ ಶಕ್ತಿ' ಎಂಬುದಾಗಿ ವಿವರಿಸಿರುವರು.

**೨. ತ್ರಿಮುಖ ಸ್ವರೂಪ:** ಬೀನೆ, ಥಾರ್ನ್‌ಡೈಕ್, ಮುಂತಾದವರು ಬುದ್ಧಿಶಕ್ತಿ ಮೂರು ಭಿನ್ನಮುಖಗಳಲ್ಲಿ ಪ್ರಕಾಶನಗೊಳ್ಳುವುದೆಂದು ವಾದಿಸಿರುವರು. ಸ್ಮರಣೆ, ಅವಧಾನ, ಇಂದ್ರಿಯ ಪಾಟವ, ಕಲ್ಪನೆ, ಆಲೋಚನೆ ಮುಂತಾದ ಭಾವನಾಮುಖ ಮೊದಲನೆಯದು; ವೃತ್ತಿಕೌಶಲ ಎರಡನೆಯದು; ಸಮಾಜ ಜೀವನ ಚತುರತೆ ಮೂರನೆಯದು. ಎಂದಮೇಲೆ ಇದಾವುದಾದರೂ ಒಂದನ್ನು ಅಳೆಯುವುದರಿಂದಲೇ ಇಡೀ ಬುದ್ಧಿಶಕ್ತಿಯ ಮಟ್ಟ ತಿಳಿಯುವಂತಿಲ್ಲ. ಅವೊಂದೊಂದೂ ಪ್ರತ್ಯೇಕ ಸ್ವರೂಪವಾದವು; ಆದ್ದರಿಂದ ಅವು ಮೂರು ರೀತಿಯ ಮಾನಸಿಕ ಕಾರ್ಯಗಳನ್ನೂ ಅಳೆದು ನಿರ್ಧರಿಸಬೇಕು. ಅದೊಂದೊಂದೂ ಪ್ರತ್ಯೇಕ ಶಕ್ತಿ ಎಂಬುದೇ ಈ ವಾದದ ತಿರುಳು.

**೩. ಬಹುಮುಖ ಸ್ವರೂಪ:** ಗಾಡ್ಫ್ರಿ ಥಾಂಸನ್ನರವರು ಬುದ್ಧಿಶಕ್ತಿ ಒಂದು ಶಕ್ತಿಯಲ್ಲವೆಂದು ವಿಶದೀಕರಿಸಿ 'ಬುದ್ಧಿಶಕ್ತಿಯೆಂಬ ಒಂದು ಪದವನ್ನು ಉಪಯೋಗಿಸುತ್ತಿರುವುದು ಕೇವಲ ಅನುಕೂಲಕ್ಕೋಸ್ಕರ; ಅದು ಅನೇಕ ಮನಶ್ಶಕ್ತಿಗಳ ಸಮೂಹಕ್ಕೆ ಕೊಟ್ಟಿರುವ ಉಚಿತವಾದ ಒಂದು ಹೆಸರು; ಮನಶ್ಶಕ್ತಿಗಳು ಅನೇಕವಾಗಿದ್ದು ಅವೊಂದೊಂದೂ ಪ್ರತ್ಯೇಕವಾಗಿ ಕೆಲಸಮಾಡತಕ್ಕವು' ಎಂದು ಸ್ಪಷ್ಟಪಡಿಸಿರುವರು. ಆ ಅನೇಕ ಶಕ್ತಿಗಳಲ್ಲಿ ಥಾರ್ನ್‌ಡೈಕರ ಮೂರು ಶಕ್ತಿಗಳೂ ಸೇರಿವೆ! ಎಂದಮೇಲೆ ಅಷ್ಟೊಂದು ಶಕ್ತಿಗಳನ್ನೂ ಪರೀಕ್ಷಿಸಿಯೇ ಒಬ್ಬನ ಬುದ್ಧಿಶಕ್ತಿಯ ಮಟ್ಟವನ್ನು ಅಳೆಯಬೇಕು.

**೪. ದ್ವಿಮುಖ ಸ್ವರೂಪ:** ಸ್ಪಿಯರ್‌ಮನ್ನರು ಎಲ್ಲ ಮಾನಸಿಕ ಕ್ರಿಯೆಗಳೂ ಎರಡು ಭಿನ್ನ ಅಡಳಿತಕ್ಕೆ ಸೇರಿದವೆಂದು ವಾದಿಸುತ್ತ 'ಮೊದಲನೆಯದಾಗಿ, ಎಲ್ಲ ಮಾನಸ ಕ್ರಿಯೆಗಳಲ್ಲೂ ಭಾಗವಹಿಸತಕ್ಕ ಸಾರ್ವತ್ರಿಕ ಶಕ್ತಿಯೊಂದೂ (G), ಎರಡನೆಯದಾಗಿ, ಒಂದೊಂದು ರೀತಿಯ ಭಿನ್ನ ಕ್ರಿಯೆಗೂ ಆಧಾರವಾದ ವಿಶೇಷ ಶಕ್ತಿ ಇನ್ನೊಂದೂ (S), ಎಂದು ಹೇಳುವರು. ಸಾರ್ವತ್ರಿಕ ಶಕ್ತಿ G ಒಬ್ಬ ವ್ಯಕ್ತಿಗೆ ಒಂದು ನಿರ್ದಿಷ್ಟ ಮಟ್ಟದ್ದು; ಆದರೆ ವಿಶೇಷ ಶಕ್ತಿಯಾದ S ಅನೇಕವಾಗಿದ್ದು ಒಂದೊಂದೂ ಒಂದೊಂದು ಮಟ್ಟದ್ದಿರುತ್ತದೆ. G ಯು ಅವನ ಎಲ್ಲ ಮಾನಸಿಕ ಶಕ್ತಿಗಳಮೇಲೂ ಆಧಿಪತ್ಯ ನಡಸುತ್ತಿದ್ದು, ಅವುಗಳ ಮಟ್ಟವನ್ನು ಸಾರ್ವತ್ರಿಕವಾಗಿ ನಿರ್ಧರಿಸುತ್ತದೆ; ಆದರೆ ಆ ವ್ಯಕ್ತಿಯ ವಿಶೇಷ ಶಕ್ತಿ ನಿರ್ಧರವಾಗುವುದು S ನ ಪ್ರಭಾವದಿಂದಲೇ. ಆದುದರಿಂದ ಬುದ್ಧಿಶಕ್ತಿ G ಮತ್ತು S ಎಂಬ ಎರಡು ಮುಖವಾಗಿರುತ್ತದೆ. G ಎಂಬುದು ಒಂದು ಸಾರ್ವತ್ರಿಕ ಶಕ್ತಿ (General ability). S ಎಂಬುದು $S_1$, $S_2$, $S_3$, $S_4$, $S_5$, · ಇತ್ಯಾದಿಯಾಗಿ ಅನೇಕವಾದ ವಿಶೇಷಶಕ್ತಿಗಳು (Special abilities). ಯಾವ ಪರೀಕ್ಷೆ ನಡಸಿದರೂ G ಯ ಮಟ್ಟದ ನಿಷ್ಕರ್ಷೆ ಆಗುತ್ತದೆ; S ನ ಮಟ್ಟ ನಿಷ್ಕರ್ಷೆಯಾಗಬೇಕಾದರೆ ಆ ವಿಶಿಷ್ಟ ಮಾನಸಿಕ ಕ್ರಿಯೆಯನ್ನು ಪರೀಕ್ಷಿಸಬೇಕು. ವ್ಯಕ್ತಿಯ ಸಾಮಾನ್ಯ ಬುದ್ಧಿಶಕ್ತಿಯ ಮಟ್ಟ ಎಷ್ಟೇ ಇದ್ದರೂ ವಿಶೇಷ ಶಕ್ತಿಗಳೊಂದೊಂದೂ ಒಂದೊಂದು ಮಟ್ಟವಾಗಿರುತ್ತದೆ. ಈ ವಿಶೇಷಶಕ್ತಿಗಳು ಸ್ಮರಣೆ, ಯೋಜನೆ, ಕಲ್ಪನೆ, ಆಲೋಚನೆ, ಅಭಿರುಚಿ, ಕೌಶಲ ಮುಂತಾದವುಗಳ ಸ್ವರೂಪದ್ದಿರುತ್ತವೆ.

G — | —$S_1$
| —$S_2$
| —$S_3$
| —$S_4$

ಒಂದೊಂದು ಮಾನಸಿಕ ಕ್ರಿಯೆಯಲ್ಲೂ ಸಾರ್ವತ್ರಿಕ ಶಕ್ತಿಗಳೊಡನೆ ಆಯಾ ವಿಶೇಷ ಶಕ್ತಿ ಹೊಂದಿಕೊಂಡೇ ಕೆಲಸ ಮಾಡುತ್ತದೆ. ಅವೆರಡೂ ಶಕ್ತಿಗಳ ಪ್ರಭಾವ ಆ ಕಾರ್ಯದಲ್ಲಿ ಗೋಚರಿಸುತ್ತದೆ. ಒಬ್ಬ ವ್ಯಕ್ತಿಯ ಸಾರ್ವತ್ರಿಕ ಶಕ್ತಿ ಯಾವಾಗಲೂ ಒಂದೇ ಆಗಿರುತ್ತದೆ. ಆದರೆ ವಿಶೇಷ ಶಕ್ತಿಗಳ ಮೇಲೆ ಯಾವಾಗಲೂ G ಯ ಪ್ರಭಾವ ಬೀಳುತ್ತಿರುವುದರಿಂದ ಅದರ ಮಟ್ಟ ಜೀವನದಲ್ಲಿ ಹೆಚ್ಚು ಕಡಮೆಯಾಗಬಹುದು.

**೫. ಸೋಪಾನ ಸ್ವರೂಪ:** ಸ್ಪಿಯರ್‌ಮನ್ನರ ವಾದವನ್ನು ಅಲೆಗ್ಸಾಂಡರ್ ಎಂಬುವರು ಮಾರ್ಪಡಿಸಿ ತಮ್ಮ ನೂತನ ವಾದವನ್ನು ಪ್ರಕಟಿಸಿರುವರು. ಅವರು 'ಮೇಲಿನ ನಾಲ್ಕು ವಾದಗಳಲ್ಲೂ ಅಷ್ಟಿಷ್ಟು ಸತ್ಯಾಂಶವಿರುವುದಾದರೂ ಪರಿಪೂರ್ಣವಾಗಿ ಯಾವೊಂದು ವಾದವೂ ಬುದ್ಧಿ ಶಕ್ತಿಯ ಸ್ವರೂಪವನ್ನು ವಿವರಿಸಲಾರದು' ಎಂದು ಹೇಳುತ್ತಾ, ಮನಸ್ಸನ್ನು ಹೋಗುತ್ತ ಹೋಗುತ್ತ ವಿಶಾಲವಾಗುವ ಸೋಪಾನವೊಂದಕ್ಕೆ ಹೋಲಿಸುವರು; ಸ್ಪಿಯರ್‌ಮನ್ನರ ದ್ವಿಮುಖ ವಾದವನ್ನು ಒಪ್ಪಿ ಅದನ್ನು ಮುಂದುವರಿಸಲು ಯತ್ನಿಸಿದ್ದಾರೆ. ಅವರು ಹೇಳುವಂತೆ G ಎಂಬುದು ಪ್ರಧಾನ ಸಾರ್ವತ್ರಿಕ ಮನಶ್ಶಕ್ತಿ; ವ್ಯಕ್ತಿಯ ಎಲ್ಲ ಕ್ರಿಯೆಗಳ ಮೇಲೂ ಅದು ಆಧಿಪತ್ಯ ನಡಸುತ್ತದೆ; ಈ ಪ್ರಥಮ ಶಕ್ತಿ ಎರಡು ಮುಖವಾಗಿ ಪ್ರವಹಿಸುತ್ತದೆ




**ಬುದ್ಧಿಶಕ್ತಿಯ ಸೋಪಾನ ಸ್ವರೂಪವನ್ನು ಸೂಚಿಸುವ ನಕ್ಷೆ**

ಸಾರಸ್ವತ ಮಾನಸಶಕ್ತಿ (V) ಮತ್ತು ಪ್ರಾಯೋಗಿಕ ಮನಶ್ಶಕ್ತಿ (F). ಇವು ಥಾರ್ನ್‌ಡೈಕರ ವಾದದಲ್ಲೂ ಇವೆ; ಹಾಗೆಯೇ ಸ್ಪಿಯರ್‌ಮನ್ನರ $S_1$, $S_2$, $S_3$ ಮೊದಲಾದ ವಿಶೇಷ ಶಕ್ತಿಗಳನ್ನೂ ಅಲೆಗ್ಸಾಂಡರು ಸೇರಿಸಿಕೊಂಡಿದ್ದಾರೆ. ಜೊತೆಗೆ ಕೆಲವು ನೂತನ ಶಕ್ತಿಗಳನ್ನೂ ಸೇರಿಸಿದ್ದಾರೆ. ಅವು

ವ್ಯಕ್ತಿಯ ಮನೋಭಾವಕ್ಕೆ ಸಂಬಂಧಿಸಿದ ಶಕ್ತಿಗಳು. ಸಂಕೇತದ ಮೂಲಕ ಅವರ ವಾದವನ್ನು ಮೇಲೆ ವಿವರಿಸಲಾಗಿದೆ. ಎಂದರೆ ಬುದ್ಧಿಶಕ್ತಿ ಒಬ್ಬ ವ್ಯಕ್ತಿಗೆ ನಿರ್ದಿಷ್ಟವಾಗಿರುತ್ತದೆ. ಈ ನಿರ್ದಿಷ್ಟ ಶಕ್ತಿಯಾದ Gಯು ಎರಡು ಭಾಗವಾಗಿರುತ್ತದೆ: ಸಾರಸ್ವತ ಶಕ್ತಿ, ಪ್ರಾಯೋಗಿಕ ಶಕ್ತಿ. ಇವೆರಡರಲ್ಲಿ ಒಂದು ಹೆಚ್ಚಾಗಿದ್ದರೆ ಇನ್ನೊಂದು ಕಡಮೆಯಾಗಿರುತ್ತದೆ. ಎರಡರ ಒಟ್ಟು ಪ್ರಮಾಣ Gಗೆ ಸಮವಾಗುತ್ತದೆ. ಹಾಗೆಯೇ ಇನ್ನೂ ಮೂರು ಸೋಪಾನಗಳಲ್ಲಿ ಈ ಶಕ್ತಿ ಪ್ರವಹಿಸಿ ಪ್ರಸಾರವಾಗಿರುತ್ತದೆ. ಸಂಖ್ಯಾ (N), ಯಾಂತ್ರಿಕ (M), ಪ್ರಾದೇಶಿಕ (S), ಸ್ವರೂಪಗಳನ್ನು ಒಂದು ಹಂತದಲ್ಲೂ, ಕಾರ್ಯಗಳನ್ನು ಮಾಡಬೇಕಾದರೆ ಅಗತ್ಯವಾದ ಮನೋಭಾವವನ್ನು (X) ಇನ್ನೊಂದು ಹಂತದಲ್ಲೂ, ಒಂದೊಂದು ಪ್ರತ್ಯೇಕ ಕಾರ್ಯಕ್ಕೂ ಆವಶ್ಯಕವಾದ ಸ್ಪಿಯರ್ ಮನ್ನರ ವಿಶೇಷ ಶಕ್ತಿಗಳನ್ನು (S) ಕೊನೆಯ ಹಂತದಲ್ಲೂ ತೋರಿಸಿದೆ.

ಅಲೆಗ್ಸಾಂಡರ ಈ ವಾದ ಹಿಂದಿನವರ ಎಲ್ಲ ಶಕ್ತಿಗಳನ್ನೂ ಒಳಗೊಂಡಿದೆ; ಸಾರಸ್ವತ ಶಕ್ತಿ ಹೆಚ್ಚಾಗಿದ್ದವರಿಗೆ ಪ್ರಾಯೋಗಿಕ (ವೃತ್ತಿಶಿಕ್ಷಣ) ಮನಶ್ಶಕ್ತಿ ಕಡಮೆಯಾಗಿರುತ್ತದೆಂಬುದು ಇವರ ವಾದ. ಹಾಗೆಯೇ ಪ್ರಾಯೋಗಿಕ ಶಕ್ತಿ ಹೆಚ್ಚಾಗಿದ್ದರೆ ಸಾರಸ್ವತ ಶಕ್ತಿ ಕಡಮೆಯಾಗಿರುತ್ತದೆ. ಜೊತೆಗೆ ಸಾಹಸ, ಸಹನೆ, ಉತ್ಸಾಹ, ಕಾರ್ಯತತ್ಪರತೆ ಮುಂತಾದ ಮನೋಗುಣಗಳಿಗೆ ಆಧಾರವಾದ ಮನಶ್ಶಕ್ತಿಗಳೂ ಇವೆಯೆಂದು ಅವರು ವಾದಿಸುವರು. ಹೀಗೆ ಒಟ್ಟು ಶಕ್ತಿ, G ಯು ಬೇರೆ ಬೇರೆ ಸೋಪಾನಗಳಲ್ಲಿ ಪ್ರವಹಿಸಿದೆ; ಹಾಗೆ ಪ್ರವಹಿಸುವಾಗ ಒಂದು ರೀತಿಯ ಶಕ್ತಿ ಹೆಚ್ಚಾಗಿದ್ದರೆ ಮತ್ತೊಂದು ರೀತಿಯ ಶಕ್ತಿ ಸ್ವಾಭಾವಿಕವಾಗಿ ಕಡಮೆಯಾಗಿರುವುದು.

ಮೇಲಿನ ಎಲ್ಲ ವಾದಗಳನ್ನೂ ಪರಿಶೀಲಿಸುವುದರಿಂದ ಬುದ್ಧಿಶಕ್ತಿ ಬಹು ಸಂಕೀರ್ಣವಾದದ್ದೆಂಬುದು ವ್ಯಕ್ತಪಡುತ್ತದೆ; ಆ ಸಂಕೀರ್ಣ ಮನೋರಾಜ್ಯದಲ್ಲಿ ಹಲವು ರೀತಿಯ ಮನಶ್ಶಕ್ತಿಗಳಿವೆ. ಒಂದು ರೀತಿಯ ಮನಶ್ಶಕ್ತಿ ವ್ಯಕ್ತಿಗೆ ಕಡಮೆಯಾಗಿದ್ದರೆ ಮತ್ತೊಂದು ರೀತಿಯ ಶಕ್ತಿ ಅವನಿಗೆ ಹೆಚ್ಚಾಗಿರಬೇಕು. ಅವೆಲ್ಲದರ ಮೇಲೂ ಮನಸ್ಸಿನ ಪ್ರಧಾನ ಶಕ್ತಿಯು ಕೈವಾಡ ಇದ್ದೇ ಇರುತ್ತದೆ. ಎಂದಮೇಲೆ, ನಮ್ಮ ಮನೋವ್ಯಾಪಾರವೊಂದೊಂದರಲ್ಲೂ ಅನೇಕ ಮಾನಸಿಕ ಶಕ್ತಿಗಳ ಕೈವಾಡ ಇರುತ್ತದೆ.

ಮಾನವನ ಬುದ್ಧಿಶಕ್ತಿ ಅವನ ಮನೋವ್ಯಾಪಾರಗಳಲ್ಲಿ ವ್ಯಕ್ತಪಡುತ್ತದೆ. ಹೇಳಿದ್ದನ್ನು ತಿಳಿದು ಉಚಿತ ರೀತಿಯಲ್ಲಿ ನಡೆಯುವುದು, ಎದುರು ಬರುವ ಸಮಸ್ಯೆಗಳನ್ನು ಪರಿಶೀಲಿಸಿ ಇತ್ಯರ್ಥಪಡಿಸಿಕೊಳ್ಳುವುದು, ದೋಷಗಳನ್ನು ಅರಿತು ವಿಮರ್ಶಿಸುವುದು, ಸಂಬಂಧ ಕಲ್ಪಿಸುವುದು, ಅನುಭವದಿಂದ ತಪ್ಪನ್ನು ತಿದ್ದಿಕೊಂಡು ಶಿಕ್ಷಣ ಪಡೆಯುವುದು, ಯೋಜನೆ ಕಲ್ಪಿಸುವುದು ಮತ್ತು ಅದನ್ನು ನಿರ್ವಹಿಸುವುದು, ಮುಂಗಾಣಿಕೆ, ಕಲ್ಪನಾಶಕ್ತಿ—ಇವೆಲ್ಲ ಮನೋವ್ಯಾಪಾರಗಳಲ್ಲೂ ಬುದ್ಧಿಶಕ್ತಿ ವ್ಯಕ್ತವಾಗುತ್ತದೆ. ಈ ಮನೋವ್ಯಾಪಾರವನ್ನು ಅಳೆಯಲು ರೂಪುಗೊಂಡಿರುವ ಭಾಷಾ ರೀತಿಯ ಮತ್ತು ಪ್ರದರ್ಶನ ರೀತಿಯ ಬುದ್ಧಿಶಕ್ತಿಯ ಪರೀಕ್ಷೆಗಳು ಬಹುಮಟ್ಟಿಗೆ ಆ ಕಾರ್ಯವನ್ನು ಸಾಧಿಸಬಲ್ಲವು.

ಬುದ್ಧಿಶಕ್ತಿಯ ಸ್ವರೂಪದ ಪರಿಚಯ ಇನ್ನೂ ನಿರ್ದಿಷ್ಟವಾಗಿ ತಿಳಿದಿಲ್ಲವಾದರೂ ತಿಳಿದಿರುವಷ್ಟನ್ನಾದರೂ ಉಪಾಧ್ಯಾಯರು ಪರಿಚಯಮಾಡಿಕೊಳ್ಳಬೇಕು. ಕೇವಲ ಭಾಷೆ, ಸಾಹಿತ್ಯ, ಚರಿತ್ರೆ ಮುಂತಾದ ಸಾಂಸ್ಕೃತಿಕ ಶಿಕ್ಷಣದಲ್ಲಿ ಉತ್ಸಾಹವನ್ನೂ ಅಭಿವೃದ್ಧಿಯನ್ನೂ ಪಡೆಯಲಾರದವನನ್ನು ದಡ್ಡನೆಂದು ತಳ್ಳಿಬಿಡುವಂತಿಲ್ಲ: ಪ್ರಾಯೋಗಿಕ ಶಿಕ್ಷಣದಲ್ಲಿ ಅವನಿಗೆ ಹೆಚ್ಚಿನ ಶಕ್ತಿಸಾಮರ್ಥ್ಯಗಳಿರಬೇಕೆಂಬುದನ್ನು ಉಪಾಧ್ಯಾಯರು ಆಗ ಮರೆಯಬಾರದು. ಅವನಿಗಿರುವ ಅಭಿರುಚಿಯನ್ನನುಸರಿಸಿ ಶಿಕ್ಷಣ ಕೊಡದೆ ಯಾವುದೋ ಶಿಕ್ಷಣದಲ್ಲಿ ದಡ್ಡನೆಂದು ನಿಷ್ಕರ್ಷಿಸುವುದು ಶಿಕ್ಷಕರ ದೋಷವಾದೀತು! ಮಾಧ್ಯಮಿಕ ಶಾಲೆಯಲ್ಲಿ ಮಕ್ಕಳ ಈ ಅಭಿರುಚಿಯ ನಿಷ್ಕರ್ಷೆಯ ಕಾರ್ಯಕ್ಕೆ ಹೆಚ್ಚು ಗಮನ ಕೊಡುವುದು ಅವಶ್ಯಕವೆಂದು ಅದರಿಂದಲೇ ಹಿಂದೆ ವಿವರಿಸಿರುವುದು. ಬುದ್ಧಿಶಕ್ತಿ ಸಾಂಸ್ಕೃತಿಕ ಶಿಕ್ಷಣದಲ್ಲಿರಲಿ, ವೃತ್ತಿ ಶಿಕ್ಷಣದಲ್ಲಿರಲಿ, ಅವರಿಗೆ ಸಮಾನ ಗೌರವವನ್ನು ಕೊಡುವುದು ಉತ್ತಮ. ಆದರೆ ಸಾಂಸ್ಕೃತಿಕ ಶಿಕ್ಷಣದಲ್ಲಿ ಅಭಿರುಚಿ ಆಸಕ್ತಿಯಿಲ್ಲದಿದ್ದರೂ ಸಾಂಪ್ರದಾಯಿಕ ಗೌರವಕ್ಕಾಗಿ ಸಾಂಸ್ಕೃತಿಕ ಶಿಕ್ಷಣಕ್ಕೇ ಮಕ್ಕಳನ್ನು ನೂಕುವುದು ಎಲ್ಲ ದೃಷ್ಟಿಗಳಿಂದಲೂ ಹಾನಿಕರವಾದುದು.

ಮಕ್ಕಳ ನಿಜವಾದ ಯೋಗ್ಯತೆಯನ್ನು ನಿಷ್ಕರ್ಷಿಸುವಾಗ ಸಾಂಸ್ಕೃತಿಕ ಮತ್ತು ಪ್ರಾಯೋಗಿಕ ಪರೀಕ್ಷೆಗಳೆರಡರಲ್ಲೂ ಪರೀಕ್ಷೆ ನಡೆಸುವುದು ಉತ್ತಮ.

ಆ ಮೂಲಕ ಮಕ್ಕಳ ನಿಜವಾದ ಬುದ್ಧಿಶಕ್ತಿಯನ್ನು ನಿಷ್ಕರ್ಷಿಸಲು ಹೆಚ್ಚು ಸಮರ್ಪಕವಾದ ಪ್ರಯತ್ನ ನಡೆದಂತಾಗುತ್ತದೆ.

ಯಾವ ಪ್ರಶ್ನಪತ್ರಿಕೆಯನ್ನೇ ತಯಾರಿಸಲಿ, ಮಕ್ಕಳ ಬಗೆ ಬಗೆಯ ಮನಶ್ಶಕ್ತಿಗಳು ಕಾರ್ಯ ಪ್ರವರ್ತವಾಗುವಂಥ ವಿವಿಧ ರೀತಿಯ ಪ್ರಶ್ನೆಗಳನ್ನು ಸೇರಿಸಬೇಕು. ಒಂದೇ ರೀತಿಯ ಪ್ರಶ್ನೆಗಳಿಗಿಂತ ಬಗೆ ಬಗೆಯ ಪ್ರಶ್ನೆಗಳನ್ನೊಳಗೊಂಡ ಪ್ರಶ್ನಪತ್ರಿಕೆಗಳಿಂದ ಮಕ್ಕಳ ಸಮಗ್ರ ಬುದ್ಧಿಶಕ್ತಿಯನ್ನೂ ಪರೀಕ್ಷಿಸಲು ಸಾಧ್ಯವಾತ್ತದೆ.

ಇಂದಿನ ನಮ್ಮ ಪರೀಕ್ಷಾ ಕ್ರಮದಲ್ಲಿರುವ ನ್ಯೂನತೆಗಳನ್ನು ತೋರಿಸಿ ಅವು ಮಾರ್ಪಡಬೇಕಾದ ಮಾರ್ಗವನ್ನು ಇಲ್ಲಿ ಸೂಚಿಸಿರುತ್ತದೆ. ಶಿಕ್ಷಣ ವೇತ್ತರೂ ಮನಶ್ಶಾಸ್ತ್ರ ಧುರೀಣರೂ ನಮ್ಮ ಶಾಲೆಗಳ ಬೇರೆ ಬೇರೆ ವಯಸ್ಸಿನ ಬಾಲಕರಿಗೊಪ್ಪುವಂತೆ ಶಿಕ್ಷಣಾಭಿವೃದ್ಧಿಯನ್ನೂ ಬುದ್ಧಿಶಕ್ತಿಯನ್ನೂ ಅಳೆಯುವ ಕಾರ್ಯದಲ್ಲಿ ಹೆಚ್ಚಿನ ಆಸಕ್ತಿ ತೋರಬೇಕಾಗಿದೆ; ಅದಕ್ಕಾಗಿ ಪ್ರಶ್ನಾವಳಿಗಳನ್ನು ಆಯಾ ತರಗತಿಗೊಪ್ಪುವಂತೆ ರೂಪುಗೊಳಿಸಿ, ಪ್ರಯೋಗಿಸಿ, ಪರಿಷ್ಕರಿಸಿ, ಸಿದ್ಧಪಡಿಸಿಕೊಡಬೇಕಾಗಿದೆ. ಅಂದಿನವರೆಗೂ ಈಗಿನ ಸಾಂಪ್ರದಾಯಿಕ ಪ್ರಶ್ನಪತ್ರಿಕೆಗಳನ್ನೇ ಮೇಲಿನ ಪರಿಜ್ಞಾನದ ಸಹಾಯದಿಂದ ಹೆಚ್ಚು ಉಪಯುಕ್ತವಾಗುವಂತೆ ರೂಪಿಸಿಕೊಳ್ಳಬೇಕು. ಅಂಕಿಗಳನ್ನು ಕೊಡುವಾಗಲೂ ಹಿಂದೆ ವಿವರಿಸಿರುವ ಎಚ್ಚರಿಕೆಯ ಕ್ರಮವನ್ನು ತೆಗೆದುಕೊಳಬೇಕು. ಒಟ್ಟಿನಲ್ಲಿ ಹೆಚ್ಚು ಸಮರ್ಪಕವಾದ ರೀತಿಯಲ್ಲಿ ಮಕ್ಕಳ ಅಭಿವೃದ್ಧಿಯನ್ನೂ ಬುದ್ಧಿಶಕ್ತಿಯನ್ನೂ ಅಳೆಯಲು ಯತ್ನಿಸಬೇಕು.

# ೧೫. ಶಿಕ್ಷಣದಿಂದಾಗಬೇಕಾದ ಫಲಗಳು

ಮೆಕಾಲೆಯವರು ಪಾಶ್ಚಾತ್ಯ ಜ್ಞಾನದ ಶಿಕ್ಷಣವನ್ನು ಇಂಗ್ಲೀಷು ಮಾಧ್ಯಮದಿಂದ ಕೊಡುವ ಯೋಜನೆಯನ್ನು ಭಾರತದಲ್ಲಿ ಆರಂಭಿಸಿದಂದಿನಿಂದ ಕರಣಿಕರ ನಿರ್ಮಾಣ ಶಿಕ್ಷಣದ ಮಹೋದ್ದೇಶವಾಯಿತು. ಆ ಶಿಕ್ಷಣ ಪಡೆದವರಿಗೇ ಸರ್ಕಾರದ ಕೆಲಸಗಳು ಮೀಸಲಾಗಿದ್ದು, ಪರೀಕ್ಷೆಗಳನ್ನು ಕಡೆ ಹಾಯಿಸುವುದೇ ಶಿಕ್ಷಣ ಸಂಸ್ಥೆಗಳ ಹೆಗ್ಗುರಿಯಾಗುತ್ತ ಬಂತು. ನಿಜವಾದ ಉದ್ದೇಶಗಳು ಹಿಂಬದಿಗೆ ಸರಿದುವು. ಈಚೆಗೆ ಪರೀಕ್ಷೆಯಲ್ಲಿ ತೇರ್ಗಡೆಯಾದವರಿಗೆಲ್ಲ ಹುದ್ದೆಗಳು ದೊರೆಯುವುದು ಕಡಮೆಯಾಗುತ್ತಿದ್ದರೂ, ಜನತೆಯ ಹಿಂದಿನ ಅಭಿಪ್ರಾಯ ಮಾತ್ರ ಇನ್ನೂ ಸಡಿಲವಾಗದೆ ನಿಂತುಬಿಟ್ಟಿದೆ. ನಮ್ಮ ಶಿಕ್ಷಣರಂಗದ ಈ ವಿಲಕ್ಷಣ ಫಲವನ್ನು ಕಂಡ ನಾಡಿನ ಮುಂದಾಳುಗಳು ಈ ಶತಮಾನದ ಆದಿಯಿಂದಲೂ ನಮ್ಮ ಪುರೋಭಿವೃದ್ಧಿಗೆ ನೆರವಾಗತಕ್ಕ ಶಿಕ್ಷಣವೀಯುವಂತೆ ಶಿಕ್ಷಣ ಯಂತ್ರವನ್ನು ಪುನರ್ವ್ಯವಸ್ಥೆಗೊಳಿಸಬೇಕೆಂದು ಘೋಷಿಸುತ್ತಲೇ ಬಂದಿದ್ದಾರೆ. ದಿವಂಗತ ಲಾಲಾ ಲಜಪತರಾಯರು ಇಂಥ ಶಿಕ್ಷಣ ನಮ್ಮ ಜನಾಂಗದ ಪುರೋಭಿವೃದ್ಧಿಗೆ ನೆರವಾಗುವುದಿಲ್ಲವೆಂದು ಸಾರಿ, ಅದರಿಂದ ನಮ್ಮ ಸರ್ವನಾಶವಾದೀತೆಂದು ಎಚ್ಚರಿಕೆಯಿತ್ತರು; ಜನತೆಯ ಸರ್ವಾಂಗೀಯ ಅಭಿವೃದ್ಧಿ ಸಾಧನೆಯಾಗತಕ್ಕ ಶಿಕ್ಷಣದ ಸ್ವರೂಪವನ್ನೂ ತೋರಿಸಿಕೊಟ್ಟರು. ಶಾಂತಿನಿಕೇತನ, ವಿದ್ಯಾಮಂದಿರ, ವಾರ್ಧಾ ಶಿಕ್ಷಣಕ್ರಮ ಮುಂತಾದ ವಿದ್ಯಾ ಯೋಜನೆಗಳು ಜನತೆಯ ಕಲ್ಯಾಣ ಸಾಧನೆಗಾಗಿ ರೂಪುಗೊಂಡುವು. ಪ್ರಾಥಮಿಕ ರಂಗಕ್ಕೊಪ್ಪುವಂಥ ಮೂಲಶಿಕ್ಷಣ (ನವತಾಲಿ) ಪದ್ಧತಿಯೊಂದು ವಾರ್ಧಾ ಯೋಜನೆಯನ್ನು ಅನುಸರಿಸಿ ರೂಪುಗೊಂಡು ಭಾರತದ ಬಹು ಭಾಗಗಳಲ್ಲಿ ಪ್ರಾಯೋಗಿಕವಾಗಿ ಆಚರಣೆಗೆ ಬರುತ್ತಿದೆ. ಈಗ ಜನತೆಯ ಹಿತಸಾಧನೆಗಾಗಿಯೇ ದುಡಿಯುತ್ತಿರುವ ಜನತೆಯ ಸರ್ಕಾರವಿರುವುದರಿಂದ ಆ ಶಿಕ್ಷಣ ಯೋಜನೆಗೆ ತಕ್ಕಷ್ಟು ನೆರವೂ ದೊರಕುತ್ತಿದೆ. ಹಾಗೆಯೇ ಶಿಕ್ಷಣದ ಇನ್ನಿತರ ರಂಗಗಳಲ್ಲೂ ಹಿಂದೆ ವಿವರಿಸಿರುವ ಬಹು ಬಗೆಯ ಬದಲಾವಣೆಗಳು ಇನ್ನೂ ಆಗಬೇಕಾಗಿದೆ.

ಸ್ವತಂತ್ರ ಭಾರತದ ಶಿಕ್ಷಣರಂಗ ಹಾಗೆ ಪುನರ್ವ್ಯವಸ್ಥೆಗೊಂಡು, ಅದರಿಂದ ಸಾಧನೆಯಾಗಬೇಕಾದ ಕಾರ್ಯವನ್ನು ಕಂಡುಕೊಂಡು, ಅದು ರೂಪಿಸ ಬೇಕಾಗಿರುವ ಜನತೆಯ ಸ್ವರೂಪವನ್ನು ನಿರ್ಧರಿಸಿಕೊಂಡು ಆ ಕಾರ್ಯ ವನ್ನು ಸಾಧಿಸಲು ಇನ್ನುಮೇಲಾದರೂ ದೃಢಮನಸ್ಸಿನಿಂದ ಮುಂದಡಿಯಿಡ ಬೇಕಾಗಿದೆ.

**೧. ದೃಢಕಾಯರಾದ ಜನಾಂಗದ ನಿರ್ಮಾಣ :** ಶಿಕ್ಷಣದಿಂದಾಗ ಬೇಕಾದ ಪ್ರಧಾನ ಫಲವೆಂದರೆ ದೃಢಕಾಯರೂ ಆರೋಗ್ಯವಂತರೂ ಆದ ಜನಾಂಗದ ನಿರ್ಮಾಣ. ನಮ್ಮ ಎಲ್ಲ ಐಹಿಕ ಸಾಧನೆಗಳಿಗೂ ಅದು ಮೂಲ ಭೂತವಾದ್ದು; ಅದಿಲ್ಲದ ಶಿಕ್ಷಣ ವ್ಯಕ್ತಿಗಾಗಲಿ ಸಮಾಜಕ್ಕಾಗಲಿ ಸುಖ ಶಾಂತಿಗಳನ್ನು ನೀಡಲಾರದು. ಜೊತೆಗೆ, ಅಂಥ ನಿರ್ಬಲ ಜನಾಂಗ ನಾಡಿನ ಸಂಪದಭಿವೃದ್ಧಿಯನ್ನು ಸಾಧಿಸುವುದು ಹಾಗಿರಲಿ, ಈಗತಾನೆ ದೊರೆತಿರುವ ಸ್ವಾತಂತ್ರ್ಯವನ್ನೂ ಬಹುಕಾಲ ಉಳಿಸಿಕೊಳ್ಳಲಾರದಾದೀತು!

ಶಾಲೆಗಳಿಂದಲೂ ಕಾಲೇಜುಗಳಿಂದಲೂ ಉನ್ನತೋನ್ನತ ದರ್ಜೆಯಲ್ಲಿ ತೇರ್ಗಡೆಯಾಗಿ ಹೊರಬೀಳುತ್ತಿರುವ ನಮ್ಮ ಯುವಕರನೇಕರು ನಿಸ್ತೇಜ ರಾಗಿಯೂ, ನಿರ್ವೀರ್ಯರಾಗಿಯೂ ಕಾಣುತ್ತಾರೆ. ದೈಹಿಕ ಶಿಕ್ಷಣಕ್ಕೆ ತಕ್ಕಷ್ಟು ಗಮನಕೊಡದಿರುವುದೇ ಇದಕ್ಕೆ ಕಾರಣ. ಮಕ್ಕಳ ಅಂಗ ಸಾಧನೆ, ಆರೋಗ್ಯಾಭಿವೃದ್ಧಿ, ಆಹಾರ ವ್ಯವಸ್ಥೆ ಮುಂತಾದವುಗಳಿಗೆ ನಾಡು ಎಷ್ಟು ವ್ಯಯಮಾಡಿದರೂ ವ್ಯರ್ಥವಲ್ಲವೆಂದೂ ಮುಂದೆ ನೂರ್ಮಡಿಯಾಗಿ ನಾಡಿಗೆ ಫಲವೀಯಬಲ್ಲದೆಂದೂ ಮನಗಾಣಬೇಕು. ಜೊತೆಗೆ, ಶಾಲಾ ಜೀವನದಲ್ಲಿ ಅವರಿಗೆ ವೈದ್ಯ ಪರೀಕ್ಷೆಯನ್ನೂ ವೈದ್ಯ ಸೌಲಭ್ಯವನ್ನೂ ದೊರ ಕಿಸಿಕೊಡಬೇಕು. ಮುಂದೆ ಅವರು ವಿದ್ಯಾವಂತರಾಗಿ ನಾಡಿನ ಬೇರೆ ಬೇರೆ ಗ್ರಾಮಗಳಲ್ಲೋ ನಗರಗಳಲ್ಲೋ ನೆಲಸಿದಾಗ ತಮ್ಮ ಆರೋಗ್ಯದ ಕಡೆ ಗಮನಕೊಡುವುದರ ಜೊತೆಗೆ ತಮ್ಮ ಸುತ್ತಮುತ್ತಿನವರ ಆರೋಗ್ಯ ಸಾಧ ನೆಗೆ ನೆರವಾಗುತ್ತಲೂ, ಸಮಾಜ ರೂಪುಗೊಳಿಸಿರುವ ವೈದ್ಯ ಸಂಸ್ಥೆಗಳ ಸಲಹೆಯನ್ನೂ ಸಹಾಯವನ್ನೂ ಸದುಪಯೋಗಪಡಿಸಿಕೊಳ್ಳುವಂತೆ ಮಾಡು ತ್ತಲೂ ಬಾಳುವ ಶಕ್ತಿ ಅವರಿಗೆ ಬರಬೇಕು. ಭವಿಷ್ಯ ಭಾರತದ ಭದ್ರತೆಗೂ ಆ ಮೂಲಕ ಜಗತ್ತಿನ ಶಾಂತಿ ವ್ಯವಸ್ಥೆಗೂ ನಾವು ಬಲಯುತವಾದ ಸೇನೆ

ಯನ್ನು ನಿರ್ಮಿಸಬೇಕಾಗಿದೆ. ಆ ಕಾರ್ಯಕ್ಕೆ ನೆರವಾಗುವಂತೆ ಶಿಕ್ಷಣ ಸಂಸ್ಥೆಗಳು ಮಕ್ಕಳ ದೈಹಿಕ ಶಿಕ್ಷಣದ ಕಡೆಗೂ, ಆರೋಗ್ಯ ಮತ್ತು ಆಹಾರ ವ್ಯವಸ್ಥೆಗಳ ಕಡೆಗೂ ಹೆಚ್ಚಿನ ಗಮನಕೊಟ್ಟು, ದೃಢಕಾಯರಾದ ಯುವಕರು ಶಾಲೆಗಳಿಂದ ಹೊರಬೀಳುವಂತಾಗಬೇಕು.

ದೈಹಿಕ ಬೆಳವಣಿಗೆಯಿಲ್ಲದೆ ಮಾನಸಿಕ ಬೆಳವಣಿಗೆಯೂ ಸಿದ್ಧಿಸುವಂತಿಲ್ಲ. ದೇಹದಾರ್ಢ್ಯವಿಲ್ಲದ ವಿದ್ಯಾರ್ಥಿಯೊಬ್ಬನ ಮಾನಸಿಕ ಶಕ್ತಿ ಪೂರ್ಣವಾಗಿ ವಿಕಸಿಸಿ ಫಲಪ್ರದವಾಗದೆ ಬಹುಮಟ್ಟಿಗೆ ವ್ಯರ್ಥವಾಗುತ್ತದೆ. ನಿರ್ಬಲ ವಿದ್ಯಾರ್ಥಿಯ ಬಿಂಬಕಲ್ಪನೆಯ ಶಕ್ತಿ, ಸನ್ನಿವೇಶಗಳನ್ನೂ ಸಮಸ್ಯೆಗಳನ್ನೂ ವಿವೇಚನೆಯಿಂದ ಎದುರಿಸುವ ಶಕ್ತಿ, ಆಲೋಚನಾಶಕ್ತಿ, ಗಹನ ವಿಷಯಗಳ ಮೇಲೆ ಸೂಕ್ಷ್ಮವಾಗಿ ಚಿಂತಿಸಿ ನಿರ್ಧರಿಸುವ ಶಕ್ತಿ ಮತ್ತು ಮಾನಸರಂಗ ಫಲಪ್ರದವಾಗಿ ಕೆಲಸಮಾಡಲು ಆವಶ್ಯಕವೆನಿಸುವ ಸಹನೆ, ಉದ್ಯೋಗಶೀಲತೆ, ಕಷ್ಟಸಹಿಷ್ಣುತೆ ಮುಂತಾದ ಮನೋಭಾವ—ಇವೆಲ್ಲವೂ ದುರ್ಬಲವಾಗುವುವು; ದೈಹಿಕ ಆಲಸ್ಯ ಮನಸ್ಸು ಮುಂದರಿದು ಕೆಲಸ ಮಾಡಲು ಅವಕಾಶವನ್ನು ಕೊಡಲಾರದು; ಚಿತ್ರಕಲೆ, ಸಾಹಿತ್ಯ, ನೃತ್ಯ ಮತ್ತು ಇನ್ನಿತರ ಲಲಿತಕಲೆಗಳಲ್ಲಿ ಅಭಿರುಚಿ ದೈವದತ್ತವಾಗಿ ಬಂದಿದ್ದರೂ ಫಲಪ್ರದವಾಗಿ ಕಾರ್ಯ ಸಾಧಿಸಲು ಉತ್ಸಾಹವಿರಲಾರದು; ಸತ್ಯಸೌಂದರ್ಯಗಳಲ್ಲಿ ಆಸಕ್ತಿ ಕಡಮೆಯಾಗಿ ಜೀವನದ ಮುಖ್ಯ ಉದ್ದೇಶಗಳಲ್ಲೊಂದಾದ ಕಲಾದೃಷ್ಟಿ ಕುಂಟಿತವಾದೀತು; ತನಗಿರುವ ವಿಶೇಷ ಅಭಿರುಚಿ ಆಸಕ್ತಿಗಳು ಹೊರಹೊಮ್ಮಿ ವ್ಯಕ್ತಿ ಸಮಾಜಕ್ಕೆ ಸಲ್ಲಿಸಬೇಕಾದ ಕಾಣಿಕೆಯೂ ಸಲ್ಲದೆ ಹೋಗಬಹುದು; ಎಂದಮೇಲೆ ವ್ಯಕ್ತಿಯ ಜೀವನ ಕಲಾ ಪೂರ್ಣವೂ ರಸಮಯವೂ ಸುಖಪ್ರದವೂ ಆಗಿದ್ದು, ಸಮಾಜದ ಪ್ರಗತಿಸಾಧನೆಯಾಗಿ, ನಾಡು ಪುರೋಭಿವೃದ್ಧಿಯ ಕಡೆ ಸಾಗಬೇಕಾದರೆ ಶಾಲಾ ಜೀವನದಲ್ಲಿ ಮಕ್ಕಳ ದೈಹಿಕ ಶಿಕ್ಷಣದ ಕಡೆ ಹೆಚ್ಚಿನ ಗಮನ ಕೊಡಬೇಕಾಗಿದೆ.

ದೈಹಿಕ ಆರೋಗ್ಯ ಮಾನಸಿಕ ಬೆಳವಣಿಗೆಗೆ ನೆರವಾಗುವುದರ ಜೊತೆಗೆ ನೈತಿಕ ಉನ್ನತಿಗೂ ಸಹಾಯಮಾಡಬಲ್ಲದು. ದೈಹಿಕ ಸಂಪತ್ತೂ ಆರೋಗ್ಯವೂ ಇಲ್ಲದವರು ನೈಷ್ಠಿಕ ಜೀವನ ನಡಸುವ ಸಾಹಸಸಹನೆಗಳನ್ನು ತಳೆದಿರಲಾರರು. ಅವರ ದೈಹಿಕದೌರ್ಬಲ್ಯ ಅನೇಕ ವೇಳೆ ಸೋಮಾರಿ

ತನಕ್ಕೂ, ದುಷ್ಟಟಗಳ ಕಡೆಗೂ ಸೆಳೆದು ನೈತಿಕ ಅಧಃಪತನಕ್ಕೆ ನೂಕ ಬಹುದು. ಸೃಷ್ಟಿಯ ಇನ್ನಿತರ ಸಚೇತನ ವಸ್ತುಗಳ ಕಡೆ ತೋರಬೇಕಾದ ದಯೆ, ಸಹಕಾರ, ಸದ್ಭಾವನೆ ಮುಂತಾದವುಗಳನ್ನು ತಳೆದಿದ್ದರೂ, ಕಾರ್ಯತಃ ಆಚರಿಸಲಾಗದೆ, ಜೀವನ ಸುಖಶಾಂತಿಗಳ ತವರಾಗುವಂತೆ ಮಾಡುವ ಶಕ್ತಿಯೂ ಇಲ್ಲದಾಗಬಹುದು.

ಕೇವಲ ಅಂಗಸಾಧನೆ ಮತ್ತು ಡ್ರಿಲ್ ಮಾಡಿಸುವುದೇ ದೈಹಿಕ ಶಿಕ್ಷಣವೆಂದು ಭಾವಿಸಬಾರದು : ಅದಕ್ಕೆ ಅನುಕೂಲಿಸುವಂತೆ ಇತರ ಹಲವು ಅಂಶಗಳ ಕಡೆಯೂ ಗಮನಕೊಡಬೇಕಾಗುತ್ತದೆ. ಮೊದಲನೆಯದಾಗಿ, ನಮ್ಮ ನಾಡು ಬಡವರ ದೇಶ; ಅನೇಕ ಪೋಷಕರು ಮಕ್ಕಳಿಗೆ ಉಚಿತವೂ ಒಳ್ಳೆಯದೂ ಆದ ಆಹಾರವನ್ನು ಸಕಾಲದಲ್ಲಿ ಒದಗಿಸಲಾರರು; ಅಂಥ ಮಕ್ಕಳನ್ನು ಅಂಗಸಾಧನೆ ಮಾಡೆಂದು ಕಟುಬಲುಮೆಯಿಂದ ಒತ್ತಾಯ ಮಾಡುವುದರಿಂದ ಬರೀ ಕಿರುಕುಳ ಮಾತ್ರವಾಗುತ್ತವೆ! ಇಂಗ್ಲೆಂಡ್, ಅಮೆರಿಕ ಮುಂತಾದ ಪ್ರಗತಿಪರ ದೇಶಗಳಲ್ಲಿ ಪೋಷಕರೂ, ಸರ್ಕಾರದವರೂ, ಸಾರ್ವಜನಿಕರೂ ಸಹಕರಿಸಿ ಇತ್ಯರ್ಥಪಡಿಸಿಕೊಂಡು ಶಾಲೆಗಳಲ್ಲಿ ಆಹಾರ ವ್ಯವಸ್ಥೆ ಮಾಡಿಕೊಂಡಿರುತ್ತಾರೆ. ನಮ್ಮ ದೇಶದಲ್ಲೂ ಈಚೆಗೆ ಹಲವು ಕಡೆ ಶಾಲೆಯಲ್ಲಿ ಮಕ್ಕಳಿಗೆ ಮಧ್ಯಾಹ್ನ ಆಹಾರ ಹಂಚುವ ಏರ್ಪಾಡು ಆರಂಭ ವಾಗಿದೆ. ಆದರೆ ಅದು ಇನ್ನೂ ಸಾರ್ವತ್ರಿಕವಾಗಿ ಯಶಸ್ವಿಯಾಗಬೇಕಾಗಿದೆ. ಅದಕ್ಕೆ ತಂದೆತಾಯಿಗಳೂ ಸಾರ್ವಜನಿಕರೂ ಹೆಚ್ಚಿನ ಆಸಕ್ತಿ ತೋರಬೇಕು. ಸರ್ಕಾರಕ್ಕೆ ಇದರಿಂದ ಎಷ್ಟು ಧನವ್ಯಯವಾದರೂ ವ್ಯರ್ಥವಲ್ಲ. ಕಟ್ಟಡಗಳ ಮೇಲೆ, ಇತರ ಕಾಮಗಾರಿಯ ಮೇಲೆ ಹಾಕಿದ ನಿಧಿಯಂತೆ ಅದೂ ಫಲ ದಾಯಕವಾಗಬಲ್ಲದು. ರಾಷ್ಟ್ರದ ಕೀರ್ತಿಗೌರವಗಳನ್ನುಳಿಸಲು ಕಾದಾಡ ಬೇಕಾದ ಸಂದರ್ಭವೊದಗಿದಾಗ ಖರ್ಚುಮಾಡಿದ ಆ ಹಣ ನೂರ್ಮಡಿ ಯಾಗಿ ಬರುವಂತಾದೀತು!

ಎರಡನೆಯದಾಗಿ, ಆರೋಗ್ಯಕರವಾದ ಅಭ್ಯಾಸಗಳನ್ನು ಕಲಿಸುವುದು: ಆರೋಗ್ಯ ಪಾಠದಲ್ಲಿ 'ಹಾಗಿರು; ಹೀಗಿರು' ಎಂದು ಹೇಳಿಬಿಟ್ಟರೆ ಸಾಲದು–ಶಾಲಾ ಜೀವನದಲ್ಲಿ ಮಕ್ಕಳು ಆರೋಗ್ಯಕರವಾದ ಅಭ್ಯಾಸಗಳನ್ನು ನಡೆಸು ವಂತೆ ಮಾಡಬೇಕು. ಆಟಪಾಟಗಳಲ್ಲಿ ಭಾಗವಹಿಸುವುದು, ದೇಹವನ್ನು

ಶುಚಿಯಾಗಿಟ್ಟುಕೊಳ್ಳುವುದು, ಬಟ್ಟೆಬರೆಗಳನ್ನು ಶುಭ್ರವಾಗಿಟ್ಟುಕೊಳ್ಳು ವುದು, ಅಂಟುಜಾಡ್ಯಗಳನ್ನು ತಡೆಯಲು ಎಚ್ಚರಿಕೆಯಿಂದಿರುವುದು, ಔಚಿತ್ಯ ವರಿತು ಆಹಾರ, ನಿದ್ರೆ, ವ್ಯಾಯಾಮ ಇವುಗಳ ಕಡೆ ಗಮನ ಕೊಡುವುದು— ಈ ಎಲ್ಲ ಅಂಶಗಳಲ್ಲೂ ಮಕ್ಕಳು ಸರಿಯಾದ ತಿಳಿವಳಿಕೆಯನ್ನು ಪಡೆದು ಅದರಂತೆ ಆಚರಿಸಬೇಕು. ದಿನಚರಿಯಲ್ಲಿ ಒಳ್ಳೆಯ ನಡೆನುಡಿಗಳನ್ನು ಆಚರಿಸುವುದರಿಂದ ಸಾಧನೆಯಾಗಬಲ್ಲ ದೈಹಿಕ ಲಾಭವನ್ನು ಮನದಟ್ಟು ಮಾಡಿಕೊಡಬೇಕು. ಶಾಲೆಯಲ್ಲಿರುವಷ್ಟು ಕಾಲವೂ ಇಂಥ ಆರೋಗ್ಯ ಜೀವನವನ್ನು ನಡಸುತ್ತಿದ್ದರೆ, ಅದೇ ಅಭ್ಯಾಸಕ್ಕೆ ಬಂದು, ಶಾಲೆಯಾಗಲಿ ಮನೆಯಾಗಲಿ ಅದರಂತೆ ನಡೆದುಕೊಳ್ಳಲು ಅವಕಾಶವಾಗುತ್ತದೆ. ಶಾಲಾ ಜೀವನ ಮುಗಿದಮೇಲೂ ದಿನಚರಿಯಲ್ಲಿ ಆ ಅಭ್ಯಾಸಗಳು ದೃಢವಾಗಿ ಉಳಿದು ಆರೋಗ್ಯಭಾಗ್ಯ ಬೆಳೆಯುತ್ತದೆ. ಶಾಲೆಯಲ್ಲಿ ಆರೋಗ್ಯಕರವಾದ ಜೀವನವನ್ನು ನಡಸುತ್ತಿದ್ದು, ಮನೆಗೆ ಬಂದಮೇಲೆ, ಹಲವಾರು ಕಾರಣ ಗಳಿಂದ ಹಿಂದಿನ ದುರಭ್ಯಾಸಗಳಿಗೇ ಹಿಂದಿರುಗುವುದಾದರೆ ಪ್ರಯೋಜನ ವಾಗಲಾರದು. ಆದ್ದರಿಂದ ಪೋಷಕರೂ ಶಿಕ್ಷಣ ಸಂಸ್ಥೆಯವರೊಡನೆ ಸಹ ಕರಿಸಿ ಮಕ್ಕಳ ಆರೋಗ್ಯ ಜೀವನ ಫಲಪ್ರದವಾಗುವಂತೆ ನೆರವಾಗಬೇಕು.

ಆರೋಗ್ಯ ಪಾಠದಲ್ಲಿ ಹಲವಾರು ರೋಗಗಳ ಕಾರಣಗಳನ್ನೂ, ಅವು ಗಳ ಸೂಚನೆಗಳನ್ನೂ ತಿಳಿಸಿ ಕೃತಕೃತ್ಯರಾದೆವೆಂದು ನಮ್ಮ ಶಿಕ್ಷಕರು ಭಾವಿಸಬಾರದು: ಅದಷ್ಟೇ ಆರೋಗ್ಯ ಶಿಕ್ಷಣವೆಂದು ಧೈರ್ಯವಾಗಿ ಹೇಳು ವಂತಿಲ್ಲ; ರೋಗಗಳನ್ನು ತಡೆಯುವುದು ಮುಖ್ಯವೆಂಬ ಅಂಶವನ್ನು ಮಕ್ಕಳ ಮನಸ್ಸಿನಲ್ಲಿ ಮೂಡಿಸಿ, ಆ ಕಾರ್ಯಕ್ಕೆ ಅವಶ್ಯಕವೆನಿಸುವ ಆರೋಗ್ಯಕರವಾದ ಅಭ್ಯಾಸಗಳ ಕಡೆ ಅವರ ಗಮನ ಬೀಳುವಂತೆಯೂ ಅವನ್ನು ಆಚರಿಸುವಂತೆಯೂ ಪ್ರೋತ್ಸಾಹಿಸಬೇಕು. ಅದಷ್ಟರಿಂದಲೇ ರೋಗ ಬರುವುದೇ ಇಲ್ಲವೆಂದು ಹೇಳಲಾಗದು; ಬಂದೂ ಬರಬಹುದು. ಅಂಥ ಅನಿವಾರ್ಯ ಪ್ರಸಂಗದಲ್ಲಿ ಪೂರ್ವಭಾವಿಯಾದ ಎಲ್ಲ ಎಚ್ಚರಿಕೆ ಗಳನ್ನೂ ತೆಗೆದುಕೊಳ್ಳುವುದರ ಜೊತೆಗೆ ಆಸ್ಪತ್ರೆಯೇ ಮೊದಲಾದ ಸಾರ್ವ ಜನಿಕ ಆರೋಗ್ಯಕ್ಕಾಗಿರುವ ಸಂಸ್ಥೆಗಳ ಉಪಯೋಗವನ್ನು ಸಕಾಲದಲ್ಲಿ ಪಡೆಯಬೇಕೆಂಬ ಮನೋಭಾವವೂ ಬೇರೂರುವಂತೆ ಮಾಡಬೇಕು. ರೋಗ

ಬಂದೊಡನೆ ಚಿಕಿತ್ಸೆಗಾಗಿ ಆಸ್ಪತ್ರೆಗೆ ಹೋಗಬೇಕೆಂಬ ದೃಢಸಂಕಲ್ಪದ ಸಂಪ್ರದಾಯವನ್ನು ಶಾಲಾ ಜೀವನದಲ್ಲೇ ಆಚರಿಸುವುದರ ಮೂಲಕ ಅವರಲ್ಲಿ ಉಂಟುಮಾಡಬೇಕು. ಆಸ್ಪತ್ರೆಗಳೆಂದರೆ ಹಿಂದೆಗೆಯುವ ನಮ್ಮ ಜನಸಾಮಾನ್ಯದಲ್ಲೂ ಅದೇ ಸಂಪ್ರದಾಯವನ್ನು ಪ್ರೋತ್ಸಾಹಿಸಲು ತಾವೂ ಯತ್ನಿಸಬೇಕೆಂಬ ಸದ್ಬುದ್ಧಿಯನ್ನೂ ಬೆಳಸಬೇಕು. ಅದರಿಂದ ವ್ಯಕ್ತಿಯ ಆರೋಗ್ಯ ಉತ್ತಮಗೊಳ್ಳುವುದಲ್ಲದೆ, ಸಾರ್ವಜನಿಕ ಆರೋಗ್ಯವೂ ಸಾಧನೆಯಾಗಿ, ಸಾಂಕ್ರಾಮಿಕ ರೋಗಗಳಿಂದೊದಗುವ ಸಮಾಜ ದುರಂತಗಳು ನಿಲ್ಲುವುವೆಂಬ ಸತ್ಪ್ರಜಾಮನೋಭಾವ ಅವರ ಮನಸ್ಸಿನಲ್ಲಿ ಬೆಳೆದುಬರಬೇಕು.

ಇಂಥ ಆರೋಗ್ಯ ಜೀವನದ ಜೊತೆಗೆ ಶಾಲೆಗಳಲ್ಲಿ ಉಚಿತವೆನಿಸುವ ದೈಹಿಕ ಶಿಕ್ಷಣವೀಯುವುದು ಅಗತ್ಯ. ಈಗ ಯಾಂತ್ರಿಕವಾಗಿ ಬಲವಂತ ಮಾಘ ಸ್ನಾನದಂತೆ ನಡೆಯುವ 'ಡ್ರಿಲ್' ತರಗತಿಗಳಿಂದ ಆಗುತ್ತಿರುವ ಪ್ರಯೋಜನಕ್ಕಿಂತ ಹಾನಿಯೇ ಹೆಚ್ಚೆಂದು ತೋರುತ್ತದೆ. ಮೊದಲನೆಯದಾಗಿ, ಸರಿಯಾದ ಆಹಾರ ಅವರಲ್ಲಿ ಬಹುಮಂದಿಗೆ ಮಧ್ಯಾಹ್ನದ ವೇಳೆ ದೊರಕುತ್ತಿಲ್ಲ; ಎರಡನೆಯದಾಗಿ, ಮನಸ್ಸಿಲ್ಲದೆ ಕಟು ಬಲುಮೆಗಾಗಿ ಬರಬೇಕಾಗಿರುವುದರಿಂದ ಅದರಿಂದ ಯಾವ ಪ್ರಯೋಜನವೂ ಆಗಲಾರದು; ಮೂರನೆಯದಾಗಿ, ಅನೇಕ ಕಡೆ ಅದು ಶಾಸ್ತ್ರೀಯವಾಗಿಯೂ ನಡೆಯುತ್ತಿಲ್ಲ. ಈ ಹಲವು ನ್ಯೂನತೆಗಳನ್ನು ನಿವಾರಿಸಿ ಉತ್ಸಾಹದಿಂದ ಮಕ್ಕಳು ಭಾಗ ವಹಿಸುವಂತೆಯೂ, ಆಗ ಅವರಿಗೆ ಶಾಸ್ತ್ರೀಯ ರೀತಿಯ ಆಕರ್ಷಣೀಯ ದೈಹಿಕ ಶಿಕ್ಷಣ ದೊರೆಯುವಂತೆಯೂ ಯತ್ನಿಸಬೇಕು. ನಮ್ಮ ನಾಡಿನಲ್ಲಿ ಹಿಂದಿನಿಂದಲೂ ಬಂದಿರುವ ಗರಡಿ, ಸಾಮು, ಕುಸ್ತಿ, ಕೋಲಾಟ ಮೊದಲಾದ ಸಾಮೂಹಿಕ ನೃತ್ಯಗಳನ್ನೂ ಪ್ರಚಾರಕ್ಕೆ ತರಬೇಕು. ಹಿಂದೆ ಪ್ರತಿಪಾದಿಸಿರುವಂತೆ ನೃತ್ಯ ಶಿಕ್ಷಣವನ್ನೂ ಪ್ರೌಢಶಾಲೆಯಲ್ಲಿ ಐಚ್ಛಿಕ ವಿಷಯವಾಗಿ ಮಾಡುವುದಲ್ಲದೆ ಇನ್ನಿತರ ಶಾಲೆಗಳಲ್ಲೂ ಸಾಮೂಹಿಕ ನೃತ್ಯವನ್ನಾದರೂ ಆಚರಣೆಗೆ ತರುವುದು ಒಳ್ಳೆಯದು.

ಈಚೆಗೆ ವಯಸ್ಕ ವಿದ್ಯಾರ್ಥಿಗಳಿಗೆ ಕಡ್ಡಾಯವಾಗಿ ಸೈನಿಕ ಶಿಕ್ಷಣ ಕೊಡಬೇಕೆಂಬ ಕೂಗು ಜನತೆಯಲ್ಲಿ ಕೇಳಿಬರುತ್ತಿದೆ. ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಿಗೆ ಹಲವೆಡೆಗಳಲ್ಲಿ ಇಷ್ಟಪಟ್ಟವರಿಗೆ ಮಾತ್ರ ಈ ಶಿಕ್ಷಣ

ವನ್ನು ಕೊಡಲಾಗುತ್ತಿದೆ. ಸಾರ್ವತ್ರಿಕವಾಗಿ ವಿಶ್ವವಿದ್ಯಾನಿಲಯದ ಮತ್ತು ಪ್ರೌಢಶಾಲೆಯ ಅಂತಸ್ತಿನ ಯುವಕರಿಗೆಲ್ಲ ಕಡ್ಡಾಯವಾಗಿ ಸೈನಿಕ ಶಿಕ್ಷಣ ಕೊಡುವುದು ಅಗತ್ಯ. ಅದರಿಂದಲೂ ಯುವಕರ ದೈಹಿಕ ಶಕ್ತಿ ಹೆಚ್ಚಿ ಅವರ ಅಂಗ ಸೌಷ್ಠವ ಸಮರ್ಪಕವಾಗಿ ರೂಪುಗೊಂಡು, ಉತ್ತಮ ಜನಾಂಗದ ನಿರ್ಮಾಣವಾದೀತು. ಜೊತೆಗೆ 'ಯುದ್ಧಕಾಲದಲ್ಲಿ ಶಸ್ತ್ರಾಭ್ಯಾಸ' ಮಾಡುವ ಅನಿವಾರ್ಯವೂ ಬಹುಮಟ್ಟಿಗೆ ತಪ್ಪೀತು.

೨. **ಮಾನಸಿಕ ಸಂಸ್ಕರಣ:** ಆರೋಗ್ಯವಿಹೀನನಾದ ದುರ್ಬಲ ವ್ಯಕ್ತಿಯ ಬುದ್ಧಿಶಕ್ತಿಯೂ ಜ್ಞಾನಾರ್ಜನೆಯೂ ಹೇಗೆ ವ್ಯರ್ಥವೋ ಹಾಗೆಯೇ ಅಸಂಸ್ಕೃತನ ಬಲಾಢ್ಯ ಜೀವನವೂ ವ್ಯರ್ಥ. ಎಂದರೆ ದೈಹಿಕ ಮತ್ತು ಮಾನಸಿಕ ಶಿಕ್ಷಣಗಳಲ್ಲಿ ಯಾವುದನ್ನೂ ದುರ್ಲಕ್ಷಿಸುವಂತಿಲ್ಲ, 'ಒಳ್ಳೆಯ ದೇಹದಲ್ಲಿ ಒಳ್ಳೆಯ ಮನಸ್ಸು' ಎನ್ನುವಂತೆ ಅವರೆಡೂ ಸಮನ್ವಯವಾಗಿಯೇ ಬೆಳೆಯಬೇಕು. ನಮ್ಮ ಶಾಲೆಗಳು ಮಕ್ಕಳ ಬುದ್ಧಿಶಕ್ತಿಯನ್ನೇನೂ ಹೊಸದಾಗಿ ಸೃಷ್ಟಿಸುವಂತಿಲ್ಲವೆಂದು ಹಿಂದೆಯೇ ಹೇಳಿದೆ: ಇರುವ ಅವರ ಮಾನಸ ಶಕ್ತಿಗಳೆಲ್ಲ ಉಚಿತಮಾರ್ಗದಲ್ಲಿ ಪೂರ್ಣವಾಗಿ ಬೆಳೆದು ವಿಕಸಿಸುವಂತೆ ಮಾಡಬೇಕು. ಜೊತೆಗೆ, ಶಾಲೆಯಲ್ಲಿ ಪಡೆದ ಜ್ಞಾನಾರ್ಜನೆ ಜೀವನದಲ್ಲಿ ಫಲಪ್ರದವಾಗುವಂತೆ ಪ್ರಯೋಗಿಸುವ ಶಕ್ತಿಯನ್ನು ಅವರಿಗೆ ದೊರಕಿಸಬೇಕು. ಅಂದು ಮಾತ್ರ ಅವರು ನಿಜವಾದ ವಿದ್ಯಾವಂತರಾದರೆನ್ನಬಹುದು.

ಭಾಷೆ, ಸಾಹಿತ್ಯ, ಚರಿತ್ರೆ, ಭೂವಿವರಣೆ, ಆರೋಗ್ಯ, ಗಣಿತ ಮೊದಲಾದ ಯಾವ ಪಾಠವಾಗಲಿ, ಜೀವನಕ್ಕೆ ಉಪಯುಕ್ತವೆನಿಸುವ ತತ್ವಗಳನ್ನೂ ನಿಯಮಗಳನ್ನೂ ಒಳಗೊಂಡೇ ಇರುತ್ತವೆ. ಜನಾಂಗದ ಶತಶತಮಾನಗಳ ಬಾಳಿಕೆಯ ಫಲವಾಗಿ ಮೂಡಿರುವ ಆ ಜ್ಞಾನ ರಾಶಿಯಲ್ಲಿ ನಮ್ಮ ಇಂದಿನ ಜೀವನಕ್ಕೆ ನೆರವಾಗುವಷ್ಟನ್ನಾದರೂ ಎಲ್ಲ ಮಕ್ಕಳೂ ಕಲಿಯಬೇಕು. ಇಂದಿನ ಸಮಾಜ ಸನ್ನಿವೇಶಗಳನ್ನು ಅರಿತು ಅದಕ್ಕೆ ಅನ್ವಯಿಸಿಕೊಂಡು ಬಾಳುವ ಶಕ್ತಿಯೂ ಆ ಮೂಲಕ ಬರಬೇಕು. ಬರಿಯ ಜ್ಞಾನಾರ್ಜನೆಯಿಂದಲೇ ಇದು ಸಿದ್ಧಿಸುವಂತಿಲ್ಲ: ಜೀವನದಲ್ಲಿ ಸ್ವತಂತ್ರವಾಗಿ ವಿಮರ್ಶಿಸಿ ಆಲೋಚಿಸಿ ನಿರ್ಧರಿಸಿ ನಡೆದುಕೊಳ್ಳುವ ಶಕ್ತಿಯೂ ಧೈರ್ಯವೂ ಅವರಲ್ಲಿ ಅಂಕುರಿಸಬೇಕು. ಆರ್ಜಿಸಿದ ಜ್ಞಾನ ಅನುಪಯುಕ್ತವಾಗಿ ಸಂಗ್ರಹವಾಗಿರು

ವುದಾದರೆ ವ್ಯರ್ಥ. ಅದು ಜೀವನವನ್ನು ಹಸನು ಮಾಡಲು ನೆರವಾಗ ಬೇಕು; ವ್ಯಕ್ತಿಯ ಮುಂದಿನ ಶಿಕ್ಷಣಕ್ಕೆ ಪ್ರಚೋದಿಸಬೇಕು. ನ್ಯೂಟನ್ನನ ತಲೆಯಮೇಲೆ ಸೇಬಿನ ಹಣ್ಣು ಒಮ್ಮೆ ಬಿದ್ದಾಗ, ಅವನು ಶಾಲೆಯಲ್ಲಿ ಕಲಿ ತಿದ್ದ ಜ್ಞಾನ ಕಾರ್ಯಮುಖವಾಯಿತು; ಆ ಪೂರ್ವಜ್ಞಾನದ ಬೆಳಕಿನಲ್ಲಿ ಈ ನೂತನ ಸನ್ನಿವೇಶವನ್ನು ವಿವೇಚಿಸಲಾರಂಭಿಸಿದನು. ಆ ಮೂಲಕ ಮುಂದೆ ಅವನು ಭೂಮಿ, ಚಂದ್ರ ಮೊದಲಾದ ಗ್ರಹಗಳ ಚಲನೆಗೆ ಸಂಬಂಧಿ ಸಿದ ಸಂಕೀರ್ಣ ತತ್ವವೊಂದನ್ನು ರೂಪಿಸಲು ನೆರವಾಯಿತು. ಮಕ್ಕಳಿಗೆ ಪ್ರಕೃತಿದತ್ತವಾಗಿ ಬಂದಿರುವ ಕುತೂಹಲ ಹೊಸ ಜ್ಞಾನದ ಕಡೆ ಪ್ರಚೋ ದಿಸುವಂತೆ ಅವಕಾಶ ಕಲ್ಪಿಸಿಕೊಡಬೇಕು. ಜ್ಞಾನಾರ್ಜನೆಯಲ್ಲಿ ಆಸಕ್ತಿ ಯನ್ನು ಹುಟ್ಟಿಸಿ ನಿತ್ಯ ಸನ್ನಿವೇಶಗಳಲ್ಲಿ ಅದನ್ನು ಉಪಯೋಗಿಸುವ ಮನೋಭಾವವೂ ಬೆಳೆಯಬೇಕು. ನೂತನ ವಿಷಯವನ್ನು ಅರಿತುಕೊಳ್ಳ ಬೇಕೆಂಬ, ಕಾತರವೇ ಮಾನವನ ಇಂದಿನ ಎಲ್ಲ ಸಂಸ್ಕೃತಿಯ, ನಾಗರಿ ಕತೆಯ ನಿರ್ಮಾಣಕ್ಕೂ ಮೂಲಕಾರಣವೆನ್ನಬಹುದು. ಹಾಗೆ ಅರಿತ ನೂತನ ಜ್ಞಾನವನ್ನು ಪರಿಷ್ಕರಿಸಿ ತನ್ನ ಜ್ಞಾನಸಂಪತ್ತಿಗೆ ಸೇರಿಸಿಕೊಳ್ಳುವ, ವಿಷಯವನ್ನು ನಿರ್ದಾಕ್ಷಿಣ್ಯವಾಗಿ ವಿಮರ್ಶಿಸಿ ನೋಡುವ, ಒಟ್ಟಿನಲ್ಲಿ ಸತ್ಯಾಂಶವನ್ನು ಹುಡುಕುವ ನಿಸ್ಸೀಮತನವೂ ಅವರಲ್ಲಿ ಬೆಳೆಯಬೇಕು.

ಮಕ್ಕಳಿಗೆ ಶಾಲೆಯಲ್ಲಿ ಬೋಧಿಸುವ ವಿಷಯದಂತೆ ಅದರ ಅಭ್ಯಾಸ ಕ್ರಮವೂ ಮುಖ್ಯವೆಂಬುದನ್ನು ಉಪಾಧ್ಯಾಯರು ಅರಿಯಬೇಕು. ವಿಷಯ ಮಕ್ಕಳಿಗೆ ಜ್ಞಾನವನ್ನು ನೀಡಿದರೆ ಬೋಧನೆಯ ರೀತಿ ಹೊಸ ಜ್ಞಾನವನ್ನು ಆರ್ಜಿಸುವ ಶಕ್ತಿಯನ್ನು ಕೊಡುತ್ತದೆ. ಬೋಧಿಸುವ ವಿಷಯದ ಜೊತೆಗೆ ಅದನ್ನು ಅಭ್ಯಾಸಿಸುವ ಕ್ರಮವನ್ನೂ ಅವರಿಗೆ ಪರಿಚಯ ಮಾಡಿಕೊಡ ಬೇಕು. ಅಂದು ಮಾತ್ರ ನಮ್ಮ ಮಕ್ಕಳು ಸ್ವತಂತ್ರವಾಗಿ ಹೊಸ ಶೋಧನೆ ಗಳನ್ನು ನಡಸಲೂ ಹೊಸ ಸನ್ನಿವೇಶಗಳಲ್ಲಿ ಉಚಿತ ರೀತಿಯಲ್ಲಿ ನಡೆದು ಕೊಳ್ಳಲೂ ಶಕ್ತರಾಗುವರು.

ಎಷ್ಟೇ ಪ್ರತಿಭಾಶಾಲಿಗಳಾದರೂ ಕುತೂಹಲ, ತೆರೆದ ಮನಸ್ಸು ಮತ್ತು ಜ್ಞಾನಾಕಾಂಕ್ಷೆ ಇಲ್ಲದಿದ್ದರೆ ಆ ಪ್ರತಿಭೆಯು ಬಹುಭಾಗ ವ್ಯರ್ಥವಾಗ ಬಹುದು; ಇಲ್ಲ, ಅಡ್ಡದಾರಿ ಹಿಡಿಯಬಹುದು. ಜ್ಞಾನಾರ್ಜನೆಯಲ್ಲಿ

ಎಳೆಯ ಮಕ್ಕಳಲ್ಲಿ ಆರಂಭವಾಗುವ ಕುತೂಹಲ ಆಜೀವವೂ ನೆಲಸುವಂತೆ ಉಪಾಧ್ಯಾಯರು ಮಾರ್ಗದರ್ಶಿಗಳಾಗಿರಬೇಕು. ಯಾವ ವಿಷಯವನ್ನೇ ಆಗಲಿ, ನಿಷ್ಪಕ್ಷಪಾತದೃಷ್ಟಿಯ ತೆರೆದ ಮನಸ್ಸಿನಿಂದ ವಿವೇಚಿಸುವುದರಿಂದಲೇ ಸತ್ಯವೂ ನಿರ್ದುಷ್ಟವೂ ಆದ ಜ್ಞಾನ ದೊರೆಯಲು ಅನುಕೂಲವಾಗುತ್ತದೆ. ಅಂಥ ತೆರೆದ ಮನಸ್ಸಿನಿಂದ ಎದುರಬರುವ ಸಮಸ್ಯೆಗಳನ್ನೂ ಸನ್ನಿವೇಶಗಳನ್ನೂ ವಿವೇಚಿಸುವ ಶಕ್ತಿ ಮಕ್ಕಳಲ್ಲಿ ನೆಲಸಿ, ಬೆಳೆಯುವಂತೆ ಮಾಡುವ ಕಾರ್ಯ ಶಾಲಾ ಜೀವನದಲ್ಲೇ ಆರಂಭವಾಗಬೇಕು.

**೩. ಕಲಾಜೀವನ:** ದೃಢಕಾಯರೂ ಪ್ರತಿಭಾಶಾಲಿಗಳೂ ಜ್ಞಾನಿಗಳೂ ಆದ ವ್ಯಕ್ತಿಗಳ ಮನಸ್ಸಿನಲ್ಲಿ ಕಲಾಭಿರುಚಿಯಿಲ್ಲದಿದ್ದರೆ ಜೀವನ ನೀರಸವಾಗುತ್ತದೆ. ಈ ದೃಷ್ಟಿ ಮಕ್ಕಳಲ್ಲಿ ವಿದ್ಯಾರ್ಥಿ ದೆಶೆಯಿಂದಲೂ ಬೆಳೆದು ಬರಬೇಕು. ಸುಂದರವಾದ ಆಕೃತಿ, ಸನ್ನಿವೇಶ, ನಾದ ಮತ್ತು ಭಾವ ಎಲ್ಲ ವ್ಯಕ್ತಿಗಳಿಗೂ ಆನಂದ ಹುಟ್ಟಿಸಬಲ್ಲವು. ಜೀವನೋಪಾಯಕ್ಕಾಗಿ ದುಡಿದು ಬೇಸರಗೊಂಡಾಗ ಒಳ್ಳೆಯ ಸಂಗೀತವೊಂದನ್ನು ಕೇಳುವುದರಿಂದ ನಮ್ಮ ದುಡಿಮೆಯ ನೋವಿನ ಬಹುಭಾಗ ಮಾಯವಾಗಬಲ್ಲದು; ಜೀವನದ ವಿವಿಧ ರೀತಿಯ ಜಿಗುಪ್ಸೆಗಳಲ್ಲಿ ಸಿಕ್ಕಿರುವಾಗ ಕವಿತೆಯೊಂದರ ಮಾಧುರ್ಯ ನಮ್ಮನ್ನು ಕ್ಷಣಕಾಲವಾದರೂ ಆ ಕಷ್ಟ ಕಾರ್ಪಣ್ಯಗಳನ್ನು ಮರೆತು ಆನಂದಿಸುವಂತೆ ಮಾಡಬಲ್ಲದು; ತರುಲತೆಗಳ ಸೊಂಪಿನಿಂದಲೂ, ವಿವಿಧ ವರ್ಣಗಳ ಸುಮಗಳಿಂದಲೂ, ಪಕ್ಷಿಗಳ ಕಲರವದಿಂದಲೂ ರಾರಾಜಿಸುತ್ತಿರುವ ರಮ್ಯೋದ್ಯಾನಗಳ ನೋಟ ನಮ್ಮ ಜೀವನ ಸಾರ್ಥಕವೆನ್ನುವಷ್ಟರ ಅಮರಾನಂದವನ್ನು ನೀಡಬಲ್ಲದು. ಹಾಗೆಯೇ ಇನ್ನಿತರ ಸೌಂದರ್ಯ ಸನ್ನಿವೇಶಗಳೂ ಕೃತಿಗಳೂ ಮಾನವನ ಅಂತರಾತ್ಮದಲ್ಲಿ ಅನುಪಮವಾದ ಸುಖಶಾಂತಿಗಳನ್ನು ನೀಡಿ ಬಾಳು ರಮ್ಯವಾಗುವಂತೆ ಮಾಡುವುವು. ಆದರೆ ಅವನ್ನು ಅನುಭವಿಸಿ ಆನಂದಿಸುವ ಮನೋಭಾವವಿಲ್ಲದ ವ್ಯಕ್ತಿಗೆ ಅವೆಲ್ಲ ಸ್ಮಶಾನಸದೃಶ! ಹಾಗಾದರೆ ಆ ಮನೋಭಾವ ಹೇಗೆ ಬರಬೇಕು? ಆ ಕಾರ್ಯ ಶಾಲಾ ಜೀವನದಲ್ಲೇ ಆರಂಭವಾಗಬೇಕು. ಕಲಾಭಿರುಚಿ ಅಂಕುರವಾಗಿ ಬೆಳೆಯಲನುವಾಗುವುದು ಆ ಕಾಲದಲ್ಲೇ. ನಮ್ಮ ಶಾಲೆಗಳಲ್ಲಿ ಅದಕ್ಕೊಪ್ಪುವ ಸನ್ನಿವೇಶಗಳನ್ನು ರಚಿಸಿಕೊಂಡು

ಮಕ್ಕಳು ಕಲೋಪಾಸಕರಾಗುವಂತೆ ಮಾಡುವುದು ಆವಶ್ಯಕ. ಆ ಕಾರ್ಯ ಸಾಧನೆಯಾಗಬೇಕಾದರೆ ಉಪಾಧ್ಯಾಯರು ಸ್ವತಃ ಕಲೋಪಾಸಕರಾಗಿರ ಬೇಕು; ಜೊತೆಗೆ, ಜನತೆಯೂ ಸುಸಂಸ್ಕೃತ ಜೀವನಕ್ಕೆ ಕಲೋಪಾ ಸನೆಯೂ ಅನಿವಾರ್ಯವೆಂಬುದನ್ನು ಮನಗಾಣಬೇಕು.

ಶಾಲಾ ಜೀವನದಲ್ಲಿ ಮಕ್ಕಳ ಕಲೋಪಾಸನ ಕಾರ್ಯ ಸೌಂದ ರ್ಯಾನುಭವದಿಂದ ಆರಂಭವಾಗಬೇಕು. ನಮ್ಮ ಶಾಲೆಗಳ ಆವರಣ ಚೊಕ್ಕಟವಾಗಿದ್ದು, ವಿವಿಧ ವರ್ಣದ ಹೂಗಿಡಗಳಿಂದ ಅಲಂಕೃತವಾಗಿರ ಬೇಕು. ಉಪಾಧ್ಯಾಯರೂ ಗ್ರಾಮಸ್ಥರೂ ಮನಸ್ಸು ಮಾಡಿದರೆ ಇದು ಅಗಾಧವಾದ ಕಾರ್ಯವಾಗಲಾರದು. ಅಂಥ ಸನ್ನಿವೇಶ ಮಕ್ಕಳ ಮನಸ್ಸಿನಲ್ಲಿ ಆನಂದವನ್ನೂ, ರಮ್ಯತೆಯನ್ನೂ, ಸುಂದರ ವಸ್ತುಗಳಲ್ಲಿ ಆಸಕ್ತಿಯನ್ನೂ ಹುಟ್ಟಿಸಲು ನೆರವಾಗುತ್ತದೆ. ಇಂದಿನ ನಮ್ಮ ಶಾಲೆಗಳ ಆವರಣಗಳ ಸ್ಥಿತಿ ಗತಿಗಳನ್ನು ಪರಿಶೀಲಿಸಿದರೆ ಮಕ್ಕಳಲ್ಲಿ ಆ ಮಾನಸ ಸಂಸ್ಕರಣ ಎಳ್ಳಷ್ಟೂ ಆಗಲಾರದೆಂದು ನೊಂದು ಹೇಳಬೇಕಾಗುತ್ತದೆ. ಅದರಿಂದಲೇ ನಾಡಿನ ಮುಖಂಡರನೇಕರು ಶಾಲೆಯ ಕಟ್ಟಡಗಳ ಮತ್ತು ಹೊರವಳಯಗಳ ನಿರ್ಮಾಣಕ್ಕಾಗಿ ಏಕಪ್ರಕಾರವಾಗಿ ಶಾಸನ ಸಭೆಗಳಲ್ಲಿ ಒತ್ತಾಯ ಹಾಕುತ್ತ ಬರುತ್ತಿದ್ದಾರೆ. ಸಾರ್ವಜನಿಕರೂ ಶಿಕ್ಷಣ ಶಾಖೆಯವರೂ ಈ ಕಡೆ ಅಗತ್ಯ ವಾಗಿ ಗಮನಕೊಡಬೇಕು. ಶಾಲೆಯ ಒಳಗಡೆ ಆನಂದವನ್ನೂ, ಉತ್ಸಾಹ ವನ್ನೂ, ಆವೇಶವನ್ನೂ ಹುಟ್ಟಿಸತಕ್ಕ ಕಲಾಕೃತಿಗಳೂ ಪ್ರತಿಮೆಗಳೂ ಇರ ಬೇಕು. ಆಧುನಿಕ ರೀತಿಯಲ್ಲಿ ಆರಂಭವಾಗುತ್ತಿರುವ ನೂತನ ಶಿಕ್ಷಣ ಪದ್ಧತಿ ಗಳಲ್ಲಿ ಈ ಅಂಶದ ಕಡೆ ತುಂಬ ಗಮನಕೊಡುತ್ತಿದ್ದಾರೆ. ಹಾಗೆಯೇ ಉಪಾಧ್ಯಾಯರ ವ್ಯಕ್ತಿತ್ವವೂ ಆ ಕಾರ್ಯಕ್ಕೆ ಸಹಾಯವಾಗಬಲ್ಲದು. ಅವರ ನಡೆನುಡಿಗಳಲ್ಲೂ ವೇಷಭೂಷಣಗಳಲ್ಲೂ ಆಡಂಬರವಿಲ್ಲದಿದ್ದರೂ, ನಾಜೋಕೂ ಶುಚಿತ್ವವೂ ಆವಶ್ಯಕ. ಎಳೆಯ ಮಕ್ಕಳ ಮನಸ್ಸಿನಮೇಲೆ ಅವರ ಮೃದು ನುಡಿಗಳು ಮೂಡಿಸಿದ ರಮ್ಯತೆ ಮಕ್ಕಳ ಮನಸ್ಸಿನಲ್ಲಿ ಆಜೀವವೂ ಸ್ಮರಣೆಯಲ್ಲಿದ್ದು ಜೀವನವನ್ನು ಬಹು ವಿಧವಾಗಿ ಪ್ರಚೋದಿಸ ಬಲ್ಲವು. ಹಾಗೆಯೇ ಅವರ ಅಸಹ್ಯ ವರ್ತನೆಯೂ, ಕಠಿಣ ನುಡಿಗಳೂ, ವಿಲಕ್ಷಣ ನಡೆಗಳೂ ಮಕ್ಕಳ ಮನಸ್ಸಿನಲ್ಲಿ ಬಹುಕಾಲ ಕಹಿ ನೆನಪುಗಳಾಗಿ

ಉಳಿದು ಅನುಚಿತವಾದ ಕೈವಾಡವನ್ನು ಬೀರಬಲ್ಲವು. ಉಪಾಧ್ಯಾಯರು ಕಪ್ಪು ಹಲಗೆಯಮೇಲೆ ಬರೆಯುವ ಚಿತ್ರಗಳೂ, ಮಧುರವಾಗಿ ಹಾಡುವ ಪದ್ಯಗಳೂ, ಹೊರಗಡೆ ಸರಸವಾಗಿ ಬಯಲುಗಳಲ್ಲಿ ಮಕ್ಕಳನ್ನು ಆಡಿಸುವ ಸನ್ನಿವೇಶಗಳೂ ವಿದ್ಯಾರ್ಥಿಗಳಲ್ಲಿ ಸವಿನೆನಪಾಗುಳಿದು ಕಲಾಭಿರುಚಿಯನ್ನು ಹುಟ್ಟಿಸಿ ಸತ್ಯ ಸೌಂದರ್ಯಗಳಲ್ಲಿ ಆಸಕ್ತಿಯನ್ನು ಹೆಚ್ಚಿಸಬಲ್ಲವು.

ನಮ್ಮ ಇಂದಿನ ಶಿಕ್ಷಣ ಸಂಸ್ಥೆಗಳಲ್ಲಿ ಇಂಥ ರಸಜೀವನ ಪೋಷಣೆಗೆ ತಕ್ಕಷ್ಟು ಸನ್ನಿವೇಶಗಳಿಲ್ಲ; ಅದನ್ನು ರೂಢಿಸಬಲ್ಲ ಉಪಾಧ್ಯಾಯರ ಸಂಖ್ಯೆ ತೀರ ಸ್ವಲ್ಪ; ಇರುವ ಹಲಕೆಲವರೂ ವಿವಿಧ ಕಷ್ಟಕಾರ್ಪಣ್ಯಗಳ ದೆಸೆಯಿಂದ ಉಚಿತ ರೀತಿಯಲ್ಲಿ ಗಮನಕೊಡಲು ಅವಕಾಶವಿಲ್ಲವಾಗಿದೆ. ಜ್ಞಾನಾರ್ಜನೆಯೇ ಶಿಕ್ಷಣದ ಸರ್ವಸ್ವವೆಂದು ಘೋಷಿಸುತ್ತಿರುವ ಪರೀಕ್ಷೆಗಳ ಆರ್ಭಟ ಆ ಕಾರ್ಯವನ್ನು ಇನ್ನೂ ಕಠಿಣವಾಗಿಸಿದೆ. ಅದಕ್ಕಾಗಿ ಉದ್ದೇಶಪೂರ್ವಕವಾಗಿ ಸೇರಿಸಲಾಗಿರುವ ಸಂಗೀತ, ಚಿತ್ರಕಲೆ, ಕೈಕೆಲಸ ಮುಂತಾದ ಪಾಠಗಳು ಯಾಂತ್ರಿಕವಾಗಿ ನಡೆಯುತ್ತಿವೆ. ನಮ್ಮ ನಾಡಿನ ಮುಂದಿನ ಶಿಕ್ಷಣ ಯೋಜನೆಗಳನ್ನು ರೂಪಿಸಲು ಯತ್ನಿಸುವ ಮುಖಂಡರು ಸೌಂದರ್ಯಾನುಭವವಾಗುವ ಪಠ್ಯವಸ್ತುವಿನ ಕಡೆ ತಕ್ಕಷ್ಟು ಗಮನಕೊಡಬೇಕಾಗಿದೆ. ಹಾಗೆ ಏರ್ಪಟ್ಟ ಕಲಾಭಿರುಚಿಯ ಪಾಠಗಳನ್ನು ಮಾಡುವಾಗ ರಸಾನುಭವವೇ ಆ ಪಾಠಗಳ ಅಂತರಾತ್ಮವೆಂಬುದನ್ನು ನಾವು ಅರಿತುಕೊಳ್ಳಬೇಕು. ತಮ್ಮ ವೈಯಕ್ತಿಕ ಕಷ್ಟಕಾರ್ಪಣ್ಯಗಳನ್ನು ಒಂದಿಷ್ಟು ಕಾಲ ಬದಿಗಿರಿಸಿಯಾದರೂ ಮಕ್ಕಳು ರಸಾನುಭಾವಿಗಳಾಗುವಂತೆ ಆಸಕ್ತಿ ವಹಿಸಿ ಆ ಪಾಠಗಳನ್ನು ಮಾಡಬೇಕು. ಅವರ ಎಳೆಯ ಮನಸ್ಸಿನಲ್ಲಿ ಆ ಪಾಠ ಬೋಧನೆಯಿಂದ ರಸದಲೆಗಳು ಮೊಳಗಿ ಕಲೋಪಾಸನೆಯಲ್ಲಿ ಅಭಿರುಚಿ ಅಂಕುರಿಸಿ ಬೆಳೆಯುವಂತಾಗಬೇಕು. ಚಿತ್ರದರ್ಶನ, ಸಂಗೀತಶ್ರವಣ, ಕವಿತಾಪಠನ ಮುಂತಾದವು ಮಕ್ಕಳ ಸಂವೇದನೆಗಳನ್ನು ಸಂಸ್ಕರಣಗೊಳಿಸಿ, ಜೀವನದಲ್ಲಿ ಮಾಧುರ್ಯವನ್ನು ಹೆಚ್ಚಿಸುತ್ತವೆ. ಅದಕ್ಕೆ ಉಚಿತವೆನಿಸುವ ಸನ್ನಿವೇಶಗಳ ರಚನೆಯಿಂದ, ಅವುಗಳ ಕಡೆ ಮಕ್ಕಳ ಆಸಕ್ತಿ ಬೀಳುವಂತೆ ಸೂಚಿಸುವ ಭಾವಧ್ವನಿಯಿಂದ, ಅವನ್ನು ಆನಂದಿಸಿ ಪ್ರದರ್ಶಿಸುವ ಉಪಾಧ್ಯಾಯರ ಉತ್ಸಾಹದಿಂದ, ಮಕ್ಕಳ ಸಂವೇದನೆಗಳು ಉಚಿತ ಮಾರ್ಗದಲ್ಲಿ ಸ್ಫುಟ

ಗೊಂಡು ರಸಾಭಿರುಚಿ ಪ್ರಜ್ವಲಿಸುವಂತೆ ಮಾಡಬೇಕು. ಅಂಥ ಕಲಾಜೀವನ ವನ್ನು ಮಕ್ಕಳು ಶಾಲೆಯಲ್ಲಿ ಅನುಭವಿಸುವುದರಿಂದ ಮಾತ್ರ ಅವರು ಮುಂದೆ ಜೀವನದಲ್ಲೂ ಕಲಾಭಿಮಾನಿಗಳಾಗುವರು; ಹಲವರು ಕಲಾವಿದರೂ ಆಗ ಬಹುದು.

ಮೇಲಿನ ಪಾಠದ ಜೊತೆಗೆ ಶಾಲೆಯಲ್ಲಿ ಕಲಾಭಿರುಚಿಯನ್ನೂ ಕಲಾಭಿ ಮಾನವನ್ನೂ ಮಕ್ಕಳ ಮನಸ್ಸಿನಲ್ಲಿ ಬೆಳಸಬಹುದಾದ ಇನ್ನೂ ಹಲವು ಸನ್ನಿ ವೇಶಗಳಿವೆ: ಬೆಳಗಿನ ಹೊತ್ತು ಪ್ರಾರ್ಥನೆ ಮಾಡುವಾಗ ಭಕ್ತಿಸ್ಫೂರ್ತಿಯಿಂದ ಇಂಪಾಗಿ ಸಂಗೀತ ಹಾಡುವುದೂ, ಸಂಧ್ಯಾ ಸಮಯದಲ್ಲಿ ಸಾಮೂಹಿಕ ಗೀತೆಗಳನ್ನು ಹಾಡಿಕೊಂಡು ನೃತ್ಯಾಭಿನಯವನ್ನೆಸಗುವುದೂ, ಆಗಾಗ ನಡೆ ಯುವ ಶಿಕ್ಷಕ ಪೋಷಕ ಸಂಘ, ಶಾಲಾ ವಾರ್ಷಿಕೋತ್ಸವ ಮತ್ತು ಇನ್ನಿತರ ಸಮಾರಂಭಗಳಲ್ಲಿ ಶಾಲೆಯನ್ನು ಸುಣ್ಣ ಬಣ್ಣಗಳಿಂದ, ತಳಿರು ತೋರಣ ಗಳಿಂದ ಅಲಂಕರಿಸಿ, ಸಿಂಗರಿಸುವುದೂ, ಮಕ್ಕಳ ಆಟಪಾಟ, ನೃತ್ಯ, ಸಂಗೀತ, ಅಭಿನಯ, ನಾಟಕ ಮೊದಲಾದವನ್ನು ಏರ್ಪಡಿಸುವುದೂ ಅವರ ಕಲಾಭಿ ರುಚಿಯನ್ನೂ ಕಲೋಪಾಸನೆಯನ್ನೂ ಹೆಚ್ಚಿಸಲು ನೆರವಾಗುತ್ತವೆ. ಜೊತೆಗೆ, ಮುಂದೆ ಅಭಿರುಚಿಯುಳ್ಳವರು ದೊಡ್ಡ ಕಲಾವಿದರಾಗಿ ಕಲಾ ಜೀವನದ ಸಾಕ್ಷಾತ್ಕಾರವನ್ನು ಕಾಣಲೂ ಸಹಾಯವಾಗುತ್ತದೆ.

ನಮ್ಮ ಮಕ್ಕಳ ಮನಸ್ಸಿನಲ್ಲಿ ಶಿಕ್ಷಣರಂಗ ತಕ್ಕಷ್ಟು ಕಲಾಭಿಮಾನ ವನ್ನೂ ಕಲಾಭಿರುಚಿಯನ್ನೂ ಬೆಳಸುವುದಾದರೆ ಮುಂದಿನ ಜನಾಂಗ ಪುನೀತ ವಾದೀತು. ಯಂತ್ರಯುಗದ ಜಂಜಡದಲ್ಲಿ ಹುಟ್ಟುವ ಬೇಸರ ಜಿಗುಪ್ಸೆಗಳು ಸೌಂದರ್ಯಾನುಭವದಿಂದ ಮಾಯವಾದಾವು; ಜೀವನ ಕಲಾಮಯವಾಗಿ ಆನಂದದ ಮಧುರ ವಾತಾವರಣ ಸಿದ್ಧಿಸೀತು; ಜೊತೆಗೆ ಜಾತಿ ಕುಲಗೋತ್ರ ವೆಳಸದ ಸೌಂದರ್ಯಾಭಿಮಾನದ ವಿಶಾಲ ಮನೋಭಾವ ಜನತೆಯಲ್ಲಿ ಮೂಡಿ ಜೀವನದಲ್ಲಿ ಶಾಂತಿ, ಸಹಕಾರ, ಸದ್ಭಾವನೆಗಳು ಬೆಳೆದಾವು.

**೪. ಸತ್ಪ್ರಜಾ ಜೀವನ:** ಹಿಂದೆಂದಿಗಿಂತಲೂ ಇಂದಿನ ಮಾನವನು ಹೆಚ್ಚಿನ ರೀತಿಯಲ್ಲಿ ಸಮಾಜ ಜೀವಿಯಾಗಿರುವನು. ಅವನ ಆಗು ಹೋಗು ಸಮಾಜದ ಇನ್ನಿತರ ವ್ಯಕ್ತಿಗಳೊಡನೆ ಹೆಣೆದುಕೊಂಡೇ ಸಾಗುತ್ತಿದೆ. ಒಂಟಿಯಾಗಿ ಬಾಳುವುದು ಸಾಧ್ಯವೇ ಇಲ್ಲವೆನ್ನುವಷ್ಟರ ಮಟ್ಟಿಗೆ ಸಮಾಜ

ಜೀವನ ಬಾಂಧವ್ಯದ ಬಲೆಯನ್ನು ಹೆಣೆದ ಇಂಥುಕೊಂಡಿದೆ. ಸಂಕೀರ್ಣ ಸಮಾಜದಲ್ಲಿ ಬಾಳುವಾಗ ವ್ಯಕ್ತಿಗೆ ಎಂಥ ದೃಢಕಾಯವಿದ್ದರೂ, ಎಷ್ಟೇ ಪಾಂಡಿತ್ಯ ಪ್ರತಿಭೆಗಳಿದ್ದರೂ, ಎಂಥ ಅನುಪಮ ಕಲಾಭಿರುಚಿಯಿದ್ದರೂ, ಸಮಾಜ ಜೀವನಕ್ಕೆ ಅನ್ವಯಿಸಿಕೊಳ್ಳುವ ಶಕ್ತಿಯಿಲ್ಲದಿದ್ದರೆ ಅನೇಕ ವೇಳೆ ಅಪಹಾಸ್ಯಕ್ಕೀಡಾದಾನು; ಅನರ್ಥವೂ ಸಂಭವಿಸೀತು. ಅವನ ಅಂಥ ಜೀವನದಿಂದ ತನಗಾಗಲಿ ಸಮಾಜಕ್ಕಾಗಲಿ ಸುಖಶಾಂತಿ ದೊರಕಲಾರವು; ವ್ಯಕ್ತಿ ತನ್ನ ಜವಾಬ್ದಾರಿಯನ್ನರಿತುಕೊಂಡು, ಇತರರ ಹಕ್ಕನ್ನು ಗೌರವಿಸಿ ಬಾಳುವುದರಿಂದಲೇ ಜನಜೀವನದಲ್ಲಿ ಶಾಂತಿ ಸೌಹಾರ್ದಗಳು ನೆಲಸಿ ಸೌಖ್ಯ ವಿರುವಂತಾಗುವುದು. ಜೊತೆಗೆ, ಇಂದಿನ ಆಡಳಿತ ಯಂತ್ರ ಎಲ್ಲರ ಅಭಿಮತ ವನ್ನೂ ಗಣಿಸಿಯೇ ಕಾರ್ಯ ಮಾಡುವ ಪ್ರಜಾಸತ್ತಾತ್ಮಕ ತತ್ತ್ವದ ಮೇಲೆ ರೂಪುಗೊಳ್ಳುತ್ತಿದೆ; ಅಂಥ ಸರ್ಕಾರ ಯಶಸ್ವಿಯಾಗಿ ಕಾರ್ಯ ನಡಸಿ ಸರ್ವರ ಹಿತವನ್ನೂ ಸಾಧಿಸುವ ಶಕ್ತಿ ಬರಬೇಕಾದರೆ ಒಬ್ಬೊಬ್ಬ ವ್ಯಕ್ತಿಯೂ ವಿವೇಚನೆಯಿಂದ ನಡೆಯಬೇಕಾಗಿದೆ; ಗುಣಗ್ರಾಹಿಗಳಾಗಿದ್ದು ಇತರ ವ್ಯಕ್ತಿಗಳೊಡನೆ ಸಹಕಾರ ಸದ್ಭಾವನೆಗಳಿಂದ ನಡೆದುಕೊಳ್ಳುವ ಸತ್ಪ್ರಜೆ ಗಳೂ ಆಗಿರಬೇಕು; ತನ್ನ ಹಿತ ಸಮಾಜದ, ರಾಷ್ಟ್ರದ ಹಿತಗಳಲ್ಲಿ ಅಡಗಿದೆ ಯೆಂಬುದನ್ನು ಅರಿತು ತನ್ನ ಶಕ್ತಿಸಾಮರ್ಥ್ಯಗಳು ಆ ಕಾರ್ಯಸಾಧನೆ ಗಾಗಿಯೇ ಇವೆಯೆಂಬ ವಿಶಾಲ ಭಾವನೆಯನ್ನು ಪಡೆದು ಆ ರೀತಿಯಲ್ಲಿ ನಡೆದುಕೊಳ್ಳುವ ಮನೋಭಾವವೂ ಅವನಿಗಿರಬೇಕು.

ಇಂಥ ಪ್ರಜಾಜೀವನದ ಪರಿಚಯ, ಸಮಾಜ ಹಿತಸಾಧನೆಯ ಮನೋಭಾವ ಕೇವಲ ಗ್ರಂಥಪಠನದಿಂದಲೇ ಬಂದುಬಿಡಲಾರದು; ಶಾಲೆ ಯಲ್ಲಿ ಅಂಥ ಜೀವನವನ್ನು ನಡಸುವುದರಿಂದಲೇ ಅದು ಸಿದ್ಧಿಸಬೇಕು. ಶಾಲೆ ಯಲ್ಲಿ ಅವರ ಮನಸ್ಸಿನಲ್ಲಿ ಸಹಕಾರ ಸದ್ಭಾವನೆಗಳನ್ನು ಮೂಡಿಸಿ ಸಮಾಜ ಹಿತಕ್ಕಾಗಿ ದುಡಿಯುವ ಮನೋಭಾವವನ್ನು ಬೆಳಸಲು ಅನೇಕ ಅವಕಾಶ ಗಳಿವೆ. ಆಡುವಾಗ, ಚರ್ಚಾ ಸಂಘಗಳಲ್ಲಿ ಭಾಗವಹಿಸುವಾಗ, ಸಂಘ ಸಂಸ್ಥೆ ಗಳಿಗೆ ಆರಿಸಿ ಬಂದು ಶಾಲಾ ಸಮಾಜದ ಪ್ರತಿನಿಧಿಗಳಾಗಿ ಕೆಲಸಮಾಡು ವಾಗ, ತನ್ನಮೇಲೆ ಬೀಳುವ ಜವಾಬ್ದಾರಿಯನ್ನು ಶಾಲೆಯ ಹಿತದೃಷ್ಟಿ ಯಲ್ಲಿ ಹೊತ್ತು ನಿರ್ವಹಿಸುವಾಗ, ಮಕ್ಕಳಲ್ಲಿ ಸಮಾಜ ಜೀವನಕ್ಕೆ ಅವಶ್ಯಕ

ವಾದ ಎಲ್ಲ ಗುಣಗಳನ್ನೂ ಅನುಭವಗಳನ್ನೂ ಮೂಡಿಸಬಹುದು; ಅವರಲ್ಲಿರ ಬಹುದಾದ ನಾಚಿಕೆ, ಮುಖಹೇಡಿತನ ಮುಂತಾದವನ್ನು ಹೋಗಲಾಡಿಸಿ ಧೈರ್ಯದಿಂದ ವ್ಯಕ್ತಿಯಾಗಿಯೋ ಮುಂದಾಳಾಗಿಯೋ ಸಮಾಜ ಹಿತಕ್ಕಾಗಿ ದುಡಿಯುವ ಸಾಹಸ ಸದ್ಗುಣಗಳನ್ನೂ ಅನುಭವವನ್ನೂ ರೂಪಿಸಬಹುದು. ನಮ್ಮ ಮಕ್ಕಳು ಅಂಥ ಜೀವನವನ್ನೇ ಶಾಲೆಯಲ್ಲಿ ಆಚರಿಸಿ ಅನುಭವಪಡೆಯು ವುದರಿಂದ ಈಗತಾನೆ ರೂಪುಗೊಳ್ಳುತ್ತಿರುವ ಸ್ವತಂತ್ರ ಭಾರತದ ಪ್ರಜಾ ಸರ್ಕಾರ ಯಶಸ್ವಿಯಾಗುವಂತೆ ಮಾಡಬಲ್ಲ ಸತ್ಪ್ರಜೆಗಳಾಗಬಲ್ಲರು; ಭರತ ಖಂಡವೇ ತಮ್ಮದೆಂಬ ಅಭಿಮಾನವೂ ವಿಶಾಲ ಭಾವನೆಯೂ ಅವರಲ್ಲಿ ಬೆಳೆ ಯುವಂತಾಗಿ, ರಾಷ್ಟ್ರದ ಪ್ರಗತಿಯೂ ಆ ಮೂಲಕ ಜಗತ್ತಿನ ಸುಖ ಶಾಂತಿಯೂ ಸಾಧನೆಯಾಗಬಹುದು.

**೫. ಒಳ್ಳೆಯ ಅಭ್ಯಾಸಗಳು ಮತ್ತು ಕೌಶಲಗಳು:** ಮೇಲೆ ಹೇಳಿದ ಎಲ್ಲ ಸಾಧನೆಗಳಂತೆ ಮಕ್ಕಳಲ್ಲಿ ಒಳ್ಳೆಯ ಅಭ್ಯಾಸಗಳನ್ನೂ ಕಾರ್ಯ ಕೌಶಲವನ್ನೂ ಬೆಳಸಬೇಕು. ಜೀವನಕ್ಕೆ ಆ ಅಭ್ಯಾಸಗಳಿಂದ ಆಗುವ ಸಹಾಯವನ್ನೂ, ಆ ಅಭ್ಯಾಸಗಳಿಂದಲೇ ವ್ಯಕ್ತಿಯ ಕಾರ್ಯಕೌಶಲ ಹೆಚ್ಚು ವುದೆಂಬುದನ್ನೂ ಹಿಂದೆ ವಿವರಿಸಿದೆ; ಆ ಅಭ್ಯಾಸಗಳನ್ನು ಮಕ್ಕಳಿಗೆ ಬೋಧಿ ಸುವ ಮಾರ್ಗವನ್ನೂ ವಿವರವಾಗಿ ತಿಳಿಸಿದೆ. ವ್ಯಕ್ತಿಯ ಮತ್ತು ಸಮಾಜದ ಆವಶ್ಯಕತೆಗಳಿಗೆ ಬೇಕಾಗುವ, ಸಹಾಯಕವಾಗುವ, ಅಭ್ಯಾಸಗಳನ್ನು ಶಾಲಾ ಜೀವನದಲ್ಲೇ ಆರಂಭಿಸಬೇಕು. ಹಸ್ತ ಕೌಶಲವನ್ನೂ ಅಷ್ಟೆ; ಹಾಗೆ ಎಳೆಯ ವಯಸ್ಸಿನಲ್ಲಿ ಅದು ಸನ್ಮಾರ್ಗದಲ್ಲಿ ರೂಪುಗೊಳ್ಳದಿದ್ದರೆ ಮುಂದೆ ಜೀವನದಲ್ಲಿ ಪ್ರಕಾಶಕ್ಕೆ ಬರುವುದು ಕಷ್ಟ; ಬಾಲ್ಯದಲ್ಲಿ ಹೇಗೋ ಆರಂಭವಾಗುವ ದುರ ಭ್ಯಾಸಗಳನ್ನು ಬಿಡಿಸುವುದೂ ಕಷ್ಟ. ಎಂದಮೇಲೆ ಶಾಲೆಗಳಲ್ಲಿ ವ್ಯಕ್ತಿಗೂ ಸಮಾಜಕ್ಕೂ ಅಹಿತವೆನಿಸುವ ಅಭ್ಯಾಸಗಳನ್ನು ಮೂಡಿಸದಂತೆ ತಡೆದು, ಉಚಿತವೂ ಆವಶ್ಯಕವೂ ಎನಿಸುವ ಅಭ್ಯಾಸಗಳನ್ನು ಕಲಿಸುವುದಾದರೆ ಮುಂದೆ ಅವು ವ್ಯಕ್ತಿಯ ಸ್ವತ್ತಾಗಿ ಅವನಿಗೆ ನೆರವಾಗುವುದರ ಜೊತೆಗೆ ಸಮಾಜಕ್ಕೂ ಹಿತವೆನಿಸುವುವು.

ವ್ಯಕ್ತಿಯ ಸಮಗ್ರ ನಡವಳಿಕೆ ರೂಪುಗೊಂಡಿರುವುದು ಅನೇಕ ಭಿನ್ನವೂ ಗೌಣವೂ ಆದ ಅಭ್ಯಾಸಗಳ ಉಚಿತವಹಿತ ಸಮನ್ವಯದಿಂದ. ಈ

ಅಭ್ಯಾಸಗಳು ಚೆನ್ನಾಗಿ ಪುಟಗೊಂಡಿದ್ದರೆ ವ್ಯಕ್ತಿತ್ವ ಪರಿಪಕ್ವವಾಗಿ ರೂಪುಗೊಂಡಿರುತ್ತದೆ. ವ್ಯಕ್ತಿಯ ಜೀವನದಲ್ಲಿ ಮೂಡತಕ್ಕ ಆ ಅಭ್ಯಾಸಗಳೂ ಕೌಶಲಗಳೂ ಅವನೊಬ್ಬನಿಗೆ ಹಿತವೂ ನೆರವೂ ಆಗುವುದರ ಜೊತೆಗೆ ಸಮಾಜದ ಹಿತವನ್ನೂ ಸಾಧಿಸುವಂತಿರಬೇಕು. ಓದುವುದರಲ್ಲಿ, ಬರೆಯುವುದರಲ್ಲಿ, ಭಾಷಣ ಮಾಡುವುದರಲ್ಲಿ, ನೃತ್ಯ ಅಭಿನಯ ಮುಂತಾದವುಗಳಲ್ಲಿ ಕೌಶಲ್ಯ ಸಿದ್ಧಿಸಬೇಕಾದರೆ ಬಾಲ್ಯದಿಂದಲೂ ಅಭ್ಯಾಸವಾಗಿರಬೇಕು. ಯಾವ ಯಾವ ಅಭ್ಯಾಸಗಳು, ಕೌಶಲ್ಯಗಳು ಎಷ್ಟರಮಟ್ಟಿಗೆ ಆವಶ್ಯಕವಿವೆಯೆಂಬುದನ್ನು ಉಪಾಧ್ಯಾಯರು ಪರಿಚಯಮಾಡಿಕೊಂಡು ಅವನ್ನು ಬೆಳಸಲು ಪ್ರಯತ್ನಿಸಬೇಕು. ಯಾವ ಅಭ್ಯಾಸವೇ ಆಗಲಿ ಸ್ಥಿರವಾಗಿ ನಿಲ್ಲಬೇಕಾದರೆ ಆ ಕಾರ್ಯದ ಆರಂಭ ಬಾಲ್ಯದಲ್ಲೇ ಆಗಬೇಕು. ಮಕ್ಕಳ ಅಂದಿನ ದೈಹಿಕ ಮತ್ತು ಮಾನಸಿಕ ಮಾರ್ದವ ಸ್ಥಿತಿ ಆ ಕಾರ್ಯಕ್ಕೆ ಬಹುಮಟ್ಟಿಗೆ ನೆರವಾಗಬಲ್ಲದು. ಅಭ್ಯಾಸ ಸ್ಥಿರಗೊಳ್ಳುವುದರಿಂದ ವ್ಯಕ್ತಿಯ ಜೀವನದಲ್ಲಿ ಬಹುವಿಧವಾದ ಸೌಲಭ್ಯವಾಗುವುದೆಂಬುದನ್ನು ಹಿಂದೆ ತಿಳಿಸಿದೆ. ಹಾಗೆಯೇ ಅವು ಕೆಟ್ಟ ಅಭ್ಯಾಸಗಳಾದರೆ ಅವುಗಳು ವ್ಯಕ್ತಿಗೆ ಶತ್ರುಗಳಾಗಿ ಪರಿಣಮಿಸಬಲ್ಲವು. ಮಕ್ಕಳ ಕಾರ್ಯ ಕೌಶಲಕ್ಕೆ ನೆರವಾಗತಕ್ಕ ಬೇರೆ ಬೇರೆ ಅಭ್ಯಾಸಗಳನ್ನು ಆರಿಸಿಕೊಂಡು, ಅವರ ಚಟುವಟಿಕೆಯ ಮೂಲಕ ಆದರ್ಶ ಮಾರ್ಗದಲ್ಲಿ ತಿದ್ದಿ, ಸ್ಥಿರಗೊಳಿಸಿ, ಮುಂದೆ ಅವು ಕಾರ್ಯಕೌಶಲದಲ್ಲಿ ಭಾಗವಹಿಸುವಂತೆ ಮಾಡುವುದೂ ಶಾಲೆಗಳ ಕರ್ತವ್ಯ.

ಯಾವ ಅಭ್ಯಾಸವೇ ಆಗಲಿ, ಅದು ಮಕ್ಕಳ ವ್ಯಕ್ತಿತ್ವವನ್ನು ರೂಪಿಸಲು ನೆರವಾಗತಕ್ಕದ್ದೇ. ಅದು ಕೆಟ್ಟದ್ದಾದರೆ ವ್ಯಕ್ತಿತ್ವ ದೋಷಮಯವಾದೀತು. ಮುಖ ತಿರುಗಿಸುವ, ಬೆರಳಾಡಿಸುವ, ತುಟಿ ಅಲುಗಿಸುವ, ಹುಬ್ಬನ್ನು ಹಾರಿಸುವ, ಕಾಲನ್ನು ಒದರುವ, ವಿಲಕ್ಷಣವಾಗಿ ಚಲಿಸುವ, ಹಿತವರಿಯದೆ ನಗುವ, ಹದವಿಲ್ಲದೆ ಮಾತಾಡುವ, ಔಚಿತ್ಯವರಿಯದೆ ಧ್ವನಿಭೇದ ಮಾಡಿಕೊಂಡು ಓದುವ, ಮತ್ತು ಇಂಥ ಇನ್ನೂ ಅನೇಕ ಅಭ್ಯಾಸಗಳು ಹೇಗೆ ವ್ಯಕ್ತಿಯ ನಡೆನುಡಿಗಳಿಗೆ ಕಳಂಕ ತರುವುವೆಂಬುದು ಎಲ್ಲರಿಗೂ ತಿಳಿದ ವಿಷಯ. ಎಂದಮೇಲೆ ಒಳ್ಳೆಯ ಅಭ್ಯಾಸಗಳನ್ನು ಮಾಡಿಸುವಷ್ಟೇ ಕೆಟ್ಟ ಅಭ್ಯಾಸಗಳನ್ನು ತಡೆಯುವುದೂ ಮುಖ್ಯ. ಈ ಕಾರ್ಯ ಪುಸ್ತಕ

ಜ್ಞಾನದಿಂದ ಸಾಧ್ಯವಾಗಲಾರದು; ಉಪಾಧ್ಯಾಯರ ಆದರ್ಶ ನಿರ್ದೇಶಿಕತ್ವ ಗಳಿಂದಲೂ, ಇತರ ಬಾಲಕರೊಡನೆ ವ್ಯವಹರಿಸುವುದರಿಂದಲೂ, ಸಮಾಜ ಜೀವನದಿಂದ ಪಡೆದ ಅನುಭವದಿಂದಲೂ ಅಂಥ ಉಚಿತವಾದ ಅಭ್ಯಾಸ ಗಳು ಆಚರಣೆಗೆ ಬರಬೇಕು. ಮಕ್ಕಳಲ್ಲಿ ಆ ಅಭ್ಯಾಸಗಳು ಸ್ಥಿರಗೊಂಡು ಮುಂದೆ ಅವರ ಕಾರ್ಯಕೌಶಲ ಸಿದ್ಧಿಸಿ, ಸಮರ್ಪಕವೂ ಶ್ಲಾಘ್ಯವೂ ಆದ ವ್ಯಕ್ತಿತ್ವ ಮೂಡಬೇಕು. ಅಂಥ ವ್ಯಕ್ತಿಗಳನ್ನೊಳಗೊಂಡ ಯಾವ ಜನಾಂಗವೇ ಆಗಲಿ, ನಿಜವಾಗಿಯೂ ಉತ್ತಮಗೊಂಡು ಪ್ರಗತಿಗೇರುವುದು ಆಶ್ಚರ್ಯವಲ್ಲ.

ಗೃಹಕಾರ್ಯನಿರ್ವಹಣ ಕಾರ್ಯವೂ ಅನೇಕ ಕೌಶಲ್ಯಗಳಿಂದ ಸಿದ್ಧಿಸ ಬೇಕು. ಅಂಥ ಒಂದೊಂದು ಕೌಶಲ್ಯವೂ ಅನೇಕ ಅಭ್ಯಾಸಗಳಿಂದ ರೂಪು ಗೊಂಡಿರುತ್ತದೆ. ಎಂದಮೇಲೆ ನಮ್ಮ ಹೆಣ್ಣುಮಕ್ಕಳ ಶಾಲಾ ಜೀವನದಲ್ಲಿ ಗೃಹಕಾರ್ಯ ನಿರ್ವಹಣಕ್ಕೆ ನೆರವಾಗತಕ್ಕ ಎಲ್ಲ ಅಭ್ಯಾಸಗಳೂ ಆಗ ಸ್ಥಿರ ಗೊಂಡು ಅವರ ಕೌಶಲ್ಯ ಹೆಚ್ಚಬೇಕು. ಆ ಮೂಲಕ ಮನೆಯ ಕೆಲಸಗಳು ಸುಲಭವಾಗಿಯೂ ಸಮರ್ಪಕವಾಗಿಯೂ ನಡೆಯುವಂತಾಗಿ, ಅವರು ನಿಜ ವಾಗಿಯೂ 'ಗೃಹಲಕ್ಷ್ಮಿ'ಯರಂತೆ ರಾರಾಜಿಸಬಲ್ಲರು. ಹೆಣ್ಣುಮಕ್ಕಳ ಶಾಲೆಗಳಲ್ಲಿ, ಹಾಗೂ ಪ್ರೌಢಶಾಲೆಗಳಲ್ಲಿ ಈ ಅಂಶಗಳಿಗೆ ಹೆಚ್ಚಿನ ಪ್ರಾಧಾ ನ್ಯತೆಯನ್ನು ಕೊಟ್ಟು ಹೊಸ ಯೋಜನೆಯನ್ನು ರೂಪಿಸುವುದರಿಂದ ಮಹಿಳಾ ಶಿಕ್ಷಣ ನಮ್ಮ ಜನಜೀವನದ ಪುರೋಭಿವೃದ್ಧಿಗೆ ನೆರವಾಗಬಲ್ಲದು.

ಒಳ್ಳೆಯ ಅಭ್ಯಾಸಗಳನ್ನೂ ಕಾರ್ಯಕೌಶಲವನ್ನೂ ಮಕ್ಕಳಲ್ಲಿ ನೆಲೆ ಗೊಳಿಸಬೇಕಾಗಿರುವಂತೆ ಒಳ್ಳೆಯ ದೃಷ್ಟಿಧ್ಯೇಯಗಳೂ ಭಾವನೆಗಳೂ ಅವ ರಲ್ಲಿ ನೆಲಸುವಂತೆಯೂ ಶಾಲೆಗಳು ಯತ್ನಿಸಬೇಕು. ವ್ಯಕ್ತಿಗೂ ಸಮಾ ಜಕ್ಕೂ ರಾಷ್ಟ್ರಕ್ಕೂ ಹಿತವೆನಿಸುವ ದೃಷ್ಟಿಧ್ಯೇಯಗಳೂ ಭಾವನೆಗಳೂ ಯಾವುವೆಂಬುದನ್ನು ಉಪಾಧ್ಯಾಯರು ಅರಿತಿರಬೇಕು. ತಮ್ಮ ಆದರ್ಶದ ಮೂಲಕವೂ ಶಾಲಾ ಸನ್ನಿವೇಶಗಳ ಮೂಲಕವೂ ಅವು ಕ್ರಮ ಕ್ರಮವಾಗಿ ಸಿದ್ಧಿಸುವಂತೆ ಮಾಡಬೇಕು.

ನಮ್ಮ ಶಿಕ್ಷಣರಂಗದಲ್ಲಿ ಜ್ಞಾನಸಂಪತ್ತನ್ನೂ ಅಭ್ಯಾಸ, ಕೌಶಲ್ಯ ಗಳನ್ನೂ ಬೆಳಸಲು ನಿರ್ದಿಷ್ಟ ಮಾರ್ಗಗಳೂ ಕ್ರಮಗಳೂ ಪ್ರಚಾರದಲ್ಲಿವೆ.

ಆದರೆ ದೃಷ್ಟಿ ಧ್ಯೇಯಗಳನ್ನೂ ಸದ್ಭಾವನೆಗಳನ್ನೂ ರೂಪಿಸಲು ಕ್ರಮಗಳು ಪ್ರಚಾರದಲ್ಲಿಲ್ಲ. ಹಿಂದೆ ವಿವರಿಸಿರುವ ಕಲಿವಿನ ಮತ್ತು ಬೋಧನೆಯ ನಿಯಮಗಳು ಇವಕ್ಕೂ ಅನ್ವಯಿಸುವುದಿಲ್ಲವೇ ಎಂಬ ಪ್ರಶ್ನೆಯೇಳಬಹುದು. ಅಹುದು, ಅನ್ವಯಿಸುತ್ತವೆ. ಆದರೆ ಆ ನಿಯಮಗಳನ್ನು ಅನುಸರಿಸಿ ಈ ಕಾರ್ಯವನ್ನು ಸಾಧಿಸುತ್ತಿರುವ ಉಪಾಧ್ಯಾಯರು ಅಪರೂಪ. ಆಧುನಿಕವಾಗಿ ಆರಂಭವಾಗಿರುವ ಕೆಲವು ನೂತನ ಶಿಕ್ಷಣ ಪದ್ಧತಿಗಳಲ್ಲಿ ಈ ಅಂಶಗಳ ಕಡೆ ತುಂಬ ಗಮನ ಕೊಡುತ್ತಿದ್ದಾರೆ. ಆ ಪದ್ಧತಿಗಳನ್ನು ಪ್ರತ್ಯೇಕ ಅಧ್ಯಾಯ ವೊಂದರಲ್ಲಿ ಪರಿಗಣಿಸಲಾಗಿದೆ.

**೬. ಸಂವೇದನೆಗಳ ಸಂಸ್ಕರಣ:** ಇಂದಿನ ಪ್ರಜಾಸತ್ತಾತ್ಮಕ ಸಮಾಜ ದಲ್ಲಿ ಎಲ್ಲರಿಗೂ ಸಮಾನಾಧಿಕಾರ. ಹಾಗೆಯೇ ಒಬ್ಬೊಬ್ಬರೂ ತಮಗಿಷ್ಟ ಬಂದ ದೃಷ್ಟಿಧ್ಯೇಯಗಳನ್ನೂ ಭಾವನೆಗಳನ್ನೂ ತಳೆದಿರುವ ಸ್ವಾತಂತ್ರ್ಯವೂ ಉಂಟು. ಆದರೆ ಇಂಥ ಸಮಾಜ ಜೀವನ ಯಶಸ್ವಿಯಾಗಿ ಸುಖ ಶಾಂತಿಗಳ ತವರಾಗಬೇಕಾದರೆ ಎಲ್ಲ ವ್ಯಕ್ತಿಗಳೂ ಸಹಕರಿಸಿಯೇ ನಡೆಯಬೇಕು; ಎಲ್ಲರೂ ಒಬ್ಬ ದೇಶಮಾತೆಯ ಮಕ್ಕಳೆಂಬ ಮಮತೆಯೂ ಬೇಕು. ಇಂಥ ಸಹಕಾರ ಸದ್ಭಾವನೆಗಳನ್ನು ದೊಡ್ಡವರ ಹೃದಯದಲ್ಲಿ ಬಿತ್ತಿ ಬೆಳಸುವುದು ಕಷ್ಟ. ಆ ಕಾರ್ಯ ಬಾಲ್ಯದಲ್ಲೇ ಆರಂಭವಾಗಬೇಕು. ಆದರೆ ಆ ಕಾರ್ಯಸಾಧನೆ ವಿಷಯಬೋಧನೆಯಿಂದಲೇ ಸಿದ್ಧಿಸಲಾರದು: ಮನಸ್ಸಿನ, ಸಂವೇದನೆಗಳ ಸಂಸ್ಕರಣದಿಂದ ಸಿದ್ಧಿಸಬೇಕು. ಇಂಥ ಸಂಸ್ಕರಣವಾಗ ಬೇಕಾದರೆ ಶಾಲೆಯಲ್ಲೂ ಸಮಾಜದ ಸನ್ನಿವೇಶಗಳನ್ನೇ ತಂದು, ಅಲ್ಲಿ ಅನುಭವಿಸಬಹುದಾದ ತೊಡಕುಗಳನ್ನು ಇಲ್ಲಿಯೂ ಹಾಕಿ, ಆಗ ಅವರ ಮನಸ್ಸೂ, ಸಂವೇದನೆಗಳೂ ಉಚಿತ ರೀತಿಯಲ್ಲಿ ಕೆಲಸಮಾಡಿ ಪಳಗು ವಂತೆ ಮಾಡಬೇಕು. ಆಟಪಾಟಗಳಲ್ಲಿ ಭಾಗವಹಿಸುವಾಗ, ಸಂಘ ಸಂಸ್ಥೆಗಳ ಕಾರ್ಯ ನಿರ್ವಹಿಸುವಾಗ, ಉತ್ಸವ ಸಮಾರಂಭಗಳನ್ನು ಆಚರಿಸುವಾಗ ಅಂಥ ಸುಸಂಸ್ಕೃತ ಸಂವೇದನಾ ಜೀವನ ಸಮಾಜದ ಸುಖಶಾಂತಿಗೆ ಆವಶ್ಯಕ ವೆಂಬುದನ್ನು ಆಚರಣೆಯ ಮೂಲಕ ತೋರಿಸಿಕೊಟ್ಟು, ಅವು ಮುಂದೆಯೂ ಅವರಲ್ಲಿ ನೆಲಸುವಂತೆ ಮಾಡಬೇಕು.

ಪ್ರಜಾಸತ್ತಾತ್ಮಕ ಸಮಾಜಜೀವನ ಯಶಸ್ವಿಯಾಗಬೇಕಾದರೆ ಒಳ್ಳೆಯ ದೃಷ್ಟಿ ಧ್ಯೇಯಗಳು ಅನಿವಾರ್ಯವಷ್ಟೆ. ಯಾವ ದೃಷ್ಟಿ ಧ್ಯೇಯಗಳು

ವ್ಯಕ್ತಿಯ ಮತ್ತು ಸಮಾಜದ ಕಲ್ಯಾಣಗಳೆರಡನ್ನೂ ಸಾಧಿಸಬಲ್ಲವೋ ಅವೇ ಒಳ್ಳೆಯವು. ನಿಮಿಷ ನಿಮಿಷಕ್ಕೂ ಪರಿವರ್ತನೆಯಾಗುತ್ತ ಸಂಕೀರ್ಣತೆ ಗೇರುತ್ತಿರುವ ಆಧುನಿಕ ಜೀವನದ ಚಲನವಲನಗಳನ್ನು ವಿಮರ್ಶಿಸಿ, ತಮ್ಮ ದೃಷ್ಟಿ ಧ್ಯೇಯಗಳನ್ನು ರೂಪಿಸಿಕೊಂಡು ಪ್ರದರ್ಶಿಸುವಾಗ ಕೇವಲ ಉದ್ವೇಗದಿಂದಲೋ, ಮೌಢ್ಯದಿಂದಲೋ, ಪೂರ್ವಾನುಭವದ ಕಹಿ ಸಿಹಿ ನೆನಪುಗಳ ಆಧಾರದ ಮೇಲೆಯೋ ತಮ್ಮ ಮನಸ್ಸು ವರ್ತಿಸುವಂತೆ ಬಿಡುವು ದುಂಟು; ಇದರಿಂದ ಅನೇಕವೇಳೆ ಏಕಮುಖವಾದ ತೀರ್ಮಾನಗಳಾಗಿ ವ್ಯಕ್ತಿಗೂ ಸಮಾಜಕ್ಕೂ ಕೇಡುಂಟಾಗಬಹುದು. ಆದ್ದರಿಂದ ಮಾನವನ ಸಂವೇದನೆಗಳು ಸಂಸ್ಕರಣಗೊಂಡಿರಬೇಕು. ಆ ಮೂಲಕ ತೆರೆದ ಮನಸ್ಸಿ ನಿಂದ, ನಿಜವಾದ ವಿಮರ್ಶಾ ದೃಷ್ಟಿಯಿಂದ ವರ್ತಿಸಲು ಸಾಧ್ಯವಾದೀತು. ಕೇವಲ ಆವೇಶಕ್ಕೇ ಪ್ರಾಧಾನ್ಯವಿರುವುದಾದರೆ ಪಾಶವೀ ಕೃತ್ಯಗಳು ನಡೆದು ಹೋದಾವು. ಈ ಸಂವೇದನೆಗಳು ಉಚಿತ ರೀತಿಯಲ್ಲಿ ಬಾಲ್ಯದಿಂದಲೂ ಸಂಸ್ಕರಣಗೊಂಡಿದ್ದರೆ ಮಾತ್ರ ಶಾಂತಿಯಿಂದಲೂ ಸಹನೆಯಿಂದಲೂ ವಿಶಾಲ ದೃಷ್ಟಿಯಿಂದಲೂ, ವಿಚಾರ ಬುದ್ಧಿಯಿಂದಲೂ ನಮ್ಮ ದೃಷ್ಟಿ ಧ್ಯೇಯ ಗಳನ್ನೂ, ಅನುಸರಿಸಬೇಕಾದ ವರ್ತನೆಗಳನ್ನೂ ರೂಪಿಸಿಕೊಳ್ಳಲು ಸಾಧ್ಯ ವಾದೀತು. ಶಾಲೆಗಳಲ್ಲಿ ಮಕ್ಕಳ ಈ ಸಂವೇದನಾ ಸಂಸ್ಕರಣದ ಕಡೆಗೆ ಹೆಚ್ಚಿನ ಗಮನ ಕೊಡುವುದಾದರೆ ಮುಂದಿನ ಜನಜೀವನದಲ್ಲಾದರೂ ಅಂಥ ಪಾಶವೀ ವರ್ತನೆಗಳೂ ಸಮಾಜದುರಂತಗಳೂ ಕಡಮೆಯಾಗ ಬಹುದು.

೭. **ವಿಚಾರಪ್ರೇಮ, ವಿಜ್ಞಾನದೃಷ್ಟಿ:** ಆಧುನಿಕ ಸಮಾಜ ಜೀವನದೊಡನೆ ಹೆಣೆದುಕೊಂಡೇ ಬೆಳೆದು ಬರುತ್ತಿರುವ ಮತ್ತೊಂದು ವೈಶಿಷ್ಟ್ಯವೆಂದರೆ ವಿಜ್ಞಾನ ದೃಷ್ಟಿ. ಜನಜೀವನದಮೇಲೆ ಅದು ಮಿಕ್ಕೆಲ್ಲ ದೃಷ್ಟಿಗಳಿಗಿಂತಲೂ ಹೆಚ್ಚಿನ ರೀತಿಯಲ್ಲಿ ತನ್ನ ಕೈವಾಡವನ್ನು ಬೀರುತ್ತಿದೆ. ಜೊತೆಗೆ, ಆ ಜ್ಞಾನದ ನೆರವು ಔದ್ಯೋಗಿಕ ಕ್ಷೇತ್ರಕ್ಕೂ ದೊರಕಿ ಮಾನವನ ಜೀವನದ ಮಟ್ಟವನ್ನು ಉತ್ತಮಗೊಳಿಸುವುದಕ್ಕೂ ನೆರವಾಗುತ್ತಿದೆ. ಇಂಥ ಸಮಾಜದಲ್ಲಿ ಬಾಳಬೇಕಾಗಿರುವ ಮಕ್ಕಳ ಮನಸ್ಸಿನಲ್ಲೂ ವಿಜ್ಞಾನದೃಷ್ಟಿ ಬಾಲ್ಯದಿಂದಲೂ ಅಂಕುರಿಸಿ ಬೆಳೆಯಬೇಕು. ತಮ್ಮ ಮುಂದಿನ ಸಮಸ್ಯೆ

ಗಳನ್ನು ವಿಚಾರದೃಷ್ಟಿಯಿಂದ ವಿಮರ್ಶಿಸುವ ಮತ್ತು ನಾಡಿನ ಔದ್ಯೋಗಿಕ ಪ್ರಗತಿಗೆ ನೆರವಾಗುವ ಮನೋಭಾವ ಮಕ್ಕಳಲ್ಲಿ ಬೆಳೆಯಬೇಕು. ವಿಜ್ಞಾನ ಜಗತ್ತು ನೀಡಿರುವ ಸಕಲ ಸೌಲಭ್ಯಗಳನ್ನೂ ಉಪಯೋಗಿಸಿಕೊಂಡು ಜೀವನದ ಮಟ್ಟವನ್ನು ಉತ್ತಮಗೊಳಿಸಿಕೊಳ್ಳಬೇಕೆಂಬ ಆಕಾಂಕ್ಷೆಯೂ ಬೆಳೆಯಬೇಕು. ಇವೆಲ್ಲವನ್ನು ದೊಡ್ಡವರ ಮನಸ್ಸಿನಲ್ಲಿ ರೂಪುಗೊಳಿಸುವುದು ಕಷ್ಟ: ಶಾಲಾ ಜೀವನದಲ್ಲೇ ರೂಪುಗೊಳ್ಳಬೇಕು. ಯಾವ ಪಾಠವನ್ನೇ ಬೋಧಿಸುತ್ತಿರಲಿ ಆಗ ತಲೆದೋರುವ ಸಮಸ್ಯೆಗಳನ್ನು ಕಾರ್ಯಕಾರಣ ದೃಷ್ಟಿಯಿಂದ, ವಿವೇಚನಾ ಭಾವದಿಂದ, ಪರೀಕ್ಷಣ ದೃಷ್ಟಿಯಿಂದ ವಿಮರ್ಶಿಸುವ ಕಾರ್ಯದಲ್ಲಿ ಮಕ್ಕಳು ಆಸಕ್ತಿ ತೋರುವಂತೆ ಮಾಡಬೇಕು. ನಮ್ಮ ಸಮಾಜದ ಮೂಢ ನಂಬಿಕೆಗಳನ್ನೂ ಸಂಪ್ರದಾಯಗಳನ್ನೂ ಆ ದೃಷ್ಟಿಯಲ್ಲಿ ಒರೆಹಚ್ಚಿ ನೋಡುವ ಧೈರ್ಯ ತಂದುಕೊಡಬೇಕು. ವಿಜ್ಞಾನದ ಪರಿಚಯದಿಂದ ನಾಡಿನ ಔದ್ಯೋಗಿಕ ಪ್ರಗತಿಗೆ ನೆರವಾಗಬೇಕೆಂಬ ಕಾತರ ಅಂದಿನಿಂದಲೂ ಅವರಲ್ಲಿ ಹುಟ್ಟಿ ಬೆಳೆಯುತ್ತಿರಬೇಕು. ಹಾಗೆಯೇ ಮುಂದೆ ಸ್ವತಂತ್ರವಾಗಿ ನೂತನ ಸಂಶೋಧನೆಗಳನ್ನು ನಡಸುವ ಆಶೆಯನ್ನೂ ಹುಟ್ಟಿಸಿ ಆ ಕಾರ್ಯಕ್ಕೆ ತಕ್ಕ ಸನ್ನಿವೇಶಗಳನ್ನೂ ಮಾರ್ಗದರ್ಶನವನ್ನೂ ನೀಡಿರಬೇಕು.

ಹಿಂದೆ ವಿವರಿಸಿರುವಂತೆ, ವಿಜ್ಞಾನ ಸಂಸ್ಕೃತಿ ಕೇವಲ ಪರೀಕ್ಷಣದ ಒರೆಗಲ್ಲನ್ನೇ ನಂಬಿ ಏಕಮುಖವಾಗಿ ನಾಗರಿಕತೆ ಮುಂದುವರಿಯುವಂತೆ ಮಾಡಿದೆಯೆಂದು ಹಲವರು ಟೀಕಿಸಿರುವರು. ನಿಜ. ಅವರ ಟೀಕೆಯಲ್ಲಿ ಸತ್ಯಾಂಶವಿದೆ. ವಿಜ್ಞಾನ ಸಂಸ್ಕೃತಿ ಹಲವು ಮಹಾಕಾರ್ಯಗಳನ್ನು ಸಾಧಿಸಿ ಮಾನವನ ಸುಖ ಸಂಪತ್ತನ್ನು ಹೆಚ್ಚಿಸಿದೆ; ಅದು ಸಾಧಿಸಬೇಕಾಗಿರುವುದು ಇನ್ನೂ ಬಹುವಾಗಿದೆ. ವಿಜ್ಞಾನ ಇನ್ನೂ ಶೈಶವಾವಸ್ಥೆಯಲ್ಲಿರುವುದರಿಂದ ಪರೀಕ್ಷಣ ಬುದ್ಧಿಗೆ ಒಳಪಡದ್ದನ್ನೆಲ್ಲ ತಿರಸ್ಕರಿಸುವ ಮನೋಭಾವ ಕೆಲವು ವಿಜ್ಞಾನಿಗಳಲ್ಲಿರುವುದು ಸಹಜ. ಅದು ಮುಂದುವರಿದಂತೆ ಇಂದು ಸಾಧ್ಯವಾಗದಿರುವ ಹಲವು ಅಂಶಗಳನ್ನು ಅರಿತುಕೊಳ್ಳಲು ಸಾಧ್ಯವಾಗಬಹುದು. ಈ ದಿನ ವಿಜ್ಞಾನಕ್ಕೆ ನಿಲುಕದೆ ಇರುವ ದೈಹಿಕ, ನೈತಿಕ, ಮತ್ತು ಪಾರಮಾರ್ಥಿಕ ಸಮಸ್ಯೆಗಳು ಮುಂದೆ ಅರಿವಾಗಬಹುದು. ಆದ್ದರಿಂದ

ಅವುಗಳನ್ನು ಆತುರದಿಂದ ತಳ್ಳಿಹಾಕುವ ಬದಲು ಉಪಯುಕ್ತ ವಾದವನ್ನು ಪರೀಕ್ಷಣದ ಒರೆಗಲ್ಲಿಗೆ ಒಳಪಡದಿದ್ದರೂ ಒಪ್ಪಿಕೊಳ್ಳುವುದು ಹಿತವೆನಿಸುತ್ತದೆ. ಅವೂ ನಮ್ಮ ಪೂರ್ವಿಕರ ಶತಶತಮಾನಗಳ ಬಾಳಿನ ಅನುಭವದ ಫಲವಾಗಿ ರೂಪುಗೊಂಡವು; ಅವುಗಳ ಅಂಧ ಶ್ರದ್ಧೆಯ ವೈಪರೀತ್ಯದಿಂದ ಆಂದಂದು ಸಮಾಜ ದುರಂತಗಳು ನಡೆದಿದ್ದರೂ, ಜನಜೀವನದಲ್ಲಿ ಶಾಂತಿ ಸೌಹಾರ್ದವನ್ನು ನೆಲೆಗೊಳಿಸಲೂ ಅವು ನೆರವಾಗಬಲ್ಲವು. ಎಲ್ಲರ ಕಾರ್ಯವನ್ನೂ ನಿರ್ದಾಕ್ಷಿಣ್ಯವಾಗಿ ಪರಿಶೀಲಿಸುತ್ತಿರುವ ಒಬ್ಬ ಅತಿ ಮಾನುಷ ವ್ಯಕ್ತಿಯೆನಿಸಿದ ದೇವರು ಇರುವನೆಂದು ನಂಬುವ ಜನತೆ ಮಾನವ ಕುಲದ ಕಲ್ಯಾಣ ಸಾಧಿಸಲು ಯತ್ನಿಸುವುದು ಸ್ವಭಾವ. ದಳಿತ ಜನದ ಹಿತವನ್ನು ಲಕ್ಷಿಸದೆ, ಧಾರ್ಮಿಕ ದೃಷ್ಟಿಗೂ, ಮಾನವೀಯತೆಗೂ ಬೆನ್ನು ತಿರುವಿಸಿ ಯಾಂತ್ರಿಕವಾಗಿ ಬಂಡವಾಳದ ಚಕ್ರವನ್ನು ತಿರುಗಿಸುತ್ತಿರುವ ವಿಜ್ಞಾನ ಸಂಸ್ಕೃತಿಗೆ ಭಾರತೀಯರಾದ ನಾವು ಒಂದು ಹೊಸ ದರ್ಶನವನ್ನು ನೀಡಬೇಕಾಗಿದೆ. ಅದೇ ಧಾರ್ಮಿಕ ದೃಷ್ಟಿಯ ಮೆರಗು. ನಮ್ಮ ಜನತೆಯ ಹೃದಯದಲ್ಲಿ ಯುಗ ಯುಗಗಳಿಂದಲೂ ಪ್ರಧಾನವಾಗಿ ನೆಲಸಿರುವ ಆ ದೃಷ್ಟಿಯಿಂದ ನಾವು ಚಿರಂತನವೂ ಪುನೀತರಾದೇವು. ಇಂದಿನ ವಿಜ್ಞಾನ ಯುಗದಲ್ಲೂ ಅದನ್ನು ಮರೆಯುವಂತಿಲ್ಲ. ಎಂದರೆ ವಿಜ್ಞಾನಕ್ಕೆ ನಾವು ಬೆನ್ನು ತಿರುಗಿಸಬೇಕೆಂದು ಹೇಳುವ ಮಾತಿದಲ್ಲ. ಅದು ಆವಶ್ಯಕ. ಅದರಿಂದ ಜನತೆಯ ಜೀವನದ ಮಟ್ಟವನ್ನು ಹೆಚ್ಚಿಸಬಲ್ಲ ಉದ್ಯೋಗಗಳನ್ನು ಬೆಳಸಬಹುದು. ಅದಷ್ಟರಿಂದಲೇ ಜೀವನ ಪಾವನವಾಯಿತೆಂದು ಭಾವಿಸುವಂತಿಲ್ಲ; ಜೊತೆಗೆ ವಿಜ್ಞಾನ ಮಾನವನ ಕಂಟಕವಾಗಿಯೂ ಪರಿಣಮಿಸುತ್ತಿದೆಯೆಂದು ಆಧುನಿಕ ಯುದ್ಧ ಮೀಮಾಂಸೆಯನ್ನು ತಿಳಿದವರು ಹೇಳುವರು. ಎಂದರೆ ವಿಜ್ಞಾನಕ್ಕೆ ಜೀವನ ದಾಸಿಯಾಗಬೇಕಾಗಿಲ್ಲ. ವಿಜ್ಞಾನ ಜೀವನಕ್ಕಾಗಿ ಎಂಬುದನ್ನು ಅರಿತು ಅದರ ಸರ್ವ ಸಾಧನೆಗಳೂ ಮಾನವನ ಕಲ್ಯಾಣ ಸಾಧನೆಗಾಗಿಯೇ ಮೀಸಲಾಗಿಸಬೇಕು. ಆವನ ವಿನಾಶಕ್ಕಾಗಿಯಲ್ಲ. ಹಾಗಾಗಬೇಕಾದರೆ ವಿಜ್ಞಾನ ಸಂಸ್ಕೃತಿಗೆ ಧಾರ್ಮಿಕ ದೃಷ್ಟಿಯ ಅಚ್ಚುಕಟ್ಟು ಬೇಕು. ಆಗ ಮಾನವ ಜನಾಂಗದ ಸುಖ ಸಾಧನೆಯಾಗುವುದರ ಜೊತೆಗೆ ಸಮಾಜದಲ್ಲಿ ಸಹಕಾರ ಶಾಂತಿಗಳೂ ನೆಲಸಿ ಜೀವನ ನಿಜವಾಗಿಯೂ ಆನಂದಮಯವಾದೀತು; ಭೋರ್ಗರೆಯುತ್ತಿರುವ

ಔದ್ಯೋಗಿಕ ಜಗತ್ತಿನಲ್ಲಿ ಶಾಂತಿ ಸೌಹಾರ್ದ ನೆಲಸಿಯಾವು; ಅಂದಂದು ಮಾನವನ ವಿನಾಶಕ್ಕೆ ದುಡಿಯುತ್ತಿರುವ ಬಂಡವಾಳದ ಚಕ್ರಮಾನವೀಯ ದೃಷ್ಟಿಯಲ್ಲಿ ತಿರುಗೀತು. ಪಾಶ್ಚಿಮಾತ್ಯರ ವಿಜ್ಞಾನ ಸಂಸ್ಕೃತಿಯೊಡನೆ ಭಾರತೀಯರ ಧಾರ್ಮಿಕ, ನೈತಿಕ ವತ್ತು ಕಲಾಸಂಸ್ಕೃತಿಗಳನ್ನು ಸಮನ್ವಯ ಗೊಳಿಸಿಕೊಂಡು ನಮ್ಮ ಜನತೆಯು ಪುರೋಭಿವೃದ್ಧಿಗೆ ಉಚಿತವೆನಿಸುವ ಮಾರ್ಗವನ್ನು ಆ ಮೂಲಕ ಸಾಧಿಸಿಕೊಳ್ಳಬೇಕಾಗಿದೆ. ಎಂದಮೇಲೆ ನಮ್ಮ ಶಾಲೆಗಳಲ್ಲಿ ವಿಜ್ಞಾನದೃಷ್ಟಿಯನ್ನು ಮಕ್ಕಳಲ್ಲಿ ಬೆಳಸುವುದರ ಜೊತೆಗೆ ಧಾರ್ಮಿಕ ಶಿಕ್ಷಣವನ್ನೂ ಕೊಡಬೇಕು.

೬. **ಧಾರ್ಮಿಕ, ನೈತಿಕ ಜೀವನ:** ಭಿನ್ನಮತಗಳ ಬೀಡಾದ ನಮ್ಮ ನಾಡಿನ ಶಿಕ್ಷಣರಂಗದಲ್ಲಿ ಧಾರ್ಮಿಕ ಶಿಕ್ಷಣ ಯಾವ ರೀತಿಯದಿರ ಬೇಕೆಂಬುದು ಬಗೆಹರಿಯದ ಸಮಸ್ಯೆಯಾಗಿದೆ; ಬಗೆಹರಿಸಲಾರದ ಕೆಲವರು ಆ ಶಿಕ್ಷಣ ಅನಾವಶ್ಯಕವೆಂದು ತಳ್ಳಿಹಾಕಲೂ ಯತ್ನಿಸಿರುವರು. ನಮ್ಮ ನಾಡಿನಲ್ಲಿ ಯಾವ ಮತ ಧರ್ಮ ಬೋಧನೆಗೆ ತೊಡಗಿದರೂ ಅನ್ಯಮತದವರು ಸಹಕರಿಸದೆ ತೊಂದರೆಯಾದೀತೆಂಬುದೇ ಅಂಥವರ ವಾದ. ಅಹುದು, ಯಾವ ಮತದವರಿಗೂ ಆ ಶಿಕ್ಷಣದಿಂದ ನೋವಾಗಬಾರದು. ಎಲ್ಲ ಮತಗಳಿಗೂ ತಳಹದಿಯೆನಿಸುವ ಉದಾತ್ತ ತತ್ತ್ವಗಳನ್ನು ಮಕ್ಕಳಿಗೆ ಶಾಲೆಯಲ್ಲಿ ಬೋಧಿ ಸುವುದಾದರೆ ಯಾರಿಗೂ ಅಹಿತವೆನಿಸಲಾರದು. ಅಂಥ ಧಾರ್ಮಿಕ ಶಿಕ್ಷಣ ನೈತಿಕ ಶಿಕ್ಷಣದ ಸ್ವರೂಪವನ್ನೇ ತಾಳಬಲ್ಲದು. ತರಗತಿಯಲ್ಲಿ ಧಾರ್ಮಿಕ, ನೈತಿಕ ಶಿಕ್ಷಣವನ್ನು ಕೊಡುವುದರ ಜೊತೆಗೆ ಶಾಲೆಯಲ್ಲಿ ಆಚರಿಸುವ ಸಮಾರಂಭಗಳಿಂದಲೂ ಮಕ್ಕಳ ಮನಸ್ಸಿನಲ್ಲಿ ಆ ದೃಷ್ಟಿ ಮೂಡುವಂತಾಗ ಬೇಕು. ಮುಂದೆ ನಮ್ಮ ನಾಡಿನ, ಜಗತ್ತಿನ ಧರ್ಮಗಳನ್ನು ಅರಿತು ಕೊಳ್ಳುವ ಕುತೂಹಲವೂ ವಿಶಾಲ ಭಾವನೆಯೂ ಮೂಡುವಂತಾಗಬೇಕು. ಆ ಮೂಲಕ ನಮ್ಮ ಧರ್ಮದಲ್ಲಿ ಆಸಕ್ತಿಯೂ ಇತರ ಧರ್ಮಗಳಲ್ಲಿ ಅಭಿ ಮಾನವೂ ಮೂಡಬೇಕು. ವಿಜ್ಞಾನಯುಗದ ಏಕಮುಖವಾದ ನಾಗರಿ ಕತೆಗೆ ಧಾರ್ಮಿಕ ದೃಷ್ಟಿ ಒಂದು ಕಲ್ಯಾಣದಾಯಕವಾದ ಮಾರ್ಗದರ್ಶನ ವನ್ನು ನೀಡಿ ಜನಜೀವನದಲ್ಲಿ ಸುಖ, ಶಾಂತಿ, ಸೌಹಾರ್ದಗಳು ನೆಲಸು ವಂತೆ ಮಾಡುವ, ಸೃಷ್ಟಿಯ ಇನ್ನಿತರ ಸಚೇತನ ಜಗತ್ತನ್ನು ದಯೆಯಿಂದ ನೋಡುವ ಮನೋಭಾವ ಮೂಡಬಲ್ಲದು.

**೯. ಸ್ವದೇಶಾಭಿಮಾನ:** ಪರಕೀಯ ಶಿಕ್ಷಣ ನಮ್ಮ ನಾಡಿನಲ್ಲಿ ಬೇರೂರಿದಮೇಲೆ ನಮ್ಮ ಯುವಕರು ಪಾಶ್ಚಿಮಾತ್ಯರ ಇತಿಹಾಸ, ಸಾಹಿತ್ಯ, ಸಂಸ್ಕೃತಿ ಮತ್ತು ಕಲೆಗಳಿಗೆ ಮೋಹಗೊಂಡು ಭಾರತೀಯವೆಂಬುದೆಲ್ಲ ತುಚ್ಛವೆಂಬ ಮನೋಭಾವವನ್ನು ಬೆಳಸಿಕೊಂಡಿರುವುದು ಕಂಡುಬರುತ್ತಿತ್ತು. ಜೊತೆಗೆ, ಇಂಗ್ಲೀಷ್ ಭಾಷೆಯ ರಾಜಕೀಯ ವರ್ಚಸ್ಸಿನಿಂದ ನಮ್ಮದೆಲ್ಲ ಸತ್ವಹೀನವೆಂಬ ತಿರಸ್ಕಾರವೂ ಹುಟ್ಟಿಕೊಂಡಿತ್ತು. ಈಚೆಗೆ ಆತ್ಮಗೌರವವುಳ್ಳ ಭಾರತೀಯರೆಲ್ಲ ಎಚ್ಚೆತ್ತುಕೊಂಡು, ನಮ್ಮ ಗತಕಾಲದ ವೈಭವದ ವೈಶಿಷ್ಟ್ಯ ಗಳನ್ನೆಲ್ಲ ಪ್ರಚಾರಕ್ಕೆ ತಂದು ನಾವು ಯಾವ ಜನಾಂಗಕ್ಕೂ ಕಡಮೆಯಲ್ಲ ವೆಂಬುದನ್ನು ನಮ್ಮವರಿಗೂ ಇತರರಿಗೂ ಸಾರುವ ಕಾರ್ಯ ಆರಂಭಿಸಿದರು. ಆ ಭರದಲ್ಲಿ ನಮ್ಮದಲ್ಲದ ಪರಕೀಯ ಧರ್ಮ, ಸಂಸ್ಕೃತಿ, ಸಾಹಿತ್ಯ, ಕಲೆ ಮೊದಲಾದವನ್ನು ಬಹಿಷ್ಕರಿಸುವ ವೈಪರೀತ್ಯವೂ ಆರಂಭವಾಗಿತ್ತು. ಆದರೆ ಈಗೊಂದು ಸಮನ್ವಯ ದೃಷ್ಟಿ ರೂಪುಗೊಳ್ಳುತ್ತ ಬರುತ್ತಿದೆ. ನಮ್ಮಲ್ಲಿಲ್ಲದ ಪರಕೀಯರ ವೈಶಿಷ್ಟ್ಯಗಳನ್ನು ಸ್ವೀಕರಿಸುವ, ನಮ್ಮ ಸಾಹಿತ್ಯ ಸಂಸ್ಕೃತಿಗಳ ವೈಶಿಷ್ಟ್ಯವನ್ನು ಕಾಪಾಡಿಕೊಂಡು, ಪುಷ್ಟಿಗೊಳಿಸಿ ಬೆಳಸಿಕೊಳ್ಳುವ ಮನೋ ಭಾವ ಬರುತ್ತಿದೆ. ಎಲ್ಲಕ್ಕು ಹೆಚ್ಚಾಗಿ, ದೇಶಾಭಿಮಾನವೂ ಬೆಳೆದು ರೂಪು ಗೊಳ್ಳುತ್ತಿದೆ.

ನಮ್ಮ ಶಾಲೆಗಳಲ್ಲಿ ಇಂಗ್ಲೀಷಿನ ಪ್ರಾಧಾನ್ಯತೆ ಕಡಮೆಯಾದಂತೆ ನಮ್ಮ ಸಾಹಿತ್ಯ ಸಂಸ್ಕೃತಿಗಳಿಗೂ ಇತಿಹಾಸ ಮತ್ತು ಕಲೆಗಳಿಗೂ ಹೆಚ್ಚಿನ ಸ್ಥಾನವೂ ಪುರಸ್ಕಾರವೂ ದೊರಕುತ್ತಿದೆ. ನಮ್ಮಲ್ಲಿ ಇಲ್ಲದ ಅಂಶಗಳನ್ನೂ, ಪಾಶ್ಚಿಮಾತ್ಯರ ವೈಶಿಷ್ಟ್ಯಗಳನ್ನೂ ನಾವು ಸ್ವೀಕರಿಸಿ ನಮ್ಮದನ್ನು ಪುಷ್ಟಿ ಗೊಳಿಸಿಕೊಳ್ಳಬೇಕು. ಶಾಲೆಗಳಲ್ಲಿ ಯಾವ ಪಾಠ ಮಾಡುತ್ತಿರಲಿ, ನಮ್ಮ ನಾಡಿನ, ನುಡಿಯ, ಸಾಹಿತ್ಯ ಸಂಸ್ಕೃತಿಗಳ ಮೇಲೆ ಮಕ್ಕಳಿಗೆ ಅಭಿಮಾನ ಹುಟ್ಟುವಂತೆ ಬೋಧಿಸಬೇಕು. ಜೊತೆಗೆ 'ಭಾರತ ನಮ್ಮ ಮಾತೃಭೂಮಿ; ನಾವೆಲ್ಲ ಸೋದರ ಸೋದರಿಯರು!' ಎಂಬ ವಿಶಾಲ ಭಾವನೆಯೂ ಬೆಳೆಯ ಬೇಕು. ಪ್ರಾಂತೀಯ ಭಾಷೆ, ಸಾಹಿತ್ಯ, ಸಂಸ್ಕೃತಿಗಳಿಗೆ ಆ ಪ್ರಾಂತ್ಯದಲ್ಲಿ ಪುರಸ್ಕಾರಬೇಕೆಂದು ಕೇಳುವುದಾದರೂ ಪ್ರಾಂತೀಯ ಭಾವನೆ ವೈಷ ಮ್ಯಕ್ಕೆ ಎಡೆಗೊಡದಂತೆ ನೋಡಿಕೊಳ್ಳಬೇಕು. ಒಂದೊಂದು ಪ್ರಾಂತ್ಯವೂ

ತನ್ನತ್ವವನ್ನು ಉಳಿಸಿ, ಬೆಳೆಸಿಕೊಂಡು, ಅಖಂಡ ಭಾರತದ ಪ್ರಗತಿಗೆ ಸಹಾಯವಾಗಬೇಕು. ಆ ವಿಶಾಲ ಭಾವನೆಯನ್ನು ನಮ್ಮ ಮಕ್ಕಳ ಮನಸ್ಸಿನಲ್ಲಿ ಶಾಲೆಗಳು ರೂಪಿಸಬೇಕು. ಅದು ನಿಜವಾದ ದೇಶಭಕ್ತಿ, ದೇಶಾಭಿಮಾನ.

ಭಾರತದಲ್ಲಿ ಪರಕೀಯ ಆಡಳಿತ ಕೊನೆಗೊಂಡೊಡನೆಯೇ ಮತೀಯ ಘರ್ಷಣೆಗಳು ಬೃಹದಾಕಾರವನ್ನು ತಾಳುತ್ತಿವೆ; ಪ್ರಾಂತೀಯ ಭಾವನೆಗಳಿಂದಲೂ ಅಲ್ಲಲ್ಲಿ ಘರ್ಷಣೆಗಳಾಗುತ್ತಿವೆ. ಜೊತೆಗೆ ರಾಜಕೀಯ ಪಂಥಗಳಲ್ಲೂ ಘರ್ಷಣೆಗಳು ತಲೆದೋರುತ್ತಿವೆ. ಇಂಥ ವಿಷಮ ಸನ್ನಿವೇಶದಲ್ಲಿ ನಮಗೆ ಮಾರ್ಗದರ್ಶನಮಾಡಿ ನಾಡಿನಲ್ಲಿ ಸುಖಶಾಂತಿ ನೆಲಸಬೇಕಾದರೆ 'ಎಲ್ಲರೂ ಭಾರತೀಯರು' ಎಂಬ ಭಾವ ನಮ್ಮ ಮಾತಿನಲ್ಲೂ ಕಾರ್ಯದಲ್ಲೂ ನೆಲಸಬೇಕು. ಆ ಕಾರ್ಯ ಸಾಧನೆಗೆ ಅಮೆರಿಕದವರು ಅನುಸರಿಸುತ್ತಿರುವ ಒಂದು ಕ್ರಮವನ್ನು ಇಲ್ಲಿ ಉಲ್ಲೇಖಿಸಬಹುದು. ನಮ್ಮ ಭರತಭೂಮಿಯಂತೆ ಅಮೆರಿಕವೂ ಅನೇಕ ಪ್ರಾಂತ್ಯಗಳನ್ನೊಳಗೊಂಡಿದೆ. ಅಲ್ಲಿಗೆ ವರ್ಷ ವರ್ಷವೂ ಯೂರೋಪ್ ದೇಶಗಳವರೂ ಇನ್ನಿತರ ದೇಶಗಳ ಜನರೂ ವಲಸೆ ಬಂದು ನೆಲಸುತ್ತಿರುತ್ತಾರೆ. ಅಂಥ ಭಿನ್ನ ಸಾಂಸ್ಕೃತಿಕ ಜನತೆಯಲ್ಲಿ ಸ್ವಲ್ಪ ಕಾಲದಲ್ಲೇ ಹದಿನಾರಾಣೆ ಅಮೆರಿಕನರೆಂಬ ಅಭಿಮಾನವನ್ನು ಬೆಳೆಸಿ ರಾಷ್ಟ್ರೀಯ ಸಂಘಟನೆಯಾಗುವಂತೆ ಮಾಡಲು ಸರ್ಕಾರದವರೂ ಸಮಾಜವೂ ಶಿಕ್ಷಣ ಸಂಸ್ಥೆಗಳೂ ಅಮೆರಿಕಾಕರಣವೆಂಬ ಕಾರ್ಯಯೋಜನೆಯನ್ನು ಆಚರಣೆಗೆ ತಂದಿರುವರು; ಇದು ಇಡೀ ಪ್ರಪಂಚದಲ್ಲೇ ಒಂದು ವೈಶಿಷ್ಟ್ಯವುಳ್ಳ ಕಾರ್ಯಕ್ರಮವೆನ್ನಬಹುದು. ನಮ್ಮ ಭರತಖಂಡದಲ್ಲೂ ಯಾವ ಕ್ಷೇತ್ರದಲ್ಲಾಗಲಿ, ರಾಷ್ಟ್ರೀಯ ಸಂಘಟನೆಗೆ ನೆರವಾಗುವಂತೆ ಅಂಥ ಒಂದು ಯೋಜನೆ ತಯಾರಿಸುವುದರ ಜೊತೆಗೆ ರಾಷ್ಟ್ರೀಕರಣ ಸಾಧನೆಗಾಗಿಯೇ ಪ್ರತ್ಯೇಕ ಶಾಖೆಯೊಂದನ್ನು ನಿಯಮಿಸುವುದು ಅಗತ್ಯ. ನಮ್ಮ ಶಿಕ್ಷಣ ಸಂಸ್ಥೆಗಳೂ ಮಕ್ಕಳ ಮನಸ್ಸಿನಲ್ಲಿ ನಾವೆಲ್ಲ ಭಾರತೀಯರೆಂಬ ಭಾವ ಮೂಡುವಂತೆ ಕಾರ್ಯಕ್ರಮವನ್ನೇರ್ಪಡಿಸಬೇಕು. ನಮ್ಮ ಕಲೆ, ಸಾಹಿತ್ಯ, ಸಂಸ್ಕೃತಿ, ಇತಿಹಾಸಗಳಲ್ಲಿ ಅಭಿಮಾನ ಆ ಮೂಲಕ ಹೆಚ್ಚಿ ಮುಂದಿನ ಜನಾಂಗದಲ್ಲಿ ರಾಷ್ಟ್ರೀಯ ಸಂಘಟನೆಯಾಗಿ, ರಾಷ್ಟ್ರದ ಅಭಿಮಾನ ಬೆಳೆದು ಭಾರತ ಬಲಯುತವಾದ ದೇಶವಾಗಬೇಕು.

**೧೦. ಜೀವನದಲ್ಲಿ ಸ್ವಾವಲಂಬನ ಶಕ್ತಿ:** ಶಿಕ್ಷಣ ಮೇಲಿನ ಎಲ್ಲ ಪ್ರತಿಫಲಗಳನ್ನು ಸಾಧಿಸುವುದಾದರೂ ವ್ಯಕ್ತಿ ತನ್ನ ಜೀವನೋಪಾಯವನ್ನು ಹುಡುಕಿಕೊಳ್ಳಲಾರದೆ ಹೋದರೆ ಇತರರ ಮೇಲೆ ಹೊರೆಯಾಗಿ ಪರಿಣಮಿಸಿಯಾನು. ಶಿಕ್ಷಣ ಮುಗಿಯುವುದರೊಳಗೆ ಅವನಿಗೊಪ್ಪುವ ವೃತ್ತಿಯೊಂದರಲ್ಲಿ ತಕ್ಕಷ್ಟು ಶಿಕ್ಷಣ ದೊರೆತು ಸ್ವತಂತ್ರವಾಗಿಯೋ ಕಾರ್ಖಾನೆ, ಅಂಗಡಿ, ವಾಣಿಜ್ಯ ಸಂಸ್ಥೆ — ಮುಂತಾದವುಗಳಲ್ಲಿ ಸೇರಿಯೋ ಜೀವನೋಪಾಯವನ್ನು ನಡಸುವ ಶಕ್ತಿಯನ್ನು ಕೊಡುವಂತಾಗಬೇಕು. ಈ ಕಾರ್ಯ ನಾಡಿನ ಆವಶ್ಯಕತೆಗಳನ್ನು ಅನುಸರಿಸಿ ನಡೆಯಬೇಕು. ಎಲ್ಲರನ್ನೂ ಒಂದೇ ಕೆಲಸಕ್ಕೆ ಸಿದ್ಧಪಡಿಸುವುದು ಉಚಿತವಾಗಲಾರದು. ನಾಡಿನ ಉದ್ಯೋಗಗಳನ್ನೂ, ಅವುಗಳ ವ್ಯಾಪ್ತಿ, ಬೆಳವಣಿಗೆ ಮತ್ತು ಉತ್ಪನ್ನಗಳ ಆವಶ್ಯಕತೆಯನ್ನೂ ಪರಿಗಣಿಸಿ ವ್ಯಕ್ತಿಗಳ ಅಭಿರುಚಿ ಆಸಕ್ತಿಗಳನ್ನು ಅನುಸರಿಸಿ ಆ ಕಾರ್ಯಕ್ಕೆ ಸಿದ್ಧಪಡಿಸಬೇಕು. ಆ ಮೂಲಕ ವ್ಯಕ್ತಿಗಳು ಸ್ವತಂತ್ರವಾಗಿ ಜೀವನೋಪಾಯವನ್ನು ಸಾಧಿಸಿಕೊಳ್ಳಲು ಸಹಾಯವಾಗುವುದಲ್ಲದೆ ನಾಡಿನ ಉದ್ಯೋಗಗಳ ಬೆಳವಣಿಗೆಗೂ ಸಮಾಜದ ಆವಶ್ಯಕತೆಯ ಪೂರೈಕೆಗೂ ನೆರವಾಗುತ್ತದೆ,

**೧೧. ಸಮಾಜದ ಪ್ರಗತಿ:** ನಮ್ಮ ಶಿಕ್ಷಣರಂಗ ಸಾಧಿಸಬೇಕಾಗಿರುವುದು ಇವಿಷ್ಟೇಯೆ ಎಂದು ಯಾರೂ ಭಾವಿಸಬಾರದು. ವ್ಯಕ್ತಿಯ ಸರ್ವತೋಮುಖವಾದ ಬೆಳವಣಿಗೆಗೆ ಏನೇನು ಆವಶ್ಯಕವೋ ಅವೆಲ್ಲ ನಮ್ಮ ಶಿಕ್ಷಣದ ಫಲವಾಗಿ ಮೂಡಬೇಕು. ಜೊತೆಗೆ ಸಮಾಜ ಹಿತವನ್ನೂ ಸಾಧಿಸಬೇಕು. ಶಾಲೆಗಳು ಸಮಾಜದ ಮುಖ್ಯಾಸ್ತ್ರಗಳೆಂದು ಹೇಳುವುದುಂಟು. ಆರ್ಷೇಯವಾಗಿ ಬಂದಿರುವ ಸಂಸ್ಕೃತಿ ಸಂಪ್ರದಾಯಗಳ ಪ್ರಸರಣಕ್ಕೂ, ಶಿಕ್ಷಣದ ಮೂಲಕ ವ್ಯಕ್ತಿಗಳ ಜೀವನದ ಮೇಲೆ ಸಮಾಜ ಒಂದು ಅಧಿಕಾರವನ್ನು ಸ್ಥಾಪಿಸಿಕೊಳ್ಳುವುದಕ್ಕೂ ಸಹಾಯವಾಗುತ್ತದೆ. ಹೀಗೆ ವ್ಯಕ್ತಿಯ ಶಿಕ್ಷಣದಿಂದ ಸಮಾಜದ ಸಂಸ್ಕೃತಿ ಸಂಪ್ರದಾಯಗಳು ಉಳಿದುಕೊಂಡು ಬರುವುದರ ಜೊತೆಗೆ ಅವುಗಳ ಪುರೋಭಿವೃದ್ಧಿಗೂ ನೆರವಾಗಬೇಕು. ಶಿಕ್ಷಣದಿಂದ ಸಮಾಜವೂ ಪ್ರಗತಿಯ ಬೆಳಕನ್ನು ಕಾಣಬೇಕು. ಇಂದಿನ ನಮ್ಮ ಸಮಾಜ ಮುಂದುವರಿಯಬೇಕಾದ ಮಾರ್ಗವನ್ನು ಉಪಾಧ್ಯಾಯರು ಅರಿತು ಮಕ್ಕಳ

ಮನಸ್ಸಿನಲ್ಲಿ ಪ್ರಗತಿಪರ ಭಾವನೆಗಳನ್ನು ಮೂಡಿಸುವುದರ ಮೂಲಕ ಮುಂದಿನ ಜನಾಂಗದ ಪ್ರಗತಿಗೆ ಕಾರ್ಯತಃ ನೆರವಾಗಬಲ್ಲರು. ಈ ಕಾರ್ಯ ಸಾಧನೆಯಾಗಬೇಕಾದರೆ ಶಾಲೆಗಳಿಗಿರುವ ಗೌರವ ಪುರಸ್ಕಾರಗಳು ಉತ್ತಮಗೊಳ್ಳಬೇಕು ; ಅವೂ ಸಮಾಜ ಸಂಸ್ಕರಣದ, ಸಮಾಜ ಪ್ರಗತಿಯ ಕೇಂದ್ರಗಳೆಂಬ ಭಾವ ಜನತೆಯಲ್ಲಿ ಹುಟ್ಟಬೇಕು. ಅಲ್ಲದೆ ಶಾಲಾ ಶಿಕ್ಷಣ ಕಾರ್ಯವೂ ಶಿಕ್ಷಕರೂ ಆಯವ್ಯಯದ ತಕ್ಕಡಿಯಲ್ಲಿ ದೊಡ್ಡ ಭಾರವೆನ್ನುವ ಮನೋಭಾವ ನಮ್ಮ ರಾಜಕಾರಣಿಗಳ, ಆರ್ಥಿಕ ಧುರೀಣರ ಮತ್ತು ದೇಶ ಪ್ರಮುಖರ ಮನಸ್ಸಿನಿಂದ ದೂರ ಸರಿಯಬೇಕು.

# ೧೬. ಮಕ್ಕಳ ಮನೋರಾಜ್ಯ

ಶಿಕ್ಷಣರಂಗದ ತತ್ವದೃಷ್ಟಿಯನ್ನು ರೂಪಿಸಲು ಜೀವನ ತತ್ವದ ಪರಿಚಯ ನೆರವಾಗುವಂತೆ ಬೋಧನಕ್ರಮವನ್ನು ಉತ್ತಮಪಡಿಸಲು ಮಕ್ಕಳ ಮಾನಸಿಕ ವ್ಯಾಪಾರಗಳ ಪರಿಚಯ ಅಗತ್ಯ. ಶಿಕ್ಷಣತತ್ವ ನಿಷ್ಕರ್ಷಿಸುವ ಗುರಿ ಈಡೇರಬೇಕಾದರೆ ಉತ್ತಮ ಬೋಧನಕ್ರಮ ಆವಶ್ಯಕ. ಈ ಗ್ರಂಥದ ಬೇರೆ ಬೇರೆ ಸಂದರ್ಭಗಳಲ್ಲಿ ಆವಶ್ಯಕವೆನಿಸುವಷ್ಟು ಮನಶ್ಶಾಸ್ತ್ರದ ಜ್ಞಾನವನ್ನು ವಿವೇಚಿಸಲು ಯತ್ನಿಸಿದೆ. ಆದರೆ ಮನಶ್ಶಾಸ್ತ್ರ ಈಗಾಗಲೇ ಅಪಾರವಾಗಿ ಬೆಳೆದು ಮಾನವನ ಮಹಾ ಜ್ಞಾನಗಳಲ್ಲೊಂದಾಗಿದೆ. ಅದನ್ನು ಸ್ಥೂಲವಾಗಿಯಾದರೂ ಈ ಗ್ರಂಥದಲ್ಲಿ ನಿರೂಪಿಸುವುದು ಸಾಧ್ಯವಾಗದ ಕೆಲಸ; ಆದರೂ ಶಿಕ್ಷಣರಂಗಕ್ಕೆ ಆವಶ್ಯಕವೆನಿಸುವ ಮಾನಸಿಕ ವ್ಯಾಪಾರಗಳಲ್ಲಿ ಹಲವನ್ನಾದರೂ ಪರಿಚಯಮಾಡಿಕೊಡುವ ಉದ್ದೇಶದಿಂದ ಈ ಅಧ್ಯಾಯವನ್ನು ಅಳವಡಿಸಲಾಗಿದೆ.

ಶಿಕ್ಷಣ ಕಾರ್ಯವೆಂದರೆ ಮಕ್ಕಳಿಗೆ ದೈವದತ್ತವಾಗಿ ಬರುವ ಹಲವು ಮೂಲ ಸ್ವಭಾವಾದಿ ಗುಣಗಳನ್ನು ಸಮಾಜದ ಮತ್ತು ವ್ಯಕ್ತಿಯ ಹಿತಚಿಂತನೆಯ ದೃಷ್ಟಿಯಲ್ಲಿ, ಸೂಕ್ತವಾದ ಮಾರ್ಗದಲ್ಲಿ ಸಂಸ್ಕರಿಸಿ, ಪಳಗಿಸಿ ಬೆಳಸುವುದೇ ಆಗಿದೆ. ಎಂದಮೇಲೆ ಆ ಕಾರ್ಯಸಾಧನೆಯಲ್ಲಿ ಮಕ್ಕಳ ಮನಸ್ಸಿನ ಬೇರೆ ಬೇರೆ ವ್ಯಾಪಾರಗಳು ನಡೆಯುವ ಸ್ವರೂಪದ ಪರಿಚಯ ಶಿಕ್ಷಕ ವರ್ಗಕ್ಕೆ ತುಂಬ ನೆರವಾಗಬಲ್ಲದು. ಆ ಮನೋವ್ಯಾಪಾರಗಳ ಶಾಸ್ತ್ರೀಯ ಪರಿಚಯವಿಲ್ಲದೆ ಶಿಕ್ಷಣಕಾರ್ಯ ಆರಂಭಿಸುವುದು ಕುರುಡನೊಬ್ಬನು ಕಾಡಿನಲ್ಲಿ ಪ್ರಯಾಣ ಮಾಡಿದಂತೆ. ಮನಶ್ಶಾಸ್ತ್ರ ಜ್ಞಾನದ ಸಂಶೋಧನೆಗಳು ನಡೆದು ಅದರ ಸಹಾಯ ಶಿಕ್ಷಣರಂಗಕ್ಕೆ ದೊರಕುವಂತಾದಮೇಲೆ ಹಿಂದಿನ ಬೋಧನರೀತಿಯು ಮಾರ್ಪಟ್ಟು, ಶಾಸ್ತ್ರೀಯ ಶಿಕ್ಷಣಾಕ್ರಮ ರೂಪುಗೊಳ್ಳುತ್ತಿದೆ. ಮಕ್ಕಳು ಮಣ್ಣಿನ ಮುದ್ದೆಯೆಂದುಕೊಂಡು ವಿಷಯವನ್ನು ಅವರ ತಲೆಗೆ ತುಂಬುವ ಬದಲು 'ಅವರು ಬೆಳೆಯುವ, ಸನ್ನಿವೇಶಗಳ ಕೈವಾಡಕ್ಕೆ ಸೂಕ್ಷ್ಮ ರೀತಿಯಲ್ಲಿ ವರ್ತಿಸುತ್ತ ಸಂಸ್ಕರಣ ಹೊಂದುತ್ತಿರುವ ಜೀವಿಗಳು'

ಎಂಬ ಅಭಿಪ್ರಾಯ ಸ್ಪಷ್ಟವಾಗಿ, ಆ ಕಾರ್ಯ ಸಾಧಿಸಲು, ಉಚಿತ ರೀತಿಯಲ್ಲಿ ಸಾಧಿಸಲು ಹೆಚ್ಚೆ ಹೆಚ್ಚೆಗೂ ಆ ಶಾಸ್ತ್ರಜ್ಞಾನವನ್ನು ಬಳಸಿಕೊಳ್ಳುವ ಜಾಣತನ ಈಗ ಶಿಕ್ಷಣವೇತ್ತರಲ್ಲಿ ಮೂಡುತ್ತಿದೆ. ಆದುದರಿಂದ ಪ್ರಧಾನವಾದ ಹಲವು ಮಾನಸಿಕ ವ್ಯಾಪಾರಗಳನ್ನೂ, ಅವುಗಳ ಬೆಳಕಿನಲ್ಲಿ ಬೋಧನಕ್ರಮ, ಪಠ್ಯ ವಸ್ತು, ಶಿಸ್ತಿನ ವ್ಯವಸ್ಥೆ ಮತ್ತು ಶಾಲಾ ಸಂವಿಧಾನ–ಇವನ್ನು ಹೇಗೆ ರೂಪಿಸಿ ಕೊಳ್ಳಬೇಕೆಂಬ ವಿಷಯಗಳನ್ನೂ ಪರಿಚಯ ಮಾಡಿಕೊಳ್ಳುವ.

## ೧. ಕಲಿವು ಮತ್ತು ಅದರ ವಿಧಗಳು

ಮಕ್ಕಳಿಗೆ ಹಲವು ಮೂಲ ಮನೋಗತಿಗಳು ವಂಶಗತವಾಗಿರುತ್ತವೆ. ಸನ್ನಿವೇಶಗಳ ಕೈವಾಡದಿಂದ ಅವು ಕಾರ್ಯಮುಖವಾಗುತ್ತವೆ. ಆಗ, ವ್ಯಕ್ತಿ ಒಂದು ರೀತಿಯಲ್ಲಿ ವರ್ತಿಸುತ್ತಾನೆ. ಆ ವರ್ತನೆ ಉಚಿತವಾದದ್ದಾದರೆ ಅದನ್ನು ರೂಢಿಸಿಕೊಂಡು ದೃಢಪಡಿಸಿಕೊಳ್ಳುತ್ತಾನೆ; ಇಲ್ಲವಾದರೆ ಬಿಟ್ಟು ಬಿಡುತ್ತಾನೆ. ಹೀಗೆ ಮೂಲ ಮನೋಗತಿಗಳನ್ನು ಉಚಿತ ರೀತಿಯಲ್ಲಿ ಮಾರ್ಪಡಿಸಿ ಬೆಳಸಿಕೊಂಡು ಜ್ಞಾನವನ್ನೋ ಕಾರ್ಯ ಕೌಶಲವನ್ನೋ ವೃದ್ಧಿಪಡಿಸಿಕೊಳ್ಳುತ್ತಾನೆ. ಮಾನವನ ನರವ್ಯೂಹ ಮಾರ್ದವವುಳ್ಳದ್ದು. ನಮ್ಮ ನೂತನ ವರ್ತನೆಗಳಿಂದ ಅದು ಮಾರ್ಪಡುತ್ತದೆ; ಹೊಸ ಹೊಸ ಪ್ರಚೋದನೆಗಳಿಗೆ ಉಚಿತ ರೀತಿಯಲ್ಲಿ ವರ್ತಿಸುವ ಕ್ರಮ ಅದರಲ್ಲಿ ರೂಪುಗೊಳ್ಳುತ್ತದೆ. ಈ ದೃಷ್ಟಿಯಿಂದ ನೋಡಿದರೆ ಸನ್ನಿವೇಶಗಳಿಗೆ ಅತ್ಯಂತ ಉಚಿತ ರೀತಿಯಲ್ಲಿ ವರ್ತಿಸುವುದು ಕ್ರಮ ಕ್ರಮವಾಗಿ ಸಾಧನೆಯಾಗುವುದು ಶಿಕ್ಷಣವೆನಿಸುತ್ತದೆ. ವಾತಾವರಣದೊಡನೆ ಹೊಂದಿಕೊಳ್ಳುವಾಗ ಮಾನವನು ತನ್ನ ಸ್ವಾಭಾವಿಕ ವರ್ತನೆಗಳನ್ನು ಉಚಿತವೆನಿಸುವಂತೆ ಮಾರ್ಪಡಿಸಿಕೊಳ್ಳಬಲ್ಲನು. ಆ ಸೌಲಭ್ಯ ನರವ್ಯೂಹದ ಮಾರ್ದವ ಸ್ವರೂಪದಲ್ಲಿದೆ. ಅವನಲ್ಲಿ ಕಲಿಯುವ ಶಕ್ತಿ ವಂಶಗತವಾಗಿ ಬಂದಿದೆ; ಜೀವನದಲ್ಲಿ ಪಡೆಯುವ ಜ್ಞಾನ, ಕಾರ್ಯ ಕೌಶಲ್ಯ, ದೃಷ್ಟಿ ಧ್ಯೇಯ—ಇವೆಲ್ಲ ಶಿಕ್ಷಣದಿಂದ ಸಾಧನೆಯಾಗತಕ್ಕವು: ಮೂಲತಃ ಬಂದವಲ್ಲ. ಎಂದರೆ ಮಾನವನ ಸ್ವಭಾವ ಶಿಕ್ಷಣ ಪಡೆಯಬಲ್ಲದು. ಅಂಥ ಶಿಕ್ಷಣಕ್ಕೆ ಅವನ ಕಲಿವಿನ ಶಕ್ತಿಯೇ ಕಾರಣ; ಅದರಿಂದ ಎಲ್ಲ ಶಿಕ್ಷಣವೇತ್ತರೂ ಕಲಿವಿನ ಪರಿಚಯ ಮಾಡಿಕೊಳ್ಳಬೇಕು,

ಹಿಂದೆ ಕಲಿವಿನ ಸ್ವರೂಪವನ್ನೂ ನಿಯಮಗಳನ್ನೂ ವಿವರಿಸಿದೆ. ಇನ್ನು ಕಲಿವಿನ ವಿಧಗಳನ್ನೂ, ಸಂಬಂಧಿಸಿದ ಇತರ ಅಂಶಗಳನ್ನೂ ಪರಿಶೀಲಿಸುವ.

**ಕಲಿವಿನ ವಿಧಗಳು :** ಹೊಸ ವರ್ತನೆಗಳನ್ನೂ, ಜ್ಞಾನವನ್ನೂ, ಕೌಶಲವನ್ನೂ, ದೃಷ್ಟಿ ಧ್ಯೇಯಗಳನ್ನೂ ಪರಿಚಯ ಮಾಡಿಕೊಳ್ಳುವುದು ಕಲಿವಿನ ಮೊದಲ ಭಾಗ; ಅನಂತರ ಹಾಗೆ ಕಲಿತದ್ದನ್ನು ದೃಢಪಡಿಸಿಕೊಳ್ಳುವುದು ಎರಡನೆಯ ಭಾಗ. ನೂತನ ವಿಷಯ, ಅದನ್ನು ಹೊಸ ಸನ್ನಿವೇಶಗಳಿಗೆ ಅನ್ವಯಿಸುವ ಜ್ಞಾನ, ಕಾರ್ಯ ವಿಧಾನ ಮುಂತಾದವು ಹೆಚ್ಚು ಪ್ರಯೋಜನವಾಗ ಬೇಕಾದರೆ, ಅವು ವ್ಯಕ್ತಿಯ ಇಷ್ಟದಂತೆ ಸುಲಭವಾಗಿ ನಡೆಯುವಂತೆ ಪಳಗಬೇಕು. ಅಕ್ಷರಗಳ ಪರಿಚಯವಾದಮೇಲೆ ಕಾಪಿ ಬರಸುವುದುಂಟು : ಪರಿಚಯವಾದ ಅಕ್ಷರಗಳನ್ನು ಸುಲಭವಾಗಿಯೂ ಸರಾಗವಾಗಿಯೂ ಬರೆಯುವುದನ್ನು ದೃಢಪಡಿಸಿಕೊಳ್ಳುವುದಕ್ಕಾಗಿಯೇ ಆ ಅಭ್ಯಾಸ. ಇವುಗಳಲ್ಲಿ ಹೊಸದಾಗಿ ಅಕ್ಷರಗಳನ್ನು ಕಲಿಯುವುದು ನಿಜವಾದ ಕಲಿವು; ಅನಂತರ ಅವುಗಳ ಸೌಲಭ್ಯ ಸಾಧನೆಗಾಗಿ ಕಾಪಿ ಬರೆಯುವುದು. ಹೀಗೆಯೇ ಇತರ ವಿಷಯಗಳಲ್ಲೂ. ಆದರೆ, ಹೊಸ ಪರಿಚಯವನ್ನೂ ಅನಂತರ ಅದನ್ನು ದೃಢಪಡಿಸಿಕೊಳ್ಳುವುದನ್ನೂ 'ಕಲಿವು' ಎಂದು ಕರೆಯುವುದು ವಾಡಿಕೆ. ಈ ಪದವನ್ನು ಇಲ್ಲಿಯೂ ಅದೇ ದೃಷ್ಟಿಯಲ್ಲಿ ಉಪಯೋಗಿಸಿಕೊಂಡಿದೆ.

ಕಲಿವಿನ ಸ್ವರೂಪವನ್ನನುಸರಿಸಿ ಅದನ್ನು ಮೂರು ವಿಧಗಳಾಗಿ ವಿಂಗಡಿಸಬಹುದು : ಕ್ರಿಯಾ ಸ್ವರೂಪದ ಕಲಿವು; ಸಂವೇದನಾ ರೀತಿಯ ಕಲಿವು; ಸಾರಸ್ವತ ರೀತಿಯ ಕಲಿವು. ಕೇವಲ ಮಾಂಸಖಂಡಗಳ ಕೆಲಸವೇ ಹೆಚ್ಚಾಗಿದ್ದು, ಕಾರ್ಯದ ಅಭ್ಯಾಸವನ್ನೂ ಕೌಶಲವನ್ನೂ ಸಾಧಿಸುವುದು ಕ್ರಿಯಾರೂಪದ ಕಲಿವು. ನೆಯ್ಗೆ, ಚಿತ್ರದ ಕೆಲಸ, ಯಂತ್ರ ನಡಸುವುದು, ಮರಗೆಲಸ, ಮೊದಲಾದವು ಈ ರೀತಿಯವು. ನಮ್ಮ ಸ್ವಾಭಾವಿಕ ಸಂವೇದನೆಗಳನ್ನು ಉಚಿತ ರೀತಿಯಲ್ಲಿ ಸಂಸ್ಕರಣಗೊಳಿಸುವುದು ಸಂವೇದನಾರೂಪದ ಕಲಿವು. ಮಾನವನು ನಾಗರಿಕನಾಗುತ್ತ ಬಂದಂತೆ ಅವನ ಮೂಲ ಸಂವೇದನೆಗಳನ್ನು ವ್ಯಕ್ತಿಯ ಮತ್ತು ಸಮಾಜದ ಹಿತಕ್ಕಾಗಿ ಸಂಸ್ಕರಿಸಿಕೊಳ್ಳುವ ಆವಶ್ಯಕತೆಯೂ ಹೆಚ್ಚುತ್ತ ಬಂದಿದೆ. ಪ್ರಾಣಿಗಳಲ್ಲಿ ಕಂಡುಬರುವಂಥ ಕೋಪ, ಭೀತಿ, ಪ್ರಣಯ ಮುಂತಾದ ಮಕ್ಕಳ ಸಂವೇದನೆಗಳು

ಮಾರ್ಪಟ್ಟು ಸಂಸ್ಕರಣಗೊಳ್ಳಬೇಕು. ನಮ್ಮ ವರ್ತನೆಯಲ್ಲೂ ವ್ಯಕ್ತಿತ್ವ ದಲ್ಲೂ ಹೊಸ ಬೆಳಕು ತೋರಬೇಕಾದರೆ ಈ ರೀತಿಯ ಕಲಿವು (ಸಂವೇದನೆ ಗಳ ಸಂಸ್ಕರಣ) ಅಗತ್ಯ. ಕೇವಲ ಪದಗಳ ಸಹಾಯದಿಂದ ನೂತನ ಜ್ಞಾನ ವನ್ನೂ, ಭಾವವನ್ನೂ ಪಡೆಯುವುದು ಸಾರಸ್ವತ ರೂಪದ ಕಲಿವು. ಅಲ್ಲಿ ಪದಗಳ ಅರ್ಥ ನಮಗೆ ಪರಿಚಯವಿರುವುದರಿಂದ ಆ ಪದಗಳು ನಮಗೆ ಹೊಸ ಜ್ಞಾನವನ್ನು ನೀಡಬಲ್ಲವು. ನಮ್ಮ ಇಂದಿನ ಶಾಲೆಯಲ್ಲಿ ನಡೆಯು ತ್ತಿರುವ ಬಹು ಭಾಗದ ಕಲಿವು ಈ ರೀತಿಯದೇ. ಈ ಮೂರು ರೀತಿಯ ಕಲಿವನ್ನೂ ಭಿನ್ನವಾಗಿ ಪರಿಗಣಿಸಿದ್ದರೂ ಅವು ಸಾಧನೆಯಾಗುವಾಗ, ಉಪ ಯೋಗವಾಗುವಾಗ, ಒಂದಕ್ಕೊಂದಕ್ಕೆ ಸಂಬಂಧವೇ ಇರುವುದಿಲ್ಲವೆಂದು ಭಾವಿಸಬಾರದು: ಜೊತೆಯಾಗಿಯೇ ಪ್ರಯೋಗವಾಗುತ್ತವೆ.

ಕಲಿಯುವ ಕ್ರಮವನ್ನನುಸರಿಸಿ ಕಲಿವನ್ನು ನಾಲ್ಕು ವಿಧಗಳಾಗಿ ವಿಂಗಡಿಸಬಹುದು. ಇದು ಮೇಲಿನ ವರ್ಗೀಕರಣಕ್ಕಿಂತ ಮುಖ್ಯವಾದುದು. ಜೊತೆಗೆ ಅದರ ಪರಿಚಯ ಶಿಕ್ಷಕರ ಕಾರ್ಯಕ್ಕೂ ತುಂಬ ಸಹಾಯವಾಗುವುದು

೧. **ಪರಿವರ್ತನಾ ರೀತಿಯ ಕಲಿವು:** ಮಕ್ಕಳ ಮೂಲ ಸ್ವಭಾವ ಗಳನ್ನು ಹಲವು ಸನ್ನಿವೇಶಗಳ ರಚನೆಯಿಂದ ಮಾರ್ಪಡಿಸುವ ರೀತಿಯನ್ನು ಗ್ರಂಥದ ಬೇರೊಂದೆಡೆ, ವಾಟ್ಸನ್ನರ ಪ್ರಯೋಗವನ್ನು ವಿವರಿಸುವಾಗ ತಿಳಿಸ ಲಾಗಿದೆ. ಆ ರೀತಿಯಲ್ಲಿ ಮಕ್ಕಳ ಸ್ವಾಭಾವಿಕ ವರ್ತನೆಗಳನ್ನು ಉಚಿತ ಸನ್ನಿವೇಶ ರಚನೆಯಿಂದ ಮಾರ್ಪಡಿಸಿಕೊಳ್ಳಬಹುದು. ಆ ಮೂಲಕ ಸಾಧನೆ ಯಾಗುವ ಕಲಿವನ್ನು ಪರಿವರ್ತನಾ ರೀತಿಯ ಕಲಿವೆನ್ನುತ್ತೇವೆ.

೨. **ಅನುಕರಣ ರೀತಿಯ ಕಲಿವು:** ಮಕ್ಕಳು ಚಿಕ್ಕವರಾಗಿರುವಾಗ ದೊಡ್ಡವರು ಆಡುವ ಮಾತನ್ನೂ ಮಾಡುವ ಕೆಲಸವನ್ನೂ ನೋಡಿ ತಾವೂ ಅದರಂತೆ ಮಾಡಲು ಪ್ರೇರಿತರಾಗಿ ಆಚರಿಸಿ ಕಲಿಯುತ್ತಾರೆ. ಇದು ಅನು ಕರಣರೀತಿಯ ಕಲಿವು. ಆದಿಮಾನವನಲ್ಲಿ ವಾಕ್ಶಕ್ತಿ ಸಿದ್ಧಿಸದಿದ್ದಾಗ ಈ ರೀತಿಯಲ್ಲೇ ಅವನು ತನ್ನ ಎಲ್ಲ ತಿಳಿವಳಿಕೆಯನ್ನೂ ಸಾಧಿಸಬೇಕಾಗಿತ್ತು. ಇದು ದೈವದತ್ತವಾಗಿ ಬರುವ ಒಂದು ಹುಟ್ಟುಗುಣ. ಮಕ್ಕಳಲ್ಲಿ ಇದೇ ಪ್ರಧಾನರೀತಿಯ ಕಲಿವು. ದೊಡ್ಡವರಲ್ಲೂ ಇದು ಹಲವು ರೀತಿಯ ಶಿಕ್ಷಣ ಪಡೆಯಲು ನೆರವಾಗುತ್ತದೆ. ಸಮಾಜದ ಆಚಾರವ್ಯವಹಾರಗಳನ್ನೂ, ಸಂಪ್ರ

ಛಾಯೆಗಳನ್ನೂ ಆದರ್ಶ ಪುರುಷರ ದೃಷ್ಟಿಧ್ಯೇಯಗಳನ್ನೂ ಕಲಿಯಲು ಅನುಕರಣದಿಂದ ಸಹಾಯವಾಗುತ್ತದೆ. ಒಟ್ಟಿನಲ್ಲಿ ಅನುಕರಣ ಮತ್ತು ರಚನೆ—ಈ ಎರಡು ಹುಟ್ಟುಗುಣಗಳೂ ಮಾನವನ ನಾಗರಿಕತೆಯ ಮುನ್ನಡೆಗೆ ಎರಡು ಕಾಲುಗಳಂತೆ ಸಹಾಯಮಾಡುತ್ತಿವೆಯೆಂದು ಹೇಳುವುದುಂಟು.

ಅನುಕರಣ ಎರಡು ರೀತಿಯಾಗಿದೆ: ಪ್ರಾಸಂಗಿಕ ಅನುಕರಣ ಮತ್ತು ಉದ್ದೇಶಪೂರ್ವಕವಾದ ಅನುಕರಣ; ಪ್ರಾಸಂಗಿಕ ಅಥವಾ ಉದ್ದೇಶ ವಿರಹಿತ ಅನುಕರಣ ಮಕ್ಕಳಲ್ಲೂ ಪ್ರಾಣಿಗಳಲ್ಲೂ ಪ್ರಧಾನವಾದ ಕಲಿವಿನ ಮಾರ್ಗ. ಇತರರ ನಡೆನುಡಿಗಳನ್ನು ಕಂಡು ತಾವೂ ಹಾಗೆ ಮಾಡಬೇಕೆಂಬ ಸ್ವಾಭಾವಿಕ ಕ್ರಿಯೆ ಆಗ ನಡೆಯುತ್ತದೆ. ಇದಕ್ಕೆ ಪ್ರಚೋದಕ ಶಕ್ತಿ ಆ ಹುಟ್ಟುಗುಣದಲ್ಲೇ ಇದೆ. ಹಿಂದೆ ಕೇಳದಿದ್ದ, ಕಾಣದಿದ್ದ, ಮಾಡದಿದ್ದ ಅಂಶಗಳನ್ನಾದರೂ ಆಚರಿಸುವ ಯತ್ನ ನಡೆಯುತ್ತದೆ. ಮಕ್ಕಳು ಬಹು ವಿಷಯಗಳನ್ನು ಈ ರೀತಿಯಲ್ಲಿ ಕಲಿಯುವರು. ಪ್ರಾಣಿಗಳೂ ಕೂಡ. ಒಮ್ಮೆ ಒಬ್ಬ ಟೋಪಿ ಮಾರುವವನು ಮರವೊಂದರ ಕೆಳಗೆ ಟೋಪಿಗಳನ್ನಿಟ್ಟು ಬೇರೆ ಕಡೆ ಹೋದಾಗ ಮೇಲಿದ್ದ ಕಪಿಗಳೆಲ್ಲ ಒಂದೊಂದು ಟೋಪಿಯನ್ನು ತೆಗೆದುಕೊಂಡು ತಲೆಗೆ ಇಟ್ಟುಕೊಂಡುವಂತೆ. ಅವು ಟೋಪಿಯನ್ನು ತಲೆಗೆ ಧರಿಸಿರುವುದನ್ನು ಅನುಕರಿಸಿದುವು; ಬಂದು ನೋಡುವಾಗ ಅಲ್ಲಿ ಟೋಪಿಗಳಿರಲಿಲ್ಲ. ಅವನಿಗೆ ಗಾಭರಿ. ಅವೆಲ್ಲ ಕಪಿಗಳ ತಲೆಯನ್ನಲಂಕರಿಸಿದ್ದುವು! ಕೂಡಲೇ ಅವನು ಸ್ವಲ್ಪ ಆಲೋಚಿಸಿ, ಅವುಗಳಿಗೆದುರಾಗಿ ನಿಂತು, ತನ್ನ ತಲೆಯ ಮೇಲಣ ಟೋಪಿಯನ್ನು ಕಿತ್ತೆಸೆದನು. ಎಲ್ಲ ಕಪಿಗಳೂ ಅದನ್ನೇ ಅನುಕರಿಸಿದುವು! ಮತ್ತೆ ಟೋಪಿಗಳೆಲ್ಲ ಅವನ ಕೈಸೇರಿದುವು. ಈ ರೀತಿಯ ಅನುಕರಣದಲ್ಲಿ ಉದ್ದೇಶವಾಗಲಿ ಸಂಕಲ್ಪವಾಗಲಿ ಕಂಡುಬರುವುದಿಲ್ಲ: ಸ್ವಾಭಾವಿಕವಾಗಿ ನಡೆಯುವ ಅನುಕರಣ ಮಾತ್ರ. ಇದು ದೊಡ್ಡವರಲ್ಲೂ ಕಂಡುಬರುತ್ತದೆ. ಅನೇಕವೇಳೆ ನಾವು ಇತರರ ನಡೆನುಡಿಗಳ ರೀತಿಯನ್ನೂ ದೃಷ್ಟಿಧ್ಯೇಯಗಳನ್ನೂ ಉದ್ದೇಶಿಸದಿದ್ದರೂ ಅನುಕರಿಸಿಬಿಡುತ್ತೇವೆ. ಈ ಅಂಶವನ್ನು ದೃಢಪಡಿಸಲು ಅನೇಕ ಪ್ರಯೋಗಗಳೂ ನಡೆದಿವೆ: ಒಮ್ಮೆ ಹಲವರಿಗೆ ಒಂದು ಕೈಬರಹದ ಪ್ರತಿಯನ್ನು ಕೊಟ್ಟು ಪ್ರತಿ ಮಾಡುವಂತೆ ತಿಳಿಸಲಾಯಿತು. ಅದನ್ನು ಅವರು ಮಾಡಿ ಮುಗಿಸಿದಮೇಲೆ 'ಅದರಲ್ಲಿ ನೀವು

ಏನನ್ನು ಪ್ರತಿ ಮಾಡಿದಿರಿ?' ಎಂದು ಪ್ರಶ್ನಿಸಿದಾಗ 'ಅದರಲ್ಲಿದ್ದ ಪದಗಳನ್ನು ಮಾತ್ರ' ಎಂದರು. ಆದರೆ ಅವರಲ್ಲನೇಕರು ಮೂಲದ ಬರವಣಿಗೆಯನ್ನೂ ಅನುಕರಿಸಿದ್ದರು! ಎಂದರೆ ಅವರಿಗೆ ಅರಿಯದಂತೆಯೇ ಆ ಅನುಕರಣ ನಡೆದುಹೋಗುತ್ತದೆ. ದೊಡ್ಡವರು ಸಮಾಜದ ಸಂಪ್ರದಾಯಗಳನ್ನೂ ಆಚಾರ ವ್ಯವಹಾರಗಳನ್ನೂ ಮಕ್ಕಳೂ ಅನುಕರಿಸಲು ಈ ಹುಟ್ಟುಗುಣ ನೆರವಾಗುತ್ತದೆ. ತನ್ನ ವರ್ತನೆಯೂ ಇತರರನ್ನು ಅನುಕರಿಸಿ ರೂಪುಗೊಳ್ಳುತ್ತದೆ. ಮಾಡುವ ಕೆಲಸ ಹೆಚ್ಚು ಶ್ರಮವಿಲ್ಲದೆ ಸ್ವಾಭಾವಿಕವಾಗಿ ಸಾಗುವಂತಾಗುವುದಕ್ಕೂ ಈ ಗುಣ ನೆರವಾಗುತ್ತದೆ.

**ಉದ್ದೇಶಪೂರ್ವಕ ಅನುಕರಣ:** ಇದನ್ನು ಸಂಕಲ್ಪನಾ ರೀತಿಯ ಅನುಕರಣವೆಂದೂ ಕರೆಯಬಹುದು. ಇದು ಉದ್ದೇಶಪೂರ್ವಕವಾಗಿ ಇತರರ ನಡೆನುಡಿಗಳನ್ನೂ ದೃಷ್ಟಿಧ್ಯೇಯಗಳನ್ನೂ ಕಲಿಯಬೇಕೆಂದು ಯತ್ನಿಸುವ ಕಾರ್ಯ. ಪ್ರಾಣಿಗಳಾವುವೂ ಈ ರೀತಿಯಲ್ಲಿ ಕಲಿಯಲು ಯತ್ನಿಸುವುದಿಲ್ಲ. ಅದಕ್ಕೆ ಕಾರಣ, ಕಲಿಯಬೇಕೆಂದಿರುವುದನ್ನು ನೋಡಿ ಪರಿಶೀಲಿಸಿ ಅದನ್ನು ಅರಿತುಕೊಳ್ಳುವ ಶಕ್ತಿ ಅವಕ್ಕಿಲ್ಲ. ಅವುಗಳದು ಸ್ವಾಭಾವಿಕ ಅನುಕರಣ ಮಾತ್ರ. ಮಾನವನಲ್ಲಾದರೆ ಇತರರ ಉದ್ದೇಶಿಸಿದ ಕೆಲಸಕಾರ್ಯಗಳನ್ನು ಮೊದಲು ಪರಿಶೀಲಿಸಿ, ಅದರ ವಿವರಗಳನ್ನು ಅರಿತು, ಅನಂತರ ಅನುಕರಿಸುವ ಯತ್ನ ನಡೆಯುತ್ತದೆ. ಅವರು ಮಾಡುವಂತೆ ಕಲಿಯಬೇಕೆಂಬ ಸಂಕಲ್ಪವೂ ಇರುತ್ತದೆ. ಹಾಗೆ ಅವರ ಕಾರ್ಯದ ವಿವರವನ್ನು ತಿಳಿದುಕೊಂಡ ಮೇಲೆ ಅದರಂತೆ ಆಚರಿಸಲೆಳಸಿ ಆಚರಿಸುವರು. ಮೊದಮೊದಲು ಅದನ್ನು ತೃಪ್ತಿಕರವಾಗಿ ಅನುಕರಿಸದಿರಬಹುದು; ಅದರಂತೆ ಆಚರಿಸಬೇಕೆಂಬ ಸಂಕಲ್ಪದಿಂದ ಅಭ್ಯಾಸ ನಡಸಿ, ಕೊನೆಗೆ ಪಕ್ವವಾಗಿ ಕಲಿಯಬಹುದು. ಆದರೆ ಬರೀ ಪರಿಶೀಲನೆಯೊಂದರಿಂದಲೇ ಕಲಿಯುವಂತಿಲ್ಲ, ಆಚರಿಸಿಯೇ ಕಲಿಯಬೇಕು. ಈ ಉದ್ದೇಶಪೂರ್ವಕವಾದ ಅನುಕರಣ ಕ್ರಿಯಾರೂಪದ್ದಾದರೂ ಆಗಿರಬಹುದು; ಸಂವೇದನಾ ಮತ್ತು ಸಾರಸ್ವತ ರೂಪದ್ದಾದರೂ ಆಗಿರಬಹುದು: ಒಬ್ಬರು ಕೆಲಸವನ್ನು ಅನುಕರಿಸಿ ಕಲಿಯುವುದು ಮೊದಲನೆಯ ರೀತಿಯದು; ಇತರರ ರಸಭಾವಗಳನ್ನು ಅನುಕರಿಸಿ ಅವರಂತೆ ವರ್ತಿಸುವುದು ಎರಡನೆಯ ರೀತಿಯದು. ಆದರ್ಶ ಪುರು

ಪರ ದೃಷ್ಟಿಧ್ಯೇಯಗಳನ್ನೂ ಉಚ್ಚಭಾವನೆಗಳನ್ನೂ ಓದಿ, ಕೇಳಿ, ಅನುಕರಿಸಿ ಅದರಂತೆ ಜೀವಿಸುವುದು ಮೂರನೆಯ ರೀತಿಯದು; ನಮ್ಮ ಉದಾತ್ತ ಗುಣಗಳೂ, ಭಾವನೆಗಳೂ ಈ ರೀತಿಯಲ್ಲಿ ಕಲಿತವು; ಇಂಥ ಅನುಕರಣ ಉತ್ತಮ ಮಟ್ಟದ್ದು; ಅನುಕರಿಸಬೇಕಾದ ವಸ್ತು ಆಗ ನಮ್ಮ ಮುಂದಿಲ್ಲದಿದ್ದರೂ ಪದಗಳ ಮೂಲಕ ಅವರ ಭಾವನೆಗಳನ್ನು ನಾವು ಅನುಕರಿಸುವಂತಾಗುತ್ತದೆ; ಅದೇ ನಮ್ಮ ಮನಸ್ಸಿನ ಮುಂದೆ ಅನುಕರಣಕ್ಕಿರುವ ಆದರ್ಶ.

**೩. ತಿದ್ದಿಕೊಂಡು ಕಲಿಯುವಿಕೆ:** ಹೊಸದೊಂದು ಕೆಲಸ ಮಾಡಬೇಕಾಗಿ ಬಂದಾಗ ಆಚರಿಸಲು ಯತ್ನಿಸಿ, ಸರಿಯಾಗದಿದ್ದರೆ ತಿದ್ದಿಕೊಂಡು ಪುನಃ ಆಚರಿಸಿ, ಅಕಸ್ಮಿಕವಾಗಿ ಸರಿಯಾದ ರೀತಿಯಲ್ಲಿ ಒಮ್ಮೆ ಮಾಡಿಬಿಟ್ಟರೆ, ಅದನ್ನು ಅನಂತರ ಅನುಕರಿಸಿ ದೃಢಪಡಿಸಿಕೊಳ್ಳುತ್ತೇವೆ. ಈ ರೀತಿಯ ಕಲಿವಿಗೆ ತಿದ್ದಿಕೊಂಡು ಕಲಿಯುವಿಕೆಯೆನ್ನುತ್ತೇವೆ. ಹಾಗೆ ಕಲಿಯುವಾಗ ನಮ್ಮ ಮುಂದಿರುವ ಸಮಸ್ಯೆಯನ್ನು ಪರೀಕ್ಷಿಸಿ ಅದನ್ನು ಬಿಡಿಸಬೇಕಾದ ಕ್ರಮವನ್ನು ವಿವೇಚಿಸಿಕೊಂಡು ಕಾರ್ಯಮುಖವಾಗುವುದು ಇರುವುದಿಲ್ಲ. ಯಾವ ಪ್ರಾಣಿಗಳಲ್ಲೂ ವಿವೇಚನೆಯಿಂದ ಕಲಿಯುವುದು ಕಂಡು ಬರುವುದಿಲ್ಲವೆಂದು ಥಾರ್ನ್‌ಡೈಕರು ವಾದಿಸಿರುವರು. ಆದರೆ ಮೆಕ್ಡೂಗಲ್, ಕಾಯ್ಲರ್, ಮುಂತಾದವರು ಅವುಗಳಲ್ಲೂ ವಿವೇಚನೆಯುಂಟೆಂದು ಹೇಳುವರು. ಇದನ್ನು ಸಮರ್ಥಿಸಲು ಕಾಯ್ಲರ್‌ರವರು ಅನೇಕ ಪ್ರಯೋಗಗಳನ್ನು ನಡಸಿರುವರು. ಅವುಗಳಲ್ಲಿ ಒಂದನ್ನು ಇಲ್ಲಿ ಉಲ್ಲೇಖಿಸಬಹುದು:

ಒಂದು ಚಿಂಪಾಂಜಿ ಜಾತಿಯ ಕಪಿಯ ಮುಂದೆ ಬಾಳೆಹಣ್ಣಿನ ಗೊನೆಯನ್ನು ಮನೆಯ ಸೂರಿಗೆ ತಗುಲಿ ಹಾಕಿದರು. ಆದರೆ ಅದು ಎಟಕುವಂತಿರಲಿಲ್ಲ. ಅಲ್ಲಿ ಕಟ್ಟಿಗೆ, ಬೊಂಬು, ಪೆಟ್ಟಿಗೆಗಳು ಎರಚಿದ್ದುವು. ಕಪಿ ಬಾಳೆಹಣ್ಣನ್ನು ತಿನ್ನಲು ಯತ್ನಿಸಿ ವಿಫಲವಾಗಿ ಪೆಟ್ಟಿಗೆಗಳನ್ನು ಒಂದರಮೇಲೊಂದಿಡಲು ಯತ್ನಿಸಿತು; ಆದರೆ ಅದು ಸಾಧ್ಯವಾಗಲಿಲ್ಲ. ಹಾಗೆ ಯತ್ನಿಸಿದ್ದು ಅದರ ವಿವೇಚನೆಯಿಂದಲೇ. ಅನಂತರ ಸ್ವಲ್ಪ ಹೊತ್ತು ಕಪಿ ಮೌನವಾಗಿ ಏನೋ ಯೋಚಿಸುತ್ತಿದ್ದಂತೆ ಕುಳಿತುಕೊಂಡಿತು. ಮತ್ತೆ ಕಾರ್ಯಮುಖವಾಗಿ ಅಲ್ಲಿ ಬಿದ್ದಿದ್ದ ಗಳುಗಳನ್ನು ಹಿಡಿದು ಆಡಿಸಲಾರಂಭಿಸಿತು. ಬಾಳೆಹಣ್ಣನ್ನು ಅದರಿಂದ ಉದುರಿಸಲು ಯತ್ನಿಸಿತು; ಅದು ಸಿಕ್ಕದು. ಅವುಗಳೊಡನೆ ಪುನಃ ಆಡುವಾಗ ಆಕಸ್ಮಿಕವಾಗಿ ಒಂದು ಗಳುವಿನ ಕೊನೆ ಇನ್ನೊಂದರ ತುದಿಗೆ ಸಿಕ್ಕಿಕೊಂಡಿತು. ಆಗ ಕಪಿ ಅದರಂತೆ ಮತ್ತೊಂದೆರಡನ್ನು ಸೇರಿಸಿ ಉದ್ದವಾದ್ದನ್ನು ತಯಾರಿಸಿತು.

ಹೀಗೆ ಕೇವಲ ಆಕಸ್ಮಿಕವಾಗಿ ಗಳುವಿಗೆ ಗಳುವನ್ನು ಸೇರಿಸಿದರೆ ಉದ್ದ ವಾಗುವುದನ್ನು ಅದು ಕಲಿತರೂ, ಆ ಗಳು ಬಾಳೆಹಣ್ಣನ್ನು ಪಡೆಯಲು ಆವಶ್ಯಕವೆಂಬುದನ್ನು ಅರಿತುಕೊಂಡದ್ದು ವಿವೇಚನೆಯಿಂದ ಎಂದು ಕಾಯ್ಲರ್‌ರವರು ವಾದಿಸಿರುವರು. ಥಾರ್ನ್‌ಡೈಕರು ನಡಸಿದ ಇನ್ನೊಂದು ಪ್ರಯೋಗದಲ್ಲಿ,

ಒಂದು ಬೆಕ್ಕನ್ನು ಪಂಜರದೊಳಗಿಟ್ಟರು. ಅದಕ್ಕೆ ಹಸಿವಾಯಿತು. ಆದರೆ ಪಂಜರದ ಅಗುಳಿ ಹಾಕಿತ್ತು. ಹೊರಗಡೆ ಮಾಂಸವನ್ನು ತೋರಿಸಿದರು. ಬರಬೇಕಾ ದರೆ ಅಗುಳಿ ತೆಗೆಯಬೇಕಾಗಿತ್ತು. ಆ ಬೆಕ್ಕು ಬಹು ಹೊತ್ತು ಕಿರುಚಿ, ಒರಟೊರಟಾಗಿ ಸುತ್ತಾಡಿ, ಪರಚಿ, ಆಕಸ್ಮಿಕವಾಗಿ ಅಗುಳಿ ತೆಗೆದುಕೊಂಡಿತು. ತಕ್ಷಣ ಹೊರಗೆ ಬಂದಿತು. ಮರಳಿ ಇದೇ ಪ್ರಯೋಗವನ್ನು ನಡಸಿದಾಗ ಬಹು ಜಾಗ್ರತೆ ಅಗುಳಿ ಯನ್ನು ತೆಗೆದುಬಿಟ್ಟಿತು.

ಅಗುಳಿ ತೆಗೆಯುವುದನ್ನು ಮೊದಲನೆಯ ಸಲ ಅದು ಕಲಿತದ್ದು ವಿವೇ ಚನೆಯಿಂದಲ್ಲ–ಆಕಸ್ಮಿಕವಾಗಿ. ಥಾರ್ನ್‌ಡೈಕರು ಈ ಪ್ರಯೋಗದ ಆಧಾರದ ಮೇಲೆ ಪ್ರಾಣಿಗಳಲ್ಲಿ ತಿದ್ದಿಕೊಂಡು ಕಲಿಯುವುದು ಮಾತ್ರ ಸಾಧ್ಯವೆಂದು ವಾದಿಸಿದರು. ಕೆಲವರು ಆ ಬೆಕ್ಕಿನಲ್ಲೂ ವಿವೇಚನೆಯಿತ್ತೆಂದು ವಾದಿಸಿರು ವರು. ಏಕೆಂದರೆ ಒಮ್ಮೆ ಆಕಸ್ಮಿಕವಾಗಿ ಅದನ್ನು ಕಲಿತರೂ ಮುಂದೆ ಅದನ್ನು ದೃಢಪಡಿಸಿಕೊಳ್ಳುವಾಗ ಅದೇ ಸರಿಯಾದ ರೀತಿಯೆಂದು ಅದಕ್ಕೆ ತೋರಿರಬೇಕು; ಅದರಿಂದ ಅದರಲ್ಲೂ ವಿವೇಚನೆಯಿದೆಯೆಂದು ಸ್ಪಷ್ಟಪಡು ತ್ತದೆಯೆಂದು ವಾದಿಸಲು ಕೆಲವರು ಯತ್ನಿಸಿರುವರು.

**೪. ವಿವೇಚನಾ ರೀತಿಯ ಕಲಿವು:** ನಮ್ಮ ಮುಂದಿರುವ ಕೆಲಸ ವನ್ನು ಆರಂಭಿಸುವುದಕ್ಕೆ ಮುನ್ನ ಅದನ್ನು ಹೇಗೆ ಮಾಡಬೇಕೆಂದು ಆಲೋ ಚಿಸಿ, ಕ್ರಮವನ್ನು ಗ್ರಹಿಸಿಕೊಂಡು ಅನಂತರ ಅದನ್ನು ಆರಂಭಿಸಿದರೆ ಕಾರ್ಯ ಬೇಗ ಯಶಸ್ವಿಯಾಗಬಲ್ಲದು. ಅಂಥ ಕಲಿವನ್ನು ವಿವೇಚನಾ ರೀತಿಯ ಕಲಿವೆನ್ನುತ್ತೇವೆ. ನಮ್ಮ ಮುಂದಿರುವ ಸಮಸ್ಯೆಯನ್ನು ವಿಭಜಿಸಿ ಪರಿ ಶೀಲಿಸಿ ಅದನ್ನು ಬಿಡಿಸಲು ಯಾವ ಮಾರ್ಗದಿಂದ ಹೊರಟು ಹೇಗೆ ಸಾಧಿಸ ಬೇಕೆಂದು ಅರಿಯುವುದೇ ವಿವೇಚನೆ. ತಿದ್ದಿಕೊಂಡು ಆಕಸ್ಮಿಕವಾ ಕಲಿ ಯುವಾಗ ಅಂಥ ವಿವೇಚನೆಯಿಲ್ಲದೆಯೇ ಕಲಿಯಲು ಯತ್ನಿಸುತ್ತೇವೆ.

ಕಾಯ್ಲರ್‌ರವರು ಪ್ರಾಣಿಗಳಲ್ಲಿ ಅಂಥ ವಿವೇಚನೆಯಿದೆಯೆಂದೂ, ಥಾರ್ನ್‌ಡೈಕರು ಇಲ್ಲವೆಂದೂ ಹೇಳುವರು. ಆದರೆ ನಿಜಾಂಶ ಇವರಿಬ್ಬರ

ಅಭಿಪ್ರಾಯಕ್ಕೂ ಮಧ್ಯಸ್ಥವಾಗಿದೆ: ಥಾರ್ನ್‌ಡೈಕರ ಬೆಕ್ಕು ಆಕಸ್ಮಿಕವಾಗಿ ಅಗುಳಿ ತೆಗೆಯುವುದನ್ನು ಕಲಿತರೂ ಅನಂತರ ಅದೇ ಸರಿಯಾದ ಮಾರ್ಗವೆಂದು ಅರಿಯುವಾಗ ಅದರ ವಿವೇಚನೆ ಕಂಡುಬರುತ್ತದೆ: ಕಾಯ್ಲರ್‌ರವರ ಕಪಿ ಗಳುವಿಗೆ ಗಳು ಸಿಕ್ಕಿಸುವ ಕ್ರಮವನ್ನು ಕಲಿತಿದ್ದು ಆಕಸ್ಮಿಕವಾಗಿಯಾದರೂ ಅಂಥ ಉದ್ದವಾದ ಗಳುವಿನ ಆವಶ್ಯಕತೆಯನ್ನು ಅರಿತದ್ದು ವಿವೇಚನೆಯಿಂದಲೇ. ಬೆಕ್ಕು ಕಪಿಗಳಿಗಿಂತ ಕೆಳವರ್ಗದ ಪ್ರಾಣಿ. ಅದರಿಂದ ಬೆಕ್ಕಿನಲ್ಲಿ ಕಾಣುವುದಕ್ಕಿಂತ ವಿವೇಚನೆ ಕಪಿಯಲ್ಲಿ ಹೆಚ್ಚು ಸ್ಪಷ್ಟವಾಗಿ ಗೋಚರಿಸುತ್ತದೆ. ಅವೆರಡರಲ್ಲೂ ತಿದ್ದಿಕೊಂಡು ಕಲಿಯುವ ಕ್ರಮವೇ ಪ್ರಧಾನವಾಗಿ ಕಂಡುಬಂದರೂ ವಿವೇಚನೆಯೂ ಇದೆ. ಆದರೆ ಕೆಳವರ್ಗದ ಪ್ರಾಣಿಗಳಿಗಿಂತ ಮೇಲ್ವರ್ಗದ ಪ್ರಾಣಿಗಳಲ್ಲಿ ಕಲಿಯುವಾಗ ತಿದ್ದಿಕೊಳ್ಳುವ ರೀತಿಗಿಂತ ವಿವೇಚನೆ ಹೆಚ್ಚು ಹೆಚ್ಚಾಗಿ ಪಾತ್ರವಹಿಸುವುದು. ಆದುದರಿಂದ ಯಾವುದು ತಿದ್ದಿಕೊಂಡು ಕಲಿಯುವ ರೀತಿಯೆಂದು ಒಬ್ಬರು ಭಾವಿಸುವರೋ ಅದರಲ್ಲೂ ವಿವೇಚನೆ ಇದ್ದೇ ಇದೆ. ಆದರೆ ಆ ಅಂಶ ಮೇಲ್ಮಟ್ಟದ ಪ್ರಾಣಿಗಳಲ್ಲಿ ಹೆಚ್ಚು ಹೆಚ್ಚಾಗಿ ಕಂಡುಬರುತ್ತದೆ.

ಮಾನವನ ಕಲಿವಿನ ಕ್ರಮದಲ್ಲಿ ವಿವೇಚನೆ ಪ್ರಧಾನ ಪಾತ್ರ ವಹಿಸುವುದಾದರೂ, ತಿದ್ದಿಕೊಂಡು ಕಲಿಯುವ ರೀತಿಯೂ ಇದೆ. ಮಗುವೊಂದಕ್ಕೆ ಭಿನ್ನಆಕಾರದ ಬಿಲ್ಲೆಗಳನ್ನು ಕೊಟ್ಟು ಗುಳಿಯೊಂದಕ್ಕೆ ಸರಿಯಾಗಿ ಜೋಡಿಸೆಂದು ಹೇಳಿದಾಗ ಅದು ಒಂದೊಂದನ್ನಾಗಿ ತೆಗೆದು ಗುಳಿಗಿಟ್ಟು, ನೋಡಿ, ಸರಿಯಾಗದಿದ್ದರೆ, ತಿದ್ದಿಕೊಂಡು ಕೊನೆಗೆ ಸರಿಯಾದ್ದನ್ನು ಗುಳಿಗೆ ಸೇರಿಸುತ್ತದೆ. ಗುಳಿಗೂ ಬಿಲ್ಲೆಗೂ ಸಂಬಂಧ ಕಲ್ಪನೆ ಕೇವಲ ಕಾರ್ಯದಲ್ಲಿ; ಅದನ್ನೇ ದೊಡ್ಡವರಿಗೆ ಮಾಡೆಂದು ಹೇಳಿದಾಗ ಭಾವನೆಯಲ್ಲೇ ಗುಳಿಗೂ ಅದಕ್ಕೊಪ್ಪುವ ಬಿಲ್ಲೆಗೂ ಸಂಬಂಧ ಕಲ್ಪಿಸಿಕೊಂಡು, ಅನಂತರ ಆ ಬಿಲ್ಲೆಯನ್ನೇ ಜೋಡಿಸಲು ಯತ್ನಿಸುತ್ತಾರೆ. ಆಗ ಜಾಗ್ರತೆ ಕೆಲಸ ಆಗಬಹುದು. ತಿದ್ದಿಕೊಂಡು ಕಲಿಯುವುದು ವಯಸ್ಸಾದಂತೆ ಕ್ರಮ ಕ್ರಮವಾಗಿ ವಿವೇಚನಾ ರೀತಿಯ ಕಲಿವಾಗಿ ಪರಿಣಮಿಸುತ್ತದೆ. ಆದುದರಿಂದ ನಿಜವಾಗಿ ಹೇಳುವುದಾದರೆ ಇವೆರಡೂ ಭಿನ್ನ ರೀತಿಯ ಕಲಿವಲ್ಲ: ಒಂದೇ ರೀತಿಯ ಕಲಿವಿನ ಎರಡು ಧ್ರುವಗಳು ಮಾತ್ರ.

ದೊಡ್ಡವರಲ್ಲೂ ತಿದ್ದಿಕೊಂಡು ಕಲಿಯುವ ರೀತಿ ಇಲ್ಲವೆನ್ನುವಂತಿಲ್ಲ; ಆದರೆ ಅದು ಭಾವನಾಮಟ್ಟದಲ್ಲಿ ನಡೆಯಬಹುದು. ಒಂದು ಲೆಕ್ಕವನ್ನು ಕೊಟ್ಟು ಮಾಡೆಂದು ಹೇಳಿದಾಗ, ಮೊದಲು ಕ್ರಮವೊಂದನ್ನು ಆಲೋಚಿಸ ಬಹುದು; ಅದು ಸರಿಯಾಗಿರದಿದ್ದರೆ ತಿದ್ದಿಕೊಂಡು ಮತ್ತೊಂದು ಕ್ರಮವನ್ನು ಅನುಸರಿಸಬಹುದು. ಎಂದರೆ ಭಾವನಾ ರೀತಿಯ ಕಲಿವಿನಲ್ಲೂ ತಿದ್ದಿಕೊಂಡು ಕಲಿಯುವ ಕ್ರಮ ಇದ್ದೇ ಇದೆ.

ಆದ್ದರಿಂದ ಕೆಳವರ್ಗದಿಂದ ಮೇಲ್ವರ್ಗಕ್ಕೆ ಬಂದಂತೆ, ಕಲಿವಿನ ರೀತಿ ಯಲ್ಲಿ ತಿದ್ದಿಕೊಳ್ಳುವುದಕ್ಕಿಂತ ವಿವೇಚನೆ ಹೆಚ್ಚಿನ ಪಾತ್ರ ವಹಿಸುತ್ತದೆ; ಮೊದಮೊದಲಿನ ಕಲಿವಿನಲ್ಲಿ ತಿದ್ದಿಕೊಳ್ಳುವಿಕೆ ಪ್ರಧಾನವಾಗಿದ್ದರೂ ಅದು ಪ್ರಬುದ್ಧವಾದಂತೆ ವಿವೇಚನೆಯೇ ಹೆಚ್ಚಾಗಿರುತ್ತದೆ. ವಿವೇಚನೆ ನಮ್ಮ ಕಲಿವಿನಲ್ಲಿ ಹೆಚ್ಚು ಪಾತ್ರ ವಹಿಸಿದರೆ ಜಾಗ್ರತೆ ಕಲಿಯುವುದು ಸಾಧ್ಯ. ಎಂದಮೇಲೆ ಇವೆರಡು ರೀತಿಗಳೂ ಕಲಿವಿನ ಎರಡು ಧ್ರುವಗಳಂತಿವೆ: ತಿದ್ದಿಕೊಂಡು ಕಲಿಯುವ ಕಾರ್ಯದ ಪ್ರಬುದ್ಧಾವಸ್ಥೆಯೇ ವಿವೇಚನಾ ರೀತಿಯ ಕಲಿವು.

**ಅಭ್ಯಾಸದಿಂದ ಕಲಿವಿನ ಮೇಲಾಗುವ ಪರಿಣಾಮ :** ಹೊಸದಾಗಿ ವಿಷಯ ಜ್ಞಾನವನ್ನೋ ಕಾರ್ಯ ಕೌಶಲವನ್ನೋ ಕಲಿಯುವಾಗ ಹೆಚ್ಚು ಹೆಚ್ಚು ಅಭ್ಯಾಸಮಾಡಿದಂತೆ ಕಲಿವು ಉತ್ತಮಗೊಳ್ಳುತ್ತದೆಂದು ಹಿಂದೆ, ಅದರ ನಿಯಮಗಳನ್ನು ವಿವರಿಸುವಾಗ ಸೂಚಿಸಿದೆ. ನಮ್ಮ ವರ್ಣ ಮಾಲೆಯ ಅಕ್ಷರಗಳನ್ನು 'ಳ'ಕಾರದಿಂದ ಆರಂಭಿಸಿ 'ಅ'ಕಾರದವರೆಗೂ ಹೇಳೆಂದು ಕೇಳಿದಾಗ, ಮೊದಲು ನಿಧಾನವಾಗಿ ಅಪಕ್ವವಾಗಿ ಹೇಳುತ್ತಿದ್ದು ಅದನ್ನು ಪುನರಾವರ್ತಿಸಿ ಅಭ್ಯಾಸ ಮಾಡಿದಂತೆ ಬೇಗನೆ ಸರಾಗವಾಗಿ ಹೇಳು ವುದು ಸಾಧ್ಯವಾಗುತ್ತದೆ; ಟೈಪು ಮಾಡುವಾಗ ಮೊದಲು ನಿಮಿಷಕ್ಕೆ ಒಂದೆ ರಡು ಪದಗಳನ್ನು ಮಾತ್ರ ಮಾಡುವುದೂ, ಅಭ್ಯಾಸ ನಡೆದಂತೆ ವೇಗ ಹೆಚ್ಚು ವುದೂ ನಮಗೆ ಗೊತ್ತಿರುವ ವಿಷಯ. ಎಂದರೆ ಅಭ್ಯಾಸವಾದಂತೆ ಕಲಿವಿನ ಪ್ರಮಾಣವೂ ಹೆಚ್ಚುತ್ತದೆಂಬುದು ತಿಳಿದುಬರುತ್ತದೆ. ಹಾಗಾದರೆ ಅಭ್ಯಾಸ ನಡೆಯುತ್ತ ಹೋದಂತೆಲ್ಲ ಕಲಿವಿನ ಪ್ರಮಾಣ ಹೆಚ್ಚುತ್ತಲೇ ಹೋಗು ತ್ತದೆಯೆ? ಮೂರು ತಿಂಗಳ ಅಭ್ಯಾಸದಿಂದ ನಿಮಿಷಕ್ಕೆ ೩೦ ಪದ ಟೈಪು

ಮಾಡುವುದು ಸಿದ್ಧಿಸಿದರೆ, ೧೦ ವರ್ಷಗಳ ತನಕ ಅಭ್ಯಾಸಿಸಿದರೆ ಅದೇ ಪ್ರಮಾಣದಲ್ಲಿ ವೇಗ ಹೆಚ್ಚುತ್ತದೆಯೆ? ಹಾಗಿಲ್ಲದಿದ್ದರೆ ಏಕೆ ಹೆಚ್ಚುವುದಿಲ್ಲ?

ಮೇಲಿನ ಸಮಸ್ಯೆಗಳನ್ನು ಪರಿಶೀಲಿಸಲು ಅನೇಕ ಪ್ರಯೋಗಗಳು ನಡೆದಿವೆ. ಅವುಗಳಿಂದ ದೃಢಪಟ್ಟ ಅಂಶವನ್ನಿಲ್ಲಿ ಕ್ರೋಢೀಕರಿಸಿದೆ: ಕಲಿವಿನ ಆರಂಭದಲ್ಲಿ ಕಲಿವಿನ ವೇಗ ತೀವ್ರವಾಗಿರುತ್ತದೆ. ಆಗ ಹೊಸ ಶಿಕ್ಷಣವೆಂದು ಉತ್ಸಾಹದಿಂದ ಕಾರ್ಯಮುಖವಾಗುವುದರಿಂದಲೂ, ಮೊದಲ ಪಾಠಗಳು ಸುಲಭವಾಗಿರುವುದರಿಂದಲೂ ಅದು ಸಾಧ್ಯ. ಅನಂತರ ಕಲಿವಿನ ವೇಗ ಬಹು ನಿಧಾನವಾಗುತ್ತದೆ; ಏಕೆಂದರೆ, ಆಗ ಆರಂಭದಲ್ಲಿದ್ದಷ್ಟು ಉತ್ಸಾಹ ಇರುವುದಿಲ್ಲ; ಕಲಿಯುವ ಅಂಶವೂ ಹೆಚ್ಚು ಕಷ್ಟವಾಗುತ್ತದೆ. ಜೊತೆಗೆ ಹಿಂದೆ ಕಲಿತದ್ದೆಲ್ಲವನ್ನೂ ಚೆನ್ನಾಗಿ ರೂಢಿಸಿಕೊಳ್ಳಬೇಕು; ಹೊಸದನ್ನೂ ಅರಿತು ಕಲಿಯಬೇಕು. ಅದರಿಂದ ಆಗ ಕಲಿವು ಸಾಧಾರಣವಾಗಿ ನಡೆಯುತ್ತದೆ. ಅನಂತರ ಮತ್ತೆ ಕಲಿವಿನ ವೇಗ ಉತ್ತಮಗೊಳ್ಳುತ್ತದೆ. ಏಕೆಂದರೆ ಅಂದಿನವರೆಗೂ ಆ ವಿದ್ಯೆಯ ಮೂಲ ತತ್ವಗಳನ್ನು ಚೆನ್ನಾಗಿ ಅಭ್ಯಾಸ ಮಾಡಿಕೊಳ್ಳುವುದರ ಜೊತೆಗೆ ಹೊಸದನ್ನೂ ಕಲಿತುಕೊಂಡದ್ದು ಮುಗಿದಿರುತ್ತದೆ. ಅದರಿಂದ ಈಗ ಕಲಿವು ವೇಗವಾಗಿ ಸಾಗಲು ಅನುಕೂಲವಾಗುತ್ತದೆ. ಆದರೆ ಅದೇ ರೀತಿಯಲ್ಲಿ ಕಲಿವಿನ ವೇಗ ಹೆಚ್ಚುತ್ತ ಅನಿರ್ದಿಷ್ಟ ಕಾಲದವರೆಗೂ ಸಾಗುವಂತಿಲ್ಲ: ಸ್ವಲ್ಪ ಕಾಲದಲ್ಲೇ ಪರಮಾವಧಿಯನ್ನು ಮುಟ್ಟುತ್ತದೆ. ಅದಕ್ಕಿಂತಲೂ ಹೆಚ್ಚಿನ ವೇಗದಲ್ಲಿ ಕಲಿಯುವುದು ಅವನ ಬುದ್ಧಿ ಶಕ್ತಿಗೆ ನಿಲುಕದ ಕಾರ್ಯ. ಈ ಪರಮಾವಧಿಯ ಮಟ್ಟ ಒಬ್ಬೊಬ್ಬರಿಗೂ ಒಂದೊಂದು ಇರಬಹುದು.

## ೨. ಆಯಾಸ

ಒಮ್ಮೆ ಆರಂಭಿಸಿದ ಕೆಲಸವನ್ನು ಒಂದೇ ಸಮನೆ ಮಾಡುತ್ತ ಹೋದರೆ ಕಡೆ ಕಡೆಗೆ ನಮಗೆ ಬೇಸರವಾಗುತ್ತದೆ. ಕೆಲಸವನ್ನು ಮುಂದುವರಿಸಲು ಮನಸ್ಸಿಲ್ಲದೆ ದೇಹಾಲಸ್ಯವೂ, ದೀರ್ಘವಾಗಿ ಉಸಿರಾಡುವುದೂ, ಕೈಕಾಲುಗಳಲ್ಲಿ ನಿರ್ಬಲತೆಯೂ, ಮನಸ್ಸಿನಲ್ಲಿ ಮುಂದುವರಿಸುವುದು ಅಸಾಧ್ಯವೆಂಬ ಭಾವವೂ ತಲೆದೋರುತ್ತವೆ. ಮನಸ್ಸಿನ ಆ ಸ್ಥಿತಿಯನ್ನು ಆಯಾಸವೆಂದು

ಕರೆಯುಬಹುದು. ಆಗ ಕೆಲಸ ಮುಂದುವರಿಸಲು ಮನಸ್ಸಿಲ್ಲದಿದ್ದರೂ ಕೆಲಸದ ಪ್ರಮಾಣದಲ್ಲಿ ಮಾತ್ರ ಅಷ್ಟೇನೂ ಕಡಮೆಯಾಗಿರುವುದಿಲ್ಲ. ಈ ಆಯಾಸ ಆರಂಭವಾಗುವ ಕಾಲದ ಅವಧಿಯಲ್ಲಿ ಒಬ್ಬೊಬ್ಬರಲ್ಲೂ ವ್ಯತ್ಯಾಸ ಕಂಡು ಬರಬಹುದು. ಇದನ್ನು ತಾತ್ಕಾಲಿಕ ಆಯಾಸ ಅಥವಾ ವೈಯಕ್ತಿಕ ಆಯಾಸ ವೆನ್ನಬಹುದು. ಈ ತೆರದ ಆಯಾಸ ಹುಟ್ಟಿಕೊಂಡಮೇಲೂ ಕೆಲಸವನ್ನು ಮುಂದುವರಿಸಬಹುದು. ಕೆಲಸದ ಪ್ರಮಾಣ ಸ್ವಲ್ಪ ಹೆಚ್ಚು ಕಡಮೆ ಮೊದ ಲಿನಷ್ಟೇ ಇರುತ್ತದೆ. ಹಾಗೆಯೇ ಮುಂದುವರಿಸಿದರೆ ಕೊನೆಗೆ ಕೆಲಸವನ್ನು ಮುಂದುವರಿಸಲು ಸಾಧ್ಯವೇ ಇಲ್ಲದೆ ಪೂರ್ಣವಾಗಿ ಕಾರ್ಯ ವಿಮುಖ ರಾಗುತ್ತೇವೆ. ಇದನ್ನು ನಿರ್ದಿಷ್ಟ ರೀತಿಯ ಆಯಾಸವೆನ್ನಬಹುದು.

ಕೆಲವು ರೀತಿಯ ಕೆಲಸಮಾಡುವಾಗ ಮನಸ್ಸಿಗೆ ಆಯಾಸವಾಗದಿದ್ದರೂ ಅಂಗಗಳು ಕೆಲಸಮಾಡಲು ಶಕ್ತಿಗುಂದಿರುತ್ತವೆ. ಎಂದರೆ ಮಾಂಸಖಂಡ ಗಳು ಶಕ್ತಿಮೀರಿ ದುಡಿದಿರುತ್ತವೆ. ಇಂಥ ಆಯಾಸವನ್ನು ದೈಹಿಕ ಆಯಾಸ ವೆಂದು ಕರೆಯಬಹುದು. ಇನ್ನು ಕೆಲವು ರೀತಿಯ ಕೆಲಸಗಳಲ್ಲಿ ಮನಸ್ಸಿನ ಬೇಸರದಿಂದ ಕೆಲಸ ಮುಂದುವರಿಯದಂತಾಗುತ್ತದೆ. ಅದನ್ನು ಮಾನಸಿಕ ಆಯಾಸವೆಂದು ಕರೆಯಬಹುದು. ಇವೆರಡು ರೀತಿಯ ಆಯಾಸಗಳು ಪ್ರತ್ಯೇಕವೆಂದು ಸಾಮಾನ್ಯವಾಗಿ ಗಣನೆಯಾಗಿದ್ದರೂ, ಅವೆರಡಕ್ಕೂ ಸಂಬಂಧ ಇದ್ದೇ ಇದೆ : ಶಕ್ತಿ ಸಂಗ್ರಹವಾಗಿರುವುದು ಮಾಂಸಖಂಡಗಳಲ್ಲಿ ; ಮನಸ್ಸು ಕೆಲಸಮಾಡುವಾಗ ಆವಶ್ಯಕವಾದ ಶಕ್ತಿ ಮಾಂಸಖಂಡಗಳಿಂದಲೇ ಬರ ಬೇಕು; ಹಾಗೆಯೇ ಮಾಂಸಖಂಡಗಳ ಕೆಲಸ ನರಗಳ ಅಧೀನದಲ್ಲಿ ನಡೆಯು ತ್ತಿರುತ್ತದೆ. ಆದ್ದರಿಂದ ದೈಹಿಕ ಮತ್ತು ಮಾನಸಿಕ ಆಯಾಸಗಳು ಒಂದೊಂ ದಕ್ಕೆ ಸಂಬಂಧಿಸಿಯೇ ಇವೆ. ಆದರೆ ಮಾನಸಿಕ ಕಾರ್ಯವೇ ಪ್ರಧಾನ ವಾಗಿದ್ದರೆ ಅಂಥದನ್ನು ಮಾನಸಿಕ ಆಯಾಸವೆಂದೂ, ದೈಹಿಕ ಕಾರ್ಯವೇ ಪ್ರಧಾನವಾಗಿದ್ದರೆ ಅದನ್ನು ದೈಹಿಕ ಆಯಾಸವೆಂದೂ ಕರೆಯುವುದು ವಾಡಿಕೆ. ಹೀಗೆ ಏಕಪ್ರಕಾರವಾಗಿ ಕೆಲಸ ಮಾಡುವುದರಿಂದ ಆಯಾಸ ಆಗುವುದಕ್ಕೆ ಕಾರಣವೇನು ?

ಯಾವ ಕೆಲಸ ಮಾಡಿದರೂ ಶಕ್ತಿ ವ್ಯಯವಾಗುತ್ತದೆ. ಆ ಶಕ್ತಿ ಮಾಂಸಖಂಡಗಳಲ್ಲಿ ಪೋಷಕದ್ರವ್ಯಗಳ ಸ್ವರೂಪದಲ್ಲಿ ಸಂಗ್ರಹವಾಗಿದೆ.

ಕೆಲಸ ಮಾಡುವಾಗ ಆ ಪೋಷಕದ್ರವ್ಯ ಆಮ್ಲಜನಕದೊಡನೆ ಉತ್ಕರ್ಷಣ ವಾಗಿ, ವಿಭಜನೆಯಾಗಿ ಶಕ್ತಿಯನ್ನು ಹೊರಬಿಡುತ್ತದೆ. ಕೆಲಸ ಮುಂದುವರಿದಂತೆ ಆ ಪೋಷಕದ್ರವ್ಯ ವ್ಯಯವಾಗುತ್ತ ಬರುತ್ತದೆ; ಜೊತೆಗೆ, ಆಗ ನಡೆಯುವ ಆ ವಿಭಜನೆಯ ಪ್ರತಿಫಲವಾಗಿ ಲ್ಯಾಕ್ಟಿಕ್ ಆಮ್ಲವೆಂಬ ಒಂದು ವಿಷ ಪದಾರ್ಥವೂ ಉತ್ಪತ್ತಿಯಾಗುತ್ತದೆ. ಕೆಲಸವನ್ನು ಮುಂದುವರಿಸಲು ಶಕ್ತಿಯನ್ನೊದಗಿಸಲು ಮಾಂಸಖಂಡಗಳು ಅಸಹಾಯವಾಗುತ್ತವೆ; ಆಗ ಉತ್ಪತ್ತಿಯಾದ ಲ್ಯಾಕ್ಟಿಕ್ ಆಮ್ಲ ಕೆಲಸ ಮುಂದುವರಿಯಲು ಎರಡು ರೀತಿಯಲ್ಲಿ ಅಡ್ಡಿ ತರುತ್ತದೆ: ಮೊದಲನೆಯದಾಗಿ ಮಾಂಸಖಂಡಗಳ ಮೇಲೆ ತನ್ನ ನಂಜನ್ನು ಕಾರಿ ಅವುಗಳು ಮುದುರಿಕೊಂಡು ದುರ್ಬಲವಾಗುವಂತೆ ಮಾಡುತ್ತದೆ; ಎರಡನೆಯದಾಗಿ ಆ ವಿಷವಸ್ತು ರಕ್ತದ ಮೂಲಕ ನರಗಳನ್ನು ಸೇರಿ ಅದರೊಳಗೆ ಇರುವ ಸಂದೇಶವಾಹಕ ಮಾರ್ಗದಲ್ಲಿ ಹೆಚ್ಚಿನ ಸಮ್ಮರ್ದ ಹುಟ್ಟಿಸಿ ಸಂದೇಶಗಳು ಸಾಗದಂತೆ ಅಡಚಣೆಯುಂಟುಮಾಡುತ್ತದೆ. ಸಾಮಾನ್ಯವಾಗಿ ಈ ವಿಷವಸ್ತು ಆಮ್ಲಜನಕವಿದ್ದರೆ ಅದರೊಡನೆ ಸೇರಿ ನಾಶವಾಗುತ್ತದೆ. ಆದರೆ, ಸಾಮಾನ್ಯವಾಗಿ ಉಸಿರಾಡುವುದರಿಂದ ಆಗ ಬರುತ್ತಿರುವ ಆಮ್ಲಜನಕ ಸಾಲದು; ಅದರಿಂದ ಆ ವಿಷಪದಾರ್ಥ ವಿಸರ್ಜನೆಯಾಗುವಂತಿಲ್ಲ.

ಕಾಫಿ, ಟೀ ಮುಂತಾದವನ್ನು ಸೇವಿಸುತ್ತಿರುವುದರಿಂದ ಆಯಾಸ ಕಡಮೆಯಾಗುತ್ತದೆ. ಆಗ ಪಾನೀಯಗಳಲ್ಲಿರುವ ಸಕ್ಕರೆ ರಕ್ತದ ಮೂಲಕ ಮಾಂಸಖಂಡವನ್ನು ಸೇರಿ, ವ್ಯಯವಾಗಿ ಹೋಗಿರುವ ಪೋಷಕದ್ರವ್ಯವನ್ನು ಪುನಃ ಒದಗಿಸುತ್ತದೆ. ಆದರೆ ನರಗಳ ಮಾರ್ಗದಲ್ಲಿ ಅಡಚಣೆಯಾಗಿ ಕುಳಿತಿರುವ, ಮಾಂಸಖಂಡಗಳನ್ನು ಮಂಕುಗೊಳಿಸಿರುವ ವಿಷಪದಾರ್ಥವನ್ನೂ ಕಳೆಯಬೇಕು. ಅದಕ್ಕೆ ಆಮ್ಲಜನಕ ಅಗತ್ಯ. ಸ್ವಲ್ಪ ವಿಶ್ರಾಂತಿ ತೆಗೆದುಕೊಂಡರೆ ತಕ್ಕಷ್ಟು ಆಮ್ಲಜನಕ ಉಸಿರಾಡುವುದರಿಂದ ಒದಗುತ್ತದೆ. ಆದುದರಿಂದ ವಿಶ್ರಾಂತಿ ಕಾಫಿ, ಟೀ, ಇವುಗಳ ಸೇವನೆಯಿಂದ ಆಯಾಸ ಪರಿಹಾರವಾಗುತ್ತದೆ.

ವೈಯಕ್ತಿಕ (ತಾತ್ಕಾಲಿಕ) ಆಯಾಸ ತಲೆದೋರಿದನಂತರವೂ ಕೆಲಸದ ಪ್ರಮಾಣದಲ್ಲಿ ಅಷ್ಟಾಗಿ ಕಡಮೆಯಾಗುವುದಿಲ್ಲ. ಕೊನೆಗೆ ನಿರ್ದಿಷ್ಟ ಆಯಾಸ ತಲೆದೋರಿ ಕೆಲಸ ಮುಂದುವರಿಯದಂತಾಗುತ್ತದೆ. ಆದರೆ ಕಲಿವಿನ

ನಿಯಮದಂತೆ ಅಭ್ಯಾಸ ನಡೆದಂತೆಲ್ಲ ಕೆಲಸದ ಪ್ರಮಾಣ ಹೆಚ್ಚುತ್ತ ಹೋಗ ಬೇಕು: ಹಾಗಿದ್ದರೂ ಕೊನೆ ಕೊನೆಗೆ ಕೆಲಸ ಪೂರ್ಣವಾಗಿ ನಿಂತೇ ಹೋಗುವುದು ಆ ನಿಯಮಕ್ಕೆ ವಿರುದ್ಧವಲ್ಲವೆ? ಎಂಬ ಪ್ರಶ್ನೆ ಏಳುತ್ತದೆ. ನಿಜ. ಅಭ್ಯಾಸದ ನಿಯಮದಂತೆ, ಕೆಲಸ ಮುಂದುವರಿದಂತೆ ಪ್ರಮಾಣ ಹೆಚ್ಚುತ್ತ ಹೋಗಬೇಕು; ಅದರ ಜೊತೆಯಲ್ಲೇ ಕೈವಾಡ ಬೀರುವ ಮತ್ತೊಂದು ನಿಯಮವನ್ನು ಈಗ ಪರಿಗಣಿಸಬೇಕು. ಕೆಲಸ ಮುಂದುವರಿದಂತೆ ಆಯಾಸದಿಂದ ಕೆಲಸದ ಪ್ರಮಾಣ ಕ್ರಮೇಣ ಕಡಮೆಯಾಗುತ್ತ ಬರುತ್ತದೆ. ಕೊನೆ ಕೊನೆಗೆ ಎರಡನೆಯ ಅಂಶದ ಕೈವಾಡವೇ ಮೇಲಾಗಿ, ಕೆಲಸ ಪೂರ್ಣವಾಗಿ ನಿಲ್ಲುವಂತಾಗುತ್ತದೆ. ಹೀಗೆ ವಿರುದ್ಧವಾಗಿ ಕೆಲಸ ಮಾಡುತ್ತಿರುವ ಈ ಎರಡು ಶಕ್ತಿಗಳಲ್ಲಿ ಪ್ರಮಾಣವರ್ಧಕ ಕಾರ್ಯ ಪರಾಜಯ ಹೊಂದಿ, ಕೆಲಸ ಪೂರ್ಣವಾಗಿ ನಿಲ್ಲುತ್ತದೆ.

ಕೆಲವು ಕೆಲಸಗಳಲ್ಲಿ ಆಯಾಸ ಕೇವಲ ಒಂದು ಅಂಗಕ್ಕೇ ಅನ್ವಯಿಸುತ್ತದೆ. ಆ ಕಾರ್ಯದಲ್ಲಿ ವ್ಯಕ್ತಿಗೆ ನಿರ್ದಿಷ್ಟ ಆಯಾಸ ತಲೆದೋರಿದ್ದರೂ ಬೇರೆ ಕೆಲಸವನ್ನು ಸಂತೋಷದಿಂದ ಮಾಡುವಂತಿರುತ್ತಾನೆ. ಅಂಥ ಸಂದರ್ಭಗಳಲ್ಲಿ ಕೆಲಸವನ್ನು ಬದಲಾಯಿಸುವುದರಿಂದ ಆಯಾಸ ಪರಿಹಾರವಾಗುತ್ತದೆ. ಏಕೆಂದರೆ ಆಯಾಸ ಹೊಂದಿರುವ ಮಾಂಸಖಂಡಗಳಿಗೆ ಆ ಮೂಲಕ ವಿಶ್ರಾಂತಿ ದೊರಕುತ್ತದೆ.

ಆಯಾಸವನ್ನು ನೀಗಲು ಶಕ್ತಿವರ್ಧಕಗಳಾದ ಕಾಫಿ ಟೀಗಳನ್ನು ಸೇವಿಸುವುದೂ, ವಿಶ್ರಾಂತಿಯನ್ನು ನೀಡುವುದೂ ಅವಶ್ಯಕವೆಂದು ಹಿಂದೆ ಹೇಳಿದೆ. ಕಾರ್ಖಾನೆಗಳಲ್ಲಿ ಕೆಲಸಗಾರರು ಹೆಚ್ಚಿನ ಪರಿಮಾಣದಲ್ಲಿ ಕೆಲಸ ಮಾಡಲೆಂಬ ಉದ್ದೇಶದಿಂದ ಕಾರ್ಖಾನೆಯವರ ಖರ್ಚಿನಿಂದಲೇ ಉಪಾಹಾರಕ್ಕೆ ಏರ್ಪಡಿಸುವುದರಲ್ಲೂ ಇದೇ ಆಂತರ್ಯ ಅಡಗಿದೆ. ಹಾಗೆಯೇ ವಿಶ್ರಾಂತಿಯೂ ಕೆಲಸಗಾರರ ಆಯಾಸವನ್ನು ಕಳೆದು, ಅನಂತರ ಅವರ ಕೆಲಸದ ಪ್ರಮಾಣವನ್ನು ಹೆಚ್ಚಿಸಬಲ್ಲದು. ಈ ಅಂಶವನ್ನು ಪರಿಶೀಲಿಸಲು ಅನೇಕ ಪ್ರಯೋಗಗಳು ನಡೆದಿವೆ. ಒಬ್ಬನು ವಿಶ್ರಾಂತಿಯಿಲ್ಲದೆ ಒಂದೇ ಪ್ರಕಾರ ಒಟ್ಟು ದಿನಕ್ಕೆ ೧೬ ಸಾಮಾನುಗಳನ್ನು ತಯಾರಿಸುತ್ತಿದ್ದನು; ಅದೇ ಕೆಲಸಗಾರನಿಗೆ ಒಂದು ಗಂಟೆಯಾದನಂತರ ೧೫ ನಿಮಿಷ ವಿಶ್ರಾಂತಿ

ಕೊಟ್ಟಾಗ ೧೮ ಸಾಮಾನುಗಳನ್ನು ತಯಾರಿಸಲು ಶಕ್ತನಾದನು. ವಿಶ್ರಾಂತಿ ಯಿಂದ ಆಯಾಸ ಕಡಮೆಯಾಗಿ, ಕೆಲಸದ ಪ್ರಮಾಣ ವರ್ಧಿಸಬಲ್ಲದು.

ಕಾರ್ಖಾನೆಯ ಕೆಲಸಗಾರರ ಸಂಬಂಧದಲ್ಲಿ ನಡೆದ ಮೇಲಿನ ಸಂಶೋಧನೆಯಿಂದ ಸಲಹೆಯನ್ನು ಪಡೆದುಕೊಂಡು, ಆ ದೃಷ್ಟಿಯನ್ನು ತರಗತಿಯ ಪಾಠಕ್ರಮಕ್ಕೂ ಅನ್ವಯಿಸಲಾರಂಭಿಸಿದರು. ಶಾಲೆಯಲ್ಲಾಗಲಿ ಕಾರ್ಖಾನೆಯಲ್ಲಾಗಲಿ ನಿರ್ದಿಷ್ಟ ಆಯಾಸ ಆರಂಭವಾಗಿ ಕೆಲಸ ಸ್ತಬ್ಧವಾಗುವುದಕ್ಕೆ ಎಷ್ಟೋ ಮುಂಚಿತವಾಗಿ ದೈಹಿಕ ಆಯಾಸ ತಲೆದೋರುತ್ತದೆ. ಅದು ಮಾನವನಿಗೆ ಪ್ರಕೃತಿ ಕೊಡುವ ಎಚ್ಚರಿಕೆ—ತಕ್ಷಣ ವಿಶ್ರಾಂತಿ ತೆಗೆದುಕೋ ಎಂದೇ ಆ ಸೂಚನೆ. ಆದರೆ ಆ ಸೂಚನೆಯನಂತರವೂ ಪ್ರಮಾಣದಲ್ಲಿ ಅಷ್ಟೇನೂ ಕಡಮೆಯಿಲ್ಲದೆ ಕೆಲಸವೇನೋ ಮುಂದುವರಿಯಬಲ್ಲದು. ಆದರೆ ದೈಹಿಕ ಆಯಾಸ ಆರಂಭವಾದಮೇಲೆ ಎಷ್ಟು ಹೊತ್ತು ಕೆಲಸ ಮುಂದುವರಿಸುತ್ತೇವೋ ಅಷ್ಟೂ ಹೆಚ್ಚು ಮಾಂಸಖಂಡಗಳು ನಿರ್ಬಲವಾಗುತ್ತವೆ; ಆಮೇಲೆ ಅಷ್ಟೂ ಹೆಚ್ಚಿನ ವಿಶ್ರಾಂತಿ ಅನಿವಾರ್ಯವಾಗುತ್ತದೆ.

**ಶಾಲೆಯ ಕೆಲಸಗಳಲ್ಲಿ ಆಯಾಸದ ಸ್ವರೂಪ:** ಥಾರ್ನ್‌ಡೈಕ್, ಸಿಕೋರ್ಸ್ಕಿ, ಎಬ್ಬಿಂಗ್ಹ್ಯಾಂ ಮುಂತಾದವರು ಸಂಶೋಧನೆಗಳನ್ನು ಈ ಅಂಶದಲ್ಲಿ ನಡಸಿರುತ್ತಾರೆ; ಶಾಲೆಯ ಆರಂಭದಲ್ಲಿ ಮಕ್ಕಳು ಯಾವ ಪ್ರಮಾಣದಲ್ಲಿ ಕೆಲಸ ಮಾಡಬಲ್ಲರೋ ಅದೇ ಪ್ರಮಾಣದಲ್ಲಿ ಕೊನೆಯಲ್ಲೂ ಮಾಡಬಲ್ಲರೆಂಬ ಅಂಶ ಸ್ಥಿರಪಟ್ಟಿದೆ. ಕಾರ್ಖಾನೆಯ ಕೆಲಸಗಾರರ ಮೇಲೆ ನಡೆದ ಸಂಶೋಧನೆಯ ಫಲಿತಾಂಶಕ್ಕೆ ಇದು ವಿರುದ್ಧವಾಯಿತು! ಏಕಪ್ರಕಾರವಾಗಿ ಮಕ್ಕಳು ಶಾಲೆಯಲ್ಲಿ ಕೆಲಸಮಾಡಿದರೂ ಆಯಾಸ ಆಗುವುದಿಲ್ಲವೆ? ಆಗುವುದಾದರೆ ಕೆಲಸದ ಪ್ರಮಾಣ ಏಕೆ ಒಂದೇ ರೀತಿಯಿರುತ್ತದೆ? ಶಾಲೆಯಲ್ಲಿ ದೈಹಿಕಶ್ರಮ ಅಷ್ಟಾಗಿಲ್ಲವಾದ್ದರಿಂದ ಅಷ್ಟಾಗಿ ಆಯಾಸ ತಲೆದೋರಲಾರದೆಂದು ಕೆಲವರು ಹೇಳುವರು. ಇದು ಸಮಂಜಸವಾಗಲಾರದು; ಇನ್ನು ಕೆಲವರು 'ಶಾಲೆಯ ಕೊನೆಯಲ್ಲಿ ಆಯಾಸ ತಲೆದೋರಿಯೇ ಇರುತ್ತದೆ; ಆದರೆ ಅದು ದೈಹಿಕ ಆಯಾಸ ಮಾತ್ರ; ಅದರಿಂದಲೇ ಕೆಲಸದ ಪ್ರಮಾಣ ಕುಗ್ಗಲಾರದು, ಎಂದು ಹೇಳುವರು. 'ಆಗ ತಲೆದೋರುವ ಆಯಾಸಕ್ಕೆ ಶಾಲೆಯ ಕೆಲಸದಂತೆ ಇತರ ಕಾರಣಗಳೂ ಉಂಟು: ಒಂದೇ ಸ್ಥಳದಲ್ಲಿ

ಕುಳಿತು ಬೇಸರವಾಗುವುದು, ಆಕರ್ಷಣೆಯಿಲ್ಲದ ಬೋಧನಕ್ರಮ, ಶಾಲೆಯಿಂದ ಹೊರಗೆ ಹೋಗಬೇಕೆಂಬ ಕಾತರ—ಇವೆಲ್ಲವೂ ಕಾರಣವಾಗುತ್ತವೆ. ಶಾಲೆ ಮುಗಿದಮೇಲೆ ಮಕ್ಕಳು ಆಯಾಸವಿಲ್ಲದವರಂತೆ ಉತ್ಸಾಹದಿಂದ ಆಟಗಳಲ್ಲಿ ಭಾಗವಹಿಸುವರು! ಆದ್ದರಿಂದ ಶಾಲೆಯನ್ನು ಬಿಟ್ಟು ಹೊರಗೆ ಹೋಗಬೇಕೆಂಬ ಕಾತರ ಹೆಚ್ಚಿ ಮಕ್ಕಳಿಗೆ ಜಿಗುಪ್ಸೆ ಹುಟ್ಟಿ ಕೆಲಸ ಮಾಡಲಾರದ ಮನೋಭಾವ ಹುಟ್ಟಿಕೊಂಡಿರುತ್ತದೆ. ಆದರೆ ನಿರ್ದಿಷ್ಟವಾದ ಆಯಾಸ ತಲೆದೋರಿರುವುದಿಲ್ಲ' ಎಂದು ಮತ್ತೆ ಕೆಲವರು ಹೇಳುವರು. ನಿಜವಾಗಿ ಹೇಳುವುದಾದರೆ ಮಧ್ಯಾಹ್ನದ ವೇಳೆಗೆ ಎಂದರೆ ೧-೩೦ ರ ಹೊತ್ತಿಗೆ ಅವರಿಗೆ ದೈಹಿಕ ಆಯಾಸ ಆರಂಭವಾಗುತ್ತದೆ. ಆ ಸುಮಾರಿನಲ್ಲಿ ಮಾಡುವ ಕೆಲಸದ ಪ್ರಮಾಣ ಸುಮಾರು ಅರ್ಧ ಮುಕ್ಕಾಲು ಗಂಟೆ ವಿಶ್ರಾಂತಿ ತೆಗೆದುಕೊಂಡು ಮಾಡುವ ಕೆಲಸದ ಪ್ರಮಾಣಕ್ಕಿಂತ ನಿರ್ದಿಷ್ಟವಾಗಿ ಕಡಮೆಯಿರುತ್ತದೆ. ಆದ್ದರಿಂದ ಶಾಲಾ ಕಾರ್ಯಗಳಲ್ಲೂ ಮಕ್ಕಳಿಗೆ ಆಯಾಸವಾಗುತ್ತದೆ. ಅವರಿಗೂ ವಿಶ್ರಾಂತಿ ಕೊಡುವುದು ಫಲಪ್ರದವಾದ ವ್ಯವಸ್ಥೆ.

**ಉಪಾಧ್ಯಾಯರಿಗೆ ಸಲಹೆಗಳು:** ಮೇಲೆ ಹೇಳಿದ ಪ್ರಯೋಗಗಳು ಇನ್ನೂ ಯಾವ ನಿರ್ದಿಷ್ಟ ತೀರ್ಮಾನಕ್ಕೂ ಬಂದಿರುವುದಿಲ್ಲ; ಅವುಗಳಿಂದ ಸರಿಯಾದ ಸಲಹೆ ಶಿಕ್ಷಣರಂಗಕ್ಕೆ ದೊರಕಬೇಕಾದರೆ ಇನ್ನೂ ಸಂಶೋಧನೆಗಳು ನಡೆಯಬೇಕು. ಆದರೂ ಆಯಾಸದ ಪರಿಚಯವನ್ನೂ, ಅದನ್ನು ನಿವಾರಿಸುವ ಕ್ರಮವನ್ನೂ ಉಪಾಧ್ಯಾಯರು ಅರಿತು ಸಾಧ್ಯವಾದ ಮಟ್ಟಿಗೆ ಉಚಿತವಾದ ರೀತಿಯಲ್ಲಿ ಅದನ್ನು ಕಾರ್ಯರೂಪಕ್ಕೆ ತರಬಹುದು. ಆಗ ಕೆಳಗಿನ ಅಂಶಗಳ ಕಡೆ ಗಮನ ಕೊಡುವುದು ಆವಶ್ಯಕ:

'ಶಾಲೆಯಲ್ಲಿ ಮಕ್ಕಳು ದಿನದ ಕೊನೆಯವರೆಗೂ ಪ್ರಮಾಣದಲ್ಲಿ ಅಷ್ಟಾಗಿ ಕಡಮೆಯಿಲ್ಲದೆ ಕೆಲಸವನ್ನೇನೊ ಮಾಡಬಲ್ಲರು. ಅವರಿಗೆ ಕೊನೆ ಕೊನೆಗೆ ಹುಟ್ಟುವ ಆಲಸ್ಯ ಕೇವಲ ದೈಹಿಕವಾದ್ದು ಮತ್ತು ಬೇಸರ ಜಿಗುಪ್ಸೆಗಳಿಂದ ಹುಟ್ಟಿದ್ದು' ಎಂದು ನಂಬಿ ಅವರು ಇಷ್ಟವಿಲ್ಲದಿದ್ದರೂ ಕೆಲಸ ಮಾಡಿಸುವುದು ಅಪಾಯಕರ. ಇಷ್ಟವಿಲ್ಲದೆ ಕೆಲಸಮಾಡಿಸಿದರೆ ಮಕ್ಕಳ ಕಲಿವು ಯಶಸ್ವಿಯಾಗುವಂತಿಲ್ಲ; ಪಾಠದ ಮತ್ತು ಶಾಲೆಯ ವಿಷಯದಲ್ಲಿ ಅವರಿಗೆ ಕಹಿ ನೆನವು ಉಳಿದುಕೊಂಡು ಅವನ್ನು ದ್ವೇಷಿಸಲೂ ಯತ್ನಿಸ

ಬಹುದು. ಅಷ್ಟರೊಳಗೆ ದೈಹಿಕ ಆಯಾಸ ಆರಂಭವಾಗಿ ಎಷ್ಟೋ ಹೊತ್ತಾಗಿರುವುದರಿಂದ ಮಕ್ಕಳ ಆರೋಗ್ಯ ಕುಂದಿಹೋಗುವುದು. ಆದ್ದರಿಂದ ಒಂದೇ ಸಮನೆ ಬಹಳ ಹೊತ್ತು ಕೆಲಸ ಮಾಡುವುದು ಒಳ್ಳೆಯದಲ್ಲ. ಅದಕ್ಕಾಗಿ ವಿಶ್ರಾಂತಿ ಅವಶ್ಯಕ. ಆದರೆ ಕೆಲವರು ಶಾಲೆಗಳಲ್ಲೂ 'ಆಯಾಸ ಬಂದೊಡನೆ ಬಿಟ್ಟುಬಿಡುವುದು ಉಚಿತವಲ್ಲ; ಅವರ ಕೆಲಸದ ಸ್ವಭಾವವನ್ನು ಬದಲಾಯಿಸಿದರೆ ಸಾಕು' ಎನ್ನುವರು; ಮತ್ತೆ ಕೆಲವರು 'ಬೇಸರ ಹುಟ್ಟಿದೊಡನೆಯೇ ಕೆಲಸ ನಿಲ್ಲಿಸುವುದೆಂದರೇನು? ದೃಢ ಮನಸ್ಸಿನಿಂದ ಅವರು ಹಿಡಿದ ಕೆಲಸವನ್ನು ಮಾಡಿ ಮುಗಿಸುವ ಕಷ್ಟಸಹಿಷ್ಣುತೆ ಮತ್ತು ಕಾರ್ಯತತ್ಪರತೆಗಳನ್ನು ಕಲಿಯುವಂತೆ ಮಾಡಬೇಕು' ಎನ್ನುವರು; 'ಬೋಧನ ಕ್ರಮವನ್ನು ಆಕರ್ಷಣೀಯವಾಗಿ ಮಾಡಿದರೆ ಆಯಾಸ ಕಡಮೆಯಾದೀತು' ಎಂದು ಇನ್ನು ಕೆಲವರು ಹೇಳುವರು. ಪಿಯರ್ಸ್‌ನ್ನರು ಮಕ್ಕಳಿಗೆ ದೈಹಿಕ ಆಯಾಸ ಆರಂಭವಾಗಿ ಬೇಸರ ಹುಟ್ಟಿದೊಡನೆಯೇ ಕೆಲಸ ನಿಲ್ಲಿಸಿ ವಿಶ್ರಾಂತಿ ಕೊಡಬೇಕೆಂದು ಸಲಹೆ ಮಾಡಿರುವರು; ಕೆಲವರು ಕೆಲಸವನ್ನು ಮುಂದುವರಿಸಬೇಕೆನ್ನುವರು. ಎರಡೂ ವೈಪರೀತ್ಯವೇ ಆಗಬಹುದು. ಇನ್ನೂ ಸಂಶೋಧನೆಗಳ ನಿರ್ದಿಷ್ಟ ಸಹಾಯ ನಮಗೆ ಇಲ್ಲದಿರುವಾಗ ಇವರಿಬ್ಬರ ಸಲಹೆಗೂ ಮಧ್ಯವರ್ತಿಯೆನಿಸುವ ಮಾರ್ಗವನ್ನು ಅನುಸರಿಸಬಹುದು. ದೈಹಿಕ ಆಲಸ್ಯ ಆರಂಭವಾದ ಒಂದು ಗಂಟೆಯನಂತರ ವಿಶ್ರಾಂತಿ ಕೊಡಬಹುದು. ಈ ಸಲಹೆ ತುಂಬ ಸ್ಥೂಲವಾದುದು: ಆ ದೈಹಿಕ ಆಲಸ್ಯ ಎಂದು ಆರಂಭವಾಗುವುದೆಂಬುದು ಇದರಿಂದ ಅರಿವಾಗುವಂತಿಲ್ಲ. ಜೊತೆಗೆ ಎಲ್ಲರಿಗೂ ಒಂದೇ ನಿರ್ದಿಷ್ಟ ಕಾಲಾಂತ್ಯದಲ್ಲಿ ಆಯಾಸ ಆರಂಭವಾಗುವುದಿಲ್ಲ. ಹಾಗೆಯೇ ಎಲ್ಲ ಪಾಠಗಳೂ ಒಂದೇ ಕಾಲಾವಧಿಯಲ್ಲಿ ಆಯಾಸ ಹುಟ್ಟಿಸುವಂತಿಲ್ಲ; ವ್ಯಕ್ತಿಗಳ ಶಕ್ತಿಯನ್ನೂ, ಮಾಡತಕ್ಕ ಪಾಠಗಳ ಸ್ವಭಾವವನ್ನೂ ಅನುಸರಿಸಿ ಆ ಕಾಲ ನಿಷ್ಕರ್ಷಿತವಾಗಬಹುದು. ಆದ್ದರಿಂದ ಎಚ್ಚರಿಕೆಯಿಂದ ಈ ಅಂಶಗಳನ್ನೆಲ್ಲ ಪರಿಶೀಲಿಸಬೇಕು:

೧. ಯಾವ ಒಂದು ಪಾಠವನ್ನೇ ಆಗಲಿ ತುಂಬ ದೀರ್ಘಕಾಲ ಮಾಡಬಾರದು. ಹಾಗೂ ಎಳೆಯ ಮಕ್ಕಳಿಗೆ ದೀರ್ಘಕಾಲ ಒಂದೇ ಪಾಠಮಾಡುವುದು ಅಪಾಯಕರ. ಪ್ರಾಥಮಿಕ ತರಗತಿಗಳಲ್ಲಿ ಒಂದು ಪಾಠದ ಪರಮಾವಧಿ

ಕಾಲ ೩೫ ನಿಮಿಷವೂ, ಮಾಧ್ಯಮಿಕ ಶಾಲೆಯಲ್ಲಿ ೪೦ ನಿಮಿಷವೂ ಇರುವುದು ಉತ್ತಮ. ಇನ್ನೂ ಮೇಲ್ತರದ ಶಿಕ್ಷಣ ಸಂಸ್ಥೆಗಳಲ್ಲಿ ಆ ಅವಧಿ ಹೆಚ್ಚ ಬಹುದು. ಚಿಕ್ಕ ವಯಸ್ಸಿನಲ್ಲಿ ಮಕ್ಕಳು ದೀರ್ಘಕಾಲ ಒಂದೇ ರೀತಿಯ ಪಾಠದಲ್ಲಿ ಅವಧಾನವಿರಿಸುವುದು ಕಷ್ಟ. ಆದ್ದರಿಂದ ಆಯಾಸ ತಲೆದೋರ ಬಹುದು. ಪಾಠಗಳು ಬೇಗ ಬದಲಾಯಿಸುತ್ತಿದ್ದರೆ ಆಯಾಸ ಪರಿಹಾರ ವಾಗುವುದು, ಅಥವಾ ತಗ್ಗುವುದು.

೨. ಹೆಚ್ಚು ಆಲೋಚಿಸಬೇಕಾದ ಪಾಠಗಳಾದರೆ ಆಯಾಸ ತಲೆದೋರು ವುದು. ಆದ್ದರಿಂದ ಭಾವನಾ ಪ್ರಧಾನವಾದ ಗಣಿತ, ವ್ಯಾಕರಣಸಾಹಿತ್ಯ, ಮುಂತಾದವನ್ನು ದಿನದ ಕೊನೆಯಲ್ಲಿ ಇಟ್ಟುಕೊಳ್ಳಬಾರದು. ಸಾಹಿತ್ಯ, ಗಣಿತ, ವ್ಯಾಕರಣ–ಇವನ್ನು ಶಾಲೆ ಆರಂಭವಾದ ಮೊದಲಲ್ಲೇ ಇಟ್ಟುಕೊಳ್ಳು ವುದು ಒಳ್ಳೆಯದು. ಏಕೆಂದರೆ ಆಗ ಅವರು ಹೆಚ್ಚಿನ ಲವಲವಿಕೆಯಿಂದಿರು ತ್ತಾರೆ. ಆದ್ದರಿಂದ ವೇಳಾಪಟ್ಟಿಯಲ್ಲಿ ಹೆಚ್ಚು ಆಲೋಚಿಸಬೇಕಾದ ಪಾಠ ಗಳಿಗೆ ಮೊದಲ ಸ್ಥಳವನ್ನೂ ಮಿಕ್ಕವಕ್ಕೆ ಇನ್ನುಳಿದ ಕಾಲವನ್ನೂ ಕೊಡಬೇಕು.

೩. ತರಗತಿಯಲ್ಲಿ ಮಕ್ಕಳು ಮಾಡಬೇಕಾದ ಮಾನಸಿಕ ದೈಹಿಕ ಕೆಲಸಗಳಂತೆ ಇತರ ಅಂಶಗಳೂ ಆಯಾಸ ಹುಟ್ಟಿಸಬಹುದು: ಶಾಲೆಯ ಉಷ್ಣಾಂಶ, ಸ್ಥಳದ ಇಕ್ಕಟ್ಟು, ಗಾಳಿಯ ಅಭಾವ ಇವೂ ಅವರ ಆಯಾಸವನ್ನು ಹೆಚ್ಚಿಸತಕ್ಕವೇ; ಉಪಾಧ್ಯಾಯರು ಆ ಕಡೆಯೂ ಗಮನ ಕೊಡಬೇಕು.

೪. ಒಬ್ಬೊಬ್ಬ ವಿದ್ಯಾರ್ಥಿಯೂ ಪ್ರತ್ಯೇಕವಾಗಿ ಕೆಲಸ ಮಾಡುವುದ ರಿಂದ ಬೇಗ ಬೇಸರ ಹುಟ್ಟಿ ಆಯಾಸವಾಗುವುದು. ಆದ್ದರಿಂದ ಸಾಮಾಜಿಕ ವಾಗಿ ಕೆಲಸಮಾಡುವಂತೆ ಏರ್ಪಡಿಸುವುದು ಉತ್ತಮ.

೫. ಯಾವ ಪಾಠವನ್ನಾಗಲಿ ಬಲವಂತದಿಂದ ಕಲಿಸಲು ಯತ್ನಿಸಿದರೆ ಆಯಾಸ ಬೇಗ ಬರಬಹುದು. ಮಾಡುವ ಪಾಠ ಹೇಗೆ ಅವರಿಗೆ ಆವಶ್ಯಕ ವೆಂಬುದನ್ನು ಗಮನಕ್ಕೆ ತಂದು ಕೊಟ್ಟು ಪಾಠ ಅವರದನ್ನಾಗಿ ಮಾಡಬೇಕು; ಆ ಮೂಲಕ ಪಾಠಕ್ಕೆ ಅವರ ಆಸಕ್ತಿಯನ್ನೂ ಸಂತೋಷವನ್ನೂ ದೊರಕಿಸಿ ಕೊಳ್ಳಬೇಕು.

೬. ಒಂದೊಂದು ಪಾಠ ಮುಗಿದೊಡನೆಯೂ ಸ್ವಲ್ಪ ಕಾಲ (೫ರಿಂದ ೧೦ ನಿಮಿಷ) ವಿಶ್ರಾಂತಿ ಕೊಡುವುದನ್ನು ಜರ್ಮನಿಯಲ್ಲೂ ಅಮೆರಿಕದಲ್ಲೂ

ಪ್ರಾಥಮಿಕ ಶಾಲೆಗಳಲ್ಲಿ ಆಚರಣೆಗೆ ತಂದಿದ್ದಾರೆ; ಕೆಲವರು ಇದನ್ನು ಒಪ್ಪು ವುದಿಲ್ಲ; ಆಗಾಗ ವಿಶ್ರಾಂತಿ ಕೊಟ್ಟು ಮಕ್ಕಳನ್ನು ಆಡಲು ಬಿಡುವುದರಿಂದ ಮತ್ತೆ ಮತ್ತೆ ಅವರು ಆಟದ ಮನೋಭಾವದಿಂದ ಪಾಠದ ಮನೋಭಾವಕ್ಕೆ ಸಿದ್ಧವಾಗುವುದು ಕಷ್ಟವಾಗಿ, ಪ್ರತಿಯೊಂದು ಹೊಸ ಪಾಠ ಆರಂಭಮಾಡು ವಾಗಲೂ ಮಕ್ಕಳು ಸಿದ್ಧವಾಗಬೇಕಾದರೆ ಸ್ವಲ್ಪ ಕಾಲ ವ್ಯಯವಾಗುವುದೆಂದು ವಾದಿಸುವರು. ಇವೆರಡಕ್ಕೂ ಮಧ್ಯಸ್ಥವಾದ ಕ್ರಮ ಉಚಿತ. ಈಗ ನಮ್ಮ ಪ್ರಾಥಮಿಕ ಶಾಲೆಗಳಲ್ಲಿ ಬೆಳಗಿನ ಹೊತ್ತು ಮೂರು ಪಾಠ ಆದಮೇಲೆ ೧೫-೨೦ ನಿಮಿಷ ಕೊಡುತ್ತಿರುವ ವಿರಾಮ ವ್ಯವಸ್ಥೆ ಉಚಿತವಾಗಿದೆ. ಹಾಗೆಯೇ ಮಧ್ಯಾಹ್ನದ ಹೊತ್ತೂ ಆ ಏರ್ಪಾಡನ್ನು ಮಾಡಬಹುದು. ಆದರೆ ಬೆಳಗ್ಗೆ ೧೧ ಗಂಟೆಗೆ ತರಗತಿ ಮುಗಿದು, ಮಧ್ಯಾಹ್ನ ೩ ಗಂಟೆಗೆ ಪುನಃ ಆರಂಭವಾಗು ವುದರಿಂದ ಅದು ಅಷ್ಟೊಂದು ಅನಿವಾರ್ಯವೆಂದು ತೋರುವುದಿಲ್ಲ. ೧೧ರಿಂದ ಆರಂಭವಾಗಿ ಸಾಯಂಕಾಲದವರೆಗೆ ನಡೆಯುವಂತಿದ್ದರೆ ಮಧ್ಯಾಹ್ನ ಉಚಿತ ವೆನಿಸುವಷ್ಟು ಕಾಲ ವಿರಾಮ ಕೊಡುವುದು ಆವಶ್ಯಕ.

ಶಾಲೆಯ ಆವರಣ ವಿಶಾಲವಾಗಿದ್ದು, ಮಕ್ಕಳು ಕೂಡಲು ತಕ್ಕಷ್ಟು ಸ್ಥಳವಿದ್ದು, ಗಾಳಿ ಬೆಳಕು ಯಥೇಚ್ಛವಾಗಿ ಬರುತ್ತಿದ್ದರೆ, ಬೋಧನಕ್ರಮ ಆಕರ್ಷಣೀಯವಾಗಿದ್ದರೆ, ಆಯಾಸವನ್ನು ಸ್ವಲ್ಪಮಟ್ಟಿಗೆ ತಡೆಯಬಹುದು. ಹಾಗೆಯೇ ಕಾಫಿ, ಉಪಹಾರ ಮುಂತಾದ ಶಕ್ತಿದಾಯಕಗಳನ್ನು ಒದಗಿಸು ವುದೂ ಅದೇ ಕಾರ್ಯವನ್ನು ಸಾಧಿಸುತ್ತದೆ.

ಉಪಾಧ್ಯಾಯರು ಮಕ್ಕಳಲ್ಲಿ ಆಯಾಸ ತಲೆದೋರಬಹುದಾದ ಎಲ್ಲ ಕಾರಣಗಳನ್ನೂ ಪರಿಚಯ ಮಾಡಿಕೊಂಡಿದ್ದು, ಅದರ ಬೆಳಕಿನಲ್ಲಿ ವೇಳಾ ಪತ್ರಿಕೆ, ವಿಶ್ರಾಂತಿ ಕಾಲ, ರಜಾ ದಿನಗಳು ಮುಂತಾದವನ್ನು ಉಚಿತವೆನಿಸು ವಂತೆ ಏರ್ಪಡಿಸಿಕೊಂಡು, ಶಾಲೆಯ ವ್ಯವಸ್ಥೆಯ ಕ್ರಮದಿಂದ ಎಷ್ಟರ ಮಟ್ಟಿಗೆ ಮಕ್ಕಳ ಆಯಾಸವನ್ನು ಕಡಮೆ ಮಾಡಬಹುದೋ ಅಷ್ಟನ್ನೂ ಮಾಡಿಕೊಳ್ಳಬೇಕು.

## ೩. ಅವಧಾನ ಮತ್ತು ಆಸಕ್ತಿ

ಏನಾದರೂ ಆಕರ್ಷಣೀಯವಾದ ವಸ್ತುವನ್ನೋ ಸನ್ನಿವೇಶವನ್ನೋ ಕಂಡಾಗ ಗಮನವನ್ನೆಲ್ಲ ಅದರ ಕಡೆ ತಿರುಗಿಸುತ್ತೇವೆ; ಹಾಗೆಯೇ ಉಪಾ

ಧ್ಯಾಯರು ಪಾಠವನ್ನು ಚೆನ್ನಾಗಿ, ಆಕರ್ಷಣೀಯವಾಗುವಂತೆ ಮಾಡಿದರೆ ಮಕ್ಕಳು ಆ ಕಡೆಯೇ ಗಮನವಿಡುವರು. ಹಾಗೆ ಸಂತೋಷದಿಂದ ಪಾಠದ ಕಡೆ ಗಮನಕೊಡುವುದರಿಂದ ಆಯಾಸ ಕಡಮೆಯಾಗುವುದು. ಎಂದಮೇಲೆ, ಮಕ್ಕಳ ಪೂರ್ಣ ಗಮನವನ್ನು ಪಾಠದ ಕಡೆ ಸೆಳೆದುಕೊಳ್ಳುವುದು ಅಗತ್ಯ.

ಒಂದೊ, ಎರಡೊ, ಅಂಶಗಳ ಕಡೆ ಮಾತ್ರ ಪ್ರಜ್ಞೆಯನ್ನು ಕೇಂದ್ರೀಕರಿಸುವುದು ಅವಧಾನವೆನಿಸುತ್ತದೆ. ಒಂದು ಸನ್ನಿವೇಶದಲ್ಲಿ ಬಗೆ ಬಗೆಯ ಅಂಶಗಳು ನಮ್ಮ ಕಣ್ಣಿಗೆ ಬೀಳುತ್ತಿರುತ್ತವೆ. ಆಗ ಯಾವುದಾದರೂ ಒಂದರ ಮೇಲೆ ನಮ್ಮ ಗಮನವನ್ನು ಬೀರಿದರೆ ನಮ್ಮ ಅವಧಾನ ಆ ಪದಾರ್ಥಗಳ ಮೇಲೆ ಬಿದ್ದಿದೆಯೆನ್ನುತ್ತೇವೆ. ಒಂದು ಚಲನಚಿತ್ರ ಮಂದಿರಕ್ಕೆ ಹೋದಾಗ ಬಗೆ ಬಗೆಯ ಆಕರ್ಷಣೆಗಳಿರುತ್ತವೆ: ಪಕ್ಕದಲ್ಲಿ ಸ್ನೇಹಿತರು, ಸುತ್ತಮುತ್ತ ಪರಿಚಿತರು, ಮೇಲೆ ಬೀಸಣಿಗೆ, ಗೋಡೆಗಳಲ್ಲಿ ಸಣ್ಣ ಸಣ್ಣ ಇಣುಕು ದೀಪಗಳು—ಇವೆಲ್ಲ ಇರುತ್ತವೆ. ಚಿತ್ರ ನಡೆಯುವುದು ಆರಂಭವಾದೊಡನೆ ನಾವು ನಮ್ಮ ಮನಸ್ಸನ್ನು ಮುಂದಿನ ಚಿತ್ರದ ಜವನಿಕೆಯ ಮೇಲೆ ಕೇಂದ್ರೀಕರಿಸುತ್ತೇವೆ. ಆದರೂ, ನಮ್ಮ ಮುಂದೆ ಇತರ ಸನ್ನಿವೇಶಗಳೂ ಇವೆ: ಅವುಗಳು ಮನಸ್ಸಿನ ಅಂಚಿನಲ್ಲಿ ಮಾತ್ರ ಇರುತ್ತವೆ.

ವಿಷಯವನ್ನೊ, ಸನ್ನಿವೇಶವನ್ನೊ, ಶಬ್ದವನ್ನೊ ಮನಸ್ಸಿಗೆ ಚೆನ್ನಾಗಿ ಮುಟ್ಟುವಂತೆ ಮಾಡುವುದೇ ಅವಧಾನದ ಉದ್ದೇಶ. ಒಂದೇ ಕಾಲದಲ್ಲಿ ಅನೇಕ ಅಂಶಗಳ ಮೇಲೆ ಗಮನವಿಡುವುದರಿಂದ ಅವಧಾನ ಎರಚಿ ಹೋಗುವುದು; ಆದ್ದರಿಂದ ಯಾವುದೂ ಮನಸ್ಸಿನಲ್ಲಿ ಯಶಸ್ವಿಯಾಗಿ ಪರಿಣಾಮ ವುಂಟುಮಾಡಲಾರದು. ಇಡೀ ಮನಸ್ಸನ್ನು ಒಂದಂಶದಮೇಲೆ ಮೊನೆಮಾಡಿದರೆ ವಿಷಯ ಚೆನ್ನಾಗಿ ಗೊತ್ತಾಗುತ್ತದೆ. ಶಾಲೆಯಲ್ಲಿ ಬೋಧಿಸುವಾಗ ತಿಳಿಯ ಬೇಕೆಂದಿರುವ ವಿಷಯದ ಕಡೆ ಮಕ್ಕಳು ಅವಧಾನವನ್ನು ಕೇಂದ್ರೀಕರಿಸುವಂತೆ ಮಾಡಿದರೆ ಬೋಧಿಸಿದ್ದನ್ನು ಏಕಾಗ್ರಚಿತ್ತದಿಂದ ಕಲಿಯಬಲ್ಲರು. ಒಂದು ವಿದ್ಯುದ್ದೀಪವ (ಟಾರ್ಚ್)ನ್ನು ವಿಸ್ತಾರವಾದ ಪ್ರದೇಶದ ಮೇಲೆ ಬಿಟ್ಟಾಗ ಪದಾರ್ಥಗಳು ಮಬ್ಬಾಗಿ ಕಾಣುತ್ತವೆ. ಅದೇ ಬೆಳಕನ್ನು ಒಟ್ಟಿಗೆ ಕೇಂದ್ರೀಕರಿಸಿ ಒಂದಂಶದ ಮೇಲೆ ಬಿಟ್ಟಾಗ ಆ ಅಂಶ ಚೆನ್ನಾಗಿಯೂ ಹೆಚ್ಚು ಪ್ರಕಾಶಮಾನವಾಗಿಯೂ ಕಾಣುತ್ತದೆ. ಅದರಂತೆ, ಬಹು ಅಂಶಗಳ ಮೇಲೆ

ಓಡಾಡುವ ಮಕ್ಕಳ ಗಮನವನ್ನು ಒಂದಂಶದ ಮೇಲೆ ಕೇಂದ್ರೀಕರಿಸಿದರೆ ಮನಸ್ಸಿಗೆ ಚೆನ್ನಾಗಿ ನಾಟುತ್ತದೆ. ಆಗ ಅನೇಕ ಅಂಶಗಳು ನಮ್ಮ ಗಮನಕ್ಕೆ ಬರುತ್ತಿದ್ದರೂ, ಅವಧಾನ ಒಂದಂಶದ ಮೇಲೆ ನೆಟ್ಟಿರುತ್ತದೆ. ಮಿಕ್ಕ ಅಂಶಗಳು ಮನಸ್ಸಿನ ಅಂಚಿನಲ್ಲಿ ಅಸ್ಪಷ್ಟವಾಗಿರುತ್ತವೆ.

ಮಕ್ಕಳ ಪೂರ್ಣ ಗಮನವನ್ನು ಮುಖ್ಯಾಂಶದ ಕಡೆ ಸೆಳೆಯಲು ಪಾಠ ಆರಂಭಿಸುವ ಮುನ್ನ 'ಈಗ ಈ ವಿಷಯವನ್ನು ಕಲಿಯುವ'. 'ಆ ವಿಷಯವನ್ನು ಪರಿಶೀಲಿಸುವ' 'ಆ ಸಮಸ್ಯೆಯನ್ನು ಬಗೆಹರಿಸುವ' ಮುಂತಾಗಿ ಹೇಳುವುದುಂಟು. ಆಗ ಮಕ್ಕಳು ತಮ್ಮ ಅವಧಾನವನ್ನೆಲ್ಲ ಆ ವಿಷಯವನ್ನು ತಿಳಿಯಲು ಕೇಂದ್ರೀಕರಿಸುತ್ತಾರೆ; ಆ ಬೋಧನ ವಿಷಯ ಅವರ ಪ್ರಿಯವಾದ ವಿಷಯವಾಗಿ, ಅದನ್ನು ಕಲಿಯಲು ಹಾತೊರೆಯುತ್ತ ಮನಶ್ಶಕ್ತಿಯನ್ನೆಲ್ಲ ಅದಕ್ಕೆ ವಿನಿಯೋಗಿಸಲು ಸಿದ್ಧರಾಗುತ್ತಾರೆ. ಆಗ ಬೋಧನೆ ಫಲಪ್ರದವಾಗುತ್ತದೆ; ಕಲಿವು ಯಶಸ್ವಿಯೂ ಸುಲಭವೂ ಆಗುತ್ತದೆ. ಅವಧಾನ ಬೋಧನಕಾರ್ಯಕ್ಕೆ ಇಷ್ಟೊಂದು ಉಪಯುಕ್ತವೆನಿಸುವುದರಿಂದ ಉಪಾಧ್ಯಾಯರು ಅದರ ಪೂರ್ಣ ಪರಿಚಯ ಮಾಡಿಕೊಳ್ಳುವುದು ಅಗತ್ಯ.

**ಅವಧಾನದ ಬಗೆಗಳು:** ಮಕ್ಕಳು ಯಾವೊಂದು ವಿಷಯದಮೇಲೆ ಅವಧಾನವಿರಿಸಬೇಕಾದರೂ ಆ ಒಂದು ವಿಷಯದ ಮೇಲೇ ತಮ್ಮ ಮನಶ್ಶಕ್ತಿಯ ಪ್ರವಾಹವನ್ನೆಲ್ಲ ಒಟ್ಟುಗೂಡಿಸಬೇಕು. ಆದ್ದರಿಂದ ಹೆಚ್ಚು ಕಾಲ ಅವಧಾನವಿಟ್ಟಂತೆ ಹೆಚ್ಚು ಮನಶ್ಶಕ್ತಿ ವ್ಯಯವಾಗುತ್ತದೆ. ಉಪಾಧ್ಯಾಯರು ಅವರ ಅವಧಾನವನ್ನು ಒದಗಿಸಿಕೊಳ್ಳುವಾಗ ಅದರಿಂದ ಆದಷ್ಟು ಕಡಮೆ ಮನಶ್ಶಕ್ತಿ ವ್ಯಯವಾಗುವಂತೆಯೂ, ಆದಷ್ಟು ಕಡಮೆ ಆಯಾಸವಾಗುವಂತೆಯೂ ಯತ್ನಿಸಬೇಕು. ಹಾಗೆ ಅವಧಾನವನ್ನು ಒದಗಿಸಿಕೊಳ್ಳುವ ರೀತಿಯನ್ನವಲಂಬಿಸಿ ಅದನ್ನು ಮೂರು ವಿಧವಾಗಿ ವಿಂಗಡಿಸಿರುವರು.

೧. **ಸ್ವಾಭಾವಿಕ ಅವಧಾನ:** ಮಕ್ಕಳಿಗೆ ಹಲವು ಹುಟ್ಟುಗುಣಗಳು ವಂಶಗತವಾಗಿ ಬರುತ್ತವೆಂದೂ ಆ ಹುಟ್ಟುಗುಣಗಳ ಮನಶ್ಶಕ್ತಿ ಅವುಗಳನ್ನು ಸ್ವಾಭಾವಿಕವಾಗಿ ಕಾರ್ಯಪ್ರವರ್ತವಾಗಿಸುತ್ತವೆಂದೂ ಹಿಂದೆ ವಿವರಿಸಿದೆ. ಕೆಲವು ಹುಟ್ಟುಗುಣಗಳು ಕೆಲವು ಅಂಶಗಳಮೇಲೆ ತಾವಾಗಿಯೇ

ಏಕಾಗ್ರಗೊಳ್ಳುತ್ತವೆ. ಅದರಿಂದ ಹೆಚ್ಚು ಆಯಾಸವೂ ಆಗುವಂತಿಲ್ಲ; ಹೆಚ್ಚು ಮನಶ್ಶಕ್ತಿಯೂ ವ್ಯಯವಾಗುವಂತಿಲ್ಲ. ಕುತೂಹಲ, ರಚನೆ, ಸಂಘಜೀವನಾಭಿಲಾಷೆ, ಭೀತಿ ಮುಂತಾದ ಸ್ವಾಭಾವಿಕ ಮನೋಗತಿಗಳು ಸೂಕ್ತವಾದ ಸನ್ನಿವೇಶಗಳ ಕಡೆ ಗಮನವನ್ನು ಕೇಂದ್ರೀಕರಿಸುವಂತೆ ಮಾಡು ತ್ತವೆ. ಹಾಗೆ ದೊರಕಿದ ಅವಧಾನ ಸ್ವಾಭಾವಿಕವಾದುದು. ಅದು ಕೇವಲ ಹುಟ್ಟುಗುಣಗಳ ಸ್ವಪ್ರೇರಣೆಯಿಂದ ದೊರಕುವಂಥದಾದ್ದರಿಂದ ಅದಕ್ಕೆ ಮನಶ್ಶಕ್ತಿ ತೀರ ಕಡಮೆ ವ್ಯಯವಾಗುತ್ತದೆ. ಆಗ ಆಗುವ ಆಯಾಸ ಕಡಮೆ. ಎಂದಮೇಲೆ ಅತ್ಯಂತ ಆರ್ಥಿಕ ಸೌಲಭ್ಯವುಳ್ಳ ಅವಧಾನವೆಂದರೆ ಸ್ವಾಭಾವಿಕ ರೀತಿಯ ಅವಧಾನ.

**೨. ಒತ್ತಾಯದ ಅವಧಾನ:** ಕೆಲವು ವೇಳೆ ಮಕ್ಕಳಿಗೆ ಇಷ್ಟ ವಿಲ್ಲದ ವಿಷಯದ ಕಡೆ ಅವರ ಅವಧಾನವನ್ನು ದೊರಕಿಸಿಕೊಳ್ಳಬೇಕಾಗು ತ್ತದೆ. ಮನೆಯಲ್ಲಿ ಸಿಹಿ ತಿಂಡಿ ಮಾಡುತ್ತಿರುವಾಗ ಅವರಿಗೆ ಆ ಕಡೆ ಸ್ವಾಭಾವಿಕ ಅವಧಾನ ಬಿದ್ದಿರುತ್ತದೆ. ಆದರೆ ಅವರನ್ನು ಲೆಕ್ಕಮಾಡೆಂದು ಹೇಳಿದರೆ ಅವರಿಗೆ ಇಷ್ಟವಿರುವುದಿಲ್ಲ. ಆದರೂ ಅದನ್ನು ಮಾಡಬೇಕು; ಅದರಮೇಲೂ ಅವಧಾನವನ್ನಿರಿಸಬೇಕು. ಆದರೆ ಅವರ ಸ್ವಾಭಾವಿಕ ಅವಧಾನ ತಿಂಡಿಯಮೇಲೆ! ಅಂಥ ಸ್ವಾಭಾವಿಕ ಅವಧಾನವನ್ನು ಒತ್ತಾಯದಿಂದ ಲೆಕ್ಕದ ಕಡೆ ಸೆಳೆದು ನಿಲಿಸಿಕೊಳ್ಳುವುದು ಅವರಿಗೆ ಹೆಚ್ಚು ಶ್ರಮ, ಹೆಚ್ಚು ಶಕ್ತಿ ವ್ಯಯ, ಮತ್ತು ಆಯಾಸ. ಈ ಒತ್ತಾಯದ ಅವಧಾನ ವನ್ನು ಶಾಲೆಯಲ್ಲಿ ಅನೇಕ ವಿಷಯಗಳ ಕಡೆ ಸೆಳೆಯಬೇಕಾಗುತ್ತದೆ. ಬೋಧಿಸುವ ಅನೇಕ ವಿಷಯಗಳಲ್ಲಿ ಅವರಿಗೆ ಸ್ವಾಭಾವಿಕ ಆಸಕ್ತಿ ಇರು ವುದಿಲ್ಲ. ಆದರೂ ಅವನ್ನು ಕಲಿಯಬೇಕು. ಆಗ ಅವರು ಅವಧಾನವನ್ನು ಆ ಕಡೆಗೆ ಕೇಂದ್ರೀಕರಿಸುವಂತೆ ಒತ್ತಾಯಪಡಿಸಬೇಕಾಗುತ್ತದೆ. ಇಂಥ ಒತ್ತಾಯದ ಅವಧಾನ ಸ್ವಾಭಾವಿಕ ಅವಧಾನದಷ್ಟು ಆರ್ಥಿಕವಲ್ಲ; ಲಾಭ ಪ್ರದವೂ ಅಲ್ಲ; ಅದರಿಂದ ಆಯಾಸವೂ ಹೆಚ್ಚು.

**೩. ಅರ್ಜಿತ ಅವಧಾನ:** ಯಾವುದಾದರೂ ಒಂದು ವಿಷಯದ ಕಡೆ ಮಕ್ಕಳ ಒತ್ತಾಯದ ಅವಧಾನವನ್ನೊದಗಿಸಿಕೊಳ್ಳುವುದು ಅನಿವಾರ್ಯ ವಾದರೂ, ಬಹುಕಾಲ ಒತ್ತಾಯದಿಂದಲೇ ಅದನ್ನು ದೊರಕಿಸುಕೊಳ್ಳುತ್ತ

ಹೋಗುವುದು ಮನಶ್ಶಕ್ತಿಯನ್ನು ದುಂದು ವ್ಯಯ ಮಾಡಿದಂತಾಗುತ್ತದೆ. ಹೆಚ್ಚು ಶ್ರಮವೂ ಆಯಾಸವೂ ಉಂಟಾಗುತ್ತವೆ. ಹಾಗೆ ಮಾಡಿದರೂ, ಶಿಕ್ಷಣ ದೃಷ್ಟಿಯಿಂದ ಲಾಭಪ್ರದವಲ್ಲ. ಆದ್ದರಿಂದ ಆ ಒತ್ತಾಯದ ಅವಧಾನವನ್ನು ಆದಷ್ಟು ಬೇಗ ಸ್ವಾಭಾವಿಕ ರೀತಿಯ ಅವಧಾನಕ್ಕೆ ಪರಿವರ್ತಿಸಿಕೊಳ್ಳಬೇಕು. ಅದು ಹೇಗೆ ಸಾಧ್ಯ? ತರಗತಿಯಲ್ಲಿ ಬೀಜಗಣಿತ ಪಾಠ ಮಾಡುವುದಕ್ಕೆ ಮಕ್ಕಳ ಒತ್ತಾಯ ಅವಧಾನವನ್ನು ಒದಗಿಸಿಕೊಳ್ಳಬೇಕಾಗುತ್ತದೆನ್ನುವ; ಅದು ಆರಂಭದಲ್ಲಿ ಒತ್ತಾಯದಿಂದ ಒದಗಿದ್ದರೂ ಅನಂತರವೂ ಅದೇ ರೂಪದಲ್ಲೇ ಇರುವುದು ಸರಿಯಲ್ಲ. ಬೀಜಗಣಿತದ ಮೇಲೇ ಅವರಿಗೆ ಆಸಕ್ತಿ, ಪ್ರೇಮ ಹುಟ್ಟುವಂತೆ ಮಾಡಬೇಕು. ಆಗ ಅದು ಅವರ ಆಸಕ್ತಿಯ ವಿಷಯವಾಗುತ್ತದೆ; ಅದರಿಂದ ಅವಧಾನವನ್ನು ಸ್ವಾಭಾವಿಕ ರೀತಿಯಲ್ಲಿ ಕೊಡುತ್ತಾರೆ. ಆದರೆ ಮೊದಲು ಆ ವಿಷಯದಲ್ಲಿದ್ದ ಅವರ ಅವಧಾನ ಕೃತಕವಾದುದು, ಒತ್ತಾಯದಿಂದ ಪಡೆದುದು; ಈಗ ಅದು ಸ್ವಾಭಾವಿಕ ಅವಧಾನದ ರೂಪಕ್ಕೆ ಪರಿವರ್ತನೆಯಾದಹಾಗಾಯಿತು. ಆದರೆ ಅದು ಅವರಿಗೆ ಹುಟ್ಟುಗುಣದಿಂದ ಬಂದುದಲ್ಲ: ಆರ್ಜಿಸಿಕೊಂಡದ್ದು. ಇಂಥ ಅವಧಾನವನ್ನು ಆರ್ಜಿತ ಅವಧಾನವೆಂದು ಕರೆಯಬಹುದು.

ಬೋಧನಕ್ರಮದಲ್ಲಿ ಆರ್ಜಿತ ಅವಧಾನ ಮುಖ್ಯ ಪಾತ್ರವಹಿಸುತ್ತದೆ. ನಾವು ಬೋಧಿಸಬೇಕಾದ ಪಾಠಗಳಿಗೆಲ್ಲ ಮಕ್ಕಳಿಗೆ ಸ್ವಾಭಾವಿಕ ಅವಧಾನ ಇರಲಾರದು. ಕೆಲವಕ್ಕಾದರೂ ಕೃತಕ ರೀತಿಯ ಒತ್ತಾಯದ ಅವಧಾನ ಆವಶ್ಯಕ. ಅದರಿಂದ ಮಕ್ಕಳಿಗೆ ಶ್ರಮವಾಗುವುದಾದರೂ ಆ ಕಾರ್ಯ ಅನಿವಾರ್ಯ. ಏಕೆಂದರೆ ಆ ವಿಷಯಗಳನ್ನು ಅವರು ಕಲಿಯುವಂತೆ ಮಾಡಲೇ ಬೇಕು. ಆದರೆ ಉಪಾಧ್ಯಾಯರು ಒಮ್ಮೆ ದೊರಕಿಸಿಕೊಂಡ ಒತ್ತಾಯ ಅವಧಾನವನ್ನು ಆದಷ್ಟು ಬೇಗ ಆರ್ಜಿತ ಅವಧಾನವನ್ನಾಗಿ ಮಾರ್ಪಡಿಸಿ, ಅತಿಶ್ರಮವನ್ನೂ, ದುಂದು ಮನಶ್ಶಕ್ತಿಯ ವ್ಯಯವನ್ನೂ ಕಡಮೆ ಮಾಡಬೇಕು. ಕೆಲವು ನಿಯಮಿತ ಪಠ್ಯ ವಿಷಯ, ಕೈ ಕೆಲಸ, ಉದ್ಯಮ ಮುಂತಾದವುಗಳನ್ನು ಕಲಿಸುವಾಗ ಸ್ವಾಭಾವಿಕ ಅವಧಾನ ದೊರೆಯದಿದ್ದರೂ ಆರ್ಜಿತ ಅವಧಾನವನ್ನು ಒದಗಿಸಿಕೊಳ್ಳಬಹುದು.

ಯಾವ ವಿಷಯವನ್ನೇ ಬೋಧಿಸುತ್ತಿರಲಿ, ಆ ವಿಷಯದ ಕಡೆ ಅವರ ಅವಧಾನವನ್ನು ಒತ್ತಾಯವಾಗಿ ಸೆಳೆದುಕೊಳ್ಳುವುದರಲ್ಲೇ ಉಪಾಧ್ಯಾಯರು ತೃಪ್ತಿಪಟ್ಟುಕೊಳ್ಳಬಾರದು; ಆ ವಿಷಯದಮೇಲೇ ಅವರ ಆಸಕ್ತಿ ರೂಪುಗೊಳ್ಳುವಂತೆ ಮಾಡಲು ಯತ್ನಿಸಬೇಕು. ಆಗ ಮಾತ್ರ ಅವರ ಅವಧಾನ ಆರ್ಥಿಕವೂ ಲಾಭಧಾಯಕವೂ ಆದೀತು; ಆಯಾಸವೂ ಕಡಮೆಯಾದೀತು. ಕೆಲವು ಮಕ್ಕಳು ಎಷ್ಟು ಪ್ರಯತ್ನಿಸಿದರೂ ಬಹು ಕಾಲ ಕೃತಕವಾದ ಒತ್ತಾಯದ ಅವಧಾನದಲ್ಲೇ ಇರುತ್ತಾರೆ, ಆ ವಿಷಯ ದಲ್ಲಿ ಆಸಕ್ತಿಯನ್ನು ಆರ್ಜಿಸಿಕೊಳ್ಳುವುದಿಲ್ಲ. ಅಂಥವರಿಗೆ ಸುಮ್ಮನೆ ಆ ವಿಷಯವನ್ನು ಒತ್ತಾಯ ಅವಧಾನದ ಮೂಲಕವೇ ಬೋಧಿಸುವುದು ಉಚಿತವಲ್ಲ: ಅದನ್ನು ಬಿಟ್ಟು ಬೇರೆ ವಿಷಯವನ್ನು ಆರಂಭಿಸುವುದು ಉತ್ತಮ. ಏಕೆಂದರೆ ಅ ವಿಷಯ ಅವರಿಗೆ ಹಿಡಿಸುವಂತಿಲ್ಲ.

**ಅವಧಾನವನ್ನು ಏಕಾಗ್ರತೆಯಲ್ಲಿ ನಿಲ್ಲಿಸುವುದು :** ಒಮ್ಮೆ ಪಾಠಕ್ಕೆ ಮಕ್ಕಳ ಅವಧಾನವನ್ನು ಒದಗಿಸಿಕೊಂಡಮೇಲೆ ಅದು ಆ ವಿಷಯವನ್ನು ಕಲಿಯುವವರೆಗೂ ಸಡಿಲದಂತೆ ನೋಡಿಕೊಳ್ಳಬೇಕು. ಇಲ್ಲವಾದರೆ ಅದನ್ನು ಒದಗಿಸಿಕೊಳ್ಳಲು ಪಟ್ಟ ಶ್ರಮ ವ್ಯರ್ಥ. ಅವರ ಅವಧಾನವನ್ನು ಹೇಗೇ ದೊರಕಿಸಿಕೊಂಡಿರಲಿ, ಅದನ್ನು ಏಕಾಗ್ರತೆಯಲ್ಲಿ ನಿಲಿಸಿಕೊಳ್ಳು ವುದಕ್ಕೆ ಹಲವು ಸಾಧನಗಳು ಸಹಾಯಮಾಡುತ್ತವೆ. ಅವುಗಳನ್ನಿಲ್ಲಿ ಸೂಚಿಸಲಾಗಿದೆ :

**೧. ಹವ್ಯಾಸಗಳನ್ನು ಕಡಮೆ ಮಾಡುವುದು :** ಅವಧಾನ ಒಂದು ಅಂಶದಮೇಲೆ ಮೊನೆಗೊಂಡಿದ್ದರೂ ಅದರ ಅಂಚಿನಲ್ಲಿ ಇತರ ಅಂಶಗಳೂ ಇರುತ್ತವೆ. ಬೋಧಿಸುವ ವಿಷಯಕ್ಕಿಂತ ತರಗತಿಯಲ್ಲಿರುವ ಇತರ ವಿಷಯ ಗಳು ಹೆಚ್ಚು ಆಕರ್ಷಣೀಯವಾಗಿ ಸುಳಿದುಕೊಂಡರೆ ಅವಧಾನ ಆ ಕಡೆ ಹೊರಳಿ, ಏಕಾಗ್ರತೆ ಕದಲುತ್ತದೆ. ಗೋಡೆಯ ಮೇಲಿರುವ ಬಣ್ಣ ಬಣ್ಣದ ಚಿತ್ರಗಳು, ಅಕ್ಕಪಕ್ಕದಲ್ಲಾಗುವ ಶಬ್ದಗಳು, ಕಪ್ಪುಹಲಗೆಯ ಮೇಲಿರ ಬಹುದಾದ ವಿಚಿತ್ರ ಬರವಣಿಗೆ—ಇವೆಲ್ಲ ಮಕ್ಕಳ ಅವಧಾನವನ್ನು ತಮ್ಮ ಕಡೆ ಸೆಳೆಯುವ ಹವ್ಯಾಸಗಳು. ಅವುಗಳು ಯಾವ ಕಾರಣದಿಂದಲೂ, ಅನಾ ವಶ್ಯಕವಾಗಿ ಮಕ್ಕಳ ಕಣ್ಣಿಗೆ ಬೀಳುವಂತಿರಬಾರದು. ಹೊರಗಡೆ ಇರತಕ್ಕ

ವಸ್ತುಗಳು, ಆಗತಕ್ಕ ಶಬ್ದ—ಇವೆಲ್ಲ ಅವಧಾನವನ್ನು ಕೆಡಿಸುವ ಭೌತಿಕ ಹವ್ಯಾಸಗಳು. ಹೀಗೆಯೇ ಮಾನಸಿಕವಾದ ಹವ್ಯಾಸಗಳೂ ಅವಧಾನವನ್ನು ಕದಲಿಸುತ್ತವೆ: ಒಂದಂಶದ ಮೇಲೆ ಗಮನ ಸೆಳೆದು, ಮನಸ್ಸು ಅದನ್ನು ಗಮನಿಸುತ್ತಿರುವಾಗ ಬೇರೊಂದು ಅಂಶವನ್ನು ಉಪಾಧ್ಯಾಯರು ಪ್ರತಿಪಾದಿಸಿದರೆ ಮಕ್ಕಳ ಅವಧಾನ ಕದಲುತ್ತದೆ; ಅವರ ಅವಧಾನ ಕಲಿಯಬೇಕಾಗಿರುವ ಮುಖ್ಯ ವಿಷಯದಿಂದ ಬೇರೊಂದು ಅಂಶದ ಕಡೆ ತಿರುಗುತ್ತದೆ. ಆದ್ದರಿಂದ ಒಂದು ವಿಷಯವನ್ನು ಬೋಧಿಸುವಾಗ ಆ ವಿಷಯ ಕಲಿಯುವವರೆಗೆ ಅದಕ್ಕೆ ಪ್ರತಿಸ್ಪರ್ಧಿಯಾಗುವಂತೆ ಬೇರೆ ವಿಷಯವನ್ನು ತರಬಾರದು. ಅದನ್ನು ಬೋಧಿಸಬೇಕಾಗಿದ್ದರೆ ಮೊದಲನೆಯದನ್ನು ಕಲಿತಮೇಲೆ ಆರಂಭಿಸಬೇಕು. ದೆಹಲಿ ನಗರದ ಇತಿಹಾಸವನ್ನು ವಿಮರ್ಶಿಸುತ್ತಾ, ಕುರುಕ್ಷೇತ್ರದ ಯುದ್ಧದ ವಿಷಯವನ್ನೂ ಹೇಳಬೇಕೆಂದಿಟ್ಟುಕೊಳ್ಳುವ; ಅದಕ್ಕೆ ಸಂಬಂಧಿಸಿದ ಉಪಕಥೆಗಳ ಕಡೆಗೆ ಸಾಗುವುದಾದರೆ ದೆಹಲಿಯ ಇತಿಹಾಸದ ಪ್ರಾಮುಖ್ಯತೆ ಹಿಂಬದಿಗೆ ಬೀಳುತ್ತದೆ. ಆದ್ದರಿಂದ ದೆಹಲಿಯ ಇತಿಹಾಸದ ಅಂಶಗಳೆಲ್ಲ ಮುಗಿಯುವವರೆಗೆ ಆ ಕಡೆ ತಿರುಗಬೇ ಬಾರದು. ತರಗತಿಗಳಲ್ಲಿರುವ ಚಿತ್ರಗಳೂ ಮಕ್ಕಳ ಮನಸ್ಸನ್ನು ಸೆಳೆಯಬಹುದು; ಅದರಿಂದಲೂ ಅವಧಾನ ಸಡಿಲವಾಗಬಹುದು; ಅನಾವಶ್ಯಕವಾದ ಅಂಥ ಚಿತ್ರಗಳನ್ನು ಇರಿಸಬಾರದು. ಪ್ರಶ್ನೆ ಹಾಕುವಾಗ ಒಂದುತ್ತರ ಬರುವಂತೆ ಕೇಳಬೇಕು; ಹೆಚ್ಚು ಉತ್ತರಗಳು ಬರುವಂತಿದ್ದರೆ ಅವರ ಅವಧಾನ ಎರಡಕ್ಕೂ ವಿಭಾಗವಾಗಿ ಆಲೋಚನೆ ತಕ್ಕಷ್ಟು ನಡೆಯಲಾರದು. ಯಾವುದಾದರೂ ಪದದ ಕಾಗುಣಿತವನ್ನು ತಿದ್ದುವಾಗ, ಇತರ ನ್ಯೂನತೆಗಳನ್ನು ಸರಿಪಡಿಸುವಾಗ, ಕಪ್ಪು ಹಲಗೆಯ ಮೇಲೆ ಬರೆದು ತೋರಿಸುವಾಗ ಸರಿಯಾದ ರೂಪವನ್ನು ಮಾತ್ರ ಬರೆಯಬೇಕು. ಎರಡನ್ನೂ ಬರೆಯುವುದರಿಂದ ಮಕ್ಕಳ ಅವಧಾನ ವಿಭಾಗವಾಗುತ್ತದೆ. ಹಾಗೂ ತಪ್ಪಾದ್ದನ್ನೇ ಹೆಚ್ಚು ನೆನಪಿಟ್ಟುಕೊಂಡು ಕಲಿತುಬಿಡುವುದು ಒಂದು ಮಾನವ ಸ್ವಭಾವ. ಹಾಗೆಯೇ ಮನಸ್ಸಿನಲ್ಲಿ ಇತರ ಯಾವ ರೀತಿಯ ಅನ್ಯ ವಿಷಯಗಳಾಗಲಿ ಅವಧಾನವನ್ನು ಮುಖ್ಯ ವಿಷಯದಿಂದ ಸೆಳೆಯುವಂತೆ ಸನ್ನಿವೇಶಗಳನ್ನು ತರಬಾರದು.

೨. **ವೈವಿಧ್ಯತೆಯನ್ನೊದಗಿಸಿಕೊಳ್ಳುವುದು:** ಒಂದೇ ರೀತಿಯ ವಸ್ತುವಿನ ಮೇಲೆ ಬಹುಕಾಲ ಅವಧಾನವನ್ನು ಕೇಂದ್ರೀಕರಿಸುವುದು ಸುಲಭ

ವಲ್ಲ; ಅವಧಾನ ತಾನಾಗಿಯೇ ಸಡಿಲವಾಗುತ್ತದೆ. ಅದಕ್ಕೆ ಮಾನಸಿಕ ಆಯಾಸವೇ ಕಾರಣ. ಅದೇ ವಿಷಯದಮೇಲೆ ಅವಧಾನವನ್ನು ಇನ್ನೂ ಹೆಚ್ಚು ಕಾಲ ನಿಲ್ಲಿಸಿಕೊಳ್ಳಬೇಕಾದರೆ ಸನ್ನಿವೇಶದಲ್ಲಿ ಸ್ವಲ್ಪ ಬದಲಾವಣೆ ಮಾಡಬೇಕು. ಹಾಗೆ ವೈವಿಧ್ಯತೆಯೊದಗಿಸುವುದರಿಂದ ಅವಧಾನ ಆ ವಸ್ತುವಿನ ಮೇಲೆ ಮರಳಿ ತೀಕ್ಷ್ಣಗೊಳ್ಳುವುದಲ್ಲದೆ ಏಕಾಗ್ರತೆಯೂ ಉಂಟಾಗುತ್ತದೆ. ಮೊದಲಿಂದ ಕೊನೆಯವರೆಗೂ ಒಂದೇ ಧ್ವನಿಯಲ್ಲಿ ಪಾಠಮಾಡಿದರೆ ಮಕ್ಕಳ ಅವಧಾನ ಸಡಿಲಬಹುದು; ಅಂದಂದು ಧ್ವನಿಯನ್ನು ಆವಶ್ಯಕತೆಗನುಗುಣವಾಗಿ ಬದಲಾಯಿಸುತ್ತಿದ್ದರೆ ಅವಧಾನ ನೂತನಗೊಳ್ಳುತ್ತದೆ; ತೀಕ್ಷ್ಣಗೊಂಡು ಚಂಚಲ ರಹಿತವಾಗುತ್ತದೆ.

**೩. ಸನ್ನಿವೇಶಗಳನ್ನು ತೀಕ್ಷ್ಣಗೊಳಿಸುವಿಕೆ:** ಮಕ್ಕಳು ಹೇಳುವ ಪಾಠವನ್ನು ಕೇಳದೆ ಅವಧಾನವನ್ನು ಬೇರೆ ಕಡೆಗೆ ಹರಿಸುವ ಸಂದರ್ಭ ಕಂಡುಬಂದರೆ ಉಪಾಧ್ಯಾಯರು ಗಟ್ಟಿಯಾಗಿ ಪಾಠ ಹೇಳುತ್ತಾರೆ. ಹೀಗೆ ಧ್ವನಿಯನ್ನು ತೀಕ್ಷ್ಣಗೊಳಿಸಿದಾಗ ಮಕ್ಕಳ ಅವಧಾನ ಇತರ ಕಡೆಗೆ ಚಲಿಸುವುದು ನಿಲ್ಲುತ್ತದೆ; ಪ್ರಜ್ವಲಿಸುವ ಪ್ರಭೆ ಸಣ್ಣ ಹಣತೆಗಿಂತ ಹೆಚ್ಚಾಗಿ ಅವಧಾನವನ್ನು ಸೆಳೆಯುತ್ತದೆ; ತೀವ್ರ ವರ್ಣಗಳೂ ಅಷ್ಟೆ; ಆಕಾರ ದೊಡ್ಡದಾದಾಗಲೂ ಅವಧಾನ ಆ ಕಡೆ ಹರಿಯುತ್ತದೆ; ಮುಖ್ಯ ವಿಷಯವನ್ನು ದಪ್ಪ ಅಕ್ಷರದಲ್ಲಿ ಬರೆಯುವುದೂ ಇದಕ್ಕಾಗಿಯೇ. ಜಾಹೀರಾತುದಾರರು ವಸ್ತುವಿನ ಹೆಸರನ್ನು ದಪ್ಪಕ್ಷರದಲ್ಲಿ ಮುದ್ರಿಸುವುದೂ ಅದಕ್ಕಾಗಿಯೇ.

ಹೀಗೆ ಯಾವುದರ ಮೇಲೆ ಗಮನವಿಡಬೇಕೊ ಅದರ ಹೊಳಪು, ಬಣ್ಣ, ಆಕಾರ, ಶಬ್ದ ಮುಂತಾದ ಗುಣಗಳನ್ನು ತೀಕ್ಷ್ಣಗೊಳಿಸುವುದರಿಂದ ಮಕ್ಕಳ ಅವಧಾನ ಅದರ ಕಡೆ ಚೆನ್ನಾಗಿ ಬೀಳುತ್ತದೆ. ಈ ಅಂಶವನ್ನು ಉಪಾಧ್ಯಾಯರು ಬಹು ಎಚ್ಚರಿಕೆಯಿಂದ ಅರಿತು ಉಪಯೋಗಿಸಿಕೊಳ್ಳಬೇಕು. ಚಿತ್ರವೊಂದರಲ್ಲಿ ಮಕ್ಕಳ ಗಮನಕ್ಕೆ ತರಲೆಳಸುವ ಅತಿ ಮುಖ್ಯ ಅಂಶವನ್ನು ಬಣ್ಣದಲ್ಲಿ ಬರೆಯಬಹುದು; ಆದರೆ ಅಲಂಕಾರಕ್ಕೆಂದು ಬಗೆ ಬಗೆಯ ಬಣ್ಣಗಳನ್ನು ಉಪಯೋಗಿಸುವುದರಿಂದ ಮಕ್ಕಳ ಅವಧಾನ ಛಿದ್ರವಾಗುತ್ತದೆ. ಹಾಗೆಯೇ ಪಾಠದ ಕೆಲವಂಶಗಳ ಕೆಳಗೆ ಔಚಿತ್ಯವರಿತು ಗೆರೆ ಹಾಕಿ ತೋರಿಸುವುದೂ ಉಪಯುಕ್ತವಾಗಬಹುದು. ತರಗತಿಯ ಚಿತ್ತವನ್ನು

ಏಕಾಗ್ರಗೊಳಿಸಲು ಉಪಾಧ್ಯಾಯರು ಧ್ವನಿಯನ್ನು ಎತ್ತರಿಸುವಾಗ ತುಂಬ ಎಚ್ಚರಿಕೆಯಿಂದಿರಬೇಕು. ಆಗಾಗ ಅದನ್ನು ಎತ್ತರಿಸುತ್ತಲೇ ಇದ್ದರೆ ಅದು ತನ್ನ ಪ್ರಭಾವವನ್ನೇ ಕಳೆದುಕೊಳ್ಳಬಹುದು.

**೪. ನಿರ್ದಿಷ್ಟತೆ:** ನೀಲಾಕಾಶದಲ್ಲಿ ನಿರ್ದಿಷ್ಟ ರೂಪದ ಬಿಳಿಯ ಮುಗಿಲೊಂದಿದ್ದರೆ ನಮ್ಮ ಗಮನ ಆ ಕಡೆ ಚೆನ್ನಾಗಿ ಬೀಳುತ್ತದೆ; ಅದೇ ಮುಗಿಲು ಕೆದರಿಕೊಂಡು ಹಂಚಿಹೋಗಿದ್ದರೆ ಅಷ್ಟು ಯಶಸ್ವಿಯಾಗಿ ಬೀಳಲಾರದು. ತರಗತಿಯಲ್ಲಿ ಬೋಧಿಸುವಾಗ ವಿಷಯವನ್ನು ನಿರ್ದಿಷ್ಟ ಸ್ವರೂಪದಲ್ಲಿಟ್ಟರೆ ಮಕ್ಕಳ ಅವಧಾನ ಅದರಮೇಲೆ ಕೇಂದ್ರೀಕರಿಸಬಲ್ಲದು. ಮಬ್ಬುಮಬ್ಬಾಗಿ ವಿಷಯದ ಸ್ವರೂಪವನ್ನು ತಿಳಿಸಿದರೆ, ಅಪಕ್ವವಾಗಿ ರೂಪಿಸಿದರೆ ಮನಸ್ಸು ಆ ಕಡೆ ನಿಲ್ಲದೆ ಬೇರೆ ಕಡೆಗೆ ಚಲಿಸುತ್ತದೆ. ಅಥವಾ ಅದರ ಮೇಲೆ ಅವಧಾನವನ್ನು ಮೊನೆಗೊಳಿಸಲು ಹಿಂಜರಿಯುತ್ತದೆ. ತರಗತಿಯಲ್ಲಿ ಉಪಾಧ್ಯಾಯರು ಕೇಳುವ ಪ್ರಶ್ನೆಗಳು ನಿರ್ದಿಷ್ಟವಾಗಿರಬೇಕು. ಇಲ್ಲವಾದರೆ ಮಕ್ಕಳು ಅವಧಾನವನ್ನು ಕೇಂದ್ರೀಕರಿಸಿ ಆಲೋಚಿಸಿ ಉತ್ತರ ಹೇಳಲು ಸಾಧ್ಯವಾಗುವುದಿಲ್ಲ. ಶಿಕ್ಷಕರಿಗೆ ವಿಷಯದಲ್ಲಿ ಚೆನ್ನಾಗಿ ಪಾಂಡಿತ್ಯವಿದ್ದರೆ ಮಾತ್ರ ವಿಷಯ ನಿರೂಪಣೆಯನ್ನು ನಿರ್ದಿಷ್ಟವಾಗಿ ರೂಪಿಸಬಹುದು; ಪ್ರಶ್ನೆಗಳನ್ನು ನಿಕರವಾಗಿ ಕೇಳಬಹುದು.

**೫. ಪುನರಾವರ್ತನೆ:** ಜಾಹೀರಾತುದಾರರು ತಮ್ಮ ಪದಾರ್ಥದ ಹೆಸರನ್ನು ಅನೇಕ ಸಾರಿ ಮುದ್ರಿಸುವುದುಂಟು; ಉಪಾಧ್ಯಾಯರು ಮಕ್ಕಳು ಒಮ್ಮೆ ಹೇಳಿದ್ದನ್ನು ಕಲಿಯದಿದ್ದರೆ ಪುನಃಪುನಃ ಹೇಳುವುದುಂಟು; ಪ್ರಶ್ನೆಯನ್ನು ಅರ್ಥ ಮಾಡಿಕೊಳ್ಳದಿದ್ದರೆ ಮತ್ತೆ ಕೇಳುವುದುಂಟು. ಇವುಗಳ ಉದ್ದೇಶ ಗಮನವನ್ನು ಮೊನೆಗೊಳಿಸುವುದಕ್ಕಾಗಿಯೇ. ಅವಧಾನವನ್ನು ದೊರಕಿಸಿಕೊಳ್ಳಲೂ, ಅದನ್ನು ಏಕಾಗ್ರತೆಯಲ್ಲಿರಿಸಿಕೊಳ್ಳಲೂ ಪುನರಾವರ್ತನೆ ಸಹಾಯವಾದರೂ ಅದನ್ನು ಅತಿಯಾಗಿ ಉಪಯೋಗಿಸಬಾರದು. ಹೇಳಿದ್ದನ್ನು ಮರಮರಳಿ ಹೇಳುತ್ತಿದ್ದರೆ ಮಕ್ಕಳ ಅವಧಾನ ದೊರೆಯುವ ಬದಲು 'ಎಂದಿದ್ದರೂ ಪುನಃ ಹೇಳೇ ಹೇಳುತ್ತಾರೆ' ಎಂಬ ನಿರ್ಲಕ್ಷ್ಯ ಆರಂಭವಾಗಬಹುದು; ಪ್ರಶ್ನೆಗಳನ್ನು ಮತ್ತೆ ಮತ್ತೆ ಕೇಳುವುದರಿಂದ 'ಬೇಕಾದರೆ ಇನ್ನೊಂದುಸಲ ಪ್ರಶ್ನೆಯನ್ನು ಕೇಳುತ್ತಾರೆ' ಎಂದು ಅದಕ್ಕೆ

ಉತ್ತರ ಹುಡುಕದೆಯೂ ಇದ್ದು ಬಿಡಬಹುದು. ಅವಶ್ಯಕತೆಯರಿತು ಒಮ್ಮೆ ಪುನರಾವರ್ತನೆ ಮಾಡಿದರೆ ಸಾಕು.

**೬. ಆಸಕ್ತಿ:** ಅವಧಾನವನ್ನು ಸುಲಭವಾಗಿ ದೊರಕಿಸಿಕೊಳ್ಳುವುದಕ್ಕೂ, ಏಕಾಗ್ರತೆಯಲ್ಲಿರಿಸುವುದಕ್ಕೂ ನೆರವಾಗುವ ಸಾಧನಗಳಲ್ಲಿ ಅತಿ ಮುಖ್ಯವೂ ಸ್ವಾಭಾವಿಕವೂ ಆದುದು ಹುಟ್ಟುಗುಣವಾಗಿ ಬಂದಿರುವ ಆಸಕ್ತಿ. ಹಲವರು ಇದನ್ನು ಅವಧಾನವೆಂದು ತಪ್ಪಾಗಿ ಭಾವಿಸುವರು. ಅವಧಾನ ಪ್ರವಹಿಸುವ ಮಾರ್ಗವನ್ನು ನಿಷ್ಕರ್ಷಿಸುವ ಮನೋಭಾವ ಆಸಕ್ತಿ. ಹಿಂದೆ ವಿವರಿಸಿರುವ ಸ್ವಾಭಾವಿಕ ಅವಧಾನಕ್ಕೆ ಈ ಆಸಕ್ತಿಯೇ ಆಧಾರ. ಹಾಗೆಯೇ ಆರ್ಜಿತ ಅವಧಾನದಲ್ಲೂ ಕೂಡ; ಆದರೆ ಮೊದಲನೆಯದರಲ್ಲಿ ಅದು ಸ್ವಾಭಾವಿಕ ರೀತಿಯದು; ಎರಡನೆಯದರಲ್ಲಿ ಆರ್ಜಿತ ರೀತಿಯದು. ಮ್ಯಾಕ್ಡೂಗಲ್‌ರವರು ಹೇಳುವಂತೆ 'ಆಸಕ್ತಿ ಅವಧಾನದ ಸ್ಥಾವರ ರೂಪ; ಅವಧಾನ ಆಸಕ್ತಿಯ ಕಾರ್ಯಸ್ವರೂಪ.' ಆಸಕ್ತಿ ಕಾರ್ಯರೂಪಕ್ಕೆ ಬಂದಾಗ ಅವಧಾನವೆನ್ನುತ್ತೇವೆ; ಕಾರ್ಯರೂಪಕ್ಕೆ ಬಾರದೆ ಅಡಗಿರುವ ಅವಧಾನವೇ ಆಸಕ್ತಿ. ಕೌತುಕ, ರಚನೆ, ಹೋರಾಟ, ಸಂಘಜೀವನಾಭಿಲಾಷೆ ಮೊದಲಾದವು ಹುಟ್ಟುಗುಣಗಳ ಆಸಕ್ತಿಗಳು. ಕೆಲವು ಆಸಕ್ತಿಗಳು ಭೀತಿಯಿಂದಲೂ, ಮತ್ತೆ ಕೆಲವು ಆಹಾರಾನ್ವೇಶಣೆಯಿಂದಲೂ ಹುಟ್ಟುತ್ತವೆ; ಅವೆಲ್ಲ ವಂಶಗತವಾಗಿ ಬರುವ ಸ್ವಾಭಾವಿಕ ಆಸಕ್ತಿಗಳು. ಜೊತೆಗೆ ಆಧುನಿಕ ಮಾನವನು ಹಲವು ಕೃತಕ ರೀತಿಯ ಆಸಕ್ತಿಗಳನ್ನೂ ಆರ್ಜಿಸಿಕೊಂಡಿರುವನು. ಅವು ನಮ್ಮ ಮನಸ್ಸಿನ ಸಂಸ್ಕರಣದಿಂದ ಬರತಕ್ಕವು. ಭಿನ್ನವ್ಯಕ್ತಿಯೊಡನೆ ಇರುವ ಸಂಪರ್ಕ, ಸಾಮಾಜಿಕ ಆವಶ್ಯಕತೆ, ಸುತ್ತಮುತ್ತಲಿನ ಸನ್ನಿವೇಶ—ಇವು ನಮ್ಮ ಆರ್ಜಿತ ಆಸಕ್ತಿಗಳನ್ನು ರೂಪಿಸಬಲ್ಲವು. ಕೃತಕ ರೀತಿಯ ಈ ಆರ್ಜಿತ ಆಸಕ್ತಿಗಳೂ ಸ್ವಾಭಾವಿಕ ಆಸಕ್ತಿಯಷ್ಟೇ ಬಲವಾಗಿ ಅವಧಾನವನ್ನು ಕೇಂದ್ರೀಕರಿಸುವಂತೆ ಮಾಡಬಲ್ಲವು. ನಾವು ವಸ್ತುಪ್ರದರ್ಶನಾಲಯವೊಂದಕ್ಕೆ ಹೋದಾಗ ಯಾವುದರಲ್ಲಿ ಆಸಕ್ತಿಯನ್ನು ಹೊಸದಾಗಿ ಬೆಳಸಿಕೊಂಡಿರುತ್ತೇವೋ, ಆ ವಸ್ತುವಿನ ಕಡೆಗೆ ನಮ್ಮ ಅವಧಾನ ಧಾವಿಸುತ್ತದೆ: ಚಿತ್ರಕಾರರು ಚಿತ್ರಕಲಾ ಪ್ರದರ್ಶನದ ಕಡೆಗೂ, ಸಾಹಿತಿಯೊಬ್ಬನು ನೂತನ ಪುಸ್ತಕಗಳ ಕಡೆಗೂ, ಯಂತ್ರವಿಜ್ಞಾನಿಯೊಬ್ಬನು

ಯಂತ್ರ ಪ್ರದರ್ಶನದ ಕಡೆಗೂ ಗಮನ ಕೊಡುತ್ತಾರೆ. ಹಾಗೆಯೇ ನಮ್ಮ ಪೂರ್ವ ಪರಿಚಯವೂ ನಮ್ಮ ಆಸಕ್ತಿಯ ಸ್ವರೂಪವನ್ನು ನಿಷ್ಕರ್ಷಿಸಬಲ್ಲದು. ಒಬ್ಬ ಸಾಹಿತಿಯ ಕೆಲವು ಪುಸ್ತಕಗಳನ್ನು ಓದಿ ಆನಂದಿಸಿದ್ದು ಪುಸ್ತಕಭಂಡಾರಕ್ಕೆ ಹೋದಾಗ ಆ ಸಾಹಿತಿಯ ಮತ್ತೊಂದು ಕೃತಿ ಕಂಡರೆ ಕೂಡಲೇ ಆ ಕಡೆ ಗಮನಹೋಗುತ್ತದೆ. ಇಲ್ಲದಿದ್ದರೆ ಅದು ಎಂಥ ಒಳ್ಳೆಯ ಪುಸ್ತಕವಾದರೂ ಅಷ್ಟು ಆಸಕ್ತಿ ಮೂಡುವುದಿಲ್ಲ. ನಮ್ಮ ಸನ್ನಿವೇಶ ಮತ್ತು ಪೂರ್ವ ಪರಿಚಯಗಳು ಆಸಕ್ತಿಯ ಸ್ವರೂಪವನ್ನು ನಿಷ್ಕರ್ಷಿಸುವಂತೆ ನಮಗೆ ದೊರೆತಿರುವ ಸಂಸ್ಕರಣ ಮತ್ತು ವೃತ್ತಿಗಳೂ ನಿಷ್ಕರ್ಷಿಸುತ್ತವೆ. ವಿಹಾರವನವೊಂದರಲ್ಲಿ ಒಂದೇ ಕಡೆ ಒಬ್ಬ ಸೈನಿಕ, ಒಬ್ಬ ವರ್ತಕ, ಒಬ್ಬ ಕವಿ ಕುಳಿತಿರುವಾಗ ನೂತನ ಯುದ್ಧ ಆರಂಭವಾಯಿತೆಂದು ವಾರ್ತೆ ಪ್ರಕಟವಾಯಿತೆನ್ನುವ; ತಕ್ಷಣ ಮೂವರ ಮನಸ್ಸೂ ಒಂದೊಂದು ವಿಷಯದ ಕಡೆ ಆಸಕ್ತಿ ವಹಿಸುತ್ತದೆ. ಸೈನಿಕನಿಗೆ ಯುದ್ಧಕ್ಕೆ ಹೊರಡಬೇಕಾಗಬಹುದೆಂಬ ವಿಷಯದಮೇಲೆ ಗಮನ; ವರ್ತಕನಿಗೆ ತನ್ನ ಉದ್ಯಮದಲ್ಲಾಗಬಹುದಾದ ಏರುಪೇರುಗಳಮೇಲೆ ಆಸಕ್ತಿ; ಕವಿಗೆ ಅದರಿಂದಾಗಬಹುದಾದ ಅನರ್ಥವನ್ನು ಕುರಿತು ಕವಿತೆ ರಚಿಸುವ ಕಾರ್ಯದಲ್ಲಿ ಆಸಕ್ತಿ. ಹೀಗೆ ಆರ್ಜಿತ ಆಸಕ್ತಿ ಅವರವರ ಶಿಕ್ಷಣ ಮತ್ತು ಉದ್ಯೋಗಗಳನ್ನೂ ಅವಲಂಬಿಸಿ ನಿರ್ಧರವಾಗುತ್ತದೆ. ಹಾಗೆಯೇ ಸಂಘಜೀವನದ ಮೂಲಕವೂ ನಮ್ಮ ದೃಷ್ಟಿಧ್ಯೇಯಗಳೂ, ಮನೋಭಾವಗಳೂ ರೂಪುಗೊಳ್ಳುತ್ತವೆ; ಮೊದಮೊದಲು ನಮಗಿಷ್ಟವಿಲ್ಲದಿದ್ದರೂ ಆ ರೀತಿಯ ಹೊಸ ಆಸಕ್ತಿಗಳನ್ನು ಸಂಘಜೀವನ ಕಲಿಸುತ್ತದೆ; ಮನೆಮಠಗಳ ಅಲಂಕಾರ, ಉಡುಪಿನ ಸ್ವರೂಪ, ನಡೆನುಡಿಗಳ ರೀತಿ—ಇವೆಲ್ಲದರಮೇಲೂ ನಮಗಿರುವ ಆಸಕ್ತಿ ಆ ಮೂಲಕವೇ ರೂಪುಗೊಂಡದ್ದು. ಮೊದಲು ಎಲ್ಲರಂತಿರಬೇಕಲ್ಲಾ ಎಂಬ ಕಟ್ಟಿಗೆ ಬಿದ್ದು ಅವನ್ನು ಅನುಸರಿಸಿದರೂ ಕ್ರಮ ಕ್ರಮವಾಗಿ ಅವುಗಳ ಮೇಲೆ ನಮ್ಮ ಆಸಕ್ತಿ ಆರಂಭವಾಗುತ್ತದೆ. ಆಗ ಅದು ಸ್ವಾಭಾವಿಕ ಆಸಕ್ತಿಯಿದ್ದಂತೆಯೇ ತೋರುತ್ತದೆ. ಎಂದಮೇಲೆ, ಅವಧಾನ ಮೂರು ವಿಧವಾಗಿರುವಂತೆ ಆಸಕ್ತಿಯೂ ಮೂರು ರೀತಿಯಾಗಿರುವುದು ಸ್ಪಷ್ಟಪಡುತ್ತದೆ: ಹುಟ್ಟುಗುಣಗಳ ಮೂಲಕ ಬರುವ ಸ್ವಾಭಾವಿಕ ಆಸಕ್ತಿ, ಹಲವಾರು ಕಾರಣಗಳಿಂದ ಆರಂಭವಾಗುವ ಒತ್ತಾಯ ರೀತಿಯ ಆಸಕ್ತಿ, ಕೊನೆಗೆ ಅದು ಸ್ಥಿರಪಟ್ಟಾಗ ಆಗುವ ಪರಿವರ್ತಿತ ಆಸಕ್ತಿ (ಆರ್ಜಿತ ಆಸಕ್ತಿ).

ಮಕ್ಕಳಿಗೆ ಚಿಕ್ಕಂದಿನಲ್ಲಿ ಸಮಾಜ ಪರಿಜ್ಞಾನ ಅಷ್ಟಾಗಿ ಇಲ್ಲದಿರುವುದರಿಂದ ಅವರಲ್ಲಿ ಸ್ವಾಭಾವಿಕ ಆಸಕ್ತಿಯೊಂದೇ ಪ್ರಧಾನವಾಗಿರುತ್ತದೆ. ಕುತೂಹಲ, ಆಟ, ರಚನೆ, ಸಂಗ್ರಹ, ಹೋರಾಟ ಮುಂತಾದವುಗಳ ಮೂಲಕ ಬರುವ ಆಸಕ್ತಿಯನ್ನು ಪೂರ್ಣವಾಗಿ ಉಪಯೋಗಿಸಿಕೊಂಡು ಶಿಕ್ಷಣಕೊಡಬೇಕು. ಶಿಶುವಿಹಾರಗಳಲ್ಲೂ, ಪ್ರಾಥಮಿಕ ಶಾಲೆಗಳಲ್ಲೂ ಆ ಆಸಕ್ತಿಗಳನ್ನನುಸರಿಸಿ ಚಟುವಟಿಕೆಯ ಕಾರ್ಯಕ್ರಮವನ್ನು ಏರ್ಪಡಿಸಬೇಕು. ಮೇಲ್ವರ್ಗದ ಶಿಕ್ಷಣ ಸಂಸ್ಥೆಗಳಲ್ಲಿ ಈ ಸ್ವಾಭಾವಿಕ ಆಸಕ್ತಿಗಳ ಪಾತ್ರ ಕಡಮೆಯಾಗುತ್ತ ಬರುತ್ತದೆ. ಅಲ್ಲಿ ಹಲವು ವಿಷಯಗಳಲ್ಲಿ ಒತ್ತಾಯ ಆಸಕ್ತಿಯನ್ನು ಹುಟ್ಟಿಸಬೇಕಾಗುತ್ತದೆ. ಬೀಜಗಣಿತ, ರೇಖಾಗಣಿತ ಮುಂತಾದ ವಿಷಯಗಳಲ್ಲಿ ಮೊದಲು ಒತ್ತಾಯ ರೀತಿಯ ಆಸಕ್ತಿಯನ್ನು ಒದಗಿಸಿಕೊಂಡರೂ, ಎಲ್ಲರೂ ಅದನ್ನು ಮಾಡುತ್ತಿರುವುದನ್ನು ಕಂಡು ಆ ವಿಷಯದಲ್ಲಿ ಆರ್ಜಿತ ಆಸಕ್ತಿ ಹುಟ್ಟುತ್ತದೆ. ತರಗತಿಯಲ್ಲಿ ಯಾವ ವಿಷಯವನ್ನೇ ಬೋಧಿಸಲಿ, ಅದು ಜೀವನಕ್ಕೆ ಸಂಬಂಧಿಸಿದ್ದೆಂಬುದನ್ನು ಅವರಿಗೆ ಮನದಟ್ಟು ಮಾಡಿಕೊಟ್ಟರೆ ಆಸಕ್ತಿಯಿಂದ ಅದನ್ನು ಕಲಿಯುವರು. ಅದರಿಂದಲೇ ಪಾಠಾರಂಭದಲ್ಲಿ ಅಂದಿನ ಸಮಸ್ಯೆಯನ್ನು ಅವರದನ್ನಾಗಿ ಮಾಡಲು ಯತ್ನಮಾಡುವುದು. ಸಾಮೂಹಿಕವಾಗಿ ಅಭ್ಯಾಸವನ್ನಾಗಲಿ, ಕೈಕೆಲಸವನ್ನಾಗಲಿ, ಆಟಗಳನ್ನಾಗಲಿ ಏರ್ಪಡಿಸುವುದರಿಂದ ಎಲ್ಲರೂ ಮಾಡುವರೆಂದು ಆಸಕ್ತಿಯಿಲ್ಲದ ಮಕ್ಕಳೂ ನೂತನ ಆಸಕ್ತಿಯನ್ನು ಬೆಳಸಿಕೊಂಡು ಕಾರ್ಯಮುಖರಾಗುವರು.

ಒಟ್ಟಿನಲ್ಲಿ ಶಿಕ್ಷಕರು ಮಕ್ಕಳ ಹುಟ್ಟುಗುಣಗಳನ್ನೂ ಅವುಗಳ ಮೂಲಕ ಬಂದಿರುವ ಆಸಕ್ತಿಗಳನ್ನೂ ತಿಳಿದಿರಬೇಕು; ಸಮಾಜ ಜೀವನದಿಂದ ಅವರು ಆರ್ಜಿಸಿಕೊಂಡಿರುವ ಆಸಕ್ತಿಗಳನ್ನೂ ಪರಿಚಯಮಾಡಿಕೊಳ್ಳಬೇಕು; ಅವೆರಡು ಅಂಶಗಳನ್ನೂ ಗಮನದಲ್ಲಿರಿಸಿಕೊಂಡು ಅವರ ಅವಧಾನವನ್ನು ಪಾಠಗಳಿಗೆ ಒದಗಿಸಿಕೊಳ್ಳಲು ಯತ್ನಿಸಬೇಕು.

## ೫. ಬಿಂಬ ಕಲ್ಪನೆ

ಇಂದ್ರಿಯಗಳ ಮೂಲಕ ಹೊರಪ್ರಪಂಚದ ಸ್ವರೂಪ ನಮ್ಮ ಮನಸ್ಸಿಗೆ ಗೋಚರಿಸುತ್ತದೆ. ಒಬ್ಬ ಹೊಸಬನನ್ನು ನೋಡಿದಾಗ ಅವನ ಸ್ವರೂಪ

ಕಣ್ಣುಗಳ ಮೂಲಕ ಮನಸ್ಸನ್ನು ಮುಟ್ಟುತ್ತದೆ. ಆಗ ಆ ವ್ಯಕ್ತಿಯ ಪ್ರತ್ಯಕ್ಷಾನುಭವ ನಮಗಾಗುತ್ತದೆ. ಅವನೂ ನಮ್ಮ ಮುಂದೆ ಇರುತ್ತಾನೆ; ಅವನ ಸ್ವರೂಪದ ಪ್ರತ್ಯಕ್ಷಾನುಭವ ಆ ಮೂಲಕ ಮನಸ್ಸಿಗೆ ಈಕ್ಷಣದ ಮೂಲಕ ಉಂಟಾಗಿದೆ. ಆ ವ್ಯಕ್ತಿ ಹೊರಟುಹೋದರೂ ಆಗ ಆದ ಪ್ರತ್ಯಕ್ಷಾನುಭವ ಅಳಿಸಿಹೋಗುವಂತಿಲ್ಲ: ನಮ್ಮ ಮನಸ್ಸಿನಲ್ಲಿ ಗುರುತಾಗಿ ನಿಲ್ಲುತ್ತದೆ; ಆ ವ್ಯಕ್ತಿ ನಮ್ಮ ಮುಂದೆ ಇಲ್ಲದಿದ್ದರೂ, ನಮ್ಮ ಮನಸ್ಸಿನಲ್ಲಿ ಚಿತ್ರಿತವಾಗುತ್ತಾನೆ. ಅಂಥ ಮನೋಕಲ್ಪನೆಯೇ ಬಿಂಬ. ಪ್ರತ್ಯಕ್ಷಾನುಭವ ಆಗಬೇಕಾದರೆ ಆ ವ್ಯಕ್ತಿ ನಮ್ಮ ಮುಂದಿರಲೇಬೇಕು. ಬಿಂಬಕ್ಕಾದರೆ ಅನಾವಶ್ಯಕ: ಹಿಂದೆ ನೋಡಿದ್ದುದೇ ಸಾಕು. ಆದರೆ ಪ್ರತ್ಯಕ್ಷಾನುಭವದಿಂದ ಆಗುವಷ್ಟು ನಿರ್ದಿಷ್ಟ ಪರಿಚಯ ಬಿಂಬದಿಂದಾಗುವುದಿಲ್ಲ: ಅದು ಮಬ್ಬು ಮಬ್ಬಾಗಿರುತ್ತದೆ. ಜೊತೆಗೆ, ಪ್ರತ್ಯಕ್ಷಾನುಭವದಿಂದ ನಮ್ಮ ವರ್ತನೆ, ನಡೆನುಡಿಗಳಲ್ಲಾಗುವ ಬದಲಾವಣೆ ಬಿಂಬದಿಂದ ಆಗಲಾರದು. ಹುಲಿಯನ್ನು ಪ್ರತ್ಯಕ್ಷ ಕಂಡರೆ ಹೆದರುತ್ತೇವೆ; ಅದರ ಬಿಂಬದಿಂದ ಹಾಗಾಗುವುದಿಲ್ಲ.

ಮೇಲೆ ವಿವರಿಸಿರುವುದು ನೋಟದಿಂದ ನಮ್ಮ ಮನಸ್ಸಿಗಾಗುವ ಪ್ರತ್ಯಕ್ಷಾನುಭವದಿಂದ ಉಂಟಾಗುವ ಬಿಂಬ. ಅದನ್ನು ದೃಶ್ಯ ಬಿಂಬವೆನ್ನಬಹುದು. ಹಾಗೆಯೇ, ಕೇಳಿದ ಶಬ್ದವೊಂದರ ಪ್ರತ್ಯಕ್ಷಾನುಭವವಾಗಿ ಉಂಟಾದ ಬಿಂಬಕ್ಕೆ ಶ್ರವಣಬಿಂಬವೆನ್ನಬಹುದು. ಸ್ಪರ್ಶನ ಬಿಂಬ ವಸ್ತುಗಳನ್ನು ಮುಟ್ಟಿದಾಗ ಬಂದುದು; ರುಚಿ ನೋಡಿದಾಗ, ವಾಸನೆ ನೋಡಿದಾಗ ಬರುವ ಬಿಂಬಗಳೂ ಉಂಟು. ಇವೆಲ್ಲ ಜ್ಞಾನೇಂದ್ರಿಯಗಳ ಮೂಲಕ ಆಗತಕ್ಕ ಬಿಂಬಗಳು. ಯಾವ ಜ್ಞಾನೇಂದ್ರಿಯದ ಮೂಲಕ ಆ ಬಿಂಬ ಆಗಿದೆಯೋ ಆ ಜ್ಞಾನದ ಹೆಸರೇ ಆ ಬಿಂಬಕ್ಕೆ ಬರುತ್ತದೆ. ಪದಾರ್ಥಗಳ ಪ್ರತ್ಯಕ್ಷಾನುಭವ ಇಂದ್ರಿಯಗಳ ಮೂಲಕ ಆಗುವುದರ ಜೊತೆಗೆ ಪದಗಳಿಂದಲೂ ಆಗುವುದುಂಟು. 'ಶಂಕರಮೂರ್ತಿ ಶೂರ' ಎಂಬ ಪದಗಳನ್ನು ಕೇಳಿದಾಗ ಅವನ ಗುಣ ನಮ್ಮ ಮನಸ್ಸಿನಲ್ಲಿ ಪ್ರತ್ಯಕ್ಷಾನುಭವ ಹುಟ್ಟಿಸಬಲ್ಲದು. ಇನ್ನೊಮ್ಮೆ ಆ ಪದಗಳನ್ನು ಕೇಳದಿದ್ದರೂ ಆ ಚಿತ್ರವನ್ನು ಕಲ್ಪನೆ ಮಾಡಿಕೊಳ್ಳಬಹುದು. ಅದು ಪದಗಳಿಂದ ಬಂದ ಬಿಂಬ. ಹಾಗೆಯೇ ನರ್ತಕನ ಕೆಲವು ಭಂಗಿಗಳನ್ನು ನೋಡಿದಾಗ ಆ ಭಂಗಿಗಳ ಭಾವ ನಮ್ಮ

ಮನಸ್ಸಿನಲ್ಲಿ ಪ್ರತ್ಯಕ್ಷಾನುಭವ ಹುಟ್ಟಿಸುತ್ತದೆ. ಆಮೇಲೆ ನರ್ತಕನಿಲ್ಲದಿದ್ದರೂ ಆ ಭಾವದ ಬಿಂಬ ನಮಗಾಗುತ್ತದೆ; ಆ ಭಂಗಿಯನ್ನು ಅನುಕರಿಸುವುದೇ ಅದಕ್ಕೆ ಕಾರಣ. ಬಿಂಬ ಯಾವ ರೀತಿಯಲ್ಲೇ ಮೂಡಿರಲಿ, ಅದಕ್ಕೆ ಆಧಾರ ಮನಸ್ಸು ಪಡೆದುಕೊಂಡ ಪ್ರತ್ಯಕ್ಷಾನುಭವ; ಆ ಪ್ರತ್ಯಕ್ಷಾನುಭವಕ್ಕೆ ಆಧಾರ ನಿಜವಾದ ವಸ್ತು (ಪ್ರತ್ಯಕ್ಷ). ಆದ್ದರಿಂದ ವ್ಯಕ್ತಿಯೊಬ್ಬನಿಗೆ ಬಿಂಬ ಸಿದ್ಧಿಸುವ ಕ್ರಮವನ್ನು ಈ ರೀತಿಯಲ್ಲಿ ವಿವರಿಸಬಹುದು :

ವಸ್ತು——ಪ್ರತ್ಯಕ್ಷಾನುಭವ——ಬಿಂಬ

ಮಕ್ಕಳ ಮತ್ತು ದೊಡ್ಡವರ ಬಿಂಬಗಳ ಸ್ವರೂಪದಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಸಾಮಾನ್ಯವಾಗಿ ಮಕ್ಕಳಲ್ಲಿ ವಸ್ತುವಿನ ಬಿಂಬಗಳೇ ಹೆಚ್ಚು; ಶಬ್ದಬಿಂಬಗಳೂ ಆಗುವುವು. ಅನೇಕ ವೇಳೆ ನಿಜವಾದ ವಸ್ತುವಿಗೂ ಬಿಂಬಕ್ಕೂ ವ್ಯತ್ಯಾಸವೇ ಅವರಿಗೆ ಗೊತ್ತಾಗುವುದಿಲ್ಲ. ಹುಲಿಯೊಂದರ ಬಿಂಬವನ್ನೇ ನಿಜವಾದ ಹುಲಿಯೆಂದು ಭಾವಿಸಿ ಅನೇಕ ವೇಳೆ ಭ್ರಮಿಸುವರು. ರಾತ್ರಿ ವೇಳೆ ಬೆಚ್ಚುವಾಗ ಅಂಥ ಭಯಂಕರ ಸನ್ನಿವೇಶಗಳ ಬಿಂಬ ಸುಳಿದು ಅದನ್ನು ನಿಜವಾದುದೇ ಎಂದು ಭಾವಿಸಿ ಹಾಗೆ ವರ್ತಿಸುವರು. ದೊಡ್ಡವರಲ್ಲಿ ಬಿಂಬಗಳು ಅಷ್ಟು ಹೆಚ್ಚಾಗಿ ಅವರ ವರ್ತನೆಯನ್ನು ಬದಲಾಯಿಸಲಾರವು. ಮಕ್ಕಳಲ್ಲಿ ಬಿಂಬಗಳು ನಿಜವಾದ ವಸ್ತುವೇ ಮುಂದೆ ಬಂದಷ್ಟು ತೀವ್ರವಾಗಿ ಭಾವಿಸಿ ವರ್ತಿಸುವಂತೆ ಮಾಡುವುವು: ಬೊಂಬೆಯನ್ನು ಮಾತಾಡಿಸಲು ಯತ್ನಿಸುವ ಅವರ ವರ್ತನೆ ಈ ಅಂಶವನ್ನು ಸ್ಪಷ್ಟಪಡಿಸುತ್ತದೆ. ಅದೂ ನಿಜವಾದ ಒಂದು ಮಗುವೇ ಎಂದು ಅವರ ಭಾವನೆ. ಭಯಂಕರ ವಸ್ತುಗಳನ್ನು ನೋಡಿದ ಅನಂತರವೂ ಅದರ ಬಿಂಬ ಮನಸ್ಸಿನಲ್ಲಿರುವುದರಿಂದ ಮಕ್ಕಳು ಆಗಾಗ ಬೆಚ್ಚುವರು. ಆದರಿಂದ ಭೀತಿಹುಟ್ಟಿಸತಕ್ಕವನ್ನು ಅವರಿಗೆ ಆಗ ತೋರಿಸಬಾರದು.

ಬೇರೆ ಬೇರೆ ಮಕ್ಕಳು ಬೇರೆ ಬೇರೆ ರೀತಿಯ ಬಿಂಬಗಳನ್ನು ಪಡೆಯುವ ಶಕ್ತಿಯುಳ್ಳವರಾಗಿರಬಹುದು. ಕೆಲವರಿಗೆ ದರ್ಶನ ಬಿಂಬ ಚೆನ್ನಾಗಿ ಆದರೆ ಇನ್ನು ಕೆಲವರಿಗೆ ಶ್ರವಣ ಬಿಂಬ ಚೆನ್ನಾಗಿ ಆಗಬಲ್ಲದು; ಮತ್ತೆ ಕೆಲವರು ಸ್ಪರ್ಶನ ಬಿಂಬ ಚೆನ್ನಾಗಿ ಮಾಡಿಕೊಳ್ಳಬಲ್ಲರು; ಹೀಗೆ ಬಿಂಬವನ್ನು ಪಡೆಯುವ ಶಕ್ತಿ ಎಲ್ಲರಿಗೂ ಇದ್ದರೂ ಅದನ್ನು ಪಡೆಯುವ ರೀತಿ

ವ್ಯತ್ಯಾಸವಿರುತ್ತದೆ. ಮಕ್ಕಳ ಈ ಭಿನ್ನ ಸ್ವಭಾವವನ್ನು ಉಪಾಧ್ಯಾಯರು ಪರಿಚಯಮಾಡಿಕೊಂಡು, ಆಯಾ ಮಕ್ಕಳಿಗೆ ಅನುಕೂಲಿಸುವಂತೆ ಬೋಧನ ಕಾರ್ಯವನ್ನು ಮಾಡಬೇಕು. ಜ್ಞಾನೇಂದ್ರಿಯಗಳ ಪಟುತ್ವ ಬಿಂಬಗಳನ್ನು ರೂಪಿಸಲು ತುಂಬ ಸಹಾಯ ಮಾಡುತ್ತದೆ. ಕಿವುಡ ಮಕ್ಕಳು ಶ್ರವಣ ಬಿಂಬ ವನ್ನು ಪಡೆಯುವಂತಿಲ್ಲ; ಕುರುಡರಿಗೆ ದರ್ಶನ ಬಿಂಬ ದೊರೆಯುವಂತಿಲ್ಲ. ಎಂದರೆ ಯಾವ ಜ್ಞಾನೇಂದ್ರಿಯ ಚೆನ್ನಾಗಿ ಕೆಲಸ ಮಾಡುತ್ತದೋ ಅದರ ಮೂಲಕ ಆಗುವ ಬಿಂಬ ಸ್ಪಷ್ಟವಾಗಿರುತ್ತದೆ. ಮಕ್ಕಳ ಜ್ಞಾನೇಂದ್ರಿಯಗಳ ಪಟುತ್ವವನ್ನು ಉಪಾಧ್ಯಾಯರು ಪರಿಚಯಮಾಡಿಕೊಳ್ಳುವುದು ಅಗತ್ಯ. ಒಂದು ವಿಷಯ ಅನೇಕ ಜ್ಞಾನೇಂದ್ರಿಯಗಳ ಮೂಲಕ ಬಿಂಬಿಸು ವಂತೆ ಮಾಡಿದರೆ ಮನಸ್ಸಿನಲ್ಲಿ ಅದು ಹೆಚ್ಚು ಸ್ಪಷ್ಟಗೊಳ್ಳುತ್ತದೆ. ಒಂದು ಹೊಸ ಪದವನ್ನು ಕಲಿಸುವಾಗ ಕಪ್ಪುಹಲಗೆಯ ಮೇಲೆ ಬರೆದರೆ ಅದರ ದರ್ಶನ ಬಿಂಬವಾಗುತ್ತದೆ; ಉಚ್ಚರಿಸಿದರೆ ಶ್ರವಣ ಬಿಂಬವಾಗುತ್ತದೆ. ಯಾವ ವಿಷಯ ಬೋಧಿಸುತ್ತಿರಲಿ, ಅದರ ಬಿಂಬವನ್ನು ಮಕ್ಕಳಿಗೆ ಎಷ್ಟು ರೀತಿಯಲ್ಲಿ ಮಾಡಿಕೊಡಲು ಸಾಧ್ಯವೋ ಅಷ್ಟು ರೀತಿಯಲ್ಲಿ ಮಾಡಿಕೊಡಲು ಯತ್ನಿಸಬೇಕು. ಅದರಿಂದ ಕಲಿವು ಸ್ಪಷ್ಟಗೊಳ್ಳುತ್ತದೆ.

ಬಿಂಬಕ್ಕೂ ಪ್ರತ್ಯಕ್ಷಾನುಭವಕ್ಕೂ ಹಲವು ವ್ಯತ್ಯಾಸಗಳಿವೆ. ಪ್ರತ್ಯ ಕ್ಷಾನುಭವ ಆಗಬೇಕಾದರೆ ವಸ್ತು ನಮ್ಮ ಮುಂದಿರಬೇಕು. ಆದರೆ ಆ ವಸ್ತು ಇರದಿದ್ದರೂ ಹಿಂದೆ ಆಗಿರುವ ಪ್ರತ್ಯಕ್ಷಾನುಭವದಿಂದಲೇ ಬಿಂಬ ಉಂಟಾಗು ತ್ತದೆ. ಪ್ರತ್ಯಕ್ಷಾನುಭವದಿಂದ ಆಗುವಷ್ಟು ವಸ್ತುವಿನ ಸ್ಪಷ್ಟ ಪರಿಚಯ ಬಿಂಬದಿಂದ ಆಗುವಂತಿಲ್ಲ; ಮಬ್ಬಾಗಿ ಆಗುತ್ತದೆ, ಜೊತೆಗೆ ಪ್ರತ್ಯಕ್ಷಾನು ಭವದಿಂದ ಆಗುವ ದೈಹಿಕ, ಮಾನಸಿಕ ವರ್ತನೆಗಳು ಬಿಂಬದಿಂದ ಆಗು ವುದಿಲ್ಲ. ಏಕೆಂದರೆ ಅದು ಬರೀ ಬಿಂಬ ಮಾತ್ರ ಎಂದು ನಮಗೆ ಗೊತ್ತು.

**ಬಿಂಬ ಕಲ್ಪನೆ:** ಹಿಂದೆ ಪ್ರತ್ಯಕ್ಷಾನುಭವದಿಂದ ಪಡೆದ ಬಿಂಬವನ್ನು ಪುನಃ ಮನಸ್ಸಿನಲ್ಲಿ ಚಿತ್ರಿಸಿಕೊಳ್ಳುವುದನ್ನು ಬಿಂಬ ಕಲ್ಪನೆಯೆನ್ನುತ್ತೇವೆ. ಮೊದಲು ಪಡೆದ ಬಿಂಬವೂ ಅದಕ್ಕೆ ಸಂಬಂಧಿಸಿದ ಅಂಶಗಳೂ ಆ ಮನೋ ವ್ಯಾಪಾರಕ್ಕೆ ಆಧಾರವೆನಿಸುವ ಸಾಮಗ್ರಿಗಳು. ಹಾಗೆ ಪಡೆದ ಬಿಂಬ ಕಲ್ಪನೆ ಪ್ರತ್ಯಕ್ಷಾನುಭವದ ತದ್ರೂಪವಾಗಿದ್ದರೆ ಅದು ವಾಸ್ತವಿಕ (ನೈಜ) ಬಿಂಬ

ಪಾಠ ಬೋಧಿಸುವಾಗ ಪದಗಳ ಮೂಲಕ ವಿವರಿಸುವ ವಿಷಯಗಳನು ಮಕ್ಕಳು ಮನಸ್ಸಿನಲ್ಲಿ ಚಿತ್ರಿಸಿಕೊಳ್ಳುವುದು ಈ ರೀತಿಯ ಕಲ್ಪನೆಯೇ; ಅಮೆಸಾನ್ ಕಾನನದ ವರ್ಣನೆಯನ್ನು ಪದಗಳ ಮೂಲಕ ಮಾಡಿದಾಗ ಮಕ್ಕಳು ಆ ಕಾನನದ ದರ್ಶನವನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳುವರು; ಅದು ಪದಗಳ ಮೂಲಕ ಆದ ಬಿಂಬ ಕಲ್ಪನೆ. ಪುಸ್ತಕಗಳಲ್ಲಿ ಪದಗಳ ಮೂಲಕ ವಿವರಿಸಿರುವುದನ್ನು ಮಕ್ಕಳು ಓದಿ ಗ್ರಹಿಸುವುದೂ ಈ ರೀತಿಯಲ್ಲೇ. ಯಾವ ಪಾಠವಾಗಲಿ ನಮಗೆ ಚೆನ್ನಾಗಿ ಮನದಟ್ಟಾಗಬೇಕಾದರೆ ಈ ಅನುಕರಣ ಕಲ್ಪನೆ ಅಗತ್ಯ. ಸಾಹಿತ್ಯ ಮತ್ತು ಇನ್ನಿತರ ಕಲಾ ಪಾಠಗಳನ್ನು ಮಾಡುವಾಗ ಮಕ್ಕಳು ಅವನ್ನು ಅಭಿನಂದಿಸುವಂತೆ ಮಾಡಬೇಕಾದರೆ ಈ ಕಲ್ಪನಾಶಕ್ತಿ ತುಂಬ ನೆರವಾಗುತ್ತದೆ.

**೨. ಸೃಷ್ಟ್ಯಾತ್ಮಕ ಕಲ್ಪನೆ:** ಅನುಕರಣ ರೀತಿಯ ಕಲ್ಪನೆಯ ಜೊತೆಗೆ ಸೃಷ್ಟ್ಯಾತ್ಮಕ ಕಲ್ಪನೆಯೂ ಅಗತ್ಯ. ನೂತನ ಕಾದಂಬರಿ, ಚಿತ್ರ, ಪ್ರತಿಮೆ, ಮಾದರಿ ಮುಂತಾದವನ್ನು ನಿರ್ಮಿಸುವಾಗ, ಯೋಜನೆಗಳನ್ನು ರೂಪಿಸುವಾಗ ಈ ರೀತಿಯ ಕಲ್ಪನಾಶಕ್ತಿ ಪಾತ್ರ ವಹಿಸುತ್ತದೆ. ಹಿಂದೆ ಪ್ರತ್ಯಕ್ಷಾನುಭವಗಳಿಂದ ಪಡೆದ ವಿವಿಧ ವ್ಯಕ್ತಿಗಳ, ದೃಶ್ಯಗಳ, ಸನ್ನಿವೇಶಗಳ, ಸಂದರ್ಭಗಳ ಬಿಂಬಗಳಿಂದ ಆವಶ್ಯಕವಾದ ಅಂಶಗಳನ್ನು ಆರಿಸಿಕೊಂಡು, ಸಂಬಂಧ ಕಲ್ಪಿಸಿಕೊಂಡು, ನೂತನ ಕೃತಿಗಳನ್ನು ರೂಪಿಸಬಹುದು; ಹೊಸ ಯೋಜನೆಗಳನ್ನು ತಯಾರಿಸಬಹುದು; ಸಂಶೋಧನೆಗಳನ್ನು ಮಾಡಬಹುದು.

ಹಲವರಿಗೆ ಕಲ್ಪನಾಶಕ್ತಿ ಪ್ರಬಲವಾಗಿದ್ದರೂ, ಅದು ನಿರ್ದಿಷ್ಟ ಕ್ರಮವನ್ನು ಅನುಸರಿಸುವುದಿಲ್ಲ; ಕಾರ್ಯಕಾರಣ ಜ್ಞಾನವಾಗಲಿ ಸಮನ್ವಯ ದೃಷ್ಟಿಯಾಗಲಿ ಇರುವುದಿಲ್ಲ. ವೈಭವದ ಕಲ್ಪನೆಗಳನ್ನು ಅವರು ಮಾಡಬಹುದಾದರೂ ಅವು ವಾಸ್ತವಿಕತೆಯನ್ನು ಪ್ರತಿಬಿಂಬಿಸಲಾರದ ಬರೀ ಕಲ್ಪನೆಗಳಾಗುತ್ತವೆ. ಅವಕ್ಕೆ ಸೃಜತೆ ಬರಬೇಕಾದರೆ ಮೇಲಿನ ಎಲ್ಲ ಅಂಶಗಳ ಕಡೆಗೂ ಗಮನವಿರಬೇಕು. ಆ ರೀತಿಯ ನೀತಿನಿಯಮಗಳ, ಕಾರ್ಯಕಾರಣ ಜ್ಞಾನದ, ಸಮನ್ವಯ ದೃಷ್ಟಿಯ, ಔಚಿತ್ಯದ ಅರಿವಿನ, ಅಚ್ಚುಕಟ್ಟು ಬರುವುದಾದರೆ ಮಾತ್ರ ಅದು ಉತ್ತಮ ಕಲಾಕೃತಿಯೋ ದೊಡ್ಡ ಸಂಶೋ

ಧನೆಯೇ ಆಗಿ ಪರಿಣಮಿಸುತ್ತದೆ. ಇಂಥ ಅಚ್ಚುಕಟ್ಟು ಸಮಾನ್ಯವಾಗಿ ಶಿಕ್ಷಣ ದಿಂದ ರೂಢಿಸಬೇಕು. ಅದರಿಂದಲೇ ಕಲ್ಪನೆ (ಪ್ರತಿಭೆ) ಮತ್ತು ಸಂಸ್ಕರಣ ಗಳೆರಡೂ ಮಿಳಿತಾಗ ಉತ್ತಮ ಕೃತಿ ಮೂಡುವುದೆಂದು ಹೇಳುವುದು.

**ಮಕ್ಕಳಲ್ಲಿ ಬಿಂಬಕಲ್ಪನೆ:** ಅದ್ಭುತ ಮಹಾದ್ಭುತ ಕಥೆಗಳಲ್ಲಿ ಕಲ್ಪನಾ ಶಕ್ತಿ ತುಂಬ ಕಂಡುಬರುತ್ತದೆ. ಮೀನಿನ ದೇಹವುಳ್ಳ ಮನುಷ್ಯ, ಸಿಂಹದ ತಲೆಯ ಮಾನವ, ಮನುಷ್ಯನ ತಲೆಯ ನಾಗರು–ಇಂಥ ಕೃತಿಗಳು ಕಲ್ಪನಾ ರಾಜ್ಯಕ್ಕೆ ಸೇರಿದವು. ಹಾಗೆಯೇ ಕಲ್ಪನಾ ಘಟನೆಗಳೂ ಬರುತ್ತವೆ. ಇಂಥ ವ್ಯಕ್ತಿಗಳನ್ನೂ ಸನ್ನಿವೇಶಗಳನ್ನೂ ಒಳಗೊಂಡ ಕಥೆಗಳು ಎಲ್ಲ ನಾಡಿನಲ್ಲೂ ಪ್ರಚಾರದಲ್ಲಿವೆ. ಮಕ್ಕಳಿಗೆ ಅವುಗಳನ್ನು ಕೇಳುವುದರಲ್ಲಿ ತುಂಬ ಆಸಕ್ತಿ. ಆವುಗಳನ್ನು ಓದುವುದೂ ಕೇಳುವುದೂ ಬಾಲ್ಯಾವಸ್ಥೆಯ ಕೊನೆ ಕೊನೆ ಯವರೆಗೂ ಮಕ್ಕಳಿಗೆ ತುಂಬ ಇಷ್ಟ. ಅದರಿಂದ ಅವರ ಕಲ್ಪನಾಶಕ್ತಿ ಬೆಳೆ ಯಲು ಸಹಾಯವಾಗುತ್ತದೆ. ಆದರೆ ಮಾಂಟೆಸೋರಿಯವರು ಅಂಥ ನೈಜ ವಲ್ಲದ ಕಲ್ಪನೆಗಳಲ್ಲಿ ಮಕ್ಕಳು ವಿಹರಿಸುವುದು ಸರಿಯಲ್ಲವೆಂದು ವಿಜ್ಞಾನ ರೀತಿಯ, ಜೀವನದ ನಿಜ ಸ್ವರೂಪವನ್ನು ಪ್ರತಿಬಿಂಬಿಸುವ ಕಲ್ಪನೆಗಳನ್ನೂ, ವಸ್ತುಗಳನ್ನೂ, ಸನ್ನಿವೇಶಗಳನ್ನೂ ಒಳಗೊಂಡ ಕಥೆಗಳ ಮೂಲಕ ಆಸಕ್ತಿ ಯನ್ನು ಬೆಳಸಬೇಕೆಂದು ವಾದಿಸುವರು. ಅದು ಉಚಿತವಾದ ಒಂದು ಮಾರ್ಗವಾದರೂ, ದೈವಾಂಶಪುರುಷರ, ಊರ್ವಶಿ ಅಪ್ಸರೆಯರ, ಅತಿ ಮಾನುಷ ಲೋಕಗಳ ವಿದ್ಯುದ್ಮಾಯಾ ಮಿಂಚಿನಲ್ಲಿ ಮಿನುಗಿ ಮಾರ್ಪಟ್ಟು ಹೊಳೆಯುವ ಸನ್ನಿವೇಶಗಳ ಆಗುಹೋಗನ್ನು ಒಳಗೊಂಡ ಕಥೆಗಳು ಚಿಕ್ಕ ವಯಸ್ಸಿನಲ್ಲಿ ಅವರ ಪ್ರತಿಭೆಯನ್ನು ಬೆಳಸಲು ಅತ್ಯಂತ ಪರಿಣಾಮಕಾರಿ ಯಾಗುವುದರಿಂದ ಅವುಗಳನ್ನೂ ಉಪಯೋಗಿಸಬೇಕು.

ಶಾಲಾ ಜೀವನದಲ್ಲಿ ಮಕ್ಕಳ ಕಲ್ಪನಾಶಕ್ತಿಯನ್ನು ಸೃಷ್ಟಿಮಾಡು ವಂತಿಲ್ಲದಿದ್ದರೂ, ಇರುವ ಆ ಶಕ್ತಿಯನ್ನು ಬೆಳಸಬಹುದು. ಆ ಕಾಲದಲ್ಲಿ ಮಕ್ಕಳಿಗೆ ಭಿನ್ನರೀತಿಯ ವ್ಯಕ್ತಿಗಳ, ವಸ್ತುಗಳ, ಸನ್ನಿವೇಶಗಳ, ಘಟನೆಗಳ ಬಿಂಬಗಳು ಪರಿಚಯವಾಗಬೇಕು. ಅವುಗಳನ್ನುಪಯೋಗಿಸಿಕೊಂಡು ಆಗಲೇ ಅವರು ಸೃಷ್ಟ್ಯಾತ್ಮಕ ಬಿಂಬಕಲ್ಪನೆ ಮೂಡುವುದು ಸಾಧ್ಯವಿರದಿದ್ದರೂ ಸಾಧಾರಣ ರೀತಿಯ ಕಲ್ಪನಾ ರಚನೆಯಲ್ಲಾದರೂ ನಿರತರಾಗುವಂತೆ

ಉಪಾಧ್ಯಾಯರು ಅವರನ್ನು ಪ್ರೋತ್ಸಾಹಿಸಬೇಕು. ಕಥೆಗಳನ್ನು ಹೇಳಿದ ಮೇಲೆ ನೀವೇ ಕಟ್ಟಿ ಒಂದು ಕಥೆ ಹೇಳಿ, ಎಂದು ಉತ್ತೇಜನ ಕೊಟ್ಟು ಕಟ್ಟಿಸಿ ಹೇಳಿಸಬೇಕು. ಒಂದು ಪಾಠ ಮಾಡುತ್ತಿರುವಾಗ ಇನ್ನೊಂದು ಪಾಠದಿಂದ ವ್ಯಕ್ತಿಗಳನ್ನೋ, ವಸ್ತುಗಳನ್ನೋ, ಸನ್ನಿವೇಶಗಳನ್ನೋ ನಿದರ್ಶನ ವಾಗಿ ಆರಿಸಿ ಹೇಳಲೂ ಪ್ರೋತ್ಸಾಹಿಸಬೇಕು. ಅಂಥ ಹಲವಾರು ಪಾಠಗಳ ಪರಿಚಯವಾದಮೇಲೆ ಉತ್ತಮ ವ್ಯಕ್ತಿಗಳ ಸಾಮಾನ್ಯ ಗುಣಗಳನ್ನು ಹೇಳಿಸುವುದರಿಂದಲೂ, ಶಬ್ದಗಳ ಮೂಲಕ ಪಡೆದದ್ದನ್ನು ಚಿತ್ರದ ಮೂಲಕ ಬರೆಯಿಸುವುದರಿಂದಲೂ ಅವರ ಕಲ್ಪನಾಶಕ್ತಿ ಕೃಷಿ ಹೊಂದುತ್ತದೆ. ಒಟ್ಟಿನಲ್ಲಿ ಮುಂದೆ ಮಕ್ಕಳ ಕಲ್ಪನೆ(ಪ್ರತಿಭೆ) ನೂತನ ಕೃತಿಗಳನ್ನು ನಿರ್ಮಿಸಲು ನೆರವಾಗುವಂತೆ ಆದಷ್ಟು ಹೆಚ್ಚು ಸಾಮಗ್ರಿಗಳನ್ನು ಶಾಲಾ ಜೀವನ ಒದಗಿಸಿ ಕೊಡಬೇಕು; ತಕ್ಕಮಟ್ಟಿನ ಕಲ್ಪನಾಕಾರ್ಯವನ್ನೂ ಆರಂಭಿಸಿ ಬೆಳಸಬೇಕು.

## ೬. ಜ್ಞಾಪಕಶಕ್ತಿ

**ಒಮ್ಮೆ ನೋಡಿದ ದೃಶ್ಯ, ಕೇಳಿದ ದನಿ, ಅನುಭವಿಸಿದ ರುಚಿ, ವಾಸನೆ** ಮತ್ತು ಭಾವನೆ ನಮ್ಮ ಮನಸ್ಸಿನಲ್ಲಿ ತಮ್ಮ ಗುರುತನ್ನು ನಿಲ್ಲಿಸುತ್ತವೆ. ಮುಂದೆ ಅದೇ ರೀತಿಯ ಸನ್ನಿವೇಶ ಬಂದಾಗ, ಮೊದಲು ಸೃಷ್ಟಿಯಾದ ಬಿಂಬಗಳು ಮನಸ್ಸಿನಲ್ಲಿ ಮರಳಿ ಕಲ್ಪನೆಯಾಗುತ್ತವೆ. ಇದನ್ನೇ ಹಿಂದೆ ಬಿಂಬ ಕಲ್ಪನೆಯೆಂದು ವಿವರಿಸಿರುವುದು. ಆ ಬಿಂಬ ಕಲ್ಪನೆ ಮೂಲವನ್ನು ಇದ್ದಕ್ಕಿದ್ದ ಹಾಗೆ ಅದೇ ಕ್ರಮದಲ್ಲಿ ಪ್ರತಿಬಿಂಬಿಸುವುದಾದರೆ ಅದನ್ನು ಜ್ಞಾಪಕಶಕ್ತಿಯೆನ್ನುತ್ತೇವೆ.

ಒಮ್ಮೆ ಅನುಭವಿಸಿದ ಬಿಂಬಗಳನ್ನು ಅಳಿಯದಂತೆ ಉಳಿಸಿಕೊಳ್ಳುವುದಕ್ಕೆ ಧಾರಣಶಕ್ತಿಯೆಂದು ಹೆಸರು; ಯಾವ ವಿಷಯವೇ ಆಗಲಿ ಜ್ಞಾಪಕಕ್ಕೆ ಬರಬೇಕಾದರೆ ಈ ಧಾರಣಶಕ್ತಿಯೇ ಕಾರಣ. ಕೆಲವರಿಗೆ ಆ ಶಕ್ತಿ ಹೆಚ್ಚಾಗಿರಬಹುದು; ಮತ್ತೆ ಕೆಲವರಿಗೆ ಕಡಮೆಯಿರಬಹುದು; ಇದು ಎಷ್ಟು ಹೆಚ್ಚಾಗಿದ್ದರೆ ಅಷ್ಟೂ ಚೆನ್ನಾಗಿ ಅಷ್ಟೂ ದೀರ್ಘಕಾಲದವರೆಗೆ ಜ್ಞಾಪಕಶಕ್ತಿಯಿರುತ್ತದೆ.

**ಜ್ಞಾಪಕಶಕ್ತಿಯ ಕಾರ್ಯಸ್ವರೂಪ:** ಜ್ಞಾಪಕಶಕ್ತಿ ಮುಖ್ಯವಾದ ಮನೋವ್ಯಾಪಾರಗಳಲ್ಲೊಂದು. ಅದರ ಕಾರ್ಯ ಸ್ವರೂಪವನ್ನು ನಾಲ್ಕು ಮಜಲುಗಳಾಗಿ ವಿಭಾಗಿಸಿ ಅಭ್ಯಾಸಿಸಬಹುದು:

**೧. ಪ್ರತ್ಯಕ್ಷಾನುಭವ (ವಿಷಯ ಪರಿಚಯ):** ನಮಗೆ ಆಸಕ್ತಿಯುಳ್ಳ ಯಾವುದಾದರೂ ಅಂಶದಮೇಲೆ ಗಮನಬಿದ್ದಾಗ ಅದರ ಬಿಂಬ ಮನಸ್ಸಿನಲ್ಲಿ ಮುದ್ರಿತವಾಗುತ್ತದೆ. ನಮ್ಮ ಆಸಕ್ತಿ ಎಷ್ಟು ಬಲವಾಗಿರುತ್ತದೋ ಅಷ್ಟೊ ಸ್ಪಷ್ಟವಾಗಿ ಮನಸ್ಸು ಬಿಂಬವನ್ನು ಗ್ರಹಿಸುತ್ತದೆ. ಆಸಕ್ತಿಯಿದ್ದರೆ ಆ ಕಡೆ ಗಮನ ಏಕಾಗ್ರಗೊಳ್ಳುತ್ತದೆ; ಆಗ ಕಂಡ, ಕೇಳಿದ, ಸ್ಪರ್ಶಿಸಿದ, ಅನುಭವಿಸಿದ ಮತ್ತು ಪರಿಶೀಲಿಸಿದ ಅಂಶ ನಮ್ಮ ಮನಸ್ಸಿನ ಮೇಲೆ ಹೆಚ್ಚು ಪರಿಣಾಮಕಾರಿಯಾಗುತ್ತದೆ.

**೨. ಧಾರಣೆ:** ಪ್ರತ್ಯಕ್ಷಾನುಭವಗಳಿಂದ ದೊರೆತ ಬಿಂಬಗಳನ್ನು ಉಳಿಸಿಕೊಳ್ಳುವುದೇ ಧಾರಣಶಕ್ತಿ. ಇದು ಅನುವಂಶೀಯವಾಗಿ ಬರುವ ಶಕ್ತಿ; ಒಬ್ಬೊಬ್ಬರಲ್ಲೂ ಒಂದೊಂದು ಪ್ರಮಾಣದಲ್ಲಿರುತ್ತದೆ. ಕೆಲವರು ಬಹು ಕಾಲ ಮರೆಯದಿರುವುದಕ್ಕೂ ಕೆಲವರು ಬೇಗ ಮರೆಯುವುದಕ್ಕೂ ಇದೂ ಒಂದು ಕಾರಣ. ಹಾಗೂ, ಆಶ್ಚರ್ಯ, ಭೀತಿ ಮುಂತಾದ ತೀವ್ರ ಮನೋಗತಿಗಳಲ್ಲಿ ಆದ ವಸ್ತುಗಳ ಬಿಂಬ ಬಹು ಕಾಲ ಸ್ಪಷ್ಟವಾಗಿ ನಿಲ್ಲಬಲ್ಲದು. ಎಳೆಯ ದಿನಗಳಲ್ಲಿ ಕಂಡ ಅದ್ಭುತ ಸನ್ನಿವೇಶಗಳೂ ಭಯಂಕರ ದೃಶ್ಯಗಳೂ ನಮ್ಮ ಮನಸ್ಸಿನಲ್ಲಿ ಆಜೀವವೂ ಕಟ್ಟಿ ನಿಂತಿರುತ್ತವೆ. ಹಾಗೆಯೇ ಒಂದೇ ಅನುಭವ ಅನೇಕಾವರ್ತಿ ಆಗುವುದರಿಂದಲೂ ಅದು ಮನಸ್ಸಿನಲ್ಲಿ ಬಲವಾಗಿಯೂ ಸ್ಪಷ್ಟವಾಗಿಯೂ ನಿಲ್ಲುವುದು. ಆಜೀವವೂ ಉಪಯುಕ್ತವಾದುದೆಂಬ ಅರಿವು ನಮಗೆ ಬಂದರೂ ಅದನ್ನು ಮನಸ್ಸು ಚೆನ್ನಾಗಿ ಗ್ರಹಿಸುವುದು.

**೩. ಸ್ಮರಣೆ:** ನಮ್ಮ ಮನಸ್ಸಿಗಾದ ಬಗೆ ಬಗೆಯ ಅನುಭವ ಕೋಟಿಗಳನ್ನೆಲ್ಲ ನೆನಪಿಗೆ ತಂದುಕೊಳ್ಳುವುದು ಅಸಾಧ್ಯ. ಕೆಲವು ಮಾತ್ರ ನೆನಪಿಗೆ ಬರುತ್ತವೆ. ಇತ್ತೀಚೆಗೆ ಗ್ರಹಿಸಿದ ಅನುಭವಗಳು ಹೆಚ್ಚಾಗಿಯೂ ಚೆನ್ನಾಗಿಯೂ ನೆನಪಿಗೆ ಬರುತ್ತವೆ. ನಿನ್ನೆ ನೋಡಿದ ಚಲನಚಿತ್ರವೊಂದರ ದೃಶ್ಯ ತಿಂಗಳ ಹಿಂದೆ ನೋಡಿದ್ದಕ್ಕಿಂತ ಚೆನ್ನಾಗಿ ಜ್ಞಾಪಕಕ್ಕೆ ಬರುತ್ತದೆ; ವರ್ಷಾಂತರಗಳ

ಹಿಂದೆ ನೋಡಿದ್ದು ನೆನಪಿಗೆ ಬರುವುದು ಕಷ್ಟ. ಒಂಟಿ ಒಂಟಿಯಾಗಿ ಗ್ರಹಿಸಿದ್ದ ವಿಷಯಗಳಿಗಿಂತ ಜೊತೆ ಜೊತೆಯಲ್ಲಿ ಹೆಣೆದುಕೊಂಡಂತೆ ಸಂಬಂಧವಿಟ್ಟುಕೊಂಡು ಆಗಿದ್ದ ಅನುಭವಗಳು ಬೇಗ ಸ್ಮರಣೆಗೆ ಬರಬಲ್ಲವು. ಏಕೆಂದರೆ ಅವೆಲ್ಲದರ ಅನುಭವವೂ ಸಂಬಂಧಿಸಿದಂತೆ ಏಕಕಾಲದಲ್ಲೇ ಆಗಿರುವುದರಿಂದ ಅವುಗಳ ಪ್ರತ್ಯಕ್ಷಾನುಭವವಾಗುವಾಗ ಆ ಸಂಬಂಧದಲ್ಲೇ ಸರಪಣಿಯಂತೆ ಮೆದುಳಿನಲ್ಲಿ ಗುರುತನ್ನುಳಿದಿರುತ್ತದೆ. ಅವುಗಳಲ್ಲಿ ಯಾವುದಾದರೂ ಒಂದು ನೆನಪಿಗೆ ಬಂದರೆ ಆ ಅನುಭವ—ಸರಪಣಿಯೇ ಸ್ಮರಣೆಗೆ ಬರುತ್ತದೆ; ಒಂದು ಭಾಗ ಸ್ಮರಣೆಗೆ ಬಂತೆಂದರೆ ಅದಕ್ಕೆ ಸಂಬಂಧಿಸಿದ ಮಿಕ್ಕ ಭಾಗದ ಸ್ಮರಣೆಯೂ ಉದ್ರೇಕಗೊಳ್ಳುತ್ತದೆ.

**೪. ಗುರುತಿಸುವುದು :** ಜ್ಞಾಪಕಶಕ್ತಿಯ ವ್ಯಾಪಾರದ ಕೊನೆಯ ಮಜಲಲ್ಲಿ ಹಾಗೆ ನೆನಪಿಗೆ ಬಂದ ವಿಷಯಗಳನ್ನು ಅವುಗಳ ಪ್ರತ್ಯಕ್ಷಾನುಭವದ ಪೂರ್ವ ಪರಿಚಯದೊಡನೆ ಗುರುತು ಹಚ್ಚುತ್ತೇವೆ. ಅಷ್ಟರಲ್ಲಿ ಆ ವಿಷಯ ನಮಗೆ ಪರಿಚಯವಾಗಿದ್ದ ಸನ್ನಿವೇಶಗಳೆಲ್ಲ ಒಂದೊಂದಾಗಿ ನೆನಪಾಗುತ್ತವೆ. ಗತಿಸಿಹೋದ ಮಿತ್ರನೊಬ್ಬನ ಸ್ಮರಣೆಯಾದೊಡನೆ ಅವನು ವಾಸಿಸುತ್ತಿದ್ದ ಮನೆ, ಅಲ್ಲಿನ ಗಿಡಮರಗಳು, ಅವನು ವ್ಯವಹರಿಸುತ್ತಿದ್ದ ಇತರ ಮಿತ್ರರು—ಎಲ್ಲ ನೆನಪಿಗೆ ಬರುತ್ತವೆ; ನಮಗಾಗಿರುವ ನೆನಪು ನಾವು ನೋಡಿದ್ದ ಮಿತ್ರನದೇ ಎಂದು ಅವು ದೃಢಪಡಿಸುತ್ತವೆ. ಒಂದು ಕಾರ್ಯದೊಡನೆ ಅದರ ಕಾರಣಗಳೂ, ಒಂದು ಸ್ಥಳದೊಡನೆ ಸಂಬಂಧಿಸಿದ ಸನ್ನಿವೇಶಗಳೂ ಜೊತೆಯಲ್ಲೇ ಸ್ಮರಣೆಗೆ ಬರುತ್ತವೆ. ಅವೆಲ್ಲ ನಮ್ಮ ಸ್ಮರಣೆಗೆ ಬಂದು, ಆ ವ್ಯಕ್ತಿ ಹಿಂದೆ ಅನುಭವಿಸಿದ ಸ್ನೇಹಿತನೇ ಎಂಬುದನ್ನು ಗುರುತು ಹಚ್ಚುತ್ತವೆ.

**ಶಾಲೆಯ ಕಾರ್ಯಕ್ಕೆ ಸಲಹೆಗಳು :** ನಮ್ಮ ಜೀವಮಾನದಲ್ಲಿ ಕಲಿತಿದ್ದು ಮುಂದೆ ಉಪಯೋಗವಾಗಬೇಕು; ಎಂದರೆ ಒಮ್ಮೆ ಕಲಿತಿದ್ದು ಆವಶ್ಯಕವಾದಾಗ ಮತ್ತೆ ಸ್ಮರಣೆಗೆ ಬರಬೇಕು. ಆ ಕಾರ್ಯಕ್ಕೆ ಜ್ಞಾಪಕಶಕ್ತಿ ನೆರವಾಗುತ್ತದೆ. ಎಂದಮೇಲೆ ನಮ್ಮ ಮಾನಸಿಕ ವ್ಯಾಪಾರಗಳಲ್ಲಿ ಈ ಶಕ್ತಿ ಬಹು ಮುಖ್ಯವಾದ ರೀತಿಯಲ್ಲಿ ನಮ್ಮ ಜೀವನದಮೇಲೆ ಕೈವಾಡ ಬೀರುತ್ತಿರುತ್ತದೆ. ಆದ್ದರಿಂದ ಶಾಲಾ ಜೀವನದಲ್ಲಿ ಆ ಮನಶ್ಶಕ್ತಿ ಚೆನ್ನಾಗಿ ಬೆಳೆದು

ವೃದ್ಧಿಯಾಗುವಂತೆ ಮಾಡುವುದು ಆವಶ್ಯಕ. ಅದಕ್ಕೆ ನೆರವಾಗತಕ್ಕ ಹಲವು ಸಲಹೆಗಳನ್ನು ಇಲ್ಲಿ ಕೊಡಲಾಗಿದೆ:

೧. ಜ್ಞಾಪಕಶಕ್ತಿ ಬಹುಮಟ್ಟಿಗೆ ಧಾರಣಶಕ್ತಿಯನ್ನೇ ಅವಲಂಬಿಸಿದೆ; ಆ ಧಾರಣಶಕ್ತಿ ಒಬ್ಬೊಬ್ಬರಿಗೂ ಒಂದೊಂದು ಪರಿಮಾಣದಲ್ಲಿರುತ್ತದೆ. ಅದು ವಂಶಗತವಾಗಿ ಬಂದ ಮೂಲಶಕ್ತಿಯಾದ್ದರಿಂದ ಅದನ್ನು ಹೊಸದಾಗಿ ಸೃಷ್ಟಿಸುವಂತಿಲ್ಲ; ಇರುವ ಪರಿಮಾಣವನ್ನು ಹೆಚ್ಚಿಸುವಂತೆಯೂ ಇಲ್ಲ. ಆದರೆ ಇರುವ ಶಕ್ತಿಯನ್ನು ಪೂರ್ಣವಾಗಿ ಉಪಯುಕ್ತವಾಗುವಂತೆ ಬೆಳಸಿ ಕೊಳ್ಳಬಹುದು. ಧಾರಣಶಕ್ತಿಗೆ ಮೆದುಳು ಮಾತೃಸ್ಥಾನವಾದ್ದರಿಂದ ಅದು ಆರೋಗ್ಯವಾಗಿರಬೇಕು; ಮೆದುಳಿನ ಆರೋಗ್ಯ ದೇಹಾರೋಗ್ಯವನ್ನೇ ಅವ ಲಂಬಿಸಿರುತ್ತದೆ; ಎಂದಮೇಲೆ ನಾವು ಸೇವಿಸುವ ಆಹಾರ, ಗಾಳಿ, ನೀರು ಮುಂತಾದವುಗಳ ಪಾರಿಶುದ್ಧತೆಯ ಕಡೆ ಆವಶ್ಯಕವಾಗಿ ಗಮನಕೊಡಬೇಕು. ಅಗತ್ಯವಾದ ವಿರಾಮವೂ ದೊರಕಬೇಕು. ಆ ಮೂಲಕ ಆರೋಗ್ಯವಂತ ರಾಗಿ ಮಕ್ಕಳು ಬಾಳುತ್ತಿದ್ದರೆ ಅವರ ಜ್ಞಾಪಕಶಕ್ತಿ ಚೆನ್ನಾಗಿ ಕೆಲಸಮಾಡ ಬಲ್ಲದು. ಆರೋಗ್ಯದಿಂದಿರುವಾಗ ನೆನಸಿಕೊಳ್ಳುವಷ್ಟು ಚೆನ್ನಾಗಿ ರೋಗ ದಿಂದಿರುವಾಗ ನೆನಸಿಕೊಳ್ಳಲು ಸಾಧ್ಯವಿಲ್ಲವೆಂಬುದು ಎಲ್ಲರಿಗೂ ಗೊತ್ತಿದೆ. ಆದ್ದರಿಂದ ಶಾಲಾ ಜೀವನದಲ್ಲಿ ಮಕ್ಕಳ ಆರೋಗ್ಯದ ಕಡೆಗೆ ಗಮನ ಕೊಡುವುದು ಆವಶ್ಯಕ.

೨. ಮಕ್ಕಳು ಜ್ಞಾಪಕದಲ್ಲಿಡಬೇಕಾದ್ದನ್ನು ಅಂದಂದು ಅವರು ಅನುಭವಮಾಡಿಕೊಳ್ಳುತ್ತಿರಬೇಕು. ಅವಕಾಶವಾದಾಗೆಲ್ಲ ಅದು ಅವರ ಗಮನಕ್ಕೆ ಬೀಳುವಂತೆ ಮಾಡಬೇಕು. ಅಭ್ಯಾಸ ಹೆಚ್ಚಿದಷ್ಟೂ ಧಾರಣಶಕ್ತಿ ಬಲವಾಗುತ್ತದೆ.

೩. ನೆನಪಿಡಬೇಕಾದ ವಿಷಯಗಳನ್ನು ಬಿಡಿಬಿಡಿಯಾಗಿ ಅಭ್ಯಾಸ ಮಾಡಿಸುವುದು ಲಾಭಕರವಲ್ಲ. ಇತರ ಅಂಶಗಳೊಡನೆ, ಅದಕ್ಕಿರುವ ಸಂಬಂಧದ ರೀತಿಯಲ್ಲಿ ಪರಿಚಯವಾಗಿದ್ದರೆ, ಒಂದು ನೆನಪಿಗೆ ಬಂದರೆ ಇಡೀ ವಿಷಯ ಮಾಲೆಯೇ ನೆನಪಿಗೆ ಬರುತ್ತದೆ. ಆದ್ದರಿಂದ ಯಾವ ಅಂಶಗಳನ್ನು ಕಲಿಸುತ್ತೇವೋ ಆ ಅಂಶಗಳಿಗೆ ಇರತಕ್ಕ ಸಂಬಂಧವನ್ನು ಮಕ್ಕಳಿಗೆ ಮಾಡಿಕೊಟ್ಟು ಅಭ್ಯಾಸಮಾಡಿಸಬೇಕು.

೪. ಯಾವುದನ್ನು ಕಂಠಪಾಠ ಮಾಡಿಸಬೇಕಾದರೂ ಅವುಗಳ ಅರ್ಥವನ್ನು ಮಕ್ಕಳಿಗೆ ವಿವರಿಸಿ ತಿಳಿಸಿ ಅನಂತರ ಅಭ್ಯಾಸಮಾಡಿಸಬೇಕು. ಅರ್ಥ ತಿಳಿಯದೆ ಮಾಡಿದ ಕಂಠಪಾಠ ಬಹುಕಾಲ ಜ್ಞಾಪಕದಲ್ಲಿರಲಾರದು. ಕಂಠಪಾಠ ಮಾಡುವಾಗ ಆ ಭಾಗದ ಎಲ್ಲ ಪದಗಳ ಅರ್ಥವೂ, ಒಂದಕ್ಕೊಂದಕ್ಕೆ ಇರುವ ಸಂಬಂಧವೂ ಗೊತ್ತಿದ್ದರೆ ಧಾರಣಶಕ್ತಿ ಚೆನ್ನಾಗಿ, ಹೆಚ್ಚುಕಾಲ ನಿಲ್ಲುತ್ತದೆ. ಪದಗಳ ಅರ್ಥ ಜ್ಞಾನವೂ, ಅವುಗಳ ಸಂಬಂಧ ಪರಿಚಯವೂ ಚೆನ್ನಾಗಿ ಸ್ಮರಣೆಗೆ ಬರುತ್ತವೆ.

ಮಗ್ಗಿಯ ಕೊಷ್ಠಕ, ಕಾಗುಣಿತ, ಚರಿತ್ರೆಯ ಇಸವಿಗಳು ಮೊದಲಾದವನ್ನು ಮಕ್ಕಳು ಸಾಮಾನ್ಯವಾಗಿ ಅರ್ಥ ತಿಳಿಯದೆಯೇ ಅಭ್ಯಾಸಮಾಡುವರು. ಅವುಗಳನ್ನು ಜ್ಞಾಪಿಸಿಕೊಳ್ಳುವುದು ಅರ್ಥ ಜ್ಞಾನದಿಂದಲ್ಲ; ಯಾಂತ್ರಿಕವಾಗಿ; ಆಗ ಬುದ್ಧಿಶಕ್ತಿಯ ಕೆಲಸ ಅಷ್ಟಾಗಿ ಇರುವುದಿಲ್ಲ; ಕೇವಲ ಯಾಂತ್ರಿಕ ಕ್ರಿಯೆಯಂತಿರುತ್ತದೆ. ಸಂಬಂಧ ಜ್ಞಾನವಾಗಲಿ ಅರ್ಥ ಪರಿಚಯವಾಗಲಿ ಅದರಲ್ಲಿ ನೆರವಾಗದೆ, ಕೇವಲ ಯಾಂತ್ರಿಕವಾಗಿ ಅವನ್ನು ಅಭ್ಯಾಸಿಸಿರುವುದರಿಂದ ಅದನ್ನು 'ಗಿಳಿ ಪಾಠ'ವೆನ್ನುವುದೂ ಉಂಟು. ಹಲವು ವೇಳೆ ಇಂಥ ಅಭ್ಯಾಸಗಳನ್ನು ಮಾಡಿಸಬೇಕಾಗಿ ಬಂದರೂ ಸಾಧ್ಯವಾದ ಮಟ್ಟಿಗೂ ಅವುಗಳ ಅರ್ಥ ಮತ್ತು ಸಂಬಂಧ ಜ್ಞಾನವನ್ನು ನಿಧಾನವಾಗಿಯಾದರೂ ಮಾಡಿಕೊಡುವುದರಿಂದ ಮಕ್ಕಳ ಧಾರಣಶಕ್ತಿಯೂ ಜ್ಞಾಪಕಶಕ್ತಿಯೂ ಬಲಗೊಳ್ಳುತ್ತವೆ.

ಮೇಲೆ ಹೇಳಿದಂತೆ ಗಿಳಿ ಪಾಠಮಾಡುವುದು ದೊಡ್ಡವರಿಗೆ ಕಷ್ಟ; ಮಕ್ಕಳಿಗೆ ತುಂಬ ಸರಾಗ; ಆದರೆ ಅರ್ಥ ಗ್ರಹಿಸಿ, ಸಂಬಧವರಿತುಕೊಂಡು, ಜ್ಞಾಪಿಸಿಕೊಳ್ಳುವುದು ಅವರಿಗೆ ಕಷ್ಟ. ೧೦-೧೧ನೆಯ ವರ್ಷದ ತನಕ ಯಾಂತ್ರಿಕವಾಗಿ ಕಂಠಪಾಠ ಮಾಡುವ ಶಕ್ತಿ ಅವರಿಗೆ ಅತ್ಯಂತ ಹೆಚ್ಚಾಗಿರುವುದರಿಂದ ಆ ಕಾಲದಲ್ಲಿ ಜೀವನಕ್ಕೆ ಉಪಯುಕ್ತವಾಗುವ ಮಗ್ಗಿ, ಕೋಷ್ಠಕಗಳು, ಪರಭಾಷೆಯ ಪದಗಳು, ಪಟ್ಟಣ, ನದಿ ಮುಂತಾದವುಗಳ ಹೆಸರುಗಳು—ಇವನ್ನೆಲ್ಲ ಅಭ್ಯಾಸಮಾಡಿಸಬೇಕು. ಆ ಕಾರ್ಯ ಆಗ ಸರಾಗವಾಗಿ ಸಾಧನೆಯಾಗುತ್ತದೆ; ದೊಡ್ಡವರಾದಮೇಲೆ ಕಷ್ಟವಾಗುತ್ತದೆ. ಆ ವಯಸ್ಸಿನನಂತರ ಯಾವುದನ್ನು ಕಂಠಪಾಠ ಮಾಡಿಸಬೇಕಾದರೂ

ಅಲ್ಲಿ ಬರುವ ಪದಗಳ ಅರ್ಥವನ್ನು ಪರಿಚಯಮಾಡಿಕೊಟ್ಟು ಕಂಠಪಾಠ ಮಾಡಿಸಬೇಕು. ಅದರಿಂದ ಧಾರಣಶಕ್ತಿ ಬಲಗೊಳ್ಳುವುದರ ಜೊತೆಗೆ ಆ ಪದಗಳ ಅರ್ಥ ಅವರ ಮನಸ್ಸಿನಲ್ಲಿದ್ದು, ಆ ವಿಷಯದಲ್ಲಿ ಮುಂದೆ ಹೆಚ್ಚಿನ ಆಲೋಚನೆ ನಡಸಿ, ನೂತನ ಅಂಶಗಳನ್ನು ದರ್ಶಿಸಲೂ ಸಹಾಯವಾಗುತ್ತದೆ; ಆ ಮೂಲಕ ಆಜೀವವೂ ಒಂದು ವಿಧವಾದ ಸ್ವಯಂ ಶಿಕ್ಷಣವಾಗುವ ಅವಕಾಶವಿರುವುದರಿಂದ ಕಂಠಪಾಠಮಾಡಿಸಬೇಕಾಗಿರುವ ಗದ್ಯ, ಪದ್ಯ, ಮುಂತಾದವುಗಳ ಪದಗಳ ಅರ್ಥವನ್ನೂ ಸಂಬಂಧವನ್ನೂ ಗ್ರಹಿಸಿಕೊಂಡು ಅಭ್ಯಾಸ ಮಾಡುವಂತೆ ಪ್ರೋತ್ಸಾಹಿಸಬೇಕು.

೫. ಒಮ್ಮೆ ಕಂಠಪಾಠಮಾಡಿದ ವಿಷಯ ಕ್ರಮಕ್ರಮವಾಗಿ ಮರೆಯುತ್ತ ಬರುತ್ತದೆ. ಅದಕ್ಕೆ ಮೂಲಕಾರಣ ಅದನ್ನು ಆಗಾಗ ನೆನೆಸಿಕೊಳ್ಳದಿರುವುದು. ಅತಿ ದೀರ್ಘಕಾಲದವರೆಗೆ ಜ್ಞಾಪಕಕ್ಕೆ ತರದೆ ಬಿಟ್ಟುಕೊಂಡು ಹೋಗುವುದು ಸರಿಯಲ್ಲ. ಅಂದಂದು ಹಿಂದೆ ಕಂಠಪಾಠ ಮಾಡಿರುವ ವಿಷಯಗಳನ್ನು ಸ್ಮರಿಸಿಕೊಳ್ಳಲು ಉಚಿತವಾದ ಸನ್ನಿವೇಶಗಳನ್ನು ರಚಿಸಿಕೊಳ್ಳಬೇಕು.

೬. ಭೂತಕಾಲದಲ್ಲಿ ಅನೇಕ ವಿಷಯಗಳು ನಮ್ಮ ಗಮನಕ್ಕೆ ಬಂದಿವೆ; ವರ್ತಮಾನಕಾಲದಲ್ಲೂ ಬರುತ್ತಿವೆ; ಭವಿಷ್ಯದಲ್ಲೂ ಬರತಕ್ಕವಿವೆ. ಅವನ್ನೆಲ್ಲ ನೆನಪಿಟ್ಟುಕೊಳ್ಳುವುದು ಮನಸ್ಸಿಗೆ ಅತಿಯಾದ ಹೊರೆ. ಆ ಹೊರೆಯನ್ನು ಕಡಮೆಮಾಡಲು ಅನಾವಶ್ಯಕವಾದವನ್ನು ಮರೆಯಬೇಕಾಗುತ್ತದೆ. ಹಾಗೆ ವಿವೇಚನೆಯಿಂದ ಅನಾವಶ್ಯಕವಾದ ಅಂಶಗಳನ್ನು ಮರೆಯುವುದೂ ಒಂದು ವಿಧವಾದ ಶಿಕ್ಷಣವೇ ಎಂದು ಹೇಳುವರು. ನಮ್ಮ ಮಕ್ಕಳಲ್ಲಿ ಆ ವಿವೇಚನೆ ಶಾಲಾ ಜೀವನದಲ್ಲಿ ಮೂಡುವುದು ಕಷ್ಟ. ಅದರಿಂದ ಉಪಾಧ್ಯಾಯರು ಅವರು ಯಾವುದನ್ನು ನೆನಪಿಡಬೇಕು, ಯಾವುದು ಬೇಡ ಎಂಬ ಅಂಶವನ್ನು ಚೆನ್ನಾಗಿ ಅರಿತು ಕಂಠಪಾಠ ಮಾಡಿಸಬೇಕು; ಮಕ್ಕಳಲ್ಲೂ ತಮ್ಮ ಜೀವನಕ್ಕೆ ಯಾವುವು ಆವಶ್ಯಕವೆಂಬ ವಿವೇಚನೆ ಕ್ರಮಕ್ರಮವಾಗಿ ಅಂಕುರಿಸುವಂತೆಯೂ ಮಾಡಬೇಕು. ಹಾಗೆ ಕೆಲವಂಶವನ್ನು ಮರೆತರೂ ಅದರ ಗುರುತು ಮೆದುಳಿನಿಂದ ಪೂರ್ಣವಾಗಿ ಮಾಸಿಹೋಗುವಂತಿಲ್ಲ: ಇನ್ನೊಮ್ಮೆ ಅದನ್ನು ಕಲಿಯಲು ಯತ್ನಿಸಿದಾಗ ಜಾಗ್ರತೆಯಾಗಿಯೂ ಸುಲಭವಾಗಿಯೂ ಸಾಧನೆಯಾಗುತ್ತದೆ.

**ಜ್ಞಾಪಕಶಕ್ತಿಯ ಆರ್ಥಿಕ ಉಪಯೋಗ:** ಧಾರಣಶಕ್ತಿಗೆ ಕವಾತು ಮಾಡಿಸಿ ಅದನ್ನು ಹೆಚ್ಚಿಸಬಹುದೆಂಬ ನಂಬಿಗೆಯಿಂದ ಉಪಯುಕ್ತವಲ್ಲದ ಪಠ್ಯವಸ್ತುಗಳನ್ನು ಕವಾತು ಮಾಡಿಸಲು ಸೇರಿಸಿದ್ದರು. ಆದರೆ ಧಾರಣ ಶಕ್ತಿ ವಂಶಗತವಾಗಿ ಒಬ್ಬೊಬ್ಬರಲ್ಲೂ ಒಂದೊಂದು ನಿಯತ ಪ್ರಮಾಣ ದಲ್ಲಿರುವುದರಿಂದ ಆ ಕಾರ್ಯ ವ್ಯರ್ಥ ಪ್ರಯತ್ನವೆಂದು ಈಗ ಸ್ಥಿರಪಟ್ಟಿದೆ. ಆ ಶಕ್ತಿಯನ್ನು ಹೆಚ್ಚಿಸುವಂತಿಲ್ಲ. ಇರುವುದನ್ನು ಆದಷ್ಟು ಆರ್ಥಿಕವಾಗಿ ಉಪಯೋಗಿಸುವುದೊಂದೇ ನಮಗಿರುವ ಮಾರ್ಗ. ಅದಕ್ಕಾಗಿ ಯಾವುದನ್ನು ಕಂಠಪಾಠ ಮಾಡಬೇಕಾದರೂ ಆದಷ್ಟು ಸುಲಭ ಕಾಲದಲ್ಲಿ ಕಲಿಯುವ ಮಾರ್ಗಗಳನ್ನು ಕಂಡುಹಿಡಿದಿದ್ದಾರೆ. ಅದರಿಂದ ಪ್ರಕೃತಿದತ್ತವಾಗಿ ಬಂದ ಜ್ಞಾಪಕಶಕ್ತಿಯನ್ನು ಆರ್ಥಿಕವಾಗಿ ಉಪಯೋಗಿಸಿಕೊಂಡಂತಾಗುತ್ತದೆ. ಅಂಥ ಉತ್ತಮ ಕ್ರಮವನ್ನು ಅನುಸರಿಸಲು ನೆರವಾಗುವ ಕೆಲವು ಸಲಹೆ ಗಳನ್ನು ಕೆಳಗೆ ಸೂಚಿಸಲಾಗಿದೆ:

೧. ಒಂದು ನಿಮಿಷ ಕಾಲದಲ್ಲಿ ಓದಿ ಮುಗಿಸಬಹುದಾದ ಒಂದು ಪದ್ಯವನ್ನು ೩೮ ನಿಮಿಷಗಳಲ್ಲಿ ಕಂಠಪಾಠಮಾಡಬೇಕಾಗಿದೆಯೆನ್ನುವ; ಅದನ್ನು ಒಂದೇಸಲ ಕುಳಿತು ೩೦ ಸಲ ಓದಿ ೩೦ ನಿಮಿಷಗಳಲ್ಲಿ ಕಂಠಪಾಠ ಮಾಡುವುದು ಉಚಿತವೆ? ಪದ್ಯವನ್ನು ಒಂದುಸಲ ಓದಿದಮೇಲೆ ಮಧ್ಯೆ ೫ ನಿಮಿಷ ವಿರಾಮ ಕೊಟ್ಟು ಅಷ್ಟೇ ಕಾಲಾವಧಿಯಲ್ಲಿ ಕಲಿಯುವುದು ಲಾಭಕರವೆ? ಮೊದಲನೆಯ ರೀತಿಯಲ್ಲಿ ೩೦ ಸಲ ಪದ್ಯವನ್ನು ಪಠಿಸುವ ಅವಕಾಶವುಂಟು; ಎರಡನೆಯ ರೀತಿಯಲ್ಲಿ ೫ ಸಲ ಮಾತ್ರ ಪಠಿಸಬಹುದು. ಸ್ಟ್ರಾರ್ಚ್ ಮತ್ತು ಪೈಲ್ ಎಂಬ ಮನಶ್ಶಾಸ್ತ್ರಜ್ಞರು ಈ ವಿಷಯದಲ್ಲಿ ಹಲವು ಪ್ರಯೋಗಗಳನ್ನು ನಡಸಿರುತ್ತಾರೆ. ಆ ಸಂಶೋಧನೆಗಳಿಂದ ಎರಡನೆಯ ರೀತಿಯ ಅಭ್ಯಾಸಕ್ರಮ ಲಾಭದಾಯಕವೆಂದು ತಿಳಿದುಬಂದಿದೆ. ಒಂದೊಂದು ಸಲ ಓದಲು ಕೂಡುವ ಕಾಲ ಆದಷ್ಟು ಕಡಮೆಯಿರಬೇಕು. ಆದರೆ ಅನೇಕ ಸಾರಿ ಕುಳಿತು ಓದಬೇಕು. ಮೊದಲನೆಯ ಕ್ರಮದಲ್ಲಿ ಒಮ್ಮೆ ಓದಲು ಕೂಡುವ ಕಾಲ ೩೦ ನಿಮಿಷ; ಎರಡನೆಯ ಕ್ರಮದಲ್ಲಿ ಒಂದೇ ನಿಮಿಷ. ಆದರೆ, ಮೊದಲನೆಯ ಕ್ರಮದಲ್ಲಿ ಕೂತು ಓದುವುದು ಒಂದೇಸಲ; ಎರಡನೆ ಯದರಲ್ಲಿ ೫ ಸಲ. ಕಂಠಪಾಠಕ್ಕೆ ಉಪಯೋಗವಾದ ಕಾಲ ಎರಡನೆಯ

ಕ್ರಮದಲ್ಲಿ ೫ ನಿಮಿಷ ಮಾತ್ರ. ಮಿಕ್ಕ ೨೫ ನಿಮಿಷ ವಿರಾಮ. ಪದ್ಯವನ್ನು ಒಂದೇ ಸಮನೆ ಕುಳಿತು ೩೦ ನಿಮಿಷ ಓದುವುದಕ್ಕಿಂತ ಮಧ್ಯೆ ಮಧ್ಯೆ ವಿರಾಮಕೊಟ್ಟು, ಹರಡಿಕೊಂಡು ಅನೇಕ ಸಾರಿ ಕುಳಿತು ಓದುವುದು ಉತ್ತಮ. ಏಕೆಂದರೆ, ಎರಡನೆಯ ಕ್ರಮದಲ್ಲಿ ಅಷ್ಟೇ ಕಾಲಾವಧಿಯಲ್ಲಿ ಅಥವಾ ಇನ್ನೂ ಮುಂಚಿತವಾಗಿ ಅದನ್ನು ಕಂಠಪಾಠ ಮಾಡಬಹುದು. ಜೊತೆಗೆ, ಕಂಠಪಾಠಕ್ಕೆ ಕಾಲ ಉಪಯೋಗವಾದ್ದು ಬಹು ಸ್ವಲ್ಪ, ೫ ನಿಮಿಷ ಮಾತ್ರ. ಈ ಸೌಲಭ್ಯಕ್ಕೆ ಎರಡು ಕಾರಣಗಳನ್ನು ಹೇಳಬಹುದು: ಮೊದಲನೆಯದಾಗಿ ಒಂದೇಸಮನೆ ದೀರ್ಘಕಾಲ ಅಭ್ಯಾಸಕ್ಕೆ ಕುಳಿತರೆ ಆಯಾಸವಾಗಿ ಅವಧಾನ ಕುಂದಿ ಕಲಿವು ಯಶಸ್ವಿಯಾಗುವಂತಿಲ್ಲ; ಎರಡನೆಯದಾಗಿ, ಬಿಡುವುಕೊಟ್ಟು ಕಲಿಯುವುದರಿಂದ ಆ ವಿರಾಮ ಕಾಲಗಳಲ್ಲಿ ಕಂಠಪಾಠ ನಡೆಯದಿದ್ದರೂ ಅದಕ್ಕೆ ಸಹಾಯವಾಗತಕ್ಕ ಹಲವು ಮಾನಸಿಕ ಕ್ರಿಯೆಗಳು ನಡೆಯುತ್ತವೆ. ಕಲಿಯಬೇಕಾಗಿರುವ ವಿಷಯದಮೇಲೆ ಆಲೋಚನೆ ನಡಸಿ, ಅರ್ಥ ತಿಳಿದುಕೊಂಡು, ಕಷ್ಟವಾಗಿರುವ ಭಾಗಗಳನ್ನು ಅಭ್ಯಾಸಿಸುವ ಮಾರ್ಗವನ್ನು ಪರಿಶೀಲಿಸಿ ಮನದಟ್ಟು ಮಾಡಿಕೊಳ್ಳುತ್ತೇವೆ; ಅದರಿಂದ ಮುಂದೆ ಕುಳಿತು ಕಂಠಪಾಠಮಾಡಲು ಯತ್ನಿಸಿದಾಗ ಆ ಪರಿಜ್ಞಾನ ಬಹುವಾಗಿ ಸಹಾಯವಾಗುತ್ತದೆ; ಆ ಮೂಲಕ ಎರಡನೆಯ ರೀತಿಯ ಅಭ್ಯಾಸಕ್ರಮ ಬೇಗ ಯಶಸ್ವಿಯಾಗಬಲ್ಲದು; ಕಂಠಪಾಠಕ್ಕೆ ಉಪಯೋಗವಾಗದ ವಿರಾಮ ಕಾಲವೂ ಆ ಕಾರ್ಯಕ್ಕೆ ಅಪ್ರತ್ಯಕ್ಷವಾಗಿ ನೆರವಾಗುತ್ತದೆ; ಜೊತೆಗೆ ವಿರಾಮವೂ ದೊರೆತು ಆಯಾಸ ಕಳೆದು, ಮರಳಿ ಗೆಲುವಾಗಿ ಕಾರ್ಯಮುಖವಾಗಬಹುದು. ಜೇಮ್ಸ್‌ರವರು 'ನಾವು ಚಳಿಗಾಲದಲ್ಲಿ ಈಜುವುದನ್ನೂ ಬೇಸಿಗೆಯಲ್ಲಿ ಮಂಜಿನ ಮೇಲೆ ಜಾರುವುದನ್ನೂ ಕಲಿಯುತ್ತೇವೆ' ಎಂದು ಹೇಳಿ ಮೇಲಿನ ಅಂಶವನ್ನು ಸ್ಪಷ್ಟಪಡಿಸಿರುವರು. ಅವರ ದೇಶದಲ್ಲಿ ಚಳಿಗಾಲದಲ್ಲಿ ನೀರು ಗಡ್ಡೆ ಕಟ್ಟುತ್ತದೆ; ಆದ್ದರಿಂದ ಈಜುವಂತಿಲ್ಲ; ಬೇಸಿಗೆಯಲ್ಲಿ ಮಂಜು ಕರಗಿ ನೀರಾಗುತ್ತದೆ; ಆದ್ದರಿಂದ ಆಗ ಅದರಮೇಲೆ ಆಡುವಂತಿಲ್ಲ. ನೋಡುವುದಕ್ಕೆ ಜೇಮ್ಸ್‌ರ ಮೇಲಿನ ವಾಕ್ಯ ವಿರುದ್ಧವಾಗಿದೆಯೆಂದು ಆಶ್ಚರ್ಯವಾಗಬಹುದು. ನಿಜವಾಗಿ ಚಳಿಗಾಲದಲ್ಲಿ ನಾವು ಈಜುವ ಅಭ್ಯಾಸ ಮಾಡದಿದ್ದರೂ ಹಿಂದೆ ಮಾಡಿರುವುದರ ಮೇಲೆ ಆಲೋಚಿಸಿಕೊಂಡು

ಆ ಮೂಲಕ ಕಲಿಯುತ್ತೇವೆಂದೂ, ಬೇಸಿಗೆಯಲ್ಲಿ ಜಾರುವ ಅಭ್ಯಾಸ ಮಾಡದಿದ್ದರೂ ಅದಕ್ಕೆ ಸಂಬಂಧಪಟ್ಟ ಅಂಶಗಳನ್ನು ಯೋಚಿಸಿ ಕಲಿಯುತ್ತೇವೆಂದೂ ಜೇಮ್ಸರು ಹೇಳಿ, ಆ ಮೂಲಕ ಆ ಅಭ್ಯಾಸಮಾಡಿದಂತಾಯಿತೆಂದು ಅಭಿಪ್ರಾಯಪಟ್ಟಿರುವರು. ಎಂದಮೇಲೆ ಒಂದೇಸಲ ಕುಳಿತು ಅಭ್ಯಾಸಮಾಡುವುದಕ್ಕಿಂತ ಹರಡಿಕೊಂಡು ಸ್ವಲ್ಪ ಸ್ವಲ್ಪ ಕಾಲ, ಅನೇಕಸಲ ಅಭ್ಯಾಸಮಾಡುವುದು ಉತ್ತಮ. ಹಾಗಾದರೆ ಒಂದೊಂದುಸಲಕ್ಕೂ ಎಷ್ಟೆಷ್ಟು ಕಾಲದ ಹೊತ್ತು ಕುಳಿತು ಅಭ್ಯಾಸಮಾಡಬೇಕು? ಈ ವಿಷಯದಲ್ಲೂ ಸಂಶೋಧನೆ ನಡೆದಿದೆ; ಆದರೆ ಅದರಿಂದ ನಿರ್ದಿಷ್ಟ ರೂಪದ ಸಲಹೆ ಇನ್ನೂ ದೊರೆತಿಲ್ಲ. ಜೊತೆಗೆ, ಎಲ್ಲ ವಯಸ್ಸಿನವರಿಗೂ ಅಭ್ಯಾಸ ಕಾಲ ಒಂದೇ ಆಗಿರುವಂತಿಲ್ಲ. ಚಿಕ್ಕವಯಸ್ಸಿನವರಿಗೆ ಅವಧಾನವನ್ನು ಒಂದೇ ಕಾರ್ಯದಲ್ಲಿ ಬಹಳ ಹೊತ್ತು ಇರಿಸುವುದು ಕಷ್ಟ. ಆದ್ದರಿಂದ ಅವರಿಗೆ ಅಭ್ಯಾಸದ ಕಾಲ ಒಂದೊಂದು ಸಾರಿಯೂ ೧೦ ನಿಮಿಷಗಳಷ್ಟಿರಬಹುದು: ದೊಡ್ಡವರಿಗಾದರೆ ೨೦ ನಿಮಿಷಗಳಾಗಬಹುದು. ವಿರಾಮ ಕಾಲ ಮೊದಮೊದಲು ಕಡಮೆಯೂ ಬರಬರುತ್ತ ದೀರ್ಘವೂ ಆಗಬಹುದು. ಮಕ್ಕಳ ವಯಸ್ಸು, ಕಲಿಯಬೇಕಾದ ಪಾಠದ ಕ್ಲಿಷ್ಟತೆ—ಇವುಗಳ ಆಧಾರದ ಮೇಲೆಯೇ ಮೇಲಿನ ಎರಡಂಶಗಳನ್ನು ನಿರ್ಧರಿಸಬೇಕಾಗುತ್ತದೆ. ಒಟ್ಟಿನಲ್ಲಿ ಪದ್ಯ ಚಿಕ್ಕದಾಗಿದ್ದರೂ ಅದನ್ನು ಅನೇಕಸಾರಿ ಓದುವುದಕ್ಕಾಗುವಷ್ಟು ಒಂದೊಂದು ಅಭ್ಯಾಸ ಕಾಲವೂ ಇರಬೇಕು; ಅತಿ ದೀರ್ಘವಾದ ಪದ್ಯವಾದರೆ, ಕಡೆಗೆ ೩ ಸಾರಿಯಾದರೂ ಓದಲು ಸಾಕಾಗುವಂತಿರಬೇಕು. ಮಕ್ಕಳ ವಯೋಗುಣಗಳಿಗೆ ತಕ್ಕಂತೆ ಅಭ್ಯಾಸದ ಕಾಲ ೧೦ರಿಂದ ೨೦ ನಿಮಿಷಗಳ ತನಕ ಇರಬಹುದು. ಮೊದಮೊದಲು ಅಭ್ಯಾಸ ಆಗಾಗ ಆಗಬೇಕು; ವಿರಾಮ ಕಾಲ ಕಡಮೆ ಇರಬೇಕು ಕ್ರಮ ಕ್ರಮವಾಗಿ ವಿರಾಮ ಕಾಲ ಹೆಚ್ಚಿ ಅಭ್ಯಾಸ ದೀರ್ಘ ಕಾಲಕ್ಕೊಮ್ಮೆ ಆಗಬಹುದು. ಇದನ್ನು ವಿವರಿಸಲು ಒಂದು ಉದಾಹರಣೆಯನ್ನು ಕೊಡಬಹುದು: ಮಗ್ಗಿಯನ್ನು ಮಕ್ಕಳು ಅಭ್ಯಾಸಿಸುವಾಗ—

ಮೊದಲು ೧೦ ನಿಮಿಷಗಳ ಕಾಲ ದಿನವೂ ಅಭ್ಯಾಸ;

ಆಮೇಲೆ ೧೦ ನಿಮಿಷಗಳ ಕಾಲ ೨ ದಿನಕ್ಕೊಮ್ಮೆ ಅಭ್ಯಾಸ;

ಅನಂತರ ೧೦ ನಿಮಿಷಗಳ ಕಾಲ ೪ ದಿನಕ್ಕೊಮ್ಮೆ ಅಭ್ಯಾಸ;

ಕೊನೆಗೆ ಇನ್ನೂ ದೀರ್ಘ ಕಾಲಕ್ಕೊಮ್ಮೆ ಅಭ್ಯಾಸ;

ಹೀಗೆ ನಾವು ಕೊಡುವ ವಿರಾಮ ಕಾಲ ಹಿಂದಿನ ಅಭ್ಯಾಸದಲ್ಲಿ ಕಲಿತದ್ದನ್ನು ಮರಸಿಬಿಡುವಷ್ಟು ದೀರ್ಘವಾಗಿರಬಾರದು; ಕಲಿವು ಸಿದ್ಧಿಸುತ್ತ ಬಂದಂತೆ ಅದು ಹೆಚ್ಚಬಹುದು. ಆದ್ದರಿಂದ ಯಾವ ಅಭ್ಯಾಸಕ್ಕಾಗಲಿ ಮೊದಲು ಕಡಮೆ ವಿರಾಮ ಕಾಲ; ದೀರ್ಘ ಅಭ್ಯಾಸಕಾಲ. ಆಮೇಲೆ ದೀರ್ಘ ವಿರಾಮ ಕಾಲ; ಕಡಮೆ ಅಭ್ಯಾಸ ಕಾಲ—ಈ ಅನುಸರಣೆ ಉತ್ತಮ ಕ್ರಮ.

೨. ಪದ್ಯವೊಂದನ್ನು ಕಂಠಪಾಠಮಾಡಬೇಕಾದಾಗ ಒಟ್ಟಿಗೆ ಅಭ್ಯಾಸ ಮಾಡುತ್ತ, ಕಂಠಪಾಠಮಾಡುವುದು ಒಂದು ವಿಧವಾದರೆ, ಅದನ್ನು ವಿಭಾಗಿಸಿ ಕೊಂಡು ಅಭ್ಯಾಸಿಸಿ, ಕಂಠಪಾಠಮಾಡುವುದು ಇನ್ನೊಂದು ವಿಧ. ಇವು ಗಳಲ್ಲಿ ಯಾವುದು ಆರ್ಥಿಕವಾದುದು? ಈ ವಿಷಯವನ್ನು ಹಿಂದೆಯೇ ವಿವೇಚಿಸಲಾಗಿದೆ. ಪೈಲ್ ಮತ್ತು ಸ್ನೈಡರ್ ಎಂಬಿಬ್ಬರು ಈ ವಿಷಯದಲ್ಲಿ ನಡಸಿರುವ ಸಂಶೋಧನೆಯನ್ನು ವಿವರಿಸಿ, ಆ ಅಂಶವನ್ನು ಇಲ್ಲಿ ಸ್ಫುಟ ಗೊಳಿಸಬಹುದು. ೨೪೦ ಪಾದಗಳಿದ್ದ ಪದ್ಯವೊಂದನ್ನು ಒಂದೊಂದು ಸಲವೂ ಪೂರ್ಣ ಭಾಗವನ್ನು ಅಭ್ಯಾಸಿಸಿ ಕಲಿಯಲು ಒಟ್ಟು ೩೪೮ ನಿಮಿಷಗಳು ಬೇಕಾದುವು; ಅದೇ ಪದ್ಯವನ್ನು ವಿಭಾಗಮಾಡಿಕೊಂಡು, ಒಂದೊಂದು ಭಾಗವನ್ನಾಗಿ ಅಭ್ಯಾಸಿಸುತ್ತ, ಕೊನೆಗೆ ಎಲ್ಲವನ್ನೂ ಕಲಿಯಲು ಒಟ್ಟು ೪೩೧ ನಿಮಿಷ ಕಾಲ ಬೇಕಾಯಿತು. ಆದ್ದರಿಂದ ಒಂದೊಂದು ಸಲವೂ ಪೂರ್ಣ ಭಾಗವನ್ನೂ ಅಭ್ಯಾಸಿಸುತ್ತ ಕಲಿವುದು ಆರ್ಥಿಕವಾದುದು; ಜೊತೆಗೆ, ಒಂದೊಂದು ಭಾಗವನ್ನೇ ಒಮ್ಮೊಮ್ಮೆ ಅಭ್ಯಾಸಿಸಿ ಕಲಿಯುತ್ತ ಪೂರೈಸು ವುದರಿಂದ ಕಲಿತದ್ದು ಬೇಗ ಮರೆತುಹೋಗುತ್ತದೆ; ಹೆಚ್ಚು ಕಾಲವೂ ಬೇಕು. ಪೂರ್ಣ ಭಾಗದ ಅಭ್ಯಾಸಕ್ರಮ ಯಶಸ್ವಿಯಾಗುವುದಕ್ಕೆ ಹಲವು ಕಾರಣ ಗಳನ್ನು ಕೊಡಬಹುದು: ಮೊದಲನೆಯದಾಗಿ, ಅನೇಕ ಪದ್ಯಗಳನ್ನೊಳ ಗೊಂಡ ಒಂದು ಕವಿತೆಯನ್ನು ಕಲಿಯುವಾಗ ಒಮ್ಮೊಮ್ಮೆಗೆ ಒಂದೊಂದೇ ಪದ್ಯವನ್ನು ಅಭ್ಯಾಸಮಾಡುವಾಗ ಅದನ್ನೇ ಅನೇಕಾವರ್ತಿ ಓದುತ್ತೇವೆ. ಅದರಿಂದ ಆ ಪದ್ಯದ ಕೊನೆಯ ಪದ ಮುಗಿದೊಡನೆ ಪುನಃ ಅದರ ಮೊದಲ ಪದವನ್ನು ಉಚ್ಚರಿಸುತ್ತೇವೆ. ಆದರೆ ಮುಂದಿನ ಪದ್ಯದ ಮೊದಲ ಪದಕ್ಕೂ

ಓದುತ್ತಿರುವ ಪದ್ಯದ ಕೊನೆಯ ಪದಕ್ಕೂ ಯಾವ ರೀತಿಯ ಸಂಬಂಧವೂ ಕಲ್ಪನೆಯಾಗುವುದಿಲ್ಲ. ಆದ್ದರಿಂದ ಎಲ್ಲ ಪದ್ಯಗಳನ್ನೂ ಪ್ರತ್ಯೇಕವಾಗಿ ಕಂಠಪಾಠ ಮಾಡಿದಮೇಲೆ ಇಡೀ ಕವನವನ್ನೇ ಹೇಳೆಂದು ಕೇಳಿದರೆ ತುಂಬ ಕಷ್ಟವಾಗುತ್ತದೆ. ಏಕೆಂದರೆ ಒಂದು ಪದ್ಯ ಮುಗಿದೊಡನೆಯೇ ಮುಂದಿನ ಪದ್ಯದ ಮೊದಲ ಪದವನ್ನು ನೆನಸುವಂಥ ಸಂಬಂಧವೇ ಕಲ್ಪನೆಯಾಗಿಲ್ಲ. ಅದರ ಬದಲು ಅದೇ ಪದ್ಯದ ಮೊದಲ ಪದವೇ ಪುನಃ ನೆನಪಾಗುತ್ತದೆ. ಇದು ಅನಾವಶ್ಯಕ. ಅವರು ಮುಂದಕ್ಕೆ ಹೇಳಿಕೊಂಡು ಹೋಗಬೇಕಾದರೆ ಯಾರಾದರೂ ಪ್ರತಿಯೊಂದು ಪದ್ಯದ ಮೊದಲ ನುಡಿಯನ್ನು ಎತ್ತಿಕೊಟ್ಟು ಸಹಾಯಮಾಡಬೇಕಾಗುತ್ತದೆ. ಎರಡನೆಯದಾಗಿ, ಭಾಗ ಭಾಗಗಳನ್ನು ಪ್ರತ್ಯೇಕವಾಗಿ ಅಭ್ಯಾಸಿಸುತ್ತಿರುವುದರಿಂದ ಮುಗಿಯುವವರೆಗೂ ಪದ್ಯದ ಪೂರ್ಣ ಅರ್ಥ ಆಗುವುದಿಲ್ಲ; ಅರ್ಥ ಜ್ಞಾನ ಸರಿಯಾಗಿಲ್ಲದೆ, ಅಭ್ಯಾಸ ಕಷ್ಟವಾಗಿ ಜಾಗ್ರತೆ ಹೃದ್ಗತವಾಗುವುದಿಲ್ಲ. ಮೂರನೆಯದಾಗಿ, ಪೂರ್ಣ ಭಾಗದ ಅಭ್ಯಾಸ ಕ್ರಮದಲ್ಲಿ ನಮ್ಮ ಮುಂದೆ ತುಂಬ ದೊಡ್ಡ ಕೆಲಸವಿರುವುದನ್ನು ಕಂಡು ನಮ್ಮ ಅವಧಾನವನ್ನು ಹುರಿಗೊಳಿಸಿ ದೃಢಮನಸ್ಸಿನಿಂದ ಕಲಿಯಲು ಕಾರ್ಯಮುಖರಾಗುತ್ತೇವೆ; ಆಗ ಕಲಿವು ಬೇಗ ಸಿದ್ಧಿಸುತ್ತದೆ. ನಾಲ್ಕನೆಯದಾಗಿ ಪೂರ್ಣಾಭ್ಯಾಸ ಕ್ರಮ ಆರ್ಥಿಕ ರೀತಿಯ ಕ್ರಮ. ಏಕೆಂದರೆ ಒಮ್ಮೆ ಪೂರ್ಣ ಪದ್ಯವನ್ನು ಓದಿ ಬೇಕಾದಷ್ಟು ವಿರಾಮ ಕೊಡುವುದರಿಂದ ಓದಿದ ಅಂಶಗಳ ಮೇಲೆ ಅನಂತವಾಗಿ ಯೋಚಿಸಿ ಕಷ್ಟವಾದದ್ದನ್ನು ಅರಿತುಕೊಂಡು ಮನಸ್ಸಿನಲ್ಲಿ ಆ ಸಂಬಂಧಗಳ ಮೂಲಕ, ಅರ್ಥಜ್ಞಾನದ ಮೂಲಕ ಸ್ಮರಿಸಿಕೊಳ್ಳುವುದರಿಂದ ಮುಂದಿನ ಅಭ್ಯಾಸ ಜಾಗ್ರತೆಯಾಗಿ ಸಾಗಲು ನೆರವಾಗುತ್ತದೆ.

ಆದ್ದರಿಂದ ಗದ್ಯ, ಪದ್ಯ, ಪದಗಳ ಪಟ್ಟಿ, ಕೋಷ್ಟಕ, ಅರ್ಥ ವಿರಹಿತ ಪದಗಳ ಪಟ್ಟಿ ಇವಾವನ್ನಾದರೂ ಪೂರ್ಣಾಭ್ಯಾಸ ಕ್ರಮದಲ್ಲೇ ಕಲಿಯುವುದು ಉತ್ತಮ. ಆದರೆ ಕುಶಲಕಲೆಗಳನ್ನು ಅಭ್ಯಾಸಿಸುವಾಗ ಪ್ರತ್ಯೇಕವಾಗಿಯೇ ಭಾಗ ಭಾಗಗಳನ್ನಾಗಿ ಕಲಿಯುವುದು ಉತ್ತಮವೆಂದು ತೋರುತ್ತದೆ.

ಕವಿತೆಯ ಪ್ರತ್ಯೇಕ ಭಾಗಗಳನ್ನು ಒಂದೊಂದಾಗಿ ಅಭ್ಯಾಸಿಸುವ ಕ್ರಮವೇ ಉತ್ತಮವೆಂದು ವಾದಿಸುವವರೂ ಇರುವರು. ತಮ್ಮ ವಾದವನ್ನು

ಸಮರ್ಥಿಸಲು ಅವರೂ ಹಲವು ಕಾರಣಗಳನ್ನು ಕೊಡುವರು : ' ಮೊದಲು ಒಂದು ಭಾಗವನ್ನು ಕಲಿತುಬಿಟ್ಟರೆ ಮಕ್ಕಳಿಗೆ ತೃಪ್ತಿಸಂತೋಷಗಳಾಗುವುದರಿಂದ ಮುಂದೆ ಕಲಿಯಲು ಸಹಾಯವಾಗುತ್ತದೆ; ಅತಿ ದೀರ್ಘವಾದ ಪದ್ಯಭಾಗವನ್ನು ಒಮ್ಮೆಯೇ ಓದಲು ಹೋದಾಗ, ಎಷ್ಟು ಕಷ್ಟ ಕಲಿಯುವುದು ಎಂದು ಮಕ್ಕಳು ಹಿಂಜರಿದುಕೊಂಡಾರು. ಆದರಿಂದ ವಿಭಾಗಮಾಡಿಕೊಂಡು ಅಭ್ಯಾಸಿಸುತ್ತ ಕಲಿವುದು ಉತ್ತಮ, ಎಂದು ಅವರು ವಾದಿಸುವರು. ಆದರೂ, ಮೇಲೆ ವಿವರಿಸಿದ ಸಂಶೋಧನೆಗಳಿಂದ ಪೂರ್ಣ ಭಾಗದ ಅಭ್ಯಾಸವೇ ಆರ್ಥಿಕವಾದ ಕ್ರಮವೆಂದು ದೃಢಪಟ್ಟಿರುತ್ತದೆ. ಆದರೆ ಆ ಪೂರ್ಣ ಭಾಗಾಭ್ಯಾಸದ ಕ್ರಮದಲ್ಲಿ ಕಲಿಯುವಾಗ ಹಲವು ಎಚ್ಚರಿಕೆಗಳನ್ನು ತೆಗೆದುಕೊಳ್ಳಬೇಕು. ನಾವು ಕಲಿಯಬೇಕಾದ ಕವಿತೆಯ ಎಲ್ಲ ಪದ್ಯಗಳೂ ಕಷ್ಟದಲ್ಲಿ ಒಂದೇ ಸಮನಾಗಿದ್ದರೆ ಆ ಕ್ರಮ ಉಚಿತವೆನಿಸಬಹುದು; ಒಂದೊಂದು ಪದ್ಯ ಸುಲಭವಾಗಿಯೂ, ಒಂದೊಂದು ಕಷ್ಟವಾಗಿಯೂ ಇದ್ದರೆ ಅಷ್ಟು ಉಚಿತವೆನಿಸುವುದಿಲ್ಲ. ಏಕೆಂದರೆ ಸುಲಭವಾದ್ದನ್ನು ಆವಶ್ಯಕತೆಗಿಂತ ಹೆಚ್ಚುಸಲ ಓದಬೇಕಾಗುತ್ತದೆ; ಕಷ್ಟವಾದ್ದಕ್ಕೆ ತಕ್ಕಷ್ಟು ಪ್ರತ್ಯೇಕ ಗಮನ ಕೊಡುವಂತಿಲ್ಲ. ಒಂದೇಸಮದ ಪದ್ಯಗಳನ್ನೊಳಗೊಂಡಿದ್ದರೇನೋ ಈ ಕ್ರಮ ಆರ್ಥಿಕರೀತಿಯದೆಂಬುದರಲ್ಲಿ ಸಂಶಯವಿಲ್ಲ. ಆದರೆ ಇವೆರಡರ ಉತ್ತಮ ಗುಣಗಳನ್ನೂ ಪಡೆದಿರುವ ಮಾರ್ಗವೊಂದನ್ನು ಅನುಸರಿಸುವುದು ಹೆಚ್ಚು ಲಾಭದಾಯಕವಾದ್ದು ; ಮೊದಲು ಪದ್ಯವನ್ನು ಕೆಲವುಸಲ ಸಂಪೂರ್ಣವಾಗಿ ಓದಿಕೊಳ್ಳುವುದು ; ಅನಂತರ ಪ್ರತ್ಯೇಕ ಪದ್ಯಗಳನ್ನು ಒಂದೊಂದಾಗಿ ಅಭ್ಯಾಸಿಸಿ ಕಲಿಯುವುದು ; ಕೊನೆಗೆ, ಎಲ್ಲವನ್ನೂ ಒಟ್ಟಿಗೆ ಹಲವು ಸಲ ಓದುವುದು—ಇದು ಉತ್ತಮ ಮಾರ್ಗ. ಇದರಲ್ಲಿ ಮೇಲಿನ ಎರಡು ಕ್ರಮಗಳ ಸೌಲಭ್ಯಗಳೂ ಇವೆ; ಒಂದು ಪದ್ಯಕ್ಕೂ ಮುಂದಿನ ಪದ್ಯಕ್ಕೂ ಸಂಬಂಧ ಕಲ್ಪನೆಯಾಗಿ ಧಾರಣಶಕ್ತಿ ದೃಢವಾಗುತ್ತದೆ; ಕಷ್ಟವಾದ ಭಾಗಕ್ಕೆ ಹೆಚ್ಚು ಕಾಲವನ್ನು ಕೊಡಲೂ ಅನುಕೂಲವಿದೆ. ಪೂರ್ಣ ಕವಿತೆಯ ಅರ್ಥ ತಿಳಿದಿರುವುದರಿಂದ ಆ ವಿಷಯದಲ್ಲಿ ಆಲೋಚಿಸಲೂ ಸಹಾಯವಾಗುತ್ತದೆ ; ಗ್ರಹಣಶಕ್ತಿಯೂ ಚೆನ್ನಾಗಿ ಆಗುತ್ತದೆ. ಆದ್ದರಿಂದ ಮಧ್ಯಸ್ಥವೆನ್ನಬಹುದಾದ ಈ ಮೂರನೆಯ ಕ್ರಮ ಎಲ್ಲ ಸಂದರ್ಭಗಳಿಗೂ ಉಚಿತವೆನಿಸುತ್ತದೆ.

೩. ಹೃದ್ಗತವಾಗುವವರೆಗೂ ಒಂದೇಸಮನೆ ಓದುವುದಕ್ಕಿಂತ ಅಂದಂದು ಪುಸ್ತಕ ಮುಚ್ಚಿ, ಎಷ್ಟರಮಟ್ಟಿಗೆ ಹೃದ್ಗತವಾಗಿದೆಯೆಂದು ಪರೀಕ್ಷಿಸಿಕೊಂಡು ಅಭ್ಯಾಸಿಸುವುದು ಉತ್ತಮ. ಅದರಿಂದ ನಾವು ಕಲಿತಷ್ಟು ಭಾಗ ತೃಪ್ತಿಯನ್ನುಂಟುಮಾಡಿ ಮುಂದಿನದನ್ನು ಕಲಿಯಲು ಪ್ರೋತ್ಸಾಹಿಸುತ್ತದೆ; ಮಧ್ಯೆ ಮಧ್ಯೆ ತಪ್ಪುವ ಕಷ್ಟವಾದ ಭಾಗವನ್ನು ಪುಸ್ತಕ ತೆಗೆದು ನೋಡಿಕೊಂಡು ಕಲಿತುಕೊಳ್ಳಲೂ ಸಹಾಯವಾಗುತ್ತದೆ; ಮುಂದೆ ಅದೇ ರೀತಿಯಲ್ಲಿ ಆ ಪದ್ಯವನ್ನು ಜ್ಞಾಪಿಸಿಕೊಳ್ಳಬೇಕಾಗಿರುವುದರಿಂದ ಆ ಕಾರ್ಯದ ಅಭ್ಯಾಸವೂ ಆದಂತಾಗುತ್ತದೆ; ಅದರಿಂದ ಜಾಗ್ರತೆ ಹೃದ್ಗತ ಮಾಡಲೂ ಸಹಾಯವಾಗುವುದು. ಅಂದಂದು ಪುಸ್ತಕ ಮುಚ್ಚಿ ಬಾಯಿಪಾಠದಲ್ಲಿ ಹೇಳಿಕೊಂಡು ಅಭ್ಯಾಸವನ್ನು ಮುಂದುವರಿಸುವುದು ಒಳ್ಳೆಯದು.

೪. ಅಭ್ಯಾಸ ಮಾಡುವಾಗ ಮನಸ್ಸಿನಲ್ಲೇ ಓದುವುದಕ್ಕಿಂತಲೂ ಗಟ್ಟಿಯಾಗಿ ಉಚ್ಚರಿಸಿಕೊಂಡು ಓದುವುದು ಮೇಲು. ಅದರಿಂದ ಮನಸ್ಸಿಗೆ ಪದ್ಯ ಕಿವಿಯ ಮೂಲಕವೂ ಕಣ್ಣಿನ ಮೂಲಕವೂ ಪ್ರತ್ಯಕ್ಷಾನುಭವವನ್ನು ಹುಟ್ಟಿಸಿ ಕಲಿವು ಸ್ಫುಟಗೊಳ್ಳುತ್ತದೆ.

೫. ಜ್ಞಾಪಕಶಕ್ತಿಯನ್ನು ಆರ್ಥಿಕವಾಗಿ ಉಪಯೋಗಿಸಬೇಕಾದರೆ ಅಭ್ಯಾಸಿಸುವಾಗ ಕಲಿಯಬೇಕಾದ ಅಂಶದಲ್ಲಿ ಪೂರ್ಣ ಅವಧಾನವನ್ನಿರಿಸುವುದು ಅಗತ್ಯ. ಅವಧಾನವಿಲ್ಲದಾಗ, ಅವಧಾನ ಅಪಕ್ವವಾಗಿದ್ದಾಗ ಪಟ್ಟ ಮನಸ್ಸಿನ ಶ್ರಮ ವ್ಯರ್ಥವಾಗುವುದರಿಂದ ಅಭ್ಯಾಸ ಮಾಡುವಾಗ ಪೂರ್ಣ ಅವಧಾನವನ್ನು ಇರಿಸಬೇಕು.

೬. ಆರ್ಥಿಕ ಅಭ್ಯಾಸ ಕ್ರಮದ ಪರಿಚಯವೂ ಮಕ್ಕಳಿಗೆ ಆಗುವಂತೆ ತಿಳಿವಳಿಕೆ ಕೊಡಬೇಕು.

## ೬. ಭಾವ ಸೂಚನೆ (ಸಲಹೆ)

ನಮ್ಮ ಅಂತರಾತ್ಮದಿಂದಲೋ, ಇತರ ವಸ್ತು ಮತ್ತು ವ್ಯಕ್ತಿಗಳಿಂದಲೋ ಧ್ವನಿತವಾಗುವ ಭಾವಗಳು ನಮ್ಮ ಆಲೋಚನೆಯನ್ನು ಬಹುವಾಗಿ ರೂಪಿಸುತ್ತವೆ; ಅನೇಕ ವೇಳೆ ಅವನ್ನು ಮರುಮಾತಿಲ್ಲದೆ ನಾವು ಒಪ್ಪಿ ಸ್ವೀಕರಿಸುತ್ತೇವೆ. ಇವನ್ನು ಭಾವ ಸೂಚನೆ ಅಥವಾ ಸಲಹೆಯೆನ್ನುತ್ತೇವೆ.

ಬಲವಂತದಿಂದ ಒಪ್ಪಿಸುವುದು ಭಾವ ಸೂಚನೆಯಲ್ಲ: ವ್ಯಕ್ತಿ ತಾನಾಗಿಯೇ ಒಪ್ಪುವಂತಿರಬೇಕು. ಕಾರಣವಿಲ್ಲದಿದ್ದರೂ, ತಾರ್ಕಿಕವಲ್ಲದಿದ್ದರೂ ವ್ಯಕ್ತಿಯು ಒಪ್ಪುವಂತೆ ಆ ಭಾವಪ್ರವಾಹ ಅವನ ಮೇಲೆ ಹರಿದುಬರುತ್ತದೆ. ಹಾಗೆ ಇತರರಿಂದ ಬಂದ ಆ ಭಾವಗಳನ್ನು ನಮ್ಮವೇ ಎಂದು ಗಣಿಸಿಬಿಡುತ್ತೇವೆ; ಅದನ್ನು ಇತರರಿಂದ ಪಡೆದಿರುತ್ತೇವೆಂಬ ಅರಿವೂ ಅನೇಕ ವೇಳೆ ಇರುವುದಿಲ್ಲ. ಆದರೆ ಸಲಹೆ ಮಾಡುತ್ತಿರುವವರು ಅದನ್ನು ಉದ್ದೇಶಪೂರ್ವಕವಾಗಿಯೇ ಮಾಡುತ್ತಿರಬಹುದು.

ತನಗರಿವಿಲ್ಲದಂತೆಯೇ ವ್ಯಕ್ತಿ ಸಲಹೆಯನ್ನು ಸ್ವೀಕರಿಸುವುದು ಒಂದು ಹುಟ್ಟುಗುಣವೆಂದು ಹಲವರು ಭಾವಿಸುವರು. ಮತ್ತೆ ಕೆಲವರು ಅದನ್ನೊಪ್ಪು ವುದಿಲ್ಲ: 'ಅದು ಸ್ವಾಭಾವಿಕವಾಗಿರುವಂತೆ ಕಂಡುಬಂದರೂ, ಅನೇಕ ಹುಟ್ಟು ಗುಣಗಳ ಕಾರ್ಯ ಚಟುವಟಿಕೆಗಳ ಸಂಯೋಗದಿಂದ ನಡೆಯುವ ಮನೋ ಪ್ರವೃತ್ತಿ'ಯೆಂದು ಅಂಥವರು ವಾದಿಸುವರು.

**ಸಲಹೆಯ ವಿಧಗಳು:** ಭಾವ ಸೂಚನೆಯನ್ನು ಬಗೆ ಬಗೆಯಾಗಿ ವಿಂಗಡಿಸುವರು: ಸಲಹೆಯನ್ನು ಸ್ವೀಕರಿಸುವ ಕಾಲದ ವ್ಯಕ್ತಿಯ ಮನಸ್ಸಿನ ಸ್ಥಿತಿಯನ್ನನುಸರಿಸಿ ಎರಡು ವಿಧವಾಗಿ ವಿಂಗಡಿಸಬಹುದು: ಗಾರುಡೀ ಸಲಹೆ: ಜಾಗ್ರತ ಸಲಹೆ.

**೧. ಗಾರುಡೀ ಸಲಹೆ:** ಒಬ್ಬನ ಮನಸ್ಸು ಇಂದ್ರಜಾಲ ವಿದ್ಯೆ ಯಿಂದ ಇನ್ನೊಬ್ಬನಿಗೆ ವಶಗೊಂಡಾಗ, ಬರುತ್ತಿರುವ ಸಲಹೆಗೆ ಅವನು ಯಾಂತ್ರಿಕವಾಗಿ ಬಲಿಯಾಗುತ್ತಾನೆ. ಸಾಮಾನ್ಯ ಸ್ಥಿತಿಯಲ್ಲಿ ಯಾವುದನ್ನು ಒಪ್ಪಲು, ಮಾಡಲು ಇಚ್ಛಿಸುವುದಿಲ್ಲವೋ ಅಂಥದನ್ನೂ ಕೂಡ ಈ ಅವಸ್ಥೆ ಯಲ್ಲಿ ಒಪ್ಪಿ ಮಾಡುತ್ತಾನೆ. ಹೀಗೆ ವ್ಯಕ್ತಿಯ ಮನಸ್ಸನ್ನು ವಶೀಕರಿಸಿ ಕೊಂಡಾಗ ಅವನ ಮನಸ್ಸಿನ ಮೇಲೆ ಯಾವ ಸಲಹೆಯನ್ನಾದರೂ ಮಾಡಿ ಬಿಡಬಹುದು. ಈ ಇಂದ್ರಜಾಲ ವಶೀಕರಣದ ಗಾರುಡೀ ಸಲಹೆ ಶಿಕ್ಷಣ ದೃಷ್ಟಿಯಿಂದ ಮುಖ್ಯವಲ್ಲ.

**೨. ಜಾಗ್ರತ ಸಲಹೆ:** ಸಲಹೆಯನ್ನು ಸ್ವೀಕರಿಸುವಾಗ ವ್ಯಕ್ತಿ ಜಾಗ್ರತಾವಸ್ಥೆಯಲ್ಲಿದ್ದರೆ ಅಂಥ ಸಲಹೆಯನ್ನು ಜಾಗ್ರತ ಸಲಹೆಯೆಂದು ಹೇಳ ಬಹುದು. ಆಗ ಸಲಹೆ ಬರುವ ತವರನ್ನನುಸರಿಸಿ ಅದನ್ನೂ ಎರಡು ಭಾಗ ವಾಗಿ ವಿಂಗಡಿಸಿರುವರು; ಸ್ವಯಂ ಸಲಹೆ; ಪರಕೀಯ ಸಲಹೆ.

**೧. ಸ್ವಯಂ ಸಲಹೆ:** ತನ್ನ ಅಂತರಾತ್ಮದಿಂದಲೇ ಈ ಸಲಹೆ ಬರುತ್ತದೆ. ಸಲಹೆ ಮಾಡುವ ವ್ಯಕ್ತಿ ಬೇರೆಯಲ್ಲ. ತನ್ನ ಯಾವುದೋ ಅನುಭವ ಸ್ಮರಣಾರೂಪದಲ್ಲಿ ಬಂದು ಸಲಹೆ ಮಾಡುತ್ತದೆ. ಕಲಾವಿದನೊಬ್ಬನು ಅಂಥ ಸಲಹೆಯೊಂದರಿಂದ ಒಂದು ಹೊಸ ಚಿತ್ರವನ್ನು ಬರೆಯಬಹುದು; ಸಾಹಿತಿಯೊಬ್ಬನಿಗೆ ಸ್ವಭಾವ ಸ್ಫೂರ್ತಿಯು ನೂತನ ಕೌಶಲವನ್ನು ತೋರಬಹುದು; ವಿಜ್ಞಾನಿಯೊಬ್ಬನಿಗೆ ಸಂಶೋಧನೆ ನಡಸುತ್ತಿರುವಾಗ ತನ್ನ ಪ್ರತಿಭೆಯಿಂದಲೇ ಯಾವುದೋ ಒಂದು ತತ್ತ್ವವೋ ಸಿದ್ಧಾಂತವೋ ಸಲಹೆಯಾಗಿ ಬರಬಹುದು; ಅದರ ಆಧಾರದ ಮೇಲೆ ಪ್ರಯೋಗಗಳನ್ನು ನಡಸಿ ಒಂದು ನೂತನ ಸತ್ಯ ದರ್ಶನ ಮಾಡಿಕೊಳ್ಳಲು ಸಹಾಯವಾಗಬಹುದು. ಆಗ ಹೊಳೆದ ಆ ಸಲಹೆ ತನ್ನ ಮುಂದಿರುವ ಅಂಕಿ ಅಂಶಗಳಿಂದ ಸಿದ್ಧಪಡುವಂತಿಲ್ಲದಿದ್ದರೂ ಅದು ಹೊಳೆದಿದೆ; ಆ ಸಲಹೆಯನ್ನು ಬರಮಾಡಿಕೊಂಡು ಮುಂದಿನ ಸಂಶೋಧನೆ ನಡಸಲು ಹೊರಡುತ್ತಾನೆ. ಅದಕ್ಕೆ ತವರು ಅವನೇ.

**೨. ಪರಕೀಯ ಸಲಹೆ:** ಹೊರ ತವರಿನಿಂದ ಬರುವ ಸಲಹೆಗೆ ಪರಕೀಯ ಸಲಹೆಯೆನ್ನುತ್ತೇವೆ. ಹಾಗೆ ಸಲಹೆ ಮಾಡತಕ್ಕದ್ದು ವಸ್ತುವೋ ವ್ಯಕ್ತಿಯೋ ಎಂಬುದರ ಆಧಾರದಮೇಲೆ ಅದನ್ನೂ ಎರಡು ವಿಧವಾಗಿ ವಿಂಗಡಿಸಿರುವರು: ವಸ್ತುಮೂಲ ಸಲಹೆ; ವ್ಯಕ್ತಿಮೂಲ ಸಲಹೆ.

**೧. ವಸ್ತುಮೂಲ ಸಲಹೆ:** ಹಲವು ವಸ್ತುಗಳು ತಮ್ಮ ಸ್ವಭಾವದಿಂದ ಸಲಹೆಮಾಡಬಲ್ಲವು. ಬಾಂದಳದ ನೀಲಿಮೆಯ ನಡುವೆ ಸಂಜೆಯ ಕೆಮ್ಮುಗಿಲು ವಿರಾಜಿಸುತ್ತಿರುವಾಗ, ತಿಳಿನೀರು ಬನಗಳಲ್ಲಿ ಸುತ್ತಮುತ್ತಣ ಸೊಬಗನ್ನು ಪ್ರತಿಬಿಂಬಿಸಿಕೊಂಡು ಹರಿದೋಡುತ್ತಿರುವಾಗ ಕವಿಗೆ ನೂತನ ಸಂದೇಶವೊಂದರ ಸಲಹೆಯಾಗಬಹುದು; ಸಸ್ಯವರ್ಗದಲ್ಲಿ ಬೇರೆ ಬೇರೆ ಜಾತಿಗಳಿದ್ದರೂ, ಅವೆಲ್ಲಕ್ಕೂ ಸಾಮಾನ್ಯವಾಗಿರುವ ಗುಣವೊಂದು ಆ ವಂಶದ ಇತಿಹಾಸದ ವಿಷಯವಾಗಿ ಸಲಹೆ ನೀಡಬಹುದು; ಎರಡು ಭಿನ್ನ ಆಕಾರದ ಲೋಹದ ತುಂಡುಗಳು ಅವುಗಳಲ್ಲಿ ಯಾವುದು ಭಾರವೆಂಬುದನ್ನು ತಮ್ಮ ಆಕೃತಿಯಿಂದ ಸಲಹೆ ಮಾಡಬಹುದು; ಇಲ್ಲಿ ಸಲಹೆ ಬರುವುದು ವಸ್ತುಗಳಿಂದ; ಸನ್ನಿವೇಶಗಳಿಂದ.

**೨. ವ್ಯಕ್ತಿಮೂಲ ಸಲಹೆ:** ಇತರ ಮಾನವರಿಂದ ನಮಗೆ ದೊರೆಯುವ ಸಲಹೆಗಳಿಗೆ ವ್ಯಕ್ತಿಮೂಲ ಸಲಹೆಯೆನ್ನುತ್ತೇವೆ. ಗಾಂಧೀ ಜಯಂತಿಗೆ ರಜ ಕೊಡಬೇಕಲ್ಲವೆ? ಎಂದು ಉಪಾಧ್ಯಾಯರನ್ನು ಬಾಲಕರು ಪ್ರಶ್ನಿಸಿದಾಗ ಅವರ ಮನೋಭಾವ ಪ್ರಶ್ನೆಯಲ್ಲಿಯೇ ಇದೆ; ಆವಶ್ಯಕತೆಯನ್ನು ಸಲಹೆ ಮಾಡುವಂತಿದೆ. ಹಾಗೆಯೇ ಗುಂಡಿ ಅಂಟಿಸಿದ್ದ ಒಂದು ಹಾಳೆಯನ್ನು ತರಗತಿಗೆ ಉಪಾಧ್ಯಾಯರು ಒಮ್ಮೆ ತೋರಿಸಿ, ಮುಚ್ಚಿಕೊಂಡು,

ಗುಂಡಿ ಹೇಗೆ ಸೇರಿಸಿತ್ತು?

ಹೊಲಿದಿತ್ತೆ ದಾರದಿಂದ?

ದಾರದ ಬಣ್ಣ ಯಾವುದು?

—ಈ ಬಗೆಯಾಗಿ ಪ್ರಶ್ನಿಸಿದರೆ ಮೊದಲನೆಯ ಪ್ರಶ್ನೆ ಯಾವ ಸಲಹೆಯನ್ನೂ ಮಾಡಲಾರದು; ಎರಡನೆಯದೂ ಮೂರನೆನೆಯದೂ ಸಲಹೆಯೊಂದನ್ನು ನೀಡುವಂತಿವೆ. ಅವರು ಅಂಟಿಸಿದ್ದನ್ನು ಕಂಡಿರಲಿ ಇಲ್ಲದಿರಲಿ ಕೊನೆಯ ಎರಡು ಪ್ರಶ್ನೆಗಳ ಸ್ವರೂಪ ಹೊಲಿದಿರಬಹುದೆಂಬ ಸಲಹೆ ಮಾಡಬಲ್ಲದು. ಹೀಗೆ ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯ ಮೇಲೆ ಪರಿಣಾಮ ಹುಟ್ಟಿಸಬಹುದಾದ ಈ ರೀತಿಯ ಸಲಹೆ ಶಿಕ್ಷಕರಿಗೆ ತುಂಬ ನೆರವಾಗುತ್ತದೆ. ಇದನ್ನೂ ಎರಡು ವಿಧವಾಗಿ ವಿಂಗಡಿಸಿರುವರು: ಸ್ಥಾನ ಗೌರವದ ಸಲಹೆ; ಸಮೂಹದ ಸಲಹೆ.

**೧. ಸ್ಥಾನಗೌರವದ ಸಲಹೆ:** ಗುರುಗಳು ಶಿಷ್ಯರಿಗೆ, ಉಪಾಧ್ಯಾಯರು ವಿದ್ಯಾರ್ಥಿಗಳಿಗೆ, ತಂದೆತಾಯಿಗಳು ಮಕ್ಕಳಿಗೆ, ಹಿರಿಯರು ಕಿರಿಯರಿಗೆ, ಆದರ್ಶ ಪುರುಷರು ನಾಡಿನ ಜನತೆಗೆ ಮಾಡುವ ಸಲಹೆ ಮರುಮಾತಿಲ್ಲದೆ ಸ್ವೀಕೃತವಾಗುವುದು; ಹಾಗೆಯೇ ಮುಖಂಡರ ಮತ್ತು ಅಭಿಮಾನದ ತವರಾದ ವಾಗ್ಮಿಗಳ ಸಲಹೆಯೂ ಕೂಡ. ಹೀಗೆ ಮಾಡುವ ಸಲಹೆಯನ್ನು ಸ್ವೀಕರಿಸುವುದಕ್ಕೆ ವ್ಯಕ್ತಿ ಅವರಲ್ಲಿಟ್ಟಿರುವ ಗೌರವಾಭಿಮಾನಗಳೇ ಕಾರಣ; ಸಲಹೆ ಮಾಡತಕ್ಕ ವ್ಯಕ್ತಿಗಳ ಸ್ಥಾನಮಾನಗಳಿಂದ ಸಲಹೆ ಪ್ರಭಾವಕಾರಿಯಾಗಬಲ್ಲದು. ವಾಗ್ಮಿಯೊಬ್ಬನು ಜನತೆಯ ಮೇಲೆ ತನ್ನ ಪ್ರಭಾವವನ್ನು ಬೀರಬೇಕಾದರೆ ಅವನಲ್ಲಿ ಜನತೆಗಿರುವ ಗೌರವಾದರಗಳು

ಬಹುಮಟ್ಟಿಗೆ ಸಹಾಯಮಾಡಬಲ್ಲವು. ಅವನನ್ನು ಜನತೆಗಳು ವಂತಿದ್ದರೆ ಅವನ ಸಲಹೆ ವ್ಯರ್ಥವಾಗಬಹುದು. ಆದ್ದರಿಂದ ಮುಂದಾಳುಗಳು ಜನತೆಯ ಆದರಾಭಿಮಾನಗಳನ್ನು ಪಡೆದಿರಬೇಕು. ಮಕ್ಕಳ ಮೇಲೆ ಸಲಹೆ ಯಶಸ್ವಿಯಾಗಬೇಕಾದರೆ ಉಪಾಧ್ಯಾಯರು ಅವರ ಪ್ರೀತಿ ವಿಶ್ವಾಸಗಳನ್ನು ಪಡೆದುಕೊಂಡು ಗೌರವ ಸಂಪಾದಿಸಬೇಕು.

ಸ್ಥಾನಗೌರವದಿಂದ ಮೂಡುವ ಅಂಥ ಸಲಹೆಯನ್ನು ಸ್ವೀಕರಿಸಲು ಮಕ್ಕಳ ಹುಟ್ಟುಗುಣವಾದ ಪರಾಧೀನತೆ ನೆರವಾಗುತ್ತದೆ. ಸಲಹೆ ಈಯುವವರು ತಮಗಿಂತ ಎಷ್ಟೋ ಉತ್ತಮರೆಂದು ಭಾವಿಸಿದಾಗ ಅದು ಬೇಗ ಸ್ವೀಕೃತವಾಗುತ್ತದೆ. ಹಾಗೆಯೇ ಪ್ರವೀಣರು ನೀಡುವ ಸಲಹೆಯೂ ಕೂಡ.

೨. **ಸಮೂಹದ ಸಲಹೆ:** ದೊಡ್ಡ ಗುಂಪಿನಲ್ಲಿರುವಾಗ ಬಹುಮಂದಿ ಮಾಡುವ ಸಲಹೆಯನ್ನು ವ್ಯಕ್ತಿ ಸ್ವೀಕರಿಸಬೇಕಾಗುತ್ತದೆ. ಅವನಿಗೆ ಅದು ಹಿತವೆನಿಸದಿದ್ದರೂ ಸಂಖ್ಯಾ ಬಾಹುಳ್ಯಕ್ಕೆ ಅಧೀನನಾಗಿ ಒಪ್ಪುವಂತಾಗುತ್ತದೆ. ರಾಜಕೀಯ ಚಳುವಳಿಗಳಲ್ಲೂ, ಧಾರ್ಮಿಕ ಪ್ರಚಾರಗಳಲ್ಲೂ ವ್ಯಕ್ತಿ ಪರಾಧೀನನಾಗಿ ಸಮೂಹದಿಂದ ಬರುವ ಸಲಹೆಯನ್ನು ಸ್ವೀಕರಿಸುವನು.

ಸ್ಥಾನಗೌರವದ ಸಲಹೆಯಾಗಲಿ ಸಮೂಹದ ಸಲಹೆಯಾಗಲಿ ಪರಿಣಾಮಕಾರಿಯಾಗಬೇಕಾದರೆ ಸಲಹೆ ಮಾಡುವವರಿಗೂ, ಸ್ವೀಕರಿಸುವವರಿಗೂ ಒಂದು ರೀತಿಯ ಬಾಂಧವ್ಯ ಏರ್ಪಡಬೇಕು. ಆ ಸಂಬಂಧ ಪ್ರೀತಿ, ಅಭಿಮಾನ, ಗೌರವ, ಭೀತಿ, ಪರಾಧೀನತೆ ಮೊದಲಾದ ರೀತಿಯದಿರಬಹುದು. ಆ ರೀತಿಯ ಸಂಬಂಧ ಏರ್ಪಟ್ಟ ಹೊರತು ಸಲಹೆ ಪರಿಣಾಮಕಾರಿಯಾಗುವಂತಿಲ್ಲ. ತಿರಸ್ಕಾರ, ದ್ವೇಷ, ಶತ್ರುತ್ವ—ಈ ರೀತಿಯ ಮನೋಬಾಂಧವ್ಯವಿದ್ದರೆ ಆ ಸಲಹೆಯನ್ನು ಸ್ವೀಕರಿಸದಿರುವುದು ಹಾಗಿರಲಿ, ವ್ಯತಿರಿಕ್ತವಾಗಿಯೇ ಪರಿಣಾಮವಾಗಬಹುದು. ನಮಗಾಗದ ವ್ಯಕ್ತಿಯೊಬ್ಬನು 'ಕ್ರಾಂತಿಗೆ ವಿಜಯವಾಗಲಿ!' ಎಂದರೆ ಆ ಸಲಹೆಯಲ್ಲಿ ನಮಗೆ ಸ್ವಾಭಾವಿಕವಾಗಿ ನಂಬಿಗೆಯಿದ್ದರೂ, ಅದನ್ನೊಪ್ಪದೆ ಅವನ ಮೇಲಣ ದ್ವೇಷದಿಂದ 'ಶಾಂತಿಗೆ ವಿಜಯವಾಗಲಿ!' ಎಂದು ಪ್ರತಿ ಘೋಷಣೆಮಾಡಲು ಹೊರಡಬಹುದು. ಇದನ್ನು ವಿರುದ್ಧ ರೀತಿಯ ಸಲಹೆಯೆನ್ನಬಹುದು.

**ಸಲಹೆಯನ್ನು ಪರಿಣಾಮಕಾರಿಯಾಗಿಸಲು ನೆರವಾಗುವ ಸಾಧನಗಳು :** ಒಬ್ಬರು ಇನ್ನೊಬ್ಬರಿಗೆ ಮಾಡುವ ಸಲಹೆ ಪರಿಣಾಮಕಾರಿಯಾಗಬೇಕಾದರೆ ಹಲವು ಸನ್ನಿವೇಶಗಳು ನೆರವಾಗುತ್ತವೆ; ಮತ್ತೆ ಕೆಲವು ಎಡರಾಗಿಯೂ ಪರಿಣಮಿಸುತ್ತವೆ. ಆದ್ದರಿಂದ ಉಪಾಧ್ಯಾಯರು ಮಕ್ಕಳಿಗೆ ತಾವು ಮಾಡುವ ಸಲಹೆ ಯಶಸ್ವಿಯಾಗಬೇಕಾದರೆ ಉಚಿತವೆನಿಸುವ ಸಾಧನಗಳನ್ನೂ ಸನ್ನಿವೇಶಗಳನ್ನೂ ಪರಿಚಯಮಾಡಿಕೊಂಡಿರಬೇಕು.

**೧. ಸಲಹೆಗೆ ಬಾಲ್ಯದ ಔಚಿತ್ಯ :** ಸಲಹೆ ಮಕ್ಕಳ ಮೇಲೆ ಯಶಸ್ವಿಯಾಗುವಂತೆ ದೊಡ್ಡವರ ಮೇಲೆ ಆಗಲಾರದು. ಚಿಕ್ಕ ವಯಸ್ಸಾದ್ದರಿಂದ ಅವರು ಇನ್ನೂ ಅಪ್ರಬುದ್ಧರು; ಉಪಾಧ್ಯಾಯರಲ್ಲಿ ಅಭಿಮಾನ ಗೌರವಗಳೂ ಇರುತ್ತವೆ. ಆದ್ದರಿಂದ ಆಗ ಮಾಡುವ ಸಲಹೆ ಪರಿಣಾಮಕಾರಿಯಾಗುತ್ತದೆ.

**೨. ದೃಢವಾದ ನಂಬಿಗೆ :** ಒಬ್ಬನು ವಿಷಯವೊಂದರಲ್ಲಿ ದೃಢವಾದ ನಂಬಿಗೆಯಿಟ್ಟದ್ದರೆ ಅದಕ್ಕೆ ವ್ಯತಿರಿಕ್ತವಾಗಿ ಮಾಡುವ ಸಲಹೆಯನ್ನು ಸ್ವೀಕರಿಸುವುದಿಲ್ಲ; ತನಗೆ ಪಾಂಡಿತ್ಯವಿರುವ, ಚೆನ್ನಾಗಿ ತಿಳಿದಿರುವ ವಿಷಯದ ಮೇಲೆ ಬರುವ ಅನುಚಿತವೆನ್ನಬಹುದಾದ ಸಲಹೆಗಳೂ ಪರಿಣಾಮಕಾರಿಯಾಗಲಾರವು; ಆದರೆ ಅದೇ ವ್ಯಕ್ತಿಗೆ ಬೇರೊಂದು ಜ್ಞಾನಸರಾಜ್ಯದ ವಿಷಯದಮೇಲೆ ಬರುವ ಸಲಹೆ ಪರಿಣಾಮಕಾರಿಯಾಗಬಹುದು. ಉದ್ದಾಮ ವಿಜ್ಞಾನಿಯಾದರೂ ಸಾಮಾನ್ಯ ರಾಜಕೀಯ ಸಲಹೆಯೊಂದನ್ನು ಸ್ವೀಕರಿಸಬಹುದು. ಏಕೆಂದರೆ, ಆ ವಿಷಯದಲ್ಲಿ ಅವನು ಪಂಡಿತನಲ್ಲದಿರಬಹುದು.

**೩. ವ್ಯಕ್ತಿಯ ಪಾಂಡಿತ್ಯದ ಮಟ್ಟ :** ಒಬ್ಬನು ಇನ್ನೊಬ್ಬನಿಗೆ ಮಾಡುವ ಸಲಹೆಯ ಪರಿಣಾಮ ಅವರವರು ಆ ವಿಷಯದಲ್ಲಿ ಪಡೆದಿರುವ ಪಾಂಡಿತ್ಯದ ಮಟ್ಟವನ್ನು ಅವಲಂಬಿಸುತ್ತದೆ. ಸಾಮಾನ್ಯ ತಿಳಿವಳಿಕೆಯುಳ್ಳ ಗಣಿತ ಶಾಸ್ತ್ರಜ್ಞನೊಬ್ಬನು ಆ ವಿಷಯದ ಉದ್ದಾಮ ಪಂಡಿತನಿಗೆ ನೀಡುವ ಸಲಹೆ ಪರಿಣಾಮಕಾರಿಯಾಗುವುದು ಕಷ್ಟ. ಪಂಡಿತನೊಬ್ಬನು ಪಾಮರನಿಗೆ ಮಾಡುವ ಸಲಹೆ ಯಶಸ್ವಿಯಾಗಬಲ್ಲದು. ಶಾಲೆಯಲ್ಲಿ ಉಪಾಧ್ಯಾಯರು ಎಲ್ಲ ಮಕ್ಕಳಿಗಿಂತಲೂ ಹೆಚ್ಚು ಪಾಂಡಿತ್ಯವುಳ್ಳವರು; ಅನುಭವವುಳ್ಳವರು. ಆದರಿಂದ ಅವರ ಸಲಹೆ ಹೆಚ್ಚು ಯಶಸ್ವಿಯಾಗಲು ಅನುಕೂಲವಿದೆ. ಉಪಾಧ್ಯಾಯರು ಬೋಧಿಸತಕ್ಕ ವಿಷಯದಲ್ಲಿ ತಕ್ಕಷ್ಟು ಪಾಂಡಿತ್ಯವನ್ನು ಪಡೆದಿರುವುದು ಎಷ್ಟು ಆವಶ್ಯಕವೆಂಬುದು ಇದರಿಂದ ಸ್ಪಷ್ಟಪಡುತ್ತದೆ.

**೪. ಸಲಹೆ ನೀಡುವ ರೀತಿ:** ನಾವು ಸಲಹೆಯನ್ನು ನೀಡುವ ರೀತಿಯೂ ಅದರ ಪರಿಣಾಮವನ್ನು ನಿರ್ಧರಿಸಬಲ್ಲದು: ನ್ಯಾಯಾಧೀಶನೊಬ್ಬನು ಸಾಕ್ಷ್ಯವೊಂದನ್ನು ತೆಗೆದುಕೊಳ್ಳುವಾಗ 'ಅವನು ಕದ್ದನೆ?' ಎಂದು ಕೇಳಿದರೆ ಬರುವ ಉತ್ತರದ ಮೇಲೆ ಯಾವ ರೀತಿಯಲ್ಲೂ ಪರಿಣಾಮವುಂಟುಮಾಡುವಂತಿಲ್ಲ; 'ಅವನು ಕದಿಯಲಿಲ್ಲವೆ?' 'ಅವನು ಕದ್ದನಲ್ಲವೆ?' ಎಂಬ ರೀತಿಯ ಪ್ರಶ್ನೆಗಳು ಸಾಕ್ಷ್ಯದ ಮೇಲೆ ಪರಿಣಾಮ ಹುಟ್ಟಿಸಬಲ್ಲವು. ಎಂದಮೇಲೆ ಸಲಹೆಯನ್ನು ನೀಡುವ ರೀತಿ ವ್ಯಕ್ತಿ ಅದನ್ನು ಸ್ವೀಕರಿಸಲು ನೆರವಾಗಬಲ್ಲದು. ತರಗತಿಯಲ್ಲಿ ಉಪಾಧ್ಯಾಯರು ಅನುಭವಿಸಿ ಆನಂದಿಸಿದ ಹಲವು ಕಲಾ ಪಾಠಗಳ ಸನ್ನಿವೇಶಗಳ ಸೊಗಸನ್ನು ಬೋಧಿಸುವಾಗ ಸ್ವಾನುಭವದ ರಸಾಸ್ವಾದನೆಯ ಭಾವ ಧ್ವನಿ ಕುರುಡು ಬೋಧನೆಗಿಂತ ನೂರ್ಮಡಿಯಾಗಿ ಕಲಾಭಿನಂದನೆಯನ್ನು ಮಕ್ಕಳಲ್ಲಿ ಹುಟ್ಟಿಸಬಲ್ಲದು.

**೫. ಪುನರುಕ್ತಿ:** ಆಗಾಗ ಸಲಹೆ ಮಾಡುತ್ತಿದ್ದರೆ ವ್ಯಕ್ತಿ ಕ್ರಮ ಕ್ರಮವಾಗಿ ಅದಕ್ಕೆ ಮಣಿಯುತ್ತಾನೆ. ಏಕೆಂದರೆ ಅದರ ಸ್ವೀಕಾರಕ್ಕೆ ಮೊದಮೊದಲು ನರಗಳೊಳಗೆ ವಿರೋಧದ ಒತ್ತಡ ಹೆಚ್ಚಾಗಿದ್ದರೂ ಕ್ರಮ ಕ್ರಮವಾಗಿ ಆ ಒತ್ತಡ ಕಡಮೆಯಾಗಿ ಸಲಹೆಯನ್ನು ಕೊನೆಗೆ ಸ್ವೀಕರಿಸುತ್ತಾನೆ. ಇದು ಪುನರುಕ್ತಿಯ ಪ್ರಭಾವ. ಚಂದಾಹಣ ಶೇಖರಿಸುವವರು, ಶೇರು ಮಾರಾಟಗಾರರು, ಜೀವವಿಮೆ ಮಾಡಿಸತಕ್ಕವರು—ವ್ಯಕ್ತಿಗಳನ್ನು ಆಗಾಗ ನೋಡಿ ಅನೇಕ ಸಾರಿ ವಿಫಲರಾದರೂ ಕೊನೆಗೆ ಕಾರ್ಯ ಸಾಧಿಸುವುದು ಈ ರೀತಿಯ ಆನುಕೂಲ್ಯದಿಂದಲೇ. ಹೊಸ ಚಳುವಳಿಗೆ ಜನತೆ ಸಿದ್ಧವಿಲ್ಲದೆ ಮೊದಲು ಒಪ್ಪದಿದ್ದರೂ ಅದರ ಪ್ರಚಾರ ಮುಂದುವರಿದಂತೆ ಕೊನೆಗೆ ಒಪ್ಪುವರು; ಶಾಲೆಯಲ್ಲಿ ಉಪಾಧ್ಯಾಯರು ವ್ಯಕ್ತಿಗೂ ಸಮಾಜಕ್ಕೂ ಹಿತವೆನಿಸುವ ದೃಷ್ಟಿ ಧ್ಯೇಯಗಳನ್ನೂ ಅಭ್ಯಾಸಗಳನ್ನೂ ರೂಪಿಸಲು ನೆರವಾಗುವ ಸಲಹೆಗಳನ್ನು ಅಂದಂದು ಮಾಡಬೇಕು. ಮೊದಮೊದಲು ಅವು ಕಷ್ಟವಾದ್ದರಿಂದ ಪರಿಣಾಮ ಹುಟ್ಟಿಸದಿರಬಹುದು; ಕ್ರಮ ಕ್ರಮವಾಗಿ ಅವುಗಳ ಪ್ರಭಾವ ಮಕ್ಕಳಲ್ಲಿ ಗೋಚರಿಸುವುದರಲ್ಲಿ ಸಂಶಯವಿಲ್ಲ.

**೬. ಸಲಹೆಯನ್ನು ನೀಡುವ ಸ್ವರೂಪ:** ಮಾಡತಕ್ಕ ಸಲಹೆ ಹರಿತವಾದ ಸ್ವರೂಪದಲ್ಲಿದ್ದರೆ ತೀಕ್ಷ್ಣವಾಗಿ ಪರಿಣಾಮಕಾರಿಯಾಗಬಲ್ಲದು.

'ಆತಂಕನಿಗ್ರಹ ಮಾತ್ರೆ' ಮಾರುವವನು ತನ್ನ ಜಾಹೀರಾತಿನಲ್ಲಿ 'ರೋಗ ವಾಸಿಮಾಡುತ್ತದೆ' ಎಂದು ಪ್ರಕಟಿಸಿದರೆ ಸಪ್ಪೆಯಾಗಿ ತೋರುವುದು. ಅದನ್ನೇ 'ರೋಗಕ್ಕೆ ಹೆದರುವುದೇಕೆ? ಆತಂಕನಿಗ್ರಹ ಮಾತ್ರೆ ಅದಕ್ಕೆ ರಾಮಬಾಣ!' ಎಂಬ ರೀತಿಯ ಪ್ರಕಟಣೆಯಿಂದ ಅವನ ಸಲಹೆ ತುಂಬ ಪರಿಣಾಮಕಾರಿಯಾಗಬಲ್ಲದು. ಶಾಲೆಯಲ್ಲಿ ಉಪಾಧ್ಯಾಯರು ಮಕ್ಕಳ ಆಸಕ್ತಿಯನ್ನು ಉಜ್ವಲಗೊಳಿಸುವಂತೆ ಸಲಹೆ ಮಾಡುವುದರಿಂದ ಅದು ಹೆಚ್ಚು ಪರಿಣಾಮಕಾರಿಯಾಗಬಲ್ಲದು.

**೭. ಸಂತೋಷದ ಹಿನ್ನೆಲೆ:** ನಾಟಕ, ಸಂಗೀತ, ನರ್ತನ ಮುಂತಾದ ವಿನೋದಗಳ ಹಿನ್ನೆಲೆಯಲ್ಲೂ, ಉದ್ಯಾನವನ ಸಂತೋಷ ಕೂಟ ಮುಂತಾದ ಆನಂದದಾಯಕ ಸನ್ನಿವೇಶಗಳಲ್ಲೂ ವ್ಯಕ್ತಿಯ ಮನಸ್ಸು ಬಹು ಹಗುರ (ಹಗುರ) ವಾಗಿರುತ್ತದೆ; ಆಗ್ರಹದಿಂದಿರುವುದಿಲ್ಲ; ಆಗ ಮಾಡುವ ಸಲಹೆಗಳನ್ನು ನಿರಾಯಾಸವಾಗಿ ಸ್ವೀಕರಿಸಿಬಿಡುತ್ತಾನೆ. ಪಾಠಶಾಲೆಗಳಲ್ಲಿ ನೀತಿಯನ್ನು ವಿಧಿನಿಯಮಗಳಂತೆ ಬೋಧಿಸುವುದಕ್ಕಿಂತ ಸಂಗೀತ, ನಾಟಕ ಮುಂತಾದ ಮನರಂಜಕ ರೀತಿಯಲ್ಲಿ ಸಲಹೆ ಮಾಡುವುದು ಹೆಚ್ಚಿನ ಪರಿಣಾಮಕಾರಿಯಾಗಬಲ್ಲದು; ಗಹನವೂ ತೊಡಕೂ ಆದ ವಿಷಯಗಳ ಮೇಲೆ ಮಾತನಾಡುವಾಗ ಸತ್ಕಾರ ಕೂಟಗಳನ್ನೇರ್ಪಡಿಸಿಕೊಂಡು ವಿವೇಚಿಸುವುದರಿಂದ ಅಲ್ಲಿ ಒಬ್ಬರು ಮಾಡುವ ಸಲಹೆ ಇನ್ನೊಬ್ಬರ ಮೇಲೆ ಸುಲಭವಾಗಿ ಪರಿಣಾಮ ಹುಟ್ಟಿಸಬಲ್ಲದು.

**೮. ಸಲಹೆ ಮಾಡುವವರ ಸ್ಥಾನಗೌರವ:** ಸಲಹೆ ಮಾಡುವವರು ಗೌರವಯುತರೂ, ಪ್ರಬುದ್ಧರೂ, ಅನುಭವಿಗಳೂ ಆಗಿದ್ದರೆ ಅವರ ಸಲಹೆ ಇತರರ ಮೇಲೆ ಚೆನ್ನಾಗಿ ಪರಿಣಾಮಕಾರಿಯಾಗಬಲ್ಲದು. ಆದ್ದರಿಂದ ಉಪಾಧ್ಯಾಯರು ವಿದ್ಯಾರ್ಥಿಗಳ ಗೌರವಾಭಿಮಾನಗಳನ್ನು ಪಡೆದುಕೊಂಡಿದ್ದು, ಪ್ರಬುದ್ಧರೂ ಪ್ರಾಜ್ಞರೂ ಆಗಿರಬೇಕು. ಅಂದು ಅವರ ಸಲಹೆಗಳು ಮಕ್ಕಳ ಮನಸ್ಸಿನಲ್ಲಿ ಉದ್ದೇಶಿಸಿದ ಪರಿಣಾಮವನ್ನು ಹುಟ್ಟಿಸಬಲ್ಲವು.

ಹೀಗೆ ಮಕ್ಕಳಮೇಲೆ ಪರಿಣಾಮಕಾರಿಯಾಗುವಂತೆ ಸಲಹೆಮಾಡಲು ಉಪಾಧ್ಯಾಯರಿಗೆ ನೆರವಾಗತಕ್ಕ ಸನ್ನಿವೇಶಗಳು ತುಂಬ ಇವೆ; ಆದರೆ, ಆ ಸೌಲಭ್ಯಗಳನ್ನುಪಯೋಗಿಸಿಕೊಂಡು ಮಕ್ಕಳ ಮೇಲೆ ತಮ್ಮ ದೃಷ್ಟಿಧ್ಯೇಯ

ಗಳಿಗನುಗುಣವಾದ ಸಲಹೆಗಳನ್ನೇ ಮಾಡುವುದು ಉಚಿತವಲ್ಲವೆಂದು ಹಲವರು ಹೇಳುವರು; 'ಮಕ್ಕಳಿಗೆ ಆದರ್ಶವಾಗಿರಬೇಕಾದವರು ಉಪಾಧ್ಯಾಯರಲ್ಲ, ಹೊರಗಿನ ಸಮಾಜ' ಎಂಬ ವಾದವನ್ನು ಮುಂದಿಟ್ಟುಕೊಂಡು, ಉಪಾಧ್ಯಾಯರ ದೃಷ್ಟಿಧ್ಯೇಯಗಳನ್ನು ಮಕ್ಕಳ ಎಳೆಯ ಹೃದಯದ ಮೇಲೆ ಸಲಹಾರೂಪದಲ್ಲಿ ಮುದ್ರೆಯೊತ್ತುವುದು ಉಚಿತವಲ್ಲವೆನ್ನುವರು. ನಾವು ಈ ವಾದವನ್ನು ಒಪ್ಪಿದರೂ ಉಪಾಧ್ಯಾಯರು ಅಂಥ ಸಲಹೆಮಾಡದಂತಿರುವುದು ಸಾಧ್ಯವೇ ಎಂಬ ಪ್ರಶ್ನೆಯೇಳುತ್ತದೆ. ಅವರು ಹಾಗೆ ಮಾಡಲು ಬಯಸಲಿ, ಬಯಸದಿರಲಿ, ಅದು ನಡೆದೇಹೋಗುತ್ತದೆ. ಹಾಗೂ, ಉದ್ದೇಶಪೂರ್ವಕವಾಗಿ ಸಲಹೆ ನೀಡುವುದನ್ನು ನಿಲ್ಲಿಸುವರೆಂದೇ ಭಾವಿಸಿದರೂ ದುರ್ಮಾರ್ಗದಲ್ಲಿ ಸಲಹೆಮಾಡತಕ್ಕ ಸಮಾಜದ ನೂರೆಂಟು ಇತರ ಸನ್ನಿವೇಶಗಳು ಕಾದೇ ಇವೆ. ಆಗ ಉಪಾಧ್ಯಾಯರು ಸಲಹೆ ಮಾಡದೆಹೋದರೆ ಅನ್ಯಾಯ ಮಾಡಿದಂತಾಗುತ್ತದೆ. ಎಂದಮೇಲೆ ಉಪಾಧ್ಯಾಯರ ಆದರ್ಶದ ಸಲಹೆ ಅನಿವಾರ್ಯವೂ ಆವಶ್ಯಕವೂ ಆಗುತ್ತದೆ; ಅವರು ತಮ್ಮ ಸಲಹೆಯ ಮೂಲಕವೂ ಮಕ್ಕಳ ವ್ಯಕ್ತಿತ್ವವನ್ನು ರೂಪಿಸಬೇಕಾಗುತ್ತದೆ. ಆದರೆ ಆ ವ್ಯಕ್ತಿತ್ವ ಹಿತವಾಗಿರಬೇಕು; ಸಮಾಜ ಸಮ್ಮತವೆನಿಸಿರಬೇಕು; ಜೊತೆಗೆ ಆ ಸಲಹೆಯಲ್ಲೂ ಮಿತಿಯಿರಬೇಕು; ಎಲ್ಲವನ್ನೂ ಅವರೇ ಸಲಹೆಮಾಡಿ ಮಕ್ಕಳ ವಿಮರ್ಶನಶಕ್ತಿಯ ಬೆಳವಣಿಗೆಗೆ ಅಡಚಣೆಯುಂಟುಮಾಡಬಾರದು; ಅವರ ಸಂಶೋಧನೆಯ ಕಾತರವನ್ನು ಈಡೇರಿಸಲೆಂದು ತಾವೇ ಸಲಹೆಮಾಡಿ ತೋರಿಸಿ ಅವರ ವಿವೇಚನೆ ಕುಂಟಿತವಾಗುವಂತೆ ಮಾಡಬಾರದು; ಒಟ್ಟಿನಲ್ಲಿ ಹಿತವರಿತು, ಮಿತವರಿತು, ಸಲಹೆ ಮಾಡಬೇಕು.

ಉತ್ಸವಗಳಲ್ಲೂ ಇನ್ನಿತರ ಶಾಲೆಯ ಸಮಾರಂಭಗಳಲ್ಲೂ ಎಲ್ಲ ಬಾಲಕರೂ ನೆರೆದು ಆನಂದದಿಂದ ವಿಹರಿಸುವಾಗ ಉಪಾಧ್ಯಾಯರು ಅವರಮೇಲೆ ಫಲಪ್ರದವಾಗತಕ್ಕ ನೈತಿಕ ಮತ್ತು ಸಾಮಾಜಿಕ ದೃಷ್ಟಿಧ್ಯೇಯಗಳನ್ನು ಕುರಿತ ಸಲಹೆಗಳನ್ನು ಮಾಡುವುದು ಅಗತ್ಯ; ಹಾಗೆಯೇ ತಮ್ಮ ಶಾಲೆಯ ಮೇಲೆ ಅಭಿಮಾನ ಬೆಳಸುವ ರೀತಿಯ ಸಲಹೆಗಳನ್ನೂ ನೀಡಬೇಕು. ಹಿರಿಯ ವಿದ್ಯಾರ್ಥಿಗಳು ಕಿರಿಯರಿಗೆ ತಮ್ಮ ಶಾಲಾ ಜೀವನದ ಅನುಭವಗಳ ಸ್ಮರಣೆಯನ್ನು ಮಾಡಿಕೊಡುವುದರ ಮೂಲಕ ಆ ಶಾಲೆಯ ಆದರ್ಶ, ಸತ್ಸಂಪ್ರದಾಯ

ಮತ್ತು ಸ್ಥಾನ ವೈಶಿಷ್ಟ್ಯ—ಇವೆಲ್ಲವನ್ನೂ ಸಲಹೆಮಾಡಬಹುದು. ಆದರೆ ಶಾಲೆಯ ಹಿಂದಿನ ಚರಿತ್ರೆ ಆದರ್ಶವಾಗಿದ್ದು ಸತ್ಸಂಪ್ರದಾಯಗಳ ತವರೆನಿಸಿ, ಅದು ಉತ್ತಮ ಸಂಸ್ಥೆಯಾಗಿರಬೇಕು. ಇಲ್ಲವಾದರೆ ಹಿರಿಯ ವಿದ್ಯಾರ್ಥಿಗಳು ಮಾಡುವ ಸಲಹೆ, ತೋರುವ ಅಭಿಮಾನ ಅನುಚಿತ ರೀತಿಯಲ್ಲಿ ಕಿರಿಯರ ಮೇಲೆ ಪರಿಣಾಮ ಹುಟ್ಟಿಸಬಹುದು. ಎಂದರೆ ಈ ರೀತಿಯ ಸಲಹೆಗಳಿಂದ, ಸಮಾರಂಭಗಳಿಂದ ಶಾಲೆಯ ಆದರ್ಶವೂ ಸತ್ಸಂಪ್ರದಾಯವೂ ಕಿರಿಯ ವಿದ್ಯಾರ್ಥಿಗಳಲ್ಲೂ ನೆಲಸುವಂತಾಗಿ, ಬೆಳೆದುಕೊಂಡು ಬರುತ್ತವೆ. ಜೊತೆಗೆ 'ತಮ್ಮ ಶಾಲೆ'ಯೆಂಬ ಹಿರಿಯ ಭಾವನೆ ಮಕ್ಕಳಲ್ಲಿ ಬೆಳೆದು ಬರುತ್ತದೆ.

**ಒಂದು ಎಚ್ಚರಿಕೆ:** ಆಧುನಿಕ ಪ್ರಜಾಸತ್ತಾತ್ಮಕ ಸಮಾಜದಲ್ಲಿ ಬಗೆ ಬಗೆಯ ಸಲಹೆಗಳು ಮೂಡುತ್ತಿವೆ; ರಾಜಕೀಯ ಗುಂಪುಗಳು, ಸಾಮಾಜಿಕ ಪಂಥಗಳು, ಧಾರ್ಮಿಕ ಸಂಸ್ಥೆಗಳು, ಅರ್ಥಸಾಧಕರು—ಎಲ್ಲರೂ ತಮ್ಮ ತಮ್ಮ ಸಲಹೆಗಳನ್ನು ಸಾರ್ವಜನಿಕರ ಮುಂದಿಡುವ ಹಕ್ಕನ್ನು ಪಡೆದುಕೊಂಡಿರುವರು. ಜೊತೆಗೆ, ಮುದ್ರಣ ಯಂತ್ರ, ವಾರ್ತಾ ಪತ್ರಿಕೆ, ರೇಡಿಯೋ ಪ್ರಸಾರ, ಜಾಹೀರಾತು ಪ್ರಕಟನೆ, ನಾಟಕ ಮತ್ತು ಸಿನಿಮಾ ಪ್ರದರ್ಶನ, ಜನಜಂಗುಳಿಯ ಪ್ರಚಾರ ಶ್ಲೋಕ—ಇವೆಲ್ಲ ಮಾರ್ಗಗಳಲ್ಲೂ ಬಗೆ ಬಗೆಯ ಸಲಹೆಗಳು ಕ್ಷಣ ಕ್ಷಣದಲ್ಲೂ ಸಾರ್ವಜನಿಕರ ಮೇಲೆ ಬೀಳುತ್ತವೆ. ಜನತೆಯಲ್ಲಿ ಅಕ್ಷರ ಪ್ರಚಾರ ಹೆಚ್ಚಿದಂತೆ ಆ ಸಲಹೆಗಳ ಕೈವಾಡ ಯಶಸ್ವಿಯಾಗಲು ಸಹಾಯವಾಗುತ್ತಿದೆ; ಒಳ್ಳೆಯದರಂತೆ ಕೆಟ್ಟದ್ದೂ ಪರಿಣಾಮಕಾರಿಯಾಗುತ್ತದೆ. ಎಂದ ಮೇಲೆ ಜನತೆಗೆ ಬರೀ ಅಕ್ಷರ ಪ್ರಚಾರದಿಂದ ಅನರ್ಥವಾದೀತೆಂದು ಶಂಕಿಸಲು ಅವಕಾಶವುಂಟು. ಯಾವುದನ್ನು ಸ್ವೀಕರಿಸಬೇಕು, ಯಾವುದನ್ನು ಸ್ವೀಕರಿಸಬಾರದು ಎಂಬ ವಿವೇಚನಾಶಕ್ತಿಯೂ ಅವರಲ್ಲಿ ಬೆಳೆಯಬೇಕು. ಇಲ್ಲವಾದರೆ ಸ್ವಾರ್ಥಪರರ ಸಲಹಾರೂಪದ ಪ್ರಚಾರಗಳಿಂದ ದುರಂತಗಳು ನಡೆದಾವು. ಅನೇಕ ವೇಳೆ ನಮ್ಮ ಜನತೆಯಲ್ಲಿ ತಲೆದೋರುವ ಸಾಮಾಜಿಕ ಕ್ಷೋಭೆಗಳಿಗೆಲ್ಲ ವಿವೇಚನೆಯಿಲ್ಲದೆ ಆ ರೀತಿ ಸಮೂಹ ವರ್ತಿಸುವುದೇ ಕಾರಣವೆನ್ನಬಹುದು. ಆದ್ದರಿಂದ ರಾಷ್ಟ್ರ ಜನತೆಯ ಅಕ್ಷರ ಪ್ರಚಾರಕ್ಕೆ ಕೊಡುವಷ್ಟೇ ಗಮನವನ್ನು

ಅವರ ಆಲೋಚನಾಶಕ್ತಿಯನ್ನು ಬೆಳಸುವ ಕಡೆಯೂ ಕೊಡಬೇಕು. ಜೊತೆಗೆ, ಶಾಲಾ ಜೀವನದಲ್ಲಿ ಮಕ್ಕಳಲ್ಲಿ ಆಲೋಚಿಸಿ, ವಿಮರ್ಶಿಸುವ ಅಭ್ಯಾಸವನ್ನೂ ಕ್ರಮವನ್ನೂ ಮೂಡಿಸಬೇಕು. ಅದರಿಂದ ಮುಂದಿನ ಸಮಾಜವಾದರೂ ಅನುಚಿತ ಸಲಹೆಗಳಿಗೆ ಬಲಿಯಾಗಿ ಸಮಾಜ, ದುರಂತಗಳನ್ನುಂಟುಮಾಡುವ ಕಹಿ ಪ್ರಸಂಗಗಳು ನಿಂತಾವು; ಪ್ರಜಾಸತ್ತಾತ್ಮಕ ಸಮಾಜದಲ್ಲಿ ಅಂದಂದು ಕಂಡುಬರುತ್ತಿರುವ ರಾಜಕೀಯ ಬಂಡಾಯಗಳೂ ಕಡಮೆಯಾದಾವು.

## ೭. ಆಲೋಚನೆ — ವಿವೇಚನೆ

ಆಲೋಚನೆ ಮನೋವ್ಯಾಪಾರಗಳಲ್ಲಿ ಬಹು ಮುಖ್ಯವಾದುದು. ಪದಾರ್ಥವೊಂದರ ಕಡೆ ಒಬ್ಬನು ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದರೆ ಅವನು 'ಏನನ್ನೋ ಆಲೋಚಿಸುತ್ತಾನೆ' ಎನ್ನುತ್ತೇವೆ. ಆಗ, ಆಗಲೇ ಅವನಿಗೆ ಪರಿಚಯವಿರುವ ಬೇರೆ ಬೇರೆ ಅಂಶಗಳಿಗೆ ಒಂದು ರೀತಿಯ ಸಂಬಂಧ ಕಲ್ಪನೆಯಾಗುತ್ತಿರುತ್ತದೆ; ಪೂರ್ವ ಪರಿಚಯದ ಬೇರೆ ಬೇರೆ ಅಂಶಗಳನ್ನು ಒಂದರೊಡನೊಂದನ್ನು ಕೂಡಿಸಿ, ಸಂಬಂಧ ಕಲ್ಪಿಸಿ, ಸಮರಸ ಜ್ಞಾನವನ್ನಾಗಿ ಮಾಡುತ್ತಿರುತ್ತದೆ. ಹಾಗೆ ಸಮನ್ವಯವಾಗಿ ರೂಪುಗೊಂಡ ಜ್ಞಾನ ಮುಂದೆ ಹೊಸ ಜ್ಞಾನವನ್ನು ಪಡೆಯಲೂ ನೆರವಾಗುತ್ತದೆ. ಭಿನ್ನ ಅಂಶಗಳಿಗೆ ಸಂಬಂಧ ಕಲ್ಪಿಸಿ ಸಮನ್ವಯ ಜ್ಞಾನವನ್ನು ರೂಪಿಸುವ ಮನೋವ್ಯಾಪಾರವೇ ಆಲೋಚನೆ.

ಭಿನ್ನಅಂಶಗಳಿಗೆ ಏರ್ಪಡುವ ಈ ಸಂಬಂಧ ಕೆಲವು ಸಲ ಕೇವಲ ಹತ್ತಿರದ್ದಿರಬಹುದು; ಮಗುವೊಂದು ತಾಯನ್ನು ಕಂಡೊಡನೆ ನಲಿಯುತ್ತದೆ; ಏಕೆಂದರೆ, ತಾಯಿ ಬಂದರೆ ಹಾಲು ಸಿಕ್ಕುವುದೆಂದು ಅದಕ್ಕೆ ಗೊತ್ತು. ತಾಯಿಗೂ ಹಾಲಿಗೂ ಮಗು ಸಂಬಂಧ ಕಲ್ಪಿಸಿಕೊಂಡಿದೆ. ಇದು ಹತ್ತಿರದ ಸಂಬಂಧ. ಕೆಲವು ವೇಳೆ ಆ ಸಂಬಂಧ ಬಹು ದೂರದ್ದಿರಬಹುದು; ತನ್ನ ತಲೆಯ ಮೇಲೆ ಸೇಬಿನಹಣ್ಣೊಂದು ಬಿದ್ದ ಸನ್ನಿವೇಶದ ಪರಿಜ್ಞಾನದಿಂದ ನ್ಯೂಟನ್ನನು ಗ್ರಹ ತಾರಕೆಗಳ ಚಲನೆಗೆ ಸಂಬಂಧಿಸಿದ ಮಹಾತತ್ತ್ವವನ್ನು ರೂಪಿಸಿದನಷ್ಟೆ; ಆ ಸಂಬಂಧ ಕಲ್ಪನೆ ಬಹುದೂರದ್ದು; ಸಂಕೀರ್ಣವಾದ್ದು.

ಎಲ್ಲ ಮಾನಸಿಕ ವ್ಯಾಪಾರಗಳಂತೆ ಆಲೋಚನೆಯೂ ದೈಹಿಕ ವರ್ತನೆಗಳಿಂದ ಪ್ರಕಾಶಗೊಳ್ಳುತ್ತದೆ. ನಾವು ಆಲೋಚಿಸುವಾಗ ನಗಬಹುದು; ವ್ಯಸನದಿಂದಿರಬಹುದು; ಆಗ್ರಹ ತೋರಬಹುದು; ಅಥವಾ ಇನ್ನಿತರ ವರ್ತನೆಗಳನ್ನು ಪ್ರದರ್ಶಿಸಬಹುದು. ಆಲೋಚನೆ ಮುಂದು ವರಿಯುವ ಸನ್ನಿವೇಶಗಳಿಗೆ ತಕ್ಕಂತೆ, ಅವರವರ ವಯಸ್ಸಿಗೂ ಮಾನಸಿಕ ಬೆಳವಣಿಗೆಗೂ ತಕ್ಕಂತೆ ಭಿನ್ನವ್ಯಕ್ತಿಗಳು ಭಿನ್ನರೀತಿಯಲ್ಲಿ ವರ್ತಿಸಬಹುದು.

**ಭಿನ್ನ ರೀತಿಯ ಆಲೋಚನೆಗಳು :** ಜಾನ್ ಡ್ಯೂಯಿಯವರು ಆಲೋಚನೆಯನ್ನು ನಾಲ್ಕು ವಿಧವಾಗಿ ವಿಂಗಡಿಸಿರುವರು: ಆಕಸ್ಮಿಕ ಆಲೋಚನೆ; ನಿರ್ಧಾರ ವಿರಹಿತ ಆಲೋಚನೆ; ಜ್ಞಾನಪೂರಕ ಆಲೋಚನೆ; ಉದ್ದೇಶಪೂರ್ವಕ ಆಲೋಚನೆ ಅಥವಾ ಸಮಸ್ಯಾ ಪರಿಹಾರದ ಆಲೋಚನೆ.

**೧. ಆಕಸ್ಮಿಕ ಆಲೋಚನೆ :** ಒಂದು ನಿರ್ದಿಷ್ಟ ಉದ್ದೇಶದಿಂದ ಹೊರಟು ಒಂದು ಸಮಸ್ಯೆಯನ್ನಾಗಲಿ ಸನ್ನಿವೇಶವನ್ನಾಗಲಿ ಮುಂದಿಟ್ಟು ಕೊಂಡು ಮಾಡುವ ಆಲೋಚನೆಯಿದಲ್ಲ: ಗುರಿಯಿಲ್ಲದೆ ಆಕಸ್ಮಿಕವಾಗಿ ನಡೆಯತಕ್ಕದ್ದು. ಮುಗಿಲೊಂದನ್ನು ಕಂಡಾಗ ಅದರ ಆಕೃತಿ ಬೇರೆ ಬೇರೆ ಪ್ರಾಣಿಗಳ ಚಿತ್ರದಂತೆ ತೋರಬಹುದು; ಅಷ್ಟರಲ್ಲಿ ಮುಗಿಲಿನ್ನ ಕೆಂಪು ಬಣ್ಣ ಕಣ್ಣಿಗೆ ಬಿದ್ದು ರಕ್ತದ ನೆನಪೂ, ಅನಂತರ ತಾನು ಹಿಂದೆ ನೋಡಿದ್ದ ಕೊಲೆಯೊಂದರ ಚಿತ್ರವೂ ಸುಳಿಯಬಹುದು. ಮೊದಲು ಅವನು ಆರಂಭಿಸಿದಾಗ ಕೊಲೆಯ ಚಿತ್ರವನ್ನು ನೆನಸಿಕೊಳ್ಳುವೆನೆಂದು ಉದ್ದೇಶಿ ಸಿಯೇ ಇರಲಿಲ್ಲ. ಇಂಥ ಯೋಚನೆಯಿಂದ ಯಾವ ನೂತನ ಜ್ಞಾನವೂ ಸಿದ್ಧಿಸುವಂತಿಲ್ಲ. ಇದನ್ನು ಸಿಗರೇಟು ಸೇದಿ, ಬಿಟ್ಟ ಹೊಗೆಗೆ ಹೋಲಿಸು ವುದುಂಟು: ಹೊರಬಂದ ಹೊಗೆ ಯಾವ ಯಾವುದೋ ರೂಪುಗಳನ್ನು ತಾಳುತ್ತ ಕೊನೆಗೆ ಮಾಯವಾಗುವುದು; ಹಾಗೆಯೇ ಆಕಸ್ಮಿಕ ಆಲೋಚನೆ ಯಲ್ಲೂ ಯಾವುದನ್ನೋ ಆರಂಭಿಸಿ, ಏನನ್ನೋ ಆಲೋಚಿಸಿ, ಕೊನೆಗೆ ಯಾವ ನಿರ್ದಿಷ್ಟ ಗುರಿಗೂ ಮುಟ್ಟುವುದಿಲ್ಲ.

**೨. ನಿರ್ಧಾರ ವಿರಹಿತ ಆಲೋಚನೆ :** ಇತರರ ಅಭಿಪ್ರಾಯವನ್ನು ಆಲೋಚಿಸದೆ ಒಪ್ಪಿ, ತಾನೇ ಆಲೋಚಿಸಿದೆನೆಂಬ ಭ್ರಾಂತಿಯಿಂದ, ತನ್ನ ದೆಂದು ನಂಬುವುದುಂಟು; ತಾನೇ ನಿರ್ಧಾರಕ್ಕೆ ಬರದೆ, ಸರಿಯೋ ತಪ್ಪೋ

ಎಂದು ಪರಿಶೀಲಿಸದೆಯೇ, ಆ ವಿಷಯ ತನ್ನ ಆಲೋಚನೆಯೆಂದು ಪರಿಗ್ರಹಿಸುವುದು ನಿರ್ಧಾರ ವಿರಹಿತ ಆಲೋಚನೆ; ಅದು ನಿಜವಾಗಿ ನೋಡುವುದಾದರೆ ಆಲೋಚನೆಯೇ ಅಲ್ಲ: ಸಲಹೆ ಮಾತ್ರ.

**೩. ಜ್ಞಾನಪೂರಕ ಆಲೋಚನೆ:** ನಮ್ಮ ಹಿಂದಿನ ಜ್ಞಾನಕ್ಕೆ ಹೊಸದನ್ನು ಸಂಬಂಧಿಸಿ ಹೆಣೆದು ಹೆಚ್ಚಿಸುವುದಕ್ಕೆ ಜ್ಞಾನಪೂರಕ ಆಲೋಚನೆಯೆನ್ನುತ್ತೇವೆ. ಇದು ನೂತನ ಸಂಶೋಧನೆಮಾಡಲು ನೆರವಾಗದಿದ್ದರೂ ತನ್ನ ಪೂರ್ವ ಜ್ಞಾನದ ಜೊತೆಗೆ ಹೊಸ ಜ್ಞಾನವನ್ನು ಕೂಡಿಸಲು ಸಹಾಯವಾಗುತ್ತದೆ. ನಮ್ಮ ಶಾಲೆಯಲ್ಲಿ ಮಕ್ಕಳು ಕಲಿಯುವ ಬಹುಭಾಗ ಈ ರೀತಿಯ ಆಲೋಚನೆಯಿಂದಲೇ; ಅಲ್ಲಿ ಅವರು ಸಾಧಿಸಬೇಕಾದ ಕಾರ್ಯ ನೂತನ ಸಂಶೋಧನೆಗಳೇನಲ್ಲ: ತಮ್ಮ ಹಿಂದಿನ ಜ್ಞಾನದೊಡನೆ ಇತರರು ಸಿದ್ಧಪಡಿಸಿರುವ ಅಂಶಗಳನ್ನು ಸಮನ್ವಯವಾಗಿ ಸೇರಿಸಿಕೊಂಡು ಜ್ಞಾನಾರ್ಜನೆ ಮಾಡುವುದು ಮಾತ್ರ. ಆದರೆ ಹಳೆಯ ಜ್ಞಾನದೊಡನೆ ಹೊಸದನ್ನು ಸುಮ್ಮನೆ ಶೇಖರಿಸುವುದಲ್ಲ: ಅವುಗಳಿಗೆ ಸಂಬಂಧ ಕಲ್ಪಿಸಿಕೊಂಡು ಮನೋಗತ ಮಾಡಿಕೊಳ್ಳಬೇಕು. ಹೊಸ ಅಂಶ ಪೂರ್ವಜ್ಞಾನದೊಡನೆ ಸಮನ್ವಯಗೊಂಡು ನಮ್ಮ ಜ್ಞಾನವನ್ನು ಹೆಚ್ಚಿಸುವುದು. ಆ ಸಮನ್ವಯ ಜ್ಞಾನ ಮುಂದೆ ಮತ್ತೆ ಹೊಸ ಜ್ಞಾನವನ್ನು ಪಡೆಯಲೂ ಸಹಾಯವಾಗುತ್ತದೆ. ಸುಮ್ಮನೆ ಹೊಸ ಹೊಸ ವಿಷಯಗಳನ್ನು ಮೆದುಳಿಗೆ ತುಂಬುವುದು ಉಪಯುಕ್ತವಲ್ಲ. ಅದು ಶಿಕ್ಷಣವೂ ಅಲ್ಲ! ಹಳೆಯ ಜ್ಞಾನದೊಡನೆ ಹೊಸದು ಮುಂದೆ ಉಪಯುಕ್ತವಾಗುವ ರೀತಿಯಲ್ಲಿ ಸೇರಿಕೊಂಡು ನಮ್ಮ ಒಟ್ಟು ಜ್ಞಾನ ಸಮನ್ವಯಗೊಂಡು, ಹೆಚ್ಚಬೇಕು.

**೪. ಉದ್ದೇಶಪೂರ್ವಕ ಆಲೋಚನೆ (ಸಮಸ್ಯಾ ಪರಿಹಾರದ ಆಲೋಚನೆ):** ಇದು ಉನ್ನತಮಟ್ಟದ ಆಲೋಚನೆ. ನಮ್ಮ ಮುಂದೆ ಸಮಸ್ಯೆಯೊಂದಿದೆ; ಅದನ್ನು ಬಿಡಿಸುವುದೇ ಗುರಿ. ಆ ಗುರಿಯಿಂದ ಪ್ರೇರಿತರಾಗಿ ಆಲೋಚಿಸಿ, ಉಚಿತವೆನಿಸುವ ತೀರ್ಮಾನಕ್ಕೆ ಬರಬೇಕು. ಆ ಮೂಲಕ ಹೊಸ ಅಂಶಗಳ ಸಂಶೋಧನೆಯಾಗುತ್ತದೆ. ಇಂಥ ಯೋಚನಾ ಕಾರ್ಯವನ್ನು ಕವಲೊಡೆದಿರುವ ದಾರಿಯಲ್ಲಿ ಮುಂದೆ ಸಾಗಬೇಕಾದರೆ ಆಗುವ ಅನುಭವದೊಡನೆ ಹೋಲಿಸುವುದುಂಟು: ಒಂದು ದಾರಿಯಲ್ಲಿ ಬರುತ್ತ

ಮುಂದಿನ ಊರೊಂದಕ್ಕೆ, ಉದ್ದೇಶಿಸಿ ಹೊರಟಿರುವಾಗ ದಾರಿ ಕವಲೊಡೆದಿದ್ದರೆ ನಾವು ಆಲೋಚಿಸದೆ ಯಾವುದಾದರೂ ಒಂದು ಕಡೆ ನುಗ್ಗುವಂತಿಲ್ಲ: ನಮ್ಮ ಗುರಿಗೆ ಕರೆದುಕೊಂಡು ಹೋಗುವ ಮಾರ್ಗದಲ್ಲೇ ಹೋಗಬೇಕು. ಆ ಮಾರ್ಗವನ್ನು ನಿರ್ಧರಿಸಲು ಉದ್ದೇಶಪೂರ್ವಕವಾಗಿ ಆಲೋಚಿಸಬೇಕು. ನಮಗಿರುವ ಪೂರ್ವ ಪರಿಚಯವನ್ನೆಲ್ಲ ಹುಡುಕಿಕೊಂಡು ಸರಿಯಾದ ದಾರಿಯನ್ನು ನಿಷ್ಕರ್ಷಿಸಬೇಕು. ನಮ್ಮ ಮುಂದಿರುವ ಆ ಸಮಸ್ಯೆಯನ್ನು ಬಿಡಿಸಿ ತೀರ್ಮಾನಕ್ಕೆ ಬರಬೇಕು. ಆಗ ಉದ್ದೇಶಪೂರ್ವಕವಾಗಿ ಆಲೋಚಿಸಬೇಕಾಗುತ್ತದೆ. ಡ್ಯೂಯಿಯವರು ನಮ್ಮ ಮಕ್ಕಳು ಶಾಲೆಯಲ್ಲಿ ಜ್ಞಾನಾರ್ಜನೆಯ ಜೊತೆಗೆ ಇಂಥ ಸಮಸ್ಯಾ ಪರಿಹಾರಕ ಆಲೋಚನೆಯನ್ನೂ ಮಾಡಬೇಕೆಂದು ಹೇಳುತ್ತ 'ಉಪಾಧ್ಯಾಯರು ಸಿದ್ಧಪಡಿಸಿದ ತೀರ್ಮಾನಗಳನ್ನು ಅಂಥ ಸಮಸ್ಯೆಗಳಿಗೆ ತಿಳಿಸಿಬಿಡಬಾರದು. ಆದರೆ, ಅವರ ಮುಂದೆ ಸಮಾಜದಲ್ಲಿ ಕಂಡುಬರುವ ಆ ಸಮಸ್ಯೆಗಳನ್ನಿರಿಸಿ ಅವನ್ನು ಅವರೇ ಬಿಡಿಸಿಕೊಳ್ಳಲು ಸಹಾಯ ಮಾಡಬೇಕು' ಎಂದು ಹೇಳಿರುವರು. ಮಾರ್ಗದಲ್ಲಿ ಕವಲೊಡೆದ ದಾರಿ ಬಂದಾಗ ಸರಿಯಾದ ದಾರಿ ಯಾವುದೆಂದು ನಿರ್ಧರಿಸಲು ನೆರವಾಗಬಹುದಾದ ರೀತಿಯಲ್ಲಿ ಮಕ್ಕಳಿಗೆ, ಸಮಸ್ಯೆಯನ್ನು ಬಿಡಿಸುತ್ತಿರುವಾಗ ಸಹಾಯ ಮಾಡಬಹುದು. ಅವಶ್ಯಕವಾದ ಅಂಕಿ ಅಂಶಗಳನ್ನೊದಗಿಸಿಕೊಡುವುದು, ಸಮಸ್ಯೆಗಳ ಪರಿಹಾರಕ್ಕೆ ತೊಡಗುವ ಮಾರ್ಗವನ್ನು ಸಲಹೆ ಮಾಡುವುದು—ಇವುಗಳಿಂದ ಉಪಾಧ್ಯಾಯರು ಸಹಾಯ ಮಾಡಬಹುದು; ಆದರೆ, ಅವರೇ ಅದನ್ನು ಬಿಡಿಸಿಕೊಡಬಾರದು. ತಮ್ಮ ಮುಂದಿರುವ ಅಂಕಿ ಅಂಶಗಳನ್ನು ಪರಿಶೀಲಿಸಿ, ಸರಿಯಾದ ಮಾರ್ಗದಲ್ಲಿ ಸಮಸ್ಯೆಗೆ ಉತ್ತರವನ್ನು ನಿಷ್ಕರ್ಷಿಸಲು ಮಕ್ಕಳೇ ಯತ್ನಿಸಬೇಕು. ಆ ಮೂಲಕ ಉದ್ದೇಶಿಸಿದ ಗುರಿಯನ್ನು ಮುಟ್ಟಬೇಕು. ಇಂಥ ಸಮಸ್ಯಾಪೂರಕವಾದ ಆಲೋಚನೆಯೇ ವಿಮರ್ಶೆ ಅಥವಾ ವಿವೇಚನೆ.

ನಮ್ಮ ವಿವೇಚನೆ ಮನಬಂದಂತೆ ಮುಂದುವರಿಯುವಂತಿಲ್ಲ: ಸತ್ಯ ಪಥದಲ್ಲಿ ಸಾಗಬೇಕು. ಆ ಸತ್ಯ ಹಲವು ಸಂದರ್ಭಗಳಲ್ಲಿ ವಾಸ್ತವಿಕ ರೀತಿಯದಾಗಿದ್ದರೂ ಹಲವು ವೇಳೆ ಕಲ್ಪನೆಯ ರೀತಿಯದೂ ಆಗಿರಬಹುದು; ಈ ಕಲ್ಪನಾಸತ್ಯ ಮಕ್ಕಳಲ್ಲಿ ಆಗಾಗ ಕಂಡುಬರುತ್ತದೆ. ಗುಬ್ಬಚ್ಚಿಯೊಂದು

ಬಂದು ಚಿಲಿಪಿಲಿಗುಟ್ಟುತ್ತಿದ್ದರೆ 'ಅಮ್ಮಾ, ಅದು ನನ್ನನ್ನು ಆಡಲು ಕರೆಯುತ್ತಿದೆ; ಒಂದೇ ಇರುವುದರಿಂದ ಜೊತೆಗೆ ಕರೆಯುತ್ತಿದೆ!' ಎಂದು ಮಗು ತೀರ್ಮಾನಿಸುವಾಗ ವಾಸ್ತವವಾಗಿ ಅದು ಸುಳ್ಳಾಗಬಹುದಾದರೂ ಮಕ್ಕಳಿಗೆ ನಿಜವೇ ಆಗಿರುತ್ತದೆ. ಹಾಗೆಯೇ ಕಾವ್ಯಗಳಲ್ಲೂ ಆ ರೀತಿಯ ಕಲ್ಪನಾ ಸತ್ಯ ಕಾಣಬಹುದು. ವಾಸ್ತವಿಕವಾಗಿ ಅದು ಸತ್ಯಮಾರ್ಗವಲ್ಲದಿದ್ದರೂ ನಮ್ಮ ಅಂತರಾತ್ಮದಲ್ಲಿ ಪರಿಣಾಮಕಾರಿಯಾಗಬಹುದಾದ ಕಲ್ಪನಾ ರೀತಿಯದಿರಬಹುದು. ಅದನ್ನು ಕಾವ್ಯಸತ್ಯವೆನ್ನುವರು. ಆದರೆ ಅಲ್ಲೂ ಸತ್ಯವಿಲ್ಲದೆ ವಿವೇಚನೆ ಮುಂದುವರಿಯುವಂತೆಯೇ ಇಲ್ಲ! ಕವಿ ಅಂಥ ಸತ್ಯವೊಂದನ್ನು ಮೊದಲು ಕಲ್ಪಿಸಿಕೊಳ್ಳುವನು; ಅನಂತರ ಅದರ ಆಧಾರದ ಮೇಲೆ ನಡೆಯುವ ವಿವೇಚನೆಯೂ ಕಲ್ಪನೆಯದಾಗುತ್ತದೆ; ಆದರೆ ಅದು ಮಾನವನ ಅಂತರಾತ್ಮದಲ್ಲಿ ಸತ್ಯವತ್ತಾಗಿ ಪರಿಣಾಮ ಹುಟ್ಟಿಸುವಂಥ ಕಲ್ಪನೆ. ಅಲ್ಲಿ ವಿವೇಚನೆ ಮುಂದುವರಿಯುವುದು ಕಲ್ಪನಾ ಸತ್ಯದ ಮಾರ್ಗದಲ್ಲಿ.

ಮಕ್ಕಳ ವಿವೇಚನೆ ದೊಡ್ಡವರ ವಿವೇಚನೆಯಂತಿರದೆ ಭಿನ್ನವಾಗಿರುತ್ತದೆ. ಒಮ್ಮೆ ಒಂದು ಮಗು ಕೆಂಪು ಮಿಠಾಯಿ ತಿಂದಾಗ ಸಿಹಿ ಅನುಭವ ಪಡೆದಿರುತ್ತದೆ; ಮತ್ತೆ, ಕೆಂಪು ಗಿಲಿಕೆಯೊಂದನ್ನು ಕಂಡಾಗ ಅದನ್ನೂ ಬಾಯಿಗೆ ಹಾಕಿಕೊಳ್ಳುತ್ತದೆ. ಕೆಂಪಗಿರುವುದೆಲ್ಲ ಸಿಹಿಯಾಗಿರಬೇಕೆಂಬುದೇ ಅದರ ತೀರ್ಮಾನ. ಮಕ್ಕಳಿಗೆ ತಿಳಿದಿರುವ ವಿಷಯ, ಆಗಿರುವ ಅನುಭವ ಪ್ರಬುದ್ಧವೂ ಅಲ್ಲ; ವಿಶಾಲವೂ ಅಲ್ಲ. ಆದ್ದರಿಂದಲೇ ಅಂಥ ವಿವೇಚನೆ ಅವರಲ್ಲಿ ಕಂಡುಬರುವುದು. ನಮಗೆ ಅದು ಸರಿಯಾದ ತೀರ್ಮಾನವೆನ್ನಿಸದಿದ್ದರೂ ಅವರಿಗೆ ಹಾಗೆನ್ನಿಸುವುದಿಲ್ಲ. ಗೊತ್ತಿರುವ ಅಂಶಗಳ ಆಧಾರದ ಮೇಲೆ, ಅವರ ವಿವೇಚನೆಯೂ ಸತ್ಯಪಥದಲ್ಲೇ ನಡೆದಿದೆ. ಮಕ್ಕಳ ಅಂಥ ರೀತಿಯ ತೀರ್ಮಾನಗಳನ್ನೂ ಕಲ್ಪನೆಯನ್ನೂ ಕಂಡಾಗ ಅವರಮೇಲೆ ಕೋಪಿಸುವುದು ಸರಿಯಲ್ಲ: ಮಕ್ಕಳು ನಿಮಿಷ ನಿಮಿಷಕ್ಕೂ ಹೆಚ್ಚು ಪ್ರಬುದ್ಧರಾಗಲು ಯತ್ನಿಸುತ್ತಲೇ ಇರುತ್ತಾರೆ. ಸಹನೆಯಿಂದಲೂ, ಸರಿಯಾದ ಮಾರ್ಗದರ್ಶನದಿಂದಲೂ ಆ ಕಾರ್ಯಕ್ಕೆ ದೊಡ್ಡವರು ನೆರವಾಗಬೇಕು. ಈ ಪರಿಜ್ಞಾನ ಉಪಾಧ್ಯಾಯರಿಗೆ ಅಮೂಲ್ಯವಾದುದು.

**ಆಲೋಚನೆ ಮತ್ತು ಪದಗಳು:** **ನಾವು ಒಂದು ಪದವನ್ನು ತಿಳಿದು ಅದು ಯಾವುದರ ಸಂಕೇತವೆಂದು ಪರಿಚಯ ಮಾಡಿಕೊಂಡಿದ್ದರೆ**

ಆ ಪದಾರ್ಥವನ್ನು ತಂದು ತೋರಿಸುವ ಬದಲು ಆ ಪದವನ್ನು ಹೇಳಿಬಿಟ್ಟರೆ ಸಾಕು; ನಮ್ಮ ಅನುಭವ ಆ ಪದದಲ್ಲಿ ಅಡಗಿರುತ್ತದೆ. ಅದನ್ನು ನಮ್ಮ ಭಾವವನ್ನು ಹೊತ್ತು ತರುವ ವಾಹನವೆಂದೂ ಕರೆಯುವರು. ಎಂದಮೇಲೆ ಪದಗಳು ನಮ್ಮ ಆಲೋಚನೆಯಲ್ಲಿ ಪ್ರಧಾನ ಪಾತ್ರ ವಹಿಸುತ್ತವೆ. ಒಂದು ವಸ್ತುವಿಗೂ ಇನ್ನೊಂದು ವಸ್ತುವಿಗೂ ಸಂಬಂಧ ಕಲ್ಪಿಸುವಾಗ, ಕ್ರಿಯಾಕಾರಣ ಜ್ಞಾನವನ್ನು ವಿವೇಚಿಸುವಾಗ ಪದಗಳು ಸಮಗ್ರವಾಗಿಯೂ ನಿರ್ದಿಷ್ಟವಾಗಿಯೂ ಹಿಂದಿನ ಅನುಭವಗಳನ್ನೆಲ್ಲ ನೆನಪಿಗೆ ತಂದುಕೊಟ್ಟು ಆಲೋಚನೆಯನ್ನು ಮುಂದುವರಿಸಲು ಸಹಾಯ ಮಾಡುತ್ತವೆ. ಆಲೋಚನಾಕಾರ್ಯಕ್ಕೆ ಪದಗಳು ಇಷ್ಟು ನೆರವಾಗುವುದರಿಂದ ನಮಗೆ ಹೆಚ್ಚು ಪದಸಂಪತ್ತಿದ್ದರೆ ನಮ್ಮ ಆಲೋಚನೆಯೂ ಚೆನ್ನಾಗಿ ನಡೆಯುಬಲ್ಲದು. ಮಕ್ಕಳಿಗೆ ಪದಸಂಪತ್ತು ಹೆಚ್ಚಾಗಿರುವುದಿಲ್ಲ; ಆದ್ದರಿಂದ ಅವರ ಆಲೋಚನಾಶಕ್ತಿಯೂ ಅಷ್ಟರಲ್ಲೇ ಇರುತ್ತದೆ. ಪದಸಂಪತ್ತು ಹೆಚ್ಚಿದಂತೆ ಅವರ ಆಲೋಚನಾ ಶಕ್ತಿಯೂ ಹೆಚ್ಚುತ್ತ ಹೋಗುತ್ತದೆ.

**ವಿವೇಚನೆ :** ಉದ್ದೇಶಪೂರ್ವಕವಾದ ಆಲೋಚನೆಯನ್ನೇ ಡ್ಯೂಯಿಯುವರು ವಿವೇಚನೆಯೆಂದು ಕರೆದಿರುವುದು. ಇದು ಮಾನಸಿಕ ವ್ಯಾಪಾರಗಳಲ್ಲೆಲ್ಲ ಉನ್ನತ ಮಟ್ಟದ್ದು. ನಾವು ವಿವೇಚಿಸುವಾಗ ಸಾಮಾನ್ಯವಾಗಿ ಯಾವುದೋ ಒಂದು ಸಮಸ್ಯೆಯೋ ಸನ್ನಿವೇಶವೋ ಅಡ್ಡಬರುತ್ತದೆ; ಆಗ ಆವಶ್ಯಕವಾದ ಆಲೋಚನೆ ನಡಸಿ ಒಂದು ತೀರ್ಮಾನಕ್ಕೆ ಬರಬೇಕಾಗುತ್ತದೆ. ಆ ಸಮಸ್ಯೆಗಳು ಸರಳವೂ ಸುಲಭವೂ ಆದುವಾಗಿರಬಹುದು; ಕಷ್ಟವೂ ಸಂಕೀರ್ಣವೂ ಆದವೂ ಆಗಿರಬಹುದು. 'ಬಿಸಿ ಕಾಫಿ ಆರಿಸುವುದು ಹೇಗೆ?' ಎಂಬ ಸಮಸ್ಯೆ ಸರಳವಾಗಿದೆ; ಸುಲಭವಾಗಿದೆ. ಆದರೆ 'ಭಾರತದ ವಾಣಿಜ್ಯ ವ್ಯವಹಾರಗಳನ್ನು ಹೆಚ್ಚಿಸುವುದು ಹೇಗೆ?', 'ಭಾರತದಲ್ಲಿ ಭಾಷೆಗಳ ಮತ್ತು ಜಾತಿಗಳ ಗೊಂದಲವನ್ನು ಕಡಮೆ ಮಾಡುವುದು ಹೇಗೆ?' ಎಂಬುವು ಕಷ್ಟವೂ ಸಂಕೀರ್ಣವೂ ಆದ ಸಮಸ್ಯೆಗಳು. ಯಾವ ಸಮಸ್ಯೆಯಲ್ಲೇ ಆಗಲಿ ನಿಜಾಂಶವನ್ನು ಆರಿಸಬೇಕಾಗುತ್ತದೆ. ನಮ್ಮ ಅನುಭವಕ್ಕೆ ಬಂದಿರುವ ಅಂಕಿ ಅಂಶಗಳನ್ನೂ, ವಿಷಯುಗಳನ್ನೂ ಉಪಯೋಗಿಸಿಕೊಂಡು ಆ ಸತ್ಯಾಂಶಗಳ ಕಡೆ ಸಾಗಿ ಸಮಸ್ಯೆಯನ್ನು ಬಿಡಿಸಬೇಕು. ಆ

ಕಾರ್ಯವನ್ನು ಸಾಧಿಸುವಾಗ ನಮ್ಮ ವಿವೇಚನೆ ಐದು ಮಜಲು (ಸೋಪಾನ) ಗಳಲ್ಲಿ ಮುಂದುವರಿದು ಕಾರ್ಯ ಸಾಧಿಸುತ್ತದೆ. ಅವುಗಳನ್ನು ಕೆಳಗೆ ವಿವರಿಸಿದೆ.

**೧. ಸಮಸ್ಯೆಯನ್ನು ಕಾಣುವುದು :** ಉತ್ತರ ಹೇಳಬೇಕಾದ ಪ್ರಶ್ನೆಯೋ, ಬಿಡಿಸಬೇಕಾದ ಸಮಸ್ಯೆಯೋ, ಅನ್ವಯಿಸಿಕೊಳ್ಳಬೇಕಾದ ಸನ್ನಿವೇಶವೋ ಎದುರು ಬಂದಾಗ ಅವನ್ನು ಬಿಡಿಸಬೇಕೆಂಬ ಮನೋಭಾವ ನಮ್ಮಲ್ಲಿ ಹುಟ್ಟುತ್ತದೆ. ಶಾಲೆಗಳಲ್ಲಿ ಯಾವ ಸಮಸ್ಯೆಯನ್ನು ಮಕ್ಕಳ ಮುಂದಿಡಲಿ, ಅದನ್ನು ಬಿಡಿಸುವ ಆವಶ್ಯಕತೆಯನ್ನು ಅವರು ಅರಿತರೆ ಮನ ಶ್ಶಕ್ತಿಯೆಲ್ಲ ಆ ಕಡೆ ಹರಿದು ಬಂದು, ಇತ್ಯರ್ಥ ಪಡಿಸಲು ನಿರತವಾಗುತ್ತದೆ. ಕೇವಲ ಯಾರೊ ವಿಧಿಸಿದ ಸಮಸ್ಯೆಯೊಂದನ್ನು ಬಿಡಿಸಬೇಕಾಗಿ ಬಂದಾಗ ಅದರಲ್ಲಿ ಆಸಕ್ತಿಯಿಲ್ಲದೆ, ಮನಶ್ಶಕ್ತಿ ಆ ಕಡೆ ಹರಿಯದೆ, ಉತ್ಸಾಹ ಮೂಡ ದಿರಬಹುದು. ಆದ್ದರಿಂದ ಸಮಸ್ಯೆ ಅವರ ಮುಂದಿರುವುದನ್ನೂ ಅಂತು ಅದನ್ನು ಬಿಡಿಸುವುದು ಆವಶ್ಯಕವೆಂಬುದನ್ನೂ ಅವರ ಗಮನಕ್ಕೆ ತಂದು ಸಮಸ್ಯೆ ಅವರದನ್ನಾಗಿ ಮಾಡಬೇಕು.

**೨. ಸಮಸ್ಯೆಯನ್ನು ಪರಿಚಯ ಮಾಡಿಕೊಳ್ಳುವುದು :** ಎದುರು ಬಂದ ಸಮಸ್ಯೆಯಲ್ಲಿ ಬಿಡಿಸಬೇಕಾಗಿರುವ ಅಂಶವನ್ನು ನಿರ್ದಿಷ್ಟವಾಗಿ ಪರಿಚಯ ಮಾಡಿಕೊಳ್ಳಬೇಕು. ನಾವು ಬಿಡಿಸಬೇಕಾಗಿರುವ ಅಂಶವನ್ನು ಸರಿಯಾಗಿ ತಿಳಿದುಕೊಂಡರೆ ಆ ಕಾರ್ಯ ಸಾಧನೆಯಲ್ಲಿ ಅನುಸರಿಸುವ ಮಾರ್ಗವೂ ಸೂಕ್ತವಾಗುತ್ತದೆ. ಇದೇ ಎರಡನೆಯ ಮಜಲು.

**೩. ಅನುಭವ, ಅಂಕಿ ಅಂಶ, ಮೊದಲಾದವುಗಳ ಸಂಗ್ರಹ :** ಸಮಸ್ಯೆಯಲ್ಲಿ ಇತ್ಯರ್ಥ ಪಡಿಸಬೇಕಾಗಿರುವ ವಿಷಯವನ್ನು ಪರಿಚಯ ಮಾಡಿಕೊಂಡಮೇಲೆ ಆ ಕಾರ್ಯಕ್ಕೆ ಬೇಕಾಗುವ ನಮ್ಮ ಅನುಭವ ದಲ್ಲಿರುವ ಅಂಕಿ ಅಂಶಗಳೇ ಮೊದಲಾದವನ್ನು ಸಂಗ್ರಹಿಸಿಕೊಳ್ಳಬೇಕು. ನಮ್ಮ ಹಿಂದಿನ ಅನುಭವಗಳಲ್ಲಿ ಆವಶ್ಯಕವಾದವನ್ನು ಸ್ಮರಿಸಿಕೊಳ್ಳಬೇಕು; ಅವುಗಳಿಗೆ ಇರಬಹುದಾದ ಸಂಬಂಧವನ್ನೂ ಕಲ್ಪಿಸಿಕೊಳ್ಳಬೇಕು. ಅವೆಲ್ಲ ದರ ಆಧಾರದಮೇಲೆ ಸಮಸ್ಯೆ ಬಿಡಿಸಿದಾಗ ಹೀಗಿರಬಹುದೆಂದು ಅಂದಾಜು ಮಾಡಿಕೊಳ್ಳಬೇಕು. ಆದರೆ ಅದು ಉತ್ತರವಲ್ಲ: ಒಂದು ಊಹೆ ಮಾತ್ರ;

ಅದು ಕಟ್ಟಕಡೆಯ ತೀರ್ಮಾನವಲ್ಲ: ಒಂದು ಪ್ರಯೋಗ ಮಾತ್ರ. ಈ ಅಂದಾಜಿನ ತೀರ್ಮಾನವನ್ನೇ ಕೇಂದ್ರವಾಗಿಟ್ಟುಕೊಂಡು, ಆಲೋಚನೆ ನಡಸಿ ಆ ಊಹೆಯು ಎಲ್ಲ ವಿಧದಲ್ಲೂ ಸರಿಯಾಗುವುದೇ ಎಂದು ಅದರ ಸಾಧಕ ಬಾಧಕಗಳನ್ನು ಪರಿಶೀಲಿಸಬೇಕು.

೪. **ಊಹೆಯನ್ನು ಪರಿಷ್ಕರಿಸುವುದು**: ಅಂದಾಜಿನಿಂದ ಕಂಡು ಕೊಂಡ ತೀರ್ಮಾನ ಯಾವ ಸಂದರ್ಭಗಳಿಗೆ ಎಷ್ಟರಮಟ್ಟಿಗೆ ಸರಿಹೋಗು ವುದು, ಇನ್ನಾವ ಸಂದರ್ಭಗಳಿಗೆ ಸರಿಹೋಗುವುದಿಲ್ಲ — ಎಂಬುವನ್ನು ಪರಿಶೀಲಿಸಬೇಕು.

೫. **ನಮ್ಮ ಊಹೆಯನ್ನು ಸ್ವೀಕರಿಸುವುದು ಅಥವಾ ಬಿಟ್ಟು ಬಿಡುವುದು**: ನಾವು ತಾತ್ಕಾಲಿಕವಾಗಿ ಮಾಡಿದ ತೀರ್ಮಾನ ಎಲ್ಲ ಸಂದರ್ಭಗಳಿಗೂ ಒಪ್ಪುವಂತಿದ್ದು ನಿರ್ದುಷ್ಟವಾದುದೆಂದು ಪರೀಕ್ಷೆಯಿಂದ ತಿಳಿದುಬಂದಮೇಲೆ ಅದನ್ನು ಅಂಗೀಕರಿಸಬೇಕು. ಇಲ್ಲವಾದರೆ ಅದನ್ನು ತಳ್ಳಿಹಾಕಿ ಸಮಸ್ಯಾ ಪರಿಹಾರಕ್ಕೆ ಪುನಃ ಆರಂಭಿಸಬೇಕು.

ಯಾವ ಸಮಸ್ಯೆಯನ್ನು ಇತ್ಯರ್ಥ ಮಾಡಬೇಕಾಗಲಿ ನಮ್ಮ ವಿವೇಚನೆ ಈ ಐದು ಮಜಲುಗಳಲ್ಲಿ ಮುಂದುವರಿಯಬೇಕು. ಆದರೆ ನಮ್ಮ ನಿತ್ಯ ಜೀವನದ ಸಮಸ್ಯೆಗಳನ್ನು ಬಿಡಿಸಿಕೊಂಡು ಬಾಳುವಾಗ ಈ ಐದು ಮಜಲುಗಳನ್ನೂ ದಾಟಿಕೊಂಡೇ ಬಂದು ತೀರ್ಮಾನಿಸುವುದು ಅಪರೂಪ. ಆದರೂ ಆ ಕ್ರಮವನ್ನು ಮಾತ್ರ ಸಾಮಾನ್ಯವಾಗಿ ಅನುಸರಿಸ ಬಹುದು. ನಮ್ಮ ವಿವೇಚನೆ ಈ ಐದು ಮಜಲುಗಳನ್ನೂ ಕ್ರಮವಾಗಿ ಹಾದು ತೀರ್ಮಾನವನ್ನು ಮಾಡಿದ್ದರೆ ಅಂಥ ವಿವೇಚನೆ ಸುವ್ಯವಸ್ಥಿತವಾದುದು; ಶಾಸ್ತ್ರೀಯವಾದುದು. ಹಾಗಿಲ್ಲದೆ ಒಂದೆರಡು ಅಂಶಗಳನ್ನು ಪರಿಶೀಲಿಸಿ ಬೇಗ ತೀರ್ಮಾನಕ್ಕೆ ಹಾರುವುದಾದರೆ ಸ್ಥೂಲ ರೀತಿಯಲ್ಲಿ, ಸಾಂಪ್ರದಾಯಿಕ ರೀತಿಯಲ್ಲಿ ವಿವೇಚನೆ ನಡೆದಂತಾಗುತ್ತದೆ. ನಮ್ಮ ನಿತ್ಯಜೀವನದ ತೀರ್ಮಾನಗಳಲ್ಲಿ ಬಹು ಭಾಗ ಈ ಸಾಂಪ್ರದಾಯಿಕ ರೀತಿಯ ವಿವೇಚನೆ ಯಲ್ಲೇ ಆಗುತ್ತಿದೆ. ಆದರೆ ಅದು ನಿರ್ದುಷ್ಟವಾಗಲಾರದು.

**ವಿವೇಚನೆಯನ್ನು ಅಡ್ಡದಾರಿಗೊಯ್ಯುವ ಅಂಶಗಳು: ಶಾಸ್ತ್ರೀಯ ರೀತಿಯಲ್ಲಿ ನಡೆಯುವ ವಿವೇಚನೆ ನಿರ್ದುಷ್ಟವಾದ ತೀರ್ಮಾನ**

ಗಳನ್ನೇ ಮಾಡಬಲ್ಲದು. ಆದರೆ ಸ್ಥೂಲವಾಗಿ ವಿವೇಚಿಸುವಾಗ ದೊರಕುವ ತೀರ್ಮಾನಗಳು ಅಷ್ಟು ನಂಬಲರ್ಹವಾಗಿರಲಾರವು. ಆಗ ನಮ್ಮ ವಿವೇಚನೆಯನ್ನು ಅಡ್ಡದಾರಿಗೊಯ್ಯುವ, ಮತ್ತು ನಮ್ಮ ತೀರ್ಮಾನಗಳನ್ನು ದೋಷಮಯವಾಗಿಸುವ ಅಂಶಗಳನ್ನು ಇಲ್ಲಿ ಉಲ್ಲೇಖಿಸಿದೆ.

**೧. ತೀರ್ಮಾನವನ್ನು ಬೇಗ ಕಾಣಬೇಕೆಂಬ ಆತುರ**: ನಮ್ಮ ತೀರ್ಮಾನಗಳು ತಪ್ಪಾಗುವುದಕ್ಕೆ ನಮ್ಮ ಮುಂದಿನ ಸಮಸ್ಯೆಯನ್ನು ದುಡುಕಿ ಬೇಗ ತೀರ್ಮಾನಿಸಲು ಯತ್ನಿಸುವುದೇ ಪ್ರಧಾನ ಕಾರಣ. ಆ ವಿಷಯಕ್ಕಾಗಿ ಹೆಚ್ಚು ಕಾಲ ವಿನಿಯೋಗಿಸಲಿಚ್ಛಿಸದೆ ಅಡ್ಡಬರುವ ಸಂಕೀರ್ಣತೆಗಳನ್ನು ತಳ್ಳಿಹಾಕಿಬಿಡುತ್ತೇವೆ. ಹಾಗೆ ಆತುರದ ತೀರ್ಮಾನಕ್ಕೆ ದುಡುಕಿದರೂ ಅದು ತಪ್ಪೋ ಸರಿಯೋ ಎಂದು ಪರಿಶೀಲಿಸುವುದಾದರೆ ದೋಷ ಗೊತ್ತಾಗಿ, ತಿದ್ದಿಕೊಳ್ಳಬಹುದು; ಆದರೆ ಹಾಗೆ ಮಾಡದೆ ಅದನ್ನೇ ಕೊನೆಯ ತೀರ್ಮಾನವಾಗಿ ಅಂಗೀಕರಿಸುವುದು ಅನೇಕ ಸಂದರ್ಭಗಳಲ್ಲಿ ತೀರ್ಮಾನಗಳನ್ನು ದೋಷಮಯವಾಗಿಸುತ್ತದೆ.

**೨. ಮೂಢನಂಬಿಕೆ**: ಹಿಂದಿನಿಂದಲೂ ಸಮಾಜದಲ್ಲಿ ಸಾಂಪ್ರದಾಯಿಕವಾಗಿ ನಂಬಿಕೊಂಡು ಬಂದಿರುವ, ಇತರರು ನಂಬಿರುವ ಹಲವು ಅಂಶಗಳನ್ನು ಸರಿಯೋ ತಪ್ಪೋ ಎಂದು ಪರಿಶೀಲಿಸದೆ ತನ್ನ ವಿವೇಚನಾ ಕಾರ್ಯಕ್ಕೆ ಉಪಯೋಗಿಸಿಕೊಳ್ಳುವುದರಿಂದ ತೀರ್ಮಾನ ತಪ್ಪಾಗಬಹುದು. ಅನೇಕ ವೇಳೆ ಅಂಥ ಮೂಢನಂಬಿಕೆಗಳನ್ನು ಸರಿಯೇ ಎಂದು ಪರಿಶೀಲಿಸುವುದರ ಬದಲು, ಇಂದು ಪರಿಶೀಲಿಸುವ, ನಾಳೆ ಪರಿಶೀಲಿಸುವ ಎಂದು ತಳ್ಳಿಹಾಕಿಕೊಂಡು ಕಡೆಗೆ ಅದನ್ನು ಹಾಗೆಯೇ ನಂಬಿಕೊಂಡು ಮುಂದುವರಿಯುವುದುಂಟು. ಅದರ ಆಧಾರದಮೇಲೆ ನಡೆಯುವ ನಮ್ಮ ವಿವೇಚನೆ ನಿರ್ದುಷ್ಟವಾಗಲಾರದು.

**೩. ಏಕಮುಖವಾದ ತೀರ್ಮಾನ**: ಚರ್ಚಾತ್ಮಕವಾದ ಯಾವ ವಿಷಯವೇ ಆಗಲಿ ಉಭಯ ದೃಷ್ಟಿಯಲ್ಲೂ ಕೆಲಕೆಲವು ಸತ್ಯಾಂಶಗಳನ್ನು ಒಳಗೊಂಡೇ ಇರುತ್ತದೆ. ಆದರೂ ಅದನ್ನು ಇತ್ಯರ್ಥಪಡಿಸುವಾಗ ಏಕಮುಖವಾದ ತೀರ್ಮಾನಕ್ಕೆ ಬರುವುದು ಬಹುಮಂದಿಗೆ ಅಭ್ಯಾಸ. ಸಮಸ್ಯೆಯನ್ನು ಪೂರ್ಣವಾಗಿ 'ಸರಿ' ಎಂದೋ, 'ತಪ್ಪು' ಎಂದೋ ಇತ್ಯರ್ಥಪಡಿಸು

ವುದು ಸಾಮಾನ್ಯವಾಗಿ ಬಂದುಬಿಟ್ಟಿವೆ. ನೂರಕ್ಕೆ ತೊಂಬತ್ತು ಮಂದಿ ಈ ರೀತಿಯ ಏಕಮುಖವಾದ ತೀರ್ಮಾನಕ್ಕೆ ಬಂದುಬಿಡುತ್ತಾರೆ. ಹಾಗೆ ತೀರ್ಮಾನಿಸುವ ಕೆಲಸ ತೀರ ಸುಲಭ. ಅದಕ್ಕೆ ಅಷ್ಟಾಗಿ ಆಲೋಚಿಸುವ ಅವಶ್ಯಕತೆಯೂ ಇಲ್ಲ. ನಿಜವಾಗಿ ಹೇಳುವುದಾದರೆ ಸತ್ಯಾಂಶ ಅವೆರಡಕ್ಕೂ ಮಧ್ಯಸ್ಥವಾಗಿರುತ್ತದೆ. ಹಾಗಿದ್ದರೂ ಒಂದು ಮುಖದ ಸತ್ಯಾಂಶಗಳನ್ನು ತಳ್ಳಿಹಾಕಿ ಇನ್ನೊಂದು ಮುಖವನ್ನು ಮಾತ್ರ ಪ್ರತಿಪಾದಿಸಿದರೆ ಎಲ್ಲ ಅಂಶ ಗಳನ್ನೂ ಗಣನೆಗೆ ತಂದುಕೊಂಡಂತಾಗದು. ಹಾಗೆ ಸಾಮೂಹಿಕವಾಗಿ ತೀರ್ಮಾನಿಸುವುದರಿಂದ ಸಮಸ್ಯೆಯನ್ನು ಸೂಕ್ಷ್ಮವಾಗಿ ವಿವೇಚಿಸಿದಂತಾಗ ಲಾರದು; ಶಾಸ್ತ್ರೀಯ ರೀತಿಯಲ್ಲಿ ಬಿಡಿಸಿದಂತೆಯೂ ಆಗಲಾರದು. ಅಂಥ ಏಕಮುಖವಾದ ತೀರ್ಮಾನಕ್ಕೆ ಬರಲು ಅವರ ದೃಷ್ಟಿ ಧ್ಯೇಯ, ಸಾಂಪ್ರ ದಾಯಿಕ ನಂಬಿಕೆ, ರಾಜಕೀಯ ಧ್ಯೇಯ, ಅಭಿಮಾನ ಮತ್ತು ಸಂವೇದನಾ ಸ್ವರೂಪ—ಇವೆಲ್ಲವೂ ಕಾರಣವಾಗುತ್ತವೆ. ಆ ರೀತಿಯ ತೀರ್ಮಾನ ಪಕ್ಷ ಪಾತದ ತೀರ್ಮಾನವೆನಿಸುತ್ತದೆ. ಆದ್ದರಿಂದ ಎಲ್ಲ ಅಂಶಗಳನ್ನೂ ಪರಿಶೀಲಿಸಿ ಮಧ್ಯಸ್ಥ ತೀರ್ಮಾನಕ್ಕೆ ಬರುವುದರಿಂದ ಈ ನ್ಯೂನತೆಗಳು ನಿಂತು ನಮ್ಮ ವಿವೇಚನೆ ಸೂಕ್ಷ್ಮವೂ ಶಾಸ್ತ್ರೀಯವೂ ಆಗಬಲ್ಲದು.

**೪. ಪೂರ್ವ ಪರಿಚಯದ ಕೈವಾಡ**: ಯಾವ ಸಮಸ್ಯಾ ಪರಿ ಹಾರದಲ್ಲೇ ಆಗಲಿ ನಮ್ಮ ಪೂರ್ವ ಪರಿಚಯ ತನ್ನ ಕೈವಾಡವನ್ನು ಬೀರ ಬಹುದು. ಅದು ಉಚಿತವಲ್ಲದ್ದಾದರೆ ಆಗ ವಿವೇಚನೆ ಶಾಸ್ತ್ರೀಯ ರೀತಿಯಲ್ಲಿ ನಡೆಯದಾಗುತ್ತದೆ; ಇದನ್ನು ವಿವರಿಸಲು ಕೆಳಗಿನ ಉದಾಹರಣೆಯನ್ನು ಪರಿಶೀಲಿಸಬಹುದು.

೧. ಹೆಂಗಸರು ಸೌಂದರ್ಯೋಪಾಸಕರು;

೨. ಕೆಲವು ಗಂಡಸರೂ ಸೌಂದರ್ಯೋಪಾಸಕರು;

೩. ∴ ಕೆಲವು ಗಂಡಸರು ಹೆಂಗಸರು.

ಈ ರೀತಿಯ ತೀರ್ಮಾನ ತಾರ್ಕಿಕವಾಗಿ ಕಂಡು ಬಂದರೂ ತಪ್ಪಾಗಿ ರುವುದು ಸ್ಪಷ್ಟಪಡುತ್ತದೆ. ಮೂರನೆಯ ಅಂಶವನ್ನು ತೀರ್ಮಾನಿಸುವಾಗ ೧, ೨ನೆಯ ಅಂಶಗಳ ಪರಿಚಯ ತನ್ನ ಕೈವಾಡವನ್ನು ಬೀರಿತು. ಅದು ಉಚಿತವಾದ ಕೈವಾಡವಲ್ಲ; ಆದ್ದರಿಂದ ಕೊನೆಯ ತೀರ್ಮಾನ ತಪ್ಪಾಯಿತು.

ಅನುಚಿತವಾದ ಆ ಅಂಶಗಳನ್ನು ನಾವು ಉಪಯೋಗಿಸಿಕೊಳ್ಳಬಾರದಾಗಿತ್ತು. ಹೀಗೆ ಅನಿವಾರ್ಯವಲ್ಲದ ಪೂರ್ವ ಪರಿಚಯವನ್ನು ಉಪಯೋಗಿಸುವುದರಿಂದ ನಮ್ಮ ವಿವೇಚನೆ ಶಾಸ್ತ್ರೀಯವಾಗಲಾರದು.

**೫. ಶಬ್ದಾಡಂಬರದ ಪ್ರಭಾವ:** ಮುಖ್ಯಾಂಶದ ಸಂಕೇತದ ಪದಗಳನ್ನು ಉಪಯೋಗಿಸುವಾಗ ಆಡಂಬರದ ಪದಪ್ರಯೋಗ ಮಾಡುವುದರಿಂದ ಆ ಪದಗಳ ಶಬ್ದ ವೈಭವದಲ್ಲಿ ಅರ್ಥ ಜ್ಞಾನ ಹಿಂಬದಿಗೆ ಬಿದ್ದು, ವಿವೇಚನೆ ಮಸಕಾಗುವುದು. ರಾಜಕೀಯ ಮತ್ತು ಸಾಮಾಜಿಕ ಪ್ರಚಾರರಂಗಗಳಲ್ಲಿ ವಾಗ್ಮಿಗಳು ತಮ್ಮ ವಾದವನ್ನು ಜನತೆಯ ಮೇಲೆ ಹೇರಲು ಇಂಥ ಆಡಂಬರದ ಪದಗಳನ್ನುಪಯೋಗಿಸುವುದುಂಟು. ಆಗ ಜನತೆ ಅದರ ಅರ್ಥವನ್ನೂ ವಾದದ ವಾಸ್ತವಿಕತೆಯನ್ನೂ ಅರಿತು, ಸರಿಯಾಗಿ ವಿವೇಚಿಸಲಾರದು. ಅದರಿಂದ ವಾಗ್ಮಿಗಳ ಪ್ರಸಾರ ಯಶಸ್ವಿಯಾಗುತ್ತದೆ. ಜನತೆ ಆ ಪದಗಳನ್ನು ಸರಳರೂಪದ ಅರ್ಥ ಕೊಡುವ ಪದಗಳಿಗೆ ಇಳಿಸಿಕೊಂಡು ವಿವೇಚಿಸಿದಾಗ ಆ ವಾದವನ್ನು ಒಪ್ಪದೆ ಖಂಡಿಸಲು ಯತ್ನಿಸಬಹುದು. ಆದ್ದರಿಂದ ವಿವೇಚನೆ ಶಾಸ್ತ್ರೀಯವಾಗಿರಬೇಕಾದರೆ ಪದಗಳ ನಿರ್ದಿಷ್ಟ ಅರ್ಥವನ್ನು ತಿಳಿದಿರಬೇಕು. ಶಾಲೆಯಲ್ಲಿ ಯಾವ ಹೊಸ ಪದವನ್ನು ಬೋಧಿಸಿದರೂ ಅರ್ಥ ತಿಳಿಯುವಂತೆ, ಸರಿಯಾಗಿ ಪ್ರಯೋಗಿಸುವಂತೆ, ಬೋಧಿಸಬೇಕು. ಆ ಮೂಲಕ ಮುಂದೆ ಮಕ್ಕಳು ಶಬ್ದಾಡಂಬರಕ್ಕೆ ಮರುಳಾಗುವುದು ಸ್ವಲ್ಪ ಮಟ್ಟಿಗಾದರೂ ತಪ್ಪಬಹುದು.

**೬. ಮಾನವನ ವಿವೇಚನಾ ಶಕ್ತಿಯ ಅಪ್ರಬುದ್ಧ ಸ್ವರೂಪ:** ಮೇಲಿನ ಎಲ್ಲ ಅಂಶಗಳಲ್ಲೂ ಎಚ್ಚರಿಕೆ ತೆಗೆದುಕೊಂಡರೂ, ನಮ್ಮ ವಿವೇಚನಾ ಶಕ್ತಿ ಎಲ್ಲ ಸಮಸ್ಯೆಗಳನ್ನೂ ಬಿಡಿಸುವಷ್ಟು ಮುಂದುವರಿಯದಿರಬಹುದು. ಅದು ಅಪಕ್ವವಾಗಿರುವುದರಿಂದಲೂ ತೀರ್ಮಾನಗಳು ಅಶಾಸ್ತ್ರೀಯವಾಗಬಹುದು. ಮನೋವ್ಯಾಪಾರಗಳು ಯಂತ್ರಗಳಷ್ಟು ಸೂಕ್ಷ್ಮವಾಗಿ ಕೆಲಸ ಮಾಡುತ್ತವೆಂದು ನಿರ್ಧರವಾಗಿ ಹೇಳುವಂತಿಲ್ಲ. ಜೊತೆಗೆ ಹಲವಂಶಗಳನ್ನು ಅದು ವಿವೇಚಿಸಲು ಈ ದಿನ ಶಕ್ತವಾಗಿಲ್ಲ: ದೇವರೇ ಇಲ್ಲ ಎಂದು ತೀರ್ಮಾನಿಸುವುದಾದರೂ ಅದನ್ನು ಸಿದ್ಧಪಡಿಸುವುದು ಸಾಧ್ಯವಿಲ್ಲ; ಹಾಗೆಯೇ ಅವನ ಇರವನ್ನು ಕಾಣಲೂ ಸಾಧ್ಯವಾಗದಿರಬಹುದು. ಆದ್ದರಿಂದ

ನಮ್ಮ ಮನಸ್ಸು ಆ ಶಕ್ತಿಯನ್ನು ಪಡೆಯುವವರೆಗಾದರೂ ಸಂಪ್ರದಾಯವಾಗಿ ಇತರ ದೃಷ್ಟಿಗಳು ಅರಿತುಕೊಂಡಿರುವ ಅಂಥ ತೀರ್ಮಾನಗಳನ್ನೂ ಒಪ್ಪಬಹುದು.

**೭. ವಿವೇಚನೆ ತೀರ್ಮಾನದ ಒಂದು ಮಾರ್ಗ ಮಾತ್ರ:** ಶಾಸ್ತ್ರೀಯ ರೀತಿಯ ತೀರ್ಮಾನಕ್ಕೆ ಬರಲು ವಿವೇಚನೆಯಂತೆ ಇತರ ಮಾರ್ಗಗಳೂ ಇರಬಹುದು. ನಂಬಿಕೆ ಮತ್ತು ಕಲ್ಪನೆಗಳ ಮೂಲಕವೂ ಅಂಥ ತೀರ್ಮಾನಕ್ಕೆ ಬರಲು ಸಾಧ್ಯವಾಗಬಹುದೋ ಏನೋ. ಆದ್ದರಿಂದ ಮತಧರ್ಮ, ಕಲಾದೃಷ್ಟಿ ಮತ್ತು ಇನ್ನಿತರ ಮಹಾಜ್ಞಾನಗಳು ಸಾಧಿಸಿರುವ ತೀರ್ಮಾನಗಳನ್ನೂ ತೆರೆದ ಮನಸ್ಸಿನಿಂದ ಬರಮಾಡಿಕೊಳ್ಳಬೇಕು. ಆ ಮೂಲಕ ವಿಜ್ಞಾನ, ಧರ್ಮ, ಕಲೆ—ಇವೇ ಮೊದಲಾದ ಜ್ಞಾನರಂಗಗಳ ತೀರ್ಮಾನಗಳಲ್ಲಿ ಒಂದು ರೀತಿಯ ಸಮರಸ ಏರ್ಪಡಲು ಸಾಧ್ಯವಾಗುತ್ತದೆ. ಅಂಥ ನಂಬಿಕೆಗಳೂ ತೀರ್ಮಾನಗಳೂ ಶಾಸ್ತ್ರೀಯವಲ್ಲವೆಂದು ತೋರಿಸುವ ಶಕ್ತಿ ನಮಗೆ ಬರುವವರೆಗಾದರೂ ಅವನ್ನು ಗೌರವಿಸಬಹುದು.

**ತೀರ್ಮಾನಗಳನ್ನು ತಪ್ಪು ದಾರಿಗೆಳೆಯುವ ಅಂಶಗಳ ನಿವಾರಣೋಪಾಯ:** ಶಾಸ್ತ್ರೀಯ ರೀತಿಯಲ್ಲಿ ವಿವೇಚನೆ ನಡೆದು ನಮ್ಮ ತೀರ್ಮಾನಗಳು ಸರಿಯಾದವಾಗಿರುವುದು ಜ್ಞಾನಾರ್ಜನೆಯ ಪಾರಿಶುದ್ಧತೆಯ ದೃಷ್ಟಿಯಿಂದ ತುಂಬ ಆವಶ್ಯಕ. ಆದ್ದರಿಂದ ನಮ್ಮ ವಿವೇಚನೆ ಅಡ್ಡದಾರಿ ಹಿಡಿಯದಿರಲು ನೆರವಾಗುವ ಹಲವು ಎಚ್ಚರಿಕೆಗಳನ್ನು ಕೆಳಗೆ ಸೂಚಿಸಲಾಗಿದೆ. ಬೋಧನ ಕಾರ್ಯಕ್ಕೆ ಅವು ತುಂಬ ನೆರವಾಗಬಲ್ಲವೆಂಬುದು ಸ್ಪಷ್ಟವಾಗಿಯೇ ಇದೆ.

**೧. ಆದಷ್ಟು ಹೆಚ್ಚು ಅಂಕಿ ಅಂಶಗಳ ಸಂಗ್ರಹ:** ನಾವು ಸಮಸ್ಯೆಯನ್ನು ವಿವೇಚಿಸಿ ಇತ್ಯರ್ಥಪಡಿಸಲು ಹೊರಡುವ ಮುನ್ನ ಅದಕ್ಕೆ ಆವಶ್ಯಕವೆನಿಸುವ ಎಲ್ಲ ಅಂಕಿ ಅಂಶಗಳನ್ನೂ ಸಂಗ್ರಹಿಸಿಕೊಳ್ಳುವುದು ಉತ್ತಮ. ಅದರಿಂದ, ಹಲವು ಅಂಶಗಳನ್ನು ಗಣನೆಗೆ ತೆಗೆದುಕೊಳ್ಳದೆ ಆಗುವ ತೊಡಕು ಪರಿಹಾರವಾಗಬಲ್ಲದು.

**೨. ಪದಗಳ ನಿರ್ದುಷ್ಟ ಅರ್ಥ ಪರಿಚಯ:** ವಿವೇಚಿಸುವಾಗ ನಮ್ಮ ಭಾವನೆಗಳು ಪದಗಳ ಮೂಲಕ ಬರುತ್ತವಷ್ಟೆ. ಆದ್ದರಿಂದ ನಾವು

ಉಪಯೋಗಿಸುವ ಪದಗಳ ನಿರ್ದಿಷ್ಟ ಅರ್ಥಜ್ಞಾನ ನಮಗಿರುವುದು ಅವಶ್ಯಕ. ಸರಿಯಾದ ಅರ್ಥಜ್ಞಾನವಿಲ್ಲದಿದ್ದರೆ, ತಪ್ಪರ್ಥ ಮಾಡಿಕೊಂಡಿದ್ದರೆ, ನಮ್ಮ ಸಂಬಂಧ ಕಲ್ಪನೆಯೂ ತಪ್ಪಾಗುತ್ತದೆ. ಬಹುಮಟ್ಟಿಗೆ ಅದನ್ನೇ ಅವಲಂಬಿಸುವ ನಮ್ಮ ತೀರ್ಮಾನಗಳೂ ತಪ್ಪಾಗುವುವು. ಹಾಗೆಯೇ ಪದಗಳ ಅರ್ಥ ಮಬ್ಬು ಮಬ್ಬಾಗಿ ತಿಳಿದಿರುವುದೂ ಒಂದು ನ್ಯೂನತೆಯೇ. ಈ ನ್ಯೂನತೆಯನ್ನು ನಿವಾರಿಸಲು ಪದಗಳ ಸರಿಯಾದ ಅರ್ಥ ಜ್ಞಾನವನ್ನು ಮಕ್ಕಳಿಗೆ ಶಾಲಾ ಜೀವನದಲ್ಲಿ ಚೆನ್ನಾಗಿ ಮಾಡಿಕೊಡಬೇಕು.

**೩. ಅಂಕಿ ಅಂಶಗಳ ಸಾಕ್ಷ್ಯಗಳಲ್ಲಿ ಆಸಕ್ತಿ :** ಯಾವ ತೀರ್ಮಾನಕ್ಕೆ ಬರುವಾಗಲೂ ನಾವು ಆದಷ್ಟು ಹೆಚ್ಚು ಸಾಕ್ಷ್ಯಗಳ ಆಧಾರದ ಮೇಲೇ ತೀರ್ಮಾನಮಾಡುವ ಮನೋಭಾವವನ್ನು ಬೆಳಸಿಕೊಳ್ಳಬೇಕು. ಆದಷ್ಟು ಹೆಚ್ಚು ಸಾಕ್ಷ್ಯಗಳನ್ನು ಒದಗಿಸಿಕೊಳ್ಳುವ ಕಾರ್ಯತತ್ಪರತೆಯೂ ಆವಶ್ಯಕ. ಮುಂದಿರುವ ಹಲವು ಸಾಕ್ಷ್ಯಗಳಿಂದಲೇ ವಿಷಯವನ್ನು ತೀರ್ಮಾನಿಸಲು ಯತ್ನಿಸುವುದು ಅಪಾಯಕರ. ಹಾಗೆ ತಕ್ಕಷ್ಟು ಸಾಕ್ಷ್ಯಗಳು ದೊರೆಯದಿರುವಾಗ ಆಗಲೇ ಅಂತ್ಯ ತೀರ್ಮಾನಕ್ಕೆ ಬರುವುದರ ಬದಲು ಅದನ್ನು ತಾತ್ಕಾಲಿಕ ತೀರ್ಮಾನದಂತೆ ಭಾವಿಸಬೇಕು.

**೪. ವಿವೇಚಿಸುವ ದೃಢ ಮನಸ್ಸು :** ನಮ್ಮ ಮುಂದಿರುವ ಸಮಸ್ಯೆಯನ್ನು ಸರಿಯಾಗಿ ವಿವೇಚಿಸಿ ಇತ್ಯರ್ಥಪಡಿಸಬೇಕೆಂಬ ದೃಢಮನಸ್ಸೂ ಆವಶ್ಯಕ. ನಮ್ಮ ವಿವೇಚನೆಗೆ ನೆರವಾಗತಕ್ಕ ಎಲ್ಲ ಮುಖವಾದ ಅಂಶಗಳೂ ಸಾಕ್ಷ್ಯಗಳೂ ದೊರೆಯುವುದು ದುರ್ಲಭವಾಗಬಹುದು; ನಮ್ಮ ಮನಸ್ಸಿನ ಪಕ್ಷಪಾತಗಳನ್ನು ಪೂರ್ಣವಾಗಿ ತಡೆಯುವುದೂ ಸಾಧ್ಯವಾಗದಿರಬಹುದು. ಆದರೆ ಆ ಸಮಸ್ಯೆಯನ್ನು ವಿವೇಚಿಸಿಯೇ ಇತ್ಯರ್ಥಪಡಿಸಬೇಕೆಂಬ ದೃಢ ಮನೋಭಾವವನ್ನು ಮಕ್ಕಳಲ್ಲಿ ಎಳೆಯ ದಿನಗಳಿಂದಲೂ ಬೆಳಸಬಹುದು. ಅಂಕಿ ಅಂಶಗಳನ್ನು ಸಂಗ್ರಹಿಸುವ ಕಾರ್ಯತತ್ಪರತೆಯನ್ನೂ ಮೂಡಿಸಬೇಕು. ಆಗ ಅವರು ಕೇಳುವ ಪ್ರಶ್ನೆಗಳಿಗೆ ಉಪಾಧ್ಯಾಯರು ಸಹನೆಯಿಂದ ಉತ್ತರ ಹೇಳುತ್ತ, ಅವರಲ್ಲಿ ವಿಷಯವನ್ನು ವಿವೇಚಿಸಿ, ತೀರ್ಮಾನಿಸುವ ಅಭ್ಯಾಸವನ್ನು ಬೆಳಸಬೇಕು. ಯಾವ ಕಾರಣದಿಂದಲೇ ಆಗಲಿ, ಅವರು ಪ್ರಶ್ನಿಸುವುದನ್ನು ತಡೆಯಬಾರದು. ಅದರಿಂದ

ಅವರ ವಿವೇಚನಾ ಮನೋಭಾವ ತಗ್ಗಿ, ಮುಂದೆ ವಿವೇಚಿಸಲು ಯತ್ನ ಮಾಡುವುದು ಕಡಮೆಯಾಗುವುದು. ಮಕ್ಕಳ ಅಭಿಪ್ರಾಯಗಳಿಗೂ ತರಗತಿಯಲ್ಲಿ ಅವಕಾಶ ಕೊಟ್ಟು ತಪ್ಪಾಗಿದ್ದರೆ ಅವರೇ ಅವನ್ನು ಸರಿಪಡಿಸಿ ಕೊಳ್ಳುವಂತೆ ಮಾರ್ಗ ತೋರಿಸಬೇಕು. ಹೀಗೆ ಶಾಲೆಯಲ್ಲಿ ವಿವೇಚಿಸುವ ಅಭ್ಯಾಸ ಮಾಡಿಸಿದ್ದರೆ ಮುಂದೆ ಜೀವನದಲ್ಲಿ ಸಮಸ್ಯೆಗಳನ್ನು ವಿವೇಚನಾ ಪೂರ್ವಕವಾಗಿ ಬಿಡಿಸುವ ಮನೋಭಾವವೂ ಅಭ್ಯಾಸವೂ ನೆಲಸುತ್ತವೆ.

**೫. ತೀರ್ಮಾನಿಸಬೇಕಾದ ವಿಷಯ ಸ್ಪಷ್ಟಪಡಬೇಕು:** ತಾವು ತೀರ್ಮಾನಿಸಬೇಕಾದ ವಿಷಯ ಚೆನ್ನಾಗಿ ಅವರಿಗೆ ಸ್ಪಷ್ಟವಾಗಬೇಕು. ಇಲ್ಲದಿದ್ದರೆ ಅನುಚಿತವಾದ ಸಾಕ್ಷ್ಯಗಳನ್ನು ಸಂಗ್ರಹಿಸುವರು; ಅನಾವಶ್ಯಕ ವಾದ ಸಂಬಂಧಗಳನ್ನು ಕಲ್ಪಿಸುವರು; ಇದರಿಂದ ಕಾಲ ವ್ಯಯವಾಗು ವುದಲ್ಲದೆ ವಿವೇಚನೆ ಅಡ್ಡದಾರಿ ಹಿಡಿದು ತೀರ್ಮಾನ ತಪ್ಪಾಗುತ್ತದೆ. ಸ್ಪಷ್ಟ ವಾಗಿ ಅವರು ತೀರ್ಮಾನಿಸಬೇಕಾದ ಸಮಸ್ಯೆ ಕಣ್ಮುಂದೆ ಕಟ್ಟಿದಂತಿದ್ದರೆ ಮಾರ್ಗವೂ ಸುಸೂತ್ರವಾಗಿ, ಆವಶ್ಯಕವಾದ ಅಂಶಗಳನ್ನು ಮಾತ್ರ ಒದಗಿಸಿ ಕೊಂಡು, ಸರಿಯಾದ ತೀರ್ಮಾನಕ್ಕೆ ಬರಲು ಸಹಾಯವಾಗುತ್ತದೆ. ಹಲವು ಮಕ್ಕಳು ಪ್ರಶ್ನೆಯನ್ನೂ ಸಮಸ್ಯೆಯನ್ನೂ ಅರ್ಥ ಮಾಡಿಕೊಳ್ಳದೆಯೇ ಇತ್ಯರ್ಥಪಡಿಸಲು ಧುಮುಕುವರು. ಆಗಲೂ ಅದೇ ರೀತಿಯ ನ್ಯೂನತೆ ಗಳು ತಲೆದೋರುತ್ತವೆ. ಉಪಾಧ್ಯಾಯರು ಮಕ್ಕಳ ಉತ್ತರವನ್ನು ನಿರೀಕ್ಷಿ ಸುವ ಮುನ್ನ ಅವರು ಪ್ರಶ್ನೆಯನ್ನು ಸರಿಯಾಗಿ ಅರ್ಥ ಮಾಡಿಕೊಂಡಿರು ವರೇ ಎಂದು ಪರಿಶೀಲಿಸಿಕೊಳ್ಳಬೇಕು. ಆಗ ಮಾತ್ರ ಕ್ರಮವಾಗಿಯೂ, ಸರಿಯಾಗಿಯೂ ಆಲೋಚನೆ ನಡೆಯಲು ಅವಕಾಶವಾಗುತ್ತದೆ. ಮುಂದೆ ಅದೇ ಕ್ರಮ ಜೀವನದಲ್ಲೂ ಅಭ್ಯಾಸಕ್ಕೆ ಬರುತ್ತದೆ.

**೬. ಏಕಮುಖವಾದ ತೀರ್ಮಾನಗಳನ್ನು ಕಡಮೆ ಮಾಡಬೇಕು:** ಏಕಮುಖವಾದ ತೀರ್ಮಾನಕ್ಕೆ ಬರಲು ಕಾರಣಗಳನ್ನೂ ಅದರಿಂದ ಆದ ತೀರ್ಮಾನಗಳು ದೋಷಯುಕ್ತವಾಗುವುದನ್ನೂ ಹಿಂದೆ ವಿವರಿಸಿದೆ. ಮಕ್ಕಳು ಆಲೋಚಿಸುವ ಭಾರ ತಪ್ಪಲೆಂದು ಏಕಮುಖವಾಗಿ ತೀರ್ಮಾನ ಹೇಳಿಬಿಡಲು ಯತ್ನಿಸುವರು. 'ಕರ್ಣಾಟಕ ಏಕೀಕರಣ ಭಾರತದ ಸ್ವಾತಂತ್ರ್ಯದಷ್ಟೇ ಮುಖ್ಯವೇ?' ಎಂಬ ವಿಷಯವನ್ನು ಕೊಟ್ಟು ಇತ್ಯರ್ಥ

ಷಡಿಸೆಂದು ಕೇಳಿದರೆ 'ಅಹುದು' ಅಥವಾ 'ಅಲ್ಲ' ಎಂದು ಹೇಳಿಬಿಡುವುದು ಮಕ್ಕಳ ಸ್ವಭಾವ. ಅದರ ಬದಲು ಎಷ್ಟರಮಟ್ಟಿಗೆ ಮುಖ್ಯ, ಎಷ್ಟರಮಟ್ಟಿಗೆ ಮುಖ್ಯವಲ್ಲ ಎಂದು ಹಲವು ನಿಬಂಧನೆಗಳಿಗೊಳಪಟ್ಟಂತೆ ತೀರ್ಮಾನ ಹೇಳಿಸುವುದಾದರೆ ಅವರು ಬಹಳ ಸೂಕ್ಷ್ಮವಾಗಿ ಆಲೋಚಿಸಬೇಕಾಗುತ್ತದೆ. ಆಗ ತೀರ್ಮಾನವೂ ಹೆಚ್ಚು ಸೂಕ್ಷ್ಮವೂ ಸಾಧುವೂ ಆಗಬಲ್ಲದು. ಅಲ್ಲದೆ ಆ ತೀರ್ಮಾನವನ್ನು ಕೊನೆಯ ತೀರ್ಪಾಗಿ ಹೇಳಿಬಿಡುವುದರ ಬದಲು 'ಹೀಗಿರಬಹುದು,' 'ಹಾಗಿರಬಹುದು' ಎಂದು ಅಪೂರ್ಣ ರೂಪದಲ್ಲಿ ರೂಪಿಸುವುದರಿಂದ ಆ ವಿಷಯದಲ್ಲಿ ಮತ್ತೆ ನಿಖರವಾದ ಆಲೋಚನೆ ನಡೆಸಲು ಅವಕಾಶವಿರುತ್ತದೆ. ಹೊಸ ಹೊಸ ಅಂಕಿ ಅಂಶಗಳೂ ಸಾಕ್ಷ್ಯಗಳೂ ದೊರೆತಂತೆ ಆ ತೀರ್ಮಾನ ತಾನಾಗಿಯೇ ಸ್ಫುಟಗೊಳ್ಳುತ್ತದೆ.

**೭. ಉಪಾಧ್ಯಾಯರ ಆದರ್ಶ:** ಶಾಲೆಯಲ್ಲಿ ಉಪಾಧ್ಯಾಯರ ಆಚರಣೆ ಮಕ್ಕಳ ವ್ಯಕ್ತಿತ್ವದ ಮೇಲೆ ಪರಿಣಾಮ ಹುಟ್ಟಿಸಬಲ್ಲದು; ಸ್ವತಃ ಉತ್ತಮ ವಿವೇಚಕರಾಗಿದ್ದರೆ ಮಕ್ಕಳೂ ಆ ಅಭ್ಯಾಸವನ್ನೆ ಬೆಳಸಿಕೊಂಡಾರು. ಪಾಠ ಬೋಧಿಸುವಾಗ ತಾವೂ ಆಲೋಚಿಸಿಯೇ ತೀರ್ಮಾನಕ್ಕೆ ಬರುವ ಸ್ವಭಾವದವರಾಗಿದ್ದರೆ ಮಕ್ಕಳೂ ಆ ಆದರ್ಶವನ್ನು ಕಲಿತು ಅಭ್ಯಾಸಿಸಿಯಾರು.

**೮. ಆಲೋಚಿಸಲು ಶಾಲೆಯಲ್ಲಿ ಅವಕಾಶ ಹೆಚ್ಚಬೇಕು:** ನಮ್ಮ ಮಕ್ಕಳು ಆಲೋಚಿಸುವ ಕಾರ್ಯವನ್ನು ಆಲೋಚನೆ ನಡಸಿಯೇ ಕಲಿಯಬೇಕು. ಆದ್ದರಿಂದ ಶಾಲೆಯಲ್ಲಿ ಮಕ್ಕಳು ಬಗೆ ಬಗೆಯ ಸನ್ನಿವೇಶ ಸಮಸ್ಯೆಗಳನ್ನು ಬಿಡಿಸುವಾಗ, ಪ್ರಶ್ನೆಗೆ ಉತ್ತರ ಹೇಳುವಾಗ ಆಲೋಚನೆ ನಡಸಲು ಪ್ರೋತ್ಸಾಹಿಸಬೇಕು. ಸುಮ್ಮನೆ ದುಡುಕಿ, ಆಲೋಚಿಸದೆ ತೀರ್ಮಾನಕ್ಕೆ ಬರುವುದನ್ನು ತಡೆಯಬೇಕು. ಹಾಗೆ ಕಾರ್ಯತಃ ಶಾಲಾ ಜೀವನದಲ್ಲಿ ಮಕ್ಕಳು ಆಲೋಚನಾ ಕಾರ್ಯವನ್ನು ನಡಸಿ ಆ ಅಭ್ಯಾಸವನ್ನು ಪಡೆಯಬೇಕು. ಅಂದು ಮಾತ್ರ ಅವರು ಜೀವನದಲ್ಲೂ ಸರಿಯಾಗಿ ಆಲೋಚಿಸಿ ತೀರ್ಮಾನಿಸುವ ಅಭ್ಯಾಸ ಪಡೆಯುತ್ತಾರೆ. ಆದರೆ ನಮ್ಮ ಇಂದಿನ ಶಾಲೆಯ ಶಿಕ್ಷಣದಲ್ಲಿ ಜ್ಞಾನಾರ್ಜನೆಗೇ ಹೆಚ್ಚು ಪ್ರಾಶಸ್ತ್ಯವಿದ್ದು ಆಲೋಚನಾ ಕಾರ್ಯಕ್ಕೆ ಅವಕಾಶ ಕಡಮೆಯಾಗಿದೆ. ಪರೀಕ್ಷೆಗಳು ಅಪೇಕ್ಷಿಸುವ

ಜ್ಞಾನ ಸಂಗ್ರಹಕ್ಕಾಗಿಯೇ ಶಾಲೆಯ ಕಾಲದಲ್ಲಿ ಬಹುಭಾಗ ವಿನಿಯೋಗವಾಗುತ್ತಿದೆ; ಆಲೋಚನೆಗೆ ಕಾಲವೇ ಸಿಕ್ಕುತ್ತಿಲ್ಲ. ಅದಕ್ಕಾಗಿ ಸಿದ್ಧಪಡಿಸಿದ ತೀರ್ಮಾನೆಗಳನ್ನೊಳಗೊಂಡ ಪುಸ್ತಕಗಳೂ (ನೋಟ್ಸ್) ರೂಪುಗೊಂಡಿವೆ; ಉಪಾಧ್ಯಾಯರೂ ಕಾಲಾಭಾವದಿಂದ ಅನೇಕ ವೇಳೆ ಸಿದ್ಧಪಡಿಸಿದ ತೀರ್ಮಾನಗಳನ್ನೇ ಕೊಟ್ಟು ನಿಯಮಿತ ಪಠ್ಯಭಾಗವನ್ನು ಮುಗಿಸಲು ಹಾತೊರೆಯುತ್ತಿರಬೇಕಾಗುತ್ತದೆ. ಆದ್ದರಿಂದ ಮಕ್ಕಳು ಜ್ಞಾನಾರ್ಜನೆ ಮಾಡಿದರೂ, ಸ್ವಂತವಾಗಿ ವಿವೇಚಿಸಿ ಆರ್ಜಿಸಿದಂತಾಗಲಾರದು.

ಈ ನ್ಯೂನತೆ ತೊಲಗಬೇಕಾದರೆ ಹಿಂದೆಯೇ ವಿವರಿಸಿರುವಂತೆ ಪರೀಕ್ಷೆಗಳ ಪ್ರಾಧಾನ್ಯತೆಯೂ, ಅವುಗಳ ಇಂದಿನ ರೂಪವೂ ಕ್ರಮವೂ ಬದಲಾಗಬೇಕು. ಅಂದು ಮಾತ್ರ ನಮ್ಮ ಶಾಲೆಗಳು ಮಕ್ಕಳಲ್ಲಿ ಆಲೋಚನಾಶಕ್ತಿಯನ್ನು ಬೆಳಸಿ ವೃದ್ಧಿಪಡಿಸಲು ತಕ್ಕಷ್ಟು ಅನುಕೂಲ ದೊರಕುತ್ತದೆ. ಆದರೂ ಇರುವ ಅವಕಾಶದಲ್ಲೇ ಮಕ್ಕಳು ಸಾಧ್ಯವಾದಷ್ಟು ಆಲೋಚಿಸುವಂತೆ ಮಾಡುವುದೂ ಅನಿವಾರ್ಯ. ಯಾವ ಪಾಠದಲ್ಲಾಗಲಿ ಆಲೋಚಿಸುವುದಕ್ಕೆ ಅವಕಾಶ ಇದ್ದೇ ಇದೆ. ಉಪಾಧ್ಯಾಯರು ಅಧಿಕಾರ ವಾಣಿಯಿಂದ ತೀರ್ಮಾನಗಳಂತೆ ಪಾಠ ಬೋಧಿಸುವುದರ ಬದಲು ಮಕ್ಕಳ ಆಲೋಚನೆಗೆ ಎಡೆಮಾಡಿಕೊಡಬೇಕು; ಅಹುದು, ಮಕ್ಕಳು ಉಪಾಧ್ಯಾಯರ, ಇನ್ನಿತರ ಆಧಾರಗಳ ಸಹಾಯವಿಲ್ಲದೆಯೇ ಆಲೋಚಿಸುವುದೂ ಕಷ್ಟವಾಗುತ್ತದೆ: ಆ ಕಾರ್ಯಕ್ಕೆ ಬೇಕಾದ ಅಂಕಿ ಅಂಶಗಳನ್ನು ಪುಸ್ತಕಗಳಿಂದಲೋ, ಇತರ ಆಗರಗಳಿಂದಲೋ ಆರಿಸಿ ಮಕ್ಕಳಿಗೆ ಒದಗಿಸಬೇಕು; ಅವುಗಳನ್ನು ಉಪಯೋಗಿಸಿಕೊಂಡು ಮಕ್ಕಳು ಆಲೋಚಿಸುವುದು ಸಾಧ್ಯ. ಉತ್ತಮ ಬೋಧನ ಕ್ರಮದಲ್ಲಿ ಅಂಥ ಅಂಶಗಳನ್ನು ಒದಗಿಸುವುದೂ, ಮಕ್ಕಳ ಆಲೋಚನೆಗೆ ಅವಕಾಶ ಕಲ್ಪಿಸುವುದೂ ಇರಬೇಕು. ವಿಜ್ಞಾನ ಪಾಠದಲ್ಲಿ ಆಲೋಚನೆಯಿಂದ ಮಕ್ಕಳೇ ತೀರ್ಪನ್ನು ಕಂಡುಕೊಳ್ಳಲು ಅವಕಾಶ ತುಂಬ ಇದೆ. ಆದರೆ ಚರಿತ್ರೆಯಲ್ಲಿ ಉಪಾಧ್ಯಾಯರು ಅಂಕಿ ಅಂಶಗಳನ್ನು ತಿಳಿಸಬೇಕು; ಅವುಗಳ ಆಧಾರದ ಮೇಲೆ ಮಕ್ಕಳು ಆಲೋಚಿಸುವಂತೆ ಪ್ರೋತ್ಸಾಹಿಸಬೇಕು. ಒಟ್ಟಿನಲ್ಲಿ ವಿಜ್ಞಾನ ಪಾಠವಾಗಲಿ, ಕಲಾ ಪಾಠವಾಗಲಿ ಆಲೋಚನೆಗೆ ತಕ್ಕಷ್ಟು ಅವಕಾಶವಿದೆ. ವಿಜ್ಞಾನದಲ್ಲಿ ವಿವೇಚನೆಯಿಂದ ಬಹು

ಅಂಶಗಳನ್ನು ಅರಿತುಕೊಳ್ಳುವಂತಿದ್ದರೆ, ಕಲಾ ಪಾಠದಲ್ಲಿ ಹಲವು ಅಧಿಕೃತ ಅಂಶಗಳ ಪರಿಚಯದ ಹಿನ್ನೆಲೆಯಲ್ಲಿ ಆಲೋಚಿಸಿ ಹೊಸ ಜ್ಞಾನವನ್ನು ಅರಿಯಬೇಕಾಗುತ್ತದೆ. ವಿಜ್ಞಾನಕ್ಕೆ ಸಂಬಂಧಿಸಿದ ತತ್ತ್ವಗಳನ್ನೂ ನಿಯಮಗಳನ್ನೂ ಪುಸ್ತಕದಲ್ಲಿ ಉಲ್ಲೇಖಿಸಿರುವಂತೆ ಕಂಠಪಾಠ ಮಾಡಿಸುವ ಮುನ್ನ ಆ ಸೂತ್ರಗಳನ್ನು ಹೇಗೆ ರೂಪಿಸಬಹುದೆಂಬ ವಿವೇಚನಾ ಕ್ರಮದಲ್ಲಿ ಬೋಧಿಸಿದರೆ ಮಕ್ಕಳ ಆಲೋಚನಾ ಶಕ್ತಿ ವೃದ್ಧಿಯಾಗುವುದರ ಜೊತೆಗೆ ಸರಿಯಾದ ಕ್ರಮದ ಅಭ್ಯಾಸವೂ ಬರುತ್ತದೆ.

**೯. ಆಲೋಚಿಸದೆ ಉತ್ತರ ಹೇಳಲು ಬಿಡಬಾರದು :** ಉಪಾಧ್ಯಾಯರು ಕೇಳಿದ ಪ್ರಶ್ನೆಗೆ ಕೆಲವರು ಕೂಡಲೇ ಉತ್ತರ ಹೇಳಿಬಿಡಬಹುದು; ಅಂಥವರು ನಿಜವಾಗಿ ಆಲೋಚನೆಯನ್ನೇ ಮಾಡದೆ ಗಿಳಿಪಾಠ ಮಾಡಿರುವ ತೀರ್ಪುಗಳನ್ನು ಹೇಳಿಬಿಡುವರು. ಮತ್ತೆ ಕೆಲವರು ಉತ್ತರವನ್ನೇ ಹೇಳದಿರುವರು; ಅಂಥವರೂ ಆಲೋಚನೆ ಮಾಡದಿರಬಹುದು. ಅಥವಾ, ಆಲೋಚಿಸಲು ಆವಶ್ಯಕವಾದ ಅಂಕಿ ಅಂಶಗಳು ಅವರಿಗೆ ದೊರೆಯದಿರಬಹುದು. ಉಪಾಧ್ಯಾಯರು ಇವೆಲ್ಲವನ್ನೂ ಎಚ್ಚರಿಕೆಯಿಂದ ಪರಿಶೀಲಿಸಿ, ಅವರು ಆಲೋಚಿಸುವಂತೆ ಮಾಡಬೇಕು. ಪ್ರಶ್ನೆ ಹಾಕಿದಮೇಲೆ ಸ್ವಲ್ಪ ಕಾಲಾವಕಾಶ ಕೊಡುವುದರಿಂದ ಎಲ್ಲರೂ ಆಲೋಚಿಸಲು ಅನುಕೂಲವಾಗುತ್ತದೆ; ಆಲೋಚಿಸಲಾರದವರನ್ನು ಹಿಯ್ಯಾಳಿಸದೆ, ಹಲವು ಅಂಕಿ ಅಂಶಗಳನ್ನೊದಗಿಸುವ ಉಪ ಪ್ರಶ್ನೆಯನ್ನು ಹಾಕುವುದುತ್ತಮ. ಆಗ ಅವರಿಗೆ ದೊರೆಯದಿರಬಹುದಾದ ಅಂಶಗಳು ದೊರಕಿ, ಆಲೋಚಿಸಲು ಯತ್ನಿಸಿ, ಉತ್ತರ ಹೇಳಬಹುದು. ಆದರೆ ಯಾವ ಪ್ರಶ್ನೆಗಳಿಗಾಗಲಿ ಆಲೋಚಿಸದೆ ಉತ್ತರ ಹೇಳುವುದನ್ನು ತಪ್ಪಿಸಬೇಕು; ನಡುನಡುವೆ ಮಕ್ಕಳ ಆಲೋಚನೆ ಮುಂದುವರಿಯದಾದಾಗ ಉಪಾಧ್ಯಾಯರನ್ನು ಅವರೂ ಪ್ರಶ್ನಿಸಬಹುದು. ಅವರ ಆ ಪ್ರಶ್ನೆಗಳಿಗೆ ಅವಕಾಶವಿರಬೇಕು. ಉಪಾಧ್ಯಾಯರು ಆ ಮೂಲಕ ಅವರಿಗೆ ಸಹಾಯ ನೀಡಬೇಕು. ಅದರಿಂದ ಮಕ್ಕಳು ಆಲೋಚಿಸುವ ಕಾರ್ಯದಲ್ಲಿ ಉಚಿತ ಶಿಕ್ಷಣವನ್ನು ಪಡೆಯಬಲ್ಲರು.

**೧೦. ಶಾಸ್ತ್ರೀಯ ಕ್ರಮದ ಪರಿಚಯ :** ಆಲೋಚಿಸುವಾಗ, ತೀರ್ಮಾನಕ್ಕೆ ಬರುವಾಗ, ಅನುಸರಿಸಬೇಕಾದ ಶಾಸ್ತ್ರೀಯ ಕ್ರಮವನ್ನು

ಮಕ್ಕಳಿಗೆ ಪರಿಚಯಮಾಡಿಕೊಡಬೇಕು. ವ್ಯಾಕರಣ ಜ್ಞಾನದಿಂದ ಭಾಷಾ ಶಕ್ತಿ ಹೇಗೆ ಉತ್ತಮಗೊಳ್ಳುವುದೋ ಹಾಗೆಯೇ ಶಾಸ್ತ್ರೀಯ ಕ್ರಮದ ಪರಿಚಯದಿಂದ ಮಕ್ಕಳ ವಿವೇಚನೆಯೂ ಉತ್ತಮಗೊಳ್ಳಬಲ್ಲದು.

**೧೧. ತತ್ವಚಿಂತಕರು ಅನುಸರಿಸಿದ ಕ್ರಮಗಳ ಪರಿಚಯ:** ಜಗತ್ತಿನ ಹಿರಿಯ ತತ್ವಚಿಂತಕರು ಅನುಸರಿಸಿದ ಆಲೋಚನಾ ಕ್ರಮವನ್ನೂ ಮಕ್ಕಳಿಗೆ ತಿಳಿಸಬೇಕು. ಅವರು ಎದುರುಗೊಂಡ ಸಮಸ್ಯೆಗಳು, ಅವನ್ನು ತೀರ್ಮಾನಿಸಲು ಅನುಸರಿಸಿದ ಭಿನ್ನ ರೀತಿಯ ಮಾರ್ಗಗಳು, ಆಗ ಬಂದಿರಬಹುದಾದ ತೊಡಕುಗಳು, ಕಡೆಗೆ ಅವರು ಮಾಡಿದ ತೀರ್ಮಾನಗಳು, ಅವುಗಳು ಎಷ್ಟರಮಟ್ಟಿಗೆ ಸಾಧುವಾದವು, ಸಾಧುವಲ್ಲದಿದ್ದರೆ ಅವರು ಅನುಸರಿಸಿದ ಕ್ರಮದಲ್ಲಿರಬಹುದಾದ ದೋಷಗಳು—ಇವೆಲ್ಲವನ್ನೂ ಮಕ್ಕಳು ತಿಳಿಯಬೇಕು. ಅದರಿಂದ ತಾವೂ ಹಾಗೆಯೇ ಮನಃಪೂರ್ವಕವಾಗಿ ವಿವೇಚಿಸಿಯೇ ತೀರ್ಮಾನಕ್ಕೆ ಬರಬೇಕೆಂಬ ಮನೋಭಾವವೂ, ಅದಕ್ಕೆ ಅವಶ್ಯಕವಾದ ಕ್ರಮದ ಪರಿಚಯವೂ ಸಿದ್ಧಿಸುತ್ತವೆ.

## ೮. ಗುಪ್ತ ಮಾನಸರಂಗ

ನಮ್ಮ ಮನಸ್ಸನ್ನು ಸಾಗರದಲ್ಲಿ ತೇಲುವ ಮಂಜಿನಗಡ್ಡೆಗೆ ಹೋಲಿಸಬಹುದು; ಗಡ್ಡೆಯ ಬಹು ಭಾಗ ನೀರಲ್ಲಿ ಮುಳುಗಿ ಮೇಲಿನ ಸ್ವಲ್ಪ ಭಾಗ ಮಾತ್ರ ಕಾಣುತ್ತಿರುತ್ತದೆ; ನಮ್ಮ ಅನುಭವದ ಕೆಲವಂಶಗಳು ಮಾತ್ರ ನಮ್ಮ ತಿಳಿವಳಿಕೆಗೆ ಬರುತ್ತವೆ. ಮಿಕ್ಕವು ಸಾಮಾನ್ಯವಾಗಿ ಬರುವಂತಿಲ್ಲ. ತಿಳಿವಳಿಕೆಗೆ ಬರುವ ಅನುಭವಗಳನ್ನೊಳಗೊಂಡ ಮನಸ್ಸಿನ ಭಾಗವನ್ನು ನೀರಿನಮೇಲೆ ಕಾಣುವ ಮಂಜಿನಗಡ್ಡೆಯ ಭಾಗಕ್ಕೂ, ಮಿಕ್ಕ ಭಾಗವನ್ನು ನೀರಲ್ಲಿ ಮುಳುಗಿರುವುದಕ್ಕೂ ಹೋಲಿಸಬಹುದು. ಮನಸ್ಸಿನ ಮೊದಲ ಭಾಗವನ್ನು ಜಾಗ್ರತ ಮನಸ್ಸೆಂದೂ, ಎರಡನೆಯ ಭಾಗವನ್ನು ಗುಪ್ತ ಮನಸ್ಸೆಂದೂ ಕರೆಯುವರು. ಮೇಲಿನ ಹೋಲಿಕೆಯ ಪರಿಶೀಲನೆಯಿಂದ, ನಮಗೆ ತಿಳಿದಿರುವ ಅನುಭವಗಳಿಗಿಂತ ತಿಳಿಯದಿರುವ ಅನುಭವಗಳೇ ನಮ್ಮ ಮನಸ್ಸಿನಲ್ಲಿ ಹೆಚ್ಚಾಗಿ ಅಡಗಿವೆಯೆಂಬುದು ಸ್ಪಷ್ಟಪಡುತ್ತದೆ. ಆದರೆ ಅಲ್ಲೇನಿವೆಯೆಂಬುದನ್ನು ತಿಳಿಯುವುದು ಇತ್ತೀಚಿನವರೆಗೂ ಸಾಧ್ಯವಿರಲಿಲ್ಲ;

ಸಿಮಂಡ್ ಫ್ರಾಯ್ಡ್ ಎಂಬ ವೈದ್ಯರೊಬ್ಬರು ಅವುಗಳನ್ನು ತಿಳಿಯಲು ನೆರವಾಗುವ ಒಂದು ನೂತನ ಕ್ರಮವನ್ನು ಕಂಡುಹಿಡಿದರು.

ಒಮ್ಮೆ ಫ್ರಾಯ್ಡರು ರೋಗಿಯೊಬ್ಬನಿಗೆ ಚಿಕಿತ್ಸೆ ನಡಸಲು ಯತ್ನಿಸಿದಾಗ ದೈಹಿಕವಾದ ಯಾವ ಕಾರಣವೂ ಕಾಣಲಿಲ್ಲ. ಅವನ ರೋಗ ದೈಹಿಕವಾದುದಲ್ಲವೆನಿಸಿತು; ಯಾವುದೋ ಮಾನಸಿಕ ಕಾರಣವಿರಬೇಕೆಂದು ಊಹಿಸಿಕೊಂಡು ಪರಿಶೀಲಿಸಲಾರಂಭಿಸಿದರು. ಆದರೆ, ಅವನ ಮನಸ್ಸಿನಲ್ಲಿ ಆ ರೋಗಕ್ಕೆ ಕಾರಣವಾದ ಯಾವ ಕಾರಣವೂ ಕಾಣಲಿಲ್ಲ; ಎಲ್ಲ ಆರೋಗ್ಯಸ್ಥಿತಿಯಲ್ಲೇ ಇತ್ತು. ಆದರೆ ವ್ಯಕ್ತಿಗೆ ರೋಗ ಮಾತ್ರ ಇದ್ದುದು ನಿಜ. ಅದನ್ನು ನಿರ್ಧರಿಸಲು ಫ್ರಾಯ್ಡರು ಒಂದು ಊಹೆಯನ್ನು ಕಟ್ಟಿದರು: ವ್ಯಕ್ತಿಗೆ ಗೊತ್ತಿರುವ ವಿಷಯಗಳನ್ನೊಳಗೊಂಡ ಮನಸ್ಸಿನ ಭಾಗದಂತೆ ಗೊತ್ತಿರದ ಅಂಶಗಳನ್ನೊಳಗೊಂಡ ಇನ್ನೊಂದು ಗುಪ್ತ ಭಾಗವೂ ಇರಬೇಕೆಂದು ಊಹಿಸಿಕೊಂಡರು. ಅದರಲ್ಲಿ ರೋಗಕ್ಕೆ ಕಾರಣಗಳು ಅಡಗಿರಬೇಕೆಂದು ಅನುಮೇಯಿಸಿ ಆ ಕಾರಣವನ್ನು ಅರಿಯಲು ಮನೋವಿಶ್ಲೇಷಣ ಎಂಬ ನೂತನ ಕ್ರಮವನ್ನು ಆರಂಭಿಸಿದರು. ಮೊದಲು ಈ ಕ್ರಮ ಮನೋರೋಗಗಳಿಂದ ನರಳುತ್ತಿದ್ದವರನ್ನು ಪರೀಕ್ಷಿಸಲು ಆರಂಭವಾದರೂ, ಅನಂತರ ಅದನ್ನು ಸಾಮಾನ್ಯ ಮಕ್ಕಳ ಗುಪ್ತ ಮನಸ್ಸನ್ನು ಪರೀಕ್ಷಿಸಲೂ ಉಪಯೋಗಿಸಿಕೊಂಡರು. ಹಲವು ವಿಲಕ್ಷಣ ವರ್ತನೆಯ ಮಕ್ಕಳನ್ನು ಪರಿಶೀಲಿಸಿ ಚಿಕಿತ್ಸೆ ನಡಸಲು ಅದರಿಂದ ಅನುಕೂಲವಾಯಿತು; ಅಂದಿನಿಂದ ಮಾನಸಿಕ ಆರೋಗ್ಯವೆಂಬ ನೂತನ ಜ್ಞಾನ ಆರಂಭವಾಗಿ, ಮಕ್ಕಳನ್ನು ಬೆಳಸಬೇಕಾದ ಸರಿಯಾದ ಮಾರ್ಗ ಜಗತ್ತಿಗೆ ಅರಿವಾಯಿತು; ಸಾಮಾನ್ಯ ವೈದ್ಯವಿಜ್ಞಾನ ಜನರ ದೈಹಿಕ ರೋಗಗಳನ್ನು ನಿವಾರಿಸುವುದಾದರೆ ಮನೋವಿಶ್ಲೇಷಣ ಮಾನಸಿಕ ರೋಗಗಳನ್ನೂ, ವಿಲಕ್ಷಣ ವರ್ತನೆಗಳನ್ನೂ ನಿವಾರಿಸುವ ವಿಜ್ಞಾನವಾಯಿತು.

ಕೆಲವು ಮಕ್ಕಳು ಹಿಂದಿನ ಅನುಭವಗಳನ್ನು ನೆನೆಸಿಕೊಳ್ಳಲಾರರು. ಹಿಂದಿನ ಆ ಅನುಭವಗಳೆಲ್ಲ ಗುಪ್ತ ಮಾನಸರಂಗದಲ್ಲಿ ಅಡಗಿಹೋಗಿರುವುದೇ ಅದಕ್ಕೆ ಕಾರಣ. ಈ ಗುಪ್ತಮಾನಸರಂಗದ ಇರವಿನ ಮೇಲೇ ಫ್ರಾಯ್ಡರ ಮನೋವಿಶ್ಲೇಷಣತತ್ತ್ವ ರೂಪುಗೊಂಡಿರುವುದು. ಈ ತತ್ತ್ವಕ್ಕನು

ಕೂಲಿಸುವಂತೆ ಅವರು ಮನಸ್ಸನ್ನು ಮೂರು ಭಾಗಗಳಾಗಿ ಭಾವಿಸಿಕೊಂಡರು: ನಮಗೆ ಗೊತ್ತಿರುವ ವಿಷಯಗಳನ್ನೊಳಗೊಂಡ ಜಾಗ್ರತ ಮನಸ್ಸು ಒಂದು ಭಾಗ; ಮರೆತುಹೋಗಿರುವ, ಆದರೆ ಸ್ಮರಣೆಗೆ ತಂದುಕೊಳ್ಳಬಹುದಾದ ವಿಷಯಗಳನ್ನೊಳಗೊಂಡ ಪೂರ್ವ ಜಾಗ್ರತ ಮನಸ್ಸು ಇನ್ನೊಂದು; ನೆನಪಿಗೇ ಬಾರದ ಬಹು ಅಂಶಗಳನ್ನೊಳಗೊಂಡಿರುವ ಗುಪ್ತ ಮನಸ್ಸು ಮತ್ತೊಂದು. ಸಾಧಾರಣ ಮನಶ್ಶಾಸ್ತ್ರ ಮೇಲಿನ ಎರಡು ಮನೋ ಭಾಗ ಗಳ ವ್ಯಾಪಾರವನ್ನು ಮಾತ್ರ ತಿಳಿಯಲು ಸಹಾಯಮಾಡುತ್ತದೆ. ಮನೋ ವಿಶ್ಲೇಷಣ ಕ್ರಮ ಗುಪ್ತ ಮಾನಸರಂಗದ ವ್ಯಾಪಾರವನ್ನು ತಿಳಿಯಲು ಸಹಾಯವಾಗುತ್ತದೆ. ಕೆಲವು ಮಕ್ಕಳು ವಿಲಕ್ಷಣ ರೀತಿಯಲ್ಲಿ ವರ್ತಿಸುವರು: ಅತಿ ಮರೆವು ಕೆಲವರಿಗೆ; ಕೆಲವರು ಅತಿ ಸುಳ್ಳರು; ಮತ್ತೆ ಕೆಲವರಿಗೆ ತುಂಬ ಮುಖಹೇಡಿತನ; ಹಲವರಿಗೆ ಬಹು ನಾಚಿಕೆ. ಈ ವಿಲಕ್ಷಣ ವರ್ತ ನೆಗೆ ಸಾಮಾನ್ಯ ಮನಶ್ಶಾಸ್ತ್ರ ಕಾರಣಗಳನ್ನು ತಿಳಿಸುವಂತಿಲ್ಲ. ಫ್ರಾಯ್ಡರ ಮನೋ ವಿಶ್ಲೇಷಣ ಕ್ರಮ ಆ ಕಾರ್ಯವನ್ನು ಮಾಡಲು ಯತ್ನಿಸುತ್ತದೆ.

ಕೆಲವರ ಈ ತೆರದ ವಿಲಕ್ಷಣ ವರ್ತನೆಗೆ ಎಳೆಯ ದಿನಗಳಲ್ಲಿ ಅವರ ಆಸಕ್ತಿಗಳಿಗೆ ಉಂಟಾದ ಅಡಚಣೆಯೇ ಕಾರಣ. ಎಂದರೆ, ಅಂಥ ಮಕ್ಕಳ ಎಳೆಯ ದಿನಗಳಲ್ಲಿ ಉಂಟಾದ ಯಾವುದೋ ಆತಂಕಗಳು ಅವರಲ್ಲಿ ಇಂಥ ವಿಲಕ್ಷಣ ವರ್ತನೆಗಳನ್ನು ಹುಟ್ಟಿಸುವಂತಾಯಿತು. ಮಕ್ಕಳ ಸ್ವಾಭಾವಿಕ ಆಸಕ್ತಿಗಳು, ಹುಟ್ಟುಗುಣಗಳು ಕಾರ್ಯಪ್ರವರ್ತವಾಗಿರುವಾಗ ದೊಡ್ಡವರು ಅಡ್ಡಬಂದು ತಡೆದರೆ ಆ ಸ್ವಾಭಾವಿಕ ವರ್ತನೆಗಳು ನಿರ್ಮೂಲವಾದು ವೆಂದು ಭಾವಿಸಬಾರದು: ಆ ವರ್ತನೆಗಳಿಗೆ ಕಾರಣವಾದ ಹುಟ್ಟುಗುಣಗಳ ಮನಶ್ಶಕ್ತಿ ವ್ಯಯವಾಗದೆ ಜಾಗ್ರತ ಮನಸ್ಸಿನಿಂದ ದೂರವಾದರೂ, ಗುಪ್ತ ಮನಸ್ಸಿನಲ್ಲಿ ಅಡಗಿಬಿಡುತ್ತದೆ. ಅಡಗಿದರೆ ಅಡಗಿರಲಿ ಎಂದು ತೆಪ್ಪನಿರು ವಂತಿಲ್ಲ: ಆ ಮನಶ್ಶಕ್ತಿ ಖರ್ಚಾಗದೆ ಉಳಿದುಕೊಂಡಿದೆ; ಇಮ್ಮಡಿ ಮುಮ್ಮಡಿ ರಭಸದಿಂದ ಕಾರ್ಯಮುಖವಾಗಿ ಅನಾಹುತವುಂಟುಮಾಡಲು ಅವಕಾಶಕ್ಕಾಗಿ ಕಾಯುತ್ತಿರುತ್ತದೆ. ಎಂದರೆ, ಮಕ್ಕಳ ವಿಫಲಗೊಂಡ ಒಂದೊಂದು ಸ್ವಾಭಾವಿಕ ಆಸೆಯೂ ಗುಪ್ತ ಮಾನಸರಂಗದಲ್ಲಿ ಒಂದೊಂದು ಅನಾಹುತದ ಕೇಂದ್ರವಾಗಿ ಅಡಗಿರುತ್ತದೆ. ಅದನ್ನು ಮನಸ್ಸಂಕೀರ್ಣತೆ

ಯೆಂದು ಕರೆಯಬಹುದು; ಮನಶ್ಶಾಸ್ತ್ರ ದೃಷ್ಟಿಯಿಂದ ಇದು ಒಂದು ರೀತಿಯ ರೋಗ!

ಗುಪ್ತ ಮನಸ್ಸಿನಲ್ಲಡಗಿರುವ ಸಂಕೀರ್ಣತೆಗಳು ತಾವು ಗೌಪ್ಯವಾಗಿದ್ದರೂ ವ್ಯಕ್ತಿಯ ಜೀವನದ ಮೇಲೆ ತಮ್ಮ ಕೈವಾಡವನ್ನು ಬೀರುತ್ತಿರುತ್ತವೆ. ಅವರಲ್ಲಿ ಬಗೆ ಬಗೆಯ ವಿಲಕ್ಷಣ ವರ್ತನೆಯನ್ನು ಹುಟ್ಟಿಸುತ್ತವೆ. ಅನುಚಿತವೆನ್ನಬಹುದಾದ ಹಗಲುಗನಸುಗಳನ್ನೂ ಸ್ವಪ್ನಗಳನ್ನೂ ಉಂಟುಮಾಡುತ್ತವೆ. ಮಕ್ಕಳ ಈ ಮನೋರೋಗಗಳಿಗೆ ಮೂಲಕಾರಣ ಗುಪ್ತ ಮನಸ್ಸಿನಲ್ಲಿ ಅಡಗಿರುವ ಮನಸ್ಸಂಕೀರ್ಣತೆಗಳು. ಅವುಗಳನ್ನು ಅರಿತು ರೋಗವನ್ನು ನಿವಾರಿಸುವುದು ಹೇಗೆ?

ವಿಫಲಗೊಂಡ ಆಸೆಗಳ ಸಂಕೀರ್ಣತೆಗಳು ನಾವು ಎಚ್ಚರವಾಗಿರುವಾಗ ಕಾರ್ಯಮುಖವಾಗುವಂತಿಲ್ಲ. ಏಕೆಂದರೆ, ಜಾಗ್ರತ ಪ್ರಪಂಚದಲ್ಲಿ ಅವು ನಿಷಿದ್ಧ. ಆತಂಕ ಹೊಂದಿ ಅಡಗಿಕೊಂಡಿರುವ ಆ ಆಶೆಗಳು ಸ್ವಪ್ನದ ರೂಪದಲ್ಲಿ ನಿದ್ರಿಸುವಾಗ ಕಾರ್ಯಮುಖವಾಗುತ್ತವೆ. ಆ ಸ್ವಾಭಾವಿಕ ಆಸಕ್ತಿಯ ಮನಶ್ಶಕ್ತಿ ಜಾಗ್ರತ ಲೋಕದಲ್ಲಿ ಕಾರ್ಯಾಚರಣೆ ಮಾಡುವಂತಿಲ್ಲದಿದ್ದರೂ ಸ್ವಪ್ನಲೋಕದಲ್ಲಾದರೂ ಕಾರ್ಯಮುಖವಾಗಿ ತೃಪ್ತಿ ಪಡಲು ಯತ್ನಿಸುತ್ತದೆ! ಹಾಗೆಯೇ ಹಗಲುಗನಸುಗಳಲ್ಲೂ ಆ ಆಶೆಯನ್ನು ಚಿತ್ರಿಸಿಕೊಂಡು ನಲಿಯುವುದೂ ಉಂಟು. ಜಾಗ್ರತಾವಸ್ಥೆಯಲ್ಲಿ, ಎಂದರೆ ನಾವು ಎಚ್ಚರವಾಗಿರುವಾಗ ಮನಸ್ಸಂಕೀರ್ಣತೆ ಕಾರ್ಯಮುಖವಾಗದೆ ಗುಪ್ತ ಮನಸ್ಸಿನಲ್ಲಿ ಅಡಗಿದ್ದರೂ ವ್ಯಕ್ತಿಯ ವರ್ತನೆಯಮೇಲೆ ತನ್ನ ಕೈವಾಡವನ್ನು ಬೀರುತ್ತಿರುತ್ತದೆ.

ಫ್ರಾಯ್ಡರ ಮನೋವಿಶ್ಲೇಷಣ ಕ್ರಮವನ್ನು ಬಿಟ್ಟರೆ ಮತ್ತಾವ ಜ್ಞಾನವೂ ಮಕ್ಕಳ ವಿಲಕ್ಷಣ ವರ್ತನೆಗೆ ಕಾರಣಗಳನ್ನು ತಿಳಿಸಲಾರದು. ಮನೋವಿಶ್ಲೇಷಣ ಮಾಡುವಾಗ ಮೊದಲು ಆ ಮಕ್ಕಳ ವಿಲಕ್ಷಣ ವರ್ತನೆಯ ಸ್ವರೂಪವನ್ನು ದೃಢಪಡಿಸಿಕೊಳ್ಳಬೇಕು; ಅನಂತರ ಅವರ ದೈಹಿಕ ವರ್ತನೆಯ ಇನ್ನಿತರ ವೈಚಿತ್ರ್ಯಗಳನ್ನು ಪರಿಶೀಲಿಸಬೇಕು; ಅವರು ಕಟ್ಟುವ ಹಗಲುಗನಸುಗಳನ್ನೂ, ಕಾಣುವ ಸ್ವಪ್ನಗಳನ್ನೂ ಪರಿಚಯ ಮಾಡಿಕೊಳ್ಳಬೇಕು; ಬಾಯಿತಪ್ಪಿನಿಂದ ಆಗಾಗ ಹೊರಬೀಳುವ ಪದ

ಗಳನ್ನೂ, ಆಗಾಗ ಸಂಬಂಧ ಕಲ್ಪಿಸಿಕೊಳ್ಳುವ ಭಾವಗಳನ್ನೂ ಪದಗಳನ್ನೂ, ಬೇಗ ಮರೆಯುವ ಅಂಶಗಳನ್ನೂ ಗುರುತು ಮಾಡಿಕೊಳ್ಳಬೇಕು. ಜೊತೆಗೆ ಅವರ ಎಳೆಯ ಜೀವನದ ಇತಿಹಾಸವನ್ನು ಪೋಷಕರಿಂದ ಶೇಖರಿಸಬೇಕು. ಇವೆಲ್ಲದರ ಆಧಾರದಮೇಲೆ ಅವರ ಎಳೆಯ ದಿನಗಳಲ್ಲಿ ಅಡಚಣೆ ಹೊಂದಿರಬಹುದಾದ ಆಶೆಯನ್ನೂ ಅದರಿಂದ ಗುಪ್ತ ಮನಸ್ಸಿನಲ್ಲಿ ಅಡಗಿರುವ ಮನಸ್ಸಂಕೀರ್ಣತೆಯ ಸ್ವರೂಪವನ್ನೂ ನಿರ್ಧರಿಸಬೇಕು. ಇದೇ ಮನೋವಿಶ್ಲೇಷಣದ ಕ್ರಮ.

ಮೇಲಿನ ವಿಷಯ ಸಂಗ್ರಹದಿಂದ ಅಡಚಣೆ ಹೊಂದಿರಬಹುದಾದ ಮಕ್ಕಳ ಎಳೆಯ ದಿನಗಳ ಸ್ವಾಭಾವಿಕ ಆಸೆ ಆಸಕ್ತಿಗಳನ್ನು ನಿರ್ಧರಿಸುವ ರೀತಿಯನ್ನು ಸೂಚಿಸಲು ಹಲವು ಉದಾಹರಣೆಗಳನ್ನು ಉಲ್ಲೇಖಿಸಬಹುದು:

೧. ಒಬ್ಬನಿಗೆ ಅತಿ ಭೀತಿ. ಅವನಿಗೆ ಬೆತ್ತ, ಹೊತ್ತುಮೀರು, ವ್ಯಾಕರಣ, ಕೋಮಾರಿ—ಈ ಪದಗಳನ್ನು ಕೊಟ್ಟು ಪಾಠಶಾಲೆಯ ಹೆಸರನ್ನೆತ್ತಿದಾಗ ಆ ಹುಡುಗ ತಕ್ಷಣ ಸಂಬಂಧ ಕಲ್ಪಿಸಬಹುದಾದ ಪದವನ್ನು ಗುರುತಿಸಿಕೊಳ್ಳಬೇಕು. ಬೆತ್ತವನ್ನು ನೆನಸಿಕೊಂಡರೆ ಅವನಿಗೆ ಆಗ ದಂಡನೆಯಾಗಿರಬಹುದು; ವ್ಯಾಕರಣವನ್ನು ನೆನಸಿಕೊಂಡರೆ ಆ ಪಾಠದ ಕಹಿ ನೆನಪು ಸ್ಪಷ್ಟಪಡುತ್ತದೆ. ಹಾಗೆಯೇ ಇತರ ಪದಗಳೂ. ಅವನು ಸಂಬಂಧ ಕಲ್ಪಿಸುವ ಪದ ಅವನಿಗೆ ಭೀತಿ ಹುಟ್ಟಲು ಕಾರಣವಾದ ಸನ್ನಿವೇಶವನ್ನು ಸ್ಥೂಲವಾಗಿ ಸೂಚಿಸಬಲ್ಲದು.

೨. ತರಗತಿಯಲ್ಲಿ ಪಾಠ ಮಾಡುತ್ತಿರುವಾಗ ಒಬ್ಬ ಹುಡುಗ ಹಗಲುಗನಸಿನಲ್ಲಿ ತೇಲುತ್ತಿರಬಹುದು. ದೊಡ್ಡ ಸಭೆಯೊಂದರ ನಡುವೆ ವೇದಿಕೆಯ ಮೇಲೆ ನಿಂತು ಭಾಷಣ ಮಾಡುತ್ತಿರುವಂತೆಯೂ ಸುತ್ತಣ ಜನ ಪ್ರಶಂಸಾಪೂರ್ವಕವಾಗಿ ಚಪ್ಪಾಳೆ ಹಾಕುತ್ತಿರುವಂತೆಯೂ ಕನಸು ಕಟ್ಟಬಹುದು. ಅವನ ಜಾಗ್ರತ ಮನಸ್ಸು ಆಗ ಸ್ವಲ್ಪ ಆಲಸ್ಯದಲ್ಲಿರುತ್ತದೆ. ಆದರಿಂದಲೇ ಮನಸ್ಸಂಕೀರ್ಣತೆ ತನ್ನ ಪ್ರಭಾವವನ್ನು ಆಗ ಬೀರಲು ಯತ್ನಿಸಿದ್ದು! ಅದಕ್ಕೆ ಕಾರಣ ಅವನ ಗುಪ್ತ ಮನಸ್ಸಿನಲ್ಲಡಗಿರುವ ನಿರಾಶೆ; ಅದು ಜಾಗ್ರತ ಪ್ರಪಂಚದಲ್ಲಿ ಒಳ್ಳೆಯ ವಾಗ್ಮಿಯಾಗಲು ಸಾಧ್ಯವಾಗದಿದ್ದರಿಂದ ಮೂಡಿದ ನಿರಾಶೆ. ವಾಸ್ತವ ಜಗತ್ತಿನಲ್ಲಿ ಆ ಆಶೆ ಸಾರ್ಥಕಗೊಳ್ಳಲಾರದೆ ಹಗಲುಗನಸಿನಲ್ಲಿ ಪ್ರಕಾಶಗೊಳ್ಳಲು ಈ ರೀತಿ ಯತ್ನ ನಡೆಸುತ್ತಿದೆಯೆಂದು ಊಹಿಸಬಹುದು.

೩. ನಾಲ್ಕು ವರ್ಷದ ಹುಡುಗನೊಬ್ಬ ತನ್ನ ಬೊಂಬೆಯ ಸುತ್ತ ಸುತ್ತುತ್ತ 'ಮೋರಿ, ಮೋರಿ' ಎಂದು ಆಸಕ್ತಿಯಿಂದ ಹೇಳಿಕೊಂಡು ತಿರುಗುತ್ತಿದ್ದ, ಅವನಾಟ್ಕ,

ಆ ಮೇರಿಯೆಂದು ಪ್ರಶ್ನಿಸಿದಾಗ ‘ ಅವಳು ನನಗಿಂತ ಚಿಕ್ಕವಳು ’ ಎಂದು ಉತ್ತರ ಕೊಟ್ಟ. ತಾನು ಅವಳೊಡನೆ ವಾಸಿಸುವುದಾಗಿ ಹೇಳಿದ. ಅವನ ತಾಯಿಗೆ ಆ ಕಲ್ಪನಾ ಮೇರಿಯ ಹೆಸರನ್ನು ಕೇಳಿ ಆಶ್ಚರ್ಯ, ಕುತೂಹಲ! ಅವನು ಆಡುತ್ತಿರುವಾಗ ತಾಯಿಯನ್ನು ಬಗೆ ಬಗೆಯ ಆಟದ ಸಾಮಾನು ಕೇಳುತ್ತಿದ್ದ. ಅವಳು ಇಲ್ಲವೆಂದರೆ ‘ ಹೋಗಲಿ! ಮೇರಿಯ ತಾಯಿಯ ಅಂಗಡಿಯಲ್ಲಿ ಬೇಕಾದಷ್ಟಿವೆ!’ ಎನ್ನುತ್ತಿದ್ದ. ಮತ್ತೊಂದು ದಿನ ಆ ಹುಡುಗನ ತಾಯಿ ಹಣ್ಣು ಬಿಡಿಸುತಿದ್ದಳು; ‘ ಏನು ಮಾಡುತ್ತೀಯೆ?’ ಎಂದ. ಅವಳು ‘ ಹಣ್ಣು ಬಿಡಿಸುತ್ತೇನೆ, ಸೀಬೆ ಹಣ್ಣನ್ನು ’ ಎಂದುತ್ತರಕೊಟ್ಟಳು. ಹುಡುಗ ‘ ಮೇರಿ ತಾಯಿಯ ತೋಟದಲ್ಲಿ ಸೇಬಿನ ಹಣ್ಣಿವೆ!’ ಎಂದುಕೊಂಡ. ಆಗ ತಾಯಿ ಅವನಿಗಿಷ್ಟು ಹಣ್ಣನ್ನು ತಿನ್ನಲು ಕೊಟ್ಟಳು. ಹುಡುಗ ‘ ಮೇರಿ ತಾಯಿ ಬುಟ್ಟಿ ತುಂಬಿಕೊಡುತ್ತಾಳೆ!’ ಎಂದುಕೊಂಡ. ಪಾಪ, ಅವನ ತಾಯಿಗೆ ಆಶ್ಚರ್ಯ. ಮೇರಿ ಯಾರೊ! ಅವಳ ತಾಯಿ ಯಾರೊ! ಇದೆಲ್ಲ ಆ ಹುಡುಗನ ಹಗಲುಗನಸು. ಅದಕ್ಕೆ ಚಿಕ್ಕಂದಿನಲ್ಲಿ ವಿಫಲಗೊಂಡ ಯಾವುದೋ ಆಶೆಗಳು ಕಾರಣವಿರಬೇಕಷ್ಟೆ?–ಅವನ ಹಗಲುಗನಸುಗಳಲ್ಲಿ ಸಂಘ ಜೀವನಾಭಿಲಾಷೆ ಮತ್ತು ಆತ್ಮಪ್ರತಿಷ್ಠೆ—ಈ ಎರಡು ಹುಟ್ಟುಗುಣಗಳೂ ಎದ್ದು ಕಾಣುತ್ತವೆ. ಅದಕ್ಕಾಗಿ ಅಧಿಕಾರ ನಡಸಲು ತನಗಿಂತ ಚಿಕ್ಕ ಹುಡುಗಿಯನ್ನು ಸೃಷ್ಟಿಸಿಕೊಂಡಿದ್ದಾನೆ. ಈ ಅಂಶಗಳೊಡನೆ ಅವನ ಎಳೆಯ ದಿನಗಳ ಚರಿತ್ರೆಯನ್ನೂ ಹೋಲಿಸಬೇಕು. ಅವನಿಗೆ ಆಗ ೧೫–೧೬ ವರ್ಷದ ಒಬ್ಬ ಅಕ್ಕ ಇದ್ದಳು; ಆಡುವುದಕ್ಕೆ ಇನ್ನಾರೂ ಇರಲಿಲ್ಲ. ಅವಳು ದೊಡ್ಡ ಹುಡುಗಿಯಾದ್ದರಿಂದ ಅವನಮೇಲೆ ಅಧಿಕಾರ ನಡಸುತ್ತಿದ್ದಳು. ಆದರಿಂದ ಅವನ ಹುಟ್ಟುಗುಣಗಳಾದ ಸಂಘ ಜೀವನಾಭಿಲಾಷೆ ಮತ್ತು ಸ್ವಪ್ರತಿಷ್ಠೆಗಳ ಪ್ರಕಾಶನಕ್ಕೆ ಅಡ್ಡಿಯಾಯಿತು. ಆದರೆ ಆ ಆಶೆ ನಂದಿಹೋಗಲಿಲ್ಲ. ಆ ವರ್ತನೆಗೆ ಆಧಾರವಾದ ಮನಶ್ಶಕ್ತಿಗಳು ಗುಪ್ತ ಮನಸ್ಸಿನಲ್ಲಿ ಸಂಕೀರ್ಣತೆಗಳಾಗಿ ಅಡಗಿದುವು. ಚಿಕ್ಕಂದಿನಲ್ಲಿ ಪ್ರಕಾಶಗೊಳ್ಳಲಾರದೆ ಅಡಗಿದ ಅವನ ಆ ಅಭಿಲಾಷೆ ಈಗ ಹಗಲುಗನಸುಗಳಲ್ಲಿ ಪ್ರಕಾಶನಗೊಳ್ಳುತ್ತಿದೆ. ಆದಕ್ಕೇ ಹಗಲುಗನಸಿನಲ್ಲಿ ಒಬ್ಬ ಚಿಕ್ಕ ಹುಡುಗಿ ಮೇರಿಯನ್ನು ಸೃಷ್ಟಿಸಿಕೊಂಡಿರುವನು. ಆದರಿಂದ ಸಂಘ ಜೀವನಾಭಿಲಾಷೆ ಈಡೇರುತ್ತಿದೆ; ಚಿಕ್ಕವಳಾಗಿರುವುದರಿಂದ ಅವಳಮೇಲೆ ತನ್ನ ಅಧಿಕಾರವನ್ನು ನಡಸಲೂ ಅನುಕೂಲವಾಗಿದೆ. ಅವನ ತಾಯಿ ಅವನ ಎಳೆಯತನದಲ್ಲಿ ಬೇರೆ ಕೆಲಸಗಳಲ್ಲಿ ನಿರತಳಾಗಿದ್ದು, ಹೆಚ್ಚು ಕಾಲ ಮನೆಯಲ್ಲಿರಲು ಅವಕಾಶವಿರಲಿಲ್ಲ. ಅದ್ದರಿಂದ ಮಗುವಿನ ಕಡೆ ತಕ್ಕಷ್ಟು ಆಸಕ್ತಿ ತೋರಲು ಆಗುತ್ತಿರಲಿಲ್ಲ. ಆದರೆ ಮಗು ತಾಯ ಮಮತೆಯನ್ನು ಅನುಭವಿಸುವುದು ಒಂದು ಹುಟ್ಟುಗುಣ. ಆ ಗುಣದ ಪ್ರಕಾಶನಕ್ಕೆ ಆಗ ಅವಕಾಶವಿಲ್ಲವಾಗಿ ಅದೂ ಗುಪ್ತಮನಸ್ಸಿನಲ್ಲಿ ಅಡಗಿತು.

ಅದಕ್ಕೇ ಅವನು ಒಬ್ಬ ತಾಯಿಯನ್ನು ತನ್ನ ಹಗಲುಗನಸಿನಲ್ಲಿ ಸೃಷ್ಟಿಸಿರುವನು. ಅವಳು ಅವನ ನಿಜವಾದ ತಾಯಿಗಿಂತ ಎಷ್ಟೋ ಉತ್ತಮ! ತನ್ನ ಎಳೆಯ ದಿನಗಳಲ್ಲಿ ವಿಫಲವಾದ ತಾಯ ಮಮತೆಯನ್ನು ಸವಿಯುವ ಆಶೆ ಈಗ ಮಮತೆಯನ್ನು ತೋರುವಂಥ ತಾಯೊಬ್ಬಳನ್ನು ಸೃಷ್ಟಿಸುವುದರ ಮೂಲಕ ಹಗಲುಗನಸಿನಲ್ಲಿ ಈಡೇರುತ್ತಿದೆ!

೪. ೧೧ ವರ್ಷದ ಒಬ್ಬ ಹುಡುಗ. ಬೆಟ್ಟದಿಂದ ಬೀಳುವಂತೆ, ಸಮುದ್ರಕ್ಕೆ ಬೀಳುವಂತೆ ಆಗಾಗ ಸ್ವಪ್ನ ಕಾಣುತ್ತಿದ್ದ. ಅವನ ತಾಯಿಂದ ಅವನ ಎಳೆಯ ದಿನಗಳ ಇತಿಹಾಸವನ್ನು ತಿಳಿಯಲಾಯಿತು. ಅವನು ತಾಯಿಗೆ ಮಮತೆಯ ಮಗು! ತನ್ನ ಎಳೆಯ ವಯಸ್ಸಿನಲ್ಲೊಮ್ಮೆ ಅವನನ್ನು ದಾದಿ ನೋಡಿಕೊಳ್ಳುತ್ತಿದ್ದು ಏನೋ ಕೆಲಸ ಮಾಡಲು ಕುರ್ಚಿಯಲ್ಲಿ ಕೂರಿಸಿಬಿಟ್ಟಳು. ಅವನು ಅಲ್ಲಿರಲಾರದೆ ಹೊರಗೆ ಬರಲು ಯತ್ನಿಸಿದ. ಆಗ ಕೆಳಗೆ ಬಿದ್ದು ತಲೆಗೆ ಪೆಟ್ಟಾಗಿ ಕಿಟ್ಟನೆ ಕಿರುಚಿಕೊಂಡ. ಎಲ್ಲೋ ಇದ್ದ ತಾಯಿ ತಕ್ಷಣ ಬಂದು ಮುದ್ದಿಸಿ ಸಮಾಧಾನಪಡಿಸಿದ್ದಳು. ಮಗುವಿನ ಈ ಚರಿತ್ರೆಯಿಂದ ಕೆಲವಂಶಗಳು ಸ್ಪಷ್ಟಪಡುತ್ತವೆ: ಕುರ್ಚಿಯಲ್ಲಿ ಕೂರಿಸಿದಾಗ ಮಗುವಿನ ಸ್ವಪ್ರತಿಷ್ಠೆಯ ಹುಟ್ಟುಗುಣದ ಪ್ರಕಾಶನಕ್ಕೆ ಅಡ್ಡಿಯಾಯಿತು; ಅದನ್ನು ಈಡೇರಿಸಲು ಯತ್ನಿಸಿದಾಗ ನೋವಾಯಿತು; ಆ ನೋವಿನೊಡನೆ ತಾಯಿಯ ಬರವೂ ಒದಗಿ ತೃಪ್ತಿಯಾಯಿತು. ಆದರೆ ಪ್ರಕಾಶಕ್ಕೆ ಬರಲಾರದೆ ಸ್ವಪ್ರತಿಷ್ಠೆಯ ಮನಶ್ಶಕ್ತಿ ಗುಪ್ತ ಮನಸ್ಸಿನಲ್ಲಿ ಅಡಗಿತು. ಅದರ ಪ್ರಭಾವ ಈಗ ಸ್ವಪ್ನದಲ್ಲಿ ಕಾಣುತ್ತಿದೆ. ಬೀಳುವುದೂ ಚೀರುವುದೂ ತಾಯನ್ನು ಬರಮಾಡಿದ್ದರಿಂದ, ತೃಪ್ತಿಯಾದ್ದರಿಂದ ದಾದಿಯಿಂದ ಅಡ್ಡಿ ಹೊಂದಿದ್ದ ಆಸೆ (ಸ್ವಪ್ರತಿಷ್ಠೆ) ಬೀಳುವುದರ ಮೂಲಕ ಈಡೇರುವಂತೆ ತೋರಿತು. ಅದರಿಂದಲೇ ಸ್ವಪ್ನದಲ್ಲಿ ಬೀಳುವಂತೆ ಕಾಣುತ್ತಿದ್ದುದು.

ಮನಸ್ಸಿನ ಸಂಕೀರ್ಣತೆಗಳೆಲ್ಲ ಸಕಾರಣವಾಗಿ ಏರ್ಪಟ್ಟಿರುವುದರಿಂದ ಅವುಗಳನ್ನೊಳಗೊಂಡ ಗುಪ್ತ ಮಾನಸರಂಗ ವ್ಯಕ್ತಿಯ ಎಳೆಯ ದಿನಗಳ ಚರಿತ್ರೆಯನ್ನು ಸಾಂಕೇತಿಕವಾಗಿ ತಿಳಿಸಬಲ್ಲದು. ಆದರೆ ಆ ಸಂಕೇತವನ್ನು ಬಿಡಿಸಿ ಅರ್ಥ ಮಾಡಬೇಕಾದರೆ ಮನೋವಿಶ್ಲೇಷಣವಾಗಬೇಕು. ಮಕ್ಕಳ ವಿಲಕ್ಷಣ ವರ್ತನೆಯಿಂದ ಅದು ಸ್ವಲ್ಪ ಮಟ್ಟಿಗೆ ಗೊತ್ತಾಗುತ್ತದೆ. ಆಗಾಗ ಆಡುವ ಅವರ ಮಾತು, ಬಾಯಿ ತಪ್ಪಿ ಅಂದಂದು ಬರುವ ಪದ–ಇವುಗಳಿಂದಲೂ ಸ್ವಲ್ಪಮಟ್ಟಿಗೆ ಊಹಿಸಬಹುದು; ಹಗಲುಗನಸುಗಳೂ ಆ ಕಾರ್ಯಕ್ಕೆ ಸಹಾಯವಾಗುತ್ತವೆ. ಜೊತೆಗೆ ಅವರ ಎಳೆಯ ದಿನಗಳ ಇತಿಹಾಸವನ್ನೂ ಹೊಂದಿಸಿಕೊಂಡರೆ ಆ ಮನಸ್ಸಂಕೀರ್ಣತೆಗೆ ಕಾರಣವಾದ ಸನ್ನಿವೇಶವನ್ನು ಅರಿತುಕೊಳ್ಳಬಹುದು. ಇವೆಲ್ಲಕ್ಕಿಂತ ಹೆಚ್ಚಾಗಿ ಸ್ವಪ್ನಗಳೂ

ಅದನ್ನರಿಯಲು ಸಲಹೆಯನ್ನು ಕೊಡುತ್ತವೆ. ಅಂಥ ಮಕ್ಕಳ ಹಗಲುಗನಸುಗಳನ್ನೂ ಸ್ವಪ್ನಗಳನ್ನೂ ಪರಿಶೀಲಿಸಿ ಅವುಗಳಲ್ಲಿ ಆಗಾಗ ಬರುವುವನ್ನು ಅರಿಸಿಕೊಳ್ಳಬೇಕು.

**ಮನೋರೋಗಕ್ಕೆ ಚಿಕಿತ್ಸೆ:** ಗುಪ್ತ ಮನಸ್ಸಿನಲ್ಲಡಗಿರುವ ಆಸೆಗಳು ಜಾಗ್ರತ ಮನಸ್ಸಿನ ಎದುರು ಈಡೇರುವುದು ಸಾಧ್ಯವಿಲ್ಲ. ಏಕೆಂದರೆ, ಅವು ನಿಷಿದ್ಧವೋ ಅಸಾಧ್ಯವಾದವೋ ಆಗಿರುತ್ತವೆ. ಅಥವಾ, ಸಾಮಾಜಿಕ ಮತ್ತು ನೈತಿಕ ಶಾಸನಗಳು ಅವುಗಳನ್ನು ಒಪ್ಪದಿರಬಹುದು; ಆದ್ದರಿಂದ ಜಾಗ್ರತಮನಸ್ಸಿನೆದುರು ತೆಪ್ಪಗಿದ್ದರೂ ನಿದ್ರೆಯಲ್ಲಿ ಕಾರ್ಯಮುಖವಾಗುತ್ತವೆ. ಜಾಗ್ರತ ಲೋಕದಲ್ಲಿ ಈಡೇರಿಸಿಕೊಳ್ಳಲಾಗದ ಆಸೆಯನ್ನು ಸ್ವಪ್ನಲೋಕದಲ್ಲಿ ಈಡೇರಿಸಿಕೊಳ್ಳಲು ಯತ್ನ ನಡೆಯುತ್ತದೆ. ಅಂಥ ದುಸ್ವಪ್ನಗಳೇ ಮನಸ್ಸಿನ ಒಂದು ರೋಗ. ಅದಕ್ಕೆ ಕಾರಣ, ಅವರ ಎಳೆಯ ದಿನಗಳಲ್ಲಿ ಅಡ್ಡಿಹೊಂದಿದ ಹುಟ್ಟುಗುಣಗಳು. ಅವುಗಳ ಮನಶ್ಶಕ್ತಿ ಗುಪ್ತ ಮನಸ್ಸಿನಲ್ಲಿ ಅಡಗಿ ಸಂಕೀರ್ಣತೆಯಾಗಿ ಕುಳಿತು ಈ ರೀತಿ ಪ್ರಭಾವ ಬೀರುತ್ತಿದೆ. ಆ ಮನೋರೋಗಕ್ಕೆ ಹಿಂದೆ ಸಾಮಾನ್ಯವಾಗಿ ಚಿಕಿತ್ಸೆಯೇ ತಿಳಿದಿರಲಿಲ್ಲ. ಫ್ರಾಯ್ಡರು ಈ ನೂತನ ಚಿಕಿತ್ಸೆಯನ್ನು ಆರಂಭಿಸಿದರು. ಮನೋವಿಶ್ಲೇಷಣದಿಂದ ವ್ಯಕ್ತಿಯ ಮನಸ್ಸಿನಲ್ಲಡಗಿರುವ ವಿಫಲ ಹೊಂದಿದ ಆಸೆಗಳನ್ನು ಅರಿತು, ಅದಕ್ಕೆ ಕಾರಣವಾದ ಎಳೆಯ ದಿನದ ಘಟನೆಯೊಂದನ್ನು ಹುಡುಕಿ, ಅಂಥ ವಿಚಿತ್ರ ಸ್ವಪ್ನಕ್ಕೆ ಕಾರಣವನ್ನು ವಿವೇಚನಾಪೂರ್ವಕವಾಗಿ ವ್ಯಕ್ತಿಗೆ ತಿಳಿಸುವುದೇ ಆ ಚಿಕಿತ್ಸೆ! ಅದರಿಂದ ಗುಣ ಹೇಗೆ ಸಾಧ್ಯವೆಂಬ ಪ್ರಶ್ನೆಯೇಳಬಹುದು. ವಿವೇಚನೆಯಿಲ್ಲದ ಎಳೆಯ ದಿನಗಳಲ್ಲಿ ಹುಟ್ಟುಗುಣಗಳ ಸ್ವಾಭಾವಿಕ ವರ್ತನೆಗೆ ಅಡ್ಡಿಬಂದು ಆ ವರ್ತನೆಗಳಿಗೆ ಆಧಾರವಾದ ಮನಶ್ಶಕ್ತಿ ಸಂಕೀರ್ಣತೆಯಾಗಿ ಗುಪ್ತಮನಸ್ಸಿನಲ್ಲಿ ಅಡಗಿದಾಗ ಮಕ್ಕಳು ಅನುಚಿತವಾದ ಕಲ್ಪನೆಗೆ ಬಲಿಯಾಗಿಹೋಗಿರುತ್ತಾರೆ. ವಿಫಲ ಹೊಂದಿದ ಆ ಸ್ವಾಭಾವಿಕ ವರ್ತನೆ ಮತ್ತಾವುದೋ ಅಂದಿನ ಸನ್ನಿವೇಶದೊಡನೆ ಹೆಣೆದುಕೊಂಡು ಹಗಲುಗನಸುಗಳಲ್ಲೋ ಸ್ವಪ್ನಗಳಲ್ಲೋ ಇನ್ನಿತರ ವಿಚಿತ್ರ ವರ್ತನೆಗಳ ಮೂಲಕವೋ ಆ ಮನೋವಿಫಲತೆ ಪ್ರಕಾಶಕ್ಕೆ ಬರಲು ಯತ್ನಿಸುತ್ತದೆ. ಅವರು ವಯಸ್ಕರಾದಮೇಲೆ, ವಿವೇಚನೆ ಹೆಚ್ಚಿರುವಾಗ ಆ ಹಗಲುಗನಸಿಗೆ, ಸ್ವಪ್ನಗಳಿಗೆ,

ಇತರ ವಿಚಿತ್ರ ವರ್ತನೆಗಳಿಗೆ ನಿಜವಾದ ಕಾರಣಗಳನ್ನು ಅರಿತಾಗ 'ಅಯ್ಯೋ, ಇಷ್ಟೇತಾನೆ ಈ ರೋಗಕ್ಕೆ ಕಾರಣ!' ಎಂದುಕೊಂಡು ನಿಜಾಂಶವನ್ನು ಅರಿತು ಕೊಳ್ಳುವರು. ಅದರಿಂದ ಆ ಮನೋರೋಗ ನಿವಾರಣೆಯಾದಂತೆಯೇ. ಇದೆಲ್ಲ ಪ್ರಯೋಗಗಳಿಂದ ಸ್ಪಷ್ಟಪಟ್ಟ ಅಂಶ. ಫ್ರಾಯ್ಡ್ ರ ಮನೋವಿಶ್ಲೇಷಣ ಕ್ರಮ ಮನೋರೋಗಗಳಿಗೆ ಚಿಕಿತ್ಸೆ ನಡಸುವುದರ ಜೊತೆಗೆ ಆ ಮನೋ ರೋಗಗಳನ್ನು ತಡೆಯಲೂ ಮಾರ್ಗ ತೋರಿಸಬಲ್ಲದು. ಆ ಮಾರ್ಗ ಯಾವುದು?

**ಮಕ್ಕಳನ್ನು ಬೆಳಸಬೇಕಾದ ರೀತಿ:** ವಿವಿಧ ರೀತಿಯ ಮನೋ ರೋಗಗಳಿಗೆ ಕಾರಣ ಗುಪ್ತ ಮನಸ್ಸಿನಲ್ಲಡಗಿರುವ ಸಂಕೀರ್ಣತೆಗಳು; ಆ ಮನೋರೋಗಗಳು ಬಾರದಿರಬೇಕಾದರೆ ಆ ಸಂಕೀರ್ಣತೆಗಳು ಮೂಡ ದಂತೆ ನೋಡಿಕೊಳ್ಳಬೇಕು. ಚಿಕ್ಕಮಕ್ಕಳ ಸ್ವಾಭಾವಿಕ ಆಸಕ್ತಿಗಳನ್ನು ತಡೆಗಟ್ಟಬಾರದು. ಅವರ ಹುಟ್ಟುಗುಣಗಳೂ ಆಸಕ್ತಿಗಳೂ ಪ್ರಕಾಶನ ಗೊಳ್ಳಲು ನೆರವಾಗತಕ್ಕ ಸೂಕ್ತ ಸನ್ನಿವೇಶಗಳನ್ನು ಒದಗಿಸಬೇಕು. ಶಾಲೆ ಯಲ್ಲಾಗಲಿ ಮನೆಯಲ್ಲಾಗಲಿ ಆ ಕಾಲದಲ್ಲಿ ಶಿಸ್ತಿನ ಹೆಸರಿನಲ್ಲಿ ಮಕ್ಕಳನ್ನು ಅದುಮಿಡುವುದು ಅಪಾಯಕರ. ಹುಟ್ಟುಗುಣಗಳ ಮನಶ್ಶಕ್ತಿಯ ಪ್ರವಾಹ ಮಕ್ಕಳಲ್ಲಿ ಬಗೆ ಬಗೆಯ ಕೆಲಸಗಳನ್ನು ಮಾಡಲು ಪ್ರೋತ್ಸಾಹಿಸುತ್ತಿರುತ್ತದೆ, ಆಸಕ್ತಿ ಹುಟ್ಟಿಸುತ್ತಿರುತ್ತದೆ. ಆ ಸ್ವಾಭಾವಿಕ ಆಸಕ್ತಿಗೆ ಅಡ್ಡಿಬಂದರೆ ಮನ ಶ್ಶಕ್ತಿಯ ಪ್ರವಾಹವನ್ನು ಅಡ್ಡಿಪಡಿಸಿದಂತಾಗುತ್ತದೆ. ಆಗ ಆ ಶಕ್ತಿ ಉಚಿತ ಮಾರ್ಗದಲ್ಲಿ ಪ್ರವಹಿಸಲಾಗದೆ ಗುಪ್ತ ಮನಸ್ಸಿನಲ್ಲಿ ಅಪಾಯದ ಕೇಂದ್ರ ಗಳಾಗಿ ಅಡಗಿ ವಿಫಲಗೊಂಡ ತಮ್ಮ ಆಶೆಯನ್ನು ಈಡೇರಿಸಿಕೊಳ್ಳಲು ಕಾಯುತ್ತಿರುತ್ತವೆ. ಅಂಥ ಅಪಾಯ ಆಗದಿರಬೇಕಾದರೆ ಆ ಶಕ್ತಿ ಸ್ವಾಭಾ ವಿಕ ಮಾರ್ಗದಲ್ಲಿ ಹರಿಯಲನುಕೂಲಿಸುವ ಕೈಕೆಲಸ, ಆಟ ಮತ್ತು ಇತರ ಚಟುವಟಿಕೆಯ ಸನ್ನಿವೇಶಗಳನ್ನು ಒದಗಿಸಿಕೊಡಬೇಕು. ಮಕ್ಕಳ ಸ್ವಾಭಾ ವಿಕ ವರ್ತನೆಗೆ ಯಾವ ಕಾರಣದಿಂದಲೂ ಅಡ್ಡಿ ಬರಬಾರದು.

ಸರ್ಕಾರ ಹಲವು ಶಾಸನಗಳನ್ನು ರೂಪಿಸಿದೆ; ಸಮಾಜವೂ ಹಲವು ಕಾರ್ಯಗಳನ್ನು ನಿಷೇಧಿಸಿದೆ. ನಾಗರಿಕತೆ ಹೆಚ್ಚಿದಂತೆಲ್ಲ ಅಂಥ ಅಡ್ಡಿ ಆತಂಕಗಳು ಹೆಚ್ಚಿ, ಹೆಣೆದುಕೊಳ್ಳುತ್ತಿವೆ. ಅವನ್ನು ಪಾಲಿಸುವುದು ದೊಡ್ಡವ

ರಿಗೆ ಅವಶ್ಯಕವೂ ಕ್ಷೇಮಕರವೂ ಇದ್ದರೂ, ಮಕ್ಕಳ ವಿವೇಚನೆಯರಿಯದ ಕಾಲದಲ್ಲಿ ಶಿಸ್ತಿನ ಹೆಸರಿನಿಂದ ಅವರಮೇಲೂ ಹೇರಿ ಅವರ ಸ್ವಾಭಾವಿಕ ವರ್ತನೆಗಳಿಗೆ ಅಡ್ಡಿ ತರುವುದಾದರೆ ಅದರಿಂದ ಅನರ್ಥ ತಪ್ಪುವಂತಿಲ್ಲ. ಹಾಗೆ ಆತಂಕವಾಗಿ ಮಕ್ಕಳ ಮನೋರೋಗಗಳಿಗೆ ಕಾರಣವಾಗುವ ಹುಟ್ಟುಗುಣಗಳಲ್ಲಿ ಸ್ವಪ್ರತಿಷ್ಠೆ, ಸಂಘಾಭಿಲಾಷೆ ಮತ್ತು ಸ್ವಾಮ್ಯ ಮುಖ್ಯವಾದವು. ಆದರೆ ಫ್ರಾಯ್ಡರೂ ಅವರ ಅನುಯಾಯಿಗಳೂ ಈ ಗುಣಗಳಿಗೆಲ್ಲ ಆಧಾರವೆನಿಸುವುದು ಲೈಂಗಿಕ ಗುಣವೆಂದು ವಾದಿಸುವರು. ಅದಕ್ಕೆ ವಿಶಾಲ ಅರ್ಥವನ್ನು ಕೊಟ್ಟು, ತಂದೆತಾಯಿಗಳಿಗಿರುವ ಮಕ್ಕಳಮೇಲಣ ಪ್ರೀತಿ, ಮಕ್ಕಳಿಗೆ ತಂದೆತಾಯಿಗಳಲ್ಲಿರುವ ಮಮತೆ, ಒಬ್ಬೊಬ್ಬರು ಇನ್ನೊಬ್ಬರಲ್ಲಿ ತೋರುವ ಎಲ್ಲ ರೀತಿಯ ಆಸಕ್ತಿಗಳು—ಇವೆಲ್ಲ ಲೈಂಗಿಕ ಗುಣದ ಪ್ರಭಾವವೇ ಎಂದು ವಾದಿಸುವರು; ನಮ್ಮ ಎಲ್ಲ ಸಂವೇದನೆಗಳಿಗೂ ಅದೇ ಮೂಲ ಕಾರಣವೆಂದೂ ವಿವರಿಸಿರುವರು. ಒಟ್ಟಿನಲ್ಲಿ ಅದಕ್ಕೆ ನಮ್ಮ ಎಲ್ಲ ವರ್ತನೆಗಳನ್ನೂ ನಿರ್ಧರಿಸುವ ಶಕ್ತಿಯಿದೆಯೆಂದು ಹೇಳಿ ವಿಶಾಲ ಅರ್ಥವನ್ನು ಕೊಟ್ಟಿರುವರು. ಆದರೆ ಲೈಂಗಿಕಗುಣ ಹುಟ್ಟುಗುಣಗಳಲ್ಲೊಂದು ಮಾತ್ರ. ಸಾಂಪ್ರದಾಯಿಕ ಮನಶ್ಶಾಸ್ತ್ರಜ್ಞರು ಲೈಂಗಿಕ ಗುಣದ ಆ ವಿಶಾಲ ಅರ್ಥವನ್ನು ಒಪ್ಪುವುದಿಲ್ಲ. ಜೊತೆಗೆ ಫ್ರಾಯ್ಡರ ಹಲವಂಶಗಳು ಬರೀ ಕಟ್ಟುಕತೆಯೆಂದೇ ಅವರ ಭಾವನೆ.

ಗುಪ್ತ ಮಾನಸರಂಗದ ಇರವೂ, ಅದರಲ್ಲಿ ವಿಫಲಗೊಂಡ ಹುಟ್ಟುಗುಣಗಳ ಮನಶ್ಶಕ್ತಿ ಅಡಗಿದೆಯೆಂಬ ಊಹೆಯೂ ಫ್ರಾಯ್ಡರ ಮನೋವಿಶ್ಲೇಷಣ ತತ್ವದ ಆಧಾರಸ್ಥಂಭಗಳು. ಕೆಲವು ಮನಶ್ಶಾಸ್ತ್ರಜ್ಞರು ಇವನ್ನೊಪ್ಪುವುದಿಲ್ಲ. ಆದರೆ ಮಕ್ಕಳ ವಿರೂಪ ವರ್ತನೆಗಳನ್ನು ಸಮರ್ಪಕವಾಗಿ ವಿವರಿಸುವುದು ಅವರಿಗೆ ಬೇರೆ ವಿಧದಲ್ಲಿ ಸಾಧ್ಯವಾಗಿಲ್ಲ. ಅದು ಸಾಧ್ಯವೇ ಇಲ್ಲವೆಂಬುದು ಹಲವರ ನಂಬಿಕೆ. ಫ್ರಾಯ್ಡರು ಅವನ್ನು ವಿವರಿಸಿ, ಕಾರಣಗಳನ್ನು ಹುಡುಕಿ ಸೂಚಿಸಿ ನಿವಾರಣೆಗೆ ಚಿಕಿತ್ಸೆ ನಡಸಿರುವುದಲ್ಲದೆ ಅವನ್ನು ತಡೆಯುವ ಉತ್ತಮ ರೀತಿಯ ಮಕ್ಕಳ ಬೆಳವಣಿಗೆಯ ಮಾರ್ಗವನ್ನೂ ಸೂಚಿಸಿರುವರು. ಅವರ ಈ ಸಂಶೋಧನೆಯ ಹಲವು ವಿಷಯಗಳು ಕಟ್ಟುಕತೆಯಂತಿದ್ದರೂ ಮಕ್ಕಳ ಮಾನಸಿಕ ಮತ್ತು ನೈತಿಕ ಬೆಳವಣಿಗೆಯ ಸೂಕ್ತವಾದ ಮಾರ್ಗವನ್ನು ಅರಿತುಕೊಳ್ಳಲು ಅವು ಬಹುವಾಗಿ ನೆರವಾಗಬಲ್ಲವು.

ಫ್ರಾಯ್ಡರು ಲೈಂಗಿಕ ಗುಣದ ಮಹಾಶಕ್ತಿಯ ಪ್ರವಾಹವೇ ಮಾನವನ ಎಲ್ಲ ಹುಟ್ಟುಗುಣಗಳಿಗೂ ಸಂವೇದನಾ ಜೀವನಕ್ಕೂ ಮೂಲವೆಂದು ಊಹಿಸಿ, ಅದನ್ನು 'ಲಿಬಿಡೋ' ಎಂದು ಕರೆದರು. ಆದರೆ ಮನಶ್ಶಾಸ್ತ್ರಜ್ಞರು ಆ ಮನಶ್ಶಕ್ತಿಗೆ ಲೈಂಗಿಕ ಗುಣವೊಂದೇ ಕಾರಣವೆಂಬುದನ್ನೊಪ್ಪದೆ ಇನ್ನಿತರ ಹುಟ್ಟುಗುಣಗಳೂ ಕಾರಣವೆಂದು ಹೇಳುವರು. ಹೇಗೇ ಇರಲಿ ಆ ಶಕ್ತಿಯ ಪ್ರವಾಹ ಮಕ್ಕಳ ಸ್ವಾಭಾವಿಕ ವರ್ತನೆಗಳಿಗೆಲ್ಲ ಮೂಲ ಕಾರಣ. ಯಾವ ಅಡ್ಡಿಯೂ ಇಲ್ಲದೆ ಮಕ್ಕಳ ವರ್ತನೆಗಳು ನಡೆಯುವಂತಾದರೆ ಆ ಪ್ರವಾಹ ಸ್ವಾಭಾವಿಕ ಮಾರ್ಗದಲ್ಲಿ ಹರಿಯುತ್ತದೆ. ಆ ವರ್ತನೆಗಳನ್ನು ಅದುಮಿಡಲು ಯತ್ನಿಸಿದರೆ ಆ ಶಕ್ತಿಯ ಪ್ರವಾಹಕ್ಕೆ ಅಡ್ಡಲಾಗಿ ಏರಿ ಕಟ್ಟಿದಂತೆ! ಎಂದಾದರೂ ಒಂದು ದಿನ ಪ್ರವಾಹ ಪ್ರಬಲಸಿ ಏರಿ ಒಡೆದು ಅನಾಹುತವಾಗುವುದು ಖಂಡಿತ. ಹಾಗೆ ಅಡ್ಡಿಪಡಿಸಿದ ಮನಶ್ಶಕ್ತಿ ಗುಪ್ತ ಮನಸ್ಸಿನಲ್ಲಿ ತೊಡಕಾಗಿ ಕುಳಿತು ಅನಾಹುತವುಂಟುಮಾಡಲು ಕಾಯುತ್ತಿರುತ್ತದೆ. ಆ ಶಕ್ತಿ ಅಲ್ಲಿಯೇ ಉಳಿಯುವುದಾದರೆ ವ್ಯಕ್ತಿಯ ಜೀವನದ ಮೇಲೆ ಬಗೆ ಬಗೆಯ ಕೈವಾಡ ಬೀರುತ್ತ ಅನುಚಿತ ವರ್ತನೆಯನ್ನು ಮೂಡಿಸುತ್ತ ಮನೋರೋಗವಾಗಿ ಪರಿಣಮಿಸುತ್ತದೆ. ಆ ಪ್ರವಾಹಕ್ಕೆ ಅಡ್ಡಿಯಾಗಿರುವ ಸಂಕೀರ್ಣತೆಯನ್ನು ತೆಗೆಯುವುದೇ ಅದಕ್ಕೆ ಚಿಕಿತ್ಸೆ. ತನ್ನ ಎಳೆಯ ದಿನಗಳಲ್ಲಿ ಆ ಶಕ್ತಿಯ ಪ್ರವಾಹಕ್ಕೆ ಅಡ್ಡಿಬಂದು ಯಾವ ಆಸೆ ಆಕಾಂಕ್ಷೆಗಳು ಈಡೇರದಂತಾದುವೋ ಅವನ್ನು ವ್ಯಕ್ತಿಗೆ ವಿವೇಚನೆ ಬಂದೊಡನೆಯೇ ತಿಳಿಸಬೇಕು. ಆಗ ಅವನಿಗೆ ವಿವೇಚನಾಶಕ್ತಿ ಬಂದಿರುವುದರಿಂದ ತನ್ನ ವಿಲಕ್ಷಣ ವರ್ತನೆಗೆ ಕಾರಣ ಗೊತ್ತಾಗಿ ಅವು ಕಡಮೆಯಾಗುತ್ತವೆ. ಏಕೆಂದರೆ, ಅವನ ಮನಸ್ಸು ಪುನಃ ಸೂಕ್ತವಾದ ಶಿಕ್ಷಣವನ್ನು ಆ ಮೂಲಕ ಪಡೆದುಕೊಂಡು ಸಂಸ್ಕರಣಗೊಂಡಂತಾಗುತ್ತದೆ.

**ಮನೋವಿಶ್ಲೇಷಣ ತತ್ವದೃಷ್ಟಿಯ ಪ್ರಭಾವ:** ಈ ದೃಷ್ಟಿ ಜೀವನದ ವಿವಿಧರಂಗಗಳ ಮೇಲೆ ತನ್ನ ಪ್ರಭೆಯನ್ನು ಬೀರಿರುತ್ತದೆ: ವೈದ್ಯ ವಿಜ್ಞಾನಕ್ಕೆ ಒಂದು ನೂತನ ಚಿಕಿತ್ಸಾಕ್ರಮ ಅದರಿಂದ ಅರಿವಾಯಿತು; ತಪ್ಪಿತಸ್ಥರ ಮನೋವ್ಯಾಪಾರವನ್ನು ಅಳೆದು ಸತ್ಯಾಂಶವನ್ನು ಹುಡುಕಲು ಸಹಾಯವಾಯಿತು; ಶಿಕ್ಷಣರಂಗಕ್ಕೆ ಹೊಸ ಜ್ಞಾನದ ಅರಿವಾಯಿತು. ಶಾಲೆಗಳಲ್ಲಿ

ಉಪಾಧ್ಯಾಯರು ಮಕ್ಕಳ ವಿಲಕ್ಷಣ ವರ್ತನೆಗಳಿಗೆ ಕಾರಣವಾದ ಮನಸ್ಸಂಕೀರ್ಣತೆಗಳನ್ನು ಹುಡುಕಿ ಚಿಕಿತ್ಸೆ ನಡಸುವುದು ಸದ್ಯದಲ್ಲಿ ಸಾಧ್ಯವಾಗದಿದ್ದರೂ ಮನೋವಿಶ್ಲೇಷಣ ಕ್ರಮದ ಪರಿಚಯದಿಂದ ಶಿಕ್ಷಣಕಾರ್ಯಕ್ಕೆ ಸಲಹೆಗಳನ್ನು ಪಡೆಯಬಹುದು. ಅವುಗಳನ್ನಿಲ್ಲಿ ಸ್ಥೂಲವಾಗಿ ವಿವರಿಸಿದೆ:

೧. ಈ ತತ್ತ್ವದ ಬೆಳಕಿನಲ್ಲಿ ಮಕ್ಕಳ ಮಾನಸರಂಗದ ಸಮಗ್ರ ಪರಿಚಯ ಮಾಡಿಕೊಳ್ಳಬಹುದು; ಕೆಲವು ಮಕ್ಕಳ ವಿಚಿತ್ರ ರೀತಿಯ ವರ್ತನೆಗಳಿಗೆ ಕಾರಣವನ್ನು ಗ್ರಹಿಸಿಕೊಳ್ಳಲು ನೆರವಾಗುತ್ತದೆ; ಅವಿಧೇಯತೆ, ಮರವು, ಭೀತಿ, ಮೊಂಡಾಟ, ತುಂಟಾಟ, ಅವಧಾನವಿಹೀನತೆ ಮುಂತಾದ ಗುಣಗಳು ಕೆಲವು ಮಕ್ಕಳಲ್ಲಿ ಅತಿಯಾಗಿ ಕಾಣಿಸಿಕೊಳ್ಳುವುದಕ್ಕೆ ಕಾರಣ ಗೊತ್ತಾಗುತ್ತದೆ.

೨. ಉಪಾಧ್ಯಾಯರು ತಮ್ಮನ್ನು ತಾವು ತಿಳಿದುಕೊಳ್ಳಲೂ ಸಹಾಯವಾಗುತ್ತದೆ. ಮಕ್ಕಳು ಸ್ವಾಭಾವಿಕ ಆಸಕ್ತಿಗಳಲ್ಲಿ ತೊಡಗಿರುವುದು ಅವರಿಗೆ ಹಿತವೆನಿಸುವ ಕಾರ್ಯ; ಹಾಗೆಯೇ ಅವರ ಮೇಲೆ ಅಧಿಕಾರ ನಡಸಲು ಉಪಾಧ್ಯಾಯರು ಯತ್ನಿಸುವುದೂ ಅವರ ಸ್ವಾಭಾವಿಕ ಗುಣ (ಸ್ವಪ್ರತಿಷ್ಠೆ). ಅದರ ಫಲವಾಗಿ ಮಕ್ಕಳ ಸ್ವಾಭಾವಿಕ ಆಸಕ್ತಿಗಳಿಗೆ ಅಡ್ಡಿ ಬಂದು ಮೊಂಡಾಟ ಮಾಡುವುದು ತುಂಟಾಟ ಮಾಡುವುದು ಮೊದಲಾದವು ಆರಂಭವಾಗುತ್ತವೆ. ಆದರೆ ಅವರು ಹಾಗಾಡುವುದು ನಿಜವಾಗಿ ಅವರ ತಪ್ಪಲ್ಲ: ಅವರ ಸ್ವಾಭಾವಿಕ ಆಸಕ್ತಿಗಳಿಗೆ ಅಡ್ಡಿ ತಂದ ಉಪಾಧ್ಯಾಯರೇ ಕಾರಣ! ತನಗಿರುವಂತೆ ಮಕ್ಕಳಿಗೂ ಸ್ವಪ್ರತಿಷ್ಠೆ ಇದೆಯೆಂದೂ, ತಾವು ಅವರ ಆಸಕ್ತಿಯನ್ನು ಅಡ್ಡಿಪಡಿಸಿದ್ದರಿಂದಲೇ ಅವರು ಮೊಂಡಾಟ ಗಲಾಟೆ ಮಾಡುತ್ತಿರುವುದೆಂದೂ ಅರಿತುಕೊಂಡರೆ ಅಂಥ ಮಕ್ಕಳನ್ನು ದಂಡಿಸುವ ಗೋಜಿಗೆ ಹೋಗುವುದು ಕಡಮೆಯಾದೀತು. ಅಲ್ಲದೆ ಮಕ್ಕಳ ಆಲಸ್ಯ, ಮರವು, ಸೋಮಾರಿತನ, ತುಂಟಾಟ, ಅವಧಾನ ವಿಹೀನತೆ—ಇವೆಲ್ಲಕ್ಕೂ ಕಾರಣ ಅವರ ಜಾಗ್ರತ ಮನಸ್ಸಲ್ಲ, ಗುಪ್ತ ಮನಸ್ಸು! ಆ ಅನುಚಿತ ವರ್ತನೆ ಆಗದಂತೆ ನೋಡಿಕೊಳ್ಳುವುದು ಮಕ್ಕಳ ಕೈಲಿಲ್ಲ. ಉಪಾಧ್ಯಾಯರು ಈ ಅಂಶಗಳನ್ನು ಅರಿತಾಗ ಅವರನ್ನು ದಂಡಿಸುವುದು ಉಚಿತವಲ್ಲವೆಂದು ತಾವಾಗಿಯೇ ತಿಳಿದುಕೊಳ್ಳುವರು.

೩. ಅವರ ಸ್ವಾಭಾವಿಕ ವರ್ತನೆಗೆ ಅಡ್ಡಿ ಬರುವುದರಿಂದ ಮುಂದೊದಗಬಹುದಾದ ಅನರ್ಥಗಳನ್ನು ತಿಳಿದುಕೊಂಡರೆ ಪಾಠಕ್ರಮದಲ್ಲೂ ಬೋಧನ ಕ್ರಮದಲ್ಲೂ ಹಲವು ಮಾರ್ಪಾಟುಗಳಾದಾವು. ಇಷ್ಟವಿಲ್ಲದ ಪಾಠಮಾಡುವುದು, ಮಕ್ಕಳ ಮೇಲೆ ನಿರ್ಬಂಧ ಹಾಕುವುದು, ಅವರಿಗಿಷ್ಟವಿಲ್ಲದ ಕೆಲಸಗಳನ್ನು ಹೊರಿಸುವುದು, ಅಧಿಕಾರದ ದರ್ಪದಿಂದ ಮಾತನಾಡುವುದು—ಈ ರೀತಿಯ ಉಪಾಧ್ಯಾಯರ ನಡತೆಯಿಂದ ಮಕ್ಕಳ ಸ್ವಾಭಾವಿಕ ವರ್ತನೆಗೆ ಅಡ್ಡಿಯಾಗುತ್ತದೆ. ಈ ಅಂಶವನ್ನು ಅರಿತರೆ ಉಪಾಧ್ಯಾಯರು ಮಕ್ಕಳಿಗೆ ಹೆಚ್ಚು ಸ್ವಾತಂತ್ರ್ಯ ಕೊಡುವರು; ಅವರ ಆಸಕ್ತಿಗಳನ್ನು ಈಡೇರಿಸಲು ಚಟುವಟಿಕೆಯ ಸನ್ನಿವೇಶಗಳನ್ನು ಒದಗಿಸಿಕೊಡುವರು; ತರಗತಿಯಲ್ಲಿ ಆಸಕ್ತಿಯಿಂದ ಅವರು ಕೇಳುವ ಪ್ರಶ್ನೆಗಳಿಗೆ ಸಹನೆಯಿಂದ ಉತ್ತರ ತಿಳಿಸುವರು; ಅವರು ಅನುಚಿತ ಕಾರ್ಯದಲ್ಲಿ ಆಸಕ್ತಿ ವಹಿಸಿರುವಾಗ ಅದನ್ನು ಖಂಡಿಸಿ ಮೊಟಕುಮಾಡುವುದರ ಬದಲು ಸರಿಯಾದ ಮಾರ್ಗಕ್ಕೆ ತಿರುಗಿಸುವರು. ಮಕ್ಕಳಮೇಲೆ ಹದ್ದುಬಸ್ತು ಆವಶ್ಯಕವೆಂದೂ, ಅವರಿಗೆ ಸ್ವಾತಂತ್ರ್ಯ ಕೊಟ್ಟರೆ ಶಾಲೆಯ ಪಾಠ ನಡಸುವುದು ಕಷ್ಟವೆಂದೂ ಕೆಲವರು ವಾದಿಸಬಹುದಾದರೂ ಫ್ರಾಯ್ಡರ ತತ್ತ್ವಪರಿಚಯದಿಂದ ಆ ರೀತಿ ಬಿಗಿಹಿಡಿಯುವುದು ಸ್ವಲ್ಪವಾದರೂ ಸಡಿಲವಾದೀತು!

೪. ಮಕ್ಕಳಲ್ಲಿ ಹಲವರು ತರಗತಿಯ ಪಾಠ ನಡೆಯುವಾಗ ಹಗಲುಗನಸುಗಳಲ್ಲಿ ತೇಲುವರು. ಅದು ಅವರ ಗುಪ್ತ ಮನಸ್ಸಿನ ಪ್ರಭಾವ! ಆಗ ಮಾಡುವ ಪಾಠ ಅವರಿಗೆ ಹಿಡಿಯಲಾರದು. ಈ ಅಂಶವನ್ನು ಉಪಾಧ್ಯಾಯರು ಅರಿತಿದ್ದರೆ ಪಾಠವನ್ನು ಪುನಃ ಮಾಡುವುದು, ಒತ್ತಿ ಹೇಳುವುದು ಎಷ್ಟು ಆವಶ್ಯಕವೆಂಬುದನ್ನು ತಿಳಿದುಕೊಳ್ಳುವರು.

೫. ಚಿಕ್ಕ ವಯಸ್ಸಿನಲ್ಲಿ ಒಬ್ಬೊಬ್ಬ ಬಾಲಕನಿಗೂ ಒಂದೊಂದು ರೀತಿಯ ಸನ್ನಿವೇಶ ದೊರಕಿರುತ್ತದೆ. ಆದ್ದರಿಂದ ಒಬ್ಬೊಬ್ಬರ ವಿಚಿತ್ರ ವರ್ತನೆಗೂ ಪ್ರತ್ಯೇಕ ಕಾರಣವುಂಟು: ಎಲ್ಲರಿಗೂ ಒಂದೇ ಎನ್ನುವಂತಿಲ್ಲ. ಆಗ, ಬೇರೆ ಬೇರೆ ಮಕ್ಕಳ ವಿಚಿತ್ರ ವರ್ತನೆಗಳಿಗೆ ಕಾರಣ ತಿಳಿಯಬೇಕಾದರೆ ವೈಯಕ್ತಿಕವಾಗಿ, ಪ್ರತ್ಯೇಕವಾಗಿ ಒಬ್ಬೊಬ್ಬ ಬಾಲಕನ ವಿಷಯವನ್ನೆಲ್ಲ ತಿಳಿಯಲು ಗಮನ ಕೊಡಬೇಕಾಗುತ್ತದೆ.

೬. ಶಾಲೆಯಲ್ಲಿ ಪ್ರಬುದ್ಧ ವ್ಯಕ್ತಿ ಉಪಾಧ್ಯಾಯರೊಬ್ಬರೇ. ಮಕ್ಕಳಿಗೆ ಅವರ ದರ್ಪವನ್ನು ಕಂಡಾಗ ತಾವೂ ಹಾಗಾಗಬೇಕೆಂಬ ಆಸೆ ಬರಬಹುದು. ಅದಕ್ಕೆ ಅವರಿಗಿರುವ ಅನುಕರಣದ ಸ್ವಾಭಾವಿಕ ಗುಣವೇ ಕಾರಣ. ಹಾಗೆಯೇ ಉಪಾಧ್ಯಾಯರ ಇನ್ನಿತರ ವರ್ತನೆಗಳನ್ನೂ ಅವರು ಅನುಕರಿಸಲು ಯತ್ನಿಸಿಯಾರು. ಆದ್ದರಿಂದ ಉಪಾಧ್ಯಾಯರು ತಾವು ಎಷ್ಟೊಂದು ಉಚಿತ ರೀತಿಯಲ್ಲಿ ವರ್ತಿಸಬೇಕೆಂಬುದು ಸ್ಪಷ್ಟಪಡುತ್ತದೆ.

೭. ಕೆಲವು ಮಕ್ಕಳ ವಿಚಿತ್ರ ವರ್ತನೆ ಉಪಾಧ್ಯಾಯರಿಗೂ ಪೋಷಕರಿಗೂ ಆಶ್ಚರ್ಯವನ್ನೂ ಭೀತಿಯನ್ನೂ ಹುಟ್ಟಿಸಬಹುದು; ೧೦-೧೧ ವರ್ಷಗಳಾದರೂ ತೊದಲ್ನುಡಿಯಲ್ಲೇ ಮುದ್ದು ಮಾತಾಡುತ್ತಿರುವುದು, ತೊಡಿಸಿದೊಡನೆಯೇ ಬಟ್ಟೆಯನ್ನು ಕೊಳೆಮಾಡಿಕೊಳ್ಳಲು ಆಶಿಸುವುದು, ಅಸ್ವಾಭಾವಿಕ ಅಂಗಭಂಗಿ ಮಾಡುವುದು—ಇವೇ ಮೊದಲಾದ ವೈಪರೀತ್ಯಗಳು ಮಕ್ಕಳಿಗೆ ವಿವೇಚನೆ ಬಂದಂತೆ ಕ್ರಮ ಕ್ರಮವಾಗಿ ಕಡಮೆಯಾಗುವುವೆಂದು ಅರಿತರೆ ಆ ಭೀತಿ ಅನಾವಶ್ಯಕವೆನಿಸುತ್ತದೆ.

೮. ಮಕ್ಕಳಲ್ಲಿ ಸ್ವಾಭಿಮಾನ, ಸ್ವಪ್ರತಿಷ್ಠೆ, ಮೊದಲಾದ ಹುಟ್ಟುಗುಣಗಳಿರುವುದನ್ನರಿತು ಅವುಗಳ ಮನಶ್ಶಕ್ತಿಗಳನ್ನು ವ್ಯಕ್ತಿಗೂ ಸಮಾಜಕ್ಕೂ ಉಚಿತವೆನಿಸುವ ರೀತಿಯಲ್ಲಿ ಪ್ರವಹಿಸುವಂತೆ ಸನ್ನಿವೇಶಗಳನ್ನು ಕಲ್ಪಿಸಿಕೊಡಬೇಕು. ಮಕ್ಕಳ ಮೂಲಮನೋಗುಣಗಳು ಪ್ರಾಣಿಗಳಿಗಿರುವಂತೆಯೇ ಇವೆ. ದೊಡ್ಡವರಾದಮೇಲೂ ಅದೇ ರೀತಿಯಲ್ಲಿ ಅವು ಉಳಿಯುವಂತಿಲ್ಲ; ಅವನ್ನು ಉದಾತ್ತಗೊಳಿಸಬೇಕು. ಆ ಗುಣಗಳು ಸ್ವಾರ್ಥದ ಬದಲಾಗಿ ವಿಶಾಲ ದೃಷ್ಟಿಯಲ್ಲಿ ಬೆಳೆಯಬೇಕು. ಆ ವರ್ತನೆಗೆ ಮೂಲ ಒಂದೇ ಹುಟ್ಟುಗುಣದ ಮನಶ್ಶಕ್ತಿಯೇ ಆದರೂ ಅದು ಭಿನ್ನಮಾರ್ಗದಲ್ಲಿ ಪ್ರವಹಿಸುವಂತೆ ಮಾರ್ಗದರ್ಶನ ಮಾಡಬೇಕು. ಆದರೆ ಅನುಚಿತ ವರ್ತನೆಯೆಂದು ಅದನ್ನು ತಡೆದು ಮೊಟಕುಮಾಡುವಂತಿಲ್ಲ. ಕುತೂಹಲವನ್ನು ವಿಜ್ಞಾನದ ಕೌತುಕಗಳನ್ನರಿಯುವುದಕ್ಕೂ, ಭೀತಿಯನ್ನು ನೀತಿಯ ಜೀವನಕ್ಕೂ, ದಾತೃಪ್ರೇಮವನ್ನು ಇತರರಲ್ಲಿ ಪ್ರೀತಿ, ದಯೆ ತೋರಿಸುವುದಕ್ಕೂ, ಸಂಘಜೀವನಾಭಿಲಾಷೆಯನ್ನು ಸಾಮಾಜಿಕ ಸೇವೆಯ ಕಡೆಗೂ, ಪರಾಧೀನತೆಯನ್ನು ಶಾಸನ ಗೌರವಿಸುವುದಕ್ಕೂ, ಲೈಂಗಿಕ ಗುಣದ ಶಕ್ತಿಯನ್ನು ಸಾಹಸ

ಸದ್ಗುಣಾಭಿಮಾನಕ್ಕೂ, ಕಲಾ ಸೌಂದರ್ಯದ ಆಸ್ವಾದನೆಗೂ ತಿರುಗಿಸಿಕೊಳ್ಳಬೇಕು. ಹೀಗೆ ಮಕ್ಕಳ ಮೂಲ ವರ್ತನೆಗಳನ್ನು ಉಚಿತ ರೀತಿಯಲ್ಲಿ ಬೆಳಸಿಕೊಳ್ಳುವುದೇ ಅವುಗಳನ್ನು ಉದಾತ್ತಗೊಳಿಸುವ ಕಾರ್ಯ. ಹಾಗೆಯೇ ಮಕ್ಕಳಲ್ಲಿರುವ ಹೋರಾಟದ ಮೂಲಗುಣವನ್ನು ಇತರರ ಸುಖಶಾಂತಿಗಾಗಿ ದುಡಿವುದಕ್ಕೂ, ಉಚಿತವಾದ ತರಗತಿಯ ಸ್ಪರ್ಧೆಗಳಿಗೂ ವಿನಿಯೋಗವಾಗುವಂತೆ ಉದಾತ್ತಗೊಳಿಸಬೇಕು. ಪದಾರ್ಥ ಸಂಗ್ರಹಣದ ಗುಣವನ್ನು ವಿಷಯ ಗ್ರಹಣಕ್ಕೂ, ಜ್ಞಾನಸಂಗ್ರಹಾಭಿಲಾಷೆಯಿಂದ ಬಗೆ ಬಗೆಯ ಪುಸ್ತಕಗಳನ್ನು ನೋಡುವಂತೆಯೂ ಬೆಳಸಬೇಕು. ಅವುಗಳನ್ನು ಅದುಮಿ ಮೊಟಕು ಮಾಡಲು ಯತ್ನಿಸಬಾರದು–ಎಂಬ ವಿಷಯಗಳೂ ಉಪಾಧ್ಯಾಯರಿಗೆ ಮನೋವಿಶ್ಲೇಷಣ ಜ್ಞಾನದಿಂದ ಗೊತ್ತಾಗುವುದು.

ಫ್ರಾಯ್ಡರೂ ಅವರ ಅನುಯಾಯಿಗಳೂ ಮೇಲೆ ವಿವರಿಸಿದಂತೆ ಹುಟ್ಟುಗುಣಗಳನ್ನು ಉದಾತ್ತಗೊಳಿಸುವ ಆವಶ್ಯಕತೆಯನ್ನು ತೋರಿಸಿದ್ದರೂ ಅದಕ್ಕೆ ಉಚಿತವೂ ನಿರ್ದಿಷ್ಟವೂ ಆದ ಮಾರ್ಗವನ್ನಿನ್ನೂ ಸೂಚಿಸಿಲ್ಲ. ಬಹುಶಃ ಮುಂದೆ ಆ ವಿಜ್ಞಾನ ಬೆಳೆದಂತೆ ಆ ಮಾರ್ಗವನ್ನೂ ತೋರಿಸಬಹುದು. ಅದುತನಕ ಶಿಕ್ಷಕರು ಇಂದಿನ ಸಾಧಾರಣ ಬೋಧನಕ್ರಮಗಳನ್ನೇ ಮನೋವಿಶ್ಲೇಷಣ ತತ್ವದ ಬೆಳಕಿನಲ್ಲಿ ಉತ್ತಮಗೊಳಿಸಿಕೊಳ್ಳಬೇಕು.

ಹೀಗೆ ಫ್ರಾಯ್ಡರ 'ಗುಪ್ತ ಮಾನಸರಂಗ'ದ ಪರಿಚಯದಿಂದ ಮನಶ್ಶಾಸ್ತ್ರ ಜ್ಞಾನಕ್ಕೆ ಹಿಂದೆ ತಿಳಿಯದಿದ್ದ ಹಲವು ವಿಷಯಗಳನ್ನು ಪರಿಶೀಲಿಸಿ ವಿಮರ್ಶಿಸುವ ಶಕ್ತಿ ದೊರಕಿತು. ವೈದ್ಯ ವಿಜ್ಞಾನಕ್ಕೂ ಶಿಕ್ಷಣರಂಗಕ್ಕೂ ಅಮೂಲ್ಯವಾದ ಸೇವೆ ಸಂದಂತಾಯಿತು.

# ೧೭. ನೂತನ ಶಿಕ್ಷಣಪದ್ಧತಿಗಳು

ಮಕ್ಕಳ ಮನಸ್ಸಿನ ಸ್ವರೂಪ, ಹುಟ್ಟುಗುಣಗಳು ವಿಕಸಿಸುವ ರೀತಿ, ಸಮಾಜ ಜೀವನದೊಡನೆ ಮಕ್ಕಳಿಗಾಗಬೇಕಾದ ನಿಜವಾದ ಅನುಭವ ಮತ್ತು ಸಂಪರ್ಕ—ಈ ವಿಷಯಗಳಲ್ಲಿ ಹೊಸ ಬೆಳಕು ಅರಿವಾದಂತೆ ಶಿಕ್ಷಣ ರಂಗದ ದೃಷ್ಟಿಧ್ಯೇಯಗಳೂ, ರೂಪುರೇಖೆಗಳೂ, ಸಂವಿಧಾನ ಮತ್ತು ಕಾರ್ಯ ಯೋಜನೆಗಳೂ ಮಾರ್ಪಡುತ್ತಿವೆ. ಈ ಮಾರ್ಪಾಡುಗಳು ಜಗತ್ತಿನ ಎಲ್ಲ ರಾಷ್ಟ್ರಗಳಿಗಿಂತ ಅಮೆರಿಕದಲ್ಲಿ ಅತ್ಯಂತ ತೀವ್ರವಾಗಿ ಆಗುತ್ತಿವೆ; ಶಿಕ್ಷಣ ಸಂಶೋಧನೆಗಳನ್ನು ನಡಸಿ ಹೊಸ ಹೊಸ ಶಿಕ್ಷಣಪದ್ಧತಿಗಳನ್ನು ಆಚರಣೆಗೆ ತರಲಾಗುತ್ತಿದೆ; ಜಗತ್ತು ಆಶ್ಚರ್ಯಪಡುವಷ್ಟು ಮಟ್ಟಿನ ವೇಗದಿಂದಲೂ ವೈವಿಧ್ಯದಿಂದಲೂ ಅಮೆರಿಕ ಶಿಕ್ಷಣರಂಗದಲ್ಲಿ ಮುಂದುವರಿಯುತ್ತಿದೆ.

ಹಾಗೆ ಆಚರಣೆಗೆ ಬರುತ್ತಿರುವ ನೂತನ ಶಿಕ್ಷಣಪದ್ಧತಿಗಳಿಗೆ ಆಧಾರವಾಗಿರುವ ತತ್ವದೃಷ್ಟಿಯನ್ನು ಮೊದಲು ಪರಿಶೀಲಿಸುವ: ವಿಜ್ಞಾನದೃಷ್ಟಿಯ ಬೆಳವಣಿಗೆಯಿಂದ ಔದ್ಯೋಗಿಕ ಪ್ರಗತಿಯಾಗಿ ಜನಜೀವನದ ಮಟ್ಟ ಉತ್ತಮಗೊಂಡು ನೂತನ ಯುಗ ಆರಂಭವಾಗಿದೆ. ಹಾಗೆಯೇ ವಿಜ್ಞಾನ ದೃಷ್ಟಿ ಶಿಕ್ಷಣರಂಗದ ಮೇಲೂ ಬಿದ್ದು ಶಾಸ್ತ್ರೀಯ ಬೋಧನಕ್ರಮ ಆಚರಣೆಗೆ ಬರಹತ್ತಿದೆ; ಪ್ರಜಾಸತ್ತಾತ್ಮಕ ಜೀವನದೃಷ್ಟಿ ಬೆಳೆದು ಸಾರ್ವತ್ರಿಕ ಶಿಕ್ಷಣದ ಆವಶ್ಯಕತೆ ಕಂಡುಬಂದಂತೆ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಶಾಲೆಗಳು ಆರಂಭವಾಗಹತ್ತಿದುವು. ಅಧಿಕ ಸಂಖ್ಯೆಯಲ್ಲಿ ಮಕ್ಕಳು ಶಿಕ್ಷಣಕ್ಕೆ ಬರುವಂತಾಗಿ ಶಿಕ್ಷಕರ ಸಂಖ್ಯೆಯೂ ಹೆಚ್ಚುತ್ತ ಬಂತು. ಆ ಶಿಕ್ಷಣ ನೂತನ ಕ್ರಮಗಳನ್ನನುಸರಿಸಿ ನಡೆಯಬೇಕೆಂಬ ಉದ್ದೇಶದಿಂದ ಉಪಾಧ್ಯಾಯರ ಶಿಕ್ಷಣ ಕೇಂದ್ರಗಳು ಆರಂಭವಾದುವು. ಅತ್ಯಲ್ಪ ಶ್ರಮದಿಂದ ಅತ್ಯಧಿಕ ಸಂಖ್ಯೆಯ ಮಕ್ಕಳ ಶಿಕ್ಷಣಕಾರ್ಯ ಸಾಧಿಸಲು ನೆರವಾಗತಕ್ಕ ಬೋಧನ ಕ್ರಮಗಳನ್ನು ಕಂಡುಕೊಳ್ಳಲು ಬಗೆ ಬಗೆಯ ಸಂಶೋಧನಗಳು ನಡೆಯಲಾರಂಭವಾದುವು.

ನೂತನ ಸಂಶೋಧನೆಗಳ ಫಲವಾಗಿ ಹಿಂದೆ ಶಿಕ್ಷಣ ಶಾಲೆಗಳಲ್ಲಿ ಪಠ್ಯ ವಸ್ತುವಿಗಿದ್ದ ಪ್ರಾಧಾನ್ಯತೆ ಕಡಮೆಯಾಗುತ್ತ ಬಂತು. ಮಗುವಿಗೆ ಹೆಚ್ಚಿನ ಪ್ರಾಶಸ್ತ್ಯ ದೊರಕಿತು. ಮಕ್ಕಳಿಗೆ ಹಿಡಿಸಲಿ, ಇಲ್ಲದಿರಲಿ, ನಿಯಮಿಸಿರುವ ಪಠ್ಯವಸ್ತುವನ್ನು ಒತ್ತಾಯವಾಗಿ ಅವರ ತಲೆಗೆ ತುರುಕುವ ಕಾರ್ಯ ಕಡಮೆಯಾಗುತ್ತ ಬಂತು. ಮಗುವಿನ ಅಭಿರುಚಿ ಆಸಕ್ತಿಗಳನ್ನು ಅನುಸರಿಸಿ, ಅವರ ಮನಶ್ಶಕ್ತಿ, ಕೌಶಲ್ಯ ಮತ್ತು ಹುಟ್ಟುಗುಣಗಳನ್ನು ಬೆಳಸಲು ಅನುಕೂಲಿಸುವಂತೆ ಪಠ್ಯವಿಷಯವನ್ನು ಅನುಗೊಳಿಸುವ ಕಾರ್ಯ ಆರಂಭವಾಯಿತು; ಮೌನವಾಗಿ ಮಗುವನ್ನು ಕೂರಿಸಿ ಪಠ್ಯವಸ್ತುವನ್ನು ಉಪಾಧ್ಯಾಯರೇ ಅದರ ಬುರುಡೆಗೆ ತುಂಬಲು ಯತ್ನಿಸುವುದು ನಿಂತಿತು; ಮಗುವೇ ಆಸಕ್ತಿ ವಹಿಸಿ, ಚಟುವಟಿಕೆಯಿಂದಿದ್ದು ಸ್ವಪ್ರಯತ್ನದಿಂದ ಶಿಕ್ಷಣ ಪಡೆಯಲು ನೆರವಾಗುವ ಸನ್ನಿವೇಶ ರಚನೆಗೇ ಪಠ್ಯವಸ್ತುವಿಗಿಂತ ಹೆಚ್ಚಿನ ಪ್ರಾಧಾನ್ಯತೆ ದೊರೆಯಿತು. ಮಗು ಉಪಾಧ್ಯಾಯರು ಹೇಳಿದ್ದನ್ನು ಗ್ರಹಿಸುವ ಯಂತ್ರವೆಂಬ ತಪ್ಪು ಭಾವನೆ ಮಾಯವಾಗಿ, ಚಟುವಟಿಕೆಯಿಂದಿದ್ದು ಸ್ವಪ್ರಯತ್ನದಿಂದ ವಿಷಯವನ್ನು ಅರಿತುಕೊಳ್ಳುವ ಜೀವಿಯೆಂಬುದು ಭಾಸವಾಗುತ್ತ ಬಂತು. ಅದರಿಂದ ಶಾಲೆಯಲ್ಲಿ ಮಗುವಿಗೆ ಆಸಕ್ತಿ ಹುಟ್ಟಿಸಿ ಚಟುವಟಿಕೆಯಿಂದಿರಿಸತಕ್ಕ ಇತರ ಉದ್ಯಮಕ್ಕೂ ಕೆಲಸಗಳಿಗೂ ಹೆಚ್ಚಿನ ಗಮನ ಕೊಡಲಾಗುತ್ತಿದೆ. ಅಲ್ಲಿ ಮಕ್ಕಳು ಕುಳಿತು ಕೇಳುವುದು ಕಡಮೆಯಾಗಿ ಮಾಡಿ ಕಲಿಯುವುದು ಆರಂಭವಾಗಿದೆ; ಶಾಲೆಗಳು ಬೇಡವೆನ್ನಿಸುವ, ಜಿಗುಪ್ಸೆ ಹುಟ್ಟಿಸುವ ಸನ್ನಿವೇಶಗಳಾಗಿರದೆ ಆಕರ್ಷಣೀಯವೂ ಆನಂದದಾಯಕವೂ ಆದ ಸ್ಥಳಗಳಾಗಿ ಮಾರ್ಪಡುತ್ತಿವೆ. ಹಲವು ದಶಮಾನಗಳ ಹಿಂದಿನ ನಮ್ಮ ಶಾಲಾ ಜೀವನದ ಕಹಿ ನೆನಪು ಅನೇಕರಿಗಿರಬಹುದು! ಅಲ್ಲಿರುವುದು ನಮಗೆ ದುಸ್ಸಹವಾಗಿ ಕಟು ಬಲುಮೆಯ ಕೆಲಸವಾಗಿತ್ತು! ಶಾಲೆಗಳು ಸೆರೆಮನೆಯೆನ್ನಿಸುತ್ತಿದ್ದುವು! ಆದರೆ ಈಗ ಆ ಸನ್ನಿವೇಶ ಬದಲಾಗುತ್ತಿದೆ; ಶಾಲೆಯಲ್ಲಿ ಚಟುವಟಿಕೆಯಿಂದಿರುವುದೆಂದರೆ ಮಕ್ಕಳಿಗೆ ಆಸೆ ಹುಟ್ಟಿಸುವಂಥ, ಸೋಮಾರಿಯಾಗಿರುವುದೆಂದರೆ ಅತೃಪ್ತಿ ಬರಿಸುವಂಥ, ಆಕರ್ಷಣೀಯ ಸ್ಥಳಗಳು ಶಾಲೆಗಳಾಗುತ್ತಿವೆ. ಒಟ್ಟಿನಲ್ಲಿ ಮಕ್ಕಳ ಹಿತದೃಷ್ಟಿಯನ್ನೇ ಗಮನದಲ್ಲಿಟ್ಟುಕೊಂಡು ಇಡೀ ಶಾಲಾ ಜೀವನವೇ ರೂಪುಗೊಳ್ಳುತ್ತಿದೆ. ಪಠ್ಯವಸ್ತು,

ಪಠ್ಯಪುಸ್ತಕ, ಬೋಧನಕ್ರಮ—ಇವೆಲ್ಲ ಮಕ್ಕಳಿಗೆ ಆಸಕ್ತಿ ಹುಟ್ಟಿಸುವಂತೆ ನಿರ್ಮಾಣಗೊಳ್ಳುತ್ತಿವೆ. ಪಾಠಶಾಲೆಯ ಎಲ್ಲ ಸನ್ನಿವೇಶಗಳೂ ಶಿಶುವಿಗೇ ಪ್ರಾಧಾನ್ಯತೆ ಕೊಟ್ಟು ರಚನೆಯಾಗುತ್ತಿವೆ.

ಶಾಲೆಗಳಲ್ಲಿ ಮಕ್ಕಳಿಗೆ ಹೆಚ್ಚಿನ ಪ್ರಾಧಾನ್ಯತೆ ಬಂದು, ಅವರ ಅಭಿರುಚಿ ಆಸಕ್ತಿಗಳ ಕಡೆ ಗಮನಕೊಟ್ಟು ಬೋಧನಕ್ರಮ ರೂಪುಗೊಂಡಂತೆ ಬೇರೆ ಬೇರೆ ಮಕ್ಕಳು ಭಿನ್ನ ರೀತಿಯ ಮನಶ್ಶಕ್ತಿಯುಳ್ಳವರೆಂಬ ಅಂಶ ಗೊತ್ತಾಗುತ್ತ ಬಂತು. ಮಕ್ಕಳ ಆ ಭಿನ್ನ ಸ್ವಭಾವವನ್ನು ಅನುಸರಿಸಿ ಒಬ್ಬೊಬ್ಬ ಮಗುವಿಗೂ ಪ್ರತ್ಯೇಕ ಗಮನಗೂಟ್ಟು ವೈಯುಕ್ತಿಕವಾಗಿ ಪಾಠ ಹೇಳುವ ಆವಶ್ಯಕತೆಯೂ ಕಂಡುಬಂತು. ತರಗತಿಗೆಲ್ಲ ಒಂದೇ ಮಂತ್ರವೆಂದು ಭಾವಿಸಿ ಇಡೀ ತರಗತಿಗೇ ಒಟ್ಟಿಗೆ ಬೋಧಿಸುವುದರ ಬದಲು, ಒಬ್ಬೊಬ್ಬ ಮಗುವಿನ ಅಭಿರುಚಿ ಆಸಕ್ತಿಗಳಿಗೊಪ್ಪುವಂತೆ, ಶಕ್ತಿಸಾಮರ್ಥ್ಯಗಳಿಗೆ ತಕ್ಕಂತೆ ಶಿಕ್ಷಣಕೊಡುವುದು ಆರಂಭವಾಯಿತು. ಜೊತೆಗೆ ಕೇವಲ ತರಗತಿಯಲ್ಲಿ ಬೋಧಿಸುವುದೊಂದೇ ಶಿಕ್ಷಣವೆಂಬುದು ಮಾಯವಾಗಿ ಒಬ್ಬೊಬ್ಬ ಮಗುವಿನ ಪೂರ್ಣ ವ್ಯಕ್ತಿತ್ವದ ಬೆಳವಣಿಗೆಯೇ ನಿಜವಾದ ಶಿಕ್ಷಣವೆಂಬುದು ಗಣನೆಗೆ ಬಂತು. ಶಾಲೆ ಬರೀ ಬೋಧನೆಯ ಸ್ಥಳವಲ್ಲವೆಂದೂ, ಅದು ಮಕ್ಕಳ ಬಹುಮುಖವಾದ ಸಂಸ್ಕರಣ ಕಾರ್ಯವನ್ನು ಸಾಧಿಸುವ ಕೇಂದ್ರವೆಂದೂ ಭಾಸವಾಗುತ್ತ ಬಂತು.

ಮಗುವನ್ನು ಶಾಲೆಯ ಒಂದು ಕಟ್ಟನೊಳಗೆ ಬಿಗಿದಿರುವುದರ ಬದಲು ತಕ್ಕಷ್ಟು ಸ್ವಾತಂತ್ರ್ಯ ಕೊಟ್ಟು ತಮ್ಮ ಅಭಿರುಚಿ ಆಸಕ್ತಿಗಳನ್ನು ಪ್ರದರ್ಶಿಸುವ ಚಟುವಟಿಕೆಗಳಲ್ಲಿ ಭಾಗವಹಿಸುವಂತೆ ಪ್ರೋತ್ಸಾಹಿಸುವುದು ಆರಂಭವಾಗಿದೆ. ಹಿಂದಿನ ತಾರ್ಕಿಕ ರೀತಿಯ ಪಠ್ಯಪುಸ್ತಕಗಳು ಮಾರ್ಪಟ್ಟು, ಮಕ್ಕಳ ಮನೋವಿಜ್ಞಾನವನ್ನನುಸರಿಸಿ ಹೊಸ ರೂಪವನ್ನು ತಾಳುತ್ತಿವೆ. ಕೆಲವರು 'ಪಠ್ಯಪುಸ್ತಕಗಳೇ ಬೇಡ, ಸಮಾಜದಲ್ಲಿರುವಂತೆಯೇ ಶಾಲೆಯಲ್ಲೂ ಬಾಳಿ ಆ ಮೂಲಕ ಸಮಾಜ ಜೀವನಕ್ಕೆ ಬೇಕಾದುದನ್ನು ಕಲಿತುಕೊಳ್ಳಲಿ' ಎಂದೂ ವಾದಿಸುವುದುಂಟು.

ನೂತನ ಶಿಕ್ಷಣಪದ್ಧತಿ ಹೊಸ ಪರೀಕ್ಷಾ ಕ್ರಮಗಳನ್ನೂ ಆರಂಭಿಸಿದೆ; ಬಾಲಕರ ಶಿಕ್ಷಣಾಭಿವೃದ್ಧಿಯನ್ನು ಆದಷ್ಟು ಸಮರ್ಪಕವಾಗಿ ಅಳೆಯಲನುಕೂಲಿಸುವಂತೆ ನೂತನ ರೀತಿಯ ಪರೀಕ್ಷಾಕ್ರಮ ಬಳಕೆಗೆ ಬರುತ್ತಿದೆ; ಬುದ್ಧಿಶಕ್ತಿಯನ್ನು ಅಳೆಯುವುದೂ ಸಾಧ್ಯವಾಗಿದೆ.

ಇವೆಲ್ಲದರ ಪರಿಣಾಮವಾಗಿ ಉಪಾಧ್ಯಾಯರ ಕಾರ್ಯದ ಸ್ವರೂಪವೂ ಬಹುಮಟ್ಟಿಗೆ ಮಾರ್ಪಟ್ಟಿದೆ; ಮಕ್ಕಳ ಮನೋವ್ಯಾಪಾರದ ಪರಿಚಯ ಮಾಡಿಕೊಂಡು, ಸಮಾಜದ ಸ್ವರೂಪವನ್ನೂ, ಆವಶ್ಯಕತೆ ಆಶೆ ಆಕಾಂಕ್ಷೆಗಳನ್ನೂ ಅರಿತುಕೊಂಡು, ಮುಂದೆ, ಒಂದೊಂದು ಮಗುವೂ ಎಂಥ ವ್ಯಕ್ತಿಯಾಗಿ ಸಮಾಜದಲ್ಲಿ ಬಾಳುವನೆಂಬುದನ್ನೂ ಸ್ಥೂಲವಾಗಿ ರೂಪಿಸಿಕೊಂಡು, ನಿರಂತರವೂ ಆ ಗುರಿಯ ಸಾಧನೆಗಾಗಿ ಪ್ರೇಮಾದರದಿಂದ ಮಕ್ಕಳಿಗೆ ಸಲಹೆ ಸಹಕಾರಗಳನ್ನು ಕೊಡಲು ಕಾದು ನಿಂತಿರುವ ಮಾರ್ಗದರ್ಶಕರಾಗಿ ಉಪಾಧ್ಯಾಯರು ಮಾರ್ಪಟ್ಟಿರುತ್ತಾರೆ. ಜನಾಂಗದ, ಸಮಾಜದ ಧರ್ಮ ಮತ್ತು ಸಂಸ್ಕೃತಿಯ ಪರಿಚಯವನ್ನು ಮಕ್ಕಳಿಗೆ ಮಾಡಿಕೊಡಲು ಸಮಾಜದ ಪ್ರತಿನಿಧಿಯಂತೆ ಅವರು ಉಚಿತವೆನಿಸಿದ ಸನ್ನಿವೇಶಗಳನ್ನು ರಚಿಸಿಕೊಂಡು ಆ ಕಾರ್ಯವನ್ನು ಉತ್ಸುಕತೆಯಿಂದ ಸಾಧಿಸತಕ್ಕವರಾಗಿರುತ್ತಾರೆ. ಮನೆಯಲ್ಲಿ ತಾವು ಬೋಧಿಸಬೇಕೆಂದಿರುವುದನ್ನು ಚೆನ್ನಾಗಿ ಓದಿಕೊಂಡು, ಸಿದ್ಧವಾಗಿ ಬಂದು ಪಾಠ ಮಾಡಬೇಕಾಗಿಯೂ ಇದೆ. ತಾವೇ ಎಲ್ಲವನ್ನೂ ಹೇಳಿಬಿಡುವುದರ ಬದಲು ಮಕ್ಕಳೇ ಕಾರ್ಯತಃ ಮಾಡಿ ಕಲಿಯುವಂತೆ ನೋಡಿಕೊಳ್ಳುವುದೇ ಉಪಾಧ್ಯಾಯರ ಮುಖ್ಯ ಕೆಲಸವಾಗಿದೆ.

೧೯ ನೆಯ ಶತಮಾನದಲ್ಲೇ ಮಕ್ಕಳ ವೈಯಕ್ತಿಕ ಭಿನ್ನತೆಗಳು ಪರಿಚಯಕ್ಕೆ ಬಂದು, ಆ ಭಿನ್ನತೆಗಳನ್ನನುಸರಿಸಿ ಒಬ್ಬೊಬ್ಬ ಮಗುವಿಗೂ ವೈಯಕ್ತಿಕವಾಗಿ ಗಮನಕೊಟ್ಟು ಬೋಧಿಸುವುದು ಆವಶ್ಯಕವೆಂಬುದು ಸ್ಪಷ್ಟಪಟ್ಟಿತು. ೨೦ನೆಯ ಶತಮಾನದ ಆದಿಯಲ್ಲಿ ಅಂಗ ವಿಹೀನರಿಗೂ, ಕುಂಟ ಕಿವುಡರಿಗೂ, ದಡ್ಡರಿಗೂ ಶಿಕ್ಷಣ ಕೊಡಬಹುದೆಂಬ ಅಂಶ ದೃಢಪಟ್ಟು ಅವರಿಗೊಪ್ಪುವ ರೀತಿಯ ಪಾಠಶಾಲೆಗಳೂ ಆರಂಭವಾದುವು. ಕೇವಲ ಪ್ರತಿಭಾವಂತರ ಪಾಲಿಗೆ ಮಾತ್ರವಿದ್ದ ಶಿಕ್ಷಣಪ್ರಸಾದ ಈಗ ಎಲ್ಲರಿಗೂ ದೊರಕುವಂತಾಗಿ ಶಿಕ್ಷಣರಂಗದಲ್ಲಿ ಪ್ರಜಾಸತ್ತಾತ್ಮಕ ತತ್ವಕ್ಕೆ ಪ್ರಾಧಾನ್ಯತೆ ದೊರಕಿದೆ. ಅದರಿಂದ ಮಂದಬುದ್ಧಿಯವರೂ ಶಿಕ್ಷಣದಿಂದ ಪುನೀತರಾಗುವಂತಾಯಿತು. ಅದೃಷ್ಟವಂತರು, ಐಶ್ವರ್ಯವಂತರು ಮಾತ್ರ ಶಿಕ್ಷಣ ಪಡೆಯುವಂತಿರದೆ ಅದೃಷ್ಟ ಹೀನರಾಗಲಿ, ಬಡವರಾಗಲಿ—ದೈವ ಸೃಷ್ಟಿಯ ಎಲ್ಲ ಮಕ್ಕಳಿಗೂ ಶಿಕ್ಷಣ ಕೊಡುವುದು ರಾಷ್ಟ್ರದ ಕರ್ತವ್ಯವೆಂಬ

ಸಾಮಾಜಿಕ ಬುದ್ಧಿ ಉದಯವಾಯಿತು. ಸಾರ್ವತ್ರಿಕವಾಗಿ ಶಿಕ್ಷಣವಾಗಬೇಕೆಂಬ ಕೂಗಿಗೆ ಮನ್ನಣೆ ದೊರಕಿತು.

ಮೇಲೆ ವಿವರಿಸಿದ ವೈಯಕ್ತಿಕ ಗಮನ ಮತ್ತು ಸಾರ್ವತ್ರಿಕ ಶಿಕ್ಷಣ—ಇವೆರಡೂ ಒಂದಕ್ಕೊಂದಕ್ಕೆ ವ್ಯತಿರಿಕ್ತವಾಗಿವೆ. ನಾಡಿನ ಕೋಟ್ಯಂತರ ಮಕ್ಕಳ ಶಿಕ್ಷಣವನ್ನು ಸಾಧಿಸುವಾಗ ಹೇಗೆ ಒಬ್ಬೊಬ್ಬ ಮಗುವಿಗೂ ವೈಯಕ್ತಿಕವಾಗಿ ಗಮನಕೊಡುವುದು? ಹಾಗೆ ಗಮನಕೊಡುವುದಾದರೆ ಅಷ್ಟೊಂದು ಅಗಾಧ ಸಂಖ್ಯೆಯ ಮಕ್ಕಳ ಶಿಕ್ಷಣವನ್ನು ಸಾಧಿಸುವುದು ಸಾಧ್ಯವೆ?—ಈ ಸಮಸ್ಯೆಗಳನ್ನು ನಮ್ಮ ಹಿಂದಿನವರು ಬಿಡಿಸಿರಲಿಲ್ಲ. ಹಲವು ನೂತನ ಪದ್ಧತಿಗಳು ಅವನ್ನು ಬಿಡಿಸಲು ಪ್ರಯತ್ನಿಸಿವೆ.

ಶಿಕ್ಷಣರಂಗದ ಹೊಸ ತತ್ವದೃಷ್ಟಿಯನ್ನೂ ಸಂಶೋಧನೆಗಳನ್ನೂ ಸಮಾಜದ ಆವಶ್ಯಕತೆ ಮತ್ತು ಆಶೆ ಆಕಾಂಕ್ಷೆಗಳನ್ನೂ ಗಮನದಲ್ಲಿರಿಸಿಕೊಂಡು ನೂತನ ಶಿಕ್ಷಣಪದ್ಧತಿಗಳು ರೂಪುಗೊಂಡಿವೆ, ರೂಪುಗೊಳ್ಳುತ್ತಿವೆ. ಆ ಎಲ್ಲ ಪದ್ಧತಿಗಳ ಮೂಲ ಉದ್ದೇಶ ವೈಯಕ್ತಿಕವಾಗಿ ಗಮನಕೊಟ್ಟು ಮಕ್ಕಳ ಶಿಕ್ಷಣವನ್ನು ಸಾಧಿಸುವುದೇ ಆಗಿದೆ. ಹಾಗೆ ಪ್ರತ್ಯೇಕ ಗಮನಕೊಟ್ಟರೂ ಒಬ್ಬೊಬ್ಬ ವ್ಯಕ್ತಿಯ ಬೆಳವಣಿಗೆಯೂ ಸಮಾಜದ ಬೆಳವಣಿಗೆಗಾಗಿಯೇ ಎಂಬ ದೃಷ್ಟಿ ಅದರಲ್ಲಿದೆ. ಮಕ್ಕಳಿಗೆ ಸ್ವಾತಂತ್ರ್ಯ, ಸ್ವಪ್ರೇರಣೆ, ಚಟುವಟಿಕೆ, ಆಸಕ್ತಿ, ಸ್ವಪ್ರಕಾಶನ—ಇವು ಎಲ್ಲ ನೂತನ ಪದ್ಧತಿಗಳ ಪಂಚಪ್ರಾಣಗಳೆಂದು ಹೇಳಬಹುದು. ಅಂಥ ನೂತನ ಶಿಕ್ಷಣಪದ್ಧತಿಗಳಲ್ಲಿ ಪ್ರಧಾನವಾದ ಹಲವನ್ನಿಲ್ಲಿ ವಿವರಿಸಲಾಗುವುದು.

## ೧. ಮಾಂಟೆಸೋರಿ ಶಿಕ್ಷಣಪದ್ಧತಿ

ಹಿಂದೆ ವಿವರಿಸಿರುವಂತೆ ರೂಸೋ ಆಧುನಿಕ ಶಿಕ್ಷಣತತ್ವದ ಜನಕನಾದರೆ, ಆ ತತ್ವವನ್ನನುಸರಿಸಿದ ಪೆಸ್ಟಲಾಜಿ ಆಧುನಿಕ ಬೋಧನಕ್ರಮದ ಮೂಲಪುರುಷನೆನಿಸಿದ್ದರೆ, ಮಾಂಟಿಸೋರಿ ಆಧುನಿಕ ಶಿಕ್ಷಣಪದ್ಧತಿಗಳಿಗೆ ಮಾತಾಮಹಿಳೆನಿಸಿರುವಳು. ತರಗತಿಗೆಲ್ಲ ಏಕರೀತಿಯ ಸಾಮೂಹಿಕ ಶಿಕ್ಷಣವೀಯುವುದು ಉಚಿತವಲ್ಲವೆಂದರಿತು ಮೊಟ್ಟಮೊದಲು ಸಾಮೂಹಿಕ ತರಗತಿಯ ಶಿಕ್ಷಣಕ್ಕೆ ತಿಲಾಂಜಲಿ ಬಿಟ್ಟವರು ಇಟಲಿಯ ಶಿಕ್ಷಣವಿಶಾರದೆಯಾದ

ಮೇಡಂ ಮಾಂಟಿಸೋರಿಯವರು. ತರಗತಿಗೆ ಬೋಧಿಸುವುದನ್ನು ಮಗು ಅರಿತುಕೊಳ್ಳುತ್ತಿದೆಯೇ ಎಂಬುದಕ್ಕೆ ಗಮನ ಕೊಡುವುದಕ್ಕಿಂತ ಮಗು ಅರಿತುಕೊಳ್ಳಲು ತರಗತಿಯ ಶಿಕ್ಷಣ ಅವಕಾಶ ಕೊಡುತ್ತದೆಯೇ ಎಂದು ಪ್ರಶ್ನೆಯೆತ್ತಿ, ಆ ಸಮಸ್ಯೆಯ ಪರಿಹಾರಕ್ಕಾಗಿ ಒಂದು ನೂತನ ಶಿಕ್ಷಣಪದ್ಧತಿಯನ್ನು ಅವರು ಜಾರಿಗೆ ತಂದರು.

ಮಾಂಟಿಸೋರಿಯವರು ಮಕ್ಕಳ ಸ್ವಾತಂತ್ರ್ಯವನ್ನೇ ಮೂಲ ಮಂತ್ರವನ್ನಾಗಿ ಮಾಡಿಕೊಂಡರು. ಈಚೆಗೆ ಆರಂಭವಾಗಿರುವ ಇತರ ನೂತನ ಪದ್ಧತಿಗಳೆಲ್ಲ ಮಾಂಟಿಸೋರಿ ಪದ್ಧತಿಯಿಂದಲೆ ಆವೇಶವನ್ನೂ ಆದರ್ಶವನ್ನು ಪಡೆದುಕೊಂಡಿರುವುವೆಂದು ಹೇಳಬಹುದು. ಆದರೆ ಅವರು ಪ್ರತಿಪಾದಿಸಿದ ಮಕ್ಕಳ ಸ್ವಾತಂತ್ರ್ಯವನ್ನೇ ಹಲವರು ಸ್ವಚ್ಛಂದ ವೃತ್ತಿಯೆಂದೂ ಭಾವಿಸಿರುವರು. ಅದು ಸರಿಯಲ್ಲ. ಅವರೇ ಹೇಳುವಂತೆ 'ಅದು ಸ್ವಚ್ಛಂದ ವೃತ್ತಿಯಲ್ಲ; ಸಾಮಾಜಿಕ ಸಮಸ್ಯೆಗಳು ಬಂದಾಗ, ಯೋಚಿಸಿ ಕಾರ್ಯಪ್ರವರ್ತಕರಾಗುವುದಕ್ಕೆ, ಉಚಿತವೆನಿಸಿದ ರೀತಿಯಲ್ಲಿ ಅವನ್ನು ಬಿಡಿಸಿಕೊಳುವುದಕ್ಕೆ ಬೇಕಾದ ಸ್ವಾತಂತ್ರ್ಯ ಮಾತ್ರ. ಅಂಥ ಸ್ವಾತಂತ್ರ್ಯವಿಲ್ಲದಿದ್ದರೆ ಮಕ್ಕಳು ಸೂತ್ರದ ಬೊಂಬೆಗಳಂತಾಗುತ್ತಾರೆಯೇ ಹೊರತು ಕಲಿಯುವ ವ್ಯಕ್ತಿಗಳಾಗಲಾರರು' ಎಂಬುದು ಮಾಂಟಿಸೋರಿಯವರ ವಾದ. ಹಾಗೆಯೇ ಶಿಸ್ತನ್ನೂ ಬಿಡಬೇಕೆಂಬುದು ಅವರು ಹೇಳಲಿಲ್ಲ; ಆದರೆ ಆ ಶಿಸ್ತು ಮಗುವನ್ನು ಕಟ್ಟನಲ್ಲಿ ಅದುಮಿರಿಸುವುದಕ್ಕಾಗಲಿ, ಯಾರೋ ನಿಯಮಿಸಿದ ಅಹಿತವೆನಿಸುವ ಪಥ್ಯವಸ್ತುವನ್ನು ಅರೆದು ನುಂಗಿಸುವುದಕ್ಕಾಗಲಿ, ತರಗತಿಯ ಹಿತಕ್ಕಾಗಿ ವ್ಯಕ್ತಿಯನ್ನು ಮಂಕರಂತೆ ಕೂಡಿಸುವುದಕ್ಕಾಗಲಿ ಇರುವುದನ್ನು ಮಾತ್ರ ಒಪ್ಪುವುದಿಲ್ಲ. ನಿಜವಾದ ಸಮಾಜದಲ್ಲಿ ಬಾಳುವಾಗ ಯಾವ ಶಿಸ್ತು ಆವಶ್ಯಕವೋ ಅಂಥ ಶಿಸ್ತನ್ನು ಅವರೂ ಅಭಿನಂದಿಸಿರುವರು. ಮೇಲಿನ ಎಲ್ಲ ದೃಷ್ಟಿಗಳನ್ನೂ ಕ್ರೋಢೀಕರಿಸಿಕೊಂಡು ಮಾಂಟಿಸೋರಿ ನೂತನ ಪದ್ಧತಿಯನ್ನು ಆರಂಭಿಸಿ ನೂತನ ಶಿಕ್ಷಣ ಯುಗದ ಮಾತಾಮಹಿಳೆನಿಸಿರುವರು.

ಮೇಲಿನ ಶಿಕ್ಷಣಪದ್ಧತಿಯಲ್ಲಿ ಮಕ್ಕಳ ಜ್ಞಾನೇಂದ್ರಿಯಗಳ ಸಂಸ್ಕರಣಕ್ಕೆ ಪ್ರಾಧಾನ್ಯತೆಯಿದೆ. ಉಚಿತವೆನಿಸುವ ವಿಶೇಷ ರೀತಿಯ ಉಪಕರಣಗಳ ಮೂಲಕ ಮಕ್ಕಳ ನೇತ್ರ ಪಟುತ್ವ, ಶ್ರವಣ ಶಕ್ತಿ, ಸ್ಪರ್ಶಾಙ, ಮುಂತಾದ

ಇಂದ್ರಿಯ ಜ್ಞಾನಗಳು ವೃದ್ಧಿಯಾಗುವಂತೆ ಪ್ರಯತ್ನಿಸುತ್ತಾರೆ. ಹಾಗೆ ಜ್ಞಾನೇಂದ್ರಿಯಗಳ ಪಟುತ್ವ ಹೆಚ್ಚಿದಂತೆ ಆಲೋಚನೆ, ಪ್ರತಿಭೆ, ಕಲ್ಪನೆ, ಮೊದಲಾದ ಉನ್ನತ ಮನಶ್ಶಕ್ತಿಗಳೂ ವೃದ್ಧಿ ಹೊಂದುವುವೆಂಬುದೇ ಈ ಶಿಕ್ಷಣಪದ್ಧತಿಗೆ ಆಧಾರವಾದ ಮೂಲತತ್ತ್ವ.

ಮಾಂಟಿಸೋರಿ ಶಾಲೆಗಳಲ್ಲಿ ೪೦-೫೦ ಮಂದಿ ಮಕ್ಕಳಿಗೆ ಒಬ್ಬ ಶಿಕ್ಷಕಿಯಿದ್ದರೂ, ತರಗತಿಗಳನ್ನು ಏರ್ಪಡಿಸಿಕೊಂಡಿಲ್ಲ. ಅಲ್ಲಿ ತೋರಿಸಬಹುದಾದ ತರಗತಿವಾರು ವಿಂಗಡನೆ ಕೇವಲ ಮಕ್ಕಳು ಪಡೆದಿರುವ ಶಿಕ್ಷಣದ ಮಟ್ಟವನ್ನು ಸೂಚಿಸುವುದಕ್ಕೆ ಮಾತ್ರ; ಬೋಧನಕ್ಕಲ್ಲ. ಪ್ರತಿಯೊಂದು ಮಗುವಿನ ಅಭಿರುಚಿ ಆಸಕ್ತಿಗಳನ್ನು ಪರೀಕ್ಷಿಸಿ ಅವಕ್ಕೊಪ್ಪುವ ಶಿಕ್ಷಣ ಕೊಡುವುದುಂಟು. ಶಿಕ್ಷಕಿಯರು ಕೇವಲ ಮಾರ್ಗದರ್ಶಕರಾಗಿ ಮಾತ್ರ ಇರುತ್ತಾರೆ. ಮಕ್ಕಳು ತಮ್ಮ ಸ್ವಂತ ಚಟುವಟಿಕೆಯಿಂದ ಉದ್ಯಮಗಳನ್ನು ಆಚರಿಸಿ ಶಿಕ್ಷಣ ಪಡೆಯಬೇಕು. ಮನೆಯಲ್ಲಿ ಮಕ್ಕಳು ಇತರರೊಡನೆ ವಾಸಿಸುವಾಗ ಕಂಡುಬರುವ ಸನ್ನಿವೇಶಗಳೇ ಶಾಲೆಯಲ್ಲೂ ರೂಪುಗೊಂಡಿರುತ್ತವೆ. ತಾಯಿ ತಂದೆಯರೊಡನೆ, ಅಣ್ಣ ಅಕ್ಕಂದಿರೊಡನೆ ಅಲ್ಲಿ ಕಲಿಯುವಂತೆಯೇ ಇಲ್ಲಿಯೂ ಕಲಿಯುತ್ತಾರೆ.

ಈ ಪದ್ಧತಿ ಆರಂಭವಾದ ಮೊದಮೊದಲು ಇದೇ ಉತ್ತಮ ಪದ್ಧತಿಯೆಂದು ನಂಬಲಾಗಿತ್ತು. ಈಚೆಗೆ ಇದರಲ್ಲಿರುವ ಉತ್ತಮ ಗುಣಗಳನ್ನು ಆರಿಸಿಕೊಂಡು ಇತರ ಹೊಸ ಹೊಸ ಪದ್ಧತಿಗಳೂ ಬಳಕೆಗೆ ಬಂದಿವೆ, ಬರುತ್ತಲಿವೆ.

## ೨. ಡಾಲ್ಟನ್ ಶಿಕ್ಷಣ ಪದ್ಧತಿ

ಇಟಲಿಯಲ್ಲಿ ಮೇಡಂ ಮಾಂಟಿಸೋರಿಯವರ ಶಿಷ್ಯಳಾಗಿದ್ದ ಶ್ರೀಮತಿ ಹೆಲನ್ ಪಾರ್ಕ್‌ರ್ಹಸ್ಟ್‌ರವರು ೧೯೧೯ರಲ್ಲಿ ಅಮೆರಿಕದಲ್ಲಿ ಮಸಾಚುಸೆಟ್ಸ್ ಜಿಲ್ಲೆಯ ಡಾಲ್ಟನ್ ಎಂಬ ಪ್ರದೇಶದಲ್ಲಿ ಮತ್ತೊಂದು ಹೊಸ ಶಿಕ್ಷಣ ಪದ್ಧತಿಯನ್ನು ಆರಂಭಿಸಿದರು. ಅದು ಆರಂಭವಾದುದು ೮ರಿಂದ ೧೮ ವರ್ಷದ ವರೆಗಿನ ಮಕ್ಕಳಿಗಾಗಿ. ಮೊದಲು ಡಾಲ್ಟನ್ ಎಂಬ ಪ್ರದೇಶದಲ್ಲಿ ಆರಂಭ

ವಾದ ಸ್ಮಾರಕಕ್ಕಾಗಿ ಆ ಕ್ರಮವನ್ನು ಡಾಲ್ಟನ್ ಶಿಕ್ಷಣ ಪದ್ಧತಿಯೆಂದು ಕರೆಯುವರು. ಈ ರೀತಿಯ ಶಾಲೆಗಳಲ್ಲಿ ಚರಿತ್ರೆ, ಭೂಗೋಳ, ವಿಜ್ಞಾನ, ಮುಂತಾದ ಪಠ್ಯ ವಿಷಯಗಳಲ್ಲಿ ಒಂದೊಂದಕ್ಕೂ ಪ್ರತ್ಯೇಕ ಮಂದಿರ ಇದೆ. ಆಯಾ ಪ್ರಯೋಗ ಮಂದಿರದಲ್ಲಿ ಆ ವಿಷಯದಲ್ಲಿ ಪ್ರವೀಣರಾದ ಒಬ್ಬ ಶಿಕ್ಷಕರಿರುತ್ತಾರೆ. ಅವರು ತಮ್ಮ ವಿಶೇಷ ವಿಷಯವನ್ನು ಮಾತ್ರ ಬೋಧಿಸುವರು. ಆ ಮಂದಿರದಲ್ಲಿ ಆ ವಿಷಯಕ್ಕೆ ಸಂಬಂಧಿಸಿದ ಅಭ್ಯಾಸವನ್ನೂ ಪ್ರಯೋಗಗಳನ್ನೂ ನಡಸಲು ಆವಶ್ಯಕವಾದ ಉಪಕರಣಗಳನ್ನು ಇಟ್ಟಿರುತ್ತಾರೆ. ಈ ಪದ್ಧತಿಯು ಮಾಧ್ಯಮಿಕ ಶಾಲೆಗಳ ಮತ್ತು ಪ್ರೌಢಶಾಲೆಗಳ ಕಾರ್ಯಕ್ರಮಕ್ಕೆ ಅನ್ವಯಿಸುತ್ತದೆ.

ತರಗತಿಯ ಸಾಮೂಹಿಕ ಶಿಕ್ಷಣಕ್ಕೆ ಬದಲಾಗಿ ಒಬ್ಬೊಬ್ಬರಿಗೂ ವೈಯುಕ್ತಿಕವಾಗಿ ಶಿಕ್ಷಣ ಕೊಡುವ ಮೂಲ ಉದ್ದೇಶದಿಂದ ಈ ಕ್ರಮ ಆರಂಭವಾಗಿದೆ. ತರಗತಿಯ ಭಾವನೆ ಇನ್ನೂ ಅಷ್ಟಿಷ್ಟು ಮಾಂಟಿಸೋರಿಯವರ ಕ್ರಮದಲ್ಲಿ ಉಳಿದುಕೊಂಡಿದ್ದರೆ, ಡಾಲ್ಟನ್ ಕ್ರಮದಲ್ಲಿ ಅದು ಪೂರ್ಣವಾಗಿ ಮಾಯವಾಗಿರುತ್ತದೆ. ವೈಯಕ್ತಿಕ ಶಿಕ್ಷಣದ ಪರಮಾವಧಿ ಸ್ವರೂಪ ಈ ಪದ್ಧತಿಯಲ್ಲಿ ಕಂಡುಬರುತ್ತದೆ.

ಸಾರ್ವತ್ರಿಕ ಶಿಕ್ಷಣವಾಗಬೇಕೆನ್ನುವ ಈ ಕಾಲದಲ್ಲಿ ಪ್ರತ್ಯೇಕ ಶಿಕ್ಷಣವನ್ನು ಪ್ರತಿಪಾದಿಸುವುದು ಆರ್ಥಿಕ ದೃಷ್ಟಿಯಿಂದ ಬಗೆಹರಿಯದ ಸಮಸ್ಯೆಯೆಂದು ಹಲವರಾದರೂ ವಾದಿಸಬಹುದು. ಈ ಸಮಸ್ಯೆಯನ್ನು ಬಗೆಹರಿಸಲು ನಡೆದ ಯತ್ನಗಳಲ್ಲಿ ಡಾಲ್ಟನ್ ಪದ್ಧತಿಯೂ ಒಂದು. ಈ ಶಾಲೆಗಳಲ್ಲಿ ಉಪಾಧ್ಯಾಯರ ಕೆಲಸ ಬೋಧಿಸುವುದಲ್ಲ: ಆವಶ್ಯಕವಾದ ಮಾರ್ಗದರ್ಶನ ಮಾಡುವುದು. ಮಕ್ಕಳು ಹೇಳಿದ ವಿಷಯವನ್ನು ಗ್ರಹಿಸಿಕೊಂಡು ಮೌನವಾಗಿ ಕುಳಿತಿರುವುದಲ್ಲ: ಸ್ವಪ್ರಯತ್ನದಿಂದ ಅಭ್ಯಾಸವನ್ನೂ ಪ್ರಯೋಗಗಳನ್ನೂ ನಡಸಿ ಅನುಭವಗಳನ್ನು ಪಡೆಯಬೇಕು. ಶಾಲೆಯಲ್ಲಿ ಉಪಾಧ್ಯಾಯರು ಕಟು ಬಲುಮೆಯಿಂದ ಶಿಸ್ತನ್ನು ನೆಲೆಗೊಳಿಸಬೇಕಾಗಿಲ್ಲ: ಅಲ್ಲಿನ ಸನ್ನಿವೇಶಗಳಿಂದ ಪ್ರೇರಿತರಾಗಿ, ತಮ್ಮ ತಮ್ಮ ಕಾತರವನ್ನು ಹಿಂಗಿಸುವ ಅನುಭವ ಪಡೆಯಲು ಯತ್ನಿಸುವಾಗ ಮಕ್ಕಳೇ ಆವಶ್ಯಕವಾದ ಶಿಸ್ತಿನ ವಾತಾವರಣವನ್ನು ಕಲ್ಪಿಸುವಂತಾಗಬೇಕು.

ಈ ಶಿಕ್ಷಣ ಪದ್ಧತಿಯಲ್ಲಿ ಹಲವು ವಿಶೇಷ ಲಕ್ಷಣಗಳು ಕಂಡುಬರುತ್ತವೆ. ಪ್ರಯೋಗ ಮಂದಿರದ ವೈಯಕ್ತಿಕ ಶಿಕ್ಷಣಕ್ರಮವಿದಾದರೂ ಸಾಮೂಹಿಕವಾಗಿ ಮಕ್ಕಳನ್ನು ಸೇರಿಸಿಕೊಂಡು ಬೋಧಿಸುವ ಅವಕಾಶ ಕಲ್ಪನೆಯೂ ಇದೆ. ಉಪಾಧ್ಯಾಯರು ಆಯಾ ಪ್ರಯೋಗ ಮಂದಿರದಲ್ಲಿರುವುದರಿಂದ ಮಕ್ಕಳು ತಮ್ಮ ಅಭ್ಯಾಸವನ್ನೂ ಪ್ರಯೋಗಗಳನ್ನೂ ಆರಂಭಿಸಿದಂತೆ ಆವಶ್ಯಕವಾದ ಸಲಹೆ ಸಹಕಾರಗಳನ್ನು ಅವರಿಂದ ಪಡೆಯಲು ಒಬ್ಬೊಬ್ಬ ವಿದ್ಯಾರ್ಥಿಗೂ ಅನುಕೂಲ. ಆಗ, ಹೇಳಿದ್ದನ್ನು ಗ್ರಹಿಸುವುದರ ಬದಲು ಮಾಡಿ ಅನುಭವದಿಂದ ತಿಳಿದುಕೊಳ್ಳುವ ಅವಕಾಶವಿದೆ. ಅತಿ ಪ್ರತಿಭಾವಂತರಾಗಲಿ, ಸಾಧಾರಣರಾಗಲಿ, ಹಿಂದುಳಿದವರಾಗಲಿ, ಬುದ್ಧಿ ವಿಕಲರಾಗಲಿ, ಮಡ್ಡರಾಗಲಿ–ಅವರವರ ಪ್ರತಿಭೆಯ ಮಟ್ಟಕ್ಕೊಪ್ಪುವಂತೆ, ಶಕ್ತಿ ಸಾಮರ್ಥ್ಯಗಳಿಗೆ ಸಾಧ್ಯವಾಗುವಂತೆ, ಅವರವರ ಅಭಿರುಚಿ ಆಸಕ್ತಿಗಳಿಗೆ ಅನುಕೂಲಿಸುವಂತೆ ಶಿಕ್ಷಣವನ್ನು ಸಾಧಿಸಲು ಅನುಕೂಲ. ಏಕೆಂದರೆ ಎಲ್ಲರ ಕಡೆಗೂ ಉಪಾಧ್ಯಾಯರು ಗಮನ ಕೊಡುತ್ತಾರೆ; ಯಾರನ್ನೂ ನಿರ್ಲಕ್ಷಿಸುವಂತಿಲ್ಲ.

ಎಲ್ಲ ನೂತನ ಪದ್ಧತಿಗಳಂತೆ ಇದರಲ್ಲೂ ಮಕ್ಕಳಿಗೆ ಹೆಚ್ಚು ಸ್ವಾತಂತ್ರ್ಯವಿದೆ. ಆದರೆ ಮಗು 'ಬೇಕಾದಂತೆ ನಡೆಯುವ' ಸ್ವಾತಂತ್ರ್ಯವಲ್ಲ: ತನಗಾಸಕ್ತಿಯಿರುವ ವಿಷಯವನ್ನು ತನ್ನ ಶಕ್ತಿ ಸಾಮರ್ಥ್ಯಗಳಿಗೊಪ್ಪುವಂತೆ ಮಾಡಿಕೊಂಡು ಹೋಗುವ ಸ್ವಾತಂತ್ರ್ಯ ಮಾತ್ರ. ಅಂಥ ಆಸಕ್ತಿಯಿಂದ ಕೆಲಸಮಾಡಿದರೆ ತಾನೆ ಮಕ್ಕಳು ಪೂರ್ಣ ಮನಸ್ಸಿನಿಂದ ಅನುಭವಗಳನ್ನು ಪಡೆಯುವುದು? ಇದರಲ್ಲಿ ತರಗತಿಯ ವಿಂಗಡನೆಯಿಲ್ಲ; ನಿಯಮಿತ ವೇಳಾಪಟ್ಟಿಯಿಲ್ಲ; ಆದರೆ, ಆರಂಭಿಸಿದ ಉದ್ಯಮವನ್ನು ಇಷ್ಟು ಕಾಲದಲ್ಲಿ ಮುಗಿಸಬೇಕೆಂದು ಮಾತ್ರ ನಿಯಮವುಂಟು. ವಿದ್ಯಾರ್ಥಿಗಳು ಯಾವುದಾದರೂ ಒಂದು ಪ್ರಯೋಗವನ್ನು ಆಸಕ್ತಿಯಿಂದ ಮಾಡುತ್ತಿರುವಾಗ ಗಂಟೆ ಹೊಡೆದು ಅದನ್ನಲ್ಲಿಗೇ, ಮುಗಿಯದಿದ್ದರೂ ಮೊಟಕುಮಾಡುವ ಅನಿವಾರ್ಯ ಇಲ್ಲಿಲ್ಲ; ಹಿಡಿದ ಕೆಲಸವನ್ನು ತಮ್ಮ ತಮ್ಮ ಶಕ್ತಿಗೊಪ್ಪುವಂತೆ, ತಮಗೆ ಬೇಕಾದಷ್ಟು ಕಾಲಾವಕಾಶವನ್ನು ತೆಗೆದುಕೊಂಡು ಮಾಡುತ್ತ ಮುಂದುವರಿಸಬಹುದು. ಮಧ್ಯ ಕಾಲದಲ್ಲಿ ಗಂಟೆ ಹೊಡೆದು ಅವರ ಆಸಕ್ತಿಗೆ ಭಂಗ ತರುವ, ಅಲ್ಲಿನವರೆಗೂ ಉಪಯೋಗಿಸಿಕೊಂಡ ಮನಶ್ಶಕ್ತಿಯನ್ನು ವ್ಯರ್ಥಗೊಳಿಸುವ ಸನ್ನಿವೇಶ ಇಲ್ಲಿಲ್ಲ.

ವೈಯಕ್ತಿಕ ಪ್ರತ್ಯೇಕ ಶಿಕ್ಷಣ ಈ ಕ್ರಮದ ಮೂಲಮಂತ್ರವಾದರೂ ಸಾಮಾಜಿಕ ಜೀವನದ ಸೌಲಭ್ಯವೂ ಉಂಟು. ಸಾಂಪ್ರದಾಯಿಕ ಶಾಲೆಗಳಲ್ಲಿ ಎಲ್ಲ ಒಟ್ಟಾಗಿ ಕುಳಿತು ಪಾಠ ಕೇಳುವಂತಿದ್ದರೂ ಅವರವರಷ್ಟಕ್ಕೆ ಮಾತ್ರ ಅವರು ಕೇಳುತ್ತ ಕುಳಿತಿರುವರು; ಒಬ್ಬರ ಹವ್ಯಾಸ ಇನ್ನೊಬ್ಬರಿಗಿರುವುದಿಲ್ಲ. ಡಾಲ್ಟನ್ ಕ್ರಮದಲ್ಲಿ ಪ್ರತ್ಯೇಕವಾಗಿ ವಿದ್ಯಾರ್ಥಿಗಳು ಒಂದೇ ಪ್ರಯೋಗ ಮಂದಿರದಲ್ಲಿ ಅಭ್ಯಾಸ ಮಾಡುತ್ತಿರುತ್ತಾರೆ; ಅವರಲ್ಲಿ ಕೆಲವರು ವಿಷಯದ ಅಭ್ಯಾಸದಲ್ಲಿ ಮುಂದುವರಿದವರು; ಮತ್ತೆ ಕೆಲವರು ಆರಂಭದೆಸೆಯವರು. ಎಂದರೆ ಒಬ್ಬರು ಇನ್ನೊಬ್ಬರಿಗೆ ಸಹಾಯ ಮಾಡಲು ಅವಕಾಶವುಂಟು. ಚಿಕ್ಕವರು ದೊಡ್ಡವರನ್ನು ಸಲಹೆ ಕೇಳುತ್ತಾರೆ; ಕಲಿತವರು ಹೊಸಬರಿಗೆ ಸಹಾಯ ನೀಡುತ್ತಾರೆ. ಆದ್ದರಿಂದ ಒಬ್ಬೊಬ್ಬರಲ್ಲೂ ಅನ್ಯೋನ್ಯಭಾವ ಬೆಳೆಯಲು ಒಳ್ಳೆಯ ಅವಕಾಶವಿದೆ. ನಿತ್ಯ ಜೀವನದಲ್ಲೂ ಇದೇ ರೀತಿಯ ಸಂಪರ್ಕವಿರುವುದರಿಂದ ತರಗತಿಯಲ್ಲೂ ಜೀವನದ ನಿಜಸ್ವರೂಪ ಪ್ರತಿಬಿಂಬಿಸಿದಂತಾಗುತ್ತದೆ. ಆರ್ಷೇಯ ಶಿಕ್ಷಣ ಕ್ರಮದಲ್ಲಿ ಸಂಸ್ಕೃತಿ ಸಾಧನೆಗೇ ಹೆಚ್ಚಿನ ಅವಕಾಶವುಂಟೆಂದೂ, ನೂತನ ಶಿಕ್ಷಣ ಕ್ರಮಗಳಲ್ಲಿ ಅನುಭವ ಸಾಧನೆಗೇ ಹೆಚ್ಚಿನ ಅವಕಾಶವುಂಟೆಂದೂ ಟೀಕಿಸುವುದುಂಟು: ಡಾಲ್ಟನ್ ಕ್ರಮದಲ್ಲಾದರೆ ಇವೆರಡಕ್ಕೂ ತಕ್ಕಷ್ಟು ಪ್ರಾಧಾನ್ಯವುಂಟು.

ಈ ಕ್ರಮದಲ್ಲಿ ತರಗತಿಯ ಸಂಪ್ರದಾಯವಿಲ್ಲದಿದ್ದರೂ 'ಫಾರಂ'ಗಳು ಇವೆ. ಅಲ್ಲಿ ವಿಷಯವನ್ನು ಎಲ್ಲರೂ ಅಭ್ಯಾಸಿಸಬೇಕು. ಆಗ ಉಪಾಧ್ಯಾಯರು ವೈಯಕ್ತಿಕವಾಗಿ ಗಮನ ಕೊಡುತ್ತಿರುತ್ತಾರೆ. ಸ್ವತಃ ಪ್ರಯತ್ನಪಟ್ಟು ಕಲಿಯುವ ಸನ್ನಿವೇಶ ಅಲ್ಲಿ ವಿದ್ಯಾರ್ಥಿಗಳಿಗಿದೆ. ಅದಕ್ಕಾವಶ್ಯಕವಾದ ಉಪಕರಣಗಳು ಸಜ್ಜಾಗಿ ಅಲ್ಲಿ ಜೋಡಿಸಿವೆ. ಪಠ್ಯವಸ್ತು ಸಾಮಾನ್ಯ ಶಾಲೆಗಳ ವಿಷಯಗಳ ಪಟ್ಟಿಯಂತಿರದೆ ಹಲವು ಉದ್ಯಮಗಳಾಗಿ ವಿಂಗಡವಾಗಿದೆ. ಒಬ್ಬೊಬ್ಬ ವಿದ್ಯಾರ್ಥಿಗೂ ಒಂದೊಂದು ಉದ್ಯಮವನ್ನು ಕೊಟ್ಟು ಇಷ್ಟು ದಿನಗಳಲ್ಲಿ ಮುಗಿಸಬೇಕೆಂದು ಗೊತ್ತುಮಾಡುತ್ತಾರೆ. ವಿದ್ಯಾರ್ಥಿಗಳು ಜಾಗ್ರತೆ ಅದನ್ನು ಮುಗಿಸಿದರೆ ಹೊಸ ಉದ್ಯಮವನ್ನು ಆರಂಭಿಸಬಹುದೆಂದು ಉತ್ಸಾಹದಿಂದ ಅದನ್ನು ಮಾಡಿ ಮುಗಿಸಲು

ಯತ್ನಿಸುತ್ತಾರೆ. ಕಡ್ಡಾಯವಾಗಿ ಇಷ್ಟೇ ಕಾಲ ಕೆಲಸ ಮಾಡಬೇಕೆಂಬ ನಿಯಮವಿಲ್ಲದಿದ್ದರೂ ಬೇಗ ಮುಗಿಸಿದರೆ ತನಗೇ ಅನುಕೂಲವೆಂಬುದು ವಿದ್ಯಾರ್ಥಿಗೇ ತಿಳಿದುಹೋಗುತ್ತದೆ. ಏಕೆಂದರೆ ಅದನ್ನು ಮುಗಿಸುವ ಭಾರ ಅವನಮೇಲೇ ಬಿದ್ದಿದೆ; ಉಪಾಧ್ಯಾಯರ ಮೇಲಲ್ಲ. ಸಣ್ಣ ವಯಸ್ಸಿನಲ್ಲಿ ಮೊದಮೊದಲು ಒಂದು ವಾರಕ್ಕಾಗುವಷ್ಟು ಪಾಠವನ್ನು ಗೊತ್ತುಮಾಡಿಕೊಡುವರು. ವಯಸ್ಸು ಹೆಚ್ಚಿದಂತೆ ತಿಂಗಳುಗಟ್ಟಲೆ ಪಾಠವನ್ನೂ ಉದ್ಯಮವನ್ನೂ ಗೊತ್ತುಮಾಡಿಕೊಡುವರು. ಅದು ಮುಗಿದಮೇಲೆ ಮುಂದಿನ ಉದ್ಯಮವನ್ನೋ ಪಾಠವನ್ನೋ ಗೊತ್ತುಮಾಡುವರು. ಕೊಟ್ಟಿರುವ ಪಾಠ ನಿಯಮಿತ ಕಾಲದೊಳಗೇ ಮುಗಿಯಬೇಕೆಂದು ಕಡ್ಡಾಯವುಂಟು; ಆದರೆ ಇಂಥ ವಿಷಯವನ್ನು ಇಂಥ ಕಾಲದಲ್ಲೇ ಮಾಡಬೇಕೆಂಬ ಕಟ್ಟಿಲ್ಲ: ತನಗನುಕೂಲವೆನಿಸಿದ ವಿಷಯವನ್ನು ಮನಬಂದ ಕಾಲದಲ್ಲಿ ಸಾಧ್ಯವಾದಷ್ಟು ಕಾಲದ ತನಕ ಅಭ್ಯಾಸ ಮಾಡುವ ಅವಕಾಶವಿದೆ. ಆದರೆ ನಿಯಮಿತ ಕಾಲದೊಳಗಾಗಿ ಮುಗಿಸಬೇಕೆಂಬುದು ಅವನ ಮನಸ್ಸಿನಲ್ಲಿದ್ದು ಸಕಾಲದಲ್ಲಿ ಮುಗಿಸಲು ಪ್ರೋತ್ಸಾಹಿಸುತ್ತಿರುವುದರಿಂದ ತೀರ ಅಕ್ರಮಗಳು ತಲೆದೋರುವಂತಿಲ್ಲ. ವಿದ್ಯಾರ್ಥಿಗಳು ಅವರವರಿಗೆ ಸಾಧ್ಯವಾಗುವ ವೇಗದಲ್ಲಿ ಅಭ್ಯಾಸ ಮಾಡುತ್ತಿರಬಹುದು; ಎಂದು ಬೇಕಾದರೂ ಉಪಾಧ್ಯಾಯರು ಸಹಾಯ ನೀಡಲು ಸಿದ್ಧರಾಗಿರುವರು.

ಈಚೆಗೆ ಡಾಲ್ಟನ್ ಕ್ರಮದಲ್ಲಿ ಅರ್ಧ ಕಾಲವನ್ನು ಪ್ರಯೋಗಗಳಿಗೂ ಇನ್ನರ್ಧವನ್ನು ತರಗತಿಯ ಸಾಮೂಹಿಕ ಬೋಧನೆಗೂ ವಿನಿಯೋಗಿಸುವ ವಾಡಿಕೆ ಆಚರಣೆಗೆ ಬರುತ್ತಿದೆ.

ಸಾಂಪ್ರದಾಯಿಕ ಶಾಲೆಗಳಂತೆ ಇಲ್ಲಿಯೂ ಬೇರೆ ಬೇರೆ ಪಠ್ಯವಿಷಯಗಳುಂಟು. ಭಾಷೆ, ಗಣಿತ, ಚರಿತ್ರೆ, ಭೂಗೋಳ ಮತ್ತು ವಿಜ್ಞಾನ ಅವುಗಳಲ್ಲಿ ಮುಖ್ಯವಾದವು; ಸಂಗೀತ, ಗೃಹವಿಜ್ಞಾನ, ಅಂಗಸಾಧನೆ, ದೈಹಿಕ ಶಿಕ್ಷಣ—ಇವು ಗೌಣವಾದವು, ಮತ್ತು ಪರೀಕ್ಷೆಗೆ ಬರತಕ್ಕವಲ್ಲ. ಆಯಾ ವಿಷಯಗಳಿಗೂ ಒಂದೊಂದು ಪ್ರಯೋಗ ಮಂದಿರವೂ, ಆವಶ್ಯಕವಾದ ಉಪಕರಣಗಳೂ, ಗ್ರಂಥಗಳೂ, ಭೂಪಟಗಳೂ, ಚಿತ್ರಪಟಗಳೂ ಇರುತ್ತವೆ. ಇಂಥ ಪ್ರಯೋಗ ಮಂದಿರದಲ್ಲಿ ಪ್ರಯೋಗ ನಡೆಸಿ ವಿದ್ಯಾರ್ಥಿಗಳೇ

ಕಲಿಯಬೇಕೆಂದಮೇಲೆ ಉಪಾಧ್ಯಾಯರ ಕೆಲಸವಾವುದೆಂಬ ಪ್ರಶ್ನೆಯೇಳ ಬಹುದು. ಅಲ್ಲಿನ ಉಪಾಧ್ಯಾಯರಲ್ಲಿ ಒಬ್ಬೊಬ್ಬರೂ ಒಂದೊಂದು ವಿಷಯ ದಲ್ಲಿ ಪ್ರಾವೀಣ್ಯತೆ ಪಡೆದಿರುವರು. ಅವರು ತಮ್ಮ ವಿಷಯದ ಪ್ರಯೋಗ ಮಂದಿರದಲ್ಲಿರುತ್ತಾರೆ; ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿರುವಾಗ ಅದಕ್ಕೆ ಆವಶ್ಯಕವಾದ ಶಾಂತ ಸನ್ನಿವೇಶ ಮಂದಿರದಲ್ಲಿ ನೆಲಸುವಂತೆ ನೋಡಿಕೊಳ್ಳು ತ್ತಾರೆ; ಪ್ರಯೋಗ ನಡಸುವಾಗ ಉಪಕರಣಗಳ ಉಪಯೋಗವನ್ನು ತಿಳಿಸಿ ಕೊಡುತ್ತಾರೆ; ಚಿತ್ರಗಳನ್ನೂ ಇತರ ವಸ್ತುಗಳನ್ನೂ ಅಭ್ಯಾಸಕ್ಕೆ ಉಪ ಯೋಗಿಸಿಕೊಳ್ಳುವ ರೀತಿಯನ್ನು ವಿವರಿಸುತ್ತಾರೆ: ಒಂದು ವಿಷಯವನ್ನು ಅಭ್ಯಾಸಿಸುವಾಗ ತಿಳಿಯದ ಅಂಶಗಳನ್ನು ವಿವರಿಸುವರು; ಪ್ರಯೋಗವನ್ನು ಆರಂಭಿಸುವ ಕ್ರಮವನ್ನು ತೋರಿಸುವರು; ವಿದ್ಯಾರ್ಥಿಗಳು ಕಾರ್ಯವನ್ನು ಆರಂಭಿಸುವಾಗ ಮಾರ್ಗದರ್ಶನ ಮಾಡುವರು; ಕೊಟ್ಟಿರುವ ಪಾಠವನ್ನೇ ಆಗಲಿ ಉದ್ಯಮವನ್ನೇ ಆಗಲಿ ಆರಂಭಿಸಿ ಕಲಿಯಲು ಉಚಿತವಾದ ಮಾರ್ಗ ವನ್ನೂ ತಿಳಿಸುವರು; ಮಾರ್ಗ ತಪ್ಪಿದಾಗ ಅಥವಾ ಆವಶ್ಯಕವೆನಿಸಿದಾಗ ಉಪಾಧ್ಯಾಯರು ಅವರ ಮುಂದಿರುವ ಸಮಸ್ಯೆಯನ್ನು ಪುನಃ ವಿವರಿಸಿ ಉಚಿತವಾದ ಮಾರ್ಗವನ್ನು ತೋರಿಸುವರು; ಹಲವಾರು ಮಂದಿ ಒಂದು ಪಾಠವನ್ನೋ ಉದ್ಯಮವನ್ನೋ ಮುಗಿಸಿದ ಕೂಡಲೇ ಅವರನ್ನೆಲ್ಲ ಒಂದು ಕಡೆ ಸೇರಿಸಿ ಅವರಲ್ಲೇ ಚರ್ಚೆಗೆ ಏರ್ಪಡಿಸುವರು.

ಹೀಗೆಯೇ ಎಲ್ಲ ವಿಷಯುಗಳಿಗೂ ಒಂದೊಂದು ಪ್ರಯೋಗ ಮಂದಿರ ವಿರುತ್ತದೆ; ಅಲ್ಲಿ ಆ ವಿಷಯದಲ್ಲಿ ಪ್ರಾವೀಣ್ಯತೆ ಪಡೆದಿರುವ ಉಪಾಧ್ಯಾಯರು ಮಾರ್ಗದರ್ಶನ ಮಾಡಲು ಕಾದಿರುತ್ತಾರೆ. ಆದರೆ ಅವರು ಆ ಮಂದಿರ ದಲ್ಲಿರುವುದು ತರಗತಿಯ ಬೋಧನೆಗಲ್ಲ: ಅವರವರ ಆವಶ್ಯಕತೆಯನ್ನು ಅರಿತು ವೈಯಕ್ತಿಕವಾಗಿ ಸಹಾಯ ಮಾಡುವುದಕ್ಕೆ ಮಾತ್ರ. ಒಂದೊಂದು ವಿಷಯಕ್ಕೂ ಒಂದೊಂದು ಮಂದಿರವಿದ್ದರೂ ಒಂದು ತರಗತಿಯನ್ನು ನಡಸು ವುದಕ್ಕಲ್ಲ: ಅಲ್ಲಿ ಎಲ್ಲ ಅಂತಸ್ತಿನ ವಿದ್ಯಾರ್ಥಿಗಳೂ ಇರುತ್ತಾರೆ. ಅವರವರಿ ಗೊಪ್ಪುವ ಅಭ್ಯಾಸದಲ್ಲಿ ತೊಡಗಿರುತ್ತಾರೆ. ಒಂದೇ ವಿಷಯದಲ್ಲಿ ಬೇರೆ ಬೇರೆ ಭಾಗಗಳನ್ನು ಅಭ್ಯಾಸ ಮಾಡುತ್ತಿರುತ್ತಾರೆ. ಎಂದರೆ ಆ ವಿಷಯದಲ್ಲಿ ಭಿನ್ನ ಅಂತಸ್ತಿನ ಶಿಕ್ಷಣ ಪಡೆದ ವಿದ್ಯಾರ್ಥಿಗಳು ಅಲ್ಲಿ ಶಿಕ್ಷಣ ಪಡೆಯುತ್ತಿರುತ್ತಾರೆ.

ಈ ಕ್ರಮದ ಶಿಕ್ಷಣ ಯಶಸ್ವಿಯಾಗಬೇಕಾದರೆ ಹಲವು ಆವಶ್ಯಕತೆಗಳ ಕಡೆ ವ್ಯವಸ್ಥಾಪಕರು ಗಮನ ಕೊಡಬೇಕು. ಅವನ್ನಿಲ್ಲಿ ಸ್ಥೂಲವಾಗಿ ವಿವರಿಸಿದೆ:

೧. ಒಂದೊಂದು ವಿಷಯದ ಪ್ರಯೋಗವುಂದಿರದಲ್ಲೂ ಆವಶ್ಯಕವೆನಿಸುವ ಪುಸ್ತಕಗಳು, ಭೂಪಟಗಳು, ಚಿತ್ರಪಟಗಳು ಮತ್ತು ಪ್ರಯೋಗ ನಡಸಲು ಆವಶ್ಯಕವಾದ ಉಪಕರಣಗಳು ಎಲ್ಲ ವಿದ್ಯಾರ್ಥಿಗಳಿಗೂ ಸಾಕಷ್ಟು ಇರಬೇಕು; ಅವನ್ನು ಒದಗಿಸಿಕೊಳ್ಳಲು ಹೆಚ್ಚು ಹಣ ಬೇಕಾಗುವುದು.

೨. ಅಲ್ಲಿನ ಉಪಾಧ್ಯಾಯರು ಒಂದು ವಿಷಯದಲ್ಲಿ ಪ್ರವೀಣರಾಗಿರುವುದರ ಜೊತೆಗೆ ಆ ನೂತನ ಕ್ರಮದಲ್ಲಿ ಶಿಕ್ಷಣ ಕೊಡುವುದನ್ನೂ ಅರಿತಿರಬೇಕು: ನಿರಂತರವೂ ಅಲ್ಲಿ ಬೋಧಿಸುವ ಆವಶ್ಯಕವಿಲ್ಲದಿದ್ದರೂ, ಯಾರಿಗೆ ಎಷ್ಟೆಷ್ಟು ಸಲಹೆ ಸಹಕಾರಗಳು ಆವಶ್ಯಕವೆಂಬುದನ್ನು ಕಾದು ನೋಡುತ್ತಿದ್ದು ವಿದ್ಯಾರ್ಥಿಗಳ ಅಭ್ಯಾಸ ಕಾರ್ಯದಲ್ಲಿ ಕೌಶಲ್ಯದಿಂದ ನೆರವಾಗತಕ್ಕ ಚತುರ ಶಿಕ್ಷಕರು ಆವಶ್ಯಕ.

೩. ವಿದ್ಯಾರ್ಥಿಗಳಿಗೆ ಅಭ್ಯಾಸದ ಪಾಠವನ್ನಾಗಲಿ ಉದ್ಯಮವನ್ನಾಗಲಿ ಹಂಚುವಾಗ ಎಚ್ಚರಿಕೆಯಿಂದಿರಬೇಕು. ಈ ಹಂಚಿಕೆ ಮಾಧ್ಯಮಿಕ ಶಾಲೆಯ ಅಂತಸ್ತಿನಲ್ಲಿ ವಾರಗಟ್ಟಲೆಯೂ, ಪ್ರೌಢ ಶಾಲೆಗಳಲ್ಲಿ ತಿಂಗಳುಗಟ್ಟಲೆಯೂ ಇರಬಹುದು; ಉಪಾಧ್ಯಾಯರು ಹಂಚಿಕೆಯನ್ನು ಎಷ್ಟು ಚತುರತೆಯಿಂದ ಮಾಡುವರೋ ಅಷ್ಟೂ ಯಶಸ್ವಿಯಾಗಿ ಶಿಕ್ಷಣ ನಡೆಯಬಲ್ಲದು. ಹಾಗಾದರೆ ಹಂಚಿಕೆಗಳೆಂದರೇನು ಎಂಬ ಪ್ರಶ್ನೆಯೇಳುತ್ತದೆ. ಅದು ಪುಸ್ತಕದ ಅಧ್ಯಾಯದ ಹೆಸರನ್ನು ಅನುಸರಿಸುವುದಲ್ಲ; ಪಾಠದ ಅಥವಾ ಉದ್ಯಮಗಳ ಹೆಸರುಗಳೂ ಅಲ್ಲ: ಅವು ವಿದ್ಯಾರ್ಥಿಗಳು ಬಿಡಿಸಬೇಕಾಗಿರುವ ನಿರ್ದಿಷ್ಟ ಸಮಸ್ಯೆಗಳಂತಿರಬೇಕು, ಉತ್ತರ ಬರೆಯಬೇಕಾದ ಪ್ರಶ್ನೆಗಳಂತಿರಬೇಕು, ವಿವರಿಸಬೇಕಾದ ಯೋಜನೆಗಳಂತಿರಬೇಕು. ಆ ಕಾರ್ಯವನ್ನು ಸಾಧಿಸಬೇಕಾದರೆ ವಿದ್ಯಾರ್ಥಿಗಳಿಗೆ ಸಹಾಯವಾಗತಕ್ಕ ಪುಸ್ತಕದ ಭಾಗವನ್ನೂ ಆ ವಿಷಯದ ಆಳ ಮತ್ತು ವ್ಯಾಪ್ತಿಯನ್ನೂ ಆ ಹಂಚಿಕೆಯೊಡನೆಯೇ ತಿಳಿಸಬೇಕು; ಪ್ರಯೋಗಗಳಾದರೆ ಅವನ್ನು ಮಾಡಬೇಕಾದ ರೀತಿಯನ್ನೂ ಉಪಕರಣಾದಿ ಆವಶ್ಯಕತೆಯನ್ನೂ ಸೂಚಿಸಬೇಕು.

ಅವರು ಪ್ರಯತ್ನಪಟ್ಟು ಅರಿತುಕೊಳ್ಳಬೇಕಾದ ವಿಷಯ, ಬಿಡಿಸಬೇಕಾದ ಸಮಸ್ಯೆ, ಮಾಡಬೇಕಾದ ಪ್ರಯೋಗ—ಇವನ್ನೆಲ್ಲ ಆ ಹಂಚಿಕೆಗಳು ನಿರ್ದಿಷ್ಟರೂಪದಲ್ಲಿ ಪ್ರದರ್ಶಿಸುವಂತಿರಬೇಕು; ಸಾಧ್ಯವಾದರೆ ಅವನ್ನು ಉಪಭಾಗಗಳನ್ನಾಗಿಯೂ ವಿಂಗಡಿಸಿಕೊಡಬೇಕು; ಒಂದೊಂದು ಭಾಗವೂ ಇನ್ನೊಂದು ಭಾಗಕ್ಕೆ ವಿದ್ಯಾರ್ಥಿಗಳ ಗಮನವನ್ನು ಸೆಳೆಯುವಂತೆ ಆ ವಿಭಾಗಗಳು ರೂಪುಗೊಂಡಿರಬೇಕು. ಒಂದು ಹಂಚಿಕೆಯ ಅಭ್ಯಾಸ ಮುಗಿದೊಡನೆ ಕೊಡುವ ಇನ್ನೊಂದು ಹಂಚಿಕೆ ಹಿಂದಿನ ಹಂಚಿಕೆಯಿಂದ ಮುಂದುವರಿದ ಭಾಗದಂತಿರಬೇಕು. ಬೇರೆ ಬೇರೆ ಉಪಾಧ್ಯಾಯರು ಅವರವರ ವಿಷಯಗಳಲ್ಲಿ ಹಂಚಿಕೆಯನ್ನು ಕೊಡುವಾಗ ಎಲ್ಲರೂ ಒಟ್ಟುಗೂಡಿ ವಿದ್ಯಾರ್ಥಿಗಳು ಅಭ್ಯಾಸಿಸಬೇಕಾದ ಬೇರೆಬೇರೆ ವಿಷಯಗಳಲ್ಲಿ ಸಂಬಂಧವೂ ಸಮಂಜಸವೂ ಇರುವಂತೆ ಹಂಚಿಕೆ ಕೊಡಬೇಕು. ಒಬ್ಬೊಬ್ಬ ವಿದ್ಯಾರ್ಥಿಗೂ ಪ್ರತ್ಯೇಕವಾಗಿ ವಿಷಯವನ್ನು ಹಂಚಿಕೊಡಬೇಕಾಗಿರುವುದರಿಂದ ಅವರವರ ಶಿಕ್ಷಣಾಭಿವೃದ್ಧಿಯನ್ನೂ ಶಕ್ತಿಸಾಮರ್ಥ್ಯಗಳನ್ನೂ ಪರಿಚಯಮಾಡಿಕೊಂಡು ಅವಕ್ಕೊಪ್ಪುವಂತೆ ಹಂಚಬೇಕು. ಪ್ರತಿಭಾವಂತರಿಗೆ ವಿಷಯದ ಆಳವಾದ ಅಭ್ಯಾಸವನ್ನೂ ಸಾಧಾರಣ ಶಕ್ತಿಯವರಿಗೆ ಸರಳ ರೀತಿಯದನ್ನೂ ಹಂಚಿಕೊಡಬೇಕು.

೪. ವಿದ್ಯಾರ್ಥಿಗಳ ಶಿಕ್ಷಣಾಭಿವೃದ್ಧಿಯನ್ನಳೆಯಲು ಡಾಲ್ಟನ್ ಕ್ರಮದಲ್ಲಿ ವಿಶೇಷ ರೀತಿಯ ಪರೀಕ್ಷಾ ಕ್ರಮವನ್ನನುಸರಿಸುವರು ಒಬ್ಬೊಬ್ಬ ವಿದ್ಯಾರ್ಥಿಗೂ ಮೂರು ಮೂರು ಪಟಗಳನ್ನಿಟ್ಟಿರುವರು: ಒಂದು ವಿದ್ಯಾರ್ಥಿಯದು, ಇನ್ನೊಂದು ಆ ವಿಷಯದ್ದು, ಮೂರನೆಯದು ವಿದ್ಯಾರ್ಥಿ ಇಡೀ ಶಾಲಾ ಜೀವನದಲ್ಲಿ ಪಡೆದ ಶಿಕ್ಷಣವನ್ನು ಸೂಚಿಸತಕ್ಕದ್ದು. ಮೊದಲನೆಯದರಲ್ಲಿ ವಿದ್ಯಾರ್ಥಿ ತಾನು ಮುಗಿಸಿದ ಉದ್ಯಮಗಳನ್ನು ಗುರುತಿಸಿಕೊಳ್ಳಬೇಕು. ಹಾಗೆ ಗುರುತಿಸುವಾಗ ಆಯಾ ಉಪಾಧ್ಯಾಯರಿಗೆ ತೋರಿಸಿ ಗುರುತಿಸಬೇಕು; ಎರಡನೆಯದರಲ್ಲಿ, ಒಬ್ಬೊಬ್ಬ ಉಪಾಧ್ಯಾಯರೂ ತಮ್ಮ ವಿಶೇಷ ವಿಷಯದಲ್ಲಿ ವಿದ್ಯಾರ್ಥಿ ಪಡೆದಿರುವ ಶಿಕ್ಷಣಾಭಿವೃದ್ಧಿಯನ್ನು ಗುರುತಿಸಿಕೊಳ್ಳುವರು. ಮೂರನೆಯದರಲ್ಲಿ ಮುಖ್ಯೋಪಾಧ್ಯಾಯರು ಆ ವಿದ್ಯಾರ್ಥಿ ಎಲ್ಲ ವಿಷಯಗಳಲ್ಲೂ ಸಾಧಿಸುತ್ತಿರುವ ಶಿಕ್ಷಣಾಭಿವೃದ್ಧಿಯನ್ನು ಗುರುತಿಸಿಕೊಂಡು ಅವನು ಹೇಗೆ ಕಲಿಯುತ್ತಿದ್ದಾನೆಂದು ಪರಿಶೀಲಿಸುತ್ತಿರುವರು.

ಮಾಂಟೆಸೋರಿ ಶಿಕ್ಷಣಕ್ರಮವನ್ನು ನಮ್ಮ ನಾಡಿನ ಚಿಕ್ಕ ಮಕ್ಕಳ ಶಾಲೆಗಳಲ್ಲಿಯೂ, ಉದ್ಯಮ ಶಿಕ್ಷಣ ಪದ್ಧತಿಯನ್ನು ಪ್ರಾಥಮಿಕ ಶಾಲೆಗಳಲ್ಲೂ ಆರಂಭಿಸಬಹುದಾದರೆ ಡಾಲ್ಟನ್ ಕ್ರಮವನ್ನು ಮಾಧ್ಯಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ಆಚರಣೆಗೆ ತರಬಹುದು. ಆ ಕ್ರಮಗಳನ್ನು ನಮ್ಮ ದೇಶದ ಸನ್ನಿವೇಶಗಳಿಗೆ ತಕ್ಕಂತೆ ಮಾರ್ಪಡಿಸಿಕೊಂಡು, ಅವುಗಳಲ್ಲಿ ಅಲ್ಲಿನವರು ಕಂಡಿರಬಹುದಾದ ನ್ಯೂನತೆಗಳನ್ನು ತಿದ್ದಿಕೊಂಡು, ಆಚರಣೆಗೆ ತರಬೇಕಾಗುತ್ತದೆ. ಹಾಗೆ ಏರ್ಪಟ್ಟ ಶಾಲೆಗಳಲ್ಲಿ ಬೆಳಗಿನ ಹೊತ್ತನ್ನು ಸಾಂಪ್ರದಾಯಿಕ ಪಾಠಪ್ರವಚನಗಳಿಗೂ ಮಧ್ಯಾಹ್ನದ ವೇಳೆಯನ್ನು ಪ್ರಯೋಗಗಳಿಗೂ ವಿನಿಯೋಗಿಸಬಹುದು.

ಸುಮಾರು ಮೂರು ದಶಮಾನಗಳಿಂದಲೂ ಈ ರೀತಿಯ ಕೆಲವು ಶಾಲೆಗಳು ಅಮೆರಿಕದಲ್ಲಿ ನಡೆದುಕೊಂಡು ಬರುತ್ತಿವೆ; ಅವುಗಳಲ್ಲಿ ಕೆಲವು ಉತ್ತಮ ಗುಣಗಳಿವೆ: ಪ್ರತಿಯೊಬ್ಬ ಬಾಲಕನೂ ಅವನಿಗೊಪ್ಪುವ ರೀತಿಯಲ್ಲಿ ಕಲಿಯುವ ಅವಕಾಶವಿದೆ; ಇತರ ವಿದ್ಯಾರ್ಥಿಗಳು ಅಭ್ಯಾಸಿಸುತ್ತಿರುವುದನ್ನು ಕಂಡು ತಾನೂ ಕಲಿಯಬೇಕೆಂದು ಪ್ರೇರಕವಾಗುತ್ತದೆ; ಸ್ವತಃ ಚಟುವಟಿಕೆಯಿಂದ ಅನುಭವವನ್ನು ಪಡೆಯುವುದರಿಂದ ಆ ಕಲಿವು ಫಲಪ್ರದವಾಗುತ್ತದೆ; ತನ್ನ ಶಕ್ತಿಸಾಮರ್ಥ್ಯವನ್ನು ನಂಬಿ ಸ್ವಾವಲಂಬನೆಯಿಂದ ಕೆಲಸಮಾಡುವ ಮನೋಭಾವ ಬೆಳೆಯುತ್ತದೆ; ಹಿಡಿದ ಕಾರ್ಯವನ್ನು ಸುವ್ಯವಸ್ಥಿತವಾಗಿ ನಡಸಿ ಮುಗಿಸುವ ಅಭ್ಯಾಸ ಬರುತ್ತದೆ; ಸತ್ಯ ಶ್ರದ್ಧೆಗಳೂ ಬೆಳೆಯುತ್ತವೆ; ಗೈರುಹಾಜರಾದರೆ ತನ್ನನ್ನು ಕೇಳುವವರಿಲ್ಲವಾದರೂ ಅದರಿಂದ ಅಭ್ಯಾಸದಲ್ಲಿ ತಾನು ಹಿಂದೆ ಬಿದ್ದೇನೆಂಬ ಭೀತಿ ಕರ್ತವ್ಯಮುಖನಾಗಲು ಪ್ರೋತ್ಸಾಹಿಸುತ್ತಿರುತ್ತದೆ; ಸಾಂಪ್ರದಾಯಿಕ ರೀತಿಯ ಪಠ್ಯವಸ್ತುವನ್ನಾದರೂ ಈ ಕ್ರಮಕ್ಕೆ ಅನ್ವಯಿಸಿಕೊಳ್ಳಬಹುದು; ಎಲ್ಲವನ್ನೂ ವಿದ್ಯಾರ್ಥಿಗಳು ಉಪಾಧ್ಯಾಯರ ಸಮ್ಮುಖದಲ್ಲಿ ಸ್ವಪ್ರಯತ್ನದಿಂದ ಅಭ್ಯಾಸಿಸಬೇಕಾಗಿರುವುದರಿಂದ ಮನೆಗೆ ಪ್ರತ್ಯೇಕ ಅಭ್ಯಾಸಗಳನ್ನು ಕೊಡುವುದು ತಪ್ಪುತ್ತದೆ; ಶಿಸ್ತಿನ ಆವಶ್ಯಕತೆ ಏಳುವುದೇ ಇಲ್ಲ—ಏಕೆಂದರೆ ಅವರವರು ಅವರವರ ಕೆಲಸಗಳಲ್ಲಿ ಮಗ್ನರಾಗಿ ಆಸಕ್ತಿಯಿಂದ ಅಭ್ಯಾಸಿಸುತ್ತಿರುವಾಗ ಗಲಾಟೆಮಾಡಲು ಅವಕಾಶ ಕಡಮೆ. ಹಾಗೆ ಕೆಲವು ಬಾಲಕರು ದುರಭ್ಯಾಸ ಕಲಿಯುವುದಾದರೆ,

ಅಚಾತುರ್ಯ ನಡೆಯುವುದಾದರೆ ಅವನ್ನು ಸರಿಪಡಿಸಲು ಉಪಾಧ್ಯಾಯರು ಇದ್ದೇ ಇರುತ್ತಾರೆ; ಪ್ರಯೋಗ ಮಂದಿರದಲ್ಲಿ ಒಬ್ಬರೊಡನೊಬ್ಬರು ಸಹಕರಿಸಿ, ಸಹಾಯವನ್ನು ಕೊಟ್ಟು, ಪಡೆದು, ಅಭ್ಯಾಸ ಮಾಡಬೇಕಾದ ಸನ್ನಿವೇಶವಿರುವುದರಿಂದ ಸಮಾಜ ಜೀವನಕ್ಕೆ ಅವಶ್ಯಕವಾದ ಸಹಕಾರ ಸದ್ಭಾವನೆಗಳೂ ಮೊಳೆಯುತ್ತವೆ.

ಆದರೂ ಈ ಪದ್ಧತಿ ಅಷ್ಟಾಗಿ ಬಳಕೆಗೆ ಬರದಿರುವುದನ್ನು ನೋಡಿದರೆ ಅದರಲ್ಲಿ ನ್ಯೂನತೆಗಳೂ ಇರಬೇಕೆನ್ನಿಸುತ್ತದೆ. ವಿದ್ಯಾರ್ಥಿಗಳು ಸ್ವತಂತ್ರವಾಗಿ ಅಭ್ಯಾಸಮಾಡಬೇಕಾಗಿರುವುದರಿಂದ ಪುಸ್ತಕದಲ್ಲಿ ಮುದ್ರಿಸಿರುವುದನ್ನೇ ವೇದವಾಕ್ಯವಾಗಿ ನಂಬುವ ಸ್ವಭಾವ ಬಂದುಬಿಟ್ಟು, ವಿವೇಚನೆ ಕಡಮೆಯಾಗಬಹುದು; ಅಭ್ಯಾಸದಲ್ಲಿ ಆಸಕ್ತಿಯಿಲ್ಲದವರು ಸ್ನೇಹಿತರ ಸಹಾಯದಿಂದಲೇ ಎಲ್ಲವನ್ನೂ ಮಾಡಿ ತಾವು ಏನೂ ಕಲಿಯದೆ ಹೋಗಬಹುದು. ಈ ನ್ಯೂನತೆಗಳನ್ನು ಪರಿಹರಿಸುವುದು ಅಸಾಧ್ಯವಲ್ಲ; ಡಾಲ್ಟನ್ ಶಿಕ್ಷಣಶಾಲೆಯಲ್ಲಿ ಪಾಠ ಪೂರೈಸಿರುವ ಹಲವಾರು ವಿದ್ಯಾರ್ಥಿಗಳನ್ನು ಒಟ್ಟಿಗೆ ಸೇರಿಸಿ ಚರ್ಚೆಯನ್ನು ಏರ್ಪಡಿಸುವ ಪದ್ಧತಿ ಇದ್ದೇ ಇದೆ. ಅದಕ್ಕೆ ಇನ್ನೂ ಹೆಚ್ಚಿನ ಪ್ರಾಧಾನ್ಯತೆ ಕೊಟ್ಟು, ವಿಶದವಾದ ಚರ್ಚೆಗಳನ್ನು ಅಂದಂದು ಏರ್ಪಡಿಸುವುದರಿಂದ ಮೇಲಿನ ನ್ಯೂನತೆಗಳು ಕಡಮೆಯಾಗುವುವು.

ಈ ಪದ್ಧತಿಯ ಮತ್ತೊಂದು ನ್ಯೂನತೆಯೆಂದರೆ, ಮಕ್ಕಳು ಕೇವಲ ಚಿಕ್ಕ ವಯಸ್ಸಿನಲ್ಲೇ ಒಂದು ವಿಷಯಕ್ಕೇ ಕಾಲವನ್ನೆಲ್ಲ ವಿನಿಯೋಗಿಸುತ್ತ ಇತರ ಪಾಠಗಳ ಅಭ್ಯಾಸಕ್ಕೆ ಅಷ್ಟಾಗಿ ಗಮನ ಕೊಡದಿರಬಹುದು. ಅದರಿಂದ ಅವರಿಗೆ ಜೀವನಕ್ಕಾವಶ್ಯಕವಾದ ಇತರ ವಿಷಯಗಳ ಅಭ್ಯಾಸ ಕಡಮೆಯಾಗುತ್ತದೆ. ಕೇವಲ ಮಾಧ್ಯಮಿಕ ಶಾಲೆಯ ವಯಸ್ಸಿನಲ್ಲೇ ಒಂದು ವಿಷಯದಲ್ಲಿ ಆಳವಾದ ವಿಶೇಷ ಶಿಕ್ಷಣಕ್ಕೆ ಪ್ರೋತ್ಸಾಹಿಸುವುದು ವಿಹಿತವಲ್ಲ. ಈ ವಿಷಯದ ಕಡೆ ಮುಖ್ಯೋಪಾಧ್ಯಾಯರು ತಕ್ಕಷ್ಟು ಗಮನಕೊಟ್ಟು ಯಾವ ವಿದ್ಯಾರ್ಥಿಯೇ ಆಗಲಿ ಗೊತ್ತಾಗಿರುವ ಕನಿಷ್ಟಮಟ್ಟದ ಶಿಕ್ಷಣವನ್ನಾದರೂ ಎಲ್ಲ ವಿಷಯಗಳಲ್ಲೂ ಪಡೆಯುವಂತೆ ನೋಡಿಕೊಳ್ಳಬೇಕು. ತಮ್ಮಲ್ಲಿರುವ ಶಿಕ್ಷಣಾಭಿವೃದ್ಧಿಯ ಪಟ್ಟಿಯನ್ನು ಮುಂದಿಟ್ಟುಕೊಂಡು ಏಕ

ಮುಖವಾಗಿ ಮುಂದುವರಿಯುತ್ತಿದ್ದವರಿಗೆ ಇತರ ವಿಷಯಗಳ ಕಡೆಯೂ ತಕ್ಕಷ್ಟು ಗಮನಕೊಡುವಂತೆ ಪ್ರೋತ್ಸಾಹಿಸಬೇಕು. ಪ್ರಯೋಗ ಮಂದಿರ ದಲ್ಲಿರುವ ಉಪಾಧ್ಯಾಯರೂ ಯಾವುದಾದರೂ ಒಂದೇ ವಿಷಯಲ್ಲಿ ಮಿತಿ ಮೀರಿ ಆಳವಾಗಿ ಅಭ್ಯಾಸವನ್ನು ಮುಂದುವರಿಸುವವರನ್ನು ಎಚ್ಚರಿಕೆಯಿಂದ ಪರಿಶೀಲಿಸುತ್ತಿದ್ದು ತಡೆಯಬೇಕು.

ಡಾಲ್ಟನ್ ಶಾಲೆಗಳಲ್ಲಿ ಶಿಸ್ತು ಸುಲಭವಾಗಿ ನೆಲಸುವಂತಿದ್ದರೂ ಉಪಾಧ್ಯಾಯರು ಅದಕ್ಕಾಗಿ ನಿರಂತರವೂ ಕಣ್ಣಿಟ್ಟು ನೋಡುತ್ತಿರಬೇಕು. ಈ ಕ್ರಮದಲ್ಲಿ ಬೋಧಿಸುವುದು ಅವರಿಗೆ ನಿಜವಾಗಿಯೂ ತುಂಬ ಶ್ರಮ ವಾಗುತ್ತದೆ. ಒಬ್ಬೊಬ್ಬರಿಗೂ ವೈಯಕ್ತಿಕವಾಗಿ ಬೋಧಿಸಬೇಕು; ಒಬ್ಬೊಬ್ಬ ರನ್ನೂ ಪ್ರತ್ಯೇಕವಾಗಿ ಪರೀಕ್ಷಿಸಬೇಕು; ಆದ್ದರಿಂದ ಅವರಿಗೆ ತುಂಬ ಶ್ರಮ ವಾಗುತ್ತದೆ. ಉಪಾಧ್ಯಾಯರಿಗೆ 'ಹೆಚ್ಚು ಕೆಲಸ' ಎಂಬುದು ಸಾಂಪ್ರದಾ ಯಿಕ ರೀತಿಯ ಎಲ್ಲ ಶಾಲೆಗಳಿಗೂ ಅನ್ವಯಿಸುತ್ತದೆ; ಕಾಲೇಜಿನಲ್ಲಿ ಮಾತ್ರ ಅಷ್ಟು ಕಷ್ಟವಾಗದಿರಬಹುದು. ಅದನ್ನು ಪರಿಹರಿಸಬೇಕಾದರೆ ಉಪಾ ಧ್ಯಾಯರ ಸಂಖ್ಯೆಯನ್ನು ಹೆಚ್ಚಿಸಬೇಕು. ಇದೇ ಪರಿಹಾರವನ್ನು ಡಾಲ್ಟನ್ ಕ್ರಮಕ್ಕೂ ಅನ್ವಯಿಸಿದರೆ ಉಪಾಧ್ಯಾಯರಿಗೆ ಅತಿ ಶ್ರಮವಾಗುವುದು ತಪ್ಪಬಹುದು.

ಮೇಲಿನ ನ್ಯೂನತೆಗಳಲ್ಲಿ ಕೆಲವು ಪ್ರಧಾನವಾದುವಾದರೂ, ಹಲವನ್ನು ಸುಲಭವಾಗಿ ಪರಿಹರಿಸಬಹುದು. ಅಂಥ ನ್ಯೂನತೆಗಳು ಇಂದಿನ ಸಾಂಪ್ರದಾ ಯಿಕ ಶಾಲೆಗಳಲ್ಲೂ ಕಂಡುಬರುತ್ತಿವೆ. ಸಾಧ್ಯವಾದಮಟ್ಟಿಗೆ ಅವನ್ನು ನಿವಾರಿಸಿಕೊಂಡು ಮೇಲಿನ ಕ್ರಮವನ್ನು ನಮ್ಮ ನಾಡಿನ ಮಾಧ್ಯಮಿಕ ಮತ್ತು ಪ್ರೌಢಶಾಲೆಗಳಲ್ಲಿ ಆಚರಣೆಗೆ ತರಬಹುದು. ಈ ಪದ್ಧತಿಯಲ್ಲಿ ಮಕ್ಕಳ ವ್ಯಕ್ತಿತ್ವದ ಬೆಳವಣಿಗೆಗಿರುವ ಅವಶ್ಯಕವಾದ ಸ್ವಾತಂತ್ರ್ಯವೂ, ವೈಯಕ್ತಿಕ ಬೋಧನ ಸೌಲಭ್ಯವೂ, ಅಧಿಕ ಸಂಖ್ಯೆಯಲ್ಲಿ ವಿದ್ಯಾರ್ಥಿಗಳನ್ನು ಸೇರಿಸಿ ಕೊಂಡು ಸಾರ್ವತ್ರಿಕ ಶಿಕ್ಷಣವನ್ನು ಸಾಧಿಸಲಿರುವ ಅನುಕೂಲವೂ, ಯಾವ ರೀತಿಯ ಪಠ್ಯ ವಿಷಯವನ್ನಾದರೂ ಬಳಸಿಕೊಳ್ಳಬಹುದಾದ ಅವಕಾ ಶವೂ ಈ ಪದ್ಧತಿಯನ್ನು ನೂತನ ಶಿಕ್ಷಣ ಪದ್ಧತಿಗಳಲ್ಲಿ ಪ್ರಧಾನವಾದ ಕ್ರಮವೆನಿಸಿದೆ.

## ೩. ಹೋವರ್ಡ್ ಶಿಕ್ಷಣಪದ್ಧತಿ

ಡಾಲ್ಟನ್ ಪದ್ಧತಿಯನ್ನು ಆರಂಭಿಸಿದ ಹೆಲೆನ್ ಪಾರ್ಕರ್ಸ್ಟರಂತೆ ಮಾಂಟೆಸೋರಿಯವರ ಮತ್ತೊಬ್ಬ ಇಂಗ್ಲಿಷ್ ವಿದ್ಯಾರ್ಥಿನಿಯಾದ ಡಾಕ್ಟರ್ ಓಬ್ರೀನ್ ಹ್ಯಾರಿಸ್ ಎಂಬುವರು ಮತ್ತೊಂದು ನೂತನ ಶಿಕ್ಷಣಕ್ರಮವನ್ನು ಆರಂಭಿಸಿದರು. ಅವರಿಬ್ಬರೂ ಒಬ್ಬ ಗುರುವಿನ ಶಿಕ್ಷಣದಿಂದಲೇ ಸ್ಫೂರ್ತಿ ಪಡೆದುಕೊಂಡಿದ್ದರೂ ತಮ್ಮದೇ ಆದ ಮಾರ್ಗದಲ್ಲಿ ನೂತನ ಕ್ರಮಗಳನ್ನು ರೂಪಿಸಿ ಆಚರಣೆಗೆ ತಂದರು. ಅವರಿಬ್ಬರ ಕ್ರಮಗಳಲ್ಲಿ ಕೆಲವು ಸಾಮ್ಯಗಳು ಕಂಡುಬರುತ್ತವೆ; ಭಿನ್ನತೆಗಳೂ ತೋರಿಬರುತ್ತವೆ. ಇಂಗ್ಲೆಂಡಿನ ಕ್ಲ್ಯಾಪ್ಟನ್ ನಗರದ ಒಂದು ಬಾಲಿಕಾ ಪ್ರೌಢಶಾಲೆಯಲ್ಲಿ ಹ್ಯಾರಿಸ್ ತನ್ನ ನೂತನ ಕ್ರಮವನ್ನು ಮೊದಲು ಆರಂಭಿಸಿದರು. ಆ ಶಾಲೆ ಪ್ರಸಿದ್ಧ ಶಿಕ್ಷಣ ಶಾಸ್ತ್ರಜ್ಞರಾದ ಜಾನ್ ಹೋವರ್ಡರ ಜನ್ಮಸ್ಥಳದ ಸಮೀಪದಲ್ಲಿತ್ತು. ಅದರಿಂದ ಮೊದಲು ಅಲ್ಲಿ ಆರಂಭವಾದ ಆ ಕ್ರಮಕ್ಕೆ ಹೋವರ್ಡ್ ಶಿಕ್ಷಣಪದ್ಧತಿಯೆಂದು ಹೆಸರಾಯಿತು.

ಡಾಲ್ಟನ್ ಪದ್ಧತಿಯಲ್ಲಿ ತರಗತಿಯ ವಿಂಗಡನೆಯನ್ನು ರದ್ದುಗೊಳಿಸಿದ್ದರೆ ಹೋವರ್ಡ್ ಪದ್ಧತಿಯಲ್ಲಿ ಅದನ್ನು ಉಳಿಸಿಕೊಂಡಿದೆ; ಆದರೆ ವೇಳಾ ಪಟ್ಟಿಯಲ್ಲಿ ಅಭ್ಯಾಸಿಸಬೇಕಾದ ವಿಷಯಗಳು ಬಹುವಾಗುವುವೆಂದು ಒಂದೊಂದು ಟರ್ಮಿನಲ್ಲೂ ಅಭ್ಯಾಸಿಸಬೇಕಾದ ವಿಷಯಗಳ ಸಂಖ್ಯೆಯನ್ನು ಕಡಮೆ ಮಾಡಿದ್ದಾರೆ; ಇನ್ನಿತರ ನೂತನ ಪದ್ಧತಿಗಳಲ್ಲಿರುವಂತೆ ಇದರಲ್ಲೂ ಮಕ್ಕಳಿಗೆ ಹೆಚ್ಚು ಸ್ವಾತಂತ್ರ್ಯವುಂಟು. ಕುಳಿತುಕೊಳ್ಳುವ ಕುರ್ಚಿಗಳೂ ಅವರು ಉಪಯೋಗಿಸುವ ಮೇಜು, ಡೆಸ್ಕು, ಮುಂತಾದವೂ ಅವರ ವಯಸ್ಸಿಗೆ ಅನುಕೂಲವಾಗಿರುವಂತೆ ತಯಾರಿಸಿದೆ; ತರಗತಿಯ ವ್ಯವಸ್ಥೆಯಿದ್ದರೂ ಒಬ್ಬೊಬ್ಬರಿಗೂ ಅನುಕೂಲಿಸುವ ರೀತಿಯ ವೇಳಾ ಪಟ್ಟಿಯೂ ಪಠ್ಯವಸ್ತುವೂ ಪ್ರತ್ಯೇಕವಾಗಿ ಏರ್ಪಟ್ಟಿರುವುದರಿಂದ ವ್ಯಕ್ತಿಗಳು ತರಗತಿಯ ನೆಪದಲ್ಲಿ ಮರೆತುಹೋಗಿ ಹಿಂದುಳಿಯದಂತೆ, ವೈಯಕ್ತಿಕವಾಗಿ ಗಮನಕೊಡುವ ಅವಕಾಶವಿದೆ. ಪ್ರತಿಯೊಬ್ಬ ವಿದ್ಯಾರ್ಥಿಯೂ ತನ್ನ ಶಕ್ತಿ ಸಾಮರ್ಥ್ಯಗಳಿಗೊಪ್ಪುವಂತೆ ಅಭ್ಯಾಸಿಸಿಕೊಂಡು ಮುಂದುವರಿಯಬಹುದು; ತನಗೆ ಅಭಿರುಚಿ ಆಸಕ್ತಿಗಳಿರುವ ವಿಷಯಗಳನ್ನು ಆರಿಸಿಕೊಂಡು ಅಭ್ಯಾಸಿಸಬಹುದು.

**ಈ ಪದ್ಧತಿಯ ವೈಶಿಷ್ಟ್ಯಗಳು:** ಡಾಲ್ಟನ್ ಪದ್ಧತಿಯಂತೆ ಇದರಲ್ಲೂ ವಿದ್ಯಾರ್ಥಿನಿಯರು ಸ್ವಪ್ರಯತ್ನದಿಂದ ಶಿಕ್ಷಣವನ್ನು ಸಾಧಿಸಬೇಕು; ತಾವೇ ಅರಿತುಕೊಂಡು ತರಗತಿಯಲ್ಲಿ ಶಿಸ್ತನ್ನು ಕಾಪಾಡಬೇಕು: ಹೊರಗಡೆಯವರ ಕಟ್ಟುಬಲುವೆಯಿಂದಲ್ಲ. ಆದರೆ ವಿದ್ಯಾರ್ಥಿಗಳು ಯಾವ ಕಾರ್ಯಮಾಡಬೇಕು, ಯಾವುದನ್ನು ಮಾಡಬಾರದು ಎಂಬ ವಿಷಯದಲ್ಲಿ ಉಪಾಧ್ಯಾಯರು ಮಾರ್ಗದರ್ಶನ ಮಾಡುವರು. ಹೀಗೆ ತರಗತಿಯಲ್ಲಿ ಶಿಸ್ತಿನಿಂದಿರುತ್ತಾ, ನೀತಿನಿಯಮಗಳೂ ಸಂಯಮವೂ ಅವರ ಮುಂದಿನ ಜೀವನದಲ್ಲೂ ಮೂಡುವಂತೆ ಮಾಡುವರು. ಅಂಥ ಉಚಿತ ಸನ್ನಿವೇಶದಲ್ಲಿ ಅವರು ವಿಷಯದ ಅಭ್ಯಾಸಮಾಡುವುದರ ಜೊತೆಗೆ ಕಲೋಪಾಸನೆಯನ್ನೂ ಸಾಮಾಜಿಕ ಗುಣಗಳನ್ನೂ ಕಲಿಯುವ ಅವಕಾಶವೂ ಇರುತ್ತದೆ.

ಈ ಶಾಲೆಗಳಲ್ಲಿ ತರಗತಿಗಳೇನೋ ಇವೆ; ಆದರೆ ಸಾಂಪ್ರದಾಯಿಕ ಶಾಲೆಗಳಲ್ಲಿದ್ದಂತೆ ಇಲ್ಲ: ವಯೋಗುಣವನ್ನು ಅನುಸರಿಸಿ ಒಂದೊಂದು ತರಗತಿಯನ್ನು ಏರ್ಪಡಿಸಿ ಆ ತರಗತಿಯವರಿಗೆಲ್ಲ ಒಂದು ಅಂತಸ್ತಿನ ಬೇರೆ ಬೇರೆ ವಿಷಯಗಳನ್ನು ಬೋಧಿಸುವ ಕ್ರಮ ಸಾಮಾನ್ಯ ಶಾಲೆಗಳಲ್ಲಿದೆ: ಹೋವರ್ಡ್ ಶಾಲೆಗಳಲ್ಲಿ ಒಂದೊಂದು ವಿಷಯಕ್ಕೂ ಒಂದೊಂದು ಫಾರಂ ಅಥವಾ ಗೃಹ ಏರ್ಪಟ್ಟಿದೆ. ಅಲ್ಲಿ ಆ ವಿಷಯವನ್ನು ಮಾತ್ರ ಬೋಧಿಸುವರು; ಗಣಿತವನ್ನೇ ತೆಗೆದುಕೊಂಡರೆ, ಗಣಿತದಲ್ಲಿ ಒಂದನೆಯ, ಎರಡನೆಯ, ಮೂರನೆಯ ತರಗತಿಗಳಿರುತ್ತವೆ. ಹಾಗೆಯೇ ಇತರ ವಿಷಯಗಳಿಗೂ ಕೂಡ. ಆದರೆ ಒಂದೇ ವಯಸ್ಸಿನ ವಿದ್ಯಾರ್ಥಿಗಳನ್ನು ಒಂದು ತರಗತಿಯಲ್ಲಿ ಸೇರಿಸಿ ಅವರಿಗೆಲ್ಲ ಒಂದೇ ಅಂತಸ್ತಿನ ಶಿಕ್ಷಣವನ್ನು ಎಲ್ಲ ವಿಷಯಗಳಲ್ಲೂ ಕೊಡುವಂತಿಲ್ಲ: ಭಿನ್ನವಯಸ್ಸಿನ ವಿದ್ಯಾರ್ಥಿಗಳಾದರೂ ಒಂದೇ ಗೃಹದಲ್ಲಿದ್ದು ಆ ವಿಷಯದಲ್ಲಿ ಒಂದೇ ಅಂತಸ್ತಿನ ಶಿಕ್ಷಣ ಪಡೆಯುವಂತಿರಬಹುದು. ಆದರೆ ಆ ವಿದ್ಯಾರ್ಥಿಗಳೆಲ್ಲ ಬೇರೆ ವಿಷಯಗಳಲ್ಲೂ ಒಂದೇ ಶಿಕ್ಷಣಾಭಿವೃದ್ಧಿಯನ್ನು ಪಡೆಯದಿರಬಹುದು; ಭಿನ್ನ ಅಂತಸ್ತಿನಲ್ಲಿ ಅಭ್ಯಾಸಮಾಡುತ್ತಿರಬಹುದು. ಒಮ್ಮೆ ಒಂದು ಗೃಹಕ್ಕೆ ಸೇರಿದವರು ಆ ಗೃಹದಲ್ಲಿ ಮೂರು ವರ್ಷ ಕಾಲವಿದ್ದು, ಆ ವಿಷಯವನ್ನು ಅಭ್ಯಾಸಿಸಬಹುದು. ಒಂದೊಂದು ಗೃಹದಲ್ಲೂ ಭಿನ್ನವಯಸ್ಸಿನ ವಿದ್ಯಾರ್ಥಿಗಳಿರುವುದರಿಂದ ಒಬ್ಬರಿಂದೊಬ್ಬರು

ಸಹಾಯ ಪಡೆಯಲೂ, ಸಹಾಯ ಮಾಡಲೂ ಅವಕಾಶವಿರುತ್ತದೆ. ಉಪಾಧ್ಯಾಯರೂ ಆ ಮೂರು ವರ್ಷಗಳ ಕಾಲ ಅದೇ ಗೃಹದಲ್ಲಿರುವುದರಿಂದ ಅವರ ಸನ್ಮಾರ್ಗವೂ ಆದರ್ಶವೂ ವಿದ್ಯಾರ್ಥಿಗಳ ಮೇಲೆ ಒಂದೇ ಪ್ರಕಾರವಾಗಿ ಬೀಳುತ್ತಿರುತ್ತದೆ; ಆದ್ದರಿಂದ ಮನೆಯಲ್ಲಿರುವ ವಾತಾವರಣವೇ ಈ 'ಗೃಹ'ಗಳಲ್ಲೂ ಕಂಡುಬರುತ್ತದೆ. ಈ ಒಂದೊಂದು ಗೃಹಕ್ಕೂ ನಾಡಿನ ಒಂದೊಂದು ಪ್ರಧಾನ ನಗರದ ಹೆಸರನ್ನು ಕೊಟ್ಟಿರುವರು. ಅವುಗಳಲ್ಲಿ ವಿವಿಧ ಉಪಕರಣಗಳೂ ಚಿತ್ರಪಟಗಳೂ ಇದ್ದು ಆಕರ್ಷಣೀಯವಾಗಿ ಅಲಂಕಾರವಾಗಿರುತ್ತವೆ; ವಿಷಯದ ಅಭ್ಯಾಸಕ್ಕೆ ಸ್ಫೂರ್ತಿಯನ್ನೂ ಉತ್ತೇಜನವನ್ನೂ ಸಲಹೆಯನ್ನೂ ಕೊಡುವಂತಿರುತ್ತವೆ. ಅಲ್ಲಿರುವ ವಿದ್ಯಾರ್ಥಿನಿಯರ ಮನಸ್ಸಿನಲ್ಲಿ ತಮ್ಮ ಗೃಹದ ಮೇಲೆ ಅನುಪಮವಾದ ಅಭಿಮಾನವನ್ನು ಹುಟ್ಟಿಸುವಂತಿರುತ್ತವೆ.

ತಮಗನುಕೂಲಿಸುವ ವೇಗದಲ್ಲಿ ಶಿಕ್ಷಣವನ್ನು ಪಡೆಯಲು ಅವಕಾಶವಿರುವಂತೆ, ಒಬ್ಬೊಬ್ಬರಿಗೂ ಒಂದೊಂದು ವೇಳಾಪಟ್ಟಿಯನ್ನೂ ಪಠ್ಯವಸ್ತುವನ್ನೂ ಗೊತ್ತುಮಾಡಿರುವಂತೆ ಒಬ್ಬೊಬ್ಬರಿಗೂ ಒಂದೊಂದು ಶಿಕ್ಷಣಾಭಿವೃದ್ಧಿಯ ಪಟ್ಟಿಯನ್ನೂ ಇಟ್ಟಿರುವರು. ಅವರು ತಮ್ಮ ಅಭ್ಯಾಸದಲ್ಲಿ ಮುಂದುವರಿದಂತೆ ಪರೀಕ್ಷೆಗಳು ವೈಯಕ್ತಿಕವಾಗಿ, ಪ್ರತ್ಯೇಕವಾಗಿ ನಡೆಯುತ್ತವೆ. ಆಗ ಕಂಡುಬಂದ ಶಿಕ್ಷಣಾಭಿವೃದ್ಧಿಯನ್ನು ಅವರವರ ಪಟ್ಟಿಯಲ್ಲಿ ಗುರುತು ಮಾಡುತ್ತಾರೆ. ಎಲ್ಲರ ಪಟ್ಟಿಗಳೂ ಒಂದೇ ಗೃಹದಲ್ಲಿ ಪ್ರದರ್ಶಿತವಾಗಿರುವುದರಿಂದ ಒಬ್ಬರದನ್ನು ನೋಡಿ ಇನ್ನೊಬ್ಬರು ಸ್ಪರ್ಧೆಯಿಂದ ಅಭ್ಯಾಸ ಮಾಡಲು ಪ್ರೋತ್ಸಾಹವಾಗುತ್ತದೆ. ಇಲ್ಲಿ ಡಾಲ್ಟನ್ ಕ್ರಮಕ್ಕಿಂತಲೂ ಹೆಚ್ಚು ಯಶಸ್ವಿಯಾಗಿ ತರಗತಿಯ ಶಿಕ್ಷಣವನ್ನು ಕೊಡಲು ಅನುಕೂಲವಿರುತ್ತದೆ. ಸಾಂಪ್ರದಾಯಿಕ ಶಾಲೆಗಳಿಗಿಂತ ಈ ಶಾಲೆಗಳಲ್ಲಿ ಕೈಕೆಲಸಕ್ಕೂ ಕಲಾಬೋಧನೆಗೂ ಹೆಚ್ಚಿನ ಪ್ರಾಧಾನ್ಯತೆ ಕೊಟ್ಟಿದೆ. ಮಕ್ಕಳ ಕಲಾಕೌಶಲ್ಯವನ್ನೂ, ಹಸ್ತಪಾಠವನ್ನೂ ಸೌಂದರ್ಯಾಭಿಮಾನವನ್ನೂ ಬೆಳಸಲು ವಿಶೇಷ ಅವಕಾಶಗಳೂ ಇವೆ. ತರಗತಿಗಳ ಏರ್ಪಾಡಿದ್ದರೂ ಒಬ್ಬೊಬ್ಬ ವಿದ್ಯಾರ್ಥಿಯೂ ತನಗಭಿರುಚಿ ಆಸಕ್ತಿಯಿರುವ ಶಿಕ್ಷಣವನ್ನು ಪಡೆದು ತನ್ನ ವಿಶಿಷ್ಟ ವ್ಯಕ್ತಿತ್ವವನ್ನು ಬೆಳಸಿಕೊಳ್ಳುವ ಅವಕಾಶ ಉಂಟು.

**ಪಠ್ಯವಸ್ತು ಮತ್ತು ಶಿಕ್ಷಣದ ಕಾಲಾವಧಿ:** ಒಂದು ಗೃಹದಲ್ಲಿ ಬೇರೆಬೇರೆ ವಯಸ್ಸಿನ ವಿದ್ಯಾರ್ಥಿಗಳು ಮನೆಯಲ್ಲಿರುವಂತೆ ಮೂರು ವರ್ಷಗಳ ಕಾಲ ಅಭ್ಯಾಸ ಮಾಡುತ್ತಿರುತ್ತಾರೆ. ಮೂರು ವರ್ಷದ ಈ ಅವಧಿಯನ್ನು ೯ ಟರ್ಮುಗಳಾಗಿ ವಿಂಗಡಿಸಿರುತ್ತಾರೆ. ಪಠ್ಯವಸ್ತುವನ್ನು ೫ ಭಾಗ ಮಾಡಿರುತ್ತಾರೆ. ಒಂದೊಂದು ಟರ್ಮಿನಲ್ಲೂ ಒಂದೊಂದು ಭಾಗ ಮುಗಿಸುವಂತಿರುತ್ತದೆ. ಎಂದರೆ ೯ ಟರ್ಮುಗಳ ಕಾಲದಲ್ಲಿ ನಿಯಮಿತ ಪಠ್ಯವಸ್ತು ೫ ಟರ್ಮುಗಳ ಕಾಲದಲ್ಲೇ ಮುಗಿಯುತ್ತದೆ; ಇನ್ನುಳಿದ ಕಾಲವನ್ನು ಮಕ್ಕಳು ಸ್ವತಂತ್ರವಾಗಿ ಅಭ್ಯಾಸಮಾಡಲು ಉಪಯೋಗಿಸಿಕೊಳ್ಳಬಹುದು. ಆ ಕಾಲದ ಒಟ್ಟು ಅವಧಿಯಲ್ಲಿ ಅವರು ವಿಷಯವನ್ನು ಮುಗಿಸಿದರೆ ಸಾಕು. ಆದ್ದರಿಂದ ಅವರವರು ಸ್ವಾತಂತ್ರ್ಯದಿಂದ ತಮಗೊಪ್ಪುವ ವೇಗದಲ್ಲಿ ಪಾಠ ಮುಗಿಸಬಹುದು. ಒಬ್ಬೊಬ್ಬರಿಗೂ ಪ್ರತ್ಯೇಕವಾಗಿ ಇಟ್ಟಿರುವ ಶಿಕ್ಷಣಾಭಿವೃದ್ಧಿಯ ಪಟ್ಟಿಯ ಒಂದು ಪ್ರತಿ ವಿದ್ಯಾರ್ಥಿಯ ಹತ್ತಿರವೂ ಇನ್ನೊಂದು ಉಪಾಧ್ಯಾಯರ ಹತ್ತಿರವೂ ಇರುತ್ತವೆ. ಆಯಾ ವಿದ್ಯಾರ್ಥಿಯ ಶಿಕ್ಷಣಾಭಿವೃದ್ಧಿಯನ್ನು ಪಟ್ಟಿಯಲ್ಲಿ ಗುರುತುಮಾಡಿರುತ್ತದೆ. ಅಲ್ಲಿ ಅವರು ಪಡೆದ ಜ್ಞಾನಾರ್ಜನೆ, ಕಲಾಭಿರುಚಿ, ವೈಯಕ್ತಿಕ ಗುಣಗಳು—ಇವೆಲ್ಲ ಅದರಲ್ಲಿ ಗುರುತುಮಾಡಿರುತ್ತದೆ. ಶಾಲೆಯನ್ನು ಬಿಡುವಾಗ ಅವರು ತಮ್ಮ ಶಿಕ್ಷಣಾಭಿವೃದ್ಧಿಯ ಪಟ್ಟಿಯನ್ನು ತೆಗೆದುಕೊಂಡು ಹೋಗಬಹುದು.

**ಸಂಘ ಜೀವನ:** ಹೋವರ್ಡ್ ಶಾಲೆಯ ಒಂದೊಂದು ಗೃಹವೂ ತನ್ನದೇ ಆದ ಒಂದು ವಿಶಿಷ್ಟರೀತಿಯ ಸಂಘಜೀವನವನ್ನು ಬೆಳಸಿಕೊಂಡು ಬರುವುದು ಈ ಪದ್ಧತಿಯ ಒಂದು ವೈಶಿಷ್ಟ್ಯ. ಒಂದೊಂದು ಗೃಹಕ್ಕೂ ಪ್ರತ್ಯೇಕ ಹೆಸರು, ಬಣ್ಣ, ಉಡುಪು ಮತ್ತು ಸಂಪ್ರದಾಯಗಳುಂಟು; ಆ ಗೃಹಕ್ಕೆ ಸಾಮಾನ್ಯವಾಗಿ ಮೂರುವರ್ಷ ಕಾಲವೂ ಒಬ್ಬ ಉಪಾಧ್ಯಾಯರದೇ ಆದರ್ಶ. ಇವೆಲ್ಲ ದೃಷ್ಟಿಗಳಿಂದ ವಿದ್ಯಾರ್ಥಿಗಳಲ್ಲಿ ತಮ್ಮ ಗೃಹದ ಅಭಿಮಾನ ಮೂಡುವಂತಾಗುತ್ತದೆ. ಎಲ್ಲ ವಯಸ್ಸಿನವರೂ ಗೃಹಗಳಲ್ಲಿರುವುದರಿಂದ ದೊಡ್ಡವರು ಚಿಕ್ಕವರಿಗೆ ಸಹಾಯಮಾಡಬಹುದು; ಚಿಕ್ಕವರು ದೊಡ್ಡವರಿಂದ ಕಲಿಯಬಹುದು. ಮನೆಯಲ್ಲಿ ಸಹಕರಿಸಿ ನಡೆಯುವಂತೆ ಜೀವನ ನಡಸುತ್ತಿರುವಾಗ ಉದಾತ್ತ ಸಾಮಾಜಿಕ ಗುಣಗಳು ಬೆಳೆಯಬಲ್ಲವು; ತನ್ನ ಗೃಹದವರೆಂಬ ಅಭಿಮಾನವೂ ಮಮತೆಯೂ ಹುಟ್ಟುತ್ತವೆ;

ಇದು ಸಂಕುಚಿತ ಅಭಿಮಾನವಾಗಿ ಪರಿಣಮಿಸದಂತೆ ಇತರ ಗೃಹಗಳೊಡನೆ ಆಗಾಗ ಸಂಪರ್ಕ ಏರ್ಪಡಿಸಿ ಇಡೀ ಶಾಲೆಯ ಮೇಲೇ ಅಭಿಮಾನ ಮೂಡು ವಂತೆಯೂ.ಅವಕಾಶ ಕಲ್ಪಿಸಿರುವರು. ಒಟ್ಟನಲ್ಲಿ ಅಂಥ ಶಾಲಾ ಜೀವನ ದಿಂದ ಜೀವನಕ್ಕೆ ಬೇಕಾದ ಉದಾತ್ತ ಧ್ಯೇಯಗಳು ಅವರಲ್ಲಿ ಮೂಡಿ ಮೊಳೆಯುವಂತೆ ಮಾಡುತ್ತಾರೆ.

ಪ್ರತಿಯೊಂದು ಗೃಹವೂ ಎರಡು ವಿಭಾಗವಾಗಿರುತ್ತದೆ. ದೊಡ್ಡ ವಿಭಾಗ ಉಪನ್ಯಾಸಕ್ಕೂ ಬೋಧನೆಗೂ ಉಪಯೋಗವಾಗುತ್ತದೆ; ಚಿಕ್ಕದು ಪ್ರಯೋಗಗಳನ್ನು ನಡಸುವುದಕ್ಕೆ ಅನುಕೂಲಿಸುವಂತಿದೆ. ಗೃಹಶಿಕ್ಷಕರು ಅಲ್ಲೇ ವಾಸಮಾಡುತ್ತಾರೆ. ಅವರ ಸಹಾಯಕ್ಕಾಗಿ ಮತ್ತೊಬ್ಬರೂ ಇರುತ್ತಾರೆ. ಕೆಲವುವೇಳೆ ಒಂದು ವಿಷಯದಲ್ಲಿ ಪ್ರವೀಣರಾದ ಗೃಹ ಶಿಕ್ಷಕರು ಮತ್ತೊಂದು ವಿಷಯದ ಶಿಕ್ಷಕರೂ ಆಗಿರಬಹುದು. ಸಾಮಾನ್ಯ ವಾಗಿ ಶಾಲೆಯಲ್ಲಿ ಒಂದು ವಿಷಯುವನ್ನೆಲ್ಲ ಅದರಲ್ಲಿ ಪ್ರವೀಣರಾದ ಒಬ್ಬ ಉಪಾಧ್ಯಾಯರೇ ಬೋಧಿಸುತ್ತಾರೆ.

ವಿದ್ಯಾರ್ಥಿಗಳಿಗೆ ಗೃಹವೇ ತರಗತಿಯಾಗಿರುವುದರಿಂದಲೂ, ನಿರಂತ ರವೂ ಉಪಾಧ್ಯಾಯರ ನಿರ್ದೇಶಿಕತ್ವವಿರುವುದರಿಂದಲೂ ಮನೆಗೆಲಸ, ತರಗತಿಯ ಕೆಲಸ ಎಂಬ ಭೇದ ಕಂಡುಬರುವುದಿಲ್ಲ; ಮನೆಗೆ ಅಭ್ಯಾಸ ಗಳನ್ನು ಕೊಡುವ ಆವಶ್ಯಕತೆಯೂ ಇರುವುದಿಲ್ಲ.

ಈ ಯೋಜನೆ ಸಾರ್ವತ್ರಿಕವಾಗಿ ಯಶಸ್ವಿಯಾಗಿ ಪ್ರಚಾರಕ್ಕೆ ಬಂದಿಲ್ಲ. ಆದರೂ ಇದು ಉತ್ತಮವೂ ಫಲಪ್ರದವೂ ಆದ ಶಿಕ್ಷಣ ಪದ್ಧತಿಯೆಂದು ಎಲ್ಲರೂ ಒಪ್ಪುವರು. ಇದರಲ್ಲಿ ಮಕ್ಕಳ ಮಾನಸಿಕ, ನೈತಿಕ ಮತ್ತು ಸಾಮಾಜಿಕ ಬೆಳವಣಿಗೆಗೆ ಅನುಪಮವಾದ ಸನ್ನಿವೇಶ ಸೌಲಭ್ಯವಿದೆ; ಒಬ್ಬೊಬ್ಬರೂ ತಮ್ಮ ಶಕ್ತಿಸಾಮರ್ಥ್ಯಗಳಿಗೊಪ್ಪುವಂತೆ ಅಭ್ಯಾಸಮಾಡುವ ಸ್ವಾತಂತ್ರ್ಯವೂ ಇದೆ; ಪ್ರತಿಭಾವಂತ ವಿದ್ಯಾರ್ಥಿಗಳನ್ನು ಕಂಡು ಸ್ಫೂರ್ತಿ ಯಿಂದಲೂ ಉತ್ಸಾಹದಿಂದಲೂ ಮಿಕ್ಕವರು ಶಿಕ್ಷಣಾಭಿವೃದ್ಧಿಯನ್ನು ಸಾಧಿ ಸಲು ಉಚಿತವಾದ ಸನ್ನಿವೇಶಗಳೂ ಇವೆ.

ಮೇಲಿನ ಶಿಕ್ಷಣ ಪದ್ಧತಿಯನ್ನು ನಮ್ಮ ದೇಶದಲ್ಲಿ ಸಾರ್ವತ್ರಿಕವಾಗಿ ಆಚರಣೆಗೆ ತರುವುದುಕಷ್ಟ. ಅದನ್ನು 'ಬಾಲಿಕಾ ಪ್ರೌಢಶಾಲೆಗಳಲ್ಲಿ, ಹಾಗೂ

ಹಾಸ್ಟೆಲುಗಳಿರುವ ಕಡೆ ಮಾತ್ರ ನಡಸಬಹುದು. ಪೋಷಕರು ಆ ಕಾರ್ಯ ಕ್ಕಾಗಿ ಅಧಿಕ ಧನವ್ಯಯಕ್ಕೂ ಸಿದ್ಧರಾಗಿರಬೇಕು. ಈ ದೃಷ್ಟಿಯಿಂದ ಈ ಪದ್ಧತಿ ನಮ್ಮ ದೇಶದಲ್ಲಿ ಆಚರಣೆಗೆ ತರಲು ಅನುಕೂಲವಾಗದಿದ್ದರೂ, ಅದ ರಲ್ಲಿರುವ ಉತ್ತಮ ಗುಣಗಳನ್ನಾದರೂ ನಮ್ಮ ಉಪಾಧ್ಯಾಯರು ಪರಿಚಯ ಮಾಡಿಕೊಂಡು ಇಂದಿನ ಶಿಕ್ಷಣ ಉತ್ತಮಗೊಳ್ಳುವಂತೆ ಮಾಡಬಹುದು.

## ೪. ವಿನೆಟ್ಕ ಶಿಕ್ಷಣಪದ್ಧತಿ

ವಿದ್ಯಾರ್ಥಿಗಳಿಗೆ ಪ್ರತ್ಯೇಕವಾಗಿ ವೈಯಕ್ತಿಕ ಶಿಕ್ಷಣ ಕೊಡಲು ರೂಪು ಗೊಂಡ ಶಿಕ್ಷಣ ಕ್ರಮಗಳಲ್ಲಿ ಈ ಪದ್ಧತಿ ವಿಶ್ವಗೌರವವನ್ನು ಪಡೆದು ಕೊಂಡಿದೆ. ಆದರೆ ಜನಕ ವಾಷ್‌ಬರ್ನ್ ಎಂಬುವರು. ಸ್ಯಾನ್‌ಫ್ರಾನ್ಸಿಸ್ಕೋ ಸಂಸ್ಥಾನದಲ್ಲಿ ಅವರು ಮೊದಲು ಉಪಾಧ್ಯಾಯರಾಗಿದ್ದರು; ತಮ್ಮ ತರ ಗತಿಯಲ್ಲಿ ಗಣಿತಪಾಠದಲ್ಲಿ ಹಿಂದುಳಿದಿದ್ದ ಕೆಲವು ವಿದ್ಯಾರ್ಥಿಗಳಿಗೆ ಮೊದಲು ಪ್ರಾಯೋಗಿಕವಾಗಿ ಪ್ರತ್ಯೇಕ ಶಿಕ್ಷಣವನ್ನು ಕೊಟ್ಟಾಗ ಅವರು ಆಶ್ಚರ್ಯ ಹುಟ್ಟಿಸುವಷ್ಟು ಬೇಗ ಅಭಿವೃದ್ಧಿ ಸಾಧಿಸಿದರು; ಆ ಪ್ರಯೋಗದಿಂದ ಉತ್ತೇಜನಗೊಂಡು, ಪ್ರತ್ಯೇಕ ಶಿಕ್ಷಣದಿಂದ ಹಿಂದುಳಿದ ಬಾಲಕರಿಗೆ ಆಗುವ ಆನುಕೂಲ್ಯವನ್ನು ಮನದಟ್ಟು ಮಾಡಿಕೊಂಡರು; ಅನಂತರ ೧೯೧೯ ರಲ್ಲಿ ಇಲಿನಾಯ್ ಸಂಸ್ಥಾನದ ವಿನೆಟ್ಕದಲ್ಲಿ ಸಾರ್ವಜನಿಕ ಶಾಲೆಗಳ ಸೂಪರಿಂ ಟೆಂಡೆಂಟರಾಗಿ ನಿಯಮಿತರಾದರು; ಅಲ್ಲಿ ಒಂದು ಪಾಠಶಾಲೆಯಲ್ಲಿ ತಮ್ಮ ಯೋಜನೆಯನ್ನು ಪ್ರಾಯೋಗಿಕವಾಗಿ ಆರಂಭಿಸಿದರು. ಮೊದಲು ಭಾಷಾ ಪಾಠವೊಂದನ್ನು ಒಂದು ತರಗತಿಯಲ್ಲಿ ಆರಂಭಿಸಿ ಕ್ರಮಕ್ರಮವಾಗಿ ಎಲ್ಲ ತರಗತಿಗಳಿಗೂ ಯೋಜನೆಯನ್ನು ಅನ್ವಯಿಸಿದರು. ಒಂದು ತರಗತಿಯ ವಿದ್ಯಾರ್ಥಿಗಳಿಗೆ ಪ್ರತ್ಯೇಕವಾಗಿ ಶಿಕ್ಷಣಕೊಟ್ಟಾಗ ಒಂದೇ ತರಗತಿಯವ ರಾದರೂ ಬೇರೆಬೇರೆ ವಿದ್ಯಾರ್ಥಿಗಳು ಬೇರೆಬೇರೆ ಮಟ್ಟದ ಶಿಕ್ಷಣವನ್ನು ಸಾಧಿಸಿದರು. ಹಾಗೆ ವೈಯಕ್ತಿಕ ಶಿಕ್ಷಣ ಆರಂಭವಾದರೂ ತರಗತಿಯ ಸಂಖ್ಯಾಬಲವನ್ನು ಮಾತ್ರ ಇಳಿಸಲಿಲ್ಲ. ಉತ್ಸಾಹಶಾಲಿಗಳಾದ ಉಪಾ ಧ್ಯಾಯರ ಸಹಾಯದಿಂದ ಆ ಶಾಲೆಯಲ್ಲಿ ತಮ್ಮ ಯೋಜನೆಯನ್ನು ಫಲಪ್ರದವಾಗಿ ಆಚರಣೆಗೆ ತಂದು ಜಗತ್ತಿಗೆ ನೂತನ ಶಿಕ್ಷಣಪದ್ಧತಿ ಯೊಂದನ್ನು ತೋರಿಸಿಕೊಟ್ಟರು.

ಈ ಪದ್ಧತಿಯಲ್ಲಿ ಪಠ್ಯವಿಷಯ ಒಂದು ವೈಶಿಷ್ಟ್ಯ. ಆರ್ಷೇಯ ರೀತಿಯ ಪಠ್ಯವಸ್ತುವನ್ನು ಬಿಟ್ಟು ಮಕ್ಕಳು ಕಲಿಯಲನುಕೂಲಿಸುವಂತೆ ವಿಷಯಗಳನ್ನು ಆರಿಸಿ ಜೋಡಿಸಿಕೊಳ್ಳುತ್ತಾರೆ. ಹಾಗೆ ಆರಿಸಿದ ವಿಷಯ ಗಳೇ ಪಠ್ಯ ಪುಸ್ತಕಗಳಂತೆ ಉಪಯುಕ್ತವಾಗುತ್ತವೆ. ಆ ವಿಷಯಗಳಲ್ಲಿ ತನಗಾಸಕ್ತಿಯಿರುವ ವಿಷಯವನ್ನಾರಿಸಿಕೊಂಡು ಒಬ್ಬೊಬ್ಬ ವಿದ್ಯಾರ್ಥಿಯೂ ಅಭ್ಯಾಸಿಸುವ ಅನುಕೂಲವುಂಟು. ಆ ಕಾರ್ಯಕ್ಕನುಕೂಲಿಸುವಂತೆ ಆಯಾ ವಿಷಯುವನ್ನು ವಿವರವಾಗಿ ಸಿದ್ಧಪಡಿಸಿ ಅಭ್ಯಾಸಕ್ಕೆ ಅನುಗೊಳಿಸುವರು. ಅನಂತರ ಅವರು ಅಭ್ಯಾಸಿಸುತ್ತ ಹೋದಂತೆ ಅವರ ಅಭಿವೃದ್ಧಿಯನ್ನು ನಿಷ್ಕರ್ಷಿಸಲು ಪರೀಕ್ಷೆಗಳನ್ನು ಏರ್ಪಡಿಸಿರುವರು; ವಿದ್ಯಾರ್ಥಿಗಳ ದೌರ್ಬಲ್ಯ ವನ್ನು ಅರಿತುಕೊಳ್ಳಲೂ ಪರೀಕ್ಷೆಗಳೇರ್ಪಟ್ಟಿವೆ. ಆ ಮೂಲಕ ಹಿಂದುಳಿದ ವಿದ್ಯಾರ್ಥಿಗಳನ್ನು ಆರಿಸಿಕೊಂಡು ವಿಶೇಷ ಶಿಕ್ಷಣವೀಯುತ್ತಾರೆ.

**ಈ ಕ್ರಮದ ಪ್ರಧಾನ ಗುಣಗಳು:** ಶಿಕ್ಷಕರು ಕಲಿಯಬೇಕಾದ ಪಾಠವನ್ನೂ, ಅದರ ಗುರಿಯನ್ನೂ ನಿರ್ದಿಷ್ಟವಾಗಿ ಮಕ್ಕಳಿಗೆ ಪರಿಚಯ ಮಾಡಿಕೊಡುವರು; ಅನಂತರ ಅವರು ಪಡೆದ ಅಭಿವೃದ್ಧಿಯನ್ನು ಪರೀಕ್ಷಿ ಸಲು ಸುವ್ಯವಸ್ಥಿತವಾದ ಪರೀಕ್ಷಾಕ್ರಮವುಂಟು; ವಿದ್ಯಾರ್ಥಿಗಳು ಅಭ್ಯಾಸಿ ಸುವಾಗ ಸ್ವತಃ ಅಭ್ಯಾಸಮಾಡುವುದಕ್ಕೂ, ತಮ್ಮ ತಪ್ಪುಗಳನ್ನು ತಾವೇ ತಿದ್ದಿಕೊಂಡು ಶಿಕ್ಷಣವನ್ನು ಪಡೆಯುವುದಕ್ಕೂ ಅನುಕೂಲಿಸುವಂಥ ಸನ್ನಿ ವೇಶಗಳನ್ನೂ ಉಪಕರಣಗಳನ್ನೂ ಸಿದ್ಧಪಡಿಸಿರುವರು.

ವಿದ್ಯಾರ್ಥಿಯೊಬ್ಬೊಬ್ಬನಿಗೂ ಒಂದೊಂದು ಪಠ್ಯವಿಷಯದ ಪಟ್ಟಿ ಯಿದೆ; ಅದರಲ್ಲಿ ಆಯಾ ಪಾಠದ ಗುರಿಯನ್ನೂ ಗುರುತಿಸಿವೆ. ವಿದ್ಯಾರ್ಥಿ ಒಂದೊಂದು ಪಾಠವನ್ನು ಅಭ್ಯಾಸಿಸಿ, ಆ ಗುರಿಯನ್ನು ಸಾಧಿಸಿದೊಡನೆ ಆ ಪಟ್ಟಿಯಲ್ಲಿ, ಆ ಪಾಠದ ಪಕ್ಕದಲ್ಲಿ ಅದನ್ನು ಯಶಸ್ವಿಯಾಗಿ ಮುಗಿಸಿದ ಗುರುತಾಗಿ 'ಓ.ಕೆ.' ಎಂದು ಗುರುತುಮಾಡುವರು. ಅನಂತರ ಮುಂದಿನ ಭಾಗವನ್ನು ಹಾಗೆಯೇ ಅಭ್ಯಾಸಿಸುತ್ತ ಹೋಗುವನು. ಪಟ್ಟಿಯಲ್ಲಿರುವ ಪಾಠ ಗಳನ್ನೆಲ್ಲ ಕಲಿತನಂತರ ಮುಂದಿನ ತರಗತಿಗೆ ತೇರ್ಗಡೆಯಾಗುವನು. ಅಭ್ಯಾಸಮಾಡುವಾಗ ವಿದ್ಯಾರ್ಥಿಗಳು ಪ್ರತ್ಯೇಕವಾಗಿ ಉಪಾಧ್ಯಾಯರ ಸಹಾಯವನ್ನು ಪಡೆಯುವರು.

ಮಕ್ಕಳ ಸಮಾಜ ಜೀವನದ ಬೆಳವಣಿಗೆಯ ಕಡೆ ಇಲ್ಲಿ ತಕ್ಕಷ್ಟು ಗಮನಕೊಟ್ಟಿಲ್ಲ. ಈ ನ್ಯೂನತೆಯನ್ನು ನಿವಾರಿಸಲು ವಿದ್ಯಾರ್ಥಿಗಳು ಸಾಮೂಹಿಕವಾಗಿ ಉದ್ಯಮಗಳನ್ನು ಆಚರಿಸುವಂತೆ ಈಚೆಗೆ ಏರ್ಪಾಡು ಆಗಿರುತ್ತದೆ. ನಾಟಕಾಭಿನಯ, ಆಟಗಳು, ಚರ್ಚೆ, ಭಾಷಣಗಳು, ಸಂಘ ಸಂಸ್ಥೆಗಳ ಆಡಳಿತ ನಿರ್ವಹಣ, ಸಭೆಗಳನ್ನು ಏರ್ಪಡಿಸುವುದು–ಇವುಗಳಿಂದ ವಿದ್ಯಾರ್ಥಿಗಳ ಸಾಮಾಜಿಕ ಜೀವನ ವಿಕಸಿಸುವಂತೆ ಮಾಡಿರುತ್ತಾರೆ. ಅದ ರಿಂದ ಅವರ ಭಾಷಾಜ್ಞಾನ ಉತ್ತಮಗೊಳ್ಳುತ್ತದೆ; ವೈಯಕ್ತಿಕ ಅಭಿರುಚಿ ಆಸಕ್ತಿಗಳು ಪ್ರಕಾಶಕ್ಕೆ ಬರಲು ಅವಕಾಶವಾಗುತ್ತದೆ; ತಮ್ಮ ಮನೋಭಿ ಲಾಷೆಯನ್ನೂ ಅಭಿಪ್ರಾಯವನ್ನೂ ಸಂಘದ ಮುಂದೆ ಪ್ರದರ್ಶಿಸುವುದಕ್ಕೂ ತಮ್ಮಲ್ಲಿರಬಹುದಾದ ನ್ಯೂನತೆಗಳನ್ನು ಸಂಘಜೀವನದಿಂದ ತಿದ್ದಿಕೊಳ್ಳು ವುದಕ್ಕೂ ಅವಕಾಶವಾಗುತ್ತದೆ.

## ೫. ಗೇರಿ ಶಿಕ್ಷಣಪದ್ಧತಿ

ಚಿಕಾಗೋ ಪಟ್ಟಣದ ಸಮೀಪದಲ್ಲಿರುವ ಗೇರಿ ಎಂಬ ಔದ್ಯೋಗಿಕ ಕೇಂದ್ರದಲ್ಲಿ ಮೊದಲು ಈ ಪದ್ಧತಿಯನ್ನು ವಿಲಿಯಂ ಎವರ್ಟ್ ಎಂಬುವರು ಆರಂಭಿಸಿದರು. ಅವರು ಪ್ರತಿಭಾವಂತರೂ, ಕಲ್ಪನಾಚತುರರೂ, ಆರ್ಥಿಕ ಜ್ಞಾನಿಗಳೂ ಆಗಿದ್ದರು. ಮಿಚಿಗನ್ ಸರೋವರದ ದಡದಲ್ಲಿದ್ದ ಆ ಔದ್ಯೋ ಗಿಕ ಕೇಂದ್ರದಲ್ಲಿ ಭಿನ್ನಭಾಷೆಗಳನ್ನಾಡುತ್ತಿದ್ದ ಜನತೆ ನೆಲಸಿತ್ತು. ಮೊದಲು ವರ್ಟರು ಅಲ್ಲಿನ ಪೌರಸಭೆಗೆ ಅತ್ಯಲ್ಪ ವ್ಯಯದಲ್ಲಿ ತಾವು ಆರಂಭಿಸಬೇಕೆಂದಿದ್ದ ನೂತನ ಯೋಜನೆಯನ್ನು ವಿವರಿಸಿ, ಅವರ ಒಪ್ಪಿಗೆಯನ್ನೂ ಸಹಾಯ ಸಹಕಾರಗಳನ್ನೂ ಪಡೆದುಕೊಂಡರು.

ಈ ಶಿಕ್ಷಣಪದ್ಧತಿಯ ಪ್ರಾಮುಖ್ಯತೆಯೆಂದರೆ, ಶಾಲೆಯ ಕಟ್ಟಡದ ವೈಶಿಷ್ಟ್ಯ. 'ಒಬ್ಬೊಬ್ಬ ವಿದ್ಯಾರ್ಥಿಗೂ ಒಂದೊಂದು ಸ್ಥಳ ಬೇಕಾಗಿಲ್ಲ' ಎಂಬ ತತ್ತ್ವವನ್ನು ಮುಂದಿಟ್ಟುಕೊಂಡು ವರ್ಟರು ತಮ್ಮ ಯೋಜನೆಯನ್ನು ಕಾರ್ಯರೂಪಕ್ಕಿಳಿಸಲು ಆರಂಭಿಸಿದರು. ಆ ಶಾಲೆಯಲ್ಲಿ ಎಷ್ಟು ಮಂದಿ ಬಾಲಕರಿರುವರೋ ಅದರಲ್ಲಿ ಅರ್ಧ ಸಂಖ್ಯೆಗೆ ಮಾತ್ರ ಸ್ಥಳವನ್ನು ಕಲ್ಪಿಸಿ ದರು. ಅನಂತರ ನಿಸರ್ಗದಲ್ಲಿ ಎಲ್ಲೂ, ಎಂದೂ ಹೇಗೆ ಶೂನ್ಯ (ಖಾಲಿ) ಇರು ವುದಿಲ್ಲವೋ, ಹಾಗೆ ತಮ್ಮ ಶಾಲೆಯ ಯಾವ ಕೊಟಡಿಯೂ ಯಾವಾಗಲೂ

ಖಾಲಿಯಿರಕೂಡದೆಂದು ತೀರ್ಮಾನಿಸಿಕೊಂಡು ವೇಳಾ ಪಟ್ಟಿಯನ್ನು ತಯಾರಿಸಲು ಆರಂಭಿಸಿದರು. ಆಗ ಗೇರಿಯಲ್ಲಿ ನೆಲಸಿದ್ದವರು ಹೊಸ ಹೊಸ ಸಂಪ್ರದಾಯಗಳನ್ನು ಉತ್ಸಾಹದಿಂದ ಬರಮಾಡಿಕೊಳ್ಳುತ್ತಿದ್ದರು. ಆದರಿಂದ ಅವರಾರೂ ವರ್ಟರ ಈ ವಿನೂತನ ಯೋಜನೆಯನ್ನು ವಿರೋಧಿಸ ಲಿಲ್ಲ; ನಿರಾತಂಕವಾಗಿ ತಮ್ಮ ಯೋಜನೆಯಂತೆ ಶಾಲೆಯ ಕಾರ್ಯಕಲಾಪ ಗಳನ್ನು ರೂಪಿಸಲು ಅವರಿಗೆ ಅವಕಾಶವಾಯಿತು. ಸಾಮಾನ್ಯವಾಗಿ ಒಟ್ಟು ವಿದ್ಯಾರ್ಥಿಗಳಲ್ಲಿ ಅರ್ಧ ಮಂದಿ ತರಗತಿಗಳಲ್ಲಿ ಪಾಠ ಕಲಿಯುತ್ತಿದ್ದರೆ ಇನ್ನರ್ಧ ಮಂದಿ ಆ ಕಾಲದಲ್ಲಿ ಡ್ರಿಲ್, ಅಂಗಸಾಧನೆ, ಸಂಗೀತ, ಆಟ ಮುಂತಾದವುಗಳಲ್ಲಿ ಭಾಗವಹಿಸಲು ಬಯಲುಗಳಲ್ಲಿರುತ್ತಿದ್ದರು. ಹಾಗೆ ಅವರು ಹೊರಗಡೆ ಆಟಪಾಟಗಳಲ್ಲಿ ನಿರತರಾಗಿರುವಾಗ ಅವರ ಕೊಟಡಿಗಳು ಖಾಲಿಯಾಗಿರುವುದನ್ನು ವರ್ಟರು ಎಂದೂ ಸಹಿಸರು! ಯಾವುದಾದರೂ ಒಂದು ಕೊಟಡಿ ಖಾಲಿಯಾಯಿತೆಂದರೆ ತಕ್ಷಣ ಇನ್ನೊಂದು ತರಗತಿ ಅದನ್ನು ಬಂದು ಆಕ್ರಮಿಸಿಕೊಳ್ಳಬೇಕು! ಅವರು ವೇಳಾಪಟ್ಟಿಯನ್ನು ತಯಾರಿಸುವಾಗ ಅವರಿಗಿದ್ದ ಮುಖ್ಯ ದೃಷ್ಟಿ ಎಲ್ಲ ಕೊಟಡಿಗಳಲ್ಲೂ ಯಾವಾ ಗಲೂ ವಿದ್ಯಾರ್ಥಿಗಳು ಇರಬೇಕೆಂಬುದೇ ಆಗಿತ್ತು. ಆದರಿಂದ ಅರ್ಧ ಮಂದಿ ವಿದ್ಯಾರ್ಥಿಗಳಿಗೆ ಮಾತ್ರ ಪಾಠ; ಮಿಕ್ಕವರಿಗೆ ಹೊರಗಡೆ ಆಟ—ಈ ರೀತಿ ಯಲ್ಲಿ ವೇಳಾಪಟ್ಟಿಯನ್ನು ರಚಿಸಿದರು; ಈ ಏರ್ಪಾಡಿನಿಂದ ಕಟ್ಟಡ ಎಷ್ಟು ಮಂದಿಗೆಂದು ಕಟ್ಟಿತ್ತೋ ಅದರ ಎರಡರಷ್ಟು ಮಂದಿಯನ್ನು ಸೇರಿಸಿಕೊಳ್ಳಲು ಅವಕಾಶವಾಯಿತು. ಕಟ್ಟಡಕ್ಕಾಗಿ ಬೇಕಾದ ಅರ್ಧ ಹಣ ವರ್ಟರಿಗೆ ಉಳಿ ತಾಯವಾಯಿತು! ಆ ಹಣದಿಂದ ಆಟದಬಯಲು, ಕಲಾಭವನ, ಪ್ರಯೋಗ ಮಂದಿರ, ಪುಸ್ತಕಭಂಡಾರ, ವಿಹಾರಮಂದಿರ, ಗರಡಿಮನೆ ಮುಂತಾದವನ್ನು ಸಜ್ಜುಗೊಳಿಸಿಕೊಂಡರು; ಭೂಪಟಗಳನ್ನೂ ಚಿತ್ರಪಟಗಳನ್ನೂ ಮತ್ತು ಇತರ ಆಕರ್ಷಣೀಯ ಉಪಕರಣಗಳನ್ನೂ ಒದಗಿಸಿಕೊಂಡರು.

ಎಲ್ಲ ವಿದ್ಯಾರ್ಥಿಗಳಿಗೂ ಅರ್ಧ ಕಾಲ ಮಾತ್ರ ಶಿಕ್ಷಣ; ಇನ್ನರ್ಧ ಕಾಲ ಹೊರಗಡೆ! ಆದ್ದರಿಂದ ಪಾಠಗಳನ್ನು ಮುಗಿಸಲು ಕಾಲ ಸಾಲದಾಯಿತು! ಸರಿ! ಕಲ್ಪನಾಚತುರರಾದ ವರ್ಟರು ಶಾಲೆಯ ಶಿಕ್ಷಣದ ವೇಳೆಯನ್ನೇ ಹೆಚ್ಚಿಸಿಬಿಟ್ಟರು: ದಿನಕ್ಕೆ ೭ ಗಂಟೆಗಳ ಕೆಲಸ; ವಾರಕ್ಕೆ ೭ ದಿನಗಳೂ

ಪಾಠಶಾಲೆ! ವರ್ಷಕ್ಕೆ ೧೨ ತಿಂಗಳೂ ಶಿಕ್ಷಣವೇ! ಜೊತೆಗೆ ಪೋಷಕರಿಗಾಗಿ ಸಂಜೆಯ ಶಾಲೆಗಳನ್ನೂ ಏರ್ಪಡಿಸಿ ಅವರವರ ಮಕ್ಕಳೊಡನೆ ಶಾಲೆಯ ಬಳಿ ಪೋಷಕರು ಕಾಲ ಕಳೆಯುವಂತೆ ಸನ್ನಿವೇಶಗಳನ್ನು ಒದಗಿಸಿಕೊಟ್ಟರು. ಆದರೆ ವರ್ಟರ ಈ ಎಲ್ಲ ಯೋಜನೆಗಳ ಫಲವಾಗಿ ಶಾಲೆಯ ಕೊಟಡಿಗಳಿಗೆ ಬಿಡುವಿಲ್ಲವಾದಂತೆ ಉಪಾಧ್ಯಾಯರಿಗೂ ಕೆಲಸ ಅಧಿಕವಾಯಿತು. ಇದನ್ನು ಪರಿಹರಿಸಲು ಸರದಿಯ ಮೇಲೆ ಕೆಲಸ ಮಾಡುವಂತೆ ಹೆಚ್ಚಿಗೆ ಉಪಾಧ್ಯಾಯರನ್ನು ನಿಯಮಿಸಿಕೊಂಡರು.

ಈ ಪದ್ಧತಿಯಲ್ಲಿ ಉಪಾಧ್ಯಾಯರಿಗೂ ಸರದಿ; ವಿದ್ಯಾರ್ಥಿಗಳಿಗೂ ಶಿಕ್ಷಣಕ್ಕೆ ಸರದಿ; ಆದರೆ ಪಾಠಶಾಲೆಯ ಕೊಟಡಿಗಳಿಗೆ ಮಾತ್ರ ನಿರಂತರವೂ ಕೆಲಸ! ಒಂದು ದಿನದ ಕೆಲಸವೆಂದರೆ, ಉಪಾಧ್ಯಾಯರಿಗೇ ಬೇರೆ; ವಿದ್ಯಾರ್ಥಿಗಳಿಗೇ ಬೇರೆ; ಕಟ್ಟಡಕ್ಕೇ ಬೇರೆ. ಹುಡುಗರಿಗೆ ಮೊದಲು ಅಭ್ಯಾಸ, ಆಮೇಲೆ ಕೆಲಸ, ಕೊನೆಗೆ ಆಟ—ಈ ಕ್ರಮದಲ್ಲಿ ನಿತ್ಯವೂ ಶಾಲಾ ಜೀವನ ನಡೆಯುವಂತೆ ವೇಳಾಪಟ್ಟಿ ನಿರ್ಣಿತವಾಯಿತು. ಅಭ್ಯಾಸ—ಕೆಲಸ—ಆಟ—ಅಭ್ಯಾಸ ಈ ಚಕ್ರವ್ಯೂಹದಲ್ಲಿ ರಚಿತವಾದ ಅವರ ವೇಳಾಪಟ್ಟಿಗೆ ವರ್ಟರ ಕಟ್ಟಡದ ಆರ್ಥಿಕ ದೃಷ್ಟಿಯೇ ಕಾರಣ. ಒಟ್ಟಿನಲ್ಲಿ ಗೇರಿ ಶಿಕ್ಷಣ ಯೋಜನೆಯನ್ನು ವರ್ಟರು ಯಶಸ್ವಿಗೊಳಿಸಿದರು. ಅವರಿಗಿದ್ದ ಶಿಕ್ಷಣ ಪ್ರಪಂಚದ ವಿಶಾಲವಾದ ಅನುಭವ, ಕಾರ್ಯದಕ್ಷತೆ ಮತ್ತು ಪ್ರತಿಭೆ, ಯೋಜನೆಯ ಕಲ್ಪನಾಶಕ್ತಿ—ಇವೇ ಅದಕ್ಕೆ ಕಾರಣ. ಬೇರೆಯವರಾಗಿದ್ದರೆ ಅದು ಅಷ್ಟು ಯಶಸ್ವಿಯಾಗುತಿತ್ತೇ ಎಂದು ಅನುಮಾನಿಸಲು ಅವಕಾಶವಿದೆ.

ಈ ಪದ್ಧತಿಯಲ್ಲಿ ವಿದ್ಯಾರ್ಥಿಗಳ ವೈಯಕ್ತಿಕ ಭಿನ್ನತೆಗಳನ್ನು ಗಣನೆಗೆ ತೆಗೆದುಕೊಂಡು ಪ್ರತ್ಯೇಕ ಶಿಕ್ಷಣಕೊಡುವ ಅಂಶಕ್ಕೆ ಪ್ರಾಧಾನ್ಯವಿರುವಂತೆ ತೋರುವುದಿಲ್ಲ. ಆದರೆ ಶಾಲೆಯಲ್ಲಿ ಸಾಮಾಜಿಕ ಸ್ಥಿತಿಯನ್ನು ಪೂರ್ಣವಾಗಿ ನೆಲೆಗೊಳಿಸಲು ಯತ್ನ ನಡೆದಿದೆ. ಜೀವನದ ನೈಜಸ್ಥಿತಿಗಳನ್ನು ಪ್ರತಿಬಿಂಬಿಸುವ ಹಲವು ಯೋಜನೆಗಳನ್ನು ಪಾಠಕ್ರಮದಲ್ಲಿ ಸೇರಿಸಿರುವರು. ಅಂಥ ಕೆಲವನ್ನು ಇಲ್ಲಿ ಉಲ್ಲೇಖಿಸಬಹುದು :

ಗೇರಿ ನಗರದ ನೀರಿನ ಪರೀಕ್ಷಕರೇ ಆ ಶಾಲೆಯ ರಸಾಯನಶಾಸ್ತ್ರದ ಅಧ್ಯಾಪಕರು. ಆ ಊರಿಗೆ ಸರಬರಾಜಾಗುತ್ತಿದ್ದ ನೀರಿನ ಪರೀಕ್ಷೆಯನ್ನು

ಶಾಲೆಯ ರಸಾಯನ ಮಂದಿರದಲ್ಲೇ ನಡೆಸುತ್ತಿದ್ದರು. ಆ ಕಾರ್ಯವನ್ನು ಬಾಲಕರಿಗೂ ವಹಿಸುತ್ತಿದ್ದರು. ಊರಿನ ಮಿಠಾಯಿ ಅಂಗಡಿಯ ತಿಂಡಿ ಪದಾರ್ಥ ಆರೋಗ್ಯಕರವೇ ಅಲ್ಲವೇ ಎಂಬುದರ ಪರೀಕ್ಷೆಯೂ ಶಾಲೆಯಲ್ಲೇ ನಡೆಯುತ್ತಿತ್ತು. ಅದನ್ನೂ ಬಾಲಕರೇ ನಡೆಸುತ್ತಿದ್ದರು. ಅದಕ್ಕನು ಕೂಲಿಸುವ ಪ್ರಯೋಗ ಮಂದಿರಗಳು ಶಾಲೆಯಲ್ಲಿ ಸಜ್ಜಾಗಿದ್ದುವು. ಹೀಗೆಯೇ ನಗರದ ಮುಖ್ಯ ಮುಖ್ಯ ಉದ್ಯಮಗಳು ಶಾಲೆಯ ಆವರಣ ದಲ್ಲಿಯೇ ನಡೆಯುವ ಏರ್ಪಾಡುಗಳಿದ್ದುವು. ಜೊತೆಗೆ, ಪೋಷಕರೂ ನಗರದ ಮುಂದಾಳುಗಳೂ ಶಾಲೆಯಲ್ಲಿ ಬಂದು ವಿಹರಿಸುವ ಅವಕಾಶವೂ ಕಲ್ಪನೆಯಾಗಿತ್ತು. ಇವೆಲ್ಲ ಕಾರಣಗಳಿಂದ ವಿದ್ಯಾರ್ಥಿಗಳು ತಮ್ಮ ಪಾಠ ಗಳನ್ನು ಕಲಿಯುವುದರ ಜೊತೆಗೆ ತಾವೂ ಸಮಾಜ ಜೀವನದಲ್ಲಿ ಭಾಗ ವಹಿಸುತ್ತಿರುವೆವೆಂದರಿತು ಅದರಲ್ಲಿ ತಮ್ಮ ಜವಾಬ್ದಾರಿಯನ್ನು ತಿಳಿಯಲು ಅವಕಾಶವಿತ್ತು; ಸತ್ಪ್ರಜಾ ಜೀವನದ ಅಭ್ಯಾಸವೂ ಅವರಿಗೆ ಆ ಮೂಲಕವೇ ಆಗುತ್ತಿತ್ತು.

ಡಾಲ್ಟನ್ ಮತ್ತು ಹೋವರ್ಡ್ ಶಿಕ್ಷಣಪದ್ಧತಿಗಳಂತೆ ಇದರಲ್ಲೂ ಒಂದೊಂದು ವಿಷಯಕ್ಕೂ ಒಬ್ಬೊಬ್ಬ ಪ್ರವೀಣ ಉಪಾಧ್ಯಾಯರಿರುತ್ತಾರೆ. ಜೊತೆಗೆ ಒಂದೊಂದು ತರಗತಿಗೂ ಒಬ್ಬೊಬ್ಬ 'ಫಾರಂ ಮಾಸ್ಟರು' ಇರು ತ್ತಾರೆ. ಈ 'ಫಾರಂ ಮಾಸ್ಟರು' ಒಂದು ವಿಷಯದಲ್ಲಿ ಪ್ರವೀಣರಾಗಿದ್ದು, ಅನ್ಯ ವಿಷಯದ ಬೋಧಕರೂ ಆಗಿರಬಹುದು. ಸಾಮಾನ್ಯವಾಗಿ ಆಯಾ ವಿಷಯದಲ್ಲಿ ಪ್ರವೀಣರಾದವರೇ ಆಯಾ ವಿಷಯಗಳನ್ನು ಎಲ್ಲ ತರಗತಿಗೂ ಬೋಧಿಸುತ್ತಾರೆ.

ಕಾಲಾವಧಿಯನ್ನು ಹೆಚ್ಚಿಸಿರುವುದರಿಂದ ವಿದ್ಯಾರ್ಥಿಗಳು ತಮ್ಮ ಶಕ್ತಿ ಸಾಮರ್ಥ್ಯಗಳಿಗೊಪ್ಪುವ ವೇಗದಲ್ಲಿ ಅಭ್ಯಾಸ ಮಾಡಬಹುದು; ಅವರವರ ಅಭಿರುಚಿ ಆಸಕ್ತಿಗಳನ್ನನುಸರಿಸಿ ಬೇರೆ ಬೇರೆ ಶಿಕ್ಷಣ ಪಡೆಯು ವುದಕ್ಕೂ ಸಹಾಯವಾಗುತ್ತದೆ. ತರಗತಿಯ ಉಪಾಧ್ಯಾಯರೊಡನೆ ಪರ್ಯಾಲೋಚಿಸಿ ಒಬ್ಬೊಬ್ಬ ವಿದ್ಯಾರ್ಥಿಯೂ ತನ್ನ ಕಾರ್ಯಯೋಜನೆ ಯನ್ನು ಮುಂಚಿತವಾಗಿ ತಯಾರಿಸಬೇಕು. ಸಾಮಾನ್ಯವಾಗಿ ಅದನ್ನು ಬದಲಾಯಿಸುವಂತಿಲ್ಲ.

ಸರದಿಯ ಪ್ರಕಾರ ಕೆಲಸ ಮಾಡಲು ಅನುಕೂಲಿಸುವ ಈ ರೀತಿಯ ಶಾಲೆಗಳು ಭಾರತದಲ್ಲೂ ಆರಂಭವಾಗಬಹುದೆಂದು ಹರ್ಟಾಗ್‌ರವರು ತಮ್ಮ ವರದಿಯಲ್ಲಿ ಸೂಚಿಸಿರುವರು. ಶಾಲೆಗಳಲ್ಲಿ ದೊಡ್ಡ ಭಾಷಣಾಲಯಗಳಿರುವುದರಿಂದ ಊರಿನ ವರ್ತಕರೂ, ಉದ್ಯೋಗಸ್ಥರೂ ಬಂದು ತಮ್ಮ ಅನುಭವಗಳ ಮೇಲೆ ಭಾಷಣ ಮಾಡಬಹುದು; ಜಾಹೀರಾತುದಾರರು ಮಕ್ಕಳಿಗೆ ಆಕರ್ಷಣೀಯವಾಗುವಂತೆ ಜಾಹೀರಾತುಗಳನ್ನು ಪ್ರದರ್ಶಿಸಬಹುದು; ಸಾಮಾಜಿಕ ಸಮಾರಂಭಗಳಲ್ಲಿ ವಿದ್ಯಾರ್ಥಿಗಳ ಭಾಷಣ, ಅಭಿನಯ, ನರ್ತನ, ಮುಂತಾದ ಕೌಶಲಗಳನ್ನು ಏರ್ಪಡಿಸಬಹುದು. ಈ ಪದ್ಧತಿಯಿಂದ ಭಾರತ ಒಂದಂಶವನ್ನು ಕಲಿಯಬಹುದು: ಶಾಲೆಯ ಕಟ್ಟಡಕ್ಕೆ ಅಭಾವವಿರುವ ಕಡೆಗಳಲ್ಲಿ ಬೆಳಗಿನ ಹೊತ್ತು ಕೆಲವು ತರಗತಿಗಳನ್ನೂ ಮಧ್ಯಾಹ್ನದ ಹೊತ್ತು ಇನ್ನು ಕೆಲವು ತರಗತಿಗಳನ್ನೂ ನಡಸಬಹುದು; ಹಾಗೆಯೇ ಒಂದೇ ಕಟ್ಟಡವಿರುವ ಕಡೆ ಒಂದು ವೇಳೆ ಪ್ರಾಥಮಿಕ ಶಾಲೆಯನ್ನೂ, ಅನಂತರ ಮಾಧ್ಯಮಿಕ ಶಾಲೆಯ ತರಗತಿಗಳನ್ನೂ ಸರದಿಯ ಪ್ರಕಾರ ನಡಸಬಹುದು. ಈ ಕ್ರಮ ನಮ್ಮ ಸಂಸ್ಥಾನದಲ್ಲಿ ಕೆಲವೆಡೆ ಇಂದು ಆಚರಣೆಯಲ್ಲಿರುವುದು ಕಂಡುಬರುತ್ತದೆ.

ಗೇರಿ ಶಿಕ್ಷಣಪದ್ಧತಿಯಿಂದ ಮಕ್ಕಳು ಸಮಾಜ ಚತುರರಾಗುತ್ತಾರೆ. ಆದರೆ ಅವರ ಕಣ್ಮುಂದೆ ಅದ್ಭುತವಾದ ಪ್ರಯೋಗ ಮಂದಿರಗಳೇ ಬೃಹದಾಕಾರವಾಗಿ ನಿಂತು ಓದುಬರಹ ಲೆಕ್ಕಾಚಾರಗಳ ಕಡೆ ತಕ್ಕಷ್ಟು ಗಮನ ಕೊಡದೇ ಹೋಗಬಹುದು. ಈ ದೋಷವನ್ನು ನಿವಾರಿಸಿಕೊಂಡು ಶಾಲಾ ಕಟ್ಟಡದ ಅಭಾವ ತುಂಬ ಇರುವ ಕೆಲವೆಡೆಗಳಲ್ಲಿ ನಮ್ಮ ನಾಡಿನಲ್ಲಿ ಈ ಪದ್ಧತಿಯ ಮೂಲತತ್ತ್ವವನ್ನು ಮಾತ್ರ ಅನುಕರಿಸಬಹುದು.

## ೬. ಉದ್ಯಮ (ಪ್ರಾಜೆಕ್ಟ್) ಶಿಕ್ಷಣಪದ್ಧತಿ

ಹಿಂದೆ ವಿವರಿಸಿದ ಎಲ್ಲ ಪದ್ಧತಿಗಳಲ್ಲೂ ಜೀವನಕ್ಕೆ ಸಂಬಂಧಿಸಿದ ಉದ್ಯಮಗಳನ್ನು ಸಾಮೂಹಿಕವಾಗಿ ಆಚರಿಸುವ ಅವಕಾಶ ಇದ್ದೇ ಇದೆ. ಆದರೂ ಅವಾವುದರಲ್ಲೂ ಉದ್ಯಮಕ್ಕೇ ಪ್ರಾಧಾನ್ಯತೆಯಿಲ್ಲ; ಅದನ್ನೇ ಶಿಕ್ಷಣ ಕ್ರಮವನ್ನಾಗಿ ಮಾಡಿಕೊಂಡು ಆರಂಭವಾಗಿರುವ ಉದ್ಯಮ ಶಿಕ್ಷಣಪದ್ಧತಿ

ಅನೇಕ ಕಡೆ ಪ್ರಚಾರದಲ್ಲಿರುವುದರಿಂದಲೂ, ಆ ಮೂಲ ಪದ್ಧತಿಯನ್ನು ಮಾರ್ಪಡಿಸಿ ಸ್ಥಳೀಯ ಸನ್ನಿವೇಶಗಳಿಗೊಪ್ಪುವಂತೆ ಅನ್ವಯಿಸಿಕೊಳ್ಳಲು ಎಲ್ಲ ದೇಶಗಳೂ ಪ್ರಯತ್ನಿಸುತ್ತಿರುವುದರಿಂದಲೂ ಅದನ್ನಿಲ್ಲಿ ಪರಿಗಣಿಸುವುದು ಅಗತ್ಯವೆನಿಸಿದೆ.

ಉದ್ಯಮ (ಪ್ರಾಜೆಕ್ಟ್) ಎಂಬ ಪದ ಹಳೆಯದು. ಕಿಲ್ ಪ್ಯಾಟ್ರಿಕ್ ಮೊದಲಾದ ಅಮೆರಿಕದ ಶಿಕ್ಷಣವೇತ್ತರು ೧೯೨೦ರಿಂದ ಈಚೆಗೆ ಪ್ರಾಥಮಿಕ ಶಿಕ್ಷಣದಲ್ಲಿ ತಾವು ಆರಂಭಿಸಿದ ನೂತನ ಪದ್ಧತಿಗೆ ಈ ಹೆಸರನ್ನು ಬಳಸಿಕೊಂಡರು. ಉದ್ದೇಶಪೂರ್ವಕವಾಗಿ ಸ್ವಾಭಾವಿಕ ಸನ್ನಿವೇಶಗಳಲ್ಲಿ ನಡಸಿ ಮುಗಿಸುವ ಕೆಲಸವೊಂದಕ್ಕೆ ಉದ್ಯಮವೆಂದು ಹೇಳಬಹುದು. ಜೀವನಕ್ಕೆ ಸಂಬಂಧಿಸಿದ ಅಂಥ ಅನೇಕ ಉದ್ಯಮಗಳನ್ನೊಳಗೊಂಡ ಪಠ್ಯವಸ್ತುವನ್ನು ಹ್ಯೇಗೆ ಪ್ರಾಥಮಿಕ ಶಾಲೆಯಲ್ಲಿ ಯಶಸ್ವಿಯಾಗಿ ಆಚರಣೆಗೆ ತರಬಹುದೆಂಬುದನ್ನು ಹಿಂದೆಯೇ ವಿವರಿಸಿರುತ್ತೇವೆ. ಯಾವ ಉದ್ಯಮವನ್ನೇ ಆರಂಭಿಸಲಿ, ಆಗ ಮಕ್ಕಳ ಶಿಕ್ಷಣಕ್ಕೆ ಒಂದು ನಿರ್ದಿಷ್ಟ ಗುರಿಯಿರುತ್ತದೆ; ಅದನ್ನು ಸಾಧಿಸುವ ಮಾರ್ಗವನ್ನು ಆ ಗುರಿ ತೋರಿಸಿಕೊಡುತ್ತದೆ. ಆ ಉದ್ಯಮವನ್ನು ಮಾಡಬೇಕೆಂಬ ಹೆಬ್ಬಯಕೆಯಿರುವುದರಿಂದ ವಿದ್ಯಾರ್ಥಿಗಳು ಕಾರ್ಯಮುಖರಾಗುವಂತೆ ಉತ್ತೇಜನ ಹುಟ್ಟಿಸುತ್ತದೆ. ಅಂಥ ಉದ್ದೇಶಪೂರ್ವಕವೂ ಉತ್ಸಾಹಪೂರಿತವೂ ಆದ ಶಿಕ್ಷಣಕ್ರಮ ಯಶಸ್ವಿಯಾಗುವುದರಲ್ಲಿ ಆಶ್ಚರ್ಯವೇನಿಲ್ಲ.

ಜೀವನದಲ್ಲಿ ವಿಧವಿಧವಾದ ಉದ್ಯಮಗಳು ನಿರಂತರವೂ ನಡೆಯುತ್ತಿರುವುದರಿಂದಲೇ ಸಮಾಜ ಉಳಿದು ಬೆಳೆಯುತ್ತಿದೆ. ಅಂಥ ಉದ್ಯಮಗಳನ್ನೇ ಶಾಲೆಗಳಲ್ಲಿ ಆಚರಿಸುವುದರಿಂದ ಸಾಮಾಜಿಕ ಸನ್ನಿವೇಶಗಳನ್ನು ಶಾಲೆಯಲ್ಲೂ ನಿರ್ಮಿಸಿದಂತಾಗುತ್ತದೆ; ಉದ್ದೇಶಪೂರ್ವಕವಾದ ಅಂಥ ಹಲವು ಉದ್ಯಮಗಳನ್ನು ಆಚರಿಸುವಾಗ ಆವಶ್ಯಕವೆನಿಸುವ ಇತರ ವಿಷಯಗಳನ್ನು ಚತುರತೆಯಿಂದ ಬೋಧಿಸುವುದಾದರೆ ಆ ಬೋಧನೆ ಮಕ್ಕಳಿಗೆ ಚೆನ್ನಾಗಿ ಹಿಡಿಯಬಲ್ಲದು. ಕೇವಲ ಉದ್ಯಮಗಳನ್ನು ಮಾಡುವುದಕ್ಕೇ ಪ್ರಾಶಸ್ತ್ಯವಿರುವುದರಿಂದ ಈ ಕ್ರಮ ಓದುಬರಹ ಲೆಕ್ಕಾಚಾರಗಳನ್ನು ಚೆನ್ನಾಗಿ ಕಲಿಸಲಾರದೆಂದು ಹಲವರು ಟೀಕಿಸಿರುವರು. ಆ ಜ್ಞಾನವನ್ನೇ ಪ್ರತ್ಯೇಕವಾಗಿ

ಸುವ್ಯವಸ್ಥಿತ ರೀತಿಯಲ್ಲಿ ಕಲಿಸುವ ಏರ್ಪಾಡು ಈ ಕ್ರಮದಲ್ಲಿ ಇಲ್ಲವಾದರೂ, ಪ್ರಯೋಗ ಫಲಿತಾಂಶಗಳ ಆಧಾರದಮೇಲೆ ಹೇಳುವುದಾದರೆ ಇತರ ಕ್ರಮಗಳಿಗಿಂತ ಉದ್ಯಮ ಶಿಕ್ಷಣದಿಂದ ಮಕ್ಕಳು ಅವುಗಳನ್ನು ಚೆನ್ನಾಗಿ ಕಲಿಯಬಲ್ಲರು. ಏಕೆಂದರೆ ಯಾವ ಉದ್ಯಮ ಮಾಡಬೇಕಾದರೂ ಆಗ ಆವಶ್ಯಕವೆನಿಸುವ ಓದುಬರಹ ಲೆಕ್ಕಾಚಾರಗಳನ್ನು ಕಲಿತುಕೊಂಡೇ ಉದ್ಯಮವನ್ನು ಮುಂದುವರಿಸಿ ಮುಗಿಸಬೇಕಾಗುತ್ತದೆ. ಅಂಥ ಆವಶ್ಯಕತೆಯನ್ನು ಕಂಡ ಮಕ್ಕಳು ಅದನ್ನು ಆಸಕ್ತಿಯಿಂದ ಕಲಿಯುತ್ತಾರೆ; ಕಲಿವು ಯಶಸ್ವಿಯಾಗೇ ಆಗುತ್ತದೆ. ಜೊತೆಗೆ ಯಾವ ಉದ್ಯಮವನ್ನಾಗಲಿ ಅದನ್ನು ಮಾಡಿ ಕಲಿತರೆ ಕಲಿವು ಫಲಪ್ರದವಾಗಬಲ್ಲದು: ಕೇವಲ ಪಾಠವನ್ನು ಕೇಳುವುದರಿಂದ ಉದ್ಯಮವೊಂದನ್ನು ಕಲಿಸಿದಂತಾಗಲಾರದು; ಈಜುವುದನ್ನು ಈಜಿಯೇ ಕಲಿಯಬೇಕು; ಕೇಳಿ ಕಲಿಯಲು, ಓದಿಕೊಂಡು ಕಲಿಯಲು, ಸಾಧ್ಯವಿಲ್ಲ. ಉದ್ಯಮ ಶಿಕ್ಷಣಪದ್ಧತಿಯಲ್ಲಿ ಎಲ್ಲವನ್ನೂ ಆಚರಿಸಿ ಕಲಿಯುವ ಅವಕಾಶವಿರುವುದರಿಂದ ಮನಶ್ಶಾಸ್ತ್ರದ ಪ್ರಕಾರ ಕಲಿವು ಯಶಸ್ವಿಯಾಗಬಲ್ಲದು.

ಯಾವ ಉದ್ಯಮಾಚರಣೆಯಲ್ಲಾಗಲೀ ನಾಲ್ಕು ಅಂತಸ್ತುಗಳಿವೆ: ಮೊದಲು ಆ ಉದ್ಯಮಾಚರಣೆಯ ಆವಶ್ಯಕತೆ ಮಕ್ಕಳಲ್ಲಿ ಹುಟ್ಟಬೇಕು; ಅನಂತರ ಅದನ್ನು ಸಾಧಿಸುವ ರೀತಿ ಅಥವಾ ಯೋಜನೆ ಅವರ ಮನಸ್ಸಿನಲ್ಲಿ ರೂಪುಗೊಳ್ಳಬೇಕು; ಆಮೇಲೆ ಅದನ್ನು ಆಚರಿಸಿ ಮುಗಿಸಬೇಕು; ಕೊನೆಗೆ ಅದರ ಫಲಿತಾಂಶವನ್ನು ಪರೀಕ್ಷಿಸಿ ನೋಡಬೇಕು.

ಉದ್ಯಮ ಶಿಕ್ಷಣಶಾಲೆಗಳಲ್ಲಿ ಪಾಠಪ್ರವಚನಗಳ ಮತ್ತು ತರಗತಿಗಳ ವ್ಯವಸ್ಥೆ ಕ್ರಮ ವಿರಹಿತವಾಗಿರುವಂತೆ ತೋರಬಹುದು; ಆದರೂ ಮಕ್ಕಳು ಉತ್ಸಾಹದಿಂದ ತಮ್ಮ ಮುಂದಿರುವ ಉದ್ಯಮವನ್ನು ಸಾಧಿಸಲು ತೊಡಗಿ ಎದುರುಬರುವ ಸಮಸ್ಯೆಗಳನ್ನು ಬಿಡಿಸಿಕೊಂಡು ಮುಂದುವರಿಯುವುದರಲ್ಲಿ ಮಗ್ನರಾಗಿರುತ್ತಾರೆ; ಸಮಾಜದಲ್ಲಿ ಜನರು ಬಾಳುತ್ತಿರುವಂತೆ ಉದ್ಯಮವನ್ನು ಆಚರಿಸುವಾಗಲೂ ಅವರು ನಡೆದುಕೊಳ್ಳುವರು; ಶಾಲೆಯ ಸಾಂಪ್ರದಾಯಿಕ ಲಕ್ಷಣಗಳು ಕಾಣದಿದ್ದರೂ ಸಾಮಾಜಿಕ ಚತುರತೆಯೂ, ಜೀವನದ ಸುಖಶಾಂತಿಗೆ ನೆರವಾಗತಕ್ಕ ಸಹಕಾರ ಸದ್ಭಾವನೆಗಳೂ ಮಕ್ಕಳಲ್ಲಿ ಈ ಶಿಕ್ಷಣದಿಂದ ಮೂಡಬಲ್ಲವು. ಜೀವನಕ್ಕೆ ಅನಿವಾರ್ಯವೆನಿಸುವ ಅಂಥ

ವಿಷಯ ಜ್ಞಾನವನ್ನು ಉತ್ಸಾಹದಿಂದಲೇ ಕಲಿಯುವರು. ಇವೆಲ್ಲವೂ ಶಾಲಾಜೀವನದಿಂದ ಮೂಡುವ ಉತ್ತಮೋತ್ತಮ ಸಂಸ್ಕರಣಗಳಲ್ಲವೆ ?

ಇಂಥ ಉದ್ಯಮ ಶಾಲೆಗಳಲ್ಲಿ ಶಿಕ್ಷಣ ಯಶಸ್ವಿಯಾಗಬೇಕಾದರೆ ಉದ್ಯಮಗಳನ್ನು ಆರಿಸಿ ಚತುರತೆಯಿಂದ ಜೋಡಿಸಿರಬೇಕು; ಕ್ರಮ ಕ್ರಮವಾಗಿ ಅವುಗಳ ಆಚರಣೆಯಿಂದ ಮಕ್ಕಳು ಸಾಂಪ್ರದಾಯಿಕ ಪಠ್ಯಭಾಗಗಳನ್ನು ಉಚಿತರೀತಿಯಲ್ಲಿ ಕಲಿಯುವಂತೆಯೂ ಜೋಡಿಸಿರಬೇಕು. ಅವನ್ನು ಆಚರಿಸಿ, ಶಾಲಾ ಜೀವನ ಮುಗಿಸುವುದರೊಳಗಾಗಿ ಆ ಅಂತಸ್ತಿನ ಮಕ್ಕಳಿಗೆ ಆವಶ್ಯಕವೆನಿಸುವ ಸುವ್ಯವಸ್ಥಿತ ರೀತಿಯ ಶಿಕ್ಷಣ ಎಲ್ಲ ವಿಷಯಗಳಲ್ಲೂ ದೊರಕುವಂತೆಯೂ ಜೋಡಣೆಯಾಗಿರಬೇಕು.

ಒಂದು ಶಾಲೆಯಲ್ಲಿ ಆರಂಭಿಸತಕ್ಕ ಉದ್ಯಮ ಆ ಪ್ರದೇಶದ ಜನಜೀವನದಲ್ಲಿ ಆಚರಣೆಯಲ್ಲಿರುವಂಥದಿರಬೇಕು; ಸುಲಭವಾಗಿ ಉಪಕರಣಗಳನ್ನು ಒದಗಿಸಿಕೊಳ್ಳುವಂತೆಯೂ ಇರಬೇಕು; ಅದಕ್ಕಾಗಿ ವ್ಯಯಮಾಡಿದ ಕಾಲಕ್ಕೆ ತಕ್ಕಷ್ಟು ಪ್ರತಿಫಲ ಕಂಡುಬರುವಂತೆಯೂ ಇರಬೇಕು. ದೀರ್ಘಕಾಲಾವಧಿಯ ಉದ್ಯಮಗಳನ್ನು ಆದಷ್ಟು ಕಡಮೆಮಾಡಬೇಕು. ಶಾಲೆಯ ಮೊದಲೆರಡು ವರ್ಷಗಳಲ್ಲಿ ಆದಷ್ಟು ಸಣ್ಣ ಸಣ್ಣ ಉದ್ಯಮಗಳನ್ನು ಸೇರಿಸಬಹುದು. ಹಾಗೆ ಆರಿಸಿದ ಉದ್ಯಮಗಳ ಆಚರಣೆಯಿಂದ ಅಲ್ಲಿನ ಜನಜೀವನದ ಸ್ವರೂಪ ಮಕ್ಕಳಿಗೆ ಆಗುವಂತಿರಬೇಕು. ಅದು ಅವರ ಮುಂದಿನ ಜೀವನಕ್ಕೆ ನೆರವಾಗುವಂತೆಯೂ, ಅಂದಿನ ಜೀವನಕ್ಕೆ ಉಪಯುಕ್ತವೆನಿಸುವಂತೆಯೂ ಇರಬೇಕು. ಅವುಗಳನ್ನು ಆಚರಿಸುತ್ತ ಹೋದಂತೆ ಕ್ರಮ ಕ್ರಮವಾಗಿ ವಿಶಾಲ ಪ್ರಪಂಚದ ಪರಿಚಯವೂ ಆಗಬೇಕು. ಬೇರೆ ಬೇರೆ ವಿಷಯಗಳ ಕಲಿವಿಗೂ ಒಳ್ಳೆಯ ಅಭ್ಯಾಸ ಮತ್ತು ಭಾವನೆಯ ಬೆಳವಣಿಗೆಗೂ ಸಹಾಯವಾಗಬೇಕು.

ಉದ್ಯಮವನ್ನು ಆಚರಿಸಬೇಕೆಂಬ ಹೆಬ್ಬಯಕೆಯಿಂದ ಕಾರ್ಯಮುಖರಾಗಿರುವ ಮಕ್ಕಳು ಆವಶ್ಯಕವೆನಿಸಿದ ವಿಷಯವನ್ನು ಕಲಿಯಲು ಕಾತರರಾಗಿರುತ್ತಾರೆ. ಆದ್ದರಿಂದ ಕಲಿವು ಯಶಸ್ವಿಯಾಗುವುದು; ಕಾರ್ಯಭಾರವನ್ನು ಹೊತ್ತು ನಿರ್ವಹಿಸುವ ಶಕ್ತಿಯೂ ಬೆಳೆಯುವುದು; ಜೀವನದಲ್ಲಿ ಎದುರುಬರುವ ಸಮಸ್ಯೆಗಳನ್ನು ಆಲೋಚಿಸಿ ಬಿಡಿಸಿಕೊಂಡು ಮುಂದು

ಎದುರಿಸುವ ಸಾಹಸವೂ ಬೆಳೆಯುವುದು; ಪರಿಶೀಲನೆ, ಶ್ರದ್ಧೆ, ಸಹಕಾರ ಮತ್ತು ನಿಷ್ಪಕ್ಷಪಾತದೃಷ್ಟಿ–ಇವೂ ಬೆಳೆಯಬಲ್ಲವು; ಶಾಲೆಗೂ ಸಮಾಜಕ್ಕೂ ಇರುವ ಅಂತರ ತಪ್ಪಿ ಅವೆರಡಕ್ಕಿರುವ ಭಿನ್ನತೆ ಕಡಮೆಯಾಗುತ್ತದೆ. ಸೋಮಾರಿತನದಿಂದಿದ್ದು, ಪ್ರಶ್ನೆ ಕೇಳಿದಾಗ ಉಪಾಧ್ಯಾಯರನ್ನು ವಂಚಿಸಲು ಯತ್ನಿಸುವ ದುರ್ನಡತೆ ಕಡಮೆಯಾಗುತ್ತದೆ; ಆವಶ್ಯಕತೆಯೊದಗಿದಾಗ ಆಲಸ್ಯವಿಲ್ಲದೆ ನಿರ್ವಂಚನೆಯಿಂದ ಕೆಲಸಮಾಡುವ ಮನಸ್ಥೈರ್ಯವೂ ಸ್ಫುಟ ಗೊಳ್ಳುತ್ತದೆ. ಗ್ರಾಮಾಂತರದ ಶಾಲೆಗಳಲ್ಲಿ ಈ ಉದ್ಯಮ ಶಿಕ್ಷಣ ಒಂದು ಆಕರ್ಷಣೀಯವೆನಿಸುವ ಕಾರ್ಯಯೋಜನೆಯಂತಿರುತ್ತದೆ. ಆ ಮೂಲಕ ಮಕ್ಕಳಿಗೆ ಶ್ರಮಜೀವನದಲ್ಲಿ ಗೌರವ ಹೆಚ್ಚಿ, ದೇಶಾಭ್ಯುದಯಕ್ಕೆ ನೆರವಾಗುವ ಮನೋಭಾವ ಬೆಳೆಯುತ್ತದೆ. ಉದ್ಯಮವನ್ನಾಚರಿಸುವಾಗ ಆಲೋಚಿಸಿ, ತೀರ್ಮಾನಿಸಿಕೊಂಡು ಮುಂದೆ ಹೆಜ್ಜೆಯಿಡಬೇಕಾಗಿರುವುದರಿಂದ ವಿಜ್ಞಾನ ಯುಗದ ಸಾಮಾಜಿಕ ಜೀವನಕ್ಕೆ ಆವಶ್ಯಕವಾದ ವಿಚಾರದೃಷ್ಟಿಯೂ ಬೆಳೆಯುತ್ತದೆ.

ಈ ಪದ್ಧತಿಯಲ್ಲಿ ದೋಷಗಳೂ ಇವೆ. ಉದ್ಯಮಗಳೇ ಮಕ್ಕಳ ಮನಸ್ಸಿನಲ್ಲಿ ಮಹತ್ತಾಗಿ ಕಾಣುವುದರಿಂದ ಓದುಬರಹ ಲೆಕ್ಕಾಚಾರಗಳನ್ನು ಕಡೆಗಣಿಸಬಹುದು; ಆ ಕಾರ್ಯದಲ್ಲಿ ತೊಡಗಿರುವಾಗ ಪ್ರಾಸಂಗಿಕವಾಗಿ ಓದುಬರಹ, ಲೆಕ್ಕ, ಮೊದಲಾದವನ್ನು ಕಲಿಸುವುದು ಕಷ್ಟವಾಗುತ್ತದೆ. ಹಾಗೂ, ಈ ಪದ್ಧತಿಯಲ್ಲಿ ಶಿಕ್ಷಣ ಪಡೆದಿರುವ ಉತ್ತಮ ಶಿಕ್ಷಕರು ಮಾತ್ರ ಅದನ್ನು ಯಶಸ್ವಿಮಾಡಬಲ್ಲರು. ಇದರಿಂದ ಶಿಕ್ಷಣ ಅಲ್ಲಿಷ್ಟು ಇಲ್ಲಿಷ್ಟು, ಕೆದಕಿ ಬೆದಕಿ, ನಡೆದಂತೆ ತೋರುವುದು; ಸುವ್ಯವಸ್ಥಿತವಾಗಿ ಸಾಗಲಾರದೆಂದೂ ಅನ್ನಿಸಬಹುದು. ಉದ್ಯಮಗಳೇ ಪ್ರಧಾನವೆಂಬ ಭಾವ ಬೆಳೆದು ಮಕ್ಕಳು ತತ್ತ್ವ ನಿಯಮಗಳ ಕಡೆ, ವಿಷಯ ಜ್ಞಾನದ ಕಡೆ ತಕ್ಕಷ್ಟು ಗಮನಕೊಡುವುದಿಲ್ಲ. ಆದರೆ ಈ ನ್ಯೂನತೆಗಳನ್ನು ಚತುರ ಶಿಕ್ಷಕರು ನಿವಾರಿಸಿಕೊಂಡು ಶಿಕ್ಷಣಾಭಿ ವೃದ್ಧಿಯನ್ನು ಸಾಧಿಸಬಲ್ಲರು. ಈ ಪದ್ಧತಿಯನ್ನು ಭಾರತದ ಆದ್ಯಂತವೂ ಪ್ರಾಥಮಿಕ ಶಾಲೆಗಳಲ್ಲಿ ಉಚಿತವೆನಿಸಿದ ಮಾರ್ಪಾಡುಗಳೊಡನೆ ಆಚರಣೆಗೆ ತರಬಹುದು. ನಮ್ಮ ನಾಡಿನ ಪ್ರಾಥಮಿಕ ರಂಗದಲ್ಲಿ ತಲೆದೋರಿರುವ ಬಗೆ ಬಗೆಯ ಸಮಸ್ಯೆಗಳನ್ನು ಆ ಮೂಲಕ ಪರಿಹರಿಸಲು ಸಾಧ್ಯವಾಗಬಹುದು.

## ೭. ಮೂಲ ಶಿಕ್ಷಣಪದ್ಧತಿ

ಇದುವರೆಗೂ ವಿವರಿಸಿದವು ಅಮೆರಿಕ ಮತ್ತು ಇಂಗ್ಲೆಂಡಿನಲ್ಲಿ ಆರಂಭವಾಗಿರುವ ಶಿಕ್ಷಣಪದ್ಧತಿಗಳು. ಭಾರತದಲ್ಲೂ ಹಲವು ನೂತನ ಪದ್ಧತಿಗಳು ಆರಂಭವಾಗಿವೆ. ವಿದ್ಯಾಮಂದಿರ, ಗುರುಕುಲಾಶ್ರಮ, ಮುಂತಾದವು ಭಾರತದ ಪ್ರಾಚೀನ ಶಿಕ್ಷಣಪದ್ಧತಿಯನ್ನು ಮರಳಿ ಆಚರಣೆಗೆ ತರಲು ರೂಪುಗೊಂಡ ಯತ್ನಗಳಂತಿವೆ. ಶಾಂತಿ ನಿಕೇತನದ ವಿದ್ಯಾ ಕೇಂದ್ರದಲ್ಲಿ ನೂತನ ರೀತಿಯಲ್ಲಿ ಶಿಕ್ಷಣ ಕೊಡುವುದು ಆರಂಭವಾಗಿದೆ. ಅಲ್ಲಿ ಭಾರತೀಯರ ಮತ್ತು ಪಾಶ್ಚಿಮಾತ್ಯರ ಉತ್ತಮ ಪದ್ಧತಿಗಳನ್ನು ಸಮನ್ವಯಗೊಳಿಸಿಕೊಳ್ಳಲು ಯತ್ನ ನಡೆಯುತ್ತಿದೆ. ಆದರೆ ಇವಾವೂ ಹೆಚ್ಚಾಗಿ ಪ್ರಚಾರವಾಗದೆ ಪ್ರಯೋಗಾವಸ್ಥೆಯಲ್ಲಿ ಮಾತ್ರ ಉಳಿದಿವೆ. ಕೆಲವು ವರ್ಷಗಳ ಹಿಂದೆ ಜಕೀರ್ ಹುಸೇನರ ಅಧ್ಯಕ್ಷತೆಯಲ್ಲಿ ರೂಪುಗೊಂಡು ಮಹಾತ್ಮ ಗಾಂಧಿಯವರ ಪುರಸ್ಕಾರವನ್ನು ಪಡೆದ 'ವಾರ್ಧಾ ಶಿಕ್ಷಣ ಯೋಜನೆ' ಭಾರತೀಯ ಪ್ರಾಥಮಿಕ ಶಾಲೆಗಳಿಗೆ ಅನುಗುಣವಾದ ಪದ್ಧತಿಯೆಂದು ಪ್ರಚಾರಕ್ಕೆ ಬಂದಿದೆ. 'ಆರ್ಥಿಕವಾಗಿ ಒಂದೊಂದು ಶಾಲೆಯೂ ಸ್ವತಂತ್ರವಾಗಿ ನಡೆಯಬೇಕು; ನಿಲ್ಲಬೇಕು. ಕಸಬುಗಳನ್ನೇ ಪ್ರಧಾನ ಶಿಕ್ಷಣವನ್ನಾಗಿ ಮಾಡಿಕೊಂಡು ಅವನ್ನು ಆಚರಿಸುವಾಗ ಇತರ ವಿಷಯ ಜ್ಞಾನವನ್ನು ಬೋಧಿಸಬೇಕು,' ಎಂಬುದು ಈ ಯೋಜನೆಯ ಉದ್ದೇಶ. ಮಕ್ಕಳು ಮಾಡುವ ಕಸಬುಗಳಿಂದ ಉತ್ಪನ್ನವಾದ ಪದಾರ್ಥಗಳನ್ನು ಮಾರಿ ಉಪಾಧ್ಯಾಯರು ತಮ್ಮ ಸಂಭಾವನೆಯನ್ನು ಪಡೆಯಬೇಕೆಂದು ಈ ಯೋಜನೆಯಲ್ಲಿ ಉದ್ದೇಶಿಸಿದ್ದರೂ ಅದು ಸಾಧ್ಯವಾಗದ ವಿಷಯವೆಂದು ಎಲ್ಲರೂ ಟೀಕಿಸಿರುವರು.

ಈ ಯೋಜನೆಯನ್ನೇ ಅಲ್ಪ ಸ್ವಲ್ಪ ಮಾರ್ಪಡಿಸಿಕೊಂಡು 'ಮೂಲ ಶಿಕ್ಷಣ ಪದ್ಧತಿ' ಎಂಬ ಹೆಸರಿನಿಂದ ಭಾರತದ ಅನೇಕ ಕಡೆ ಆಚರಣೆಗೆ ತರಲಾಗುತ್ತಿದೆ. ಶಾಲೆಗಳಿರುವ ಪ್ರದೇಶಗಳಲ್ಲಿ ಪ್ರಚಾರದಲ್ಲಿರುವ ಸಣ್ಣ ಪುಟ್ಟ ಉದ್ಯಮಗಳನ್ನು ಕೇಂದ್ರವಾಗಿ ಮಾಡಿಕೊಂಡು ಆ ಉದ್ಯಮವನ್ನು ಆಚರಿಸುವಾಗ ಅವಶ್ಯಕವಾದ ಎಲ್ಲ ವಿಷಯಗಳನ್ನೂ ಬೋಧಿಸುವುದೇ ಈ ಪದ್ಧತಿಯ ಉದ್ದೇಶ. ಪ್ರಾಥಮಿಕ ಶಾಲೆಯಲ್ಲಿ ಏಳು ವರ್ಷಗಳ ತನಕ ಈ ಶಿಕ್ಷಣವಾಗಬೇಕೆಂದು ನಿಯೋಜಿಸಿರುತ್ತಾರೆ. ವಾರ್ಧಾದಲ್ಲಿ ಅದಕ್ಕೆ

ಅದಕ್ಕೆ ಆವಶ್ಯಕವಾದ ಪ್ರಾಯೋಗಿಕ ಶಾಲೆಗಳನ್ನು ಆರಂಭಿಸಿ ಉಪಾಧ್ಯಾಯರಿಗೆ ಶಿಕ್ಷಣವನ್ನು ಕೊಡುತ್ತಿದ್ದಾರೆ. ಪ್ರಾಥಮಿಕ ದೆಶೆಯಲ್ಲಿ ನಮ್ಮ ದೇಶದವರು ಆರಂಭಿಸಿರುವ ಈ ಶಿಕ್ಷಣಪದ್ಧತಿ ನಮ್ಮ ನಾಡಿನ ಸ್ಥಿತಿಗತಿಗಳಿಗನುಗುಣವಾಗಿದೆ; ಇಲ್ಲಿನವರಲ್ಲಿ ಸ್ವಾವಲಂಬನವನ್ನೂ, ಆತ್ಮಗೌರವವನ್ನೂ ಬೆಳಸಿ ಮುಂದೆ ಗೌರವಯುತರೂ ಸ್ವತಂತ್ರವಾಗಿ ಜೀವವನ್ನು ನಡಸಬಲ್ಲವರೂ ಆದ ವ್ಯಕ್ತಿಗಳನ್ನು ನಿರ್ಮಿಸಲು ಅದು ನೆರವಾಗಬಲ್ಲದು.

ಇದು ಹಿಂದೆ ವಿವರಿಸಿದ ಉದ್ಯಮ ಶಿಕ್ಷಣಪದ್ಧತಿಯ ಒಂದು ಅನುಸರಣೆಯಂತೆ ತೋರಬಹುದು. ಆದರೆ ನಮ್ಮ ದೇಶದ ಸ್ಥಿತಿಗತಿಗಳಿಗನುಸಾರವಾಗಿ ಇಲ್ಲಿನವರ ಯತ್ನದ ಫಲವಾಗಿ ಪ್ರತ್ಯೇಕವಾಗಿಯೇ ರೂಪುಗೊಂಡಿರುವ ಭಾರತೀಯ ಶಿಕ್ಷಣಪದ್ಧತಿಯಿದು. ಈ ಮೂಲಶಿಕ್ಷಣಪದ್ಧತಿ ಇನ್ನೂ ಪ್ರಯೋಗಾವಸ್ಥೆಯಲ್ಲಿದ್ದರೂ, ಅದಷ್ಟು ಬೇಗ ಪ್ರಚಾರಕ್ಕೆ ತರಬೇಕೆಂಬ ಬಯಕೆ ನಾಡಿನ ಮುಂದಾಳುಗಳ ಗಮನದಲ್ಲಿದೆ.

ಕೇವಲ ಪ್ರಾಥಮಿಕ ಶಿಕ್ಷಣರಂಗದ ಅನ್ವಯಕ್ಕಾಗಿ ಈ ಪದ್ಧತಿ ರೂಪುಗೊಂಡು ಪ್ರಚಾರವಾಗುತ್ತಿದ್ದರೂ ಅದೇ ಮಾದರಿಯಲ್ಲಿ ಕಸಬು ಕಲೆಗಳನ್ನೇ ಕೇಂದ್ರವಾಗಿರಿಸಿಕೊಂಡು ಶಿಕ್ಷಣವನ್ನು ಕೊಡುವ ಮಾಧ್ಯಮಿಕ ಮತ್ತು ಪ್ರೌಢಶಾಲೆಗಳ ಶಿಕ್ಷಣ ಯೋಜನೆಯನ್ನೂ ರೂಪಿಸುವ ಕಾರ್ಯ ಹಲವು ಶಿಕ್ಷಣವೇತ್ತರ ಗಮನವನ್ನು ಸೆಳೆದಿದೆ. ಅದಕ್ಕಾಗಿ ಆ ಮಾರ್ಗದಲ್ಲಿ ಹಲವರು ಕಾರ್ಯ ನಿರತರಾಗಿರುವರು. ಅಂಥವರಿಗೆ ನಮ್ಮದೊಂದು ಸಲಹೆ: ಕೇವಲ ಪ್ರಾಥಮಿಕ ಶಿಕ್ಷಣದ ಕಾಲದಲ್ಲಿ ಮಕ್ಕಳ ಸ್ವಾಭಾವಿಕ ಮನೋಗತಿಗಳು ಸ್ಫುಟಗೊಳ್ಳಬೇಕಾಗಿರುವುದರಿಂದ ಅದಕ್ಕೊಪ್ಪುವ ಚಟುವಟಿಕೆಯ ಸನ್ನಿವೇಶಗಳು ಎಲ್ಲ ಮಕ್ಕಳಿಗೂ ಏಕ ರೀತಿಯಲ್ಲಿ ಒದಗಿಸಿಕೊಳ್ಳಬಹುದಾದರೂ, ಬೆಳವಣಿಗೆಯಾದನಂತರ ಅವರವರ ಅಭಿರುಚಿ ಆಸಕ್ತಿಗಳ ಕಡೆಗೂ ಗಮನಕೊಟ್ಟು ಕಾರ್ಯ ಯೋಜನೆಯನ್ನು ಸಿದ್ಧಪಡಿಸಬೇಕು. ವ್ಯಕ್ತಿಯ ವಿಶಿಷ್ಟ ಶಕ್ತಿಗಳು ಎಂತೇ ಇದ್ದರೂ ಅವರೆಲ್ಲರನ್ನೂ ಒಂದೇ ಮಾರ್ಗದಲ್ಲಿ ಬೆಳಸಲು ಯತ್ನಿಸುವುದು ಯಾವ ಕಾರಣದಿಂದಲೇ ಆಗಲಿ, ಅನರ್ಥಕಾರಿ. ಜೊತೆಗೆ ಪ್ರೌಢ ಶಿಕ್ಷಣದಲ್ಲಿ ಉದ್ಯಮಗಳನ್ನು ಆರಿಸಿ ಕೇಂದ್ರವಾಗಿರಿಸಿಕೊಳ್ಳುವುದಾದರೂ ಸುವ್ಯವಸ್ಥಿತ ರೀತಿಯಲ್ಲಿ ಜ್ಞಾನಾರ್ಜನೆಯೂ ಆಗಬೇಕೆಂಬ ಅಂಶವನ್ನು ಮರೆಯಬಾರದು.

ಒಟ್ಟಿನಲ್ಲಿ ಮೇಲ್ಪಟ್ಟದ ಶಿಕ್ಷಣರಂಗಕ್ಕೆ ರೂಪುಗೊಳ್ಳಲಿರುವ ಯಾವ ಯೋಜನೆಯೇ ಆಗಲಿ, ಅದರಿಂದ ನಮ್ಮ ಕಲೆ, ಸಂಸ್ಕೃತಿ ಸಾಹಿತ್ಯಗಳ ಮೇಲೆ ಪ್ರೇಮಾಭಿಮಾನಗಳು ಮಕ್ಕಳಲ್ಲಿ ಮೂಡಿ ಅವರ ವಿಶಿಷ್ಟ ಶಕ್ತಿಗಳು ಪ್ರಕಾಶಕ್ಕೆ ಬಂದು, ಪಳಗಿ, ಬೆಳಗಿ, ಆ ಮೂಲಕ ತಮ್ಮ ವಿಶಿಷ್ಟ ಕಾಣಿಕೆಯನ್ನು ಭರತಮಾತೆಯ ಅಡಿದಾವರೆಯಲ್ಲಿರಿಸಲು ಶಕ್ತರಾಗಿ ನಾಡು ನುಡಿಗಳ ಮಹೋನ್ನತಿಯ ಕಡೆ ಅಡಿಯಿಡುವಂತಾಗಬೇಕು; ಭಾರತ ಸ್ವಾವಲಂಬನ ಶಕ್ತಿಯನ್ನು ಪಡೆದು ತನ್ನಷ್ಟಕ್ಕೆ ಕೀರ್ತಿಗೌರವಗಳನ್ನು ಗಳಿಸಿ, ತನ್ನ ಜನತೆಯಲ್ಲಿ ಸುಖ ಶಾಂತಿಗಳು ನೆಲಸುವಂತೆ ಮಾಡಿ ಜಗತ್ತಿನ ಕಲ್ಯಾಣ ಸಾಧನೆಗೆ ನೆರವಾಗುವಂತಾಗಬೇಕು.

# ಪಾರಿಭಾಷಿಕ ಶಬ್ದಗಳು

ಅದುಮು Suppress
ಅನುವಂಶೀಯ Hereditary
ಅನುವಂಶೀಯತೆ Heredity
ಅನುವಂಶೀಯ ಗುಣ Hereditary character
ಅವಧಾನ Attention
- ಸ್ವಾಭಾವಿಕ ಅವಧಾನ Passive attention
- ಒತ್ತಾಯದ ಅವಧಾನ Active attention
- ಅರ್ಜಿತ ಅವಧಾನ Secondary passive attention

ಅನುಕರಣ Imitation
- ಉದ್ದೇಶಪೂರ್ವಕ ಅನುಕರಣ Conscious imitation
- ಪ್ರಾಸಂಗಿಕ ಅನುಕರಣ Unconscious imitation

ಆಯಾಸ Fatigue
- ದೈಹಿಕ ಆಯಾಸ Muscular or Physical fatigue
- ಮಾನಸಿಕ ಆಯಾಸ Mental fatigue
- ತಾತ್ಕಾಲಿಕ ಆಯಾಸ Subjective fatigue
- ನಿರ್ದಿಷ್ಟ ಆಯಾಸ Objective fatigue

ಆಲೋಚನೆ Thinking
- ಆಕಸ್ಮಿಕ ಆಲೋಚನೆ Chance or idle thinking
- ನಿರ್ಧಾರ ವಿರಹಿತ ಆಲೋಚನೆ Thinking without critical belief
- ಜ್ಞಾನಪೂರ್ವಕ ಆಲೋಚನೆ Assimilative thinking
- ಸಮಸ್ಯಾ ಪರಿಹಾರಕ ಆಲೋಚನೆ } Deliberative thinking
- ಉದ್ದೇಶಪೂರ್ವಕ ಆಲೋಚನೆ } Deliberative thinking
- ವಿವೇಚನೆ Reasoning
- ಶಾಸ್ತ್ರೀಯ ಆಲೋಚನೆ Scientific thinking
- ಸಾಂಪ್ರದಾಯಿಕ ಆಲೋಚನೆ Traditional thinking

ಆಸಕ್ತಿ Interest
- ಸ್ವಾಭಾವಿಕ ಆಸಕ್ತಿ Passive interest
- ಒತ್ತಾಯದ ಆಸಕ್ತಿ Active interest
- ಅರ್ಜಿತ ಆಸಕ್ತಿ. Secondary passive interest

ಅಂಕಗಳು Marks

  ಅಂಕ ಕೊಡುವುದರಲ್ಲಿ ಭಿನ್ನತೆ Variation in marking

ಉದಾತ್ತಗೊಳಿಸುವಿಕೆ Sublimation

ಕಲಿವು Learning

  ಪರಿವರ್ತನಾ ರೀತಿಯ ಕಲಿವು Learning by conditioning

  ಅನುಕರಣ ರೀತಿಯ ಕಲಿವು Learning by imitation

  ತಿದ್ದಿಕೊಂಡು ಕಲಿಯುವಿಕೆ Learning by trial and error

  ವಿವೇಚನಾ ರೀತಿಯ ಕಲಿವು Learning by insight

  ಕಾರ್ಯಪ್ರಧಾನ ರೀತಿಯ ಕಲಿವು Muscular learning

  ಸಾರಸ್ವತ ರೀತಿಯ ಕಲಿವು Ideational learning

  ಸಂವೇದನಾ ರೀತಿಯ ಕಲಿವು Visceral or emotional learning

  ಪ್ರಾಸಂಗಿಕ ಕಲಿವು Incidental learning

ಜ್ಞಾಪಕಶಕ್ತಿ Memory

ತತ್ತ್ವ Doctrine, Principle, Philosophy

  ಶಿಕ್ಷಣತತ್ತ್ವ Philosophy of Education

  ಜೀವನತತ್ತ್ವ Philosophy of life

ಧಾರಣೆ Retention

ಪಠ್ಯವಸ್ತು Curriculum

ಪಠ್ಯವಸ್ತು ನಿರ್ಮಾಣ Curriculum construction

ಪಠ್ಯವಸ್ತು ನಿರ್ಮಾಣಕ್ಕೆ ಆಧಾರ Basis for curriculum construction

  ಪೂರ್ವವಾಸನೆಯ ಪುನರಾವರ್ತನೆಯ ತತ್ತ್ವದೃಷ್ಟಿ Recapitulatory theory

  ಸಂಸ್ಕೃತಿಯ ಐತಿಹಾಸಿಕ ಘಟ್ಟಗಳ ತತ್ತ್ವದೃಷ್ಟಿ Culture epoch theory

  ಜೀವನೋಪಾಯದ ತತ್ತ್ವದೃಷ್ಟಿ Bread and butter aim

ಪರೀಕ್ಷೆ Examination, Test

  ಬುದ್ಧಿಶಕ್ತಿಯ ಪರೀಕ್ಷೆ Mental test

  ಸಾಂಪ್ರದಾಯಿಕ ಪರೀಕ್ಷೆ Traditional Examination

  ನೂತನ ರೀತಿಯ ಪರೀಕ್ಷೆ New type Examination

ಪರೀಕ್ಷಾಕ್ರಮ System of Examination

ಪಾಠ Lesson

- ಪಾಠದ ಟಿಪ್ಪಣಿ Notes of Lessons
- ಪಾಠ ಯೋಜನೆ Lesson plan
- ಪಾಠ ಸಮೀಕರಣ Co-ordination of lessons
- ಪಾಠಗಳ ಸಂಬಂಧ ಕಲ್ಪನೆ Correlation of lessons
- ಪಾಠಕ್ಕೆ ಪೂರ್ವ ಸಿದ್ಧತೆ Preparation for the lesson
- ಪಾಠಗಳ ಬಗೆ Types of lessons
- ಕೌಶಲ ಪ್ರಧಾನವಾದ ಪಾಠ Skill lesson
- ನಿಯಮ ನಿರೂಪಣೆಯ ಪಾಠ Inductive lesson
- ನಿಯಮಗಳ ಪ್ರಯೋಗದ ಪಾಠ Deductive lesson
- ಕಲಾಭಿನಂದನೆಯ ಪಾಠ Appreciation lesson
- ಅಭ್ಯಾಸ ಪಾಠ Drill Lesson

ಪಾಠೋಪಕರಣ Teaching devices

ಪಂಚ ಸೋಪಾನಗಳು Five formal steps

- ಪೂರ್ವ ಸಿದ್ಧತೆ Preparation
- ಸ್ಫುಟೀಕರಣ, ಪ್ರದರ್ಶನ Presentation
- ಸಂಬಂಧ ಕಲ್ಪನೆ, ಹೋಲಿಕೆ Comparison
- ನಿಯಮ ನಿರೂಪಣೆ Generalisation
- ಪ್ರಯೋಗ ಅಥವಾ ಸರಿನೋಡುವಿಕೆ Application or Verification

ಪ್ರಶ್ನೆಗಳು Questions

- ಪೀಠಿಕಾ ಅಂತಸ್ತಿನ ಪ್ರಶ್ನೆ Preparatory, introductory question
- ಸ್ಫುಟೀಕರಣದ ಅಂತಸ್ತಿನ ಪ್ರಶ್ನೆಗಳು Developing questions
- ಪುನರಾವರ್ತನೆಯ ಪ್ರಶ್ನೆಗಳು Recapitulatory questions

ಬುದ್ಧಿಶಕ್ತಿಯ ಪರೀಕ್ಷೆ Intelligence test

- ವೈಯಕ್ತಿಕ ಬುದ್ಧಿಶಕ್ತಿಯ ಪರೀಕ್ಷೆಗಳು Individual tests of intelligence
- ಸಾಮೂಹಿಕ ಬುದ್ಧಿಶಕ್ತಿಯ ಪರೀಕ್ಷೆಗಳು Group tests of intelligence
- ಭಾಷಾ ರೀತಿಯ ಪರೀಕ್ಷೆಗಳು Linguistic tests
- ಕಾರ್ಯಪ್ರದರ್ಶನ ಪರೀಕ್ಷೆಗಳು Performance tests
- ಅಂಕಿ ಮತ್ತು ಸಂಕೇತ ಪರೀಕ್ಷೆ Digit-symbol test
- ಚಿಹ್ನೆ ಮತ್ತು ಸಂಕೇತ ಪರೀಕ್ಷೆ Code test
- ತೊಡಕು ದಾರಿಯ ಪರೀಕ್ಷೆ Maze test

ಹಲಗೆ ಜೋಡಣೆಯ ಪರೀಕ್ಷೆ Form board test
ಚಿತ್ರ ಪರೀಕ್ಷೆ Picture reading test
ಬುದ್ಧಿಶಕ್ತಿಯ ಮಟ್ಟ Intelligence quotient (I.Q.)
ಬುದ್ಧಿಶಕ್ತಿಯ ಅವಧಿ Limits of intelligence
ಬುದ್ಧಿಶಕ್ತಿಯ ಸ್ವರೂಪ Nature of intelligence
ಬುದ್ಧಿಶಕ್ತಿಯ ಏಕಮುಖ ಸ್ವರೂಪ Monarchic nature of intelligence
ಬುದ್ಧಿಶಕ್ತಿಯ ತ್ರಿಮುಖ ಸ್ವರೂಪ Oligarchic nature of intelligence
ಬುದ್ಧಿಶಕ್ತಿಯ ಬಹುಮುಖ ಸ್ವರೂಪ Anarchic nature of intelligence
ಬುದ್ಧಿಶಕ್ತಿಯ ದ್ವಿಮುಖ ಸ್ವರೂಪ Two factor theory of intelligence
ಬುದ್ಧಿಶಕ್ತಿಯ ಸೋಪಾನ ಸ್ವರೂಪ Hierarchic nature of intelligence
ಬಿಂಬ Imagery
ಬಿಂಬಕಲ್ಪನೆ Imagination
ವಾಸ್ತವಿಕ ಬಿಂಬಕಲ್ಪನೆ Realistic imagination
ಸೃಷ್ಟ್ಯಾತ್ಮಕ, ರಚನಾತ್ಮಕ ಬಿಂಬಕಲ್ಪನೆ Creative imagination
ಬುದ್ಧಿಶಕ್ತಿ, ಮನಶ್ಶಕ್ತಿ Mental ability
ಸಾರ್ವತ್ರಿಕ ಮನಶ್ಶಕ್ತಿ General mental ability
ವಿಶೇಷ ರೀತಿಯ ಮನಶ್ಶಕ್ತಿಗಳು Special mental abilities
ಬೋಧನೆ Teaching
ಬೋಧನ ಕ್ರಮ Method of teaching
ದ್ವಿಮುಖಕಾರ್ಯ Bipolar process
ತ್ರಿಮುಖಕಾರ್ಯ Tripolar process
ಮನಶ್ಶಾಸ್ತ್ರ Psychology
ಮನಸ್ಸಂಕೀರ್ಣತೆ Mental complex
ಮನಸ್ಸು Mind
ಮನೋರಾಜ್ಯ Mental world
ಗುಪ್ತ ಮನಸ್ಸು The unconscious
ಪೂರ್ವಜಾಗ್ರತ ಮನಸ್ಸು Foreconscious

- ಜಾಗ್ರತ ಮನಸ್ಸು The foreconscious

ಮನೋವಿಶ್ಲೇಷಣ Psychoanalysis

ಮೂಲ ಸ್ವಭಾವ Native endowment

- ಹುಟ್ಟುಗುಣ Instinct
- ಪರಾವರ್ತಿತ ಪ್ರತಿಕ್ರಿಯೆ Reflex action
- ಸಂವೇದನೆ, ರಸಭಾವ Emotion
- ಮಾನಸಿಕ ಶಕ್ತಿಸಾಮರ್ಥ್ಯಗಳು Mental abilities

ವಯಸ್ಸು Age

- ಸಾಧಾರಣ ವಯಸ್ಸು Chronological age
- ಬುದ್ಧಿಶಕ್ತಿಯ ವಯಸ್ಸು Mental age

ವಿಜ್ಞಾನ ದೃಷ್ಟಿ Scientific ideals

ವಿಜ್ಞಾನ ಯುಗ The age of Science

ಶಿಕ್ಷಣ Education

- ಶಿಕ್ಷಣ ಸನ್ನಿವೇಶ Educational environment
- ಶಿಕ್ಷಣದ ಗುರಿ The aim of education

ಶಿಕ್ಷಣ ತತ್ವದೃಷ್ಟಿ Phylosophy of Education

- ಆದರ್ಶ ತತ್ವದೃಷ್ಟಿ Idealism
- ನಿಸರ್ಗ ತತ್ವದೃಷ್ಟಿ Naturalism
- ಉಪಯುಕ್ತ ತತ್ವದೃಷ್ಟಿ Pragmatism
- ಕಾರ್ಯಕಾರಣ ತತ್ವದೃಷ್ಟಿ Behaviourism

ಶಿಕ್ಷಣಾಭಿವೃದ್ಧಿಯ ಪರೀಕ್ಷೆ Achievement test

- ಸರಿ–ತಪ್ಪು ಪರೀಕ್ಷೆ True-false test
- ಬಹು ಅಂಶಗಳಿಂದ ಆಯ್ಕೆಯ ಪರೀಕ್ಷೆ Multiple choice test
- ಜೋಡಣೆಯ ಪರೀಕ್ಷೆ Matching test
- ಪೂರಕ ಪರೀಕ್ಷೆ Completion test
- ಅನುಕ್ರಮ ಪರೀಕ್ಷೆ Arrangement test
- ಸಂಬಂಧ ಕಲ್ಪನಾ ಪರೀಕ್ಷೆ Analogy test
- ಹೋಲಿಕೆಯ ಪರೀಕ್ಷೆ Similarity test
- ವರ್ಗೀಕರಣ ಪರೀಕ್ಷೆ Classification test
- ಸಮಸ್ಯಾ ಪರಿಹಾರಕ ಪರೀಕ್ಷೆ Problem test

ಸಂಸ್ಕರಿಸು Culture, Educate
    ಸಂವೇದನಾ ಸಂಸ್ಕರಣ Culture of emtotions
ಸಂಕುಚಿತ ಗುರಿ Narrow aim
ಸ್ಮರಣೆ Recollection
ಸಲಹೆ, ಭಾವಸೂಚನೆ Suggestion
    ಗಾರುಡೀ ಸಲಹೆ Hypnotic Suggestion
    ಜಾಗ್ರತ ಸಲಹೆ Waking Suggestion
    ಸ್ವಯಂ ಸಲಹೆ Autosuggestion
    ಪರಕೀಯ ಸಲಹೆ Hetero Suggestion
    ವಸ್ತುಮೂಲ ಸಲಹೆ Objective Suggestion
    ವ್ಯಕ್ತಿಮೂಲ ಸಲಹೆ Personal suggestion
    ಸ್ಥಾನಗೌರವದ ಸಲಹೆ Prestige Suggestion
    ಸಮೂಹದ ಸಲಹೆ Mass suggestion
ಹುಟ್ಟುಗುಣ Instinct
    ಛಲ Pugnacity
    ಓಡಿಹೋಗುವುದು Flight
    ಕುತೂಹಲ Curiosity
    ಪ್ರತಿಭಟನೆ Repulsion
    ಪರಾಜಯ Submisiveness
    ಜನ್ಮದಾತೃತ್ವ Parental instinct
    ಸಂಗ್ರಹಾಸಕ್ತಿ Collective instinct
    ರಚನೆ Constructive instinct
    ಸಂಘಾಭಿಲಾಷೆ Herd instinct
    ಹಸಿವು (ಆಹಾರಾನ್ವೇಷಣೆ) Hunger
    ಪ್ರಣಯ Love

# ತಿದ್ದುಪಡಿ

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| ೧೨೯ | ೧ನೆಯ ಪಂಕ್ತಿಯಿಂದ ೯ನೆಯ ಪಂಕ್ತಿಯ 'ಮಾರ್ಗದಲ್ಲಿ' ಎಂಬುದರ ಪೂರ್ತಿ ಬಿಟ್ಟುಬಿಡುವುದು | | |
| ೧೪೫ | ೧೬ | ಪ್ರಾಧಾನ್ಯವಿತ್ತು ಭಾಷೆ | ಭಾಷೆ |
| ೧೪೫ | ೧೭ | ವಿಷಯಕ್ಕೇ | ವಿಷಯಕ್ಕೇ ಪ್ರಾಧಾನ್ಯವಿತ್ತು |
| ೩೩೦ | | (ಚಿತ್ರದ ಲಂಬ ಅಕ್ಷದಲ್ಲಿ) ೩೪ | ೨೪ |
| ೩೫೯ | ೯ | ರ, ಗ, ಸ, ಗ, ಈ— | ರ, ಗ, ಸ, ಗ—ಈ |